ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

ವಿಶ್ವಸೌರಭ-೪

ಸಂಪುಟ-೮

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ವಿಶ್ವಸೌರಭಮ್ - ೪

## ಸಂಪುಟ - ೮

ಅನುಗ್ರಹ:

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು:

ಪಿ.ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು:

ಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ವಿಶ್ವಸೌರಭ - ಭಾಗ ೨**


ಪುಟಗಳು - v + 424 = 429

ಸಂಪುಟ - ೮(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.





ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್, ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುಖಪುಟವಿನ್ಯಾಸ : ಗುರುದತ್ ಕಾಮತ್

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : 7899779255

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ. ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಪದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''



# ರಾಜರ ಸಂದೇಶ

## ಯುಕ್ತಿಕಮಲದ ಮಕರಂದ

**ಅಧುನಾ ವಿಧುನಾ ರುದ್ಧಂ ಮಧು ನಾಸೀನ್ಮಧುವ್ರತ ।**
**ಉದಿತೇ ಮುದಿತೇಽಬ್ಜೇ ಸ್ಯಾದದಿತೇರ್ವಿದಿತೇ ಸುತೇ ॥**

ಚಂದ್ರನಿಂದ ಮುದುಡಿದ ಬಳಿಕ ದುಂಬಿಗೆ ಆಸ್ವಾದಿಸಲಾಗುತ್ತಿಲ್ಲ. ಸೂರ್ಯೋದಯದ ಬಳಿಕ ದುಂಬಿಗೆ ದೊರೆಯುವ ರಸಾಸ್ವಾದಸುಖವನ್ನು ಚಂದ್ರನಿಂದ ತಡೆಯಲಾಗದು. ಇಂದು ಈ ಯುಕ್ತಿಕಮಲವು ಮುದುಡಿದ್ದರೂ ಮುಂದೆ ಅರಳಿದಾಗ ಸಜ್ಜನರೆಂಬ ದುಂಬಿಗಳಿಗೆ ಇದರ ಸ್ವಾದವು ಅರಿಯದಿರದು.

## ಬಲಿಷ್ಠರ ಆಶ್ರಯವುಳ್ಳ ಬಳ್ಳಿ

**ತತ್ಪರತ್ವಾನ್ನಿಷೇಧ್ಯತ್ವಾದಂತೇ ಸಿದ್ಧೇ ಪ್ರಭುಸ್ತುತೇಃ ।**
**ನಾಮ್ನಾ ಚಾತ್ಯುಲ್ಲಸಂತ್ಯಾಸೀತ್ ವಲ್ಲೀ ತೇ ಯುಕ್ತಿಮಲ್ಲಿಕೇ ॥**

ಪರತ್ವ-ನಿಷೇಧ್ಯತ್ವ-ಸಿದ್ಧಾಂತತ್ವ-ಸಗುಣತ್ವ-ತತ್ವವಾದಗಳೆಂಬ ಯುಕ್ತಿಮಲ್ಲಿಕೆಯ ವಲ್ಲಿಯು ಬಲಿಷ್ಠ ಮರವೆನಿಸಿದ ತತ್ವವಾದದ ಆಶ್ರಯದಲ್ಲಿ ಶೋಭಿಸುತ್ತಿದೆ.





# ಯುಕ್ತಿಮಲ್ಲಿಕಾವಿಶ್ವಸೌರಭಮ್ - ಸಂಪುಟ - ೮

## ವಿಷಯಾನುಕ್ರಮಣಿಕೆ

| ವಿಷಯ | | ಶ್ಲೋಕಸಂಖ್ಯೆ |
|---|---|---|
| ೧. | 'ತಮೇವ ಭಾಂತಂ' ಶ್ರುತ್ಯರ್ಥ ವಿಚಾರ | ೬೯೧-೭೧೯ |
| ೨. | ಚರಮಸಾಕ್ಷಾತ್ಕಾರ ನಿರಾಕರಣೆ | ೭೨೦-೭೩೧ |
| ೩. | 'ನೇಹ ನಾನಾಸ್ತಿ' ಶ್ರುತ್ಯರ್ಥ ವಿಚಾರ | ೭೩೨-೭೫೯ |
| ೪. | ಭಾವಿಬಾಧಕಶಂಕಾನಿರಾಸ, ದೃಶ್ಯತ್ವಾನುಮಾನ ಪ್ರತಿಬಂದೀ | ೭೬೦-೮೦೩ |
| ೫. | ಅಸತ್ ಪ್ರತೀತಿ ಸಮರ್ಥನೆ | ೮೦೪-೮೩೦ |
| ೬. | ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನಜನ್ಯತ್ವ ನಿರಾಕರಣೆ | ೮೩೧-೮೫೯ |
| ೭. | ಪ್ರತ್ಯಕ್ಷಕ್ಕೆ ಸತ್ವಗ್ರಾಹಕತ್ವ ಸಮರ್ಥನೆ | ೮೬೦-೯೧೮ |
| ೮. | ಏಕವಿಜ್ಞಾನೇನ ಸರ್ವವಿಜ್ಞಾನವಿಚಾರ. ನಿರ್ವಿಕಲ್ಪಕಾಸಿದ್ಧಿ ಅನುಮಾನಾಗಮಗಳಿಂದ ಪ್ರತ್ಯಕ್ಷಕ್ಕೆ ಪ್ರಾಬಲ್ಯಸಮರ್ಥನೆ | ೯೧೯-೯೭೬ |
| ೯. | ಸ್ವಾಪ್ನಪದಾರ್ಥಕ್ಕೆ ಸತ್ಯತ್ವ ಸಮರ್ಥನೆ. ಸತ್ಯವಾದುದಕ್ಕೆ ಅರ್ಥಕ್ರಿಯಾಕಾರಿತ್ವ ಸಮರ್ಥನೆ | ೯೭೭-೧೦೦೪ |
| ೧೦. | ದೃಶ್ಯತ್ವಾದಿ ಹೇತುಗಳಿಗೆ ಅಪ್ರಯೋಜಕತ್ವ, ಅಸಿದ್ಧಿ, ಪ್ರಕರಣಸಮತ್ವಾದಿ ದೋಷಗಳು | ೧೦೦೫-೧೦೨೨ |
| ೧೧. | ಪ್ರಾಮಾಣಿಕತ್ವ ಹೇತುವಿನಿಂದ ಜಗತ್ತಿಗೆ ಸತ್ಯತ್ವ ಸಮರ್ಥನೆ | ೧೦೨೩-೧೦೪೮ |
| ೧೨. | ಜಗತ್‌ಪ್ರತ್ಯಕ್ಷದಲ್ಲಿ ಅವಿದ್ಯಾವದ್ವಿಷಯಕತ್ವವಾಗಲೀ, ಅವಿದ್ಯೋಪಾದಾನಕತ್ವವಾಗಲೀ ದೋಷವಲ್ಲ | ೧೦೪೯-೧೧೪೧ |
| ೧೩. | ಮಿಥ್ಯಾತ್ವಪಕ್ಷದಲ್ಲಿ ಅರ್ಥಕ್ರಿಯಾಕಾರಿತ್ವಾನುಪಪತ್ತಿ | ೧೧೪೨-೧೨೦೫ |
| ೧೪. | ಜಗದಾರೋಪ ಮತ್ತು ಬಾಧಗಳಿಗೆ ಹತ್ತು ಹತ್ತು ಬಾಧಕಗಳು | ೧೨೦೬-೧೨೧೧ |
| ೧೫. | ಮಾಯಾಮತದ ದುರ್ನೀತಿಗಳು | ೧೨೧೨-೧೨೩೬ |
| ೧೬. | ಗ್ರಂಥಸಮರ್ಪಣೆ | ೧೨೩೭ |

**ಪರಿಶಿಷ್ಟ :** ''ವಿಶ್ವಸೌರಭೋದಾಹೃತಸ್ವಾರಸಿಕಯುಕ್ತಯಃ''

—o—



# ರಾಜರ ಸಂದೇಶ

## ಯುಕ್ತಿಕಮಲದ ಮಕರಂದ

ಅಧುನಾ ವಿಧುನಾ ರುದ್ಧಂ ಮಧು ನಾಸೀನ್ಮಧುವ್ರತ ।
ಉದಿತೇ ಮುದಿತೇಽಬ್ಜೇ ಸ್ವಾದದಿತೇರ್ವಿದಿತೇ ಸುತೇ ॥

ಚಂದ್ರನಿಂದ ಮುದುಡಿದ ಬಳಿಕ ದುಂಬಿಗೆ ಆಸ್ವಾದಿಸಲಾಗುತ್ತಿಲ್ಲ. ಸೂರ್ಯೋದಯದ ಬಳಿಕ ದುಂಬಿಗೆ ದೊರೆಯುವ ರಸಾಸ್ವಾದಸುಖವನ್ನು ಚಂದ್ರನಿಂದ ತಡೆಯಲಾಗದು. ಇಂದು ಈ ಯುಕ್ತಿಕಮಲವು ಮುದುಡಿದ್ದರೂ ಮುಂದೆ ಅರಳಿದಾಗ ಸಜ್ಜನರೆಂಬ ದುಂಬಿಗಳಿಗೆ ಇದರ ಸ್ವಾದವು ಅರಿಯದಿರದು.

## ಬಲಿಷ್ಠರ ಆಶ್ರಯವುಳ್ಳ ಬಳ್ಳಿ

ತತ್ಪರತ್ವಾನ್ನಿಷೇಧ್ಯತ್ವಾದಂತೇ ಸಿದ್ಧೇ ಪ್ರಭುಸ್ತುತೇಃ ।
ನಾಮ್ನಾ ಚಾತ್ಯುಲ್ಲಸಂತ್ಯಾಸೀತ್ ವಲ್ಲೀ ತೇ ಯುಕ್ತಿಮಲ್ಲಿಕೇ ॥

ಪರತ್ವ-ನಿಷೇಧ್ಯತ್ವ-ಸಿದ್ಧಾಂತತ್ವ-ಸಗುಣತ್ವ-ತತ್ವವಾದಗಳೆಂಬ ಯುಕ್ತಿಮಲ್ಲಿಕೆಯ ವಲ್ಲಿಯು ಬಲಿಷ್ಠ ಮರವೆನಿಸಿದ ತತ್ವವಾದದ ಆಶ್ರಯದಲ್ಲಿ ಶೋಭಿಸುತ್ತಿದೆ.





# ಯುಕ್ತಿಮಲ್ಲಿಕಾವಿಶ್ವಸೌರಭಮ್ – ಸಂಪುಟ – ೮

## ವಿಷಯಾನುಕ್ರಮಣಿಕೆ



**ಪರಿಶಿಷ್ಟ :** ''ವಿಶ್ವಸೌರಭೋದಾಹೃತಸ್ವಾರಸಿಕಯುಕ್ತಯಃ''

—೦—

॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-

ಲಕ್ಷ್ಮೀಹಯಗ್ರೀವಾಯನಮಃ ॥

**ಸರ್ವಾನುಭವಬಾಧ್ಯಾರ್ಥಂ ವೇದೋಽಪಿ ನಹಿ ಬೋಧಯೇತ್ ॥ ೬೯೧ ॥**

**ಅರ್ಥ-** ಸರ್ವಾನುಭವಬಾಧ್ಯಾರ್ಥಂ = ಸರ್ವಾನುಭವದಿಂದ ಬಾಧಿತವಾದ ಅರ್ಥವನ್ನು, ವೇದೋಽಪಿ = ವೇದವೂ ಕೂಡ, ನಹಿ ಬೋಧಯೇತ್ = ಬೋಧಿಸುವುದಿಲ್ಲವಷ್ಟೇ ?

**ಅನುವಾದ - ವೇದವೂ ಕೂಡ ಸರ್ವಾನುಭವಬಾಧಿತವಾದ ಅರ್ಥವನ್ನು ಬೋಧಿಸುವುದಿಲ್ಲವಷ್ಟೇ ?**

**ಭಾವವಿಲಾಸಿನೀ–** ನನು ತಮೇವ ಭಾಂತಮನುಭಾತಿ ಸರ್ವಮಿತಿ ಶ್ರುತ್ಯೈವ ಸರ್ವಾನುಭವಬಾಧ ಇತ್ಯತ ಆಹ – **ಸರ್ವೇತಿ** ॥ ಸರ್ವಾನುಭವಬಾಧ್ಯಾರ್ಥಂ ಬ್ರಹ್ಮಾನುಸ್ಯೂತತಯೈವ ಘಟ-ಪಟಾತೀತಿರ್ಭವತೀತ್ಯರ್ಥಃ । ಹಿಶಬ್ದೇನ ಸರ್ವಾನುಭವ ಬಾಧಿತಯಜಮಾನ ಪ್ರಸ್ತರತ್ವಾ-ದೇರಬಾಧಕಪ್ರಸಿದ್ಧಂ ಸೂಚಯತಿ ॥ ೬೯೧ ॥

ವಿವರಣೆ – 'ತಮೇವ ಭಾಂತಮನುಭಾತಿ ಸರ್ವಮ್' ಎಂಬ ಶ್ರುತಿಯ ಬಲದಿಂದಲೇ ಸರ್ವಾನುಭವವು ಬಾಧಿತವಾಗುತ್ತದೆ ಎಂದು ಹೇಳಿದರೆ, ಅದಕ್ಕೆ ಉತ್ತರವನ್ನು ಹೇಳುತ್ತಾರೆ. ಘಟಪಟಾದಿ ಪ್ರತೀತಿಗಳಲ್ಲಿ ಬ್ರಹ್ಮನು ತೋರುತ್ತಾನೆಂಬುದು ಸರ್ವಾನುಭವಬಾಧಿತವಾದುದು. ಹೇಗೆ ಯಜಮಾನಃ ಪ್ರಸ್ತರಃ ಎಂಬ ವಾಕ್ಯವು ಯಜಮಾನಾಭೇದವು ಪ್ರಸ್ತರಕ್ಕೆ ಸರ್ವಾನುಭವಬಾಧಿತವಾದ ಕಾರಣದಿಂದ ಅದನ್ನು ಬೋಧಿಸುವುದಿಲ್ಲವೋ ಅದರಂತೆ, 'ತಮೇವ ಭಾಂತಮ್' ಎಂಬ ಶ್ರುತಿಯೂ ಸಹ ಸರ್ವಾನುಭವಬಾಧಿತವಾದ ಅರ್ಥವನ್ನು ಬೋಧಿಸುವುದಿಲ್ಲ ಎಂದು ಅಭಿಪ್ರಾಯ.

**ತಂ ಭಾಂತಮನುಭಾತೀತಿ ಸೌರಾಲೋಕಸ್ಯ ದರ್ಶನೇ ।**
**ಹೇತುತಾಮಾಹ ಭಾಸೇತಿ ಸ್ಪಷ್ಟೋಕ್ತೇಃ ಸ ಹಿ ಭಾಸ್ಕರಃ ॥ ೬೯೨ ॥**

**ಅರ್ಥ-** ತಂ ಭಾಂತಮನುಭಾತೀತಿ = ಪ್ರಕಾಶಿಸುವ ಅವನನ್ನು ಅನುಸರಿಸಿ ಪ್ರಕಾಶಿಸುತ್ತವೆ ಎಂದು, ಸೌರಾಲೋಕಸ್ಯ = ಸೂರ್ಯಪ್ರಕಾಶಕ್ಕೆ, ದರ್ಶನೇ =

ಚಾಕ್ಷುಷಜ್ಞಾನದಲ್ಲಿ, ಭಾಸಾ ಇತಿ = ಭಾಸಾ ಎಂಬ, ಸ್ವಷ್ಟೋಕ್ತೇಃ = ಸ್ಪಷ್ಟೋಕ್ತಿಯಿಂದ, ಹೇತುತಾಮಾಹ = ಕಾರಣತ್ವವನ್ನು ಹೇಳುತ್ತದೆ, ಸ ಹಿ = ಆ ಆದಿತ್ಯನೇ, ಭಾಸ್ಕರಃ = ಪ್ರಕಾಶಿಸುವವನಷ್ಟೇ ?

**ಅನುವಾದ** - 'ತಂ ಭಾಂತಮನುಭಾತಿ' ಪ್ರಕಾಶಿಸುವ ಅವನನ್ನು ಅನುಸರಿಸಿ ಪ್ರಕಾಶಿಸುತ್ತದೆ ಎಂಬ ವಾಕ್ಯವು, ಭಾಸಾ ಎಂಬ ಸ್ಪಷ್ಟೋಕ್ತಿಯಿಂದ ಚಾಕ್ಷುಷಪ್ರತ್ಯಕ್ಷವನ್ನು ಕುರಿತು ಸೂರ್ಯಪ್ರಕಾಶಕ್ಕೆ ಹೇತುತ್ವವನ್ನು ಹೇಳುತ್ತದೆ. ಆ ಆದಿತ್ಯನೇ ಪ್ರಕಾಶಿಸುವವನಷ್ಟೇ ?

**ಭಾವವಿಲಾಸಿನೀ– ಕಸ್ತರ್ಹಿ ಶ್ರುತೇರಬಾಧಿತಾರ್ಥ ಇತ್ಯತ ಆಹ – ತಮಿತಿ ।।** ದರ್ಶನೇ ಘಟಪಟಾದಿದರ್ಶನೇ ಭಾಂತಂ ತಂ ಸೂರ್ಯಮ್ ಅನು ಅನಂತರಮ್ ಅನುಸೃತ್ಯೇತ್ಯರ್ಥಃ। ಸರ್ವಂ ಘಟಪಟಾದಿಕಂ ಭಾತಿ ಚಕ್ಷುಷಾ ಪ್ರತೀಯತ ಇತಿ ಸೌರಾಲೋಕಸ್ಯ ದರ್ಶನೇ ಹೇತುತಾ- ಮಾಹೇತಿ ಸಂಬಂಧಃ। ಸ್ವೋಕ್ತಾನುಸರಣಂ ಶ್ರುತಿಃ ಸ್ವಯಮೇವ ವಿಶದಯತಿ। ತಸ್ಯ ಸೂರ್ಯಸ್ಯ ಭಾಸಾಕಿರಣೇನ ಕರಣೇನ ಚೇತಿ ಚಾಕ್ಷುಷಪ್ರತೀತೇಸ್ಸೌರಲೋಕಜನ್ಯತ್ವಮೇವ ತದನುಸರಣಮಿತ್ಯರ್ಥಃ। ಸಃ ಸೂರ್ಯಃ ಭಾಸ್ಕರಃ ಭಾಸಂ ಕರೋತೀತಿ ಭಾಸ ಏವ ಕರಾ ಯಸ್ಯೇತಿ ವಾ ವ್ಯುತ್ಪತ್ತ್ಯಾ ಸೂರ್ಯಸ್ಯೈವ ಭಾಸ್ಕರತ್ವಾತ್ ಭಾಃಪದವಾಚ್ಯತ್ವಂ ಸೂರ್ಯಕಿರಣಸ್ಯೈ- ವೇತ್ಯತಃ ಸೂರ್ಯಪರಮೇವೇದಂವಾಕ್ಯಮ್ । ಜ್ಞಾನವಾಚಿತ್ವೇ ಭಯೇತಿ ಬ್ರೂಯಾದಿತಿ ಭಾವಃ ।। ೬೨ ।।

ವಿವರಣೆ - ಹಾಗಾದರೆ ಶ್ರುತಿಯ ಅರ್ಥವೇನು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಎಲ್ಲ ಘಟಪಟಾದಿವಸ್ತುಗಳು ಸೂರ್ಯಪ್ರಕಾಶವಿದ್ದರೆ ಮಾತ್ರ ಚಕ್ಷುಸ್ಸಿಗೆ ಗೋಚರವಾಗುತ್ತವೆ ಎಂದು ಸೌರಾಲೋಕಕ್ಕೆ ಚಾಕ್ಷುಷಪ್ರತ್ಯಕ್ಷಹೇತುತ್ವವನ್ನೇ ಶ್ರುತಿಯು ಹೇಳುತ್ತದೆ. ಅನುಭಾತಿ ಎಂದು ಹೇಳಿದ ಅನುಸರಣವನ್ನೇ ಶ್ರುತಿಯು ತಾನೇ ತಸ್ಯಭಾಸಾಸರ್ವಮಿದಂ ವಿಭಾತಿ ಎಂದು ಸ್ಪಷ್ಟೀಕರಿಸುತ್ತದೆ. ತಸ್ಯ= ಆ ಸೂರ್ಯನ, ಭಾಸಾ = ಕಿರಣದಿಂದ ಎಂದು ಹೇಳುವುದರಿಂದ ಚಾಕ್ಷುಷಪ್ರತೀತಿಗೆ ಸೂರ್ಯಪ್ರಕಾಶವು ಕಾರಣವಾಗಿದೆ ಎಂದು ಹೇಳಿ ಇದೇ ಸೂರ್ಯನ ಪ್ರಕಾಶದ ಅನುಸರಣ ಎಂದು ಸ್ಪಷ್ಟಪಡಿಸಿದೆ. ಭಾಸ್ಕರಃ ಎಂದರೆ, ಭಾಸಂ ಕರೋತಿ ಇತಿ ಭಾಸ್ಕರಃ = ಪ್ರಕಾಶವನ್ನು ಉಂಟುಮಾಡುತ್ತಾನೆ ಎಂದು ಭಾಸ್ಕರ ಎಂದಾಗಲೀ, ಭಾಸಃ ಕರಃ ಯಸ್ಯ = ಪ್ರಕಾಶಗಳೇ ಯಾವನಿಗೆ ಕಿರಣಗಳೋ ಅಂತಹವನು ಎಂದಾಗಲೀ ಅರ್ಥವಾಗುತ್ತದೆ. 'ಭಾಃ' ಶಬ್ದವಾಚ್ಯವಾದುದು ಸೂರ್ಯನ ಕಿರಣಗಳೇ ಎಂದು ಸ್ಪಷ್ಟವಾಗುವುದರಿಂದ ಈ ಮಂತ್ರವು ಸೂರ್ಯನನ್ನೇ ಹೇಳುತ್ತದೆ ಎಂದು ತಿಳಿಯುತ್ತದೆ. ಜ್ಞಾನವನ್ನು ಹೇಳುವುದಾದರೆ ಸಕಾರಾಂತವಾದ 'ಭಾಸ್' ಶಬ್ದದ ಬದಲಾಗಿ ಆಕಾರಾಂತವಾದ 'ಭಾ' ಶಬ್ದವು ಇರಬೇಕಾಗಿದ್ದಿತು ಎಂದು ಅಭಿಪ್ರಾಯ.

**ಭಾಸ್ವಂತಮನುಸೃತ್ಯೋತ್ಥಾ ಜ್ಞಾನಾಖ್ಯಾ ಭಾ ಮಮಾಸ್ತಿ ತತ್ ।**
**ತಂ ಭಾಂತಮನುಭಾತೀತಿ ಯುಕ್ತಂ ತೇ ತು ನ ಭಾದ್ವಯಮ್ ॥ ೬೯೩ ॥**

**ಅಧಿಷ್ಠಾನಾತ್ಮಕಂ ಜ್ಞಾನಂ ಘಟಜ್ಞಾನಂ ಹಿ ತೇ ಮತೇ ।**
**ತತ್ಜ್ಞಾನಮನುಸೃತ್ಯೋತ್ಥಮನ್ಯಜ್ಞಾನಂ ಕ್ವ ತೇ ವದ ॥ ೬೯೪ ॥**

**ತಂ ಭಾಂತಮನುಭಾತೀತಿ ವಾಕ್ಯಾರ್ಥೋ ದುರ್ಘಟಸ್ತವ ।**
**ಅತೋಽಸ್ಮದುಕ್ತ ಏವಾರ್ಥೋ ವಾಕ್ಯಸ್ವಾರಸ್ಯಸಂಪದಾ ॥ ೬೯೫ ॥**

**ಅರ್ಥ-** ತತ್ = ಆ ಕಾರಣದಿಂದ, ಭಾಸ್ವಂತಮ್ = ಪ್ರಕಾಶಿಸುವ ಸೂರ್ಯನನ್ನು, ಅನುಸೃತ್ಯ = ಅನುಸರಿಸಿ, ಉತ್ಥಾ = ಉಂಟಾದ, ಜ್ಞಾನಾಖ್ಯಾ = ಜ್ಞಾನರೂಪವಾದ, ಭಾ = ಪ್ರಕಾಶವು, ಮಮಾಸ್ತಿ = ನನ್ನ ಮತದಲ್ಲಿ ಇದೆ, ತೇ ತು = ನಿನ್ನ ಮತದಲ್ಲಾದರೆ, ತಂ ಭಾಂತಮನುಭಾತೀತಿ = ಪ್ರಕಾಶಿಸುವ ಅವನನ್ನು ಅನುಸರಿಸಿ ಪ್ರಕಾಶಿಸುತ್ತದೆ ಎಂದು ಹೇಳಲಾದ, ಭಾದ್ವಯಮ್= ಎರಡು ಪ್ರಕಾಶಗಳು, ನ ಯುಕ್ತಮ್ = ಯುಕ್ತವಾಗುವುದಿಲ್ಲ. ತೇ ಮತೇ = ನಿನ್ನ ಮತದಲ್ಲಿ, ಘಟಜ್ಞಾನಂ = ಘಟಜ್ಞಾನವು, ಅಧಿಷ್ಠಾನಾತ್ಮಕಂ ಜ್ಞಾನಂ ಹಿ = ಅಧಿಷ್ಠಾನಾತ್ಮಕವಾದ ಬ್ರಹ್ಮಜ್ಞಾನವಷ್ಟೇ? ತತ್ಜ್ಞಾನಮನುಸೃತ್ಯ = ಅಧಿಷ್ಠಾನಭೂತ ಬ್ರಹ್ಮಜ್ಞಾನವನ್ನು ಅನುಸರಿಸಿ, ಉತ್ಥಂ = ಉಂಟಾದ, ಅನ್ಯಜ್ಞಾನಂ = ಇನ್ನೊಂದು ಜ್ಞಾನವು, ತೇ = ನಿನಗೆ, ಕ್ವ = ಎಲ್ಲಿದೆ ಎಂದು, ವದ = ಹೇಳು.

ತವ = ನಿನಗೆ, ತಂ ಭಾಂತಮನುಭಾತೀತಿ = ಪ್ರಕಾಶಿಸುವ ಅವನನ್ನು ಅನುಸರಿಸಿ ಪ್ರಕಾಶಿಸುತ್ತದೆ ಎಂಬ, ವಾಕ್ಯಾರ್ಥಃ = ವಾಕ್ಯಾರ್ಥವು, ದುರ್ಘಟಃ = ದುರ್ಘಟವಾದುದು, ಅತಃ = ಆದ್ದರಿಂದ, ವಾಕ್ಯಸ್ವಾರಸ್ಯಸಂಪದಾ = ವಾಕ್ಯಸ್ವಾರಸ್ಯದ ಬಲದಿಂದ, ಅಸ್ಮದುಕ್ತ ಏವ = ನಾವು ಹೇಳಿದುದೇ, ಅರ್ಥಃ = ಅರ್ಥವಾಗುತ್ತದೆ.

**ಅನುವಾದ -** ಆ ಕಾರಣದಿಂದ ಪ್ರಕಾಶಿಸುವ ಅವನನ್ನು ಅನುಸರಿಸಿ ಉಂಟಾದ ಜ್ಞಾನರೂಪವಾದ ಇನ್ನೊಂದು ಪ್ರಕಾಶವು ನನ್ನ ಮತದಲ್ಲಿ ಕೂಡುತ್ತದೆ. ನಿನ್ನ ಮತದಲ್ಲಾದರೆ, ಭಾಂತಂ ಮತ್ತು ಅನುಭಾತಿ ಎಂದು ಹೇಳಿಟ ಎರಡು ಭಾನಗಳು ಯುಕ್ತವಾಗುವುದಿಲ್ಲ. ಏಕೆಂದರೆ, ನಿನ್ನ ಮತದಲ್ಲಿ ಘಟಜ್ಞಾನವೆಂದರೆ ಅಧಿಷ್ಠಾನವಾದ ಬ್ರಹ್ಮಜ್ಞಾನವಷ್ಟೇ? (ಬ್ರಹ್ಮಪ್ರಕಾಶವೇ ಘಟಪ್ರಕಾಶ. ಬ್ರಹ್ಮಪ್ರಕಾಶ ಅತಿರಿಕ್ತವಾದ ಘಟಪ್ರಕಾಶವೆಂಬುದು ಇಲ್ಲ.) ಬ್ರಹ್ಮಜ್ಞಾನವನ್ನು ಅನುಸರಿಸಿ ಉಂಟಾದ ಇನ್ನೊಂದು ಜ್ಞಾನವು ನಿನ್ನ ಮತದಲ್ಲಿ ಎಲ್ಲಿದೆ ಎಂದು ಹೇಳು. 'ತಂ ಭಾಂತಂ ಅನುಭಾತಿ' ಎಂಬ ವಾಕ್ಯಾರ್ಥವು ನಿನ್ನ ರೀತಿಯಲ್ಲಿ ದುರ್ಘಟವೇ ಆಗುತ್ತದೆ. ಆದ್ದರಿಂದ ವಾಕ್ಯದಲ್ಲಿರುವ ಪದಗಳ ಸ್ವಾರಸ್ಯಬಲದಿಂದ ನಾವು ಹೇಳಿದ ಅರ್ಥವನ್ನೇ ಸ್ವೀಕರಿಸಬೇಕು.

**ಭಾವವಿಲಾಸಿನೀ–** ಸ್ವೋಕ್ತಾರ್ಥೇ ಉಪಪತ್ತಿಂ ಸೂಚಯನ್ಪರೋಕ್ತಾರ್ಥೇಽನುಪಪತ್ತಿಮಾಹ – ಭಾಸ್ವಂತಮಿತಿ ॥ ಜ್ಞಾನಾಖ್ಯಾ ಭಾ ಅನುಭಾತೀತ್ಯತ್ರೋಕ್ತಾ ಭಾ । ತತ್ತಸ್ಮಾತ್ ಸೂರ್ಯಕಿರಣ-ಜ್ಞಾನಾಖ್ಯಭಾದ್ವಯಸ್ಯ ವಿದ್ಯಮಾನತ್ವಾತ್ । ತೇ ತವ ಮಾಯಾವಾದಿನಃ ಭಾದ್ವಯಾ-ಭಾವಮೇವೋಪಪಾದಯತಿ ॥ ಅಧಿಷ್ಠಾನೇತಿ ॥ ೬೯೩-೬೯೫ ॥

ವಿವರಣೆ - ಗ್ರಂಥಕಾರರು ತಾವು ಹೇಳಿದ ಅರ್ಥದಲ್ಲಿ ಉಪಪತ್ತಿಯನ್ನು ಸೂಚಿಸುತ್ತಾ ಪರೋಕ್ತವಾದ ಅರ್ಥದಲ್ಲಿ ಅನುಪಪತ್ತಿಯನ್ನು ಸೂಚಿಸುತ್ತಾರೆ. ನಮ್ಮ ಮತದಲ್ಲಿ ಕಾರಣವಾದ ಸೂರ್ಯನ ಪ್ರಕಾಶ ಒಂದು. ಅದರಿಂದ ಉಂಟಾದ ಘಟಾದಿಜ್ಞಾನರೂಪವಾದ ಪ್ರಕಾಶ ಇನ್ನೊಂದು ಎಂದು ಎರಡು ಪ್ರಕಾಶಗಳು ಉಪಪನ್ನವಾಗುತ್ತದೆ. ಅದ್ವೈತಮತದಲ್ಲಾದರೆ, ಎರಡು ಪ್ರಕಾಶಗಳಿಲ್ಲ. ಬ್ರಹ್ಮಪ್ರಕಾಶವೇ ಘಟಪ್ರಕಾಶ. ಆದ್ದರಿಂದ ಈ ವಾಕ್ಯಾರ್ಥವು ದುರ್ಘಟವಾಗುತ್ತದೆ ಎಂದು ಅಭಿಪ್ರಾಯ.

**ಯದಾದಿತ್ಯಗತಂ ತೇಜೋ ಜಗದ್ ಭಾಯಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।**
**ಇತಿ ಸ್ಮೃತ್ಯಾ ಸೂರ್ಯಭಾಸೋ ಜಗದ್ಭಾಸಕತೋಚಿತಾ ॥ ೬೯೬ ॥**

**ಅರ್ಥ-** ಆದಿತ್ಯಗತಂ = ಆದಿತ್ಯನಲ್ಲಿರುವ, ಯತ್ ತೇಜಃ = ಯಾವ ತೇಜಸ್ಸು, ಅಖಿಲಮ್ ಜಗತ್ = ಎಲ್ಲಾ ಜಗತ್ತನ್ನು, ಭಾಸಯತೇ = ಪ್ರಕಾಶಿಸುತ್ತದೆಯೋ, ಚಂದ್ರಮಸಿ = ಚಂದ್ರನಲ್ಲಿ, ಯತ್ = ಯಾವ ತೇಜಸ್ಸು ಇದೆಯೋ, ಅಗ್ನೌ = ಅಗ್ನಿಯಲ್ಲಿ, ಯಚ್ಚ = ಯಾವ ತೇಜಸ್ಸಿದೆಯೋ, ತತ್ ತೇಜಃ = ಆ ತೇಜಸ್ಸನ್ನು, ಮಾಮಕಮ್ = ನನ್ನ ಅಧೀನವೆಂದು, ವಿದ್ಧಿ = ತಿಳಿ, ಇತಿ ಸ್ಮೃತ್ಯಾ = ಎಂಬ ಸ್ಮೃತಿಯಿಂದ, ಸೂರ್ಯಭಾಸಃ= ಸೂರ್ಯಪ್ರಕಾಶಕ್ಕೆ, ಜಗದ್ಭಾಸಕತಾ = ಜಗತ್ಪ್ರಕಾಶಕತ್ವವೇ, ಉದಿತಾ = ಹೇಳಲ್ಪಟ್ಟಿದೆ.

**ಅನುವಾದ -** **ಸಕಲ ಜಗತ್ತನ್ನು ಪ್ರಕಾಶಿಸುವ ಸೂರ್ಯನಲ್ಲಿ ಯಾವ ಪ್ರಕಾಶವಿದೆಯೋ, ಯಾವ ತೇಜಸ್ಸಿದೆಯೋ, ಚಂದ್ರನಲ್ಲಿ ಯಾವ ತೇಜಸ್ಸಿದೆಯೋ ಮತ್ತು ಅಗ್ನಿಯಲ್ಲಿ ಯಾವ ತೇಜಸ್ಸಿದೆಯೋ, ಆ ತೇಜಸ್ಸನ್ನು ನನ್ನದೆಂದು ತಿಳಿ ಎಂಬ ಸ್ಮೃತಿಯಿಂದ ಸೂರ್ಯಪ್ರಕಾಶಕ್ಕೆ ಜಗತ್ಪ್ರಕಾಶಕತ್ವವೇ ಹೇಳಲ್ಪಟ್ಟಿದೆ.**

**ಭಾವವಿಲಾಸಿನೀ–** ಸೂರ್ಯಭಾಸೋ ಜಗದ್ಭಾಸಕತ್ವಾಖ್ಯಸ್ವೋಕ್ತಾರ್ಥೇ ಸ್ಮೃತಿಸಂಮತಿಂ ಚಾಹ – ಯದಾದಿತ್ಯೇತಿ ॥ ಮಾಮಕಮಿತ್ಯುಕ್ತ್ಯಾ ಬ್ರಹ್ಮಪಕ್ಷೇಽಪಿ ಶ್ರುತಿಃ ಪ್ರಕಾಶಮೇವ ವಕ್ತಿ । ನ ತು ಜ್ಞಾನಮಿತಿ ಸೂಚಯತಿ ॥ ೬೯೬ ॥

ವಿವರಣೆ - ಸೂರ್ಯಪ್ರಕಾಶಕ್ಕೆ ಜಗದ್ಭಾಸಕತ್ವವು ಇದೆ ಎಂಬ ನಮ್ಮ ಅರ್ಥದಲ್ಲಿ ಗೀತಾರೂಪವಾದ ಸ್ಮೃತಿಯ ಸಮ್ಮತಿಯನ್ನು ಇಲ್ಲಿ ಹೇಳುತ್ತಾರೆ. ಹಿಂದೆ ಈ ಶ್ರುತಿಯು

ಸೂರ್ಯಪರವೆಂದು ಹೇಳಿದರೂ, ಬ್ರಹ್ಮಪರವೆಂದು ಅಂಗೀಕರಿಸಿದರೂ, ಶ್ರುತಿಯು ಪ್ರಕಾಶವನ್ನೇ ಹೇಳುತ್ತದೆಯೇ ಹೊರತು ಜ್ಞಾನವನ್ನು ಹೇಳುವುದಿಲ್ಲ ಎಂದು ಇಲ್ಲಿ ಸೂಚಿಸುತ್ತಾರೆ.

**ಕಶ್ಚಿಚ್ಚ ಚಕ್ಷುಷಾ ನೈನಂ ಪಶ್ಯತೀತಿ ಹಿ ವೇದವಾಕ್ ।**
**ಸ್ವಾದ್ವನ್ನಲಾಭೇಽಪಿ ಕುತಃ ಕಂಟಕಾನ್ನೇ ರುಚಿಸ್ತವ ॥ ೬೯೭ ॥**

**ಅರ್ಥ-** ಕಶ್ಚಿಚ್ಚ = ಯಾವನೂ ಕೂಡ, ಏನಂ = ಈ ಪರಮಾತ್ಮನನ್ನು, ಚಕ್ಷುಷಾ = ಕಣ್ಣಿನಿಂದ, ನ ಪಶ್ಯತಿ = ನೋಡುವುದಿಲ್ಲ, ಇತಿ = ಎಂದು, ವೇದವಾಕ್ ಹಿ = ವೇದವಾಕ್ಯವು ಇದೆಯಷ್ಟೇ? ಸ್ವಾದ್ವನ್ನಲಾಭೇಽಪಿ = ರುಚಿಕರವಾದ ಅನ್ನವು ದೊರಕಿದರೂ ಕೂಡ, ತವ = ನಿನಗೆ, ಕಂಟಕಾನ್ನೇ = ಮುಳ್ಳು ಬೆರೆತಿರುವ ಅನ್ನದಲ್ಲಿ, ಕುತಃ = ಏತಕ್ಕೆ, ರುಚಿಃ = ಅಭಿರುಚಿ ಉಂಟಾಗುತ್ತದೆ?

**ಅನುವಾದ** - ಯಾವನೂ ಈ ಬ್ರಹ್ಮನನ್ನು ತನ್ನ ಕಣ್ಣಿನಿಂದ ನೋಡುವುದಿಲ್ಲ ಎಂದು ವೇದವಾಕ್ಯವು ಇದೆಯಷ್ಟೇ? ರುಚಿಕರವಾದ ಅನ್ನವು ದೊರಕಿದರೂ ಕಂಟಕ ಮಿಶ್ರಿತವಾದ ಅನ್ನದಲ್ಲಿಯೇ ನಿನಗೆ ಏಕೆ ಅಭಿರುಚಿಯಿದೆ?

**ಭಾವವಿಲಾಸಿನೀ**— ಪರೋಕ್ತಾರ್ಥೇ ಬಾಧಿಕಾಂ ಶ್ರುತಿಮರ್ಥತೋ ಗೃಹ್ಣಾತಿ ॥ **ಕಶ್ಚಿದಿತಿ** ॥ ಅನೇನ ನ ಚಕ್ಷುಷಾ ಪಶ್ಯತಿ ಕಶ್ಚನೈನಮಿತಿ ಶ್ರುತಿಂ ಗೃಹ್ಣಾತಿ । ಏತಚ್ಛ್ರುತ್ಯರ್ಥಪರ್ಯಾಲೋಚನಾಯಾಂ ಚಾಕ್ಷುಷಘಟಾದಿವೃತ್ತೇರ್ಬ್ರಹ್ಮವಿಷಯಕತ್ವಾಯೋಗೇನ ಸ್ವಾವಿಷಯೇ ತಸ್ಯಾ ಅಜ್ಞಾನ-ನಿವರ್ತಕತ್ವಸ್ಯಾಪ್ಯಯೋಗೇನ ಪರಾಭಿಮತಜ್ಞಾನಸ್ಯಾಪ್ಯಭಾವಾತ್ ಘಟಜ್ಞಾನೇ ಬ್ರಹ್ಮಜ್ಞಾನ-ಸ್ಯಾನುಸ್ಯೂತ ತ್ವೋಕ್ತಿರಯುಕ್ತೈವೇತಿ ಭಾವಃ । ಯುಕ್ತಾರ್ಥಲಾಭೇಽಪ್ಯಯುಕ್ತಾರ್ಥ-ಕಥನಮನುಚಿತಮಿತ್ಯೇತದನ್ಯಾಪದೇಶೇನ ಆಹ —**ಸ್ವಾದ್ವನ್ನೇತಿ** ॥ ೬೯೭ ॥

ವಿವರಣೆ - ಪರೋಕ್ತಾರ್ಥದಲ್ಲಿ ಬಾಧಕವಾದ ಶ್ರುತಿಯನ್ನು ಇಲ್ಲಿ ಹೇಳುತ್ತಾರೆ. 'ನ ಚಕ್ಷುಷಾ ಪಶ್ಯತಿ ಕಶ್ಚನೈನಮ್' ಎಂಬುದು ಶ್ರುತಿ. ಇದು 'ತಮೇವಭಾಂತಂ ಅನುಭಾತಿ ಸರ್ವಮ್' ಎನ್ನುವ ಮಂತ್ರದ ಮೊದಲಿನಲ್ಲಿ ಬಂದಿರುವ ವಾಕ್ಯ. ಈ ವಾಕ್ಯವು ಬ್ರಹ್ಮನು ಚಾಕ್ಷುಷಪ್ರತ್ಯಕ್ಷಕ್ಕೆ ವಿಷಯನಾಗುವುದಿಲ್ಲ ಎಂದು ಹೇಳುತ್ತದೆ. ಆದ್ದರಿಂದ ಚಾಕ್ಷುಷವಾದ ಘಟಾದಿವೃತ್ತಿಗೆ ಬ್ರಹ್ಮನು ವಿಷಯನಾಗದಿರುವುದರಿಂದ ಚಾಕ್ಷುಷವೃತ್ತಿಯು ಬ್ರಹ್ಮನ ಅಜ್ಞಾನವನ್ನು ನಾಶಮಾಡಲು ಸಾಧ್ಯವಿಲ್ಲವಾದ್ದರಿಂದ ಬ್ರಹ್ಮಜ್ಞಾನವು ಉಂಟಾಗುವುದಿಲ್ಲ, ಘಟಜ್ಞಾನವೇ ಉಂಟಾಗುತ್ತದೆ. ಆ ಕಾರಣದಿಂದ ಬ್ರಹ್ಮಜ್ಞಾನವೇ ಘಟಜ್ಞಾನ ಎಂದು ಹೇಳುವುದಾಗಲೀ, ಘಟವು ಬ್ರಹ್ಮಾನುವಿದ್ಧತಯಾ ತೋರುತ್ತದೆ ಎಂದು ಹೇಳುವುದಾಗಲೀ ಅಯುಕ್ತವಾದುದು ಎಂದು ಅಭಿಪ್ರಾಯ. ಶ್ರುತಿಗೆ ಸಹಜವಾಗಿ ಯುಕ್ತಿಯುಕ್ತವಾದ ಅರ್ಥವು ದೊರೆಯುತ್ತಿರುವಾಗ, ಅಯುಕ್ತವಾದ ಅರ್ಥವನ್ನು ಹೇಳುವುದು ಅನುಚಿತವಾದುದು.

ಭಾಸಮಾನಮಿದಂ ಸರ್ವಂ ರತ್ನಾರ್ಕೇಂದ್ವನಲಾದಿಕಮ್ ।
ತಂ ಭಾಂತಮನುಭಾತೀತಿ ತಸ್ಯ ಭಾಸಾ ವಿಭಾತಿ ಚ ॥ ೬೮ ॥

ನಿರವದ್ಯಃ ಶ್ರುತೇರರ್ಥಃ ಸೋಽಯಂ ಸ್ಮೃತಿಸಮಾಖ್ಯಯಾ ।
ಭಾದೀಪ್ತಾವಿತಿ ಧಾತ್ವರ್ಥಂ ದೀಪ್ತಿಮಾಹುರ್ಯತೋ ಬುಧಾಃ ॥ ೬೯ ॥

**ಅರ್ಥ-** ಭಾಸಮಾನಂ = ಪ್ರಕಾಶಮಾನವಾದ, ಇದಂ ಸರ್ವಂ = ಈ ಎಲ್ಲಾ, ರತ್ನಾರ್ಕೇಂದ್ವನಲಾದಿಕಮ್ = ರತ್ನ, ಸೂರ್ಯ, ಚಂದ್ರ, ಅಗ್ನಿ ಮೊದಲಾದವುಗಳು, ಭಾಂತಂ = ಪ್ರಕಾಶಿಸುವ, ತಂ = ಅವನನ್ನು, ಅನುಭಾತಿ = ಅನುಸರಿಸಿ ಪ್ರಕಾಶಿಸುತ್ತವೆ, ಇತಿ = ಎಂದೂ, ತಸ್ಯ ಭಾಸಾ = ಅವನ ಪ್ರಕಾಶದಿಂದಲೇ, ವಿಭಾತಿ ಚ = ಪ್ರಕಾಶಿಸುತ್ತವೆ ಎಂದೂ,

ಸ್ಮೃತಿಸಮಾಖ್ಯಯಾ = ಸ್ಮೃತಿಯ ಸಮಾಖ್ಯೆಯಿಂದ, ಶ್ರುತೇಃ = ಶ್ರುತಿಗೆ, ಸೋಽಯಂ= ಅಂತಹ ಈ, ನಿರವದ್ಯಃ ಅರ್ಥಃ= ನಿರ್ದುಷ್ಟವಾದ ಅರ್ಥವು ಲಭ್ಯವಾಗುತ್ತದೆ, ಯತಃ = ಏಕೆಂದರೆ, ಭಾದೀಪ್ತೌ ಇತಿ = ಭಾದೀಪ್ತೌ ಎಂಬ ಧಾತು ಪಾಠದಿಂದ, ಧಾತ್ವರ್ಥಂ = ಭಾ ಧಾತುವಿನ ಅರ್ಥವನ್ನು, ದೀಪ್ತಿಮ್ = ದೀಪ್ತಿ ಎಂದು, ಬುಧಾಃ = ವಿವೇಕಿಗಳು, ಆಹುಃ= ಹೇಳುತ್ತಾರಷ್ಟೇ ?

**ಅನುವಾದ -** ಭಾಸಮಾನವಾದ ರತ್ನ, ಸೂರ್ಯ, ಚಂದ್ರ, ಅಗ್ನಿ ಮೊದಲಾದವುಗಳೆಲ್ಲವೂ ಪ್ರಕಾಶಮಾನನಾದ ಅವನನ್ನು ಅನುಸರಿಸಿಯೇ ಪ್ರಕಾಶಿಸುತ್ತವೆ ಮತ್ತು ಅವನ ಪ್ರಕಾಶದಿಂದಲೇ ಪ್ರಕಾಶಿಸುತ್ತವೆ ಎಂಬ ನಿರ್ದುಷ್ಟವಾದ ಈ ಅರ್ಥವು ಸ್ಮೃತಿಸಮಾಖ್ಯೆಯಿಂದ ಶ್ರುತಿಗೆ ಸಿದ್ಧವಾಗುತ್ತದೆ. ಏಕೆಂದರೆ, ಜ್ಞಾನಿಗಳಾದವರು ಭಾದೀಪ್ತೌ ಎಂಬ ಧಾತು ಪಾಠವನ್ನು ಅನುಸರಿಸಿ 'ಭಾ' ಧಾತುವಿಗೆ ದೀಪ್ತಿ ಎಂಬ ಅರ್ಥವನ್ನು ಹೇಳುತ್ತಾರೆ.

**ಭಾವವಿಲಾಸಿನೀ**—ಪರಕೀಯಾರ್ಥೇ ದೀಪ್ತ್ಯರ್ಥಕಪದದ್ವಯಸ್ಯ ಜ್ಞಾನಾರ್ಥಕತ್ವಸ್ವೀಕಾರಮುಭಯತ್ರಾಪಿ ಭಾಂತಂ ಪ್ರತೀಯಮಾನಂ ಭಾತಿ ಪ್ರತೀಯತ ಇತಿ ಕರ್ಮಾರ್ಥತ್ವಂ ಚಾರುಚಿಂ ಸೂಚಯಂದೀಪ್ತ್ಯರ್ಥಕಧಾತೋಃ ಕರ್ತ್ರರ್ಥಕಪ್ರತ್ಯಯಸ್ಯಾನ್ವಿತ್ಯುಪಸರ್ಗಸ್ಯ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ನ ಚಾಯಮಗ್ನಿರಿತ್ಯೇತದ್ವಾಕ್ಯಪೂರ್ವಾರ್ಧೋಕ್ತಾರ್ಥ ಪರಾಮರ್ಶೇದಂಪದಸ್ಯ ಚ ಯೋಗ್ಯಮರ್ಥಾಂತರಮಾಹ —**ಭಾಸಮಾನಮಿತಿ** ॥ ಇತಿಶಬ್ದಸ್ಯ ಭಾತಿ ವಿಭಾತೀತಿ ಪದದ್ವಯೇನಾಪಿ ಯೋಗಃ । ಸೋಽಯಂ ಸೂರ್ಯಚಂದ್ರತಾರಕವಿದ್ಯುದ್ರತ್ನಾದಿಭಾಸ್ವರೂಪಮಿದಂ ಪೂರ್ವಾರ್ಧೋಕ್ತಂ ಸರ್ವಂ ತತ್ರ ಪರಮಾತ್ಮನಿ ಸೂರ್ಯೋ ನ ಭಾತೀತ್ಯಾದಿನಾ ಸೂರ್ಯಾದೇರಪ್ಯನಂತಗುಣಿತಪ್ರಕಾಶೇ ಪರಮಾತ್ಮನಿಸ್ವಭಾನಾಯಾನುಶ್ರಯಮಾಣತಯೋಕ್ತಂ ತತ್ಪ್ರಕಾಶಾಗ್ರೇ ಮಂದೀಭೂತಸ್ವಪ್ರಭಂ ಸೂರ್ಯಾದಿಕಂ ಭಾಂತಂ ಪ್ರಕಾಶಮಾನಂ ತಂ ಪರಮಾತ್ಮಾನಮನುಸೃತ್ಯ ತತ್ಸನ್ನಿಧಾನೇನೇತ್ಯರ್ಥಃ।

**ಭಾತಿ ಪ್ರಕಾಶತ ಇತ್ಯಯಮರ್ಥಃ ಸ್ಮೃತಿಸಮಾಖ್ಯಯಾ ನಿರವದ್ಯಃ ಧಾತ್ವನನುಕೂಲತ್ವಾದಿದೋಷರಹಿತಃ ಶ್ರುತೇರರ್ಥಸ್ಸ್ಯಾತ್ ॥ ೬೯೮-೬೯೯ ॥**

ವಿವರಣೆ - ಪರರ ಅರ್ಥದಲ್ಲಿ ದೀಪ್ತ್ಯರ್ಥಕವಾದ ಎರಡು ಪದಗಳಿಗೆ ಜ್ಞಾನವೆಂಬ ಅರ್ಥವನ್ನು ಅಂಗೀಕರಿಸಬೇಕು. ಭಾಂತಮ್ ಮತ್ತು ಭಾತಿ ಎಂಬಲ್ಲಿ ಕರ್ತೃಪರವಾಗಿ ತೋರುವ ಪ್ರತ್ಯಯಗಳಿಗೆ ಕರ್ಮಾರ್ಥತ್ವವನ್ನು ಅಂಗೀಕರಿಸಬೇಕು ಎಂಬ ಅಸ್ವಾರಸ್ಯವನ್ನು ಸೂಚಿಸುತ್ತಾ ನಮ್ಮ ಮತದಲ್ಲಿ ದೀಪ್ತ್ಯರ್ಥಕ ಧಾತುವೂ, ಕರ್ತ್ರರ್ಥಕ ಪ್ರತ್ಯಯವೂ, ಅನು ಎಂಬ ಉಪಸರ್ಗವೂ ಶ್ಲಿಷ್ಟವಾಗುತ್ತದೆ ಎಂದು ತೋರಿಸುತ್ತಾರೆ. 'ನ ತತ್ರ ಸೂರ್ಯೋಽಭಾತಿ ನ ಚಂದ್ರತಾರಕೌ ನೇಮಾವಿದ್ಯುತೋ ಭಾಂತಿ ಕುತೋಽಯಮಗ್ನಿಃ' ಎಂಬುದು ತಮೇವ ಭಾಂತಂ ಎನ್ನುವ ಮಂತ್ರದ ಪೂರ್ವಾರ್ಧ. ಸರ್ವಮಿದಂ ವಿಭಾತಿ ಎಂಬಲ್ಲಿರುವ ಇದಂ ಶಬ್ದವು ಪೂರ್ವಪ್ರಸ್ತುತವಾದ ಸೂರ್ಯ, ಚಂದ್ರ, ನಕ್ಷತ್ರ, ವಿದ್ಯುತ್, ಅಗ್ನಿಗಳನ್ನೇ ಪರಾಮರ್ಶೆಮಾಡುತ್ತದೆ. ಸೂರ್ಯಚಂದ್ರಾದಿ ಪ್ರಕಾಶಗಳೆಲ್ಲವೂ ನತತ್ರಭಾತಿ - ಪರಮಾತ್ಮನ ವಿಷಯದಲ್ಲಿ ಪ್ರಕಾಶಕಗಳಾಗಿರುವುದಿಲ್ಲ. ಏಕೆಂದರೆ, ಸೂರ್ಯನ ಪ್ರಕಾಶಕ್ಕಿಂತಲೂ ಭಗವಂತನ ಪ್ರಕಾಶವು ಅನಂತಗುಣಿತವಾದುದು. ತಮ್ಮ ಪ್ರಕಾಶಕ್ಕೆ ಪರಮಾತ್ಮನನ್ನು ಆಶ್ರಯಿಸುವ ಸೂರ್ಯಾದಿಗಳ ಪ್ರಕಾಶವು ಪರಮಾತ್ಮನ ಎದುರಿನಲ್ಲಿ ಮಂದೀಭೂತವಾಗಿ ಪ್ರಕಾಶಮಾನವಾದ ಆ ಪರಮಾತ್ಮನ ಸನ್ನಿಧಾನದಿಂದಲೇ ಉಳಿದ ಜಗತ್ತನ್ನು ಪ್ರಕಾಶಿಸುತ್ತದೆ. ಭಾತಿ ಎಂಬ ಶಬ್ದಕ್ಕೆ ಪ್ರಕಾಶತೇ, ಪ್ರಕಾಶಿಸುತ್ತದೆ ಎಂಬ ಅರ್ಥವು ಸ್ವರಸವಾಗುತ್ತದೆ. ಕರ್ಮಾರ್ಥತ್ವವು ಸ್ವರಸವಾಗುವುದಿಲ್ಲ. ಆದ್ದರಿಂದ ನಮ್ಮ ಯೋಜನೆಯಲ್ಲಿ ಯಾವ ಅಸ್ವಾರಸ್ಯವೂ ಇಲ್ಲ ಎಂದು ಅಭಿಪ್ರಾಯ.

**ಯದ್ಯದ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೭೦೦ ॥**

**ಇತಿ ಗೀತೋದಿತಾ ವಾಣೀ ಶ್ರೀಮತಃ ಕೇಶವಾಂಶತಃ ।**
**ಶ್ರೀಮತಾಂ ಯದ್ ಭವಂ ಪ್ರಾಹ ಶ್ರುತಿಶ್ಚಾಹ ತಮೇವ ತತ್ ॥ ೭೦೧ ॥**

**ಅರ್ಥ-** ಯದ್ಯದ್ = ಯಾವ ಯಾವ, ವಿಭೂತಿಮತ್ = ಐಶ್ವರ್ಯೋಪೇತವಾದ, ಶ್ರೀಮತ್ = ಕಾಂತಿಯುಕ್ತವಾದ, ಊರ್ಜಿತಮ್ = ಬಲೋನ್ನದ್ಧವಾದ, ಸತ್ವಂ = ಪ್ರಾಣಿಗಳು (ವಸ್ತುಗಳಿವೆಯೋ), ತತ್ತದೇವ= ಆಯಾ ವಸ್ತುಗಳನ್ನು, ಮಮ= ನನ್ನ, ತೇಜೋಽಂಶಸಂಭವಮ್ = ತೇಜಸ್ಸಿನ ಅಂಶದಿಂದ ಹುಟ್ಟಿದುದನ್ನಾಗಿ, ತ್ವಮ್= ನೀನು, ಅವಗಚ್ಛ = ತಿಳಿ.

ಇತಿ ಗೀತೋದಿತಾ = ಗೀತೆಯಲ್ಲಿ ಹೇಳಲ್ಪಟ್ಟ, ವಾಣೀ = ವಾಕ್ಯವು, ಶ್ರೀಮತಃ = ಕಾಂತಿ ಯುಕ್ತವಾದ, ಕೇಶವಾಂಶತಃ = ಕೇಶವನ ಅಂಶದಿಂದ, ಶ್ರೀಮತಾಂ = ಕಾಂತಿಯುಕ್ತವಾದ

ವಸ್ತುಗಳ, ಭವಂ = ಉತ್ಪತ್ತಿಯನ್ನು, ಯತ್ = ಯಾವ ಕಾರಣದಿಂದ, ಪ್ರಾಹ = ಹೇಳಿತೋ, ತತ್ = ಆ ಕಾರಣದಿಂದ, ಶ್ರುತಿಶ್ಚ = ತಮೇವ ಭಾಂತಂ ಎಂಬ ಶ್ರುತಿಯೂ ಸಹ, ತಮೇವ = ಅದೇ ಅರ್ಥವನ್ನೇ, ಆಹ = ಹೇಳುತ್ತದೆ.

**ಅನುವಾದ** - ಎಲೈ ಅರ್ಜುನನೇ, ಯಾವ ಯಾವ ವಸ್ತುಗಳು ಐಶ್ವರ್ಯ-ಯುಕ್ತವಾಗಿವೆಯೋ, ಕಾಂತಿಯುಕ್ತವಾಗಿವೆಯೋ, ಬಲೋನ್ನದ್ಧ ವಾಗಿವೆಯೋ ಅವೆಲ್ಲವನ್ನೂ ನನ್ನ ತೇಜಸ್ಸಿನ ಅಂಶದಿಂದ ಉಂಟಾದವುಗಳು ಎಂದು ನೀನು ತಿಳಿ ಎಂದು ಗೀತೆಯಲ್ಲಿ ಹೇಳಿದ ವಾಕ್ಯವು ಕಾಂತಿಯುಕ್ತನಾದ ಕೇಶವನ ಅಂಶದಿಂದ ಕಾಂತಿಯುಳ್ಳ ವಸ್ತುಗಳ ಉದ್ಭವವನ್ನು ಹೇಳಿರುವ ಕಾರಣ 'ತಮೇವ ಭಾಂತಂ' ಎಂಬ ಶ್ರುತಿಯೂ ಸಹ ಅದೇ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ**– ಸ್ಮೃತಿಮೇವೋದಾಹರತಿ ॥ **ಯದ್ಯದಿತಿ** ॥ ವಿಭೂತೇಃ ಪೃಥಕ್-ಗ್ರಹಣಾಚ್ಛ್ರೀಮದಿತ್ಯಸ್ಯ ಕಾಂತಿಮದಿತ್ಯೇವಾರ್ಥಃ । ಕಾಂತಿಮತೋ ಜನಕಭಗವದಂಶಸ್ಯಾಪಿ ಕಾಂತೇರಾವಶ್ಯಕತ್ವಾತ್ ಶ್ರೀಮತಃ ಕೇಶವಾಂಶತ ಇತ್ಯುಕ್ತಮ್ । ಏವಂ ಚ ಕಾಂತಿಮತಸ್ಸೂರ್ಯಾದೇಃ ಕಾಂತಿಮಂತಂ ಭಗವಂತಮನುಸೃತ್ಯ ಭಾನಸ್ಯ ಸ್ಪಷ್ಟೀಕೃತತ್ವಾತ್ ಶ್ರುತೇರಪ್ಯಯಮೇವಾರ್ಥ ಇತಿ ಭಾವಃ ॥ ೭೦೦- ೭೦೧ ॥

ವಿವರಣೆ - ಗೀತಾವಾಕ್ಯದಲ್ಲಿ ವಿಭೂತಿ ಎಂಬ ಪದದಿಂದ ಐಶ್ವರ್ಯವನ್ನು ಹೇಳಿರುವುದರಿಂದ ಶ್ರೀಮತ್ ಎಂಬ ಪದವು ಕಾಂತಿಯುಕ್ತವಾದುದು ಎಂದೇ ಅರ್ಥವನ್ನು ಹೊಂದುತ್ತದೆ. ಕಾಂತಿಯುಕ್ತರಾದ ಸೂರ್ಯಾದಿಗಳ ಜನಕನಾದ ಪರಮಾತ್ಮನಿಗೆ ಕಾಂತಿ ಇರಲೇಬೇಕಷ್ಟೇ? ಆದ್ದರಿಂದ ಸೂರ್ಯಾದಿಗಳ ಕಾಂತಿಯು ಭಗವಂತನ ಕಾಂತಿಯ ಅಧೀನವಾದುದು ಎಂದು ಹೇಳಿದುದರಿಂದ 'ತಮೇವ ಭಾಂತಂ' ಎಂಬ ಶ್ರುತಿಯೂ ಸಹ ಅದೇ ಅರ್ಥವನ್ನು ಹೇಳುತ್ತದೆ ಎಂದು ಅಭಿಪ್ರಾಯ.

ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥ ೭೦೨ ॥

ಶ್ರುತ್ಯರ್ಥಧಾನಾ ಕ್ಷೋಣೀಯಂ ವಾಣೀ ಗುಪ್ತ್ಯೈ ವೃತಿಶ್ಚನಃ ।
ಚಕ್ಷುಷೈವೇಕ್ಷಣಕ್ಷೇಪಾದ್ ಯಚ್ಛ್ರುತ್ಯೇಕಾರ್ಥತಾ ಸ್ಮೃತೇಃ ।
ಅದಿವ್ಯಚಕ್ಷುರ್ವ್ಯಾತ್ತೌ ಯದ್ ಬ್ರಹ್ಮಾನುಲ್ಲೇಖವಾಕ್ ಚ ಸಾ ॥ ೭೦೩ ॥

**ಅರ್ಥ**- ಅನೇನ= ಈ, ಸ್ವಚಕ್ಷುಷಾ ಏವ= ನಿನ್ನ ಕಣ್ಣಿನಿಂದಲೇ, ಮಾಂ ದ್ರಷ್ಟುಂ= ನನ್ನನ್ನು ನೋಡಲು, ನ ತು ಶಕ್ಯಸೇ= ನೀನು ಸಮರ್ಥನಾಗುವುದಿಲ್ಲ, ತೇ= ನಿನಗೆ, ದಿವ್ಯಂ ಚಕ್ಷುಃ= ದಿವ್ಯವಾದ ಚಕ್ಷುಸ್ಸನ್ನು, ದದಾಮಿ= ಕೊಡುತ್ತೇನೆ, ಮೇ= ನನ್ನ, ಐಶ್ವರಂ= ಪ್ರಭುತ್ವ

ಪ್ರಯುಕ್ತವಾದ, ಯೋಗಂ= ಸಾಮರ್ಥ್ಯಾತಿಶಯವನ್ನು, ಪಶ್ಯ= ನೋಡು ಎಂಬ, ಇಯಂ= ಈ ವಾಕ್ಯವು, ಶ್ರುತ್ಯರ್ಥಧಾನಾ ಕ್ಷೋಣೀ= ಶ್ರುತ್ಯರ್ಥವನ್ನು ಬೆಳೆಸುವ ಕ್ಷೇತ್ರವಿದ್ದಂತೆ, ವಾಣೀ ಗುಪ್ತ್ಯೈ= ಶ್ರುತಿಯನ್ನು ರಕ್ಷಣೆ ಮಾಡುವುದಕ್ಕೋಸ್ಕರ, ನಃ= ನಮಗೆ ದೊರಕಿದ, ವೃತಿಶ್ಚ= ವರವಾಗಿದೆ, ಯತ್= ಏಕೆಂದರೆ, ಚಕ್ಷುಷೈವೇಕ್ಷಣಕ್ಷೇಪಾತ್= ಕಣ್ಣಿನಿಂದಲೇ ಬ್ರಹ್ಮನ ಜ್ಞಾನವನ್ನು ನಿರಾಕರಿಸುವುದರಿಂದ, ಸ್ಮೃತೇಃ= ಈ ಗೀತಾಸ್ಮೃತಿಗೆ, ಶ್ರುತ್ಯೇಕಾರ್ಥತಾ= ಶ್ರುತಿಯಿಂದ ಸಮಾನಾರ್ಥತ್ವವಿದೆ. ಯತ್= ಏಕೆಂದರೆ, ಸಾ= ಆ ಸ್ಮೃತಿವಾಕ್ಯವು, ಅದಿವ್ಯಚಕ್ಷುರ್ವೃತ್ತೌ= ದಿವ್ಯವಲ್ಲದ ಚಾಕ್ಷುಷ ವೃತ್ತಿಯಲ್ಲಿ, ಬ್ರಹ್ಮಾನುಲ್ಲೇಖವಾಕ್= ಬ್ರಹ್ಮನು ತೋರುವುದಿಲ್ಲ ಎಂದು ಹೇಳುವ ಮಾತಾಗಿದೆ.

**ಅನುವಾದ-** ಕೇವಲ ನಿನ್ನ ಈ ಕಣ್ಣಿನಿಂದಲೇ ನನ್ನನ್ನು ನೋಡಲು ಸಾಧ್ಯವಿಲ್ಲ. ನಿನಗೆ ದಿವ್ಯವಾದ ಚಕ್ಷುಸ್ಸನ್ನು ಕೊಡುತ್ತೇನೆ. ನನ್ನ ಯೋಗೈಶ್ವರ್ಯವನ್ನು ನೋಡು ಎಂಬ ಈ ಸ್ಮೃತಿವಾಕ್ಯವು ಶ್ರುತ್ಯರ್ಥವನ್ನು ಬೆಳೆಸಿ ಪೋಷಿಸುವ ಕ್ಷೇತ್ರವಾಗಿದೆ (ಹೊಲವಾಗಿದೆ). ಇದು ಶ್ರುತ್ಯರ್ಥ ರಕ್ಷಣೆಗಾಗಿ ನಮಗೆ ಕೃಷ್ಣನು ನೀಡಿದ ವರವಾಗಿದೆ. ಈ ಸ್ಮೃತಿಯು ಕೇವಲ ಚಕ್ಷುಸ್ಸಿನಿಂದಲೇ ಬ್ರಹ್ಮನ ದರ್ಶನವನ್ನು ನಿರಾಕರಿಸುವುದರಿಂದ ಶ್ರುತಿಗೆ ಸಮಾನಾರ್ಥಕವಾಗಿದೆ. ಏಕೆಂದರೆ ಸ್ಮೃತಿಯು ದಿವ್ಯಚಕ್ಷುಸ್ಸಲ್ಲದ ಸಾಮಾನ್ಯ ಚಕ್ಷುಸ್ಸಿನಿಂದ ಉಂಟಾದ ವೃತ್ತಿಯಲ್ಲಿ ಬ್ರಹ್ಮನು ಪ್ರಕಾಶಿಸುವುದಿಲ್ಲ ಎಂದು ಹೇಳುತ್ತದೆಯಷ್ಟೇ?

**ಭಾವವಿಲಾಸಿನೀ–** ಕಿಂಚ ಬ್ರಹ್ಮವಿಷಯಕಚಾಕ್ಷುಷವೃತ್ತ್ಯಾ ತದವಿದ್ಯಾನಿವೃತ್ತೌ ಜಾತಾಯಾಂ ಭಾಂತಂ ತಂ ಪರಮಾತ್ಮಾನಮನು ಸರ್ವಂ ಭಾತೀತಿ ಹಿ ಪರಸ್ಯಾರ್ಥಃ । ಇದಮಪಿ ಸ್ಮೃತಿವಿರುದ್ಧಮಿತಿ ಭಾವೇನ ತಾಂ ಸ್ಮೃತಿಂ ಪಠತಿ ॥ **ನತ್ವಿತಿ** ॥ ಇಯಂ ವಾಣೀ ಅನೇನೈವ ಚಕ್ಷುಷಾ ಮಾಂ ದ್ರಷ್ಟುಂ ನ ಶಕ್ಯಸೇ ನ ಶಕ್ನೋಷೀತಿ ವಾಣೀ ನಶ್ರುತ್ಯರ್ಥಧಾನಾಕ್ಷೋಣೀ ಅಸ್ಮಾಭಿಃ ಪ್ರಾಗುಕ್ತಾಯಾಃ ನ ಚಕ್ಷುಷಾ ಪಶ್ಯತಿ ಕಶ್ಚನೈನಮಿತಿ ಶ್ರುತೇರರ್ಥಬೀಜಾವಾಪಭೂಮಿಃ । ತಚ್ಛ್ರುತ್ಯರ್ಥಸ್ಯೈವ ಪೂರ್ವಾರ್ಧೇ ಅನಯಾ ಸ್ಮೃತ್ಯಾ ಸಂಗ್ರಹಾದಿತಿ ಭಾವಃ । ನಃ ಗುಪ್ತ್ಯೈತಮೇವ ಭಾಂತಮನುಭಾತಿ ಸರ್ವಮಿತಿ ಶ್ರುತೇರಸ್ಮದುಕ್ತಾರ್ಥರಕ್ಷಣಾಯ ವೃತಿಶ್ಚ ಉತ್ತರಾರ್ಧೇ ಅರ್ಥಾತ್ ಸ್ವಸ್ಯ ಲೌಕಿಕಚಕ್ಷುರ್ವೃತ್ತಾವಭಾನಕಥನೇನ ಪ್ರತಿವಾದಿಮೃಗಮುಖಮುದ್ರಣಸ್ಯಾಪ್ಯನಯೈವ ಸಾಧಿತತ್ವಾದಿತಿ ಭಾವಃ । ಅಗಮ್ಯಪರ್ವತಾಗ್ರಕ್ಷೇತ್ರವತ್ ಉಭಯಾಕಾರತ್ವಮಪ್ಯೇಕಸ್ಯ ನ ವಿರುದ್ಧಮಿತಿ ಜ್ಞಾತವ್ಯಮ್। ಏತದೇವ ಚುಕ್ಷುಷಾ ದರ್ಶಯತಿ ॥**ಚಕ್ಷುಷೇತಿ**॥ ಯದಿತಿ ಪದದ್ವಯಮಪಿ ಯಸ್ಮಾದಿತ್ಯರ್ಥೇ । ಸಾ ಸ್ಮೃತಿಃ॥೭೦೨-೭೦೩ ॥

**ವಿವರಣೆ-** ಬ್ರಹ್ಮ ವಿಷಯಕ ಚಾಕ್ಷುಷ ವೃತ್ತಿಯಿಂದ ಬ್ರಹ್ಮಾಜ್ಞಾನವು ನಿವೃತ್ತವಾದಾಗ ಪ್ರಕಾಶಿಸುವ ಆ ಬ್ರಹ್ಮನನ್ನು ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತದೆ ಎಂಬುದು ಈ ಶ್ರುತಿಗೆ ಪರರು ಹೇಳುವ ಅರ್ಥವು ಈ ಗೀತಾಸ್ಮೃತಿಗೆ ವಿರುದ್ಧವಾದುದು ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಈ ಸ್ಮೃತಿವಾಕ್ಯವು ನ ಚಕ್ಷುಷಾಪಶ್ಯತಿ ಕಶ್ಚಿದೇನಂ ಎಂದು ಹಿಂದೆ ಉದಾಹರಿಸಿದ

ಶ್ರುತಿಗೆ ಸಮಾನಾರ್ಥಕವಾಗಿರುವುದರಿಂದ ಅಥವಾ ಶ್ರುತ್ಯರ್ಥಕ್ಕೆ ಉಪಪಾದಕವಾಗಿರುವುದರಿಂದ ಇದು ಶ್ರುತಿಯ ಅರ್ಥದ ಬೀಜಾವಾಪ ಭೂಮಿ (ಬೆಳಸಿ ಪೋಷಿಸುವ ಹೊಲ). ಏಕೆಂದರೆ ಆ ಶ್ರುತಿಯ ಅರ್ಥವನ್ನೇ ಈ ಶ್ಲೋಕದ ಪೂರ್ವಾರ್ಧವು ಸಂಗ್ರಹಿಸುತ್ತದೆ ಮತ್ತು ಈ ವಾಕ್ಯವೇ ನಾವು ಹೇಳುವ ವಾಕ್ಯದ ಅರ್ಥವನ್ನೂ ಸಹ ರಕ್ಷಣೆ ಮಾಡುತ್ತದೆ. ಏಕೆಂದರೆ ಲೌಕಿಕ ಚಾಕ್ಷುಷ ವೃತ್ತಿಯಲ್ಲಿ ಬ್ರಹ್ಮನ ಪ್ರಕಾಶವನ್ನು ನಿರಾಕರಿಸುತ್ತದೆ. ಆದ್ದರಿಂದ ಪರ್ವತಾಗ್ರದಲ್ಲಿರುವ ಕ್ಷೇತ್ರದಂತೆ ಈ ಸ್ಮೃತಿವಾಕ್ಯವು ನಮ್ಮ ಅರ್ಥಕ್ಕೆ ಪೋಷಕವೂ ಮತ್ತು ಪ್ರತಿವಾದಿಗಳಿಗೆ ಅಗಮ್ಯವಾಗಿರುವುದರಿಂದ ಅನಾನುಕೂಲವೂ ಆಗಿದೆ ಎಂದು ಅಭಿಪ್ರಾಯ.

**ಅಥವಾ ಸ್ವಸ್ವರೂಪೇಣ ಜ್ಞಾನೇನ ಪರಮೇಶ್ವರಂ ।**
**ಸ್ವಶಕ್ತ್ಯೈವ ಸದಾ ಭಾಂತಮನುಸೃತ್ಯಾನ್ಯದೇಹಿನಾಂ ॥ ೭೦೪ ॥**

**ಪ್ರತ್ಯಕ್ಷೇಣಾನುಮಾನೇನ ಶಬ್ದಾಖ್ಯಕರಣೇನ ವಾ ।**
**ಭಾತೀದಂ ಸಕಲಂ ವಿಶ್ವಮಿತ್ಯರ್ಥೋಽಸ್ತ್ವತಿನಿರ್ಮಲಃ ॥ ೭೦೫ ॥**

**ಅರ್ಥ**-ಅಥವಾ= ಅಥವಾ, ಸ್ವಸ್ವರೂಪೇಣ ಜ್ಞಾನೇನ= ಸ್ವರೂಪಭೂತವಾದ ತನ್ನ ಜ್ಞಾನದಿಂದ, ಸ್ವಶಕ್ತ್ಯೈವ= ಬಾಹ್ಯಕರಣ ನಿರಪೇಕ್ಷವಾದ ತನ್ನ ಸಾಮರ್ಥ್ಯದಿಂದಲೇ, ಸದಾ= ಯಾವಾಗಲೂ, ಭಾಂತಂ= ಪ್ರಕಾಶಿಸುವ, ಪರಮೇಶ್ವರಂ= ಪರಮೇಶ್ವರನನ್ನು, ಅನುಸೃತ್ಯ= ಅನುಸರಿಸಿ, ಅನ್ಯದೇಹಿನಾಂ= ಉಳಿದ ದೇಹಿಗಳಿಗೆ, ಪ್ರತ್ಯಕ್ಷೇಣ= ಪ್ರತ್ಯಕ್ಷದಿಂದಾಗಲೀ, ಅನುಮಾನೇನ= ಅನುಮಾನದಿಂದಾಗಲೀ, ಶಬ್ದಾಖ್ಯಕರಣೇನ ವಾ= ಶಬ್ದರೂಪವಾದ ಕರಣದಿಂದಾಗಲೀ, ಇದಂ ಸಕಲಂ ವಿಶ್ವಂ= ಈ ಸಮಸ್ತವಾದ ಪ್ರಪಂಚವು, ಭಾತಿ= ಪ್ರಕಾಶಿಸುತ್ತದೆ ಎಂದು, ಅತಿನಿರ್ಮಲಃ= ಅತ್ಯಂತ ಪರಿಶುದ್ಧವಾದ, ಅರ್ಥಃ= ಅರ್ಥವು, ಅಸ್ತು= ಶ್ರುತಿಗೆ ಇರಲಿ.

**ಅನುವಾದ-** ಅಥವಾ ಬಾಹ್ಯಕರಣಗಳ ಅಪೇಕ್ಷೆ ಇಲ್ಲದೆ ತನ್ನ ಸ್ವರೂಪ ಜ್ಞಾನದಿಂದಲೇ ಯಾವಾಗಲೂ ಪ್ರಕಾಶಿಸುವ ಪರಮೇಶ್ವರನನ್ನು ಅನುಸರಿಸಿ ಉಳಿದ ದೇಹಿಗಳಿಗೆ ಪ್ರತ್ಯಕ್ಷದಿಂದಲಾಗಲೀ, ಅನುಮಾನದಿಂದಾಗಲೀ ಅಥವಾ ಶಬ್ದರೂಪವಾದ ಕರಣದಿಂದಾಗಲೀ ಈ ಸಮಸ್ತವಾದ ಜಗತ್ತು ಪ್ರಕಾಶಿಸುತ್ತದೆ ಎಂಬ ಅತಿ ಮನೋಹರವಾದ ಅರ್ಥವೇ ಶ್ರುತಿಗೆ ಇರಲಿ.

**ಭಾವವಿಲಾಸಿನೀ** – ಕಿಂಚ ಈಶ್ವರಸ್ಯ ಈಶ್ವರಜ್ಞಾನಸ್ಯ ಚ ಸರ್ವೋತ್ಪತ್ತಿಮನ್ನಿಮಿತ್ತಕಾರಣತ್ವಮೀಶ್ವರಸ್ಯ ಸ್ವಾತಂತ್ರ್ಯಂ ಈಶ್ವರಜ್ಞಾನಸ್ಯ ಬ್ಯಾಹ್ಯಕರಣನಿರಪೇಕ್ಷತಾಂ ಚ ಬೋಧಯಿತುಂ ತಮೇವ ಭಾಂತಂ ಬಾಹ್ಯಕರಣಾದಿಕಂ ವಿನಾ ಸ್ವಸ್ವರೂಪಕರಣಶಕ್ತ್ಯೈವ ಭಾಂತಂ ಸ್ವಸ್ವರೂಪಜ್ಞಾನೇನ ಪ್ರಕಾಶಮಾನಂ

ಬರ್ತ್ರ

ಪರಮಾತ್ಮಾನಮನುಸೃತ್ಯ ಸರ್ವಮಿದಂ ಘಟಪಟಾದಿಕಂ ಜೀವಾನಾಂ ತತ್ತದಿಂದ್ರಿಯೈರ್ಭಾತಿ ಜ್ಞಾತಂ ಭವತೀತಿ ವಾ ಸರ್ವಜನಮನೋಹರಶ್ರುತೇರರ್ಥಸ್ಸಂಭವತೀತ್ಯಾಹ – **ಅಥವೇತಿ** ॥ ೭೦೪-೭೦೫॥

**ವಿವರಣೆ-** ಈಶ್ವರ ಜ್ಞಾನವು ಕರಣನಿರಪೇಕ್ಷವಾದುದು. ಅದು ಕಾರ್ಯಮಾತ್ರವನ್ನು ಕುರಿತು ಕಾರಣವಾದುದರಿಂದ ಉಳಿದ ಜೀವರಿಗೆ ಪ್ರತ್ಯಕ್ಷಾಮಮಾನ ಮತ್ತು ಆಗಮಗಳಿಂದ ಉಂಟಾಗುವ ಜ್ಞಾನವು ಈಶ್ವರನನ್ನು ಅನುಸರಿಸಿಯೇ ಉಂಟಾಗುತ್ತದೆ ಎಂದರೆ ಈಶ್ವರ ಜ್ಞಾನವು ಉಳಿದ ಸಮಸ್ತ ಜಗತ್ತಿನ ಜ್ಞಾನಕ್ಕೆ ಕಾರಣ ಎಂಬ ನಿರ್ಮಲವಾದ ಅರ್ಥವನ್ನೇ ಅಂಗೀಕರಿಸು ಎಂದು ಅಭಿಪ್ರಾಯ. ಈ ವಿಷಯವನ್ನೇ ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

ಏವಂ ಸತಿ ಬ್ರಹ್ಮಣೋ ವಾ ವಿಶೇಷ್ಯಸ್ಯ ವಿಶೇಷಣೇ ।
ತಜ್ಜ್ಞಾನೇ ವಾ ನೃಣಾಂ ಜನ್ಯಜ್ಞಾನಮಾತ್ರೇ ನಿಮಿತ್ತತಾ ।
ಸರ್ವೋತ್ಪತ್ತೌ ನಿಮಿತ್ತಸ್ಯ ಪ್ರಾಪ್ತ್ಯೈವ ಸ್ಯಾನ್ನ ತೇ ಕಥಾ ॥ ೭೦೬ ॥

**ಅರ್ಥ**-ಏವಂ ಸತಿ= ಈ ಅರ್ಥವನ್ನು ಹೇಳಿದರೆ, ವಿಶೇಷ್ಯಸ್ಯ= ವಿಶೇಷ್ಯನಾದ, ಬ್ರಹ್ಮಣೋ ವಾ= ಬ್ರಹ್ಮನಿಗಾಗಲೀ ಅಥವಾ, ವಿಶೇಷಣೇ= ವಿಶೇಷಣವಾದ, ತಜ್ಜ್ಞಾನೇ= ಬ್ರಹ್ಮನ ಜ್ಞಾನಕ್ಕಾಗಲೀ, ನೃಣಾಂ= ಉಳಿದ ಜೀವರಿಗೆ, ಜನ್ಯಜ್ಞಾನಮಾತ್ರೇ= ಉಂಟಾಗುವ ಜ್ಞಾನ ಸಾಮಾನ್ಯವನ್ನು ಕುರಿತು, ನಿಮಿತ್ತತಾ= ನಿಮಿತ್ತಕಾರಣತ್ವವು, ಸರ್ವೋತ್ಪತ್ತೌ= ಎಲ್ಲ ವಸ್ತುಗಳ ಉತ್ಪತ್ತಿಯನ್ನು ಕುರಿತು, ನಿಮಿತ್ತಸ್ಯ ಪ್ರಾಪ್ತ್ಯೈವ= ನಿಮಿತ್ತತ್ವವೇ ಪ್ರಾಪ್ತವಾಗುವುದರಿಂದ, ತೇ ಕಥಾ= ನಿನ್ನ ಕಥೆಯೇ, ನ ಸ್ಯಾತ್= ಉಂಟಾಗುವುದಿಲ್ಲ.

**ಅನುವಾದ-** ಹೀಗೆ ಅರ್ಥವನ್ನು ಮಾಡಿದರೆ ವಿಶೇಷ್ಯನಾದ ಬ್ರಹ್ಮನಿಗಾಗಲೀ ಅಥವಾ ಅವನ ವಿಶೇಷಣವಾದ ಜ್ಞಾನಕ್ಕಾಗಲೀ ಜನ್ಯಜ್ಞಾನಸಾಮಾನ್ಯವನ್ನು ಕುರಿತು ನಿಮಿತ್ತತ್ವವೇ ಪ್ರಾಪ್ತವಾಗುತ್ತದೆ. ಸರ್ವೋತ್ಪತ್ತಿಯಲ್ಲಿ ನಿಮಿತ್ತತ್ವವೇ ಪ್ರಾಪ್ತವಾಗುವುದರಿಂದ ಘಟಜ್ಞಾನವೇ ಬ್ರಹ್ಮರೂಪ ಎಂಬ ನಿನ್ನ ಕಥೆಯು ಉಂಟಾಗುವುದಿಲ್ಲ.

**ಭಾವವಿಲಾಸಿನೀ** – ವಿಶೇಷ್ಯಸ್ಯ ಭಾಂತಮಿತ್ಯತ್ರ ವಿಶೇಷ್ಯತಯೋಕ್ತಸ್ಯ । ವಿಶೇಷಣೇ ತತ್ರೈವ ವಿಶೇಷಣತಯೋಕ್ತೇ ಬ್ರಹ್ಮಭಾನೇನ ಸಹ ಜಗದ್ಭಾನಸ್ಯಾನ್ಯೈರ್ವಾದಿಭಿರನಂಗೀಕಾರತ್ತೇ ಇತ್ಯುಕ್ತಮ್। ಕಸ್ಯಾಪ್ಯನಾನುಭವಿಕತ್ವಾತ್ ಕಥೇತ್ಯುಕ್ತಮ್ ॥ ೭೦೬ ॥

**ವಿವರಣೆ-** ಪ್ರಕಾಶಿಸುವ ಬ್ರಹ್ಮನನ್ನು ಅನುಸರಿಸಿ ಎಂದು ಹೇಳಿದರೆ ಪ್ರಕಾಶವಿಶಿಷ್ಟ ಬ್ರಹ್ಮನನ್ನು ಅನುಸರಿಸಿ ಜಗತ್ತು ಪ್ರಕಾಶಿಸುತ್ತದೆ ಎಂದು ಅರ್ಥ. ಪ್ರಕಾಶ ವಿಶಿಷ್ಟ ಬ್ರಹ್ಮ ಎಂಬಲ್ಲಿ ಬ್ರಹ್ಮನು ವಿಶೇಷ್ಯ, ಜ್ಞಾನರೂಪವಾದ ಪ್ರಕಾಶವು ವಿಶೇಷಣ. ವಿಶೇಷ್ಯವನ್ನು ವಿವಕ್ಷೆ ಮಾಡಿದರೆ ಬ್ರಹ್ಮನು ಸರ್ವಜ್ಞಾನೋತ್ಪತ್ತಿಗೆ ಕಾರಣ ಎಂಬ ಅರ್ಥವು ಸಿದ್ಧವಾಗುತ್ತದೆ.

ವಿಶೇಷಣವನ್ನು ವಿವಕ್ಷೆ ಮಾಡಿದರೆ ಬ್ರಹ್ಮಜ್ಞಾನವು ಸರ್ವಜ್ಞಾನೋತ್ಪತ್ತಿಗೆ ಕಾರಣ ಎಂದು ಸಿದ್ಧವಾಗುತ್ತದೆ. ಬ್ರಹ್ಮನಿಗೂ ಮತ್ತು ಅವನ ಜ್ಞಾನಕ್ಕೂ ಅಭೇದವಿರುವುದರಿಂದ ಈ ಎರಡು ಅರ್ಥಗಳಿಗೆ ಪರಸ್ಪರ ವಿರೋಧವಿಲ್ಲ. ಈ ಶ್ರುತಿಯು ಜೀವರ ಜನ್ಯಜ್ಞಾನವನ್ನು ಕುರಿತು ಬ್ರಹ್ಮನಿಗೆ ಅಥವಾ ಬ್ರಹ್ಮನ ಜ್ಞಾನಕ್ಕೆ ನಿಮಿತ್ತತ್ವವನ್ನು ಹೇಳುವುದರಿಂದ ನೀನು ಹೇಳುವ ಅಧ್ಯಾಸದ ಕಥೆಯು ಕೂಡುವುದಿಲ್ಲ. ಯಾವ ವಾದಿಗಳೂ ಅಂಗೀಕರಿಸದ ಅಧ್ಯಾಸವು ಕೇವಲ ನೀನು ಕಲ್ಪಿಸಿದ ಕಥೆ ಎಂದು ಅಭಿಪ್ರಾಯ.

**ಏವಶಬ್ದೋಽನುಶಬ್ದಶ್ಚ ಸ್ಯಾದೇವಂ ಸತಿ ಸಾರ್ಥಕಃ ।**
**ಭಾಸೇತ್ಯತ್ರ ತೃತೀಯಾಯಾ ಹೇತುತ್ವಾರ್ಥೋಽಪಿ ಶೋಭತೇ ॥ ೭೦೭ ॥**

**ಅರ್ಥ**-ಏವಂ ಸತಿ= ಹೀಗೆ ಅರ್ಥವನ್ನು ಮಾಡಿದರೆ, ಏವ ಶಬ್ದಃ= ಏವ ಶಬ್ದವು, ಅನುಶಬ್ದಃ= ಅನುಶಬ್ದವು, ಸಾರ್ಥಕಃ ಸ್ಯಾತ್= ಸಾರ್ಥಕವಾಗುತ್ತದೆ, ಭಾಸೇತ್ಯತ್ರ= ಭಾಸಾ ಎಂಬಲ್ಲಿ ಇರುವ, ತೃತೀಯಾಯಾಃ= ತೃತೀಯಾ ವಿಭಕ್ತಿಗೆ, ಹೇತುತ್ವಾರ್ಥೋಽಪಿ= ಹೇತುತ್ವರೂಪವಾದ ಅರ್ಥವೂ, ಶೋಭತೇ= ಶೋಭಿಸುತ್ತದೆ.

**ಅನುವಾದ**- ಹೀಗೆ ಅರ್ಥವನ್ನು ಮಾಡಿದರೆ ಏವ ಶಬ್ದ ಮತ್ತು ಅನು ಶಬ್ದಗಳು ಸಾರ್ಥಕವಾಗುತ್ತವೆ. ಭಾಸಾ ಎಂಬಲ್ಲಿ ಇರುವ ತೃತೀಯಾವಿಭಕ್ತಿಗೆ ಹೇತುತ್ವಾರ್ಥವೂ ಸಹ ಶೋಭಿಸುತ್ತದೆ.

**ಭಾವವಿಲಾಸಿನೀ** – ಅನ್ಯಪ್ರೇರಣವ್ಯವಚ್ಛೇದಾದೇವಶಬ್ದಸ್ಯ ಹೇತುತ್ವಕಥನಾತ್ ಅನುಶಬ್ದಸ್ಯ ಚ ಸಾರ್ಥಕ್ಯಾದೇವಶಬ್ದೋಽನುಶಬ್ದಶ್ಚೇತ್ಯಾದ್ಯುಕ್ತಮ್ ॥ ೭೦೭ ॥

**ವಿವರಣೆ**- ತಮೇವ ಎಂಬಲ್ಲಿರುವ ಏವ ಶಬ್ದವು ಅನ್ಯಕರಣವನ್ನು ವ್ಯವಚ್ಛೇದ ಮಾಡಿ ತನ್ನ ಸ್ವರೂಪಜ್ಞಾನದಿಂದಲೇ ಪ್ರಕಾಶಿಸುತ್ತಾನೆ ಎಂಬ ಅರ್ಥವನ್ನು ಹೇಳುವುದರಿಂದ ಸಾರ್ಥಕವಾಗುತ್ತದೆ. ಬ್ರಹ್ಮನು ಜೀವರ ಜಗತ್‌ಜ್ಞಾನವನ್ನು ಕುರಿತು ನಿಮಿತ್ತ ಕಾರಣ ಎಂದು ಹೇಳುವುದರಿಂದ, ಜೀವರ ಜಗತ್‌ಜ್ಞಾನವು ಬ್ರಹ್ಮ ಅಥವಾ ಬ್ರಹ್ಮಜ್ಞಾನದ ಅಧೀನವಾದ ಕಾರಣದಿಂದ ಅನು ಶಬ್ದವೂ ಸಾರ್ಥಕವಾಗುತ್ತದೆ. ಜಗತ್‌ಜ್ಞಾನವೇ ಬ್ರಹ್ಮರೂಪಜ್ಞಾನವೆಂದು ಹೇಳದೆ, ಅನ್ಯಜೀವರ ಜಗತ್‌ಜ್ಞಾನವನ್ನು ಕುರಿತು ಬ್ರಹ್ಮಜ್ಞಾನವು ಕಾರಣ ಎಂದು ಹೇಳುವುದರಿಂದ ತೃತೀಯಾ ವಿಭಕ್ತಿಯ ಹೇತುತ್ವರೂಪವಾದ ಅರ್ಥವು ಉಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ತವ ತ್ವತೀಂದ್ರಿಯಂ ವಸ್ತು ನೈತದ್ವಾಕ್ಯಸ್ಯ ಗೋಚರಃ ॥ ೭೦೮ ॥**

**ಅರ್ಥ**-ತವ ತು= ನಿನ್ನ ಪಕ್ಷದಲ್ಲಾದರೆ, ಅತೀಂದ್ರಿಯಂ ವಸ್ತು= ಅತಿಂದ್ರಿಯವಾದ ವಸ್ತುವು, ಏತದ್ವಾಕ್ಯಸ್ಯ= ಈ ವಾಕ್ಯಕ್ಕೆ, ಗೋಚರಃ ನ= ವಿಷಯವಲ್ಲ.

**ಅನುವಾದ**- ನಿನ್ನ ಪಕ್ಷದಲ್ಲಾದರೆ ತಮೇವ ಭಾಂತಂ ಎಂಬ ವಾಕ್ಯಕ್ಕೆ ಅತೀಂದ್ರಿಯನಾದ ಬ್ರಹ್ಮನು ವಿಷಯನೇ ಆಗುವುದಿಲ್ಲ.

**ಭಾವವಿಲಾಸಿನೀ** – ತವ ಪಕ್ಷೇ । ಏತದ್ವಾಕ್ಯಸ್ಯ ತಮೇವಭಾಂತಮಿತಿ ವಾಕ್ಯಸ್ಯ । ಚಕ್ಷುರ್ವೃತ್ತ್ಯಾ ಭಾಂತಮಿತಿ ಹಿ ಪರೇಣಾರ್ಥೋ ವಕ್ತವ್ಯಃ । ಸ ಚ ಬ್ರಹ್ಮಣೋಽತೀಂದ್ರಿಯತ್ವಾದುಕ್ತಶ್ರುತಿಸ್ಮೃತಿ ವಿರೋಧಾಚ್ಚಾನುಪಪನ್ನ ಇತಿ ಭಾವಃ ॥ ೭೦೮ ॥

**ವಿವರಣೆ**- ಪರ ಪಕ್ಷದಲ್ಲಿ ತಮೇವ ಭಾಂತಂ ಎನ್ನುವ ವಾಕ್ಯಕ್ಕೆ ಚಾಕ್ಷುಷ ವೃತ್ತಿಯಲ್ಲಿ ಪ್ರಕಾಶಿಸುವ ಆ ಬ್ರಹ್ಮನನ್ನು ಅನುಸರಿಸಿ ಎಂದು ಅರ್ಥವಷ್ಟೇ? ಆದರೆ ಅತೀಂದ್ರಿಯನಾದ ಬ್ರಹ್ಮನು ಚಾಕ್ಷುಷ ವೃತ್ತಿಯಲ್ಲಿ ವಿಷಯನೇ ಆಗುವುದಿಲ್ಲವಾದ್ದರಿಂದ ಈ ವಾಕ್ಯವು ಬ್ರಹ್ಮ ವಿಷಯಕವೇ ಆಗುವುದಿಲ್ಲ ಎಂದು ಅಭಿಪ್ರಾಯ.

ಪರೋಕ್ಷವೃತ್ತಾವಜ್ಞಾನಾನಾಶಾದ್ ದೃಕ್ ಚ ಯದಾವೃತಾ ।
ಅತಃ ಸರ್ವಪದಾರ್ಥೋಽಪಿ ಸ್ಯಾದನರ್ಥಕರಸ್ತವ ॥ ೭೦೯ ॥

**ಅರ್ಥ**-ಪರೋಕ್ಷವೃತ್ತೌ= ಪರೋಕ್ಷ ವೃತ್ತಿಯಲ್ಲಿ, ಅಜ್ಞಾನಾನಾಶಾತ್= ಅಜ್ಞಾನವು ನಾಶವಾಗುವುದಿಲ್ಲವಾದ್ದರಿಂದ, ದೃಕ್ ಚ= ದೃಕ್ ರೂಪನಾದ ಬ್ರಹ್ಮನೂ ಸಹ, ಯತ್= ಯಾವ ಕಾರಣದಿಂದ, ಆವೃತಾ= ಆವೃತನಾಗಿರುತ್ತಾನೆಯೋ, ಅತಃ= ಆ ಕಾರಣದಿಂದ, ಸರ್ವಪದಾರ್ಥೋಽಪಿ= ಅನುಭಾತಿ ಸರ್ವಂ ಎಂಬಲ್ಲಿರುವ ಸರ್ವ ಪದವು, ತವ= ನಿನಗೆ, ಅನರ್ಥಕರಃ ಸ್ಯಾತ್= ಅರ್ಥ ಹೀನವೇ ಆಗುತ್ತದೆ (ಅನರ್ಥವನ್ನೇ ಉಂಟು ಮಾಡುತ್ತದೆ).

**ಅನುವಾದ**- ಪರೋಕ್ಷವೃತ್ತಿಯಲ್ಲಿ ಅಜ್ಞಾನನಾಶವಾಗುವುದಿಲ್ಲವಾದ್ದರಿಂದ ಬ್ರಹ್ಮನು ಆವೃತನಾಗಿಯೇ ಇರುತ್ತಾನೆ. ಆದ್ದರಿಂದ ಅನುಭಾತಿ ಸರ್ವಂ ಎಂಬಲ್ಲಿ ಹೇಳಿದ ಸರ್ವ ಪದಕ್ಕೂ ನೀನು ಸಂಕೋಚವನ್ನು ಮಾಡಬೇಕಾಗುತ್ತದೆ. ಅರ್ಥಸಂಕೋಚ ರೂಪವಾದ ಅನರ್ಥವು ನಿನಗೆ ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ** – ದೂಷಣಾಂತರಂ ಚಾಹ – **ಪರೋಕ್ಷವೃತ್ತಾವಿತಿ** ॥ ದೃಕ್ ಬ್ರಹ್ಮದೃಕ್ । ಯತ್ ಯಸ್ಮಾತ್ । ಅತಃ ತತ್ರ ಚೈತನ್ಯಸ್ಯಾವೃತತ್ವೇನ ಭಾಂತಮನುಭಾತೀತ್ಯಸ್ಯ ಕಥನಾಯೋಗಾತ್ । ಅನರ್ಥಕರಃ ಸಂಕೋಚಾಖ್ಯಾನರ್ಥಕಾರೀ । ಪರೋಕ್ಷಜ್ಞಾನವಿಷಯೇಷು ವಹ್ನ್ಯಾದಿಷು ಭಾಂತಮನುಭಾತೀತ್ಯರ್ಥಸ್ಯ ತವೈವಾನುಪಪನ್ನತ್ವೇನ ಸರ್ವಶಬ್ದಾರ್ಥಸ್ಯ ಸಂಕೋಚನೀಯತ್ವಾದಿತಿ ಭಾವಃ ॥ ೭೦೯ ॥

**ವಿವರಣೆ**- ಅನುಭಾತಿ ಸರ್ವಂ ಎಂಬಲ್ಲಿ ಸರ್ವ ಶಬ್ದಕ್ಕೆ ಐಂದ್ರಿಯಕ ಮತ್ತು ಅತೀಂದ್ರಿಯವಾದ ಎಲ್ಲಾ ವಸ್ತುಗಳೂ ಎಂದು ಸಹಜವಾಗಿಯೇ ಅರ್ಥವನ್ನು ಮಾಡಬೇಕು.

ಆದರೆ ಅತೀಂದ್ರಿಯ ವಸ್ತುಗಳಲ್ಲಿ ಪರೋಕ್ಷ ವೃತ್ತಿಯು ಮಾತ್ರ ಉಂಟಾಗುತ್ತದೆ. ಪರೋಕ್ಷ ವೃತ್ತಿ ಸ್ಥಳದಲ್ಲಿ ಅಜ್ಞಾನ ನಾಶವಾಗಲೀ, ಅಧಿಷ್ಠಾನ ಚೈತನ್ಯ ಪ್ರಕಾಶವಾಗಲೀ ಇಲ್ಲ. ಆದ್ದರಿಂದ ಸರ್ವಂ ಎಂಬುದಕ್ಕೆ ಇಂದ್ರಿಯ ವಿಷಯವಾದ ಎಲ್ಲವೂ ಎಂದು ಅರ್ಥವನ್ನು ಮಾಡಬೇಕು. ಹೀಗೆ ಸಂಕೋಚ ಮಾಡುವುದರಿಂದ ಸರ್ವಶಬ್ದವು ನಿನಗೆ ವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

**ಯದ್ವಾ ಭಾಂತಂ ತಮನ್ವೇತದ್ ಭಾತೀತಿ ಪ್ರತಿಭಾಂ ಹರೇಃ ।**
**ಸ್ವಗೋಚರಾಂ ಸರ್ವಜಗದ್ಗೋಚರಾಂ ಚ ಶ್ರುತಿರ್ಜಗೌ ॥ ೭೧೦ ॥**

**ಅರ್ಥ**-ಯದ್ವಾ= ಅಥವಾ, ಭಾಂತಂ ತಂ ಅನು= ಪ್ರಕಾಶಿಸುವ ಅವನ ಅನಂತರ, ಏತತ್= ಈ ಜಗತ್ತು, ಭಾತಿ= ಪ್ರಕಾಶಿಸುತ್ತದೆ, ಇತಿ= ಎಂದು, ಹರೇಃ ಪ್ರತಿಭಾಂ= ಹರಿಯ ಜ್ಞಾನವನ್ನು, ಸ್ವಗೋಚರಾಂ= ಸ್ವವಿಷಯಕವೆಂದು, ಸರ್ವಜಗದ್ಗೋಚರಾಂ ಚ= ಮತ್ತು ಸರ್ವಜಗದ್ವಿಷಯಕವೆಂದೂ, ಶ್ರುತಿಃ= ಶ್ರುತಿಯು, ಜಗೌ= ಹಾಡಿತು.

**ಅನುವಾದ- ಅಥವಾ ಸರ್ವಜಗದ್ವಿಷಯಕವಾದ ಭಗವದ್‌ಜ್ಞಾನದಲ್ಲಿ ಪರಮಾತ್ಮನ ಅನಂತರ ಜಗತ್ತು ಪ್ರಕಾಶಿಸುತ್ತದೆ ಎಂಬ ಅರ್ಥವನ್ನೇ ಶ್ರುತಿಯು ಹಾಡಿತು.**

**ಭಾವವಿಲಾಸಿನೀ – ಅಥವಾ ಸರ್ವವಿಷಯಕೇ ಭಗವಜ್ಜ್ಞಾನೇ ಭಾಂತಂ ತಂ ಪರಮಾತ್ಮಾನಮನ್ವನಂತರಮ್ ಅಮುಖ್ಯತಯೇತ್ಯರ್ಥಃ । ಸರ್ವಂ ಭಾತಿ । ಏವಂ ಚ ತಸ್ಯ ಪರಮಾತ್ಮನೋ ಭಾಸಾ ಜ್ಞಾನೇನ ಇದಂ ಸರ್ವಂ ಪರಾಪರಪ್ರಮೇಯಾತ್ಮಕಂ ಜಗದ್ಭಾತೀತಿ ಶ್ರುತೇರರ್ಥಃ ಸಂಭವತೀತ್ಯಾಹ – ಯದ್ವೇತಿ ॥ ೭೧೦ ॥**

**ವಿವರಣೆ-** ಹರಿಯ ಜ್ಞಾನವು ಸ್ವಪರವಿಷಯಕವಾದುದು. ಅದರಲ್ಲಿ ತಾನು ಪ್ರಧಾನನಾದವನು ಮತ್ತು ಪರವು ಅಪ್ರಧಾನವಾದುದು. ಆದ್ದರಿಂದ ಹರಿಯ ಜ್ಞಾನದಲ್ಲಿ ಪ್ರಧಾನವಾಗಿ ಹರಿಯೂ ಅಪ್ರಧಾನವಾಗಿ ಜಗತ್ತೂ ತೋರುತ್ತದೆ ಎಂಬ ಅರ್ಥವನ್ನೇ ಶ್ರುತಿಯು ಹೇಳುತ್ತದೆ ಎಂದು ಅಭಿಪ್ರಾಯ.

**ಅನ್ಯತ್ತ್ವಮುಖ್ಯತೋ ಜ್ಞೇಯಮನುಶಬ್ದೋಽಪಿ ಶಂಸತಿ ।**
**ಅಸ್ಮಜ್‌ಜ್ಞಾನಂ ತದೇವೇತಿ ಕೋಽಪಸ್ಮಾರ್ಯತ್ರ ವರ್ಣಯೇತ್ ॥ ೭೧೧ ॥**

**ಅರ್ಥ-** ಅಮುಖ್ಯತೋಽಜ್ಞೇಯಂ= ಅಪ್ರಧಾನವಾಗಿ ತಿಳಿಯಬೇಕಾದ, ಅನ್ಯತ್ ತು= ಬ್ರಹ್ಮಭಿನ್ನವಾದ ಜಗತ್ತನ್ನಾದರೂ, ಅನುಶಬ್ದೋಽಪಿ= ಅನುಶಬ್ದವು, ಶಂಸತಿ= ಹೇಳುತ್ತದೆ, ಅಸ್ಮಜ್‌ಜ್ಞಾನಂ= ನಮಗೆ ಬರುವ ಘಟಾದಿ ಜ್ಞಾನವು, ತದೇವೇತಿ= ಬ್ರಹ್ಮನೇ ಎಂದು, ಅತ್ರ= ಈ ಶ್ರುತಿಯಲ್ಲಿ, ಅಪಸ್ಮಾರ್ಯಪಿ= ಅಪಸ್ಮಾರ ರೋಗವುಳ್ಳವನೂ ಕೂಡ, ಕಃ= ಯಾವನು, ವರ್ಣಯೇತ್= ಅರ್ಥವನ್ನು ಹೇಳುತ್ತಾನೆ?

**ಅನುವಾದ-** ಅನುಭಾತಿ ಎಂಬಲ್ಲಿರುವ ಅನುಶಬ್ದವು ಬ್ರಹ್ಮಭಿನ್ನವಾದ ಜಗತ್ತು ಅಪ್ರಧಾನವಾಗಿ ತಿಳಿಯಲ್ಪಡುತ್ತದೆ ಎಂದು ಹೇಳುತ್ತದೆ. ನಮಗೆ ಉಂಟಾಗುವ ಘಟಜ್ಞಾನವೇ ಬ್ರಹ್ಮರೂಪವೆಂದು ಯಾವ ಅಪಸ್ಮಾರಿಯೂ ಕೂಡ ಈ ಶ್ರುತಿಗೆ ಅರ್ಥವನ್ನು ಹೇಳುತ್ತಾನೆ?

**ಭಾವವಿಲಾಸಿನೀ –** ಅಸ್ಮಜ್ಜ್ಞಾನಂ ಅಸ್ಮಾಕಂ ಸರ್ವೇಷಾಂ ಜೀವಾನಾಂ ಜ್ಞಾನಂ ತದೇವ ಬ್ರಹ್ಮೈವ । ತತ್ತದಧಿಷ್ಠಾನಚೈತನ್ಯಮೇವ ತತ್ತದರ್ಥಸ್ಯ ಜ್ಞಾನಂ ನಾನಾದೇಹಸ್ಥಿತಜೀವಾನಾಂ ತು ಜ್ಞಾನಮೇವ ನಾಸ್ತೀತಿ ಕೋऽಪಸ್ಮಾರೀ ಅತ್ರ ಶ್ರುತೌ ವರ್ಣಯೇದಿತಿ ಸಂಬಂಧಃ । ಜಡಾನಾಂ ಚೇತನತ್ವಕಥನಾತ್ ಜೀವಾನಾಂ ಜಡತ್ವಕಥನಾಚ್ಚಾಪಸ್ಮಾರೀತ್ಯುಕ್ತಮ್ । ತದೇವೇತಿ ವದತಾ ಚಿದ್ರೂಪಜ್ಞಾನಸ್ಯ ಸ್ವಾವಿಷಯತ್ವಾತ್ತದಧಿಷ್ಠಾನಚೈತನ್ಯರೂಪಜ್ಞಾನಮೇವ ಸರ್ವೋಲ್ಲೇಖೀತಿ ಶ್ರುತೇರಾಕಾರಸ್ಸ್ಯಾತ್ । ನ ತು ಭಾಂತಮಿತ್ಯಾದ್ಯಾಕಾರ ಇತ್ಯಪಿ ಸೂಚಿತಮ್ । ವೃತ್ತೌತು ಸ್ವೋತ್ಪತ್ತಿದಶಾಯಾಮಾವೃತಬ್ರಹ್ಮಣೋ ಜ್ಞಾನಸ್ಯೈವಾಭಾವಾತ್ ನಾಸ್ಯಾಶ್ಶ್ರುತೇರವಸರ ಇತ್ಯಪಿ ಜ್ಞೇಯಮ್ ॥ ೭೧೧ ॥

**ವಿವರಣೆ-** ನಾನಾ ದೇಹಸ್ಥಿತ ಜೀವರಿಗೆ ಉಂಟಾಗುವ ಮನಃಪರಿಣಾಮರೂಪವಾದ ಜ್ಞಾನಗಳೇ ಬ್ರಹ್ಮಸ್ವರೂಪನೆಂದು ಹೇಳುವವನು ಜಡವಾದ ಮನಃಪರಿಣಾಮಗಳಿಗೆ ಬ್ರಹ್ಮರೂಪವಾದ ಚೇತನತ್ವವನ್ನು ಅಂಗೀಕರಿಸುವುದರಿಂದ ಅವನನ್ನು ಅಪಸ್ಮಾರಿ ಎಂದು ಕರೆಯುತ್ತಾರೆ.

**ಅಥವಾ ವಿಶ್ವರೂಪಾಖ್ಯರೂಪೇಣ ಜ್ಞಾನಿನಾಂ ದೃಶಿ ।**
**ಭಾಂತಂ ತಮನು ಸರ್ವಂ ಚ ಭಾತೀತ್ಯರ್ಥಃ ಶ್ರುತೇರ್ಭವೇತ್ ॥ ೭೧೨ ॥**

**ಅರ್ಥ-** ಅಥವಾ= ಅಥವಾ, ಜ್ಞಾನಿನಾಂ ದೃಶಿ= ಜ್ಞಾನಿಗಳ ದೃಷ್ಟಿಯಲ್ಲಿ ವಿಶ್ವರೂಪಾಖ್ಯರೂಪೇಣ= ವಿಶ್ವರೂಪ ಎಂದು ಪ್ರಸಿದ್ಧವಾದ ಪರಮಾತ್ಮನ ರೂಪದಲ್ಲಿ ಭಾಂತಂ= ಪ್ರಕಾಶಿಸುವ, ತಂ= ಆ ಪರಮಾತ್ಮನನ್ನು, ಅನು= ಅನುಸರಿಸಿ, ಸರ್ವಂ ಚ= ಎಲ್ಲವೂ ಕೂಡ, ಭಾತಿ= ಪ್ರಕಾಶಿಸುತ್ತದೆ, ಇತಿ= ಎಂದು, ಶ್ರುತೇಃ ಅರ್ಥಃ= ಶ್ರುತಿಯ ಅರ್ಥವು, ಭವೇತ್= ಆಗುತ್ತದೆ.

**ಅನುವಾದ-** ಅಥವಾ ಜ್ಞಾನಿಗಳ ದೃಷ್ಟಿಯಲ್ಲಿ ವಿಶ್ವರೂಪ ಎಂಬ ಹೆಸರಿನಿಂದ ಪ್ರಖ್ಯಾತವಾದ ಅವನ ರೂಪದಲ್ಲಿ ಪ್ರಕಾಶಿಸುವ ಅವನ ಅನಂತರ ಸರ್ವ ಜಗತ್ತೂ ಪ್ರಕಾಶಿಸುತ್ತದೆ ಎಂಬ ಅರ್ಥವೇ ಶ್ರುತಿಗೆ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ –** ಅರ್ಥಾಂತರಂ ಚಾಹ – **ಅಥವೇತಿ** ॥ ತಂ ಪರಮಾತ್ಮಾನಮ್ ॥ ೭೧೨ ॥

**ವಿವರಣೆ-** ವಿಶ್ವರೂಪ ವಿಷಯಕವಾದ ಯೋಗಿಜ್ಞಾನದಲ್ಲಿ ಪರಮಾತ್ಮನೂ, ಪರಮಾತ್ಮನನ್ನು ಆಶ್ರಯಿಸಿದ ಜಗತ್ತೂ ತೋರುತ್ತದೆ. ಆದ್ದರಿಂದ ಯೋಗಿಗಳು ಮೊದಲು ಪ್ರಧಾನನಾದ ಪರಮಾತ್ಮನನ್ನು ನೋಡಿ ಅನಂತರ ಅವನನ್ನು ಆಶ್ರಯಿಸಿದ ಜಗತ್ತನ್ನು ನೋಡುತ್ತಾರೆ ಎಂಬ ಅರ್ಥವೇ ಶ್ರುತಿಗೆ ಉಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಮಲಮೂತ್ರಾದಿದೃಷ್ಟಿಂ ಸಾ ಬ್ರಹ್ಮದೃಷ್ಟಿಂ ಕಥಂ ವದೇತ್ ।**
**ಯಾ ತದಾಹೌಪನಿಷದಮವಾಙ್ಮನಸಗೋಚರಂ ॥ ೭೧೩ ॥**

**ಅರ್ಥ-** ಯಾ= ಯಾವ ಉಪನಿಷತ್ತು, ತತ್= ಆ ಬ್ರಹ್ಮನನ್ನು, ಔಪನಿಷದಂ= ಉಪನಿಷದೇಕ ಗಮ್ಯನೆಂದು, ಅವಾಙ್‌ಮನಸಗೋಚರಂ= ಮನಸ್ಸು ಮತ್ತು ವಾಕ್ಯಗಳಿಗೆ ಸಾಕಲ್ಯೇನ ಅಗಮ್ಯನೆಂದು, ಆಹ= ಹೇಳಿತೋ, ಚ= ಅಂತಹ ಶ್ರುತಿಯು, ಮಲ-ಮೂತ್ರಾದಿದೃಷ್ಟಿಂ= ಮಲಮೂತ್ರಾದಿ ದರ್ಶನವನ್ನು, ಬ್ರಹ್ಮದೃಷ್ಟಿಂ= ಬ್ರಹ್ಮದೃಷ್ಟಿಯೆಂದು, ಕಥಂ= ಹೇಗೆ, ವದೇತ್= ಹೇಳುತ್ತದೆ?

**ಅನುವಾದ- ಯಾವ ಶ್ರುತಿಯು ಬ್ರಹ್ಮನನ್ನು ಶಬ್ದೈಕಗಮ್ಯನೆಂದು ವಾಙ್‌ಮನಸ್ಸುಗಳಿಗೆ ಸಾಕಲ್ಯೇನ ಅಗೋಚರನೆಂದು ಹೇಳುತ್ತದೆಯೋ, ಅಂತಹ ಉಪನಿಷತ್ತು ಜೀವರಿಗೆ ಉಂಟಾಗುವ ಮಲಮೂತ್ರಾದಿದರ್ಶನವು ಬ್ರಹ್ಮರೂಪವಾದಜ್ಞಾನವೆಂದು ಹೇಗೆ ಹೇಳುತ್ತದೆ?**

**ಭಾವವಿಲಾಸಿನೀ – ಸರ್ವಸ್ಯ ಜಗತೋ ಜ್ಞಾನಸ್ಯ ಬ್ರಹ್ಮವಿಷಯಜ್ಞಾನತಯಾ ಪರೇಣ ಕಥನಾತ್ ಮಲಮೂತ್ರಾದಿದೃಷ್ಟಿಮಿತ್ಯುಕ್ತಮ್ । ಸಾ ತಮೇವ ಭಾಂತಮಿತಿ ಶ್ರುತಿಃ । ಯಾ ಶ್ರುತಿಃ । ತತ್ ಬ್ರಹ್ಮ ॥ ೭೧೩ ॥**

**ವಿವರಣೆ-** ಪರವಾದಿಗಳ ರೀತಿಯಲ್ಲಿ ಸರ್ವಜಗದ್ವಿಷಯವಾದ ಜ್ಞಾನವು ಬ್ರಹ್ಮಜ್ಞಾನವೇ ಆಗಿರುವುದರಿಂದ ಮಲಮೂತ್ರಾದಿ ದರ್ಶನವೂ ಸಹ ಬ್ರಹ್ಮಜ್ಞಾನವೇ ಆಗಬೇಕು. ಇದು ಅತ್ಯಂತ ಅಸಹ್ಯವಾದುದು ಮತ್ತು ಅಪಹಸನೀಯವಾದುದು ಎಂದು ಅಭಿಪ್ರಾಯ.

**ಯದ್ಧಿ ವಾಙ್ಮನಸಾತೀತಂ ತದ್ವೀಥೀವೃಷಭಃ ಕಥಂ ।**
**ಶ್ಲೇಷ್ಮಮೂತ್ರಮಲಾದೀನಾಮಪಿ ದೃಗ್ ಬ್ರಹ್ಮದೃಕ್ ಕಿಲ ।**
**ತವಾತಿಸುಲಭಂ ಬ್ರಹ್ಮ ಯದೌಪನಿಷದಂ ಸತಾಂ ॥ ೭೧೪ ॥**

**ಅರ್ಥ-** ಯದ್ಧಿ= ಯಾವ ಬ್ರಹ್ಮ ವಸ್ತುವು, ವಾಙ್ಮನಸಾತೀತಂ= ವಾಕ್ ಮತ್ತು ಮನಸ್ಸುಗಳನ್ನು ಮೀರಿದೆಯೋ, ತತ್= ಅದು, ಕಥಂ= ಹೇಗೆ, ವೀಥೀ ವೃಷಭಃ= ಬೀದಿಯ ಬಸವನಾಗುತ್ತದೆ? ಶ್ಲೇಷ್ಮಮೂತ್ರಮಲಾದೀನಾಮಪಿ ದೃಕ್= ಶ್ಲೇಷ್ಮ ಮೂತ್ರ ಮಲಾದಿಗಳ ದರ್ಶನವೂ ಕೂಡ, ಬ್ರಹ್ಮದೃಕ್ಕಿಲ= ನಿನಗೆ ಬ್ರಹ್ಮದರ್ಶನವಷ್ಟೇ? ಯತ್= ಯಾವ ಬ್ರಹ್ಮನು, ಸತಾಂ= ಸಜ್ಜನರಿಗೆ, ಔಪನಿಷದಂ= ಉಪನಿಷದೇಕ ಪ್ರತಿಪಾದ್ಯನೋ, ಅಂತಹ, ಬ್ರಹ್ಮ= ಬ್ರಹ್ಮನು, ತವ= ನಿನಗೆ, ಅತಿ ಸುಲಭಂ= ಬಹಳ ಅಗ್ಗವಾದ ವಸ್ತುವಷ್ಟೇ!

**ಅನುವಾದ- ಯಾವ ಬ್ರಹ್ಮನು ಮನಸ್ಸು ಮತ್ತು ವಾಕ್ಯಗಳಿಗೆ ಮೀರಿದವನೋ ಅವನು ಹೇಗೆ ಬೀದಿಯ ಬಸವನಾಗುತ್ತಾನೆ? ಶ್ಲೇಷ್ಮ ಮೂತ್ರ ಮಲಾದಿಗಳ ದರ್ಶನವೂ ಕೂಡ**

ನಿನಗೆ ಬ್ರಹ್ಮದರ್ಶನವೇ ಆಗಿದೆಯಷ್ಟೇ? ಯಾವ ಬ್ರಹ್ಮನು ಸಜ್ಜನರಿಗೆ ಉಪನಿಷದೇಕಪ್ರತಿಪಾದ್ಯನಾಗಿದ್ದಾನೆಯೋ, ಅವನು ನಿನಗೆ ಅತಿಸುಲಭ-ನಾಗಿದ್ದಾನಷ್ಟೇ!

**ಭಾವವಿಲಾಸಿನೀ –** ಯತ್ ಬ್ರಹ್ಮ । ವೀಥೀಸ್ಥವೃಷಭವತ್ ಬ್ರಹ್ಮಣೋಽಪಿ ಸರ್ವೈರಪಿ ದೃಶ್ಯಮಾನತ್ವಕಥನಾತ್ ವೀಥೀವೃಷಭ ಇತ್ಯುಕ್ತಮ್ ॥ ೭೧೪ ॥

**ವಿವರಣೆ-** ಬೀದಿಯ ಬಸವನು ಎಲ್ಲರ ಕಣ್ಣಿಗೆ ಕಾಣಿಸುವಂತೆ ಪ್ರಪಂಚದ ಎಲ್ಲಾ ಜ್ಞಾನಗಳಿಗೂ ಬ್ರಹ್ಮನೇ ವಿಷಯವಾಗುವುದರಿಂದ ಬ್ರಹ್ಮನು ನಿನಗೆ ಅತ್ಯಂತ ಅಗ್ಗವಾದ ಪದಾರ್ಥ ಎಂದು ಅಭಿಪ್ರಾಯ.

ಬ್ರಹ್ಮಜ್ಞಾನೇ ಸತಿ ನೃಣಾಂ ಮುಕ್ತಿಃ ಪಶ್ಚಾದ್ ಭವೇತ್ ಕಿಲ ।
ಮಲೈಃ ಸಹ ವಿಮುಕ್ತಿಃ ಪ್ರಾಕ್ ಪಶ್ಚಾದ್ ಬ್ರಹ್ಮದೃಶಿಸ್ತು ತೇ ॥ ೭೧೫ ॥

ಪುಣ್ಯನಾಶಸ್ತದೈವ ಸ್ಯಾತ್ ಪಾತಕೈರ್ಲಿಪ್ಯತೇ ಕಿಲ ।
ಬ್ರಹ್ಮದೃಷ್ಟ್ಯಾತ್ವಶುದ್ಧಸ್ಯ ಹಂತ ಶುದ್ಧ್ಯೈ ಸ್ಪೃಹಾ ಕಿಲ ॥ ೭೧೬ ॥

**ಅರ್ಥ-** ಬ್ರಹ್ಮಜ್ಞಾನೇ ಸತಿ= ಬ್ರಹ್ಮಜ್ಞಾನವು ಉಂಟಾದರೆ, ಪಶ್ಚಾತ್= ಅನಂತರ, ನೃಣಾಂ= ಮನುಷ್ಯರಿಗೆ, ಮುಕ್ತಿಃ= ಮೋಕ್ಷವು, ಭವೇತ್ ಕಿಲ= ಉಂಟಾಗುತ್ತದೆಯಷ್ಟೇ? ತೇ= ನಿನ್ನ ರೀತಿಯಲ್ಲಿ, ಪ್ರಾಕ್= ಮೊದಲು, ಮಲೈಃ ಸಹ= ಮಲಗಳಿಂದ, ವಿಮುಕ್ತಿಃ= ವಿಮೋಚನೆ, ಪಶ್ಚಾತ್ ತು= ಅನಂತರ ಮಾತ್ರ, ಬ್ರಹ್ಮದೃಶಿಃ= ಬ್ರಹ್ಮದರ್ಶನ. ತದೈವ= ಮಲದರ್ಶನರೂಪವಾದ ಬ್ರಹ್ಮದರ್ಶನವಾದಾಗಲೇ, ಪುಣ್ಯನಾಶಃ= ಪುಣ್ಯನಾಶವು, ಸ್ಯಾತ್= ಉಂಟಾಗುತ್ತದೆ ಮತ್ತು, ಪಾತಕೈರ್ಲಿಪ್ಯತೇ ಕಿಲ= ಪಾಪದ ಲೇಪವುಳ್ಳವನಾಗುತ್ತಾನಷ್ಟೇ? ಬ್ರಹ್ಮದೃಷ್ಟ್ಯಾತು= ಬ್ರಹ್ಮದರ್ಶನದಿಂದಲೇ, ಅಶುದ್ಧಸ್ಯ= ಅಶುದ್ಧನಾದವನಿಗೆ, ಶುದ್ಧ್ಯೈ= ಶುದ್ಧಿಯನ್ನು ಸಂಪಾದಿಸಲು, ಸ್ಪೃಹಾ ಕಿಲ= ಆಚಮನಾದಿ ಇಚ್ಛೆಯು ಇರುತ್ತದೆಯಷ್ಟೇ, ಹಂತ= ಆಶ್ಚರ್ಯವು!

**ಅನುವಾದ-** ಬ್ರಹ್ಮಜ್ಞಾನವುಂಟಾದರೆ ಅನಂತರ ಮೋಕ್ಷವುಂಟಾಗುತ್ತದೆ ಎಂಬುದು ಪ್ರಸಿದ್ಧವಾದುದು. ನಿನ್ನ ರೀತಿಯಲ್ಲಿ ಮಾತ್ರ ಮೊದಲು ವಿಮೋಕ ಅನಂತರ ಮಲದರ್ಶನ. ಮಲದರ್ಶನವು ಪುಣ್ಯನಾಶವನ್ನು ಮತ್ತು ಪಾಪಲೇಪವನ್ನು ಉಂಟುಮಾಡುತ್ತದೆ ಎಂಬುದು ಪ್ರಸಿದ್ಧ. ನಿನಗೆ ಮಲದರ್ಶನವೇ ಬ್ರಹ್ಮದರ್ಶನವಾದುದರಿಂದ ಬ್ರಹ್ಮದರ್ಶನದಿಂದ ಅಶುದ್ಧಿ ಉಂಟಾಗುತ್ತದೆ ಆ ಅಶುದ್ಧಿಯ ಪರಿಹಾರಕ್ಕಾಗಿ ಆಚಮನಾದಿಗಳನ್ನು ಮಾಡಲು ಬಯಸುತ್ತಾನೆ ಎಂದು ಅಂಗೀಕರಿಸಲ್ಪಡಬೇಕಾಗುತ್ತದೆ. ಇದು ಆಶ್ಚರ್ಯಕರವಾದುದು!

**ಭಾವವಿಲಾಸಿನೀ** – ಪರಪ್ರಕ್ರಿಯಾಮುಪಹಸತಿ ॥ ಬ್ರಹ್ಮಜ್ಞಾನ ಇತಿ॥ ಪ್ರಾಙ್ಮಲವಿಮೋಚನಂ ಪಶ್ಚಾನ್ಮಲದರ್ಶನೇ ಬ್ರಹ್ಮಣೋಪಿ ದರ್ಶನಮಿತಿ ಪರೇಣೋಕ್ತತ್ವಾತ್ ಪ್ರಾಗ್ಬ್ರಹ್ಮಣೋ ಮುಕ್ತಿಃ ಪಶ್ಚಾತ್ತದ್ದರ್ಶನಮಿತ್ಯಪಹಾಸಃ ॥ ತದ್ವೈವ ಮಲೇನ ಸಹ ಬ್ರಹ್ಮದರ್ಶನಸಮಯ ಏವ। ಶುಚಿತ್ವಾಪಗಮಾತ್ ಅಶುಚಿತ್ವಾಗ್ಗಮಾಚ್ಚ ಪುಣ್ಯನಾಶಃ ಪಾಪಲೇಪಶ್ಚೇತ್ಯುಕ್ತಮ್ । ಶುದ್ಧ್ಯೈ ಆಚಮನಾದಿಶುದ್ಧ್ಯೈ । ಮಲದರ್ಶನಸ್ಯಾಪಿ ಬ್ರಹ್ಮದರ್ಶನರೂಪತ್ವೇ ತಸ್ಯಾಪಿ ಚರಮಸಾಕ್ಷಾತ್ಕಾರವತ್ಪುಣ್ಯಹೇತುತ್ವಮೇವ ಸ್ಯಾತ್। ನ ನಿಂದ್ಯತೇತಿ ಭಾವಃ ॥ ೭೧೫-೭೧೬ ॥

**ವಿವರಣೆ-** ಸರ್ವಜ್ಞಾನವೂ ಬ್ರಹ್ಮಜ್ಞಾನ ಎಂಬ ಪರಪ್ರಕ್ರಿಯೆಯನ್ನು ಗ್ರಂಥಕಾರರು ಇಲ್ಲಿ ಅಪಹಾಸ ಮಾಡುತ್ತಾರೆ.

ಅತೋಧಿಷ್ಠಾನದೃಕ್ಶೂನ್ಯದೃಷ್ಟಿತ್ವಾದ್ ಘಟದರ್ಶನಂ ।
ಬ್ರಹ್ಮಧೀರಿವ ನಾರೋಪ ಇತಿ ಸ್ಯಾದನುಮಾಪಿ ನಃ ॥ ೭೧೭ ॥

ಸ್ವಾವೇದ್ಯಾಧಿಷ್ಠಾನದೃಕ್ಚ ನಾಧಿಷ್ಠಾನಸ್ಯ ಧೀಸ್ತವ ।
ತತೋಧಿಷ್ಠಾನದೃಕ್ಶೂನ್ಯಾ ಘಟದೃಷ್ಟಿರ್ದ್ವಿಧಾಪ್ಯಭೂತ್ ॥ ೭೧೮ ॥

ತಸ್ಮಾದಾರೋಪಬಲತೋ ನ ಮಿಥ್ಯಾಭೂದಿದಂ ಜಗತ್ ।
ಬಾಧಸ್ಯ ಶೋಧನೇಪಿ ಸ್ಯಾನ್ನ ಮಿಥ್ಯೇತಿ ಮತಿರ್ಮಮ ॥ ೭೧೯ ॥

**ಅರ್ಥ-** ಅತಃ= ಆದ್ದರಿಂದ, ಅಧಿಷ್ಠಾನದೃಕ್ ಶೂನ್ಯದೃಷ್ಟಿತ್ವಾತ್= ಅಧಿಷ್ಠಾನವಿಷಯಕತ್ವ ರಹಿತ ಜ್ಞಾನವಾದುದರಿಂದ, ಘಟದರ್ಶನಂ= ಘಟಜ್ಞಾನವು, ಬ್ರಹ್ಮಧೀರಿವ= ಬ್ರಹ್ಮಜ್ಞಾನದಂತೆ, ಆರೋಪಃ ನ= ಆರೋಪವಲ್ಲ, ಇತಿ= ಎಂಬ, ಅನುಮಾಪಿ= ಅನುಮಾನವೂ ಕೂಡ, ನಃ= ನಮಗೆ, ಸ್ಯಾತ್= ಸಾಧಕವಾಗುತ್ತದೆ. ತವ= ನಿನ್ನ ರೀತಿಯಲ್ಲಿ, ಸ್ವಾವೇದ್ಯ ಅಧಿಷ್ಠಾನದೃಕ್ಚ= ಸ್ವಾವೇದ್ಯವಾದ ಅಧಿಷ್ಠಾನದ ಜ್ಞಾನವೂ ಸಹ, ಅಧಿಷ್ಠಾನಧೀಃ ನ= ಅಧಿಷ್ಠಾನ ಜ್ಞಾನವಲ್ಲ, ತತಃ= ಆ ಕಾರಣದಿಂದಲೂ, ಘಟದೃಷ್ಟಿಃ= ಘಟಜ್ಞಾನವು, ದ್ವಿಧಾ= ಎರಡು ರೀತಿಯಿಂದಲೂ, ಅಧಿಷ್ಠಾನದೃಕ್ಶೂನ್ಯಾ= ಅಧಿಷ್ಠಾನ ವಿಷಯಕ ಜ್ಞಾನರಹಿತವಾಗಿ, ಅಭೂತ್= ಆಯಿತು.

ತಸ್ಮಾತ್= ಆ ಕಾರಣದಿಂದ, ಆರೋಪಬಲತಃ= ಆರೋಪ ಸಾಮರ್ಥ್ಯದಿಂದ, ಇದಂ ಜಗತ್= ಈ ಜಗತ್ತು, ಮಿಥ್ಯಾ ನ ಭೂತ್= ಮಿಥ್ಯೆಯಾಗಲಿಲ್ಲ, ಬಾಧಸ್ಯ ಶೋಧನೇಪಿ= ಬಾಧವನ್ನು ವಿಮರ್ಶೆ ಮಾಡಿದರೂ, ಮಿಥ್ಯಾ ನ ಇತಿ= ಮಿಥ್ಯೆಯಲ್ಲ ಎಂದು, ಮಮ ಮತಿಃ ಸ್ಯಾತ್= ನನ್ನ ಅಭಿಪ್ರಾಯವು ಉಂಟಾಗುತ್ತದೆ.

**ಅನುವಾದ-** ಘಟಜ್ಞಾನಂ ನಾರೋಪಃ ಅಧಿಷ್ಠಾನ ದೃಕ್ಶೂನ್ಯ ದೃಷ್ಟಿತ್ವಾತ್ ಬ್ರಹ್ಮಜ್ಞಾನವತ್ ಎಂಬ ಅನುಮಾನವು ನಮಗೆ ಸಾಧಕವಾಗುತ್ತದೆ. ಬ್ರಹ್ಮಜ್ಞಾನವು ಬರುವಾಗ ಬೇರೆ ಅಧಿಷ್ಠಾನದ ಜ್ಞಾನವಿಲ್ಲ. ಆದ್ದರಿಂದ ಬ್ರಹ್ಮಜ್ಞಾನವು ಆರೋಪವಲ್ಲ. ಅದರಂತೆ ಘಟಜ್ಞಾನದಲ್ಲಿಯೂ ಅಧಿಷ್ಠಾನವಾದ ಚೈತನ್ಯವು ವಿಷಯವಾಗುವುದಿಲ್ಲ ಎಂದು ಸಮರ್ಥನೆ ಮಾಡಿದ್ದರಿಂದ ಬ್ರಹ್ಮಜ್ಞಾನ ಎಂಬ ಘಟಜ್ಞಾನಕ್ಕೂ ಅಧಿಷ್ಠಾನವಿಷಯಕತ್ವವು ಇಲ್ಲ. ಅಧಿಷ್ಠಾನ ವಿಷಯಕತ್ವವಿಲ್ಲದ ಜ್ಞಾನವು ಆರೋಪವಾಗುವುದಿಲ್ಲ.

ನಿನ್ನ ರೀತಿಯಿಂದಲೂ ಘಟಜ್ಞಾನವು ಅಧಿಷ್ಠಾನ ಜ್ಞಾನವಾಗುವುದಿಲ್ಲ. ನಿನ್ನ ದೃಷ್ಟಿಯಲ್ಲಿ ಘಟಜ್ಞಾನವೆಂದರೆ ಅದು ಬ್ರಹ್ಮಜ್ಞಾನವೇ. ಬ್ರಹ್ಮನು ಸ್ವಾವೇದ್ಯನಾದುದರಿಂದ ಘಟಜ್ಞಾನಕ್ಕೆ ಬ್ರಹ್ಮನು ವಿಷಯನಾಗುವುದಿಲ್ಲ. ಆದ್ದರಿಂದ ನನ್ನ ರೀತಿಯಿಂದಲೂ ಮತ್ತು ನಿನ್ನ ರೀತಿಯಿಂದಲೂ ಘಟಜ್ಞಾನವು ಅಧಿಷ್ಠಾನ ದೃಷ್ಟಿಶೂನ್ಯದೃಷ್ಟಿಯಾದುದರಿಂದ ಆರೋಪವಲ್ಲ ಎಂದು ಸಿದ್ಧವಾಗುತ್ತದೆ.

ಆದ್ದರಿಂದ ಆರೋಪದ ಸಾಮರ್ಥ್ಯದಿಂದ ಈ ಜಗತ್ತು ಮಿಥ್ಯೆ ಎಂದು ಸಿದ್ಧವಾಗುವುದಿಲ್ಲ. ಇನ್ನು ಬಾಧದ ಸ್ವರೂಪದ ವಿಚಾರವನ್ನು ಮಾಡಿದರೂ ಈ ಜಗತ್ತು ಮಿಥ್ಯೆ ಎಂದು ಸಿದ್ಧವಾಗುವುದಿಲ್ಲವೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ –** ಅತಃ ಘಟಜ್ಞಾನೇ ಚೈತನ್ಯದರ್ಶನಾಯೋಗಾತ್ ॥ ಪರರೀತ್ಯಾಪ್ಯಧಿಷ್ಠಾನ-ಜ್ಞಾನಶೂನ್ಯತ್ವಮುಪಪಾದಯತಿ ॥ **ಸ್ವಾವೇದ್ಯೇತಿ** ॥ ಪರಮತೇ ಕರ್ತೃಕರ್ಮಭಾವವಿರೋಧೇನ ಚೈತನ್ಯಸ್ಯ ಸ್ವವಿಷಯತ್ವಾನಂಗೀಕಾರಾತ್ ಅಧಿಷ್ಠಾನಚೈತನ್ಯರೂಪಘಟದರ್ಶನಸ್ಯಾಧಿಷ್ಠಾನಾವಿಷಯತ್ವಂ ಸಿದ್ಧಮಿತಿ ಭಾವಃ । ದ್ವಿಧಾ ಲೋಕರೀತ್ಯಾ ಸ್ವರೀತ್ಯಾಚ ॥ ೭೦೭-೭೦೯ ॥

**ವಿವರಣೆ-** ಅದ್ವೈತಿಗಳು ಕರ್ತೃ-ಕರ್ಮ ವಿರೋಧವು ಬರುವುದರಿಂದ ಬ್ರಹ್ಮಜ್ಞಾನಕ್ಕೆ ಸ್ವವಿಷಯತ್ವವನ್ನು ಅಂಗೀಕಾರ ಮಾಡುವುದಿಲ್ಲ. ಆದ್ದರಿಂದ ಬ್ರಹ್ಮಜ್ಞಾನಕ್ಕೆ ಬ್ರಹ್ಮನು ವಿಷಯನಾಗದಿರುವುದರಿಂದ ಅಧಿಷ್ಠಾನಜ್ಞಾನವೇ ಇಲ್ಲವೆಂದಾಯಿತು. ಅಧಿಷ್ಠಾನ ಜ್ಞಾನವಿಲ್ಲದುದು ಆರೋಪವಾಗಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ಮತದ ರೀತಿಯಿಂದಲೂ ಮತ್ತು ಅದ್ವೈತ ಮತದ ರೀತಿಯಿಂದಲೂ ಆರೋಪ ಸ್ವರೂಪವನ್ನು ವಿಚಾರ ಮಾಡಿದರೆ ಜಗತ್ತು ಆರೋಪಿತವಲ್ಲವೆಂದೇ ಸಿದ್ಧವಾಗುತ್ತದೆ.

ಅಸ್ತಿ ಚೇನ್ನಾಸ್ತಿತಾಬೋಧೋ ಬಾಧಃ ಸರ್ವಸ್ಯ ನಾಭವತ್ ।
ನಾಸ್ತಿ ಚೇನ್ನಾಸ್ತಿತಾಬೋಧೋ ಬಾಧಃ ಸರ್ವಸ್ಯ ನಾಭವತ್ ॥ ೭೨೦ ॥

**ಅರ್ಥ-** ನಾಸ್ತಿತಾಬೋಧಃ= ನಾಸ್ತಿತ್ವ ಜ್ಞಾನವು, ಅಸ್ತಿ ಚೇತ್= ಇರುವುದಾದರೆ, ಸರ್ವಸ್ಯ= ಎಲ್ಲ ವಸ್ತುಗಳ, ಬಾಧನಂ= ಬಾಧವು, ನಾಭವತ್= ಉಂಟಾಗಲಿಲ್ಲ, ನಾಸ್ತಿತಾ ಬೋಧಃ=

ನಾಸ್ತಿತ್ವ ಬೋಧವು, ನಾಸ್ತಿಚೇತ್= ಇಲ್ಲವೆಂದಾದರೆ, ಸರ್ವಸ್ಯ ಬಾಧಃ= ಎಲ್ಲ ಜಗತ್ತಿನ ಬಾಧವು, ನಾಭವತ್= ಉಂಟಾಗಲಿಲ್ಲ.

**ಅನುವಾದ-** ನಾಸ್ತಿತಾಬೋಧವು ಇದೆಯೆಂದಾದರೆ ಬ್ರಹ್ಮವ್ಯತಿರಿಕ್ತವಾದ ನಾಸ್ತಿತಾ ಬೋಧವೇ ಉಳಿಯುವುದರಿಂದ ಸರ್ವ ಜಗತ್ತಿಗೂ ಬಾಧವು ಉಂಟಾಗಲಿಲ್ಲ. ನಾಸ್ತಿತಾ ಬೋಧವು ಇಲ್ಲವೆಂದರೆ ಬಾಧವನ್ನು ಉಂಟುಮಾಡುವ ನಾಸ್ತಿತಾ ಬೋಧವೇ ಇಲ್ಲದಿರುವುದರಿಂದ ಎಲ್ಲ ಜಗತ್ತಿಗೂ ಬಾಧವು ಉಂಟಾಗುವುದಿಲ್ಲ.

**ಭಾವವಿಲಾಸಿನೀ** – ಬಾಧಮಪ್ಯುಭಯತಃ ಪಾಶರಜ್ಜುಭ್ಯಾಂ ಬಧ್ನಾತಿ ॥**ಅಸ್ತಿಚೇತ್ಯಾದಿನಾ** ॥ ಪ್ರಥಮಪಕ್ಷೇ ಬ್ರಹ್ಮವ್ಯತಿರಿಕ್ತನಾಸ್ತಿತಾ ಬೋಧಸ್ಯೈವೋರ್ವರಿತತ್ವಾತ್ ಸರ್ವಸ್ಯ ಬಾಧೋ ನಾಭವದಿತ್ಯುಕ್ತಮ್ । ತ್ರಿಕಾಲನಾಸ್ತಿತ್ವಂ ಹಿ ಬಾಧಃ। ಸಚ್ಚೈಕಸ್ಮಿನ್ಕಾಲೇ ನಾಸ್ತಿತಾಬೋಧಸ್ಯಾಸ್ತಿತ್ವೇ ಕಥಂ ಪುನಸ್ತಸ್ಯ ಸ್ಯಾದಿತಿ ಭಾವಃ। ಏತೇನ ವ್ಯಾವಹಾರಿಕಾಸ್ತಿತ್ವಮಪಿ ಪ್ರತ್ಯುಕ್ತಮ್ । ತ್ರಿಕಾಲನಾಸ್ತಿತಾರೂಪಬಾಧಯೋಗ್ಯತ್ವೇ ಪ್ರಯತ್ನಶತೇನಾಪಿ ಪುನಸ್ತಸ್ಮಿನ್ನಸ್ತಿತ್ವಸ್ಯ ವಕ್ತುಮಶಕ್ಯತ್ವಾತ್। ಅಸ್ತಿತ್ವೇ ಚ ಕಥಂ ಪುನಸ್ತಸ್ಯ ತ್ರಿಕಾಲನಾಸ್ತಿತ್ವರೂಪಬಾಧಃ । ಅತಸ್ಸುಷ್ಠೂಕ್ತಮ್ ಅಸ್ತಿ ಚೇನ್ನಾಸ್ತಿತಾಬೋಧೋ ಬಾಧಸ್ಸರ್ವಸ್ಯ ನಾಭವದಿತಿ । ದ್ವಿತೀಯಪಕ್ಷೇ ಬಾಧತ್ವೇನಾಭಿಮತ ನಾಸ್ತಿತಾಬೋಧಸ್ಯೈವಾಭಾವಾತ್ ನ ಕಸ್ಯಾಪಿ ಬಾಧಸ್ಸ್ಯಾದಿತ್ಯರ್ಥಃ ॥ ೭೨೦ ॥

**ವಿವರಣೆ-** ಉಭಯ ಪಾಶಾರಜ್ಜುವಿನಿಂದ ಪರಮತವನ್ನು ನಿರಾಕರಣೆ ಮಾಡುತ್ತಾರೆ. ಬಾಧವೆಂದರೆ ತ್ರಿಕಾಲ ನಾಸ್ತಿತ್ವ. ಪ್ರಥಮ ಪಕ್ಷದಲ್ಲಿ ಒಂದು ಕಾಲದಲ್ಲಾದರೂ ಬಾಧವು ಇದೆ ಎಂದಾದರೆ ಅದಕ್ಕೆ ತ್ರಿಕಾಲ ನಾಸ್ತಿತ್ವರೂಪವಾದ ಬಾಧವು ಬರುವುದಿಲ್ಲ. ನಾಸ್ತಿತಾ ರೂಪವಾದ ಬಾಧವೇ ಉಳಿಯುವಾಗ ಸರ್ವಜಗತ್ತಿನ ಬಾಧವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ. ಬಾಧಕ್ಕೆ ಒಂದು ಕಾಲದಲ್ಲಿ ಸತ್ತ್ವವಿದ್ದರೂ ಅದು ವ್ಯಾವಹಾರಿಕ ಸತ್ತ್ವವಾದ್ದರಿಂದ ನಾಸ್ತಿತಾಬೋಧವು ಬರಲು ತೊಂದರೆಯಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಬಾಧ ಎಂದರೆ ತ್ರಿಕಾಲನಾಸ್ತಿತ್ವ. ಯಾವ ವಸ್ತುವು ತ್ರಿಕಾಲ ನಾಸ್ತಿತ್ವ ಯೋಗ್ಯವಾಗುತ್ತದೆಯೋ, ಆ ವಸ್ತುವಿನಲ್ಲಿ ನೂರು ಪ್ರಯತ್ನವನ್ನು ಮಾಡಿದರೂ ಅಸ್ತಿತ್ವವು ಬರಲು ಸಾಧ್ಯವಿಲ್ಲ. ಆದ್ದರಿಂದ ಅಸ್ತಿತ್ವವು ಇದೆ ಅದು ವ್ಯಾವಹಾರಿಕ ಎಂದು ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ. ಎರಡನೆಯ ಪಕ್ಷದಲ್ಲಂತೂ ಸರ್ವಜಗತ್ ಬಾಧಕವಾದ ನಾಸ್ತಿತಾಜ್ಞಾನವೇ ಇಲ್ಲದಿದ್ದರೆ ಜಗತ್ತಿಗೆ ಬಾಧವನ್ನು ಯಾವುದರಿಂದ ಹೇಳುವುದು? ಆ ಕಾರಣದಿಂದಲೂ ಬಾಧವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಯದ್ಯಂತೇ ನಿಷ್ಪ್ರಕಾರಾಧೀರ್ಬ್ರಹ್ಮಾನ್ಯಸ್ಯ ನ ಬಾಧನಂ ।
ಯದ್ಯಂತೇ ಸಪ್ರಕಾರಾಧೀರ್ಬ್ರಹ್ಮಾನ್ಯಸ್ಯ ನ ಬಾಧನಂ ॥ ೭೨೧ ॥

**ಅರ್ಥ-** ಯದಿ= ಒಂದು ಪಕ್ಷ, ಅಂತೇ= ಕೊನೆಯಲ್ಲಿ, ನಿಷ್ಪ್ರಕಾರಾಧೀಃ= ಕೇವಲ ಬ್ರಹ್ಮ ವಿಷಯಕವಾದ ಜ್ಞಾನವು ಉಂಟಾದರೆ, ಬ್ರಹ್ಮಾನ್ಯಸ್ಯ= ಬ್ರಹ್ಮವ್ಯತಿರಿಕ್ತವಾದುದಕ್ಕೆ, ಬಾಧನಂ ನ= ಬಾಧವು ಉಂಟಾಗುವುದಿಲ್ಲ, ಯದಿ= ಒಂದು ಪಕ್ಷ, ಅಂತೇ= ಕೊನೆಯಲ್ಲಿ, ಸಪ್ರಕಾರಾಧೀಃ= ಸಪ್ರಕಾರಕ ಜ್ಞಾನವು ಉಂಟಾಗುವುದಾದರೆ, ಬ್ರಹ್ಮಾನ್ಯಸ್ಯ= ಬ್ರಹ್ಮ ವ್ಯತಿರಿಕ್ತವಾದ ಜಗತ್ತಿಗೆ, ಬಾಧನಂ ನ= ಬಾಧವು ಉಂಟಾಗುವುದಿಲ್ಲ.

**ಅನುವಾದ-** ಒಂದು ಪಕ್ಷ ಕೊನೆಯಲ್ಲಿ ಉಂಟಾಗುವ ಬಾಧಜ್ಞಾನವು ನಿಷ್ಪ್ರಕಾರಕವೆಂದು ಅಂಗೀಕರಿಸಿದರೆ ಅದು ಬ್ರಹ್ಮ ವ್ಯತಿರಿಕ್ತವಾದ ಯಾವುದನ್ನೂ ಉಲ್ಲೇಖಿಸದಿರುವುದರಿಂದ ಜಗತ್ತಿಗೆ ಬಾಧವು ಉಂಟಾಗುವುದಿಲ್ಲ. ಒಂದು ಪಕ್ಷ ಚರಮಜ್ಞಾನವು ಸಪ್ರಕಾರಕವೆಂದು ಒಪ್ಪಿದರೆ ಪ್ರಕಾರಭೂತವಾದ ಬ್ರಹ್ಮ ವ್ಯತಿರಿಕ್ತವಾದ ನಿಷೇಧವೇ ಉಳಿದುಕೊಳ್ಳುವುದರಿಂದ ಬ್ರಹ್ಮವ್ಯತಿರಿಕ್ತವಾದ ಸರ್ವಕ್ಕೂ ಬಾಧವು ಉಂಟಾಗುವುದಿಲ್ಲ.

**ಭಾವವಿಲಾಸಿನೀ –** ನಿಷ್ಪ್ರಕಾರಾ ಬ್ರಹ್ಮಸ್ವರೂಪಮಾತ್ರವಿಷಯಾ ತದಿತರನಿಷೇಧಾಖ್ಯ ಪ್ರಕಾರಶೂನ್ಯೇತ್ಯರ್ಥಃ । ಅಸ್ಮಿನ್ ಪಕ್ಷೇ ನೇದಂ ರಜತಮಿತಿವತ್ ಅಭಾವಪ್ರಮಾರೂಪಬಾಧಸ್ಯೈವಾಭಾವಾತ್ ಬ್ರಹ್ಮಾನ್ಯಸ್ಯ ನ ಬಾಧನಮ್ । ದ್ವಿತೀಯಪಕ್ಷೇ ಪ್ರಕಾರಭೂತನಿಷೇಧಸ್ಯೈವ ಬ್ರಹ್ಮವ್ಯತಿರಿಕ್ತಸ್ಯ ಚರಮಪ್ರಮಾವಿಷಯತ್ವೇನ ಬ್ರಹ್ಮವದುರ್ವರಿತತ್ವಾತ್ ಬ್ರಹ್ಮಾನ್ಯಸ್ಯ ನ ಬಾಧನಮಿತಿ ಜ್ಞಾತವ್ಯಮ್ ॥ ೭೨೧ ॥

**ಅತೋ ಬೋಧಾದ್ಧಿ ಸರ್ವಸ್ಯ ಬಾಧಂ ಯುಕ್ತಿರಪಾಕರೋತ್ ।**
**ಅಬೋಧಾದೇವ ಬಾಧೋಕ್ತಿರಿತಿ ವಕ್ತಿ ತತಃ ಸುಧೀಃ ॥ ೭೨೨ ॥**

**ಅರ್ಥ-** ಅತಃ= ಆ ಕಾರಣದಿಂದ, ಬೋಧಾತ್= ಬ್ರಹ್ಮಜ್ಞಾನರೂಪವಾದ ಚರಮ ಸಾಕ್ಷಾತ್ಕಾರದಿಂದ, ಸರ್ವಸ್ಯ ಬಾಧಂ= ಎಲ್ಲ ಜಗತ್ತಿನ ಬಾಧವನ್ನು, ಯುಕ್ತಿಃ= ಯುಕ್ತಿಯು, ಅಪಾಕರೋತ್= ನಿರಾಕರಿಸಿತು, ತತಃ= ಆ ಕಾರಣದಿಂದ, ಅಬೋಧಾದೇವ= ಅಜ್ಞಾನದಿಂದಲೇ, ಬಾಧೋಕ್ತಿ= ಬಾಧ ವಚನವೆಂದು, ಸುಧೀಃ= ಒಳ್ಳೆಯ ವಿವೇಕವುಳ್ಳವನು, ವಕ್ತಿ= ಹೇಳುತ್ತಾನೆ.

**ಅನುವಾದ-** ಆ ಕಾರಣದಿಂದ, ಯುಕ್ತಿಯು ಬ್ರಹ್ಮಜ್ಞಾನದಿಂದ ಸರ್ವಜಗತ್ತಿಗೆ ಬಾಧವುಂಟಾಗುತ್ತದೆ ಎಂಬುದನ್ನು ನಿರಾಕರಿಸಿತು. ಆದ್ದರಿಂದ ಒಳ್ಳೆಯ ವಿವೇಕಿಯಾದವನು ಅಜ್ಞಾನದಿಂದಲೇ ಅದ್ವೈತಿಗಳು ಜಗತ್ತಿಗೆ ಬಾಧವನ್ನು ಹೇಳುತ್ತಾರೆ ಎಂದು ಹೇಳುತ್ತಾನೆ.

**ಭಾವವಿಲಾಸಿನೀ –** ಬೋಧಾತ್ ಬ್ರಹ್ಮಜ್ಞಾನಾಖ್ಯಬೋಧಾತ್ । ಬಾಧಂ ಜಗನ್ನಿಷೇಧಾಖ್ಯಬಾಧಮ್। ತತಃ ಉಕ್ತರೀತ್ಯಾ ಬಾಧಾಸಂಭವಾತ್ । ಅಬೋಧಾತ್ ಪೂರ್ವೋತ್ತರ ಪ್ರಮೇಯಾಬೋಧಾತ್ । ಬಾಧೋಕ್ತಿಃ ಜಗದ್ಬಾಧೋಕ್ತಿಃ ॥ ೭೨೨ ॥

**ವಿವರಣೆ-** ಚರಮಬ್ರಹ್ಮಜ್ಞಾನವು ಸಪ್ರಕಾರಕವಾದರೂ ಅಥವಾ ನಿಷ್ಪ್ರಕಾರಕವಾದರೂ ಸರ್ವ ಬಾಧವು ಕೂಡುವುದಿಲ್ಲ ಎಂದು ಹಿಂದೆ ತಿಳಿಸಿರುವುದರಿಂದ ಚರಮ ಸಾಕ್ಷಾತ್ಕಾರ ಸ್ವರೂಪದ ವಿಮರ್ಶೆಯನ್ನು ಮಾಡಿದರೂ ಜಗತ್ತಿಗೆ ಬಾಧವು ಸಿದ್ಧವಾಗುವುದಿಲ್ಲ. ಆದ್ದರಿಂದ ಜಗತ್ತಿಗೆ ಬಾಧೋಕ್ತಿಯು ಅಜ್ಞಾನಮೂಲಕವಾದುದು ಎಂದು ಅಭಿಪ್ರಾಯ.

ಜ್ಞಾನೇನಾಜ್ಞಾನಸ್ಯ ನಾಶೇ ತದುಪಾದಾನಕಂ ಜಗತ್ ।
ನಶ್ಯೇಚ್ಚೇನ್ನ ಹ್ಯಯಂ ಬಾಧೋ ನಾಶೋಽಯಂ ಘಟನಾಶವತ್ ।
ಅನಿತ್ಯತೈವ ತೇನ ಸ್ಯಾನ್ಮಿಥ್ಯಾತ್ವಂ ನಿರ್ನಿಬಂಧನಂ ॥ ೭೨೩ ॥

**ಅರ್ಥ-** ಜ್ಞಾನೇನ= ಜ್ಞಾನದಿಂದ, ಅಜ್ಞಾನಸ್ಯ ನಾಶೇ= ಅಜ್ಞಾನದ ನಾಶವು ಉಂಟಾಗುತ್ತಿರಲು, ತದುಪಾದಾನಕಂ= ಅಜ್ಞಾನ ಉಪಾದಾನಕವಾದ, ಜಗತ್= ಜಗತ್ತು, ನಶ್ಯೇಚ್ಚೇತ್= ನಾಶವನ್ನು ಹೊಂದುವುದಾದರೆ, ಅಯಂ ನಾಶಃ= ಈ ನಾಶವು, ಘಟನಾಶವತ್= ಘಟ ನಾಶದಂತೆ, ಬಾಧೋ ನ= ಬಾಧರೂಪವಲ್ಲ, ತೇನ= ಆ ನಾಶದಿಂದ, ಅನಿತ್ಯತೈವ ಸ್ಯಾತ್= ಅನಿತ್ಯತ್ವವೇ ಸಿದ್ಧವಾಗುತ್ತದೆ, ಮಿಥ್ಯಾತ್ವಂ= ಮಿಥ್ಯಾತ್ವವು, ನಿರ್ನಿಬಂಧನಂ= ನಿರ್ನಿಮಿತ್ತಕವಾದುದು.

**ಅನುವಾದ-** ಜ್ಞಾನದಿಂದ ಅಜ್ಞಾನವು ನಾಶವನ್ನು ಹೊಂದಿದಾಗ ಅಜ್ಞಾನೋಪಾದಾನಕವಾದ ಜಗತ್ತುನಾಶವನ್ನು ಹೊಂದುತ್ತದೆ ಎಂದು ಸ್ವೀಕರಿಸಿದರೆ ಈ ನಾಶವು ಘಟನಾಶದಂತೆಯೇ. ಬಾಧರೂಪವಾದುದಲ್ಲ. ಈ ನಾಶದಿಂದ ಅನಿತ್ಯತ್ವವೇ ಸಿದ್ಧವಾಗುತ್ತದೆಯೇ ಹೊರತು ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಮಿಥ್ಯಾತ್ವದ ಅಂಗೀಕಾರವು ನಿರ್ನಿಬಂಧನವಾದುದು.

**ಭಾವವಿಲಾಸಿನೀ –** ಜ್ಞಾನೇನ ನಿಷೇಧೋ ಬಾಧ ಇತಿ ಪಕ್ಷಮಪಾಕೃತ್ಯ ಜ್ಞಾನೇನ ನಾಶೋ ಬಾಧ ಇತಿ ಪಕ್ಷಂ ಪೂರ್ವೋಕ್ತದೂಷಣದ್ವಯೇನ ದೂಷಿತಮಪಿ ಪುನರ್ದೋಷಾಂತರೇಣ ದೂಷಯತಿ॥ ಜ್ಞಾನೇನೇತಿ ॥ ೭೨೩ ॥

**ವಿವರಣೆ-** ಜ್ಞಾನದಿಂದ ನಿಷೇಧವು ಬಾಧ ಎಂಬ ಪಕ್ಷವನ್ನು ನಿರಾಕರಣೆ ಮಾಡಿ ಈಗ ಜ್ಞಾನದಿಂದ ನಾಶವು ಬಾಧ ಎಂಬ ಪಕ್ಷವನ್ನು ನಿರಾಕರಣೆ ಮಾಡುತ್ತಾರೆ.

ನಾಶಾನಂತರನಾಸ್ತಿತ್ವಬೋಧೋ ಘಟಪಟಾದಿಕೇ ।
ನಷ್ಟೇ ತನ್ನಾಸ್ತಿತಾಬೋಧಸಮೋ ಮಿಥ್ಯಾ ತತೋಽಪಿ ನ ॥ ೭೨೪ ॥

**ಅರ್ಥ-** ನಾಶಾನಂತರನಾಸ್ತಿತಾ ಬೋಧಃ= ಜಗತ್ತಿನ ನಾಶದ ನಂತರ ಉಂಟಾಗುವ ನಾಸ್ತಿತ್ವ ಜ್ಞಾನವು, ಘಟಪಟಾದಿಕೇ ನಷ್ಟೇ= ಘಟಪಟಾದಿಗಳು ನಷ್ಟವಾದ ಮೇಲೆ

ಉಂಟಾಗುವ, ತನ್ನಾಸ್ತಿತಾಬೋಧಸಮಃ= ಘಟಪಟಾದಿಗಳ ನಾಸ್ತಿತ್ವ ಬಾಧಕ್ಕೆ ಸಮವಾಗಿರುತ್ತದೆ, ತತೋ ಪಿ= ಆ ಕಾರಣದಿಂದಲೂ ಕೂಡ, ಮಿಥ್ಯಾ ನ= ಮಿಥ್ಯೆಯಲ್ಲ.

**ಅನುವಾದ-** ಜಗತ್ತಿನ ನಾಶಾನಂತರ ಉಂಟಾಗುವ ನಾಸ್ತಿತ್ವ ಜ್ಞಾನವು ಘಟಪಟಾದಿ ನಾಶದ ನಂತರ ಉಂಟಾಗುವ ಘಟಪಟಾದಿ ನಾಸ್ತಿತ್ವ ಜ್ಞಾನಕ್ಕೆ ಸಮವಾಗಿರುತ್ತದೆ. ಆ ಕಾರಣದಿಂದಲೂ ಜಗತ್ತು ಮಿಥ್ಯೆಯಲ್ಲ.

**ಭಾವವಿಲಾಸಿನೀ** – ತತಃ ನಾಶಾನಂತರಂ ಜಾತಾನ್ನಾಸ್ತಿತ್ವಬೋಧಾತ್ ॥ ೭೨೪ ॥

**ವಿವರಣೆ-** ಘಟ ನಾಶಾನಂತರ ಉಂಟಾಗುವ ಘಟನಾಸಿತ್ವಜ್ಞಾನದಿಂದ ಘಟಕ್ಕೆ ಅನಿತ್ಯತ್ವವೇ ಸಿದ್ಧವಾಗುತ್ತದೆಯೇ ಹೊರತು ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಅದರಂತೆ ಜಗನ್ನಾಶದ ನಂತರ ಉಂಟಾಗುವ ಜಗನ್ನಾಸ್ತಿತ್ವದ ಜ್ಞಾನದಿಂದ ಅಥವಾ ಜಗತ್ತಿಗೆ ನಾಶವನ್ನು ಅಂಗೀಕರಿಸುವುದರಿಂದ ಜಗತ್ತಿಗೆ ಅನಿತ್ಯತ್ವವೇ ಸಿದ್ಧವಾಗುತ್ತದೆಯೇ ಹೊರತು ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಪ್ರಧ್ವಂಸಾಭಾವಬೋಧೋಽಸೌ ನ ಮಿಥ್ಯಾತ್ವಸ್ಯ ವೇದನಂ ।
ಪ್ರಾಙ್ನಾಸ್ತಿತಾಯಾ ಬೋಧಸ್ತು ನ ತವಾಪಿ ಮಮಾಪಿ ನ ॥ ೭೨೫ ॥

**ಅರ್ಥ-** ಅಸೌ= ಈ ನಾಸ್ತಿತ್ವ ಜ್ಞಾನವು, ಪ್ರಧ್ವಂಸಾಭಾವಬೋಧಃ= ಧ್ವಂಸರೂಪವಾದ ಅಭಾವದ ಜ್ಞಾನವಾಗಿದೆ, ಮಿಥ್ಯಾತ್ವಸ್ಯ ವೇದನಂ ನ= ಮಿಥ್ಯಾತ್ವದ ಜ್ಞಾನವಾಗಿಲ್ಲ, ಪ್ರಾಕ್= ನಾಶಕ್ಕಿಂತ ಮೊದಲು, ನಾಸ್ತಿತಾಯಾ ಬೋಧಸ್ತು= ನಾಸ್ತಿತ್ವಜ್ಞಾನವಾದರೂ, ತವಾಪಿ ನ= ನಿನಗೂ ಇಲ್ಲ, ಮಮಾಪಿ ನ= ಮತ್ತು ನನಗೂ ಇಲ್ಲ.

**ಅನುವಾದ-** ನಾಶಾನಂತರದಲ್ಲಿ ಉಂಟಾಗುವ ನಾಸ್ತಿತ್ವ ಜ್ಞಾನವು ಧ್ವಂಸಜ್ಞಾನವೇ ಹೊರತು ಮಿಥ್ಯಾತ್ವ ಜ್ಞಾನವಲ್ಲ. ನಾಶಕ್ಕಿಂತ ಮೊದಲು ನಾಸ್ತಿತಾಜ್ಞಾನವು ನಿನಗೂ ಇಲ್ಲ ಮತ್ತು ನನಗೂ ಇಲ್ಲ.

**ಭಾವವಿಲಾಸಿನೀ** – ಪ್ರಾಕ್ ನಾಶಾತ್ಪ್ರಾಕ್ ॥ ೭೨೫ ॥

**ವಿವರಣೆ-** ನಾಶಕ್ಕಿಂತ ಮೊದಲು ನಿನಗಾಗಲೀ ಅಥವಾ ನನಗಾಗಲೀ ನಾಸ್ತಿತ್ವಜ್ಞಾನವು ಇಲ್ಲದಿರುವುದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ನಾಶದ ಅನಂತರದಲ್ಲಿ ಉಂಟಾಗುವ ನಾಸ್ತಿತ್ವಜ್ಞಾನವು ಅನಿತ್ಯತ್ವವನ್ನು ಸಾಧಿಸುತ್ತದೆಯೇ ಹೊರತು ಮಿಥ್ಯಾತ್ವವನ್ನು ಸಾಧಿಸುವುದಿಲ್ಲ ಎಂದು ಅಭಿಪ್ರಾಯ.

ಸತ ಏವ ವಿನಾಶೇನ ಪ್ರಾಕ್ ಸತ್ತ್ವೈವ ಜಗತ್ಯಭೂತ್ ।
ಅತೋ ವಿಷಂ ಮಹೇಶಸ್ಯ ಕಂಠಾಭರಣತಾಮಗಾತ್ ॥ ೭೨೬ ॥

**ಅರ್ಥ-** ಸತ ಏವ= ವಿದ್ಯಮಾನವಾದ ಪದಾರ್ಥಕ್ಕೇ, ವಿನಾಶೇನ= ಧ್ವಂಸವು ಉಂಟಾಗುವುದರಿಂದ, ಪ್ರಾಕ್= ನಾಶಕ್ಕಿಂತ ಮೊದಲು, ಜಗತಿ= ಜಗತ್ತಿನಲ್ಲಿ, ಸತ್ತ್ವೈವ ಅಭೂತ್= ಸತ್ತ್ವವೇ ಸಿದ್ಧವಾಯಿತು, ಅತಃ= ಆ ಕಾರಣದಿಂದ, ವಿಷಂ= ವಿಷವು, ಮಹೇಶಸ್ಯ= ಮಹೇಶ್ವರನಿಗೆ, ಕಂಠಾಭರಣತಾಮ್= ಕಂಠಾಭರಣತ್ವವನ್ನು, ಅಗಾತ್= ಹೊಂದಿತು.

**ಅನುವಾದ-** ಸತ್ಯವಾದ ವಸ್ತುವಿಗೇ ವಿನಾಶವು ಕಂಡಿರುವುದರಿಂದ ಜಗತ್ತಿನಲ್ಲಿ ನಾಶಕ್ಕಿಂತ ಮೊದಲು ಸತ್ತ್ವವೇ ಸಿದ್ಧವಾಯಿತು. ಆದ್ದರಿಂದ ಅತಿಕ್ರೂರವಾದ ವಿಷವು ಮಹೇಶ್ವರನಿಗೆ ಕಂಠಾಭರಣವೇ ಆಯಿತು.

**ಭಾವವಿಲಾಸಿನೀ –** ಅತಃ ನಾಶೋತ್ತರಕಾಲೀನನಾಸ್ತಿತ್ವಸ್ಯ ಪ್ರಾಕ್ಸತ್ತ್ವನಿಯತತ್ವಾತ್ । ಯಥಾಽತಿಕ್ರೂರಮಪಿ ವಿಷಂ ಮಹೇಶ್ವರಸ್ಯ ಕಂಠಾಭರಣಮಭೂತ್ ತಥಾ ನಾಶೋತ್ತರಕಾಲೀನನಾಸ್ತಿತ್ವಮಪಿ ಜಗತ್ಸತ್ತಾಸಾಧಕತ್ವೇನ ಸತ್ಯತ್ವವಾದಿನಃ ಕಂಠಾಭರಣಮೇವಾಭೂತ್ ।। ೭೨೬ ।।

**ವಿವರಣೆ-** ಅತಿಕ್ರೂರವಾದ ವಿಷದಂತೆ ನಾಸ್ತಿತಾಬೋಧ. ಏಕೆಂದರೆ ಅದು ಸರ್ವಜಗತ್ತನ್ನೂ ನಿಷೇಧ ಮಾಡುತ್ತದೆ ಎಂದು ಪರರ ಅಭಿಪ್ರಾಯ. ಆದರೆ ಆ ನಾಸ್ತಿತ್ವಬೋಧವೂ ಸಹ ನಾಶಕ್ಕಿಂತ ಮೊದಲು ಸತ್ಯತ್ವವನ್ನೇ ಸಮರ್ಥನೆ ಮಾಡುವುದರಿಂದ ಏಕ ಕಾಲದಲ್ಲಿ ಸತ್ತ್ವವನ್ನು ಹೊಂದಿದ ವಸ್ತುವಿಗೆ ಕಾಲತ್ರಯಸತ್ವನಿಷೇಧರೂಪವಾದ ಬಾಧವು ಬರಲು ಸಾಧ್ಯವಿಲ್ಲವಾದ್ದರಿಂದ ತತ್ತ್ವವಾದಿಗಳಾದ ನಮ್ಮ ಮತವನ್ನೇ ಸಮರ್ಥಿಸಿ ಅದೂ ನಮಗೇ ಆಭರಣವಾಯಿತು ಎಂದು ಅಭಿಪ್ರಾಯ.

ತ್ರಿಕಾಲನಾಸ್ತಿತಾಬೋಧೋ ಬಾಧೋಪ್ಯೇತೇನ ಖಂಡಿತಃ ।
ಪ್ರಾಕ್ಸತ್ತಾನಿಯಮೋ ಯಸ್ಮಾನ್ನಾಶಸ್ಯಾಖಿಲಸಂಮತಾ ।। ೭೨೭ ।।

**ಅರ್ಥ-** ಏತೇನ= ನಾಶವು ನಿಯತವಾಗಿ ಪೂರ್ವಕಾಲೀನ ಸತ್ತಾವ್ಯಪೇಕ್ಷಿಯಾಗಿ ರುವುದರಿಂದ, ತ್ರಿಕಾಲನಾಸ್ತಿತಾಬೋಧಃ= ಕಾಲತ್ರಯದಲ್ಲಿ ನಾಸ್ತಿತ್ವ ಬೋಧರೂಪವಾದ, ಬಾಧೋಪಿ= ಬಾಧವೂ ಸಹ, ಖಂಡಿತಃ= ನಿರಾಕರಿಸಲ್ಪಟ್ಟಿತು. ಯಸ್ಮಾತ್= ಏಕೆಂದರೆ, ನಾಶಸ್ಯ= ನಾಶಕ್ಕೆ, ಪ್ರಾಕ್ಸತ್ತಾನಿಯಮಃ= ನಾಶಕ್ಕಿಂತ ಮೊದಲು ಪ್ರತಿಯೋಗಿಯ ಸತ್ತ್ವವು ಬೇಕೆಂಬ ನಿಯಮವು, ಅಖಿಲ ಸಂಮತಾ= ಎಲ್ಲ ವಾದಿಗಳಿಗೂ ಸಮ್ಮತವಾಗಿದೆ.

**ಅನುವಾದ-** ಇದರಿಂದ ಕಾಲತ್ರಯ ನಾಸ್ತಿತಾಬೋಧರೂಪವಾದ ಬಾಧವು ನಿರಾಕೃತವಾಯಿತು. ಏಕೆಂದರೆ ನಾಶಕ್ಕಿಂತ ಮೊದಲು ಪ್ರತಿಯೋಗಿಯ ಸತ್ತ್ವವು ಎಲ್ಲ ವಾದಿಗಳಿಂದಲೂ ನಿಯಮೇನ ಅಂಗೀಕರಿಸಲ್ಪಡುತ್ತದೆ.

**ಭಾವವಿಲಾಸಿನೀ –** ಏತೇನ ಪ್ರಾಕ್ಸತ್ತಾನಿಯತನಾಶೇನ । ಏತೇನೇತ್ಯುಕ್ತಹೇತುಂ ವಿಶದಯತಿ ।। ಪ್ರಾಗಿತಿ।।೭೨೭।।

**ವಿವರಣೆ-** ಜ್ಞಾನದಿಂದ ನಾಶವು ಬಾಧ ಎಂದು ಅಂಗೀಕರಿಸಿದರೂ ನಾಶಕ್ಕಿಂತಲೂ ಮೊದಲು ಪ್ರತಿಯೋಗಿಯ ಸತ್ತ್ವವು ಅವಶ್ಯಕವಾದುದರಿಂದ ಪ್ರತಿಯೋಗಿಯಾದ ಜಗತ್ತಿಗೆ ತ್ರಿಕಾಲನಾಸ್ತಿತ್ವರೂಪಬಾಧವು ಉಂಟಾಗುವುದಿಲ್ಲವೆಂದು ಅಭಿಪ್ರಾಯ.

**ಕಾಲತ್ರಯೇಪಿ ಸತ್ತಾಯಾ ನಿಷೇಧಃ ಕುತ್ರ ವಿದ್ಯತೇ ॥ ೭೨೮ ॥**

**ಅರ್ಥ-** ಸತ್ತಾಯಾಃ= ಜಗತ್ಸತ್ವಕ್ಕೆ, ಕಾಲತ್ರಯೇಪಿ= ಮೂರು ಕಾಲಗಳಲ್ಲಿಯೂ, ನಿಷೇಧಃ= ನಿಷೇಧವು, ಕುತ್ರ ವಿದ್ಯತೇ= ಎಲ್ಲಿದೆ?

**ಅನುವಾದ-** ಸತ್ವಕ್ಕೆ ಕಾಲತ್ರಯದಲ್ಲೂ ನಿಷೇಧವು ಎಲ್ಲಿದೆ? (ಎಲ್ಲಿ ಹೇಳಲ್ಪಡುತ್ತದೆ?)

**ಭಾವವಿಲಾಸಿನೀ –** ತ್ರಿಕಾಲನಾಸ್ತಿತ್ವರೂಪಬಾಧಮಂಗೀಕೃತ್ಯ ರಜ್ಜುಭ್ಯಾಮೇವ ಬಂಧನಂ ಕೃತಮ್ । ಅಧುನಾ ಶ್ರೌತಪದಾವಲೀಶೋಧನೇ ಸ ಏವಾಷ್ಟಮರಸಾಯಿತ ಇತ್ಯಾಹ – **ಕಾಲತ್ರಯೇತಿ** ॥ ೭೨೮ ॥

**ವಿವರಣೆ-** ಹಿಂದೆ ತ್ರಿಕಾಲನಾಸ್ತಿತ್ವರೂಪವಾದ ಬಾಧವನ್ನು ಅಂಗೀಕರಿಸಿ ಉಭಯ ಪಾಶಾರಜ್ಜುಗಳಿಂದ ದೋಷವನ್ನು ಹೇಳಿದರು. ಈಗ ಶ್ರುತಿಗಳಲ್ಲಿರುವ ಪದವನ್ನು ವಿಚಾರ ಮಾಡಿದರೆ, ಕಾಲತ್ರಯ ಸತ್ತ್ವನಿಷೇಧವೇ ಎಂಟನೆಯ ರಸದಂತೆ ಅಸಂಭಾವಿತವಾದುದು ಎಂದು ಹೇಳುತ್ತಾರೆ.

**ನ ವಿದ್ಯತೇ ದ್ವಿತೀಯಂ ಚೇದದ್ವಿತೀಯಾಭಿದಂ ಹಿ ತತ್ ।**
**ವರ್ತಮಾನನಿಷೇಧೋಯಂ ಲಟಸ್ತತ್ರೈವ ಶಾಸನಾತ್ ॥ ೭೨೯ ॥**

**ಅರ್ಥ-** ನ ವಿದ್ಯತೇ ದ್ವಿತೀಯಂ ಚೇತ್= ದ್ವಿತೀಯ ವಸ್ತುವು ಇಲ್ಲದಿದ್ದರೆ, ತತ್= ಅದು, ಅದ್ವಿತೀಯಾಭಿದಂ ಹಿ= ಅದ್ವಿತೀಯ ಪದದಿಂದ ಕರೆಸಿಕೊಳ್ಳಲ್ಪಡುತ್ತದೆಯಷ್ಟೇ. ಲಟಃ= ಲಟ್ ಪ್ರತ್ಯಯವನ್ನು, ತತ್ರೈವ= ವರ್ತಮಾನ ಕಾಲದಲ್ಲಿಯೇ, ಅನುಶಾಸನಾತ್= ಅನುಶಾಸನ ಮಾಡುವುದರಿಂದ, ಅಯಂ= ಇದು, ವರ್ತಮಾನ ನಿಷೇಧಃ= ವರ್ತಮಾನ ಕಾಲದ ನಿಷೇಧ ಮಾತ್ರ ಆಗುತ್ತದೆ.

**ಅನುವಾದ-** ಯಾವುದಕ್ಕೆ ದ್ವಿತೀಯವು ಇಲ್ಲವೋ ಆ ವಸ್ತುವು ಅದ್ವಿತೀಯ ಎಂದು ಕರೆಸಿಕೊಳ್ಳಲ್ಪಡುತ್ತದೆ. ಲಟ್ ಪ್ರತ್ಯಯವನ್ನು ವರ್ತಮಾನ ಕಾಲದಲ್ಲಿ ಮಾತ್ರ ಅನುಶಾಸನ ಮಾಡುವುದರಿಂದ, ಈ ನಿಷೇಧವು ವರ್ತಮಾನ ಕಾಲೀನ ಮಾತ್ರವಾದ ನಿಷೇಧವಾಗುತ್ತದೆ.

**ಭಾವವಿಲಾಸಿನೀ –** ಏಕಮೇವಾದ್ವಿತೀಯಮಿತ್ಯತ್ರಾದ್ವಿತೀಯಪದೇನೈವ ಕಾಲತ್ರಯನಿಷೇಧೋಕ್ತಿರಿತಿ ಶಂಕಾಂ ನಿರಾಕರೋತಿ ॥ **ನ ವಿದ್ಯತ ಇತಿ** ॥ ತತ್ ಬ್ರಹ್ಮ । ಅಯಂ ನ ವಿದ್ಯತ ಇತಿ ನಿಷೇಧಃ । ತತ್ರೈವ ವರ್ತಮಾನೇ ॥ ೭೨೯ ॥

**ವಿವರಣೆ-** 'ನ ವಿದ್ಯತೇ ದ್ವಿತೀಯಂ ಯಸ್ಯ' ಎಂದು ವಿಗ್ರಹವನ್ನು ಮಾಡಿ ಅದ್ವಿತೀಯ ಪದವನ್ನು ಸಮಸ್ತ ಪದವೆಂದು ಅಂಗೀಕರಿಸಬೇಕು. ವಿದ್ಯತೇ ಎಂಬಲ್ಲಿರುವ ತಿಙ್ ಪ್ರತ್ಯಯವು ಲಟ್ ಪ್ರತ್ಯಯ. ಲಟ್ ಪ್ರತ್ಯಯಕ್ಕೆ ವರ್ತಮಾನ ಕಾಲವು ಅರ್ಥ. ಆದ್ದರಿಂದ ಇಂತಹ ವಿಗ್ರಹದಿಂದ ವರ್ತಮಾನ ಕಾಲದಲ್ಲಿ ಮಾತ್ರ ನಿಷೇಧವು ಪ್ರಾಪ್ತವಾಗುತ್ತದೆಯೇ ಹೊರತು ಕಾಲತ್ರಯದಲ್ಲಿ ನಿಷೇಧವು ಪ್ರಾಪ್ತವಾಗುವುದಿಲ್ಲ. ಕಾಲತ್ರಯಸತ್ತ್ವ ನಿಷೇಧವನ್ನೇ ನೀನು ಬಾಧವೆಂದು ಅಂಗೀಕರಿಸಿದ್ದೀಯೇ ಆದ್ದರಿಂದ ಅದ್ವಿತೀಯ ಶಬ್ದವು ನಿನಗೆ ಅಭಿಮತವಾದ ಬಾಧವನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಅಘಟಾ ಭೂಮಿರಿತ್ಯುಕ್ತೇ ಕಿಂ ಭಾವ್ಯಪಿ ಘಟೋತ್ರ ನ ।**
**ಅತ ಈದೃಕ್ಪದಸ್ಥೋ ನಞ್ನಾತ್ಯಂತಾಭಾವಬೋಧಕಃ ॥ ೭೩೦ ॥**

**ಅರ್ಥ-** ಅಘಟಾ ಭೂಮಿರಿತ್ಯುಕ್ತೇ= ಭೂಮಿಯಲ್ಲಿ ಘಟವಿಲ್ಲ ಎಂದು ಹೇಳಿದರೆ, ಭಾವ್ಯಪಿ ಘಟಃ= ಭವಿಷ್ಯತ್ಕಾಲವಾದ ಘಟವೂ, ಅತ್ರ ಕಿಂ ನ= ಅಲ್ಲಿ ನಿಷೇಧಿಸಲ್ಪಡುವುದೇನು? ಅತಃ= ಆದ್ದರಿಂದ, ಈದೃಕ್ಪದಸ್ಥಃ= ಇಂತಹ ಸಮಸ್ತ ಪದದಲ್ಲಿರುವ, ನಞ್= ನಞ್ ಶಬ್ದವು, ನ ಅತ್ಯಂತಾಭಾವಬೋಧಕಃ= ಅತ್ಯಂತಾಭಾವ ಬೋಧಕ ವಾಗುವುದಿಲ್ಲ.

**ಅನುವಾದ- ಭೂಮಿಯಲ್ಲಿ ಘಟವಿಲ್ಲ ಎಂದು ಹೇಳಿದರೆ ಅದು ಭವಿಷ್ಯತ್ಕಾಲದಲ್ಲಿ ಬರುವ ಘಟವನ್ನೂ ಸಹ ನಿಷೇಧ ಮಾಡುತ್ತದೆಯೇ? ಆದ್ದರಿಂದ ಇಂತಹ ಸಮಸ್ತ ಪದದಲ್ಲಿರುವ ನಞ್ ಪದವು ಅತ್ಯಂತಾಭಾವವನ್ನು ಬೋಧಿಸುವುದಿಲ್ಲ.**

**ಭಾವವಿಲಾಸಿನೀ –** ಅದ್ವಿತೀಯಪದಸ್ಯಾಪಿ ವಿಗ್ರಹಂ ವದಂತಃ ನ ವಿದ್ಯತೇ ದ್ವಿತೀಯಂ ಯಸ್ಯೇತ್ಯೇವ ವದಂತಿ । ಸ ಚ ಲಡಂತಪದಪ್ರಯೋಗಮಹಿಮ್ನಾ ವರ್ತಮಾನಕಾಲ ಏವ ತನ್ನಿಷೇಧತಿ । ನ ಸರ್ವದಾ। ಅನ್ಯಥಾಕಾಲಾಂತರೇ ಸಘಟೇ ಭೂತಲೇಽಘಟಂ ಇತಿ ಪ್ರಯೋಗ ಏವ ನ ಸ್ಯಾದಿತ್ಯಾಹ**–ಅಘಟೇತಿ॥** ಅತೋ ನಾನೇನ ಪದೇನ ತ್ರೈಕಾಲಿಕನಿಷೇಧಸಿದ್ಧಿರಿತಿ ಭಾವಃ ॥೭೩೦॥

**ವಿವರಣೆ-** 'ಅಘಟಂ ಭೂತಲಂ' ಎಂದು ಹೇಳಿದರೆ ಅಘಟ ಶಬ್ದಕ್ಕೆ ನ ವಿದ್ಯತೇ ಘಟಃ ಯತ್ರ ಎನ್ನುವ ವಿಗ್ರಹದಿಂದ ಈಗ ಘಟವಿಲ್ಲದುದು ಎಂದೇ ಅರ್ಥವಾಗುತ್ತದೆ ಹೊರತಾಗಿ, ಹಿಂದೆ ಘಟವಿರಲಿಲ್ಲವೆಂದಾಗಲೀ ಮುಂದೆ ಅಲ್ಲಿ ಘಟವು ಬರುವುದಿಲ್ಲವೆಂದಾಗಲೀ ಅರ್ಥವಾಗುವುದಿಲ್ಲ. ಆದ್ದರಿಂದ ವರ್ತಮಾನಕಾಲಮಾತ್ರ ನಿಷೇಧವು ತ್ರೈಕಾಲಿಕ ನಿಷೇಧವಾಗುವುದಿಲ್ಲ. ಅದರಂತೆ ಅದ್ವಿತೀಯಂ ಎಂಬ ಪದವು ವರ್ತಮಾನ ಕಾಲದಲ್ಲಿ ಮಾತ್ರ ಜಗತ್ತನ್ನು ನಿಷೇಧ ಮಾಡಿದರೂ ಕಾಲತ್ರಯದಲ್ಲಿ ಜಗತ್ತನ್ನು ನಿಷೇಧ ಮಾಡುವುದಿಲ್ಲವಾದ್ದರಿಂದ ಜಗತ್ತಿಗೆ ಬಾಧವು ಬರುವುದಿಲ್ಲ ಎಂದು ಅಭಿಪ್ರಾಯ.

**ಸೋಪಿ ಯಸ್ಯೇತಿ ಶಬ್ದಸ್ಯ ವಾಚ್ಯಾರ್ಥೇ ಕೇವಲಂ ಭವೇತ್ ।**
**ಸ್ವಸ್ವೋಪಾದಾನಗಾನರ್ಥಾನ್ ಸಮರ್ಥಾನ್ ಕಿಂ ನಿಷೇಧತಿ ॥ ೭೩೧ ॥**

**ಏಕದೇಶನಿಷೇಧಶ್ಚ ನ ಮಿಥ್ಯಾತ್ವಪ್ರಯೋಜಕಃ ।**
**ಸನ್ನಪ್ಯರ್ಥೋ ನ ಸರ್ವತ್ರ ಕ್ವಚಿನ್ನಾಸ್ತ್ಯಸ್ತಿ ಚ ಕ್ವಚಿತ್ ॥ ೭೩೨ ॥**

**ಅರ್ಥ-** ಸೋಪಿ= ಆ ವರ್ತಮಾನ ಕಾಲೀನ ನಿಷೇಧವೂ ಸಹ, ಕೇವಲಂ= ಕೇವಲ, ಯಸ್ಯೇತಿ ಶಬ್ದಸ್ಯ= ಯಸ್ಯ ಎಂಬ ಶಬ್ದಕ್ಕೆ, ವಾಚ್ಯಾರ್ಥೇ= ವಾಚ್ಯವಾದ ಅರ್ಥದಲ್ಲಿ, ಭವೇತ್= ಉಂಟಾಗುತ್ತದೆ. ಅದು, ಸ್ವಸ್ವೋಪಾದಾನಗಾನ್= ತನ್ನ ತನ್ನ ಉಪಾದಾನದಲ್ಲಿರುವ, ಸಮರ್ಥಾನ್= ಅರ್ಥಕ್ರಿಯಾಕಾರಿಯಾದ, ಅರ್ಥಾನ್= ಪದಾರ್ಥಗಳನ್ನು, ಕಿಂ ನಿಷೇಧತಿ= ನಿಷೇಧ ಮಾಡುವುದೇನು? ಏಕದೇಶನಿಷೇಧಶ್ಚ= ಒಂದು ದೇಶದಲ್ಲಿ ಮಾಡಿದ ನಿಷೇಧವು, ಮಿಥ್ಯಾತ್ವಪ್ರಯೋಜಕಃ ನ= ಮಿಥ್ಯಾತ್ವಕ್ಕೆ ಪ್ರಯೋಜಕವಾಗುವುದಿಲ್ಲ. ಸನ್ನಪ್ಯರ್ಥಃ= ಸತ್ಯವಾದ ಅರ್ಥವೂ ಕೂಡ, ಸರ್ವತ್ರ= ಎಲ್ಲಾ ದೇಶದಲ್ಲಿಯೂ ಇರುವುದಿಲ್ಲ, ಕ್ವಚಿನ್ನಾಸ್ತಿ= ಒಂದು ದೇಶದಲ್ಲಿ ಇರುವುದಿಲ್ಲ, ಚ= ಮತ್ತು, ಕ್ವಚಿತ್ ಅಸ್ತಿ= ಒಂದು ದೇಶದಲ್ಲಿ ಇರುತ್ತದೆ.

**ಅನುವಾದ-** ವರ್ತಮಾನ ಕಾಲೀನ ನಿಷೇಧವೂ ಸಹ ಕೇವಲ ಯಸ್ಯ ಎಂಬಲ್ಲಿನ ಯತ್ಪದದ ವಾಚ್ಯಾರ್ಥದಲ್ಲಿಯೇ ಸಿದ್ಧವಾಗುತ್ತದೆ. ಈ ನಿಷೇಧವೂ ಸಹ ತನ್ನ ತನ್ನ ಉಪಾದಾನ ಕಾರಣಗಳಲ್ಲಿರುವ ಅರ್ಥಕ್ರಿಯಾಕಾರಿಯಾದ ಪದಾರ್ಥಗಳನ್ನು ನಿಷೇಧ ಮಾಡುವುದಿಲ್ಲ. ಒಂದು ದೇಶದಲ್ಲಿ ನಿಷೇಧ ಮಾಡಿದರೆ ಅದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಅರ್ಥವು ಸತ್ಯವಾದರೂ ಸಹ ಎಲ್ಲದೇಶದಲ್ಲಿಯೂ ಇರುವುದಿಲ್ಲ. ಒಂದು ದೇಶದಲ್ಲಿ ಇರುತ್ತದೆ, ಇನ್ನೊಂದು ದೇಶದಲ್ಲಿ ಇರುವುದಿಲ್ಲ.

**ಭಾವವಿಲಾಸಿನೀ –** ಯುಕ್ತ್ಯಂತರಂ ಚಾಹ – **ಸೋಽಪೀತಿ॥** ಸೋಽಪಿ ವರ್ತಮಾನನಿಷೇಧೋಽಪಿ । ವಾಚ್ಯಾರ್ಥೇ ಬ್ರಹ್ಮಣಿ । ಅದ್ವಿತೀಯಂ ಬ್ರಹ್ಮೇತ್ಯುಕ್ತೇ ಬ್ರಹ್ಮಣ್ಯೇವ ದ್ವಿತೀಯನಿಷೇಧಂ ಕುರ್ಯಾತ್ ನ ತು ಸರ್ವತ್ರ । ನ ಹ್ಯಧನೋಽಯಂ ಬ್ರಾಹ್ಮಣ ಇತ್ಯುಕ್ತೇ ರಾಜ್ಞಃ ಕೋಶಸ್ಥಧನಸ್ಯಾಪ್ಯಭಾವಸ್ಸಿದ್ಧ್ಯತೀತಿ ಭಾವಃ । ತತಃ ಕಿಮಿತ್ಯತ ಆಹ–**ಸ್ವಸ್ವೋಪಾದಾನಗಾನಿತಿ ॥** ಏಕದೇಶನಿಷೇಧಃ ಏಕಸ್ಮಿನ್ ದೇಶೇ ನಿಷೇಧಃ। ಅರ್ಥಃ ಘಟಾದಿಃ, ಅತಃ ಸಾರ್ವದೈಶಿಕಸಾರ್ವಕಾಲಿಕನಿಷೇಧ ಏವ ಮಿಥ್ಯಾತ್ವೋಪಯೋಗೀ । ಸ ಚಾದ್ವಿತೀಯಶ್ರುತೌ ಲಟಾಕಾಲವಿಶೇಷೋಕ್ತೇಃ ಯಸ್ಯೇತಿ ದೇಶವಿಶೇಷೋಕ್ತೇಶ್ಚಕಥಂ ಸಿದ್ಧ್ಯೇದಿತಿ ಭಾವಃ।

**ವಿವರಣೆ-** ವರ್ತಮಾನ ಕಾಲೀನ ನಿಷೇಧವು ಬ್ರಹ್ಮನಲ್ಲಿ ಮಾತ್ರ ಜಗತ್ತಿನ ನಿಷೇಧವನ್ನು ಸಂಪಾದನೆ ಮಾಡಿಕೊಡಬಹುದೇ ಹೊರತು ಅನ್ಯತ್ರ ಸ್ವಸ್ವೋಪಾದಾನಕಾರಣಗಳಲ್ಲಿ ಇರುವ ಜಗತ್ತನ್ನು ವರ್ತಮಾನ ಕಾಲದಲ್ಲಿಯೂ ನಿಷೇಧ ಮಾಡುವುದಿಲ್ಲ. ಈ ಬ್ರಾಹ್ಮಣನು ಅಧನ

ಎಂದು ಹೇಳಿದರೆ, ಅನ್ಯತ್ರ ರಾಜನ ಕೋಶದಲ್ಲಿರುವ ಧನಕ್ಕೂ ಅಭಾವವು ಸಿದ್ಧವಾಗುವುದಿಲ್ಲ. ಬಾಧವು ಕಾಲತ್ರಯದಲ್ಲಿ ಸರ್ವದೇಶದಲ್ಲಿ ನಿಷೇಧರೂಪವಾದುದು. ಒಂದು ದೇಶದಲ್ಲಿ ಅಥವಾ ಒಂದು ಕಾಲದಲ್ಲಿ ನಿಷೇಧ ಮಾಡಿದರೆ ಅದರಿಂದ ಬಾಧವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಏಕಮೇವಾದ್ವಿತೀಯಮ್ ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವ ಕ್ರಮದಿಂದಲೇ 'ನೇಹ ನಾನಾಽಸ್ತಿ ಕಿಂಚನ' ಎಂಬ ಶ್ರುತಿಗೂ ವ್ಯಾಖ್ಯಾನ ಮಾಡಬೇಕೆಂದು ಈ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

ನೇಹ ನಾನೇತಿ ವಾಕ್ಯಂ ಚ ನಾನಾತ್ವಂ ಬ್ರಹ್ಮಣಿ ಕ್ಷಿಪೇತ್ ।
ಜಗತ್ತ್ರಿಕಾಲಸತ್ತಾಂ ತನ್ನ ಕ್ಷಿಪೇತ್ ಸ್ವಸ್ವಭೂಮಿಷು ॥ ೭೩೩ ॥

**ಅರ್ಥ**- ನೇಹ ನಾನೇತಿ ವಾಕ್ಯಂ ಚ= ನೇಹನಾನಾಸ್ತಿ ಕಿಂಚನ ಎಂಬ ವಾಕ್ಯವಾದರೂ, ಬ್ರಹ್ಮಣಿ= ಬ್ರಹ್ಮನಲ್ಲಿ, ನಾನಾತ್ವಂ= ಭೇದವನ್ನು, ಕ್ಷಿಪೇತ್= ನಿರಾಕರಿಸುತ್ತದೆ, ತತ್= ಆ ವಾಕ್ಯವು, ಸ್ವಸ್ವಭೂಮಿಷು= ತನ್ನ ತನ್ನ ಉಪಾದಾನ ಕಾರಣಗಳಲ್ಲಿ, ಜಗತ್= ಜಗತ್ತನ್ನು, ನಕ್ಷಿಪೇತ್= ನಿಷೇಧಿಸುವುದಿಲ್ಲ.

**ಅನುವಾದ**- 'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯವು ಬ್ರಹ್ಮನಲ್ಲಿ ನಾನಾತ್ವವನ್ನು (ಭೇದವನ್ನು) ನಿಷೇಧಿಸುತ್ತದೆ. ತನ್ನ ತನ್ನ ಉಪಾದಾನಕಾರಣಗಳಲ್ಲಿರುವ ಘಟಾದಿ ಜಗತ್ತನ್ನು ನಿಷೇಧಿಸುವುದಿಲ್ಲ.

**ಭಾವವಿಲಾಸಿನೀ** – ನೇಹ ನಾನೇತಿ ಶ್ರುತಾವಪ್ಯಯಮೇವ ನ್ಯಾಯ ಇತ್ಯಾಹ – **ನೇಹೇತಿ** ॥ ಭಾವಪ್ರಾಧಾನ್ಯಮಪೇಕ್ಷ್ಯ ನಾನಾತ್ವಮಿತ್ಯುಕ್ತಮ್ । ಲಟಾ ವರ್ತಮಾನಮೇವ ಕ್ಷಿಪೇತ್ । ಸರ್ವದಾ ಬ್ರಹ್ಮಣಿ ನಾನಾತ್ವಾಭಾವಸ್ತು ಏಕಮೇವ । ಏಕಧೈವಾನುದ್ರಷ್ಟವ್ಯ ಇತಿ ಸಾವಧಾರಣವಾಕ್ಯಾದವಗಂತವ್ಯಃ। ತಚ್ಚ ನಾನಾತ್ವಮ್ । ಸ್ವಸ್ವಭೂಮಿಷು ಪಂಚಭೇದಧರ್ಮಿಷು ಜೀವೇಶ್ವರಜಡೇಷು । ಇಹೇತಿ ಧರ್ಮಿವಿಶೇಷೋಪಾದಾನಾತ್ । ಜಗತ್ ತ್ರಿಕಾಲಸತ್ತಾಂ ತು ನ ಕ್ಷಿಪೇದಿತ್ಯುಪಲಕ್ಷಣಮ್ । ನಿಷೇಧ್ಯತಯಾ ಜಗತೋಽತ್ರಾಶ್ರವಣಾನ್ನ ಸ್ಪೃಶೇದಿತ್ಯಪಿ ದ್ರಷ್ಟವ್ಯಮ್ । ಭವಿತೃಪ್ರಾಧಾನ್ಯಮಾದಾಯ ಜಗನ್ನಿಷೇಧಪರತ್ವೇಽಪಿ ಬ್ರಹ್ಮಣ್ಯೇವ ಕ್ಷಿಪೇತ್ । ಸ್ವಸ್ವಭೂಮಿಷು ಕಪಾಲಭೂತಲಾದಿಷು ನ ಕ್ಷಿಪೇತ್ । ಲಟ್ ಪ್ರಯೋಗಬಲಾದ್ವರ್ತಮಾನಕಾಲ ಏವ ಕ್ಷಿಪೇನ್ನ ಸರ್ವದಾ । ಅತೋ ಜಗತೋಽಪಿ ಸಾರ್ವಕಾಲಿಕಸಾರ್ವದೈಶಿಕನಿಷೇಧೋಽನಯಾಪಿ ಶ್ರುತ್ಯಾ ನ ಸಿದ್ಧ್ಯೇತ್ । ಕಿಂಚಾನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮಧ್ಯಸ್ಯೇತಿ ಭವದೀಯಭಾಷ್ಯಪ್ರಕ್ರಿಯಯಾ ಇದಂ ರಜತಮಿತ್ಯಾದಾವಿವಾಯಂಘಟ ಇತ್ಯಾದಾವಪಿ ಬ್ರಹ್ಮಜಗತ್ತಾದಾತ್ಮ್ಯಾರೋಪಸ್ತ್ವಯಾಽಂಗೀಕೃತಃ । ಏವಂ ಚ ಭ್ರಮನಿವರ್ತಕೋಬಾಧೋಽಪಿ ನೇದಂ ರಜತಮಿತಿವದ್ ಬ್ರಹ್ಮಜಗನ್ನೇತಿ ಜಗತ್ತಾದಾತ್ಮ್ಯನಿಷೇಧರೂಪ ಏವ ವಕ್ತವ್ಯಃ । ತಾದಾತ್ಮ್ಯನಿಷೇಧರೂಪಬಾಧೇ ಚ ತಾದಾತ್ಮ್ಯಸತ್ತ್ವಮಾತ್ರ ನಿಷೇಧೇ ತ್ರೈಕಾಲಿಕತಾದಾತ್ಮ್ಯಸತ್ತ್ವನಿಷೇಧೇ ಚ ಸಾರ್ವಕಾಲಿಕ ಭೇದಸ್ಯೈವ ಪ್ರಾಪ್ತ್ಯಾ

ಭಿನ್ನಜಗತೋಽಪ್ರತಿಷೇಧೇನ ಚ ನಾಸ್ಮಾಕಮನಿಷ್ಟಮ್ । ನ ವಿದ್ಯತೇ ದ್ವಿತೀಯಂ ಯಸ್ಯೇತಿ ನಿಷೇಧೋ ಬ್ರಹ್ಮಣಿ ಜಗನ್ನಾಸ್ತೀತಿ ನಿಷೇಧಶ್ಚ ತಾದಾತ್ಮ್ಯ ಭ್ರಮಾನಿವರ್ತಕತ್ವಾತ್ತತ್ಕೃತಾನುಪಯುಕ್ತಃ । ಪ್ರತ್ಯುತ ದ್ವಿತೀಯಂ ಬ್ರಹ್ಮಣೋ ನ ಬ್ರಹ್ಮಣಿ ಜಗನ್ನೇತಿ ನಿಷೇಧೇ ಬ್ರಹ್ಮೈವ ದ್ವಿತೀಯಮಿತಿ ತ್ವದ್ರೀತ್ಯಾ ಭ್ರಾಂತಿಪ್ರತೀತತತ್ತಾದಾತ್ಮ್ಯಸ್ಥಾಪಕ ಏವ । ನ ಹಿ ಬ್ರಹ್ಮಣೋ ನ ಬ್ರಹ್ಮಣ್ಯಪಿ ನೇತಿ ನಿಷೇಧೇ ಬ್ರಹ್ಮಣೋ ಬ್ರಹ್ಮಾತ್ಮಕತಾಯಾಃ ಕಾಚನಹಾನಿರ್ದೃಶ್ಯತೇ । ದ್ವಿತೀಯಪದನಾನಾಪದಪರ್ಯಾಲೋಚನಾಯಾಂ ತು ಸುತರಾಂ ಜಗತೋ ಬ್ರಹ್ಮಾದ್ವಿತೀಯತ್ವಪ್ರಾಪ್ತಿರಿತಿ ದ್ರಷ್ಟವ್ಯಮ್ ।

ಬ್ರಹ್ಮಜಗನ್ನೇತಿ ನಿಷೇಧರೂಪಬಾಧಸ್ತು ಭವತೋ ಮಹಾವಾಕ್ಯಶತೇನಾಪಿ ನ ದೃಶ್ಯತೇ । ಅನಯೋರ್ವಾಕ್ಯಯೋಸ್ತಾದೃಶನಿಷೇಧಪರತ್ವಸ್ಯ ತ್ವಯೈವಾನಂಗೀಕಾರಾತ್ । ಅಂಗೀಕಾರೇ ಚ ಶುಕ್ತೌ ನೇದಂ ರಜತಮಿತಿ ರಜತತಾದಾತ್ಮ್ಯನಿಷೇಧೇಽಪಿ ಶುಕ್ತಾವೇವ ಕೇನಚಿದಾನೀಯನಿಕ್ಷಿಪ್ತ ಶುಕ್ತಿಭಿನ್ನರಜತಸತ್ತ್ವವತ್ ಆಪಣಸ್ಥರಜತಸತ್ತ್ವವಚ್ಚ ಬ್ರಹ್ಮಣಿ ಜಗತ್ತಾದಾತ್ಮ್ಯನಿಷೇಧೇಽಪಿ ಬ್ರಹ್ಮಣ್ಯೇವ ಬ್ರಹ್ಮಭಿನ್ನಜಗತ್ಸತ್ತ್ವಸ್ಯ ಸ್ವಸ್ವಕಾರಣೇಷು ಜಗತ್ಸತ್ತ್ವಸ್ಯಚಾಪ್ರತಿಘಾತೇನಾರ್ಥಾಂತರತ್ವಾತ್ । ಬ್ರಹ್ಮಜಗದ್ಭೇದಸಿದ್ಧ್ಯಾಽಸ್ಮದಭೀಷ್ಟಸಿದ್ಧೇಶ್ಚ । ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿವಾಕ್ಯೇಷು ಸರ್ವೈಕ್ಯಸ್ಯೈವ ಪ್ರತಿಪಾದನೇನ ಸುತರಾಂ ತಾದಾತ್ಮ್ಯಭ್ರಮಾನುಕೂಲತಯಾ ತನ್ನಿಷೇಧರೂಪತ್ವಾಭಾವಾತ್।

ಕಥಂ ತರ್ಹಿ ಭವತಾಮಪಿ ಮತೇ ಇದಾನೀಂ ಬ್ರಹ್ಮಣಿ ಜಗತೋ ವರ್ತಮಾನತ್ವಾನ್ನಾಸ್ತೀತಿ ನಿಷೇಧ ಇತಿ ಚೇತ್ಸತ್ಯಮ್ । ಸ್ವಸ್ವೋಪಾದನೇಷ್ವಿತ್ಯನುಕತ್ವಾ ಸ್ವಸ್ವಭೂಮಿಷು ನ ಕ್ಷಿಪೇದಿತಿ ವದತಾ ಯಥಾವತ್ಸ್ಥಿತಜಗತೋ ಬ್ರಹ್ಮಾಪಿ ಭೂಮಿರೇವೇತಿ ತತ್ತತ್ರ ನ ನಿಷೇಧತಿ ಕಿಂತು ವಸ್ತುಸ್ಥಿತ್ಯಾ ನಾನಾಮತೋಕ್ತರೀತ್ಯಾ ವಿರುದ್ಧಾಕಾರಸಂಪನ್ನಸ್ಯ ಜಗತೋ ಬ್ರಹ್ಮೈವಾಭೂಮಿರಿತಿ ತತ್ತತ್ರ ನಿಷೇಧತೀತ್ಯಸ್ಯಾರ್ಥಸ್ಯ ಗ್ರಂಥಕೃತೈವ ಸೂಚಿತತ್ವಾನ್ನ ಕಾಪ್ಯನುಪಪತ್ತಿಃ । ತಥಾ ಹಿ । ಅತೀತಾನಾಗತ-ವರ್ತಮಾನತ್ವೇನ ನಾನಾಭೂತಂ ಜಗತ್ ಇಹ ಬ್ರಹ್ಮಣಿ ಕಿಂಚನ ಕಿಂಚಿದತೀತಮನಾಗತಂ ಚ ನಾಸ್ತಿ । ಅತೀತನಾಗತಪದೋಕ್ತಪ್ರಧ್ವಂಸಪ್ರಾಗಭಾವಪ್ರತಿಯೋಗಿತ್ವಾಖ್ಯಧರ್ಮಿಸತ್ತಾಽಸಹಿಷ್ಣುಧರ್ಮೇಣ ನಾನಾಭೂತಂ ವರ್ತಮಾನಜಗತೋ ವಿಲಕ್ಷಣಮ್ । ಅತ ಏವ ನಾಸ್ತೀತಿ ನಾಸ್ತಿತ್ವೇ ಹೇತುಸೂಚನಾಯಾಪಿ ನಾನಾಭೂತಮಿತಿ ವಿಶೇಷಣಮುಪಾತ್ತಮ್ । ಅನೇನ ಪ್ರಲಯಾಭಾವಂ ವದತೋ ಮೀಮಾಂಸಕಸ್ಯ ಸದಾಕಾರ್ಯಸತ್ತ್ವಮಂಗೀಕೃತ್ಯ ಭವಿಷ್ಯತ್ಕಾರ್ಯ-ಮೇವಾಸಂಗೀಕುರ್ವತಸ್ಸತ್ಕಾರ್ಯವಾದಿನಶ್ಚ ಮತಂ ನಿರಸ್ತಮ್ । ನಾನಾಭೂತಪದೇನ ಜಗತ್ ತ್ರೈವಿಧ್ಯಮಂಗೀಕೃತ್ಯ ವರ್ತಮಾನಕಾಲ ಏವ ತನ್ನಿರಾಕುರ್ವತ್ಯಾ ಶ್ರುತ್ಯಾ ತದನಂಗೀಕಾರ-ಮತಸ್ಯಾಪಹಸ್ತಿತತ್ವಾತ್ । ನಾನಾಭೂತಂ ಇತೋ ವಿಲಕ್ಷಣಂ ತದ್ವೈವ ಧರ್ಮಿಸತ್ತಾನಿಯತವರ್ತ-ಮಾನತ್ವಾಖ್ಯಧರ್ಮಘಟಿತಂ ವರ್ತಮಾನಂ ಜಗತ್ ಬ್ರಹ್ಮಣ್ಯಸ್ತ್ಯೇವೇತಿ ಆರ್ಥಿಕೋಽರ್ಥಃ । ಕಿಂಚನಪದಂ ಚ ಸರ್ವೈರಪಿ ನಾಸ್ತೀತ್ಯಭಿಲಪ್ಯಮಾನಯೋರತಿತಾನಾಗತಯೋರಸ್ತೀತ್ಯಭಿಲಪ್ಯಮಾನೇ ವರ್ತಮಾನೇ ಜಗತಿ ಚ ಚಕ್ಷುಷೀ ನಿಮೀಲ್ಯನಾಸ್ತಿತ್ವಂ ವದತೋ ಮಾಯಾವಾದಿನೋ ಮುಖಮುದ್ರಣಾರ್ಥಮ್ । ಏವಂ ಚಾರ್ಥಾತ್ಸಾಮಾನ್ಯತೋ ಮಿಥ್ಯಾತ್ವಮತಮಪಿ ಅಪಹಸ್ತಿತಮಿತಿ ವೇದಿತವ್ಯಮ್ ।

ಯದ್ವಾ ವರ್ತಮಾನಮೇವಾಶುತರವಿನಾಶಿತ್ವೇನ ಚಿರವಿನಾಶಿತ್ವೇನ ನಿತ್ಯತ್ವೇನ ಚ ನಾನಾಭೂತಂ ಜಗತ್ ಇಹ ಬ್ರಹ್ಮಣಿ ಕಿಂಚನ ಆಶುತರವಿನಾಶಿ ಚಿರವಿನಾಶಿ ಚ ನಿತ್ಯಾನ್ನಾನಾಭೂತಂ ವಿಲಕ್ಷಣಮತ ಏವ ಸ್ವಪ್ರಾಗಭಾವಪ್ರಧ್ವಂಸದಶಾಯಾಂ ನಾಸ್ತೀತ್ಯರ್ಥಃ । ಏತತ್ಕಲ್ಪವಮಧ್ಯವರ್ತಿನಾಮೇವ ವಿದ್ಯಮಾನನಿಷೇಧಪ್ರದರ್ಶನಾಯ ಪ್ರಾಚೀನಪಕ್ಷಾತ್ ಪೃಥಗುಕ್ತಿಃ । ಪ್ರಾಚೀನಪಕ್ಷೋಕ್ತ-ವರ್ತಮಾನಜಗತ್ಯಪಿ ನ ಸರ್ವಸ್ಯ ಸದಾಪ್ಯಸ್ತಿತ್ವಮಿತಿ ವಿವೇಕಪ್ರದರ್ಶನಾಯ ತದನಂತರಮೇವೋಕ್ತಿಃ।

ಅಥವಾ ಮಾಯಾವಾದಿನೋಕ್ತರೀತ್ಯಾ ಸದ್ವಿಲಕ್ಷಣತ್ವಾಸದ್ವಿಲಕ್ಷಣತ್ವಾಭ್ಯಾಂ ತೇನೈವ ದೃಷ್ಟಿಸೃಷ್ಟಿಪಕ್ಷೋಕ್ತಪದಾರ್ಥಾನನಂತ್ಯೇನ ವಾ ಜೈನೋಕ್ತರೀತ್ಯಾ ಸತ್ತ್ವಾಸತ್ತ್ವಸದಸತ್ತ್ವಾದಿ-ರೂಪಸಪ್ತಭಂಗ್ಯಾ ವಾ ಪರಮಾಣು ಪುಂಜವಾದಿನೋಕ್ತರೀತ್ಯಾ ಏಕಸ್ಯೈವ ಬಹುಪರಮಾಣ್ವಾತ್ಮಕತ್ವೇನ ವಾ ನಾನಾಭೂತಂ ಜಗತ್ ಇಹ ಬ್ರಹ್ಮಣಿ ಕಿಂಚನ ಕಿಮಪಿ ನಾಸ್ತೀತ್ಯರ್ಥಃ । ಏತಾದೃಶಸ್ವಕಪೋಲಕಲ್ಪಿತ ದುರ್ಮತಾನಿ ಶ್ರೌತಮತಪ್ರತಿಷ್ಠಾಪಕಸ್ಯ ಬ್ರಹ್ಮಣೋ ಮನಸೇ ನ ರೋಚಂತ ಇತಿ ಸೂಚನಾಯ ಇಹೇತಿ ಪದಮ್।

ಯದ್ವಾ ಚೇತನಾಚೇತನಾತ್ಮತಯಾ ನಾನಾಭೂತಂ ಯಜ್ಜಗತ್ ತತ್ಕಿಂಚನ ಏಕದೇಶಭೂತಂ ಜಡಮೇವ। ಇಹ ಬ್ರಹ್ಮಣಿ । ನಾನಾಭೂತಮ್ । ಭಿನ್ನಂ ನಾಸ್ತಿ ಅಸ್ತೀತಿ ನ ಕಿಂತು ಸರ್ವಮಪಿ ಭಿನ್ನಮಸ್ತೀತಿ ಫಲಿತೋಽರ್ಥಃ । ಅತ್ರಾಪಿ ಕಿಂಚನ ಪದಂ ನಾನಾಪದಂ ಚ ಜಡಮಾತ್ರಭೇದಮಂಗೀಕೃತ್ಯ ಚೇತನಭೇದಮನಂಗೀಕುರ್ವತೋ ಮುಖಮುದ್ರಣಾರ್ಥಮ್ । ಅತಿವಿರುದ್ಧತ್ವಾನ್ಮಾಯಿಮತಸ್ಯ ಚತುರ್ಧಾ ಖಂಡನಮ್ । ಅಥವಾ ತಾರ್ಕಿಕೋಕ್ತರೀತ್ಯಾ ವೃತ್ತಿಮದವೃತ್ತಿಮತ್ಪದಾರ್ಥಭೇದೇನ ನಾನಾಭೂತಂ ಜಗತ್ ಕಿಂಚನ ವೃತ್ತಿಮತ್ಪದಾರ್ಥಮಾತ್ರ ಏವೇಹ ಬ್ರಹ್ಮಣಿ ನಾಸ್ತಿ ಅಸ್ತೀತಿ ನ ಕಿಂತೂಭಯಮಪ್ಯಸ್ತೀತ್ಯರ್ಥಃ ।

ಯದ್ವಾ ಖಂಡಾಧಿಪತೀನಾಂ ಬ್ರಹ್ಮರುದ್ರಾದೀನಾಂ ತತ್ತತ್ಖಂಡಾ ಇವ ಇಹ ನಾರಾಯಣಾಖ್ಯೇ ಬ್ರಹ್ಮಣಿ ಕಿಂಚನ ಕಿಂಚಿದೇವ ಜಗನ್ನಾಸ್ತಿ ಕಿಂತು ಸರ್ವಂ ಚಾಸ್ತೀತ್ಯರ್ಥಃ । ಯದ್ವಾಖಂಡಾಧಿಪತೀನಾಂ ಬ್ರಹ್ಮರುದ್ರಾದೀನಾಂ ತತ್ತಖಂಡಾ ಇವ ಇಹ ನಾರಾಯಣಾಖ್ಯೇ ಬ್ರಹ್ಮಣಿ ಕಿಂಚನ ಕಿಂಚಿದೇವ ಜಗನ್ನಾಸ್ತಿ ಕಿಂತು ಸರ್ವಂಚಾನ್ತೇತ್ಯರ್ಥಃ । ಅತ್ರಾಪ್ಯರ್ಥಾದ್ವಿಷ್ಣೋರಖಂಡ-ಸ್ವಾಮಿತ್ವಕಥನಾಚ್ಛ್ರೀಬ್ರಹ್ಮರುದ್ರಾದೀನಾಂ ಖಂಡಸ್ವಾಮಿತ್ವಕಥನಾಚ್ಚ ಶ್ರುತ್ಯಾ ಸ್ವಮತಸ್ಥಾಪನಂ ಶಾಕ್ತಾದಿಮತನಿರಾಕರಣಂ ಚ ಕೃತಮಿತಿ ದ್ರಷ್ಟವ್ಯಮ್ । ಏವಂ ಚ ವಿಶ್ವತತ್ಸ್ವರಣಸ್ವಪ್ರಭುರಿವ ಶ್ರುತಿರಪೀಯಂ ಸ್ವರಕ್ಷಕಸ್ಯ ಹರೇಃ ಪ್ರತಿಪಕ್ಷಭೂತಾನ್ಯಮತಾನಿ ಸ್ವಪದವಿನ್ಯಾಸಚಾತುರ್ಯೇಣೈವ ಹೈನ್ಯಾಕರಾಣಿ ಚಕಾರ ॥ ೭೩೩ ॥

**ವಿವರಣೆ-** ಏಕಮೇವಾದ್ವಿತೀಯಂ ಎಂಬ ಶ್ರುತಿಯ ವ್ಯಾಖ್ಯಾನದಲ್ಲಿ ಅನುಸರಿಸಿದ ರೀತಿಯನ್ನೇ ನೇಹ ನಾನಾಸ್ತಿ ಎಂಬ ಶ್ರುತಿಯ ವ್ಯಾಖ್ಯಾನದಲ್ಲಿ ಅನುಸರಿಸಲಾಗಿದೆ.

ಈ ಶ್ರುತಿಯಲ್ಲಿ 'ನಾನಾ' ಶಬ್ದವು ಭಾವ ಎಂದರೆ ಧರ್ಮವನ್ನು ಪ್ರಧಾನವಾಗಿ ಹೇಳುವ ಶಬ್ದವಾಗಿದ್ದು 'ನಾನಾತ್ವ' ಅಂದರೆ 'ಭೇದ'ವನ್ನು ಹೇಳುವುದೆಂಬ ಆಶಯದಿಂದ ಈ

ಶ್ಲೋಕದಲ್ಲಿ 'ನಾನಾ' ಶಬ್ದದ ಅರ್ಥ 'ನಾನಾತ್ವ' ಎಂದು ಹೇಳಲಾಗಿದೆ. ಶ್ರುತಿಯಲ್ಲಿ 'ಅಸ್ತಿ' ಎಂಬ ವರ್ತಮಾನಕಾಲವನ್ನು ಹೇಳುವ ಲಟ್ ಪ್ರಯೋಗವಿರುವುದರಿಂದ ವರ್ತಮಾನ ಕಾಲದಲ್ಲಿ, ಬ್ರಹ್ಮನಲ್ಲಿ ಭೇದವಿಲ್ಲವೆಂದು ಮಾತ್ರ ಈ ಶ್ರುತಿಯು ತಿಳಿಸುವುದು. ಸರ್ವದಾ ಬ್ರಹ್ಮನಲ್ಲಿ ಭೇದವಿರುವುದಿಲ್ಲವೆಂಬ ವಿಷಯವನ್ನು 'ಏಕಮೇವ' 'ಏಕಧೈವಾನುದ್ರಷ್ಟವ್ಯಂ' ಇತ್ಯಾದಿ ಅವಧಾರಣಾರ್ಥಕ 'ಏವ' ಶಬ್ದವಿರುವ ಶ್ರುತಿ ವಾಕ್ಯಗಳಿಂದ ತಿಳಿಯತಕ್ಕದ್ದು. ಶ್ಲೋಕದಲ್ಲಿರುವ 'ತತ್' ಪದಕ್ಕೆ ನಾನಾತ್ವವೆಂದರ್ಥ. 'ಸ್ವಸ್ವಭೂಮಿಷು' ಎಂದರೆ 'ಪಂಚವಿಧ ಭೇದಗಳಿಗೆ ಆಶ್ರಯವಾದ ಜೀವ-ಈಶ್ವರ ಜಡಗಳಲ್ಲಿ. ಶ್ರುತಿಯಲ್ಲಿ 'ಇಹ' ಎಂಬ ಪದದಿಂದ ಬ್ರಹ್ಮನೆಂಬ ಧರ್ಮಿವಿಶೇಷದಲ್ಲಿ ನಾನಾತ್ವವನ್ನು ನಿಷೇಧಿಸಿರುವುದರಿಂದ ಜೀವೇಶ್ವರ ಜಡಾತ್ಮಕವಾದ ವಿಶ್ವದಲ್ಲಿ ಪಂಚಭೇದವನ್ನು ನಿಷೇಧಿಸುವ ತಾತ್ಪರ್ಯವನ್ನು ಶ್ರುತಿಯು ಸಹಿಸುವುದಿಲ್ಲ. 'ಜಗತ್ತಿನ ತ್ರಿಕಾಲಸತ್ತೆಯನ್ನು ನಿಷೇಧಿಸುವುದಿಲ್ಲ' ಎಂದಿರುವುದು ಉಪಲಕ್ಷಣ. ನಿಷೇಧಿಸಲ್ಪಡುವುದೆಂದು ಹೇಳಲಾಗುವ ಜಗತ್ತನ್ನು ತಿಳಿಸುವ ಯಾವುದೇ ಪದ ಈ ಶ್ರುತಿಯಲ್ಲಿ ಕೇಳದಿರುವುದರಿಂದ, ಈ ಶ್ರುತಿಯು ಜಗತ್ತಿಗೆ ಸಂಬಂಧಿಸಿದಂತೆ ಏನನ್ನೂ ಹೇಳುತ್ತಿಲ್ಲವೆನ್ನುವುದನ್ನು ನಾವು ಅರಿಯಬೇಕು.

'ನಾನಾ' ಶಬ್ದವು (ನಾನಾತ್ವರೂಪ ಧರ್ಮವನ್ನು ಹೇಳದೆ) ನಾನಾವಿಧವಾದ ಜಗತ್ತೆಂಬ ಧರ್ಮಿಯನ್ನೇ ಹೇಳುವುದರಿಂದ ಈ ವಾಕ್ಯವು ಜಗತ್ತಿನ ನಿಷೇಧದಲ್ಲೇ ತಾತ್ಪರ್ಯವುಳ್ಳದ್ದೆಂದು ಹೇಳಿದರೂ ಬ್ರಹ್ಮನಲ್ಲಿ ಜಗತ್ತನ್ನು ನಿಷೇಧಿಸಬಹುದೇ ಹೊರತು 'ಸ್ವಸ್ವಭೂಮಿಷು' ಅಂದರೆ ಘಟಾದಿಜಗತ್ತಿಗೆ ಆಶ್ರಯವಾದ ಕಪಾಲ, ಭೂತಲ ಮೊದಲಾದ ಸ್ಥಳಗಳಲ್ಲಿ ಘಟಾದಿ ಜಗತ್ತಿಲ್ಲವೆಂದು ಈ ವಾಕ್ಯವು ನಿಷೇಧಿಸಲಾರದು. ಅದರಲ್ಲೂ 'ಅಸ್ತಿ' ಎಂದು ವರ್ತಮಾನ ಕಾಲವನ್ನು ಹೇಳುವ ಲಟ್ ಪ್ರಯೋಗವಿರುವುದರಿಂದ ವರ್ತಮಾನ ಕಾಲದಲ್ಲಿ ಮಾತ್ರ ಘಟಾದಿ ಜಗತ್ತು ಕಪಾಲ ಮೊದಲಾದ ತನ್ನ ಆಶ್ರಯದಲ್ಲಿ ಇಲ್ಲವೆಂದು ನಿಷೇಧಿಸಬಹುದು. ಆದ್ದರಿಂದ, ಜಗತ್ತಿಗೂ ಸಾರ್ವಕಾಲಿಕ-ಸಾರ್ವದೈಶಿಕ ನಿಷೇಧವು ಈ ಶ್ರುತಿಯಿಂದಲೂ ಸಿದ್ಧವಾಗಲಾರದು.

ಇದಲ್ಲದೆ, 'ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಂ ಅಧ್ಯಸ್ಯ' ಎಂದು ನಿಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ನಿರೂಪಿಸಿರುವ ಪ್ರಕ್ರಿಯೆಗೆ ಅನುಗುಣವಾಗಿ 'ಇದಂ ರಜತಂ' ಎಂಬ ಭ್ರಾಂತಿಯಲ್ಲಿ ಹೇಗೆ ಇದಂ ಪದಾರ್ಥವಾದ ಶುಕ್ತಿಯಲ್ಲಿ ರಜತ ತಾದಾತ್ಮ್ಯದ ಆರೋಪವಿದೆಯೋ ಅದೇ ರೀತಿ 'ಅಯಂ ಘಟಃ' ಎಂಬ ಪ್ರತೀತಿಯಲ್ಲೂ ಬ್ರಹ್ಮನಲ್ಲಿ ಜಗತ್ತಿನ ತಾದಾತ್ಮ್ಯದ ಆರೋಪವಿದೆ ಎಂದು ನೀನು ಒಪ್ಪಿದ್ದೀಯೇ. ಹೀಗಾಗಿ, ಭ್ರಮದ ನಿವೃತ್ತಿಗೆ ಕಾರಣವಾದ ಬಾಧವೂ 'ಇದಂ ರಜತಂ' ಎಂಬ ಭ್ರಾಂತಿಯ ಸ್ಥಳದಲ್ಲಿ 'ನೇದಂ ರಜತಂ' ಎಂದು ಇರುವಂತೆ, ಜಗದ್ಭ್ರಾಂತಿಯ ಸ್ಥಳದಲ್ಲೂ 'ಬ್ರಹ್ಮ ಜಗತ್ ನ' - ಬ್ರಹ್ಮನು ಜಗತ್ತಲ್ಲ ಎಂಬುದಾಗಿ ಬ್ರಹ್ಮನಲ್ಲಿ ಜಗತ್ತಿನ ತಾದಾತ್ಮ್ಯವನ್ನು ನಿಷೇಧ ಮಾಡುವಂತಹ

ಬಾಧಜ್ಞಾನವನ್ನೇ ಹೇಳಬೇಕು. ಜಗತ್ತಿನ ತಾದಾತ್ಮ್ಯವನ್ನು ನಿಷೇಧಿಸುವ ಈ ಬಾಧಜ್ಞಾನವು ತಾದಾತ್ಮ್ಯದ ಅಥವಾ ತ್ರೈಕಾಲಿಕ ತಾದಾತ್ಮ್ಯದ ಸತ್ಯತ್ವವನ್ನು ಮಾತ್ರ ನಿಷೇಧಿಸಿದರೆ ಬ್ರಹ್ಮ-ಜಗತ್ತುಗಳಿಗೆ ಸಾರ್ವಕಾಲಿಕವಾದ ಭೇದವೇ ಲಭಿಸುವುದರಿಂದ ಮತ್ತು ಬ್ರಹ್ಮನಿಗಿಂತ ಭಿನ್ನವಾದ ಜಗತ್ತನ್ನು ನಿಷೇಧ ಮಾಡಿದಂತಾಗುವುದಿಲ್ಲವಾದ್ದರಿಂದ ನಮಗದು ಅನಿಷ್ಟವಲ್ಲ.

'ನ ವಿದ್ಯತೇ ದ್ವಿತೀಯಂ ಯಸ್ಯ', 'ಯಾವ ಬ್ರಹ್ಮನಿಗೆ ಎರಡನೆಯದಾದ ವಸ್ತು ಇಲ್ಲವೋ ಆ ಬ್ರಹ್ಮ ಅದ್ವಿತೀಯ' ಎಂದು 'ಅದ್ವಿತೀಯ' ಪದದಿಂದ ಮಾಡುವ ನಿಷೇಧವಾಗಲಿ, 'ಬ್ರಹ್ಮಣಿ ಜಗನ್ನಾಸ್ತಿ' - 'ಬ್ರಹ್ಮನಲ್ಲಿ ಜಗತ್ತಿಲ್ಲ' ಎಂದು 'ನೇಹ ನಾನಾಸ್ತಿ' ಶ್ರುತಿಯಿಂದ ಮಾಡುವ ನಿಷೇಧವಾಗಲಿ, ಬ್ರಹ್ಮನಲ್ಲಿ ಜಗತ್ತಿನ ತಾದಾತ್ಮ್ಯದ ಭ್ರಮದ ನಿವೃತ್ತಿಗೆ ಕಾರಣವಲ್ಲವಾದ್ದರಿಂದ ಪ್ರಕೃತ ಅನುಪಯುಕ್ತವೇ ಆಗಿದೆ. ಅಲ್ಲದೆ, 'ದ್ವಿತೀಯಂ ಬ್ರಹ್ಮಣೋ ನ' - 'ಜಗತ್ತು ಬ್ರಹ್ಮನಿಗೆ ಎರಡನೆಯದಾದದ್ದಲ್ಲ', 'ಬ್ರಹ್ಮಣಿ ಜಗತ್ ನ' - 'ಬ್ರಹ್ಮನಲ್ಲಿ ಜಗತ್ತಿಲ್ಲ' ಎಂಬ ನಿಷೇಧಗಳು ನಿನ್ನ ಪ್ರಕಾರ ಭ್ರಾಂತಿಯಲ್ಲಿ ತೋರುವ ಬ್ರಹ್ಮ-ಜಗತ್ತುಗಳ ತಾದಾತ್ಮ್ಯಕ್ಕೆ ಅವಿರೋಧಿಯಾಗಿದ್ದು ಅಂತಹ ತಾದಾತ್ಮ್ಯಕ್ಕೆ ಸ್ಥಾಪಕವೇ ಆಗಿದೆ. 'ಬ್ರಹ್ಮಣೋ ನ ದ್ವಿತೀಯಂ' - 'ಜಗತ್ತು ಬ್ರಹ್ಮನಿಗೆ ಎರಡನೆಯದಾದದ್ದಲ್ಲ', 'ಬ್ರಹ್ಮಣ್ಯಪಿ ನ' - 'ಜಗತ್ತು ಬ್ರಹ್ಮನಲ್ಲೂ ಇಲ್ಲ' ಎಂದು ನಿಷೇಧಿಸಿದರೆ ಭ್ರಾಂತಿಯಲ್ಲಿ ಬ್ರಹ್ಮನಿಗೆ ತೋರುವ ಜಗತ್ತಿನ ತಾದಾತ್ಮ್ಯಕ್ಕೆ ಯಾವ ಹಾನಿಯೂ ಇಲ್ಲವಷ್ಟೇ. 'ಏಕಮೇವಾದ್ವಿತೀಯಂ' ಎಂಬ ಶ್ರುತಿಯಲ್ಲೂ ಕೇಳಿಬರುವ 'ದ್ವಿತೀಯ' ಪದ 'ನೇಹ ನಾನಾಸ್ತಿ' ಶ್ರುತಿಯಲ್ಲಿರುವ 'ನಾನಾ' ಪದದ ಅರ್ಥವನ್ನು ಪರ್ಯಾಲೋಚನೆ ಮಾಡಿದರಂತು ಜಗತ್ತಿಗೆ ಬ್ರಹ್ಮಾದ್ವಿತೀಯತ್ವ ಎಂದರೆ ಜಗತ್ತು-ಬ್ರಹ್ಮ- ಇವುಗಳ ತಾದಾತ್ಮ್ಯವೇ ಲಭಿಸುವುದೆಂದು ತಿಳಿಯಬೇಕು.

'ಬ್ರಹ್ಮ ಜಗತ್ ನ' - 'ಬ್ರಹ್ಮ ಜಗತ್ ಅಲ್ಲ' ಎಂಬ ನಿಷೇಧರೂಪವಾದ ಬಾಧವಾದರೋ ನಿಮ್ಮ ನೂರು ಮಹಾವಾಕ್ಯಗಳಿಂದಲೂ ತಿಳಿದುಬರುವುದಿಲ್ಲ. 'ಏಕಮೇವಾದ್ವಿತೀಯಂ', 'ನೇಹ ನಾನಾಸ್ತಿ ಕಿಂಚನ' ಎಂಬ ಈ ಎರಡು ವಾಕ್ಯಗಳಿಗೆ ಅಂತಹ ನಿಷೇಧದಲ್ಲಿ ತಾತ್ಪರ್ಯವಿರುವುದನ್ನು ನೀವೇ ಒಪ್ಪಿಲ್ಲ. ಒಪ್ಪಿದರೂ ಕೂಡ, ಶುಕ್ತಿಯ ವಿಷಯದಲ್ಲಿ 'ನೇದಂ ರಜತಂ' ಎಂದು ಯಾವನೂ ಒಬ್ಬ ರಜತವನ್ನು ತಂದಿಟ್ಟಾಗ ಶುಕ್ತಿಗಿಂತ ಭಿನ್ನವಾದ ಆ ರಜತ ಸತ್ಯವಾಗಿರುವಂತೆ, ಮತ್ತು ಅಂಗಡಿಯಲ್ಲಿ ರಜತ ಸತ್ಯವಾಗಿರುವಂತೆ ಬ್ರಹ್ಮನಲ್ಲಿ ತಾದಾತ್ಮ್ಯವನ್ನು ನಿಷೇಧ ಮಾಡಿದಾಗಲೂ ಬ್ರಹ್ಮನಲ್ಲೇ ಬ್ರಹ್ಮನಿಗಿಂತ ಭಿನ್ನವಾದ ಸತ್ಯವಾದ ಜಗತ್ತಿರಲು, ಹಾಗೆಯೇ ತಮ್ಮ ತಮ್ಮ ಕಾರಣಗಳಾದ ಕಪಾಲ, ತಂತು ಮೊದಲಾದವುಗಳಲ್ಲಿ ಘಟ, ಪಟ ಮೊದಲಾದ ಜಗತ್ತು ಸತ್ಯವಾಗಿರಲು ಯಾವ ಬಾಧಕವೂ ಇಲ್ಲದ್ದರಿಂದ, (ನಿಮ್ಮ ಶ್ರುತಿವ್ಯಾಖ್ಯಾನವನ್ನು ಅಂಗೀಕರಿಸಿದರೂ ಜಗನ್ಮಿಥ್ಯಾತ್ವರೂಪವಾದ ನಿಮ್ಮ ಉದ್ದೇಶ್ಯದ ಸಿದ್ಧಿಯಾಗದಿರುವುದರಿಂದ) ಅರ್ಥಾಂತರತ್ವ ರೂಪ ದೋಷವು ಬರುವುದು. ಅಲ್ಲದೆ,

ಬ್ರಹ್ಮ ಜಗತ್ತುಗಳಿಗೆ ಭೇದವೇ ಸಿದ್ಧವಾಗುವುದರಿಂದ ನಮ್ಮ ಅಭೀಷ್ಟಸಿದ್ಧಿಯೂ ಆಗುವುದು. (ಮೇಲೆ ಉಲ್ಲೇಖಿಸಲಾದ ಎರಡು ಶ್ರುತಿವಾಕ್ಯಗಳನ್ನು ಬಿಟ್ಟು, ಅದ್ವೈತಿಗಳು ಅದ್ವೈತ ಪ್ರತಿಪಾದಕಗಳೆಂದು ಉದಾಹರಿಸುವ) 'ಸರ್ವಂ ಖಲ್ವಿದಂ ಬ್ರಹ್ಮ' ಮೊದಲಾದ ವಾಕ್ಯಗಳಲ್ಲೂ ಬ್ರಹ್ಮನಿಗೆ ಸರ್ವವಸ್ತುಗಳ ಐಕ್ಯವನ್ನೇ ಪ್ರತಿಪಾದಿಸಿರುವುದರಿಂದ (ಆ ವಾಕ್ಯಗಳೂ) ಬ್ರಹ್ಮ-ಜಗತ್ತುಗಳ ತಾದಾತ್ಮ್ಯ ಭ್ರಮವನ್ನೇ ಉಂಟುಮಾಡುವುದರಿಂದ ಬ್ರಹ್ಮ-ಜಗತ್ತಾದಾತ್ಮ್ಯ ನಿಷೇಧ ರೂಪವಾಗಿಲ್ಲ. (ಹೀಗೆ, ಅದ್ವೈತ ಪ್ರತಿಪಾದಕ ಮಹಾವಾಕ್ಯಗಳೆಂದು ನೂರು ನೂರು ಶ್ರುತಿ ವಾಕ್ಯಗಳನ್ನುದಾಹರಿಸಿದರೂ ಅವುಗಳಲ್ಲಿ ಯಾವುದೂ ಬ್ರಹ್ಮ-ಜಗತ್ತುಗಳ ತಾದಾತ್ಮ್ಯ ನಿಷೇಧ ಪರವಾಗಿಲ್ಲ).

ಹಾಗಾದರೆ, ನಿಮ್ಮ ಮತದಲ್ಲೂ (ದ್ವೈತಮತದಲ್ಲೂ). ಈಗ ಬ್ರಹ್ಮನಲ್ಲಿ ಜಗತ್ತು ಇರುವುದರಿಂದ ಇಲ್ಲವೆಂದು ನಿಷೇಧ ಮಾಡಲು ಹೇಗೆ ಸಾಧ್ಯ ಎಂದರೆ ನಿಜ. 'ಸ್ವಸ್ವೋಪಾದಾನೇಷು' - 'ತನ್ನ ತನ್ನ ಉಪಾದಾನ ಕಾರಣಗಳಲ್ಲಿ' ಎಂದು ಹೇಳಿದೆ. 'ಸ್ವಸ್ವಭೂಮಿಷು ನ ಕ್ಷಿಪೇತ್' - ತನ್ನ ತನ್ನ ಆಶ್ರಯದಲ್ಲಿ ನಿಷೇಧಿಸುವುದಿಲ್ಲ ಎಂದು ಹೇಳುವ ಗ್ರಂಥಕಾರರು (ಶ್ರೀವಾದಿರಾಜರು), ತಾನು ವಾಸ್ತವಿಕವಾಗಿ ಹೊಂದಿರುವ ಸ್ವರೂಪದ ಜಗತ್ತಿಗೆ ಬ್ರಹ್ಮನೂ ಆಶ್ರಯನೇ; ಆದರೆ ನಾನಾ ಮತಗಳು ಹೇಳುವ ವಿರುದ್ಧ ಸ್ವರೂಪದ ಜಗತ್ತಿಗೆ ಬ್ರಹ್ಮನು ಆಶ್ರಯನಲ್ಲವಾದ್ದರಿಂದ ಅಂತಹ ಜಗತ್ತನ್ನು ಬ್ರಹ್ಮನಲ್ಲಿ ಇಲ್ಲವೆಂದು ಶ್ರುತಿಯ ಆಶ್ರಯನಲ್ಲವೆಂದು ಸೂಚಿಸುತ್ತಿರುವುದರಿಂದ ಯಾವ ಅನುಪಪತ್ತಿಯೂ ಇಲ್ಲ.

ಈ ಅಂಶವನ್ನು ಹೀಗೆ ವಿವರಿಸಬಹುದು. ಅತೀತ, ಅನಾಗತ, ವರ್ತಮಾನ ಎಂದು ಜಗತ್ತು ನಾನಾ ಪ್ರಕಾರವಾಗಿದೆ. (ಹೀಗೆ ನಾನಾವಿಧವಾದ ಜಗತ್ತಿನ ಮಧ್ಯೆ) ಕಿಂಚನ ಕೆಲವು ಪ್ರಕಾರ ಅಂದರೆ ಅತೀತ ಮತ್ತು ಅನಾಗತರೂಪವಾದ ಜಗತ್ತು ಇಹ-ಬ್ರಹ್ಮನಲ್ಲಿ, ನಾಸ್ತಿ= ಇಲ್ಲ. ಅತೀತ ಪದವು ಪ್ರಧ್ವಂಸ ಪ್ರತಿಯೋಗಿತ್ವವೆಂಬ ಧರ್ಮವನ್ನು ಹೇಳುವುದು. ಅಂತೆಯೇ, ಅನಾಗತ ಪದವು ಪ್ರಾಗಭಾವ ಪ್ರತಿಯೋಗಿತ್ವವೆಂಬ ಧರ್ಮವನ್ನು ಹೇಳುವುದು. ಈ ಧರ್ಮಗಳು ಧರ್ಮಿಸತ್ತೆಯನ್ನು ಸಹಿಸದ ಧರ್ಮಗಳು, ಎಂದರೆ ಜಗತ್ತಿಗೆ ಪ್ರಾಗಭಾವ ಪ್ರತಿಯೋಗಿತ್ವ ಅಥವಾ ಧ್ವಂಸ ಪ್ರತಿಯೋಗಿತ್ವವೆಂಬ ಧರ್ಮಗಳಿದ್ದಾಗ ಧರ್ಮಿಯಾದ ಜಗತ್ತಿರುವುದಿಲ್ಲ. ಇಂತಹ ಜಗತ್ತು ನಾನಾ ಭೂತವಾದದ್ದು ಎಂದರೆ ವರ್ತಮಾನವಾದ ಜಗತ್ತಿಗಿಂತ ವಿಲಕ್ಷಣವಾದದ್ದು. ಆದ್ದರಿಂದಲೇ ಅವು (ಬ್ರಹ್ಮನಲ್ಲಿ) ಇಲ್ಲ. ಅಂತಹ ಜಗತ್ತು ಬ್ರಹ್ಮನಲ್ಲಿ ಇಲ್ಲವೆಂಬ ವಿಷಯದಲ್ಲಿ ಹೇತುವನ್ನು ಸೂಚಿಸುವುದಕ್ಕಾಗಿಯೂ 'ನಾನಾ ಭೂತಂ' - 'ವರ್ತಮಾನ ಜಗತ್ತಿಗಿಂತ ವಿಲಕ್ಷಣವಾದದ್ದು' ಎಂಬ ವಿಶೇಷಣವನ್ನು ಕೊಡಲಾಗಿದೆ. ಹೀಗೆ ಹೇಳುವ ಮೂಲಕ 'ನೇಹ ನಾನಾಸ್ತಿ' ಎಂಬ ಶ್ರುತಿಯು, ಜಗತ್ತಿಗೆ ಪ್ರಳಯವೇ ಇಲ್ಲವೆಂದು ಹೇಳುವ ಮೀಮಾಂಸಕ ಮತವನ್ನು ಅಂತೆಯೇ, ಎಲ್ಲ ಕಾಲದಲ್ಲೂ ಜನ್ಯಪದಾರ್ಥದ ಅಸ್ತಿತ್ವವನ್ನು ಅಂಗೀಕರಿಸಿ, 'ಈಗ ಇಲ್ಲದೆ ಮುಂದೊಂದು ಕಾಲದಲ್ಲಿ

ಉತ್ಪತ್ತಿಯಾಗುವಿಕೆ' ಎಂಬ ಭವಿಷ್ಯತ್ತ್ವವನ್ನು ಹೊಂದಿರುವ ಜನ್ಯಪದಾರ್ಥವನ್ನೇ ಅಂಗೀಕರಿಸದಿರುವ ಸತ್ಕಾರ್ಯ ವಾದಿಯ (ಸಾಂಖ್ಯರ) ಮತವೂ ನಿರಾಕರಿಸಲ್ಪಟ್ಟಿದೆ. ಏಕೆಂದರೆ, 'ನಾನಾ' ಎಂಬ ಪದದಿಂದ ಜಗತ್ತಿನ (ಅತೀತ, ಅನಾಗತ ಮತ್ತು ವರ್ತಮಾನ ಎಂಬ ರೀತಿಯ) ತ್ರೈವಿಧ್ಯವನ್ನು ಅಂಗೀಕರಿಸಿ ವರ್ತಮಾನ ಕಾಲದಲ್ಲಿ ಜಗತ್ತಿಲ್ಲವೆಂದು ನಿರಾಕರಿಸುವ ಶ್ರುತಿಯು ಪ್ರಳಯವನ್ನು ಒಪ್ಪದ ಮತ್ತು ಜನ್ಯವಸ್ತುಗಳಿಗೆ ಭವಿಷ್ಯತ್ವವನ್ನು ಒಪ್ಪದ ಮತವನ್ನು ನಿರಾಕರಿಸುತ್ತಿರುವುದು ಸ್ಪಷ್ಟವಾಗಿದೆ. ನಾನಾಭೂತವಾದ ಎಂದರೆ ಅತೀತ-ಅನಾಗತ ಜಗತ್ತುಗಳಿಂದ ವಿಲಕ್ಷಣವಾದ, ಯಾವಾಗಲೂ ಧರ್ಮಿಯ ಅಸ್ತಿತ್ವವನ್ನು ಅಪೇಕ್ಷಿಸುವ 'ವರ್ತಮಾನತ್ವ' ಎಂಬ ಧರ್ಮವನ್ನು ಪಡೆದಿರುವ ವರ್ತಮಾನ ಜಗತ್ತು ಬ್ರಹ್ಮನನ್ನು ಆಶ್ರಯಿಸಿಕೊಂಡು ಇದ್ದೇ ಇರುವುದೆಂದು ಅರ್ಥಾತ್ ಸಿದ್ಧವಾಗುವ ಅರ್ಥ.

(ಶ್ರುತಿಯಲ್ಲಿ) 'ಕಿಂಚನ' ಪದವನ್ನು, ಎಲ್ಲರೂ 'ನಾಸ್ತಿ' ಎಂದೇ ವ್ಯವಹರಿಸುವ ಅತೀತ ಹಾಗೂ ಅನಾಗತ ಜಗತ್ತಿನ ವಿಷಯದಲ್ಲಿ, ಅಂತೆಯೇ ಎಲ್ಲರೂ 'ಅಸ್ತಿ' ಎಂದೇ ವ್ಯವಹರಿಸುವ ವರ್ತಮಾನ ಜಗತ್ತಿನ ವಿಷಯದಲ್ಲೂ ಕಣ್ಣುಮುಚ್ಚಿ ನಾಸ್ತಿತ್ವವನ್ನು ಹೇಳುವ ಮಾಯಾವಾದಿಯ ಬಾಯನ್ನು ಮುಚ್ಚಿಸಲು (ಪ್ರಯೋಗಿಸಲಾಗಿದೆ). ಹೀಗೆ, ಈ ಶ್ರುತಿಯಲ್ಲಿ (ಸದಸದ್ವಿಲಕ್ಷಣತ್ವ, ಜ್ಞಾನನಿವರ್ತ್ಯತ್ವ ಮೊದಲಾದ ಮಿಥ್ಯಾತ್ವ ವಿಶೇಷಗಳನ್ನು ನಿರಾಕರಿಸದಿದ್ದರೂ) ಸಾಮಾನ್ಯ ರೂಪದ ಮಿಥ್ಯಾತ್ವವನ್ನು ಅರ್ಥಾತ್ ನಿರಾಕರಿಸಲಾಗಿದೆ ಎಂದು ತಿಳಿಯಬೇಕು.

ಅಥವಾ, ಅತಿಶೀಘ್ರವಾಗಿ ವಿನಾಶ ಹೊಂದತಕ್ಕದ್ದು, ಬಹುಕಾಲದ ನಂತರ ವಿನಾಶ ಹೊಂದತಕ್ಕದ್ದು ಮತ್ತು ನಿತ್ಯವಾದದ್ದು ಹೀಗೆ ನಾನಾವಿಧವಾದ ವರ್ತಮಾನ ಜಗತ್ತು (ಇವುಗಳ ಮಧ್ಯೆ) ಕಿಂಚ- ಅತಿ ಶೀಘ್ರವಾಗಿ ನಾಶ ಹೊಂದುವ ಜಗತ್ತು ಮತ್ತು ವಿಲಂಬವಾಗಿ ನಾಶ ಹೊಂದುವ ಜಗತ್ತು ಇವೆರಡು, ನಾನಾಭೂತಂ- ನಿತ್ಯ ಜಗತ್ತಿನಿಂದ ವಿಲಕ್ಷಣವಾದದ್ದು ಆದ್ದರಿಂದಲೇ ತಮ್ಮ ಪ್ರಾಗಭಾವ ಮತ್ತು ಪ್ರಧ್ವಂಸವಿರುವ ಅವಸ್ಥೆಯಲ್ಲಿ, ಇಹ- ಬ್ರಹ್ಮನಲ್ಲಿ ನಾಸ್ತಿ- ಇರುವುದಿಲ್ಲ- ಎಂದು ಅರ್ಥ. ಹೀಗೆ ವ್ಯಾಖ್ಯಾನ ಮಾಡುವ ಪಕ್ಷದಲ್ಲಿ ಮಧ್ಯಕಾಲದಲ್ಲಿ ಮಾತ್ರ ಇರುವ ಪದಾರ್ಥಗಳ ಅಭಾವವು ಬ್ರಹ್ಮನಲ್ಲಿದೆ ಎಂದು ತೋರಿಸಿದಂತಾಗುವುದು ಎಂಬುದನ್ನು ತಿಳಿಸುವ ಸಲುವಾಗಿ ಹಿಂದಿನ ಪಕ್ಷಕ್ಕಿಂತಲೂ ಬೇರೆಯಾಗಿ ಈ ಪಕ್ಷವನ್ನು ಹೇಳಲಾಗಿದೆ. ಪ್ರಾಚೀನ ಪಕ್ಷದಲ್ಲಿ ಹೇಳಲಾದ ವರ್ತಮಾನಕಾಲದ ಜಗತ್ತಿನಲ್ಲಿಯೂ ಎಲ್ಲ ಪದಾರ್ಥಗಳಿಗೆ ಎಲ್ಲ ಕಾಲದಲ್ಲೂ ಅಸ್ತಿತ್ವವಿಲ್ಲವೆಂಬ ವೈಲಕ್ಷಣ್ಯವನ್ನು ತೋರಿಸುವ ಉದ್ದೇಶ್ಯದಿಂದ ಪ್ರಾಚೀನಪಕ್ಷವನ್ನು ಹೇಳಿದ ನಂತರ ಈ ಪಕ್ಷವನ್ನು ಹೇಳಲಾಗಿದೆ.

ಅಥವಾ, ಮಾಯಾವಾದಿಯು ಹೇಳಿರುವಂತೆ ಸದ್ವಿಲಕ್ಷಣ ಮತ್ತು ಅಸದ್ವಿಲಕ್ಷಣ- ಹೀಗೆ ನಾನಾ ಪ್ರಕಾರವಾಗಿರುವ ಅಥವಾ ಅದೇ ಮಾಯಾವಾದಿಯು ದೃಷ್ಟಿ ಸೃಷ್ಟಿ ಪಕ್ಷದಲ್ಲಿ ಹೇಳುವಂತೆ ಅನಂತ ರೀತಿಯ, ಅಥವಾ, ಜೈನನು ಹೇಳುವಂತೆ ಸತ್, ಅಸತ್, ಸದಸತ್

-ಹೀಗೆ ನಾನಾ ಪ್ರಕಾರದ, ಅಥವಾ ಪರಮಾಣುಪುಂಜವಾದಿಯಾದ ಬೌದ್ಧನು ಹೇಳುವಂತೆ ಒಂದು ವಸ್ತುವೇ ಬಹುಪರಮಾಣಾತ್ಮಕವಾಗಿದ್ದು ಅಂತಹ ವಸ್ತುಗಳನ್ನೊಳಗೊಂಡಿರುವ - ಹೀಗೆ ನಾನಾ ಪ್ರಕಾರವಾದ ಜಗತ್ತು, ಇಹ= ಬ್ರಹ್ಮನಲ್ಲಿ ಕಿಂಚನ = (ಅವರು ಹೇಳುವಂಥ) ಯಾವುದೂ, ಇಲ್ಲ ಎಂದು ಶ್ರುತಿಯ ಅರ್ಥ. ಇಂತಹ ಸ್ವಕಪೋಲಕಲ್ಪಿತವಾದ ದುರ್ಮತಗಳಾದರೂ ವೇದಮತಪ್ರತಿಷ್ಠಾಪಕನಾದ ಬ್ರಹ್ಮನ ಮನಸ್ಸಿಗೆ ಸಮ್ಮತವಲ್ಲವೆಂದು ಸೂಚಿಸಲು ಶ್ರುತಿಯಲ್ಲಿ 'ಇಹ' ಎಂಬ ಪದವಿದೆ.

ಅಥವಾ, ಚೇತನಾಚೇತನಾತ್ಮಕವಾಗಿ ನಾನಾ ಪ್ರಕಾರವಾಗಿರುವ ಯಾವ ಜಗತ್ತಿದೆಯೋ ಅದರಲ್ಲಿ, ಕಿಂಚನ- ಏಕದೇಶವಾಗಿರುವ ಜಡ ಮಾತ್ರ, ಇಹ= ಬ್ರಹ್ಮನಲ್ಲಿ, ನಾನಾಭೂತಂ= ಭಿನ್ನರಾಗಿ, ನಾಸ್ತಿ= ಇದೆ ಎಂದಲ್ಲ, ಕಿಂತು ಸರ್ವವಿಧವಾದ (ಜಗತ್ತೂ) ಭಿನ್ನವಾಗಿಯೇ ಇರುವುದೆಂದು ತಾತ್ಪರ್ಯ ಲಬ್ಧವಾದ ಅರ್ಥ. ಇಲ್ಲೂ ಕೂಡ, (ಶ್ರುತಿಯಲ್ಲಿ) 'ಕಿಂಚನ' ಪದ ಮತ್ತು 'ನಾನಾ' ಪದಗಳು ಬ್ರಹ್ಮನಲ್ಲಿ ಕೇವಲ ಜಡಭೇದವನ್ನಂಗೀಕರಿಸಿ ಚೇತನ ಭೇದವನ್ನಂಗೀಕರಿಸದಿರುವವನ ಬಾಯಿ ಮುಚ್ಚಿಸುವ ಸಲುವಾಗಿವೆ. ಅದ್ವೈತ ಮತವು ಅತಿವಿರುದ್ಧವಾದ್ದರಿಂದ ನಾಲ್ಕು ರೀತಿಯಿಂದ ಖಂಡಿಸಲಾಗಿದೆ.

ಅಥವಾ, ತಾರ್ಕಿಕನ್ನು ಹೇಳುವಂತೆ ವೃತ್ತಿಮತ್ ಮತ್ತು ಅವೃತ್ತಿಮತ್ ಎಂದು ನಾನಾ ಪ್ರಕಾರವಾದ ಜಗತ್ತಿನಲ್ಲಿ, ಕಿಂಚನ= ವೃತ್ತಿಮತ್ ಪದಾರ್ಥಮಾತ್ರ ಇಹ= ಬ್ರಹ್ಮನಲ್ಲಿ, ನಾಸ್ತಿ= ಇದೆ ಎನ್ನುವುದು ಸರಿಯಲ್ಲ, ಕಿಂತು ಎರಡು ವಿಧವಾದ ಜಗತ್ತೂ ಬ್ರಹ್ಮನಲ್ಲಿದೆ ಎಂದು ಅರ್ಥ.

ಅಥವಾ, (ಅನಾದ್ಯನಂತ ಕಾಲಗಳಲ್ಲಿ ಪ್ರವಾಹರೂಪದಲ್ಲಿರುವ ಜಗತ್ತುಗಳಲ್ಲಿ) ಖಂಡಾಧಿಪತಿಗಳಾಗಿರುವ ಬ್ರಹ್ಮರುದ್ರಾದಿಗಳಿಗೆ ಆಯಾಯಾ ಖಂಡಗಳು (ಕಾಲದ ಏಕದೇಶದಲ್ಲಿರುವ ಜಗತ್ತುಗಳು ಮಾತ್ರ) ಅಧೀನವಾಗಿರುವಂತೆ, ಇಹ- ನಾರಾಯಣಾಖ್ಯ ಬ್ರಹ್ಮನಲ್ಲಿ, ಕಿಂಚನ= ಯಾವುದೊ ಒಂದು ಜಗತ್ತು, ನಾಸ್ತಿ= ಇದೆ ಎಂದು ಹೇಳತಕ್ಕದ್ದಲ್ಲ, ಕಿಂತು ಸರ್ವ ಜಗತ್ತುಗಳೂ ಇದೆ ಎಂದರ್ಥ. ಈ ವ್ಯಾಖ್ಯಾನದಲ್ಲೂ, ಅರ್ಥಾತ್ ವಿಷ್ಣುವಿಗೆ ಅಖಂಡ ಸ್ವಾಮಿತ್ವವನ್ನು ಹೇಳಿರುವುದರಿಂದ, ಶ್ರೀ ಬ್ರಹ್ಮ- ರುದ್ರಾದಿಗಳಿಗೆ ಖಂಡಸ್ವಾಮಿತ್ವವನ್ನು ಹೇಳಿರುವುದರಿಂದಲೂ, ಶ್ರುತಿಯು ಸ್ವಮತ ಸ್ಥಾಪನವನ್ನೂ, ಶಾಕ್ತಾದಿಮತಗಳ ನಿರಾಕರಣೆಯನ್ನು ಮಾಡಿರುವುದೆಂದು ತಿಳಿಯಬೇಕು.

ಹೀಗೆ, ವಿಶ್ವತಶ್ಚರಣನಾದ (ಜಗತ್ತಿನ ಎಲ್ಲೆಡೆಯಲ್ಲಿ ತನ್ನ ಪದವಿನ್ಯಾಸ ಮಾಡಬಲ್ಲ) ತನ್ನ ಪ್ರಭುವಿನಂತೆ ಈ ಶ್ರುತಿಯೂ ಕೂಡ ತನ್ನ ರಕ್ಷಕನಾದ ಶ್ರೀಹರಿಗೆ ಪ್ರತಿಪಕ್ಷವಾಗಿರುವ ಇತರ ಮತಗಳನ್ನು ತನ್ನ ಪದಗಳ ವಿನ್ಯಾಸ ಚಾತುರ್ಯದಿಂದಲೇ ಹೀನತೆಗೆ ಆಕರಗಳನ್ನಾಗಿ ಮಾಡಿದೆ.

ಹೀಗೆ 'ನೇಹನಾನಾಸ್ತಿ ಕಿಂಚನ' ಎಂಬ ಶ್ರುತಿಗೆ ಅದ್ವೈತ ಮತದ ವ್ಯಾಖ್ಯಾನವನ್ನು ನಿರಾಕರಿಸಿ ದ್ವೈತ ಸಿದ್ಧಾಂತಕ್ಕೆ ಸಮ್ಮತ ವಿವಿಧ ವ್ಯಾಖ್ಯಾನಗಳನ್ನು ಸೂಚಿಸಿದ ಶ್ರೀ ವಾದಿರಾಜಸ್ವಾಮಿಗಳು ಗೀತಾವಾಕ್ಯಗಳನ್ನವಲಂಬಿಸಿ ಮತ್ತೊಂದು ರೀತಿಯಾಗಿ ಆ ಶ್ರುತಿಯನ್ನು ಮುಂದಿನ ಶ್ಲೋಕದಿಂದ ವ್ಯಾಖ್ಯಾನಿಸುತ್ತಿದ್ದಾರೆ-

ಅಸಂಗಿನಿ ಚ ಸದ್ವಿಶ್ವಂ ನಾಸ್ತೀತ್ಯಪಿ ನಿಗದ್ಯತೇ ॥ ೭೩೪ ॥

**ಅರ್ಥ-** ಅಸಂಗಿನಿ= ಅಸಂಗವಾದ ಬ್ರಹ್ಮನಲ್ಲಿ, ಸದ್‌ವಿಶ್ವಂ= ವಿದ್ಯಮಾನವಾದ ಜಗತ್ತೇ, ನಾಸ್ತೀತ್ಯಪಿ= ಇಲ್ಲವೆಂದು, ನಿಗದ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ಅಸಂಗನಾದ ಬ್ರಹ್ಮನಲ್ಲಿ ವಿದ್ಯಮಾನವಾದ ಜಗತ್ತೇ ಬ್ರಹ್ಮನು ಅಸಂಗನಾದ ಕಾರಣದಿಂದ ಇಲ್ಲವೆಂದು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಗೀತಾವಾಕ್ಯಸಮಾಖ್ಯಯಾ ಚ ಶ್ರುತೇರರ್ಥಮಾಹ – **ಅಸಂಗಿನೀತಿ** ॥ ಸತ್ ವಿದ್ಯಮಾನಮ್ ॥ ೭೩೪॥

**ವಿವರಣೆ-** ಸರ್ವಕಾಲದಲ್ಲೂ ಪರಮಾತ್ಮನನ್ನು ಆಶ್ರಯಿಸಿಕೊಂಡೇ ಸಮಸ್ತ ಜಗತ್ತೂ ಇರುವುದು. ಆದರೂ ಭಗವದ್ಗೀತೆಯಲ್ಲಿ ಹೇಳಿರುವಂತೆ ಚೇತನಾಚೇತನಾತ್ಮಕವಾದ ಜಗತ್ತು ಪರಮಾತ್ಮನಲ್ಲಿಲ್ಲವೆಂದೂ ಹೇಳಬಹುದು. ಬೇರೆ ವಸ್ತುಗಳು ಮತ್ತೊಂದು ವಸ್ತುವಿನ ಸಂಬಂಧ ಪಡೆದಾಗ ಪರಸ್ಪರವಾಗಿ ಆ ವಸ್ತುಗಳಲ್ಲಿ ಒಂದರಲ್ಲಿ ಮತ್ತೊಂದರ ಧರ್ಮಗಳು ಸಂಕ್ರಮಣವನ್ನು ಪಡೆಯುವಂತೆ ಪರಮಾತ್ಮನಲ್ಲಿ ಮತ್ತೊಂದು ವಸ್ತುವಿನ ಸಂಬಂಧವು ಯಾವುದೇ ಧರ್ಮದ ಸಂಕ್ರಮಣಕ್ಕೆ ಕಾರಣವಾಗುವುದಿಲ್ಲವಾದ್ದರಿಂದ ಅಸಂಗನೆನಿಸುವುದೇ ಹಾಗೆ ಹೇಳಲು ಕಾರಣವಾಗಿದೆ. ಭಗವದ್ಗೀತೆಯಲ್ಲಿ ಈ ಆಶ್ರಯವನ್ನೇ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯೂ ವ್ಯಕ್ತಪಡಿಸುತ್ತಿದೆಯೇ ಹೊರತು ಜಗನ್ಮಿಥ್ಯಾತ್ವವನ್ನು ಈ ಶ್ರುತಿ ಹೇಳುವುದಿಲ್ಲವೆಂದು ಈ ಶ್ಲೋಕದ ಭಾವ.

ಯುಕ್ತಿಮಲ್ಲಿಕೆಯ ಮೇಲಿನ ಶ್ಲೋಕದಲ್ಲಿ 'ಸತ್' ಶಬ್ದವು 'ಇರತಕ್ಕ' ಎಂಬ ಅರ್ಥವನ್ನು ಹೊಂದಿದ್ದು ಗೀತಾವಾಕ್ಯದ ಅಭಿಪ್ರಾಯವನ್ನೇ 'ನೇಹ ನಾನಾಸ್ತಿ' ಎಂಬ ಶ್ರುತಿಯೂ ವ್ಯಕ್ತಪಡಿಸುತ್ತಿದೆ ಎಂದು ಶ್ರೀ ವಾದಿರಾಜ ಸ್ವಾಮಿಗಳ ಅಭಿಪ್ರಾಯವೆಂದು ಸ್ಪಷ್ಟಪಡಿಸಲಾಗಿದೆ.

'ನೇಹ ನಾನಾಸ್ತಿ' ಶ್ರುತಿಗೆ ಸಮಾಖ್ಯರೂಪವಾದ ಗೀತಾ ಶ್ಲೋಕಗಳನ್ನು ಈ ಮುಂದಿನ ಶ್ಲೋಕಗಳಲ್ಲಿ ಉದಾಹರಿಸಲಾಗಿದೆ-

ಮಯಾ ತತಮಿದಂ ವಿಶ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೭೩೫ ॥

-ಹೀಗೆ ನಾನಾ ಪ್ರಕಾರದ, ಅಥವಾ ಪರಮಾಣುಪುಂಜವಾದಿಯಾದ ಬೌದ್ಧನು ಹೇಳುವಂತೆ ಒಂದು ವಸ್ತುವೇ ಬಹುಪರಮಾಣಾತ್ಮಕವಾಗಿದ್ದು ಅಂತಹ ವಸ್ತುಗಳನ್ನೊಳಗೊಂಡಿರುವ - ಹೀಗೆ ನಾನಾ ಪ್ರಕಾರವಾದ ಜಗತ್ತು, ಇಹ= ಬ್ರಹ್ಮನಲ್ಲಿ ಕಿಂಚನ = (ಅವರು ಹೇಳುವಂಥ) ಯಾವುದೂ, ಇಲ್ಲ ಎಂದು ಶ್ರುತಿಯ ಅರ್ಥ. ಇಂತಹ ಸ್ವಕಪೋಲಕಲ್ಪಿತವಾದ ದುರ್ಮತಗಳಾದರೂ ವೇದಮತಪ್ರತಿಷ್ಠಾಪಕನಾದ ಬ್ರಹ್ಮನ ಮನಸ್ಸಿಗೆ ಸಮ್ಮತವಲ್ಲವೆಂದು ಸೂಚಿಸಲು ಶ್ರುತಿಯಲ್ಲಿ 'ಇಹ' ಎಂಬ ಪದವಿದೆ.

ಅಥವಾ, ಚೇತನಾಚೇತನಾತ್ಮಕವಾಗಿ ನಾನಾ ಪ್ರಕಾರವಾಗಿರುವ ಯಾವ ಜಗತ್ತಿದೆಯೋ ಅದರಲ್ಲಿ, ಕಿಂಚನ- ಏಕದೇಶವಾಗಿರುವ ಜಡ ಮಾತ್ರ, ಇಹ= ಬ್ರಹ್ಮನಲ್ಲಿ, ನಾನಾಭೂತಂ= ಭಿನ್ನರಾಗಿ, ನಾಸ್ತಿ= ಇದೆ ಎಂದಲ್ಲ, ಕಿಂತು ಸರ್ವವಿಧವಾದ (ಜಗತ್ತೂ) ಭಿನ್ನವಾಗಿಯೇ ಇರುವುದೆಂದು ತಾತ್ಪರ್ಯ ಲಬ್ಧವಾದ ಅರ್ಥ. ಇಲ್ಲೂ ಕೂಡ, (ಶ್ರುತಿಯಲ್ಲಿ) 'ಕಿಂಚನ' ಪದ ಮತ್ತು 'ನಾನಾ' ಪದಗಳು ಬ್ರಹ್ಮನಲ್ಲಿ ಕೇವಲ ಜಡಭೇದವನ್ನಂಗೀಕರಿಸಿ ಚೇತನ ಭೇದವನ್ನಂಗೀಕರಿಸದಿರುವವನ ಬಾಯಿ ಮುಚ್ಚಿಸುವ ಸಲುವಾಗಿವೆ. ಅದ್ವೈತ ಮತವು ಅತಿವಿರುದ್ಧವಾದ್ದರಿಂದ ನಾಲ್ಕು ರೀತಿಯಿಂದ ಖಂಡಿಸಲಾಗಿದೆ.

ಅಥವಾ, ತಾರ್ಕಿಕನ್ನು ಹೇಳುವಂತೆ ವೃತ್ತಿಮತ್ ಮತ್ತು ಅವೃತ್ತಿಮತ್ ಎಂದು ನಾನಾ ಪ್ರಕಾರವಾದ ಜಗತ್ತಿನಲ್ಲಿ, ಕಿಂಚನ= ವೃತ್ತಿಮತ್ ಪದಾರ್ಥಮಾತ್ರ ಇಹ= ಬ್ರಹ್ಮನಲ್ಲಿ, ನಾಸ್ತಿ= ಇದೆ ಎನ್ನುವುದು ಸರಿಯಲ್ಲ, ಕಿಂತು ಎರಡು ವಿಧವಾದ ಜಗತ್ತೂ ಬ್ರಹ್ಮನಲ್ಲಿದೆ ಎಂದು ಅರ್ಥ.

ಅಥವಾ, (ಅನಾದ್ಯನಂತ ಕಾಲಗಳಲ್ಲಿ ಪ್ರವಾಹರೂಪದಲ್ಲಿರುವ ಜಗತ್ತುಗಳಲ್ಲಿ) ಖಂಡಾಧಿಪತಿಗಳಾಗಿರುವ ಬ್ರಹ್ಮರುದ್ರಾದಿಗಳಿಗೆ ಆಯಾಯಾ ಖಂಡಗಳು (ಕಾಲದ ಏಕದೇಶದಲ್ಲಿರುವ ಜಗತ್ತುಗಳು ಮಾತ್ರ) ಅಧೀನವಾಗಿರುವಂತೆ, ಇಹ- ನಾರಾಯಣಾಖ್ಯ ಬ್ರಹ್ಮನಲ್ಲಿ, ಕಿಂಚನ= ಯಾವುದೊ ಒಂದು ಜಗತ್ತು, ನಾಸ್ತಿ= ಇದೆ ಎಂದು ಹೇಳತಕ್ಕದ್ದಲ್ಲ, ಕಿಂತು ಸರ್ವ ಜಗತ್ತೂಗಳೂ ಇದೆ ಎಂದರ್ಥ. ಈ ವ್ಯಾಖ್ಯಾನದಲ್ಲೂ, ಅರ್ಥಾತ್ ವಿಷ್ಣುವಿಗೆ ಅಖಂಡ ಸ್ವಾಮಿತ್ವವನ್ನು ಹೇಳಿರುವುದರಿಂದ, ಶ್ರೀ ಬ್ರಹ್ಮ- ರುದ್ರಾದಿಗಳಿಗೆ ಖಂಡಸ್ವಾಮಿತ್ವವನ್ನು ಹೇಳಿರುವುದರಿಂದಲೂ, ಶ್ರುತಿಯು ಸ್ವಮತ ಸ್ಥಾಪನವನ್ನೂ, ಶಾಕ್ತಾದಿಮತಗಳ ನಿರಾಕರಣೆಯನ್ನು ಮಾಡಿರುವುದೆಂದು ತಿಳಿಯಬೇಕು.

ಹೀಗೆ, ವಿಶ್ವತಶ್ಚರಣನಾದ (ಜಗತ್ತಿನ ಎಲ್ಲೆಡೆಯಲ್ಲಿ ತನ್ನ ಪದವಿನ್ಯಾಸ ಮಾಡಬಲ್ಲ) ತನ್ನ ಪ್ರಭುವಿನಂತೆ ಈ ಶ್ರುತಿಯೂ ಕೂಡ ತನ್ನ ರಕ್ಷಕನಾದ ಶ್ರೀಹರಿಗೆ ಪ್ರತಿಪಕ್ಷವಾಗಿರುವ ಇತರ ಮತಗಳನ್ನು ತನ್ನ ಪದಗಳ ವಿನ್ಯಾಸ ಚಾತುರ್ಯದಿಂದಲೇ ಹೀನತೆಗೆ ಆಕರಗಳನ್ನಾಗಿ ಮಾಡಿದೆ.

ಹೀಗೆ 'ನೇಹನಾನಾಸ್ತಿ ಕಿಂಚನ' ಎಂಬ ಶ್ರುತಿಗೆ ಅದ್ವೈತ ಮತದ ವ್ಯಾಖ್ಯಾನವನ್ನು ನಿರಾಕರಿಸಿ ದ್ವೈತ ಸಿದ್ಧಾಂತಕ್ಕೆ ಸಮ್ಮತ ವಿವಿಧ ವ್ಯಾಖ್ಯಾನಗಳನ್ನು ಸೂಚಿಸಿದ ಶ್ರೀ ವಾದಿರಾಜಸ್ವಾಮಿಗಳು ಗೀತಾವಾಕ್ಯಗಳನ್ನವಲಂಬಿಸಿ ಮತ್ತೊಂದು ರೀತಿಯಾಗಿ ಆ ಶ್ರುತಿಯನ್ನು ಮುಂದಿನ ಶ್ಲೋಕದಿಂದ ವ್ಯಾಖ್ಯಾನಿಸುತ್ತಿದ್ದಾರೆ-

**ಅಸಂಗಿನಿ ಚ ಸದ್ವಿಶ್ವಂ ನಾಸ್ತೀತ್ಯಪಿ ನಿಗದ್ಯತೇ ॥ ೭೩೪ ॥**

**ಅರ್ಥ-** ಅಸಂಗಿನಿ= ಅಸಂಗವಾದ ಬ್ರಹ್ಮನಲ್ಲಿ, ಸದ್‌ವಿಶ್ವಂ= ವಿದ್ಯಮಾನವಾದ ಜಗತ್ತೇ, ನಾಸ್ತೀತ್ಯಪಿ= ಇಲ್ಲವೆಂದು, ನಿಗದ್ಯತೇ= ಹೇಳಲ್ಪಡುತ್ತದೆ.

**ಅನುವಾದ- ಅಸಂಗನಾದ ಬ್ರಹ್ಮನಲ್ಲಿ ವಿದ್ಯಮಾನವಾದ ಜಗತ್ತೇ ಬ್ರಹ್ಮನು ಅಸಂಗನಾದ ಕಾರಣದಿಂದ ಇಲ್ಲವೆಂದು ಹೇಳಲ್ಪಡುತ್ತದೆ.**

**ಭಾವವಿಲಾಸಿನೀ– ಗೀತಾವಾಕ್ಯಸಮಾಖ್ಯಯಾ ಚ ಶ್ರುತೇರರ್ಥಮಾಹ – ಅಸಂಗಿನೀತಿ ॥ ಸತ್ ವಿದ್ಯಮಾನಮ್ ॥ ೭೩೪॥**

**ವಿವರಣೆ-** ಸರ್ವಕಾಲದಲ್ಲೂ ಪರಮಾತ್ಮನನ್ನು ಆಶ್ರಯಿಸಿಕೊಂಡೇ ಸಮಸ್ತ ಜಗತ್ತೂ ಇರುವುದು. ಆದರೂ ಭಗವದ್ಗೀತೆಯಲ್ಲಿ ಹೇಳಿರುವಂತೆ ಚೇತನಾಚೇತನಾತ್ಮಕವಾದ ಜಗತ್ತು ಪರಮಾತ್ಮನಲ್ಲಿಲ್ಲವೆಂದೂ ಹೇಳಬಹುದು. ಬೇರೆ ವಸ್ತುಗಳು ಮತ್ತೊಂದು ವಸ್ತುವಿನ ಸಂಬಂಧ ಪಡೆದಾಗ ಪರಸ್ಪರವಾಗಿ ಆ ವಸ್ತುಗಳಲ್ಲಿ ಒಂದರಲ್ಲಿ ಮತ್ತೊಂದರ ಧರ್ಮಗಳು ಸಂಕ್ರಮಣವನ್ನು ಪಡೆಯುವಂತೆ ಪರಮಾತ್ಮನಲ್ಲಿ ಮತ್ತೊಂದು ವಸ್ತುವಿನ ಸಂಬಂಧವು ಯಾವುದೇ ಧರ್ಮದ ಸಂಕ್ರಮಣಕ್ಕೆ ಕಾರಣವಾಗುವುದಿಲ್ಲವಾದ್ದರಿಂದ ಅಸಂಗನೆನಿಸುವುದೇ ಹಾಗೆ ಹೇಳಲು ಕಾರಣವಾಗಿದೆ. ಭಗವದ್ಗೀತೆಯಲ್ಲಿ ಈ ಆಶ್ರಯವನ್ನೇ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯೂ ವ್ಯಕ್ತಪಡಿಸುತ್ತಿದೆಯೇ ಹೊರತು ಜಗನ್ಮಿಥ್ಯಾತ್ವವನ್ನು ಈ ಶ್ರುತಿ ಹೇಳುವುದಿಲ್ಲವೆಂದು ಈ ಶ್ಲೋಕದ ಭಾವ.

ಯುಕ್ತಿಮಲ್ಲಿಕೆಯ ಮೇಲಿನ ಶ್ಲೋಕದಲ್ಲಿ 'ಸತ್' ಶಬ್ದವು 'ಇರತಕ್ಕ' ಎಂಬ ಅರ್ಥವನ್ನು ಹೊಂದಿದ್ದು ಗೀತಾವಾಕ್ಯದ ಅಭಿಪ್ರಾಯವನ್ನೇ 'ನೇಹ ನಾನಾಸ್ತಿ' ಎಂಬ ಶ್ರುತಿಯೂ ವ್ಯಕ್ತಪಡಿಸುತ್ತಿದೆ ಎಂದು ಶ್ರೀ ವಾದಿರಾಜ ಸ್ವಾಮಿಗಳ ಅಭಿಪ್ರಾಯವೆಂದು ಸ್ಪಷ್ಟಪಡಿಸಲಾಗಿದೆ.

'ನೇಹ ನಾನಾಸ್ತಿ' ಶ್ರುತಿಗೆ ಸಮಾಖ್ಯರೂಪವಾದ ಗೀತಾ ಶ್ಲೋಕಗಳನ್ನು ಈ ಮುಂದಿನ ಶ್ಲೋಕಗಳಲ್ಲಿ ಉದಾಹರಿಸಲಾಗಿದೆ-

**ಮಯಾ ತತಮಿದಂ ವಿಶ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೭೩೫ ॥**

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ ।**
**ಇತಿ ಕೃಷ್ಣಸ್ಯ ವಚನಾನ್ನ ತನ್ಮಿಥ್ಯಾತ್ವಕಾರಣಂ ॥ ೭೩೬ ॥**

**ಯೋಗೈಶ್ವರ್ಯಬಲಾದೇತನ್ನ ತು ಮಿಥ್ಯಾತ್ವತಃ ಕಿಲ ॥ ೭೩೭ ॥**

**ಅರ್ಥ-** ಇದಂ ವಿಶ್ವಂ ಜಗತ್= ಈ ಸಮಸ್ತವಾದ ಜಗತ್ತು, ಅವ್ಯಕ್ತಮೂರ್ತಿನಾ= ಅವ್ಯಕ್ತ ರೂಪವುಳ್ಳ, ಮಯಾ= ನನ್ನಿಂದ, ತತಂ= ವ್ಯಾಪ್ತವಾಗಿದೆ, ಸರ್ವಭೂತಾನಿ= ಎಲ್ಲ ಜೀವ ಜಡರೂ, ಮತ್ಸ್ಥಾನಿ= ನನ್ನಲ್ಲಿ ಇವೆ, ಅಹಂ ಚ= ನಾನಾದರೂ, ತೇಷು= ಅವುಗಳಲ್ಲಿ, ನ ಅವಸ್ಥಿತಃ= ಇಲ್ಲ, ಚ= ಮತ್ತು, ಭೂತಾನಿ= ಆ ಎಲ್ಲ ಜೀವಜಡಗಳು, ನ ಮತ್ಸ್ಥಾನಿ= ನನ್ನಲ್ಲಿ ಇಲ್ಲ, ಮೇ= ನನ್ನ, ಯೋಗಮೈಶ್ವರಂ= ಯೋಗೈಶ್ವರ್ಯವನ್ನು, ಪಶ್ಯ= ನೋಡು, ಇತಿ= ಎಂಬ, ಕೃಷ್ಣಸ್ಯ ವಚನಾತ್= ಕೃಷ್ಣನ ಮಾತಿನಿಂದ, ತತ್= ಶ್ರುತಿಯಲ್ಲಿ ಭಗವಂತನು ಹೇಳಿದ ಜಗನ್ನಾಸ್ತಿತ್ವವು, ತನ್ಮಿಥ್ಯಾತ್ವ ಕಾರಣಂ ನ= ಜಗತ್ತಿನ ಮಿಥ್ಯಾತ್ವಕ್ಕೆ ಪ್ರಯೋಜಕವಾದುದಲ್ಲ, ಏತತ್= ಜಗತ್ತಿನ ನಾಸ್ತಿತ್ವವು, ಯೋಗೈಶ್ವರ್ಯಬಲಾದೇವ= ಯೋಗೈಶ್ವರ್ಯದ ಬಲದಿಂದಲೇ ಉಂಟಾಗುತ್ತದೆ, ತು= ಆದರೆ, ಮಿಥ್ಯಾತ್ವತಃ ನ ಕಿಲ= ಮಿಥ್ಯಾತ್ವ ಪ್ರಯುಕ್ತವಾಗಿ ಅಲ್ಲವಷ್ಟೇ ?

**ಅನುವಾದ-** ಅವ್ಯಕ್ತರೂಪವಾದ ನನ್ನಿಂದ ಈ ಸಮಸ್ತವಾದ ಜಗತ್ತು ವ್ಯಾಪ್ತಿಸಲ್ಪಟ್ಟಿದೆ. ಸರ್ವಭೂತಗಳೂ ನನ್ನಲ್ಲಿ ಇವೆ. ಆದರೆ ನಾನು ಅವುಗಳನ್ನು ಆಶ್ರಯಿಸಿಲ್ಲ ಮತ್ತು ಸರ್ವ ಭೂತಗಳೂ ನನ್ನಲ್ಲಿ ಇಲ್ಲ. ನನ್ನ ಯೋಗೈಶ್ವರ್ಯವನ್ನು ನೋಡು ಎಂಬ ಕೃಷ್ಣನ ವಚನದಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಜಗನ್ನಾಸ್ತಿತ್ವವು ಜಗನ್ಮಿಥ್ಯಾತ್ವಕ್ಕೆ ಕಾರಣವಲ್ಲ. ಯೋಗೈಶ್ವರ್ಯದ ಬಲದಿಂದಲೇ ತನ್ನನ್ನು ಆಶ್ರಯಿಸಿರುವ ಜಗತ್ತು ತನ್ನಲ್ಲಿ ಇಲ್ಲ ಎಂದು ಹೇಳಲ್ಪಡುತ್ತದೆ. ಮಿಥ್ಯಾತ್ವ ಪ್ರಯುಕ್ತವಾಗಿ ಇಲ್ಲ ಎಂದು ಹೇಳಲ್ಪಡುವುದಿಲ್ಲ.

**ಭಾವವಿಲಾಸಿನೀ –** ಗೀತಾವಾಕ್ಯಂ ಪಠತಿ ॥**ಮಯಾತತಮಿತಿ** ॥ ತತ್ ಶ್ರುತ್ಯಾ ಭಗವತ್ಯುಕ್ತಂ ನಾಸ್ತಿತ್ವಮ್॥ ೭೩೫-೭೩೭ ॥

**ವಿವರಣೆ-** ಭಗವದ್ಗೀತೆಯ ಒಂಭತ್ತೆಯ ಅಧ್ಯಾಯದಲ್ಲಿ ಅರ್ಜುನನನ್ನು ಕುರಿತು ಕೃಷ್ಣನು ಹೇಳಿರುವ ಮಾತುಗಳು ಆಶಯ ಹೀಗೆ - 'ನನ್ನ ಸ್ವರೂಪವೇ ಆದ ನನ್ನ ಶರೀರ ನನ್ನಂತೆ ಅವ್ಯಕ್ತ ಸ್ವಭಾವವನ್ನು ಪಡೆದಿದೆ. ಇಂತಹ ಶರೀರವನ್ನು ಹೊಂದಿರುವ ನಾನು ಸಮಸ್ತ ಜಗತ್ತನ್ನು ವ್ಯಾಪಿಸಿದ್ದೇನೆ. ಚೇತನಾಚೇತನಾತ್ಮಕವಾದ ಎಲ್ಲ ವಸ್ತುಗಳು ನನ್ನನ್ನು ಆಶ್ರಯಿಸಿಕೊಂಡಿವೆ. ಆದರೆ ನಾನು ಅವುಗಳ ಆಶ್ರಯಿಸಿಕೊಂಡಿಲ್ಲ. ಹೀಗೆ ಎಲ್ಲ ಪದಾರ್ಥಗಳು ನನ್ನನ್ನು ಆಶ್ರಯಿಸಿಕೊಂಡಿದ್ದರೂ ಅವುಗಳ ಯಾವುದೇ ಧರ್ಮದ ಸಂಬಂಧವೂ ಇಲ್ಲದಿರುವುದು ನನ್ನ ಸ್ವರೂಪವೇ ಆಗಿರುವ ನನ್ನ ಸಾಮರ್ಥ್ಯದ ಮಹಿಮೆಯೆಂದು ತಿಳಿ. ಇದೇ ಅಭಿಪ್ರಾಯದಿಂದ ಜಗತ್ತು ನನ್ನಲ್ಲಿಲ್ಲವೆಂದೂ ಹೇಳುವರು. ಈ ಆಶಯದಿಂದ,

ಜಗತ್ತು ವಾಸ್ತವಿಕವಾಗಿ ನನ್ನನ್ನು ಆಶ್ರಯಿಸಿಕೊಂಡಿದ್ದರೂ ನನ್ನಲ್ಲಿಲ್ಲದಿರುವುದೂ ನನ್ನ ಸ್ವರೂಪಭೂತವಾದ ಸಾಮರ್ಥ್ಯದ ಪ್ರಭಾವದಿಂದಲೇ ಹೊರತು ಜಗತ್ತು ಮಿಥ್ಯೆಯಾದದ್ದರಿಂದ ಅಲ್ಲ. ಇದು ಪ್ರಸಿದ್ಧವಾದ ವಿಷಯವೇ ಆಗಿದೆ. ಈ ಅಭಿಪ್ರಾಯದ ಕೃಷ್ಣನ ಮಾತುಗಳಿರುವುದರಿಂದ ಶ್ರುತಿಯಲ್ಲಿ ಜಗತ್ತು ಪರಮಾತ್ಮನಲ್ಲಿಲ್ಲವೆಂದು ಹೇಳಿರುವುದು ಜಗತ್ತು ಮಿಥ್ಯೆಯೆಂದು ಸಮರ್ಥಿಸಲು ಕಾರಣವಾಗುವುದಿಲ್ಲ.

ಪ್ರಸಕ್ತ ವಿಷಯದ ಉಪಸಂಹಾರವನ್ನು ಮುಂದಿನ ಶ್ಲೋಕದಲ್ಲಿ ಮಾಡಲಾಗಿದೆ-

ಅತಸ್ತದ್ಬಾಧಪರಶೋರಯೋ ಲೋಕತ್ರಯೇಪಿ ನ ।
ಸಿದ್ಧಂ ತು ಶಾಖಾಛೇದ್ಯೇವ ಮೂಲಚ್ಛೇದಃ ಕಥಂ ವದ ॥ ೭೩೮ ॥

**ಅರ್ಥ-** ಅತಃ= ಆ ಕಾರಣದಿಂದ, ತದ್ಬಾಧಪರಶೋಃ= ಜಗತ್ತಿನ ಬಾಧರೂಪವಾದ ಕೊಡಲಿಗೆ, ಅಯಃ= ಕಬ್ಬಿಣದ ರೂಪವಾದ ತ್ರೈಕಾಲಿಕ ನಿಷೇಧವು, ಲೋಕತ್ರಯೇಪಿ= ಮೂರು ಲೋಕಗಳಲ್ಲಿಯೂ, ನ= ಇಲ್ಲ, ಸಿದ್ಧಂ= ಇರುವ ವಾಕ್ಯವಾದರೂ, ಶಾಖಾಛೇದ್ಯೇವ= ಒಂದು ಕೊಂಬೆಯನ್ನು ಮಾತ್ರ ಕತ್ತರಿಸುತ್ತದೆ (ವರ್ತಮಾನ ಕಾಲೀನ ಸತ್ತ್ವವನ್ನು ಮಾತ್ರ ನಿಷೇಧಿಸುತ್ತದೆ), ಮೂಲಚ್ಛೇದಃ= ವೃಕ್ಷದ ಬುಡದ ಛೇದವು ಎಂದರೆ ಕಾಲತ್ರಯ ನಿಷೇಧವು, ಕಥಂ= ಹೇಗೆ ಸಿದ್ಧವಾಗುತ್ತದೆ ಎಂದು, ವದ= ಹೇಳು.

**ಅನುವಾದ-** ಆದ್ದರಿಂದ ಜಗತ್ತಿನ ಬಾಧರೂಪವಾದ ಕೊಡಲಿಗೆ ತ್ರೈಕಾಲಿಕ ನಿಷೇಧ ರೂಪವಾದ ಕಬ್ಬಿಣವು ಮೂರು ಲೋಕಗಳಲ್ಲಿಯೂ ದೊರೆಯುವುದಿಲ್ಲ. ಸಿದ್ಧವಾದ ಒಂದು ಕಬ್ಬಿಣವಾದರೋ (ವಾಕ್ಯವಾದರೋ) ವರ್ತಮಾನ ಕಾಲೀನ ಸತ್ತ್ವರೂಪವಾದ ಒಂದು ಕೊಂಬೆಯನ್ನು ಕತ್ತರಿಸುವುದಕ್ಕೆ ಮಾತ್ರ ಸಮರ್ಥವಾಗಿದೆ. ಕಾಲತ್ರಯ ಸತ್ತ್ವರೂಪವಾದ ಮೂಲವನ್ನು ಛೇದಿಸುವುದು ಹೇಗೆ ಎಂದು ಹೇಳು.

**ಭಾವವಿಲಾಸಿನೀ** – ಉಪಸಂಹರತಿ ॥ ಅತ ಇತಿ ॥ ಅತಃ ಸಾರ್ವದೈಶಿಕಸಾರ್ವಕಾಲಿಕಜಗನ್ನಿಷೇಧಸ್ಯ ಕ್ವಾಪ್ಯಶ್ರವಣಾತ್ । ಅಯಃ ಅಯಸ್ಸ್ಥಾನೀಯತ್ರೈಕಾಲಿಕನಿಷೇಧಃ ಲೋಕತ್ರಯೇಽಪಿ ನೇತಿ ಸಂಬಂಧಃ । ನ ಚ ವಾಚ್ಯಂ ಶ್ರುತೇರನಾದ್ಯನಂತತ್ವೇನ ತತ್ಕೃತವರ್ತಮಾನನಿಷೇಧೋಽಪ್ಯರ್ಥಾದನಾದ್ಯನಂತಕಾಲೀನ ಇತಿ । ಏವಮಪಿ ತ್ರೈಕಾಲಿಕನಿಷೇಧಸ್ಯಾರ್ಥಿಕತ್ವೇನ ಮಿಥ್ಯಾತ್ವೇ ಚೋದನಾಭಾವಸ್ಯಾಪರಿಹಾರಾತ್। ಬ್ರಹ್ಮಣೋಽನ್ಯತ್ರ ನಿರವಧಿಕಾನಂತ್ಯಾಂಗೀಕಾರೇ ತವಾಪಸಿದ್ಧಾಂತಾತ್ । ಶ್ರುತೇಶ್ಚ ಬ್ರಹ್ಮವತ್ಸದಾತನತ್ವೇ ತಸ್ಯಾ ಏವ ತ್ರಿಕಾಲನಿಷೇಧಾಯೋಗೇನ ಸರ್ವಮಿಥ್ಯಾತ್ವಾಸಿದ್ಧೇಶ್ಚ । ಸಾವಧಿಕಾನಂತ್ಯೇ ಚಾವಧ್ಯುತ್ತರಕಾಲೇ ನಿಷೇಧಾಸಿದ್ಧ್ಯಾ ತ್ವದಭಿಲಷಿತಮಿಥ್ಯಾತ್ವಸ್ಯೈವಾಸಿದ್ಧೇಶ್ಚ । ಕಿಂಚ ನಿಷೇಧಸ್ಯ ತ್ರೈಕಾಲಿತ್ವಪರಿರಕ್ಷಣಾಯ ವೇದನಿತ್ಯತಾಮಂಗೀಕೃತ್ಯ ತದುಕ್ತವರ್ತಮಾನನಿಷೇಧಸ್ಯಾಪಿ ತ್ರೈಕಾಲಿಕತ್ವಂ ವದತಾ ವೇದೋಕ್ತಾನಾಂ ವಿಶ್ವಸತ್ಯತ್ವಭೇದಬ್ರಹ್ಮಸಗುಣತ್ವಸಾಕಾರತ್ವಾದೀನಾಂ ಸರ್ವೇಷಾಮರ್ಥಾನಾಂ ಚ ಸರ್ವಕಾಲೇಷ್ವಪಿ ವರ್ತಮಾನತ್ವಂ ವಕ್ತವ್ಯಮ್ । ಏವಂ ಚ ಸರ್ವದಾ ವರ್ತಮಾನೇಷ್ವರ್ಥೇಷು ಕ್ರಿಯಮಾಣೋ ನಿಷೇಧಃ ಅಂಧಕಾರಸ್ಥಿತ ಘಟನಿಷೇಧವದ್ಭ್ರಾಂತನಿಷೇಧೋ ವಾ ಸ್ಯಾತ್ ।

ಪಾರಿಭಾಷಿಕನಿಷೇಧೋ ವಾ ಸ್ಯಾತ್ । ಅತಿವಾದ್ಯಪಿ ಪ್ರತಿವಾದೀತ್ವಮ್ ಅಸ್ಮದಭಿಮತವಾದ್ಯೇ ವಾ ಭೂಃ। ಕಿಂಕರಾಶ್ಯಂಕರಾದ್ಯಾ ಇತಿ ಸ್ತುತಿಶ್ಚ ನಿರವಧಿಕಾರ್ಥ್ಯೆವಾಭೂತ್ ।

ನ ಚ ಶ್ರೌತನಿಷೇಧಸ್ಯ ಭ್ರಾಂತಿತ್ವೇ ಶ್ರುತೇರಪ್ರಾಮಾಣ್ಯಂ ಸ್ಯಾದಿತಿ ಶಂಕನೀಯಮ್ । ವೇದೇ ತತ್ತ್ವಾವೇದಕತ್ವಾತತ್ತ್ವಾವೇದಕತ್ವವಿಭಾಗಸ್ಯ ತ್ವಯ್ಯೈವ ಕೃತತ್ವಾತ್ । ನಿಷೇಧ್ಯಾರ್ಥಾನಾಂ ಚ ಸರ್ವದಾ ವಿದ್ಯಮಾನತ್ವೇ ನಿಷೇಧಭ್ರಾಂತಿತ್ವಸ್ಯೈವ ನ್ಯಾಯ್ಯತ್ವಾತ್ । ವ್ಯರ್ಥಮನ್ಯಥಾಽಂಧಕಾರಸ್ಥಿತ-ಘಟನಾಸ್ತಿತ್ವಪ್ರತೀತೇರ್ಭ್ರಾಂತಿತ್ವಮ್ । ಜಗತ್ಸತ್ತ್ವಪ್ರತಿಪಾದಕವಾಕ್ಯಾನಾಂ ಚ ತ್ವದುಕ್ತವಿಧಯಾ ಕದಾಪಿ ಸ್ವಾರ್ಥಪ್ರಚ್ಯಾವನಾಭಾವೇನಾಭ್ರಾಂತಿತ್ವಸ್ಯೈವ ಪ್ರಾಪ್ತೇಶ್ಚ। ಯದಿ ಚ ಶ್ರುತೇರಪ್ರಾಮಾಣ್ಯಾದ್ಭೀತೋಽಸಿ ತದಾ ಪ್ರಾಗಸ್ಮದುಕ್ತನವಾರ್ಥಾನೇವ ವದ।

ಅಥವಾ ನಾನಾಭೂತಂ ಕಿಂಚನ ಕಿಂಚಿದಪಿ ಜಗದ್ ಇಹ ಬ್ರಹ್ಮಣಿ ನಾನಾಭೂತತ್ವಾದೇವ ನ ಅನ್ಯತ್ ಭಿನ್ನಂ ಸದಸ್ತೀತಿ ವಾ । ಇಹ ಬ್ರಹ್ಮಣಿ ಯನ್ನಾನಾಭೂತಂ ಜಗದಸ್ತಿ । ತತ್ ನ ಬ್ರಹ್ಮ ನ । ಆಧಾರಾಧೇಯಭಾವಾತ್ ಕ್ಷರಾಕ್ಷರಜಡತಯಾ ನಾನಾಭೂತತ್ವಾಚ್ಚೇತಿ ವಾ ಅಭಿನವಮರ್ಥಾಂತರಂ ವದ । ತದನ್ಯತದ್ವಿರುದ್ಧತದಭಾವಾರ್ಥೇಷು ನಞೋಽನುಶಾಸನಾತ್ । ನಬ್ರಾಹ್ಮಣ ಇತ್ಯಾದೌ ಪ್ರಯೋಗಾಚ್ಚ । ಸ್ವಸ್ಮಿನ್ನಸ್ತೀತ್ಯುಕ್ತಸ್ಯೈವ ಜಗತಃ ಪುನಸ್ಸ್ವಸ್ಮಿನ್ನೇವ ನಾಸ್ತಿತ್ವಂ ಘಟಯತೋ ಭಗವತಃ ಕೌಶಲನಿದರ್ಶನೇನ ತ್ರಿದಶಾಧಿಪತೇರ್ಮಾಧವಸ್ಯ ಮಧ್ವಸ್ಯ ಚ ಕೃಪಯಾ ದರ್ಶೇಮೇಽರ್ಥಾಗ್ರಂಥಕೃತ್ಯೈವೋತ್ಪ್ರೇಕ್ಷಿತಾಃ ಸ್ವಗ್ರಂಥೇ ಸೂಚಿತಾಶ್ಚ । ತಚ್ಚಿಕ್ಷಯ್ಯೈವಾಸ್ಮಾಭಿ-ರ್ಲಿಖಿತಾನಸ್ವಕೌಶಲೇನೇತಿ ದ್ರಷ್ಟವ್ಯಮ್ । ಸಿದ್ಧಂ ಸ್ವಾರಸಿಕ ಶಬ್ದಶಕ್ತ್ಯಾ ಸಿದ್ಧಂ, ನಿಷೇಧನಂ, ಶಾಖಾಚ್ಛೇದಿ ಕಾಲವಿಶೇಷೇ ದೇಶವಿಶೇಷೇ ಚಾಸ್ತಿತ್ವಚ್ಛೇದಿ । ಮೂಲಚ್ಛೇದಃ ಸಾರ್ವಕಾಲಿಕ-ಸಾರ್ವದೈಶಿಕನಿಷೇಧಾಖ್ಯಚ್ಛೇದಃ ॥ ೭೩೮ ॥

**ವಿವರಣೆ-** 'ನೇಹ ನಾನಾಸ್ತಿ' ಎಂಬ ಶ್ರುತಿಯು ಜಗನ್ಮಿಥ್ಯಾತ್ವ ವಿಷಯದಲ್ಲಿ ಪ್ರಮಾಣವಾಗಲಾರದೆಂದು ಪ್ರಸಕ್ತ ವಿಷಯದ ಉಪಸಂಹಾರವನ್ನು ಈ ಶ್ಲೋಕದ ಮೂಲಕ ಮಾಡಲಾಗಿದೆ.

ಈ ಹಿಂದಿನ ಶ್ಲೋಕಗಳಲ್ಲಿ ನಿರೂಪಿಸಿರುವಂತೆ 'ನೇಹ ನಾನಾಸ್ತಿ ಕಿಂಚನ' ಮೊದಲಾದ ಯಾವುದೇ ಶ್ರುತಿಯೂ ಜಗತ್ತಿನ ಸಾರ್ವದೈಶಿಕ= ಸಾರ್ವಕಾಲಿಕ ನಿಷೇಧವನ್ನು ಮಾಡುತ್ತಿಲ್ಲವಾದ್ದರಿಂದ ಜಗನ್ಮಿಥ್ಯಾತ್ವವನ್ನು ಶ್ರುತಿಗಳ ಆಧಾರದಿಂದ ಸಾಧಿಸಲಾಗುವುದಿಲ್ಲವೆಂದು ಒಂದು ಮನೋಜ್ಞವಾದ ದೃಷ್ಟಾಂತದ ಮೂಲಕ ಇಲ್ಲಿ ಶ್ರೀ ವಾದಿರಾಜ ಸ್ವಾಮಿಗಳು ತಿಳಿಸುತ್ತಿದ್ದಾರೆ. ಕೊಡಲಿಗೆ ಎಲ್ಲವನ್ನೂ ಕತ್ತರಿಸುವ ಸಾಮರ್ಥ್ಯವಿದೆ ನಿಜ. ಆದರೆ, ಅಂತಹ ಕೊಡಲಿ ಮೊದಲು ಸಿದ್ಧವಾಗಬೇಕು. ಕೊಡಲಿಯನ್ನು ಸಿದ್ಧಪಡಿಸುವುದಾದರೆ ಅದಕ್ಕೆ ಮೂಲದ್ರವ್ಯವಾದ ಕಬ್ಬಿಣ ನಮಗೆ ದೊರಕಬೇಕು. ಕಬ್ಬಿಣವೇ ಎಲ್ಲೂ ಸಿಗದಿದ್ದರೆ ಕೊಡಲಿಯನ್ನು ಸಿದ್ಧಪಡಿಸುವುದೆಂತು? ಕೊಡಲಿಯೇ ಇಲ್ಲದಿದ್ದಾಗ ಎಲ್ಲವನ್ನೂ ಕತ್ತರಿಸುವುದೆಂತು? ಅಲ್ಪ ಕಬ್ಬಿಣ ಸಿಕ್ಕಿದ ಸಂದರ್ಭದಲ್ಲಿ ಆದರ ಸಹಾಯದಿಂದ ಒಂದು

ಆಯುಧವನ್ನು ಸಿದ್ಧಪಡಿಸಿದರೂ ಅದು ಮಹಾವೃಕ್ಷದ ಒಂದು ಸಣ್ಣ ರೆಂಬೆಯನ್ನು ಕತ್ತರಿಸಲು ಸಾಕಾಗಬಹುದು. ಆದರೆ, ಆ ಮಹಾವೃಕ್ಷದ ಬೇರನ್ನೇ ಕತ್ತರಿಸುವ ಸಾಮರ್ಥ್ಯ ಅದಕ್ಕೆಲ್ಲಿದೆ?

ಪ್ರಕೃತ, ಅದ್ವೈತ ಮತಕ್ಕೆ ಅಭೀಷ್ಟವಾದ ವಿಶ್ವಮಿಥ್ಯಾತ್ವವು ಸಿದ್ಧವಾಗಬೇಕಾದರೆ ಅದಕ್ಕೆ ಸಾಧಕವಾದ ಬಾಧ ಅಂದರೆ ವಿಶ್ವದ ಸಾರ್ವದೈಶಿಕ- ಸಾರ್ವಕಾಲಿಕ ನಿಷೇಧ ಗ್ರಾಹಿಯಾದ ಯಥಾರ್ಥಜ್ಞಾನರೂಪವಾದ ಕೊಡಲಿಯ ಅವಶ್ಯಕತೆ ಇದೆ. ಆದರೆ ಅಂತಹ ಬಾಧ-ಪರಶುವೇ ಇಲ್ಲ. ಏಕೆಂದರೆ ಅದು ಉತ್ಪನ್ನವಾಗಲು ಆವಶ್ಯಕವಾದ ಸಾರ್ವದೈಶಿಕ-ಸಾರ್ವಕಾಲಿಕ ಜಗನ್ನಿಷೇಧ ರೂಪವಾದ ಕಬ್ಬಿಣವೇ ಲೋಕತ್ರಯದಲ್ಲೂ ಇಲ್ಲ. ಅಂತಹ ಕಬ್ಬಿಣವಿದೆಯೆಂದು ತೋರಿಸಲು ಅದ್ವೈತ ಮತವು ಉದಾಹರಿಸುವ 'ನೇಹ ನಾನಾಸ್ತಿ' ಎಂಬ ಶ್ರುತಿಯು ವರ್ತಮಾನ ಕಾಲದಲ್ಲಿ ಮಾತ್ರ ಜಗನ್ನಿಷೇಧವನ್ನು ಮಾಡುತ್ತಿರುವುದರಿಂದ ವರ್ತಮಾನ ನಿಷೇಧರೂಪವಾದ ಅಲ್ಪಪ್ರಮಾಣದ ಕಬ್ಬಿಣ ದೊರಕೀತು. ಆದರಿಂದ ಉತ್ಪನ್ನವಾಗುವ ಬಾಧಪರಶು ವರ್ತಮಾನ ಕಾಲದಲ್ಲಿ ಮಾತ್ರ ಜಗತ್ತನ್ನು ನಿಷೇಧಿಸುವ ಮೂಲಕ ವಿಶ್ವಸತ್ಯತ್ವ ಎಂಬ ಮಹಾವೃಕ್ಷದ ರೆಂಬೆಯೊಂದನ್ನು ಛೇದಿಸಿದಂತಾಗುವುದೇ ಹೊರತು ಎಲ್ಲ ದೇಶಕಾಲಗಳಲ್ಲಿ ಜಗತ್ತಿನ ಸತ್ಯತ್ವವನ್ನು ಅಲ್ಲಗಳೆಯುವ ಮೂಲಕ ಆ ಮಹಾವೃಕ್ಷದ ಮೂಲವನ್ನೇ ಛೇದಿಸಲು ಹೇಗೆ ಸಾಧ್ಯ? ಎಂದು ಭಾವ.

ಪ್ರಸ್ತುತ ವಿಷಯವನ್ನು ಈ ಶ್ಲೋಕದಿಂದ ಉಪಸಂಹರಿಸುತ್ತಿದ್ದಾರೆ.

'ಅತಃ' ಎಂದರೆ ಸಾರ್ವದೈಶಿಕ-ಸಾರ್ವಕಾಲಿಕ ಜಗನ್ನಿಷೇಧವು ಯಾವ ಶ್ರುತಿಯಿಂದಲೂ ಕೇಳಬರದಿರುವುದರಿಂದ ಎಂದು ಅರ್ಥ. 'ಅಯಃ' - ಪ್ರಕೃತ ಕಬ್ಬಿಣದ ಸ್ಥಾನದಲ್ಲಿರುವುದು ತ್ರೈಕಾಲಿಕ ನಿಷೇಧ. (ಈ ಪದವು) 'ಲೋಕತ್ರಯೇಽಪಿ ನ' ಎಂಬ ಪದಗಳೊಂದಿಗೆ ಸಂಬಂಧವನ್ನು ಪಡೆದಿದೆ.

**ಆಕ್ಷೇಪ :** ಶ್ರುತಿಯು ಅನಾದಿಯೂ ಅನಂತವೂ ಆಗಿರುವುದರಿಂದ ಅದು ಮಾಡುವ ವರ್ತಮಾನ ಕಾಲಿಕ ನಿಷೇಧವೂ ಅನಾದ್ಯನಂತ ಕಾಲಿಕವೆಂದು ಅರ್ಥಾತ್ ಸಿದ್ಧವಾಗುವುದು.

**ಉತ್ತರ :** ಹಾಗಾದರೂ, ತ್ರೈಕಾಲಿಕ ನಿಷೇಧವು ಅರ್ಥಾತ್ ಸಿದ್ಧವಾಗುವುದೆಂದಾಗುವುದರಿಂದ 'ವಿಶ್ವಮಿಥ್ಯಾತ್ವ ವಿಷಯದಲ್ಲಿ ಶ್ರುತಿಯಿಲ್ಲವೆಂಬ ನಮ್ಮ ಆಕ್ಷೇಪಕ್ಕೆ ಪರಿಹಾರ ಹೇಳಿದಂತಾಗುವುದಿಲ್ಲ. ಅಲ್ಲದೆ, ಬ್ರಹ್ಮನಿಗಿಂತ ಭಿನ್ನವಾದ ಶ್ರುತಿಯಲ್ಲಿ ನಿರವಧಿಕವಾದ ಆನಂತ್ಯವನ್ನು ಹೇಳಿದರೆ ನಿಮಗೆ ಅಪಸಿದ್ಧಾಂತ ದೋಷ ಬರುವುದು. ಇದಲ್ಲದೆ, ಬ್ರಹ್ಮನಂತೆ ಶ್ರುತಿಯೂ ಸರ್ವಕಾಲದಲ್ಲಿರುವುದಾದರೆ ಅದಕ್ಕೇ ತ್ರೈಕಾಲಿಕ ನಿಷೇಧವಿಲ್ಲದಾಗುವುದರಿಂದ (ಅದನ್ನೂ ಒಳಗೊಂಡ) ಸರ್ವಜಗತ್ತಿನ ಮಿಥ್ಯಾತ್ವ ಸಿದ್ಧವಾಗಲಾರದು. ಶ್ರುತಿಯ ಅನಂತತೆಯು ಸಾವಧಿಕ. ಎಂದರೆ ಒಂದು

ಮಿತಿಗೊಳಪಟ್ಟದ್ದೆ ಎಂದು ಹೇಳಿದರೆ ಆ ಅವಧಿಯ ಮುಂದಿನ ಕಾಲದಲ್ಲಿ ಶ್ರುತಿಯಿಲ್ಲದಿರುವ ಕಾರಣ ಶ್ರುತಿಯಿಂದ ಜಗತ್ತಿನ ನಿಷೇಧವು ಸಿದ್ಧವಾಗಲಾರದು. ಇದರ ಫಲವಾಗಿ ನಿನಗೆ ಅಪೇಕ್ಷಿತವಾದ ಮಿಥ್ಯಾತ್ವವೇ ಸಿದ್ಧವಾಗಲಾರದು.

ಇಷ್ಟೇ ಅಲ್ಲದೆ, 'ಜಗನ್ನಿಷೇಧವು ತ್ರೈಕಾಲಿಕವಾದದ್ದು' ಎಂಬ ವಿಷಯವನ್ನು ರಕ್ಷಿಸುವ ಸಲುವಾಗಿ ವೇದದ ನಿತ್ಯತ್ವವನ್ನು ಅಂಗೀಕರಿಸಿ ವೇದದಲ್ಲಿ ಹೇಳಿದ ಜಗತ್ತಿನ ವರ್ತಮಾನ ಕಾಲಿಕ ನಿಷೇಧವೂ ತ್ರೈಕಾಲಿಕವೆಂದು ಹೇಳುವ ನೀನು ವೇದವೇ ಹೇಳುವ ವಿಶ್ವಸತ್ಯತ್ವ, ಭೇದ, ಬ್ರಹ್ಮ ಸಗುಣತ್ವ-ಸಾಕಾರತ್ವ ಮೊದಲಾದ ಎಲ್ಲ ವಿಷಯಗಳೂ ಸರ್ವಕಾಲದಲ್ಲೂ ಇರತಕ್ಕದ್ದೆಂದು ಹೇಳಬೇಕಾಗುವುದು. ಹೀಗಾಗಿ, ಸರ್ವಕಾಲದಲ್ಲೂ ಇರುವ ಪದಾರ್ಥಗಳನ್ನು ಕುರಿತು ನೀನು ಮಾಡುವ ನಿಷೇಧವು, ಕತ್ತಲಲ್ಲಿರುವ ಘಟವನ್ನು ಕುರಿತು ಮಾಡಿದ ನಿಷೇಧದಂತೆ ಭ್ರಾಂತನೊಬ್ಬನ ನಿಷೇಧವೆಂದಾದರೂ ಆದೀತು ಅಥವಾ (ವಿಶ್ವಮಿಥ್ಯಾತ್ವಸಾಧಕವಾಗದಿರುವುದರಿಂದ) ಪಾರಿಭಾಷಿಕ ನಿಷೇಧವೆಂದಾದರೂ ಆದೀತು. ಒಟ್ಟಿನಲ್ಲಿ 'ಪ್ರತಿವಾದಿಯಾದ ನೀನು ಪ್ರಮಾಣಗಳನ್ನು ಅತಿಕ್ರಮಿಸಿ ವಾದ ಮಾಡಿದರೂ ನಮಗೆ ಅಭಿಮತವಾದ ವಿಷಯಗಳನ್ನೇ ಹೇಳುವವನಾಗಿದ್ದೀಯೇ. 'ಕಿಂಕರಾಃ ಶಂಕರಾದ್ಯಾಃ' ಎಂಬ (ನಮ್ಮ ಆಚಾರ್ಯರನ್ನು ಕುರಿತ) ಸ್ತುತಿಯೂ ಸಾರ್ವಕಾಲಿಕ ಸತ್ಯವನ್ನು ಹೇಳುವ ಸ್ತುತಿಯೇ ಆಯಿತು.

**ಆಕ್ಷೇಪ :** ಶ್ರುತಿಯಿಂದ ತಿಳಿದು ಬರುವ ಜಗನ್ನಿಷೇಧವು ಭ್ರಾಂತಿಗೆ ವಿಷಯವಾದದ್ದು ಎಂದು ಹೇಳಿದಲ್ಲಿ ಶ್ರುತಿಗೆ ಅಪ್ರಾಮಾಣ್ಯ ಬಂದೀತು ಎಂಬ ಶಂಕೆಗೆ ಅವಕಾಶವಾಗುವುದು.

**ಉತ್ತರ :** ವೇದದಲ್ಲಿ ತತ್ತ್ವಾವೇದಕ, ಅತತ್ತ್ವಾವೇದಕ ಎಂಬ ವಿಭಾಗವನ್ನು ನೀನೇ ಮಾಡದ್ದೀಯಲ್ಲವೆ. ನಿಷೇಧಿಸಲಾದ ಪದಾರ್ಥಗಳು ಎಲ್ಲ ಕಾಲದಲ್ಲೂ ಇರುವುದಾದರೆ ನಿಷೇಧವು ಭ್ರಾಂತಿಗೆ ವಿಷಯವಾದದ್ದು ಎಂದು ಹೇಳುವುದೇ ನ್ಯಾಯಬದ್ಧವಾದದ್ದು. ಹಾಗಲ್ಲವಾದರೆ ಕತ್ತಲಲ್ಲಿರುವ ಘಟವನ್ನು ಇಲ್ಲವೆಂದು ಗ್ರಹಿಸುವ ಪ್ರತೀತಿಯು ಭ್ರಾಂತಿಯೆನ್ನುವುದು ವಿರುದ್ಧವಾದೀತು. ಅಷ್ಟೇ ಅಲ್ಲದೆ, ನೀನು ಹೇಳುವ ರೀತಿಯಿಂದ ಜಗತ್ತನ್ನು ಸತ್ಯವೆಂದು ಪ್ರತಿಪಾದಿಸುವ ವಾಕ್ಯಗಳಿಗೆ ತಾವು ಪ್ರತಿಪಾದಿಸುವ ಅರ್ಥವಿಲ್ಲದಿರುವಿಕೆಯೇ ಇಲ್ಲದಿರುವುದರಿಂದ ಅಪ್ರಾಮಾಣ್ಯಭಾವವೇ ಪ್ರಾಪ್ತವಾಗುವುದು. ಶ್ರುತಿಗಳಿಗೆ ಅಪ್ರಾಮಾಣ್ಯ ಬರುವ ಭೀತಿಯೇನಾದರೂ ನಿನಗಿರುವುದಾದರೆ ನಾವು ಹಿಂದೆ (ನೇಹ ನಾನಾಸ್ತಿ ಶ್ರುತಿಗೆ) ಹೇಳಿದ ಒಂಭತ್ತು ಅರ್ಥಗಳನ್ನೇ ಹೇಳು.

ಅಥವಾ, 'ನಾನಾಭೂತಂ ಕಿಂಚನ'= ನಾನಾ ಪ್ರಕಾರವಾಗಿರುವ ಯಾವುದೇ ಜಗತ್ತು, ಇಹ= ಈ ಬ್ರಹ್ಮನಲ್ಲಿ ನಾನಾವಿಧವಾಗಿರುವ ಕಾರಣದಿಂದಲೇ, ನ= ಅನ್ಯತ್ ಅಂದರೆ

ಭಿನ್ನವಾದದ್ದಾಗಿಯೇ ಇರುವುದು, ಎಂದಾಗಲೀ ಅಥವಾ, ಇಹ= ಈ ಬ್ರಹ್ಮನಲ್ಲಿ, ಯತ್ ನಾನಾಭೂತಂ ಅಸ್ತಿ= ಯಾವ ನಾನಾ ಪ್ರಕಾರವಾದ ಜಗತ್ತು ಇರುವುದೋ ಅದು, ನ= ಬ್ರಹ್ಮವಲ್ಲ, ಏಕೆಂದರೆ (ಬ್ರಹ್ಮ-ಜಗತ್ತುಗಳಿಗೆ) ಆಧಾರಾಧೇಯಭಾವ ಸಂಬಂಧವಿರುವುದರಿಂದ ಮತ್ತು ನಾಶಹೊಂದತಕ್ಕದ್ದು. ನಾಶವಿಲ್ಲದಿರುವುದು, ಜಡವಾದದ್ದು- ಹೀಗೆ ನಾನಾ ಪ್ರಕಾರವಾದ್ದರಿಂದ ಎಂಬುದಾಗಿ ಎಂಬ ಹೊಸದಾದ ಇನ್ನೊಂದರ್ಥವನ್ನೇ ಹೇಳು. ಏಕೆಂದರೆ, (ಕೋಶಗಳಲ್ಲಿ) ನಞ್ ಶಬ್ದಕ್ಕೆ, ಅದಕ್ಕಿಂತ ಭಿನ್ನವಾದದ್ದು, ಅದಕ್ಕೆ ವಿರುದ್ಧವಾದದ್ದು, ಅದರ ಅಭಾವ ಹೀಗೆ ಅನೇಕಾರ್ಥಗಳನ್ನು ಹೇಳಲಾಗಿದೆ. 'ನ ಬ್ರಹ್ಮಣಃ' ಎಂಬುದಾಗಿ ಇಂತಹ ಅರ್ಥಗಳಲ್ಲಿ ನಞ್ ಪ್ರಯೋಗವೂ ಸಿದ್ಧವಾಗಿದೆ. ತನ್ನಲ್ಲದೆ ಎಂದು ಹೇಳಲಾದ ಜಗತ್ತಿಗೆ ಪುನಃ ತನ್ನಲ್ಲೇ ಇಲ್ಲದಿರುವುದನ್ನು ಹೊಂದಿಸುವ ಭಗವಂತನ ಕೌಶಲಿಕ್ಕೆ ನಿದರ್ಶನವಾಗಿ ದೇವಾಧಿಪತಿಯಾದ ಮಾಧವನ ಮತ್ತು ಶ್ರೀಮಧ್ವರ ಕೃಪೆಯಿಂದ ಈ ಹತ್ತು ಅರ್ಥಗಳು ಗ್ರಂಥಕಾರರಾದ ಶ್ರೀ ವಾದಿರಾಜಸ್ವಾಮಿಗಳಿಂದ ಊಹಿಸಲ್ಪಟ್ಟಿದೆ ಮತ್ತು ತಮ್ಮ ಗ್ರಂಥದಲ್ಲಿ ಸೂಚಿಸಲ್ಪಟ್ಟಿವೆ. ಅದರ ಶಿಕ್ಷಣದಿಂದಲೇ ನಮ್ಮಿಂದ ಬರೆಯಲ್ಪಟ್ಟಿದೆ ಹೊರತು ನಮ್ಮ ಕೌಶಲದಿಂದಲ್ಲವೆಂದು ತಿಳಿಯತಕ್ಕದ್ದು.

ಸಿದ್ಧಂ= ಸ್ವಾಭಾವಿಕವಾದ ಶಬ್ದಸಾಮರ್ಥ್ಯದಿಂದ ಸಿದ್ಧವಾದ ನಿಷೇಧವು ಶಾಖಾಚ್ಛೇದಿ= ಕಾಲವಿಶೇಷದಲ್ಲಿ ಮತ್ತು ದೇಶ ವಿಶೇಷದಲ್ಲಿ ಮಾತ್ರ ಜಗತ್ತಿನ ಅಸ್ತಿತ್ವವನ್ನು ಅಲ್ಲಗಳೆಯುತ್ತಿದೆ. ಮೂಲಚ್ಛೇದವೆಂದರೆ ಸಾರ್ವಕಾಲಿಕ ಸಾರ್ವದೈಶಿಕ ನಿಷೇಧವೆಂಬ ವೇದ' ಎಂದರ್ಥ.

**ತತ್ ತ್ರಿಕಾಲೇಪಿ ನಾಸ್ತಿತ್ವಂ ನ ಶ್ರೌತಂ ನೋಪಯೋಗಿ ಚ ।**
**ನಾಶಸ್ಯಾಸ್ಯ ಚ ಬಾಧಸ್ಯ ಪರಸ್ಪರವಿರೋಧತಃ ॥ ೭೩ ॥**

**ಅರ್ಥ-** ತತ್= ಆ ಕಾರಣದಿಂದ, ಎಂದರೆ ಹಿಂದೆ ಹೇಳಿದ ನ್ಯಾಯದಿಂದ, ತ್ರಿಕಾಲೇಪಿ ನಾಸ್ತಿತ್ವಂ= ಕಾಲತ್ರಯದಲ್ಲಿ ನಾಸಿತ್ವವು, ಶ್ರೌತಂ ನ= ಶ್ರುತಿಯಲ್ಲಿ ಎಲ್ಲೂ ಹೇಳಲ್ಪಟ್ಟಿಲ್ಲ, ಉಪಯೋಗಿ ಚ ನ= ಮತ್ತು ನಾಶರೂಪವಾದ ಬಾಧವನ್ನು ಕುರಿತು ಉಪಯೋಗಿಯೂ ಅಲ್ಲ, ಏಕೆಂದರೆ, ನಾಶಸ್ಯ= ನಾಶಕ್ಕೂ, ಅಸ್ಯ ಚ ಬಾಧಸ್ಯ= ಕಾಲತ್ರಯ ಸತ್ತ್ವನಿಷೇಧರೂಪವಾದ ಬಾಧಕ್ಕೂ, ಪರಸ್ಪರ ವಿರೋಧತಃ= ಪರಸ್ಪರ ವಿರೋಧವಿದೆ.

**ಅನುವಾದ- ಆದ್ದರಿಂದ ಹಿಂದೆ ಹೇಳಿದ ನ್ಯಾಯಗಳಿಂದ ಕಾಲತ್ರಯದಲ್ಲಿ ನಾಸ್ತಿತ್ವವು ಶ್ರುತಿಯಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ. ಮತ್ತು ನಾಶರೂಪವಾದ ಬಾಧಕ್ಕೆ ಉಪಯೋಗಿಯೂ ಅಲ್ಲ. ಏಕೆಂದರೆ ಧ್ವಂಸರೂಪವಾದ ನಾಶಕ್ಕೂ, ಕಾಲತ್ರಯದಲ್ಲಿ ನಾಸ್ತಿತ್ವರೂಪವಾದ ಬಾಧಕ್ಕೂ ಪರಸ್ಪರ ವಿರೋಧವಿದೆ.**

**ಭಾವವಿಲಾಸಿನೀ** – ತತ್ ತಸ್ಮಾತ್ ಉಕ್ತನ್ಯಾಯಾತ್ । ಉಪಯೋಗಿ ಜ್ಞಾನವಿನಾಶ್ಯತ್ವಾಖ್ಯ-ಮಿಥ್ಯಾತ್ವೋಪಯೋಗಿ । ಅನುಪಯೋಗಿತ್ವಮೇವ ದರ್ಶಯತಿ ॥ ನಾಶಸ್ಯೇತಿ ॥ ೭೩೯ ॥

**ವಿವರಣೆ**- ಹೀಗೆ 'ನೇಹ ನಾನಾಸ್ತಿ' ಎಂಬ ಶ್ರುತಿಗೆ ಜಗತ್ಸತ್ಯತ್ವಕ್ಕೆ ವಿರೋಧಿಯಾಗದಿರುವ ಅನೇಕ ಅರ್ಥಗಳನ್ನು ಹೇಳಲು ಬರುವುದರಿಂದ ಜಗತ್ತಿನ ತ್ರೈಕಾಲಿಕ ನಿಷೇಧದಲ್ಲಿ ಶ್ರುತಿಗೆ ತಾತ್ಪರ್ಯವೂ ಇಲ್ಲ ಅಥವಾ ಅದಕ್ಕೆ ಉಪಯುಕ್ತವಾದುದೂ ಅಲ್ಲ. ಏಕೆಂದರೆ, ಅದ್ವೈತಮತದ ಪ್ರಕಾರ ಮಿಥ್ಯಾತ್ವವೆಂದರೆ ಜ್ಞಾನನಿವರ್ತ್ಯತ್ವ ಅಂದರೆ ಜ್ಞಾನದಿಂದ ನಾಶವಾಗುವಿಕೆ. 'ನೇಹನಾನಾ' ಎಂಬ ಶ್ರುತಿಯಿಂದ ಸಿದ್ಧವಾಗಿದೆ ಎಂದು ಹೇಳಲಾಗುವ ಜಗತ್ತಿನ ತ್ರೈಕಾಲಿಕ ನಿಷೇಧರೂಪವಾದ ಬಾಧಕ್ಕೂ ನಾಶವಾಗುವಿಕೆಗೂ ಪರಸ್ಪರ ವಿರೋಧವಿದೆ. ಯಾವುದಕ್ಕೆ ತ್ರೈಕಾಲಿಕ ನಿಷೇಧವೋ ಅದು ಅತ್ಯಂತಾಸತ್. ಆದರೆ ನಾಶವಾಗುವ ವಸ್ತು ಮುಂಚೆ ಸತ್ ಆಗಿಯೇ ಇರುತ್ತದೆ. ಸತ್ತ್ವ-ಅತ್ಯಂತಾಸತ್ತ್ವಗಳಿಗೆ ಪರಸ್ಪರವಿರೋಧವಿರುವುದು ಸುಸ್ಪಷ್ಟ.

ಶ್ಲೋಕದಲ್ಲಿರುವ ತತ್ ಪದಕ್ಕೆ; ಆದ್ದರಿಂದ ಅಂದರೆ ಹೇಳಿದ ರೀತಿಯಿಂದ ಎಂದರ್ಥ. 'ಉಪಯೋಗಿ' ಎಂದರೆ ಜ್ಞಾನವಿನಾಶ್ಯತ್ವರೂಪವಾದ ಮಿಥ್ಯಾತ್ವಕ್ಕೆ ಉಪಯೋಗಿಯಾದದ್ದು ಎಂದರ್ಥ. 'ನಾಶಸ್ಯಾಸ್ಯ' ಎಂಬ ಉತ್ತರಾರ್ಧವು ತ್ರೈಕಾಲಿಕ ನಿಷೇಧವು ನಾಶಕ್ಕೆ ಉಪಯೋಗಿಯಾದುದಲ್ಲವೆಂಬುದನ್ನೇ ತಿಳಿಸುತ್ತದೆ.

ನಾಶವಾಗುವ ವಸ್ತುವಿಗೆ ಪೂರ್ವದಲ್ಲಿ ಸತ್ತ್ವ ಅವಶ್ಯಕವೇ ಸರಿ. ತ್ರೈಕಾಲಿಕ ನಿಷೇಧವಿರುವ ಜಗತ್ತಿಗೂ ಜ್ಞಾನದಿಂದ ನಾಶವಾಗುವ ಮುಂಚೆ ವ್ಯಾವಹಾರಿಕ ಸತ್ತ್ವವಿದೆಯಾದ್ದರಿಂದ ವಿರೋಧವಿಲ್ಲ ಎಂಬ ಅದ್ವೈತ ಮತದ ಅಭಿಪ್ರಾಯವನ್ನು ಈ ಶ್ಲೋಕ ನಿರಾಕರಿಸುತ್ತಿದೆ-

ವ್ಯಾವಹಾರಿಕಸತ್ತ್ವಂ ತು ನಾಸ್ತಿತ್ವಾಪರನಾಮ ಹಿ ॥ ೭೪೦ ॥

**ಅರ್ಥ**- ವ್ಯಾವಹಾರಿಕಸತ್ತ್ವಂ ತು= ವ್ಯಾವಹಾರಿಕ ಸತ್ತ್ವ ಎಂಬುದಾದರೂ, ನಾಸ್ತಿತ್ವಾಪರನಾಮ ಹಿ= ನಾಸ್ತಿತ್ವದ ಪರ್ಯಾಯ ಪದವಷ್ಟೇ ?

**ಅನುವಾದ**- ವ್ಯಾವಹಾರಿಕ ಸತ್ತ್ವ ಎಂಬುದಾದರೂ ನಾಸ್ತಿತ್ವದ ಪರ್ಯಾಯ ಪದವೇ ಅಷ್ಟೇ.

**ಭಾವವಿಲಾಸಿನೀ** – ವ್ಯಾವಹಾರಿಕಸತ್ತ್ವಮಾದಾಯ ತ್ರಿಕಾಲನಾಸ್ತಿತ್ವೇಽಪಿ ನಾಶೋ ಘಟತ ಇತ್ಯತ ಆಹ – **ವ್ಯಾವಹಾರಿಕಸತ್ತ್ವಮಿತಿ** ॥ ೭೪೦ ॥

**ವಿವರಣೆ**- ಜಗತ್ತು ತ್ರಿಕಾಲದಲ್ಲೂ ಇಲ್ಲವಾದರೂ ವ್ಯಾವಹಾರಿಕ ಸತ್ಯ ಆಗಿದೆ. ಹೀಗೆ ನಾಶಕ್ಕೆ ಅವಶ್ಯಕವಾದ ಅಸ್ತಿತ್ವ ಜಗತ್ತಿಗಿರುವುದರಿಂದ ಜ್ಞಾನದಿಂದ ಜಗತ್ತಿನ ನಾಶವನ್ನು ಹೇಳಲಡ್ಡಿಯಿಲ್ಲ ಎಂದು ಅದ್ವೈತಿಗಳ ಆಶಯ. ಆದರೆ ಸತ್ತ್ವೇನ ವ್ಯವಹಾರ ವಿಷಯವಾದದ್ದು

ಹೊರತು ವಾಸ್ತವಿಕವಾಗಿ ಸತ್ವವುಳ್ಳದ್ದಲ್ಲ ಎಂದೇ ಅದ್ವೈತಿಗಳು ವ್ಯಾವಹಾರಿಕ ಸತ್ತ್ವದ ಸ್ವರೂಪವನ್ನು ವಿವರಿಸುವುದರಿಂದ ವ್ಯಾವಹಾರಿಕ ಸತ್ತ್ವವೆನ್ನುವುದು ತ್ರೈಕಾಲಿಕ ನಿಷೇಧಕ್ಕೆ ಇನ್ನೊಂದು ಹೆಸರಷ್ಟೇ. ಆದ್ದರಿಂದ, ಜಗತ್ತಿಗೆ ವ್ಯಾವಹಾರಿಕ ಸತ್ತ್ವವನ್ನೊಪ್ಪಿರುವುದರಿಂದ ಅದಕ್ಕೆ ಜ್ಞಾನದಿಂದ ನಿವೃತ್ತಿರೂಪವಾದ ಮಿಥ್ಯಾತ್ವವನ್ನು ಹೇಳಲಡ್ಡಿಯಿಲ್ಲವೆಂಬ ಅದ್ವೈತಿಗಳ ಹೇಳಿಕೆ ಅರ್ಥವಿಲ್ಲದ್ದು ಎಂದು ಭಾವ.

ತ್ರಿಕಾಲದಲ್ಲೂ ಜಗತ್ತಿಲ್ಲದಿದ್ದರೂ ವ್ಯಾವಹಾರಿಕ ಸತ್ತ್ವವನ್ನಂಗೀಕರಿಸುವುದರಿಂದ ಜಗತ್ತಿಗೆ ಜ್ಞಾನದಿಂದ ನಾಶವು ಯುಕ್ತವೇ ಆಗಿದೆ ಎಂದು ವಾದವನ್ನು ನಿರಾಕರಿಸಲು ಈ ಶ್ಲೋಕ ಹೊರಟಿದೆ.

ವ್ಯಾವಹಾರಿಕ ಸತ್ತ್ವವು ಅಸತ್ತ್ವದಲ್ಲೇ ಪರಿಣಮಿಸುವುದೆಂದು ಈ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

**ಸತ್ತಾನಿಷೇಧೇ ಸತ್ಯೇವ ಯಾ ಸಾ ಭ್ರಾಂತೌ ಪ್ರತೀಯತೇ ।**
**ತದಾಸ್ತಿತ್ವಕಥಾ ಶುಕ್ತಿರೂಪ್ಯಾಸ್ತಿತ್ವಕಥೋಪಮಾ ॥ ೭೪೧ ॥**

**ಅರ್ಥ-** ಸತ್ತಾನಿಷೇಧೇ ಸತ್ಯೇವ= ಸತ್ವ ನಿಷೇಧವು ಇರುವಾಗಲೇ, ಯಾ ಸಾ= ಯಾವ ಸತ್ವವು, ಭ್ರಾಂತೌ= ಭ್ರಾಂತಿಯಲ್ಲಿ, ಪ್ರತೀಯತೇ= ಪ್ರತೀತವಾಗುತ್ತದೆಯೋ, ತದಾ= ಆಗ, ಅಸ್ತಿತ್ವಕಥಾ= ಅಸ್ತಿತ್ವ ಕಥೆಯು (ಸತ್ವ ಕಥೆಯು), ಶುಕ್ತಿರೂಪ್ಯಾಸ್ತಿತ್ವಕಥೋಪಮಾ= ಶುಕ್ತಿ ರೂಪ್ಯದ ಸತ್ವಕಥೆಗೆ ಸಮಾನವಾಗುತ್ತದೆ.

**ಅನುವಾದ-** ಸತ್ವನಿಷೇಧವಿರುವಾಗಲೇ ಭ್ರಾಂತಿಯಲ್ಲಿಸತ್ವವು ತೋರುತ್ತದೆ ಎಂದು ಹೇಳಿದರೆ ಆಗ ಆ ತೋರುವ ಸತ್ವವು ಶುಕ್ತಿರೂಪಸತ್ವಕ್ಕೆ ಸಮಾನವಾಗಿರುತ್ತದೆ.

**ಭಾವವಿಲಾಸಿನೀ –** ಯಾ ಸತ್ತಾ । ತ್ರೈಕಾಲಿಕನಿಷೇಧಂ ವದತಾ ನಿಷೇಧೇ ಸತ್ಯೇವ ವ್ಯಾವಹಾರಿಕಸತ್ತಾಖ್ಯ ಸತ್ತಾಕಥನಾದಿತಿ ಭಾವಃ । ತದಸ್ತಿತ್ವಕಥಾ ತಸ್ಯ ನಾಸ್ತೀತ್ಯುಚ್ಯಮಾನಸ್ಯ ಸತ್ತ್ವಸ್ಯ ತದೈವ ತತ್ರೈವಾಸ್ತಿತ್ವಕಥಾ॥೭೪೧॥

**ವಿವರಣೆ-** 'ನೇಹ ನಾನಾಸ್ತಿ' ಎಂಬ ಶ್ರುತಿಯು ಜಗತ್ತಿನ ನಿಷೇಧವನ್ನು ಹೇಳುವುದೆಂದು ಮತ್ತು ಆ ನಿಷೇಧವು ತ್ರೈಕಾಲಿಕವಾದುದೆಂದೂ ಅದ್ವೈತಿಗಳ ಅಭಿಮತ. ಹೀಗೆ ಜಗನ್ನಿಷೇಧವು ತ್ರಿಕಾಲಗಳಲ್ಲಿದ್ದರೂ ಬ್ರಹ್ಮಜ್ಞಾನ ಬರುವವರೆಗೆ ವ್ಯಾವಹಾರಿಕ ಸತ್ತ್ವವೆಂದು ಕರೆಯಲಾಗುವ ಸತ್ತ್ವವೂ ಜಗತ್ತಿಗಿರುವುದೆಂದು ಅದ್ವೈತಿಗಳು ಹೇಳುವರು. ಒಟ್ಟಿನಲ್ಲಿ, ಜಗತ್ತಿಗೆ ತೋರುವ ಸತ್ತ್ವ ಭ್ರಾಂತಿಯಲ್ಲಿ ತೋರುವ ಸತ್ತ್ವವೇ ಆಗಿದೆ. ಆದ್ದರಿಂದ, ವಸ್ತುತಃ ಇಲ್ಲದಿರುವ ಜಗತ್ಸತ್ತ್ವವನ್ನು ಇದೆ ಎಂದು ಬಣ್ಣಿಸುವ ಹೇಳಿಕೆ ವಸ್ತುತಃ ಇಲ್ಲದಿರುವ, ಆದರೆ ಭ್ರಾಂತಿ ಕಾಲದಲ್ಲಿ ತೋರುವ ಶುಕ್ತಿ ರಜತವನ್ನು ಇದೆಯೆಂದು ಬಣ್ಣಿಸುವ ಹೇಳಿಕೆಯಂತೆ ವಾಸ್ತವಿಕವಾಗಿ

ಶುಕ್ತಿರಜತ ಹೇಗೆ ಅತ್ಯಂತಾಸತ್ತೋ ಅದರಂತೆ ಜಗತ್ತಿಗೆ ಹೇಳಲಾಗುವ ವ್ಯಾವಹಾರಿಕ ಸತ್ತ್ವವೂ ಅತ್ಯಂತಾಸತ್ತೆಂದು ಭಾವ.

ಮೂಲಶ್ಲೋಕದಲ್ಲಿ 'ಯಾ' ಎಂದರೆ 'ಯಾವ ಸತ್ತೆಯು' ಎಂದರ್ಥ. ಜಗತ್ತಿಗೆ ತ್ರೈಕಾಲಿಕ ನಿಷೇಧವನ್ನು ಹೇಳುವವನು ಜಗತ್ತು ಇಲ್ಲದಿರುವಾಗಲೇ ಅದಕ್ಕೆ ವ್ಯಾವಹಾರಿಕ ಸತ್ತ್ವವೆಂಬ ಸತ್ತ್ವವನ್ನು ಹೇಳುವುದರಿಂದ ಎಂದು ಭಾವ. 'ತದಸ್ತಿತ್ವಕಥಾ' ಅಂದರೆ ತಸ್ಯ= ಇಲ್ಲವೆಂದು ಹೇಳಲಾಗುವ ಸತ್ತ್ವ ಆ ದೇಶ ಆ ಕಾಲಗಳಲ್ಲೇ ಅಸ್ತಿತ್ವ ಕಥನವು' ಎಂದರ್ಥ.

ಈ ಮೊದಲು, ಬಾಧ ಬೇರೆ ನಾಶ ಬೇರೆ. ಬ್ರಹ್ಮಜ್ಞಾನದಿಂದ ಜಗತ್ತಿಗೆ ಬಾಧ ಒದಗಿದಾಗ ಜಗತ್ತು ನಾಶ ಹೊಂದುತ್ತದೆ ಎಂಬ ಅದ್ವೈತಿಗಳ ವಿವರಣೆಗೆ ನಾಶವು ಪ್ರತಿಯೋಗಿ ಸತ್ತಾಸಾಪೇಕ್ಷವಾದುದರಿಂದ ಜಗತ್ತಿಗೆ ನಾಶಪೂರ್ವದಲ್ಲಿ ಸತ್ತ್ವವನ್ನು ಒಪ್ಪಬೇಕಾಗುವುದು. ಅದು ಜಗನ್ಮಿಥ್ಯಾತ್ವಕ್ಕೆ ವಿರೋಧಿಯಾದದ್ದು ಎಂದು ನಿರಾಕರಿಸಲಾಯಿತು. ಈಗ, ನಾಶಪದವೂ ಬಾಧವನ್ನೇ ಹೇಳುವುದು. ಬಾಧಕ್ಕಿಂತ ಭಿನ್ನವಾದ ನಾಶವನ್ನು ಜಗತ್ತಿಗೆ ಹೇಳುವ ಅಭಿಪ್ರಾಯವಿಲ್ಲವೆಂದು ವಾದಿಸಿದರೆ ಅದನ್ನು ಈ ಮುಂದಿನ ಶ್ಲೋಕದಿಂದ ನಿರಾಕರಿಸಲಾಗುತ್ತಿದೆ-

ನಾಶೋ ನ ಚೇದಯಂ ಬಾಧೋ ಜಗತ್ ಪ್ರತ್ಯೇವ ಸಂಭವೇತ್ ।
ಅಜ್ಞಾನಸ್ಯೈವ ವಿಜ್ಞಾನಂ ವಿರೋಧೀತಿ ಗತಂ ತದಾ ॥ ೭೪೨ ॥

**ಅರ್ಥ-** ಅಯಂ ಬಾಧಃ= ಈ ತ್ರಿಕಾಲ ನಾಸ್ತಿತ್ವವು, ನಾಶೋ ನ ಚೇತ್= ನಾಶರೂಪವಾದುದಲ್ಲ (ನಾಶ ಪದದಿಂದಲೂ ತ್ರೈಕಾಲಿಕ ನಾಸ್ತಿತ್ವವೇ ಹೇಳಲ್ಪಡುತ್ತದೆ) ಎಂದು ಅರ್ಥವಾದರೆ, ಆಗ, ಜಗತ್ಪ್ರತ್ಯೇವ= ಜಗತ್ತನ್ನು ಕುರಿತೇ ಬಾಧವು ಇಂತಹ ನಾಶವು, ಸಂಭವೇತ್= ಉಂಟಾಗುತ್ತದೆ, ತದಾ= ಆಗ, ವಿಜ್ಞಾನಂ= ಜ್ಞಾನವು, ಅಜ್ಞಾನಸ್ಯೈವ= ಅಜ್ಞಾನಕ್ಕೆ ಮಾತ್ರ, ವಿರೋಧಿ= ವಿರೋಧಿಯಾದುದು (ನಾಶಕವಾದುದು) ಎಂಬ ಮತವು, ಗತಂ= ಬಿದ್ದು ಹೋಗುತ್ತದೆ.

**ಅನುವಾದ-** ಬಾಧವು ನಾಶರೂಪವಾದುದಲ್ಲ (ಧ್ವಂಸರೂಪವಾದುದಲ್ಲ), ನಾಶಪದದಿಂದಲೂ ತ್ರೈಕಾಲಿಕ ನಾಸ್ತಿತ್ವವನ್ನೇ ಹೇಳುತ್ತೇವೆ ಎಂದು ಹೇಳಿದರೆ ಆಗ ಜಗತ್ತಿಗೆ ಜ್ಞಾನನಾಶ್ಯತ್ವ ಎಂದರೆ ಜ್ಞಾನದಿಂದ ಉಂಟಾದ ನಾಸ್ತಿತ್ವ ಪ್ರತೀತಿ ಎಂದು ನೇರವಾಗಿಯೇ ಹೇಳಬಹುದು. ಹಾಗೆ ಹೇಳಿದರೆ ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕವಾಗುತ್ತದೆ ಎಂಬ ನಿನ್ನ ಮತವು ಬಿದ್ದು ಹೋಗುತ್ತದೆ.

**ಭಾವವಿಲಾಸಿನೀ –** ನಾಶೋ ನ ಚೇತ್ ನಾಶಸ್ಯ ಪ್ರಾಕ್ಪ್ರತಿಯೋಗಿಸತ್ತ್ವನಿಯಮಭಿಯಾ ಕುತ್ರಾಪಿ ನಾಶೋ ನಾಂಗೀಕ್ರಿಯತೇ ಚೇತ್ । ನಾಶಪದೇನಾಪಿ ಬಾಧ ಏವೋಚ್ಯತೇ ಚೇದಿತ್ಯರ್ಥಃ । ಬಾಧಃ ಅಯಂ ಬಾಧರೂಪೋ ನಾಶ ಇತ್ಯರ್ಥಃ । ಜಗತ್ಪ್ರತ್ಯೇವ ಸಂಭವೇತ್ । ನೇದಂ ರಜತಮಿತ್ಯತ್ರ

ನಾಸ್ತಿತ್ವಾಪರಪರ್ಯಾಯನಾಶಸ್ಯ ರಜತಂ ಪ್ರತ್ಯೇವ ದರ್ಶನಾತ್ । ತವಾದ್ವಿತೀಯಶ್ರುತ್ಯಾಪಿ ದ್ವಿತೀಯಸ್ಯೈವ ಸಾಕ್ಷಾನ್ನಾಸ್ತಿತ್ವಾಖ್ಯನಾಶಸ್ಯೋಕ್ತತ್ವಾದಿತಿ ಭಾವಃ । ಅಸ್ತ್ವೇವಂ ತದಾಪಿ ಮಮ ಕಾ ಹಾನಿರಿತ್ಯತ ಆಹ – **ಅಜ್ಞಾನಸ್ಯೈವೇತಿ** ॥ ತದಾ ಏವಂ ಸತಿ । ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಸಾವಧಾರಣವ್ಯಾಪ್ತೇರ್ಭಂಗಪ್ರಸಂಗ ಇತಿ ಭಾವಃ ॥ ೭೪೨ ॥

**ವಿವರಣೆ-** ಬ್ರಹ್ಮಜ್ಞಾನದಿಂದ ಜಗತ್ತು ನಾಶಹೊಂದುವುದು ಎಂದು ಒಪ್ಪಿದಲ್ಲಿ ನಾಶಕ್ಕಿಂತ ಪೂರ್ವಭಾವಿಯಾಗಿ ಜಗತ್ತಿಗೆ ಸತ್ತ್ವವನ್ನು ಒಪ್ಪಬೇಕಾಗಬಹುದು ಎಂಬ ಭಯದಿಂದ ಜಗತ್ತಿಗೆ ನಾಶವನ್ನು ಹೇಳಿದೆ. ನಾಶವೆಂದು ವಸ್ತುತಃ ಬಾಧವನ್ನೇ ಹೇಳುವುದು ಎಂದು ವಾದಿಸಿದರೆ ಬ್ರಹ್ಮಜ್ಞಾನದಿಂದ ಉಂಟಾಗುವ ಬಾಧರೂಪವಾದ ನಾಶವು ಜಗತ್ತಿಗೇ ನೇರವಾಗಿ ಸಂಭವಿಸುವುದೆಂದು ಹೇಳಿದಂತಾಯಿತು. ಈ ಪಕ್ಷದಲ್ಲಿ ಜ್ಞಾನ-ಜಗತ್ತುಗಳಿಗೆ ನೇರವಾಗಿ ಬಾಧ್ಯ-ಬಾಧಕಭಾವವನ್ನು ಹೇಳಿದಂತಾಯಿತು. ಇದರ ಪರಿಣಾಮವಾಗಿ ಜ್ಞಾನ-ಅಜ್ಞಾನಗಳಿಗೆ ಸಾಕ್ಷಾತ್ ನಿವರ್ತ್ಯ-ನಿವರ್ತಕ ಭಾವವಿದೆ. ಜ್ಞಾನದಿಂದ ಅಜ್ಞಾನವು ನಷ್ಟವಾದಾಗ ಅಜ್ಞಾನಕಾರ್ಯವಾದ ಜಗತ್ತಿಗೆ ನಾಶವೆಂಬ ಅದ್ವೈತ ಸಿದ್ಧಾಂತಕ್ಕೆ ಭಂಗ ಬರುವುದೆಂದು ಭಾವ.

'ನಾಶೋ ನ ಚೇತ್' ಎಂದರೆ ನಾಶಕ್ಕೆ ಮುಂಚಿತವಾಗಿ ಪ್ರತಿಯೋಗಿಗೆ ನಿಯಮೇನ ಸತ್ತ್ವವನ್ನು ಒಪ್ಪಬೇಕಾಗುವುದು ಎಂದು ಭಯದಿಂದ ಜಗತ್ತಿಗೆ (ಬ್ರಹ್ಮಜ್ಞಾನದಿಂದ) ಎಲ್ಲೂ ನಾಶವನ್ನು ಒಪ್ಪದಿದ್ದರೆ, ನಾಶಪದವೂ ಬಾಧವನ್ನೇ ಹೇಳುವುದು ಎಂದಾದರೆ, ಎಂದರ್ಥ. ಬಾಧಃ ಅಯಂ'= ಈ ಬಾಧರೂಪವಾದ ನಾಶವು ಎಂದರ್ಥ. 'ಜಗತ್ ಪ್ರತ್ಯೇವ ಸಂಭವೇತ್'= 'ನೇದಂ ರಜತಂ' ಎಂಬ ಸ್ಥಳದಲ್ಲಿ ನಾಸ್ತಿತ್ವರೂಪವಾದ ನಾಶವು ರಜತಕ್ಕೆ ಸಂಬಂಧಿಸಿದಂತೆ ತಿಳಿದುಬರುವುದರಿಂದ (ಬ್ರಹ್ಮಜ್ಞಾನದಿಂದ ಬಾಧವು ನೇರವಾಗಿ ಜಗತ್ತಿಗೇ ಉಂಟಾಗುವುದೆಂದು ಹೇಳಬೇಕಾಗುವುದು). ನಿನ್ನ 'ಏಕಮೇವಾದ್ವಿತೀಯಂ' ಶ್ರುತಿಯಲ್ಲಿಯೂ ಕೂಡ ದ್ವಿತೀಯ ವಸ್ತುವಿಗೇ ಸಾಕ್ಷಾತ್ತಾಗಿ ನಾಸ್ತಿತ್ವರೂಪವಾದ ನಾಶವನ್ನು ಹೇಳಿದೆಯಷ್ಟೇ ಎಂದು ಭಾವ.

ಹಾಗೆಯೇ ಆಗಲಿ ('ನೇಹ ನಾನಾ' ಎಂಬ ಶ್ರುತಿಯು ಜಗತ್ತಿಗೇ ನೇರವಾಗಿ ಬಾಧಕರೂಪವಾದ ನಾಶವನ್ನು ಹೇಳಲಿ). ನನಗೇನು ಹಾನಿ? ಎಂಬುದಕ್ಕೆ ಉತ್ತರವಾಗಿ 'ಅಜ್ಞಾನಸ್ಯೈವ ವಿಜ್ಞಾನಂ' ಎಂದು ಹೇಳಲಾಗಿದೆ. ಶ್ಲೋಕದಲ್ಲಿ 'ತದಾ' ಎಂದರೆ 'ಹಾಗಾದಲ್ಲಿ' ಎಂದು ಅರ್ಥ. 'ಜ್ಞಾನವು ಅಜ್ಞಾನಕ್ಕೇ ನಿವರ್ತಕವಾದದ್ದು' ಎಂಬ ಅವಧಾರಣಸಹಿತವಾದ ವ್ಯಾಪ್ತಿಗೆ ಭಂಗ ಉಂಟಾದೀತು ಎಂದು ಭಾವ.

ಜ್ಞಾನವು ಅಜ್ಞಾನಕ್ಕೇ ನಿವರ್ತಕವಾದದ್ದು ಎಂಬ ವ್ಯಾಪ್ತಿಗೆ ಭಂಗವಾದರೂ ಬ್ರಹ್ಮಜ್ಞಾನದಿಂದ ಜಗತ್ತು ಬಾಧ್ಯವಾಗುವುದೆಂಬ ನನ್ನ ಅಭೀಷ್ಟವಂತು ಸಿದ್ಧವಾಯಿತು ಎಂಬ ಅದ್ವೈತಿಗಳ ವಾದಕ್ಕೆ ಉತ್ತರವಾಗಿ ಮುಂದಿನ ಶ್ಲೋಕ ಹೊರಟಿದೆ-

**ಸೋಽಪಿ ತ್ರಿಕಾಲಸತ್ತಾಯಾ ನಿಷೇಧಃ ಸ್ಯಾನ್ನ ಚಾಪರಃ ।**
**ಸ ತು ನ ಶ್ರೂಯತೇ ಕ್ವಾಪೀತ್ಯುಕ್ತಂ ತತ್ ಕುತ್ರ ಬಾಧ್ಯತಾ ॥ ೭೪೩ ॥**

**ಅರ್ಥ-** ಸೋಽಪಿ= ಅಂತಹ ಬಾಧವಾದರೋ, ತ್ರಿಕಾಲಸತ್ತಾಯಾ ನಿಷೇಧಃ ಸ್ಯಾತ್= ತ್ರೈಕಾಲಿಕ ನಾಸ್ತಿತ್ವರೂಪವಾದ ನಿಷೇಧವಾಗಿರುತ್ತದೆ, ಚ= ಮತ್ತು, ಅಪರಃ ನ= ನಾಶರೂಪವಾದುದಲ್ಲ, ಸ ತು= ಆ ತ್ರೈಕಾಲಿಕ ಸತ್ವ ನಿಷೇಧವಾದರೂ, ಕ್ವಾಪಿ= ಎಲ್ಲಿಯೂ, ನ ಶ್ರೂಯತೇ= ಶ್ರುತಿಯಲ್ಲಿ ಹೇಳಲ್ಪಟ್ಟಿಲ್ಲ, ಇತ್ಯುಕ್ತಂ= ಎಂದು ಮೊದಲೇ ಹೇಳಿದ್ದೇವೆ, ತತ್= ಆದ್ದರಿಂದ, ಬಾಧ್ಯತಾ= ನಿನಗೆ ಅಭಿಮತವಾದ ತ್ರೈಕಾಲಿಕಸತ್ವನಿಷೇಧವು, ಕುತ್ರ= ಎಲ್ಲಿದೆ?

**ಅನುವಾದ-** ಆ ಬಾಧವಾದರೂ ಸಹ ತ್ರೈಕಾಲಿಕಸತ್ವನಿಷೇಧರೂಪವಾದದ್ದೇ ಹೊರತು ನಾಶರೂಪವಾದುದಲ್ಲ. ಆ ತ್ರೈಕಾಲಿಕಸತ್ವನಿಷೇಧವಾದರೂ ಶ್ರುತಿಯಲ್ಲಿ ಎಲ್ಲಿಯೂ ಕಂಡುಬರುವುದಿಲ್ಲಎಂದು ಮೊದಲೇ ಹೇಳಿದ್ದೇವೆ. ನಿನಗೆ ಅಭಿಮತವಾದ ಬಾಧ್ಯತ್ವವು ಎಲ್ಲಿದೆ?

**ಭಾವವಿಲಾಸಿನೀ** – ವ್ಯಾಪ್ತಿಭಂಗೋಽಪ್ಯಸ್ತು ತಥಾಪಿ ಬಾಧ್ಯತ್ವಸಿದ್ಧ್ಯಾ ಮಮೇಷ್ಟಸಿದ್ಧಿರಿತ್ಯತ ಆಹ – **ಸೋಽಪೀತಿ ॥** ಸೋಽಪಿ ಬಾಧೋಽಪಿ । ತತ್ ತಸ್ಮಾತ್ । ತ್ರಿಕಾಲನಾಸ್ತಿತ್ವಸ್ಯೈವ ಬಾಧತ್ವೇ ಪ್ರತಿಯೋಗಿಸತ್ತಾಸಾಪೇಕ್ಷಜ್ಞಾನನಾಶ್ಯತ್ವಪಕ್ಷಪ್ರತಿಕ್ಷೇಪಪ್ರಸಂಗಃ । ತತ್ಪರಿತ್ಯಜ್ಯ ನಾಶಪದೇನಾಪಿ ಬಾಧಸ್ಯೈವೋಕ್ತೌ ತ್ವದುಕ್ತವ್ಯಾಪ್ತೇರ್ಭಂಗಪ್ರಸಂಗಃ । ವ್ಯಾಪ್ತಿಮಪಿ ಪರಿತ್ಯಜ್ಯ ಬಾಧಮಾತ್ರೇಣಾಪಿ ನ ಸಂತೋಷ್ಟವ್ಯಮ್ । ಕ್ವಾಪ್ಯಶ್ರವಣೇನ ತಸ್ಯಾಪ್ಯಂತತ ಉಜ್ಜೀವಯಿತುಮಶಕ್ಯತ್ವಾತ್ । ಏವಂ ಚ ಮಾರ್ಜಾರಾಗ್ರೇ ಮೂಷಿಕ ಚಾಪಲವತ್ತರಕೀಯಶಾಸ್ತ್ರಪ್ರಕ್ರಿಯಾಧಾವನಾಯೈವಾಭೂತ್ ನ ಜೀವನಾಯೇತಿ ಭಾವಃ ॥ ೭೪೩ ॥

**ವಿವರಣೆ-** (ಜ್ಞಾನವು ಅಜ್ಞಾನಕ್ಕೆ ನಿವರ್ತಕ) ಎಂಬ ವ್ಯಾಪ್ತಿಭಂಗವೂ ಆಗಲಿ. ಜಗತ್ತಿಗೆ ಬಾಧ್ಯತ್ವವಂತೂ ಸಿದ್ಧವಾಗುವುದರಿಂದ ನನ್ನ ಇಷ್ಟ ಸಿದ್ಧಿಯೇ ಆಯಿತು ಎಂಬ ವಾದಕ್ಕೆ ಉತ್ತರವಾಗಿ 'ಸೋಽಪಿ' ಇತ್ಯಾದಿ ಶ್ಲೋಕ ಹೊರಟಿದೆ.

'ಸೋಽಪಿ' ಎಂದರೆ ಬಾಧವೂ ಕೂಡ ಎಂದರ್ಥ. 'ತತ್'= ಆದ್ದರಿಂದ, ತ್ರೈಕಾಲಿಕ ಸತ್ತಾನಿಷೇಧವೇ ಬಾಧವೆನ್ನುವುದಾದರೆ ಪ್ರತಿಯೋಗಿಯ ಸತ್ತ್ವವನ್ನು ಅಪೇಕ್ಷಿಸುವ (ಪ್ರಪಂಚವು) ಜ್ಞಾನದಿಂದ ನಾಶಹೊಂದುವುದು ಎಂಬ ಪಕ್ಷವನ್ನು ಬಿಡಬೇಕಾಗುವುದು. ಆ ಪಕ್ಷವನ್ನು ಬಿಟ್ಟು ನಾಶಪದವೂ ಬಾಧವನ್ನೇ ಹೇಳುವುದೆನ್ನುವುದಾದರೆ ನೀನು

ಅಂಗೀಕರಿಸಿರುವ (ಜ್ಞಾನವು ಅಜ್ಞಾನಕ್ಕೇ ನಿವರ್ತಕ) ಎಂಬ ವ್ಯಾಪ್ತಿಗೆ ಭಂಗವಾದೀತು. ವ್ಯಾಪ್ತಿಯನ್ನೂ ಪರಿತ್ಯಜಿಸಿ ಜಗತ್ತಿಗೆ ಬಾಧಸಿದ್ಧವಾದರೆ ಸಾಕು ಎಂದು ಸಂತೋಷ ಪಡುವುದೂ ಸಾಧ್ಯವಿಲ್ಲ. ಏಕೆಂದರೆ (ಆ ಬಾಧ) ಯಾವ ಶ್ರುತಿಯಲ್ಲೂ ಕೇಳದಿರುವುದರಿಂದ ಕೊನೆಯದಾಗಿ ಅದನ್ನೂ ಸಮರ್ಥಿಸಲು ಸಾಧ್ಯವಿಲ್ಲ. ಒಟ್ಟಿನಲ್ಲಿ, ಬೆಕ್ಕಿನ ಮುಂದೆ ಇಲಿಯು ಪ್ರದರ್ಶಿಸುವ ಚಾಪಲದಂತೆ ಪ್ರತಿಪಕ್ಷಿಯ ಶಾಸ್ತ್ರಪ್ರಕ್ರಿಯೆಯು ಪರಾಜಿತವಾಗಿ ಓಡಿಹೋಗಲು ಕಾರಣವಾಯಿತೇ ಹೊರತು ಸ್ವಸಿದ್ಧಾಂತ ಸಮರ್ಥನೆಗೆ ಸಹಾಯಕವಾಗಲಿಲ್ಲ ಎಂದು ಭಾವ.

**ಶ್ರುತಿಗಳಲ್ಲಿ ಬ್ರಹ್ಮಜ್ಞಾನದಿಂದ ನಾಶವನ್ನೇ ಹೇಳಿಲ್ಲವೆಂದಿಲ್ಲ. ಆದರೆ, ಆ ನಾಶವು ನಮ್ಮ ಅಜ್ಞಾನ, ಸಂಶಯಕರ್ಮಗಳ ನಾಶವೇ ಹೊರತು ಅದ್ವೈತ ಮತವು ಹೇಳುವಂತೆ ಸರ್ವಜಗತ್ತಿನ ನಾಶವಲ್ಲ ಎಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-**

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥ ೭೪೪ ॥**

**ಇತ್ಯಾದಿ ವಾಕ್ಯೈರ್ಬಂಧಸ್ಯ ಪುಣ್ಯಪಾಪಾದಿಕರ್ಮಣಾಂ ।**
**ಅಜ್ಞಾನಸ್ಯ ಚ ವಿಜ್ಞಾನಾಚ್ಛ್ರುತೋ ನಾಶೋ ನ ಚಾಪರಃ ।**
**ಅತಃ ಸರ್ವಜಗನ್ನಾಶೋ ಜ್ಞಾನೇನೇತ್ಯತಿಸಾಹಸಂ ॥ ೭೪೫ ॥**

**ಅರ್ಥ-** ಆತ್ಮನಿ= ತನ್ನಲ್ಲಿಯೇ, ಈಶ್ವರೇ= ಪ್ರಭುವಾದ ಈಶ್ವರನನ್ನು, ದೃಷ್ಟೇ= ನೋಡಿದರೆ, ಹೃದಯಗ್ರಂಥಿಃ= ಅಜ್ಞಾನವು, ಭಿದ್ಯತೇ= ನಾಶವನ್ನು ಹೊಂದುತ್ತದೆ, ಸರ್ವ ಸಂಶಯಾಃ= ಎಲ್ಲ ಸಂಶಯಗಳು, ಛಿದ್ಯಂತೇ= ಪರಿಹಾರವನ್ನು ಹೊಂದುತ್ತವೆ, ಚ= ಮತ್ತು, ಅಸ್ಯ ಕರ್ಮಾಣಿ= ಈ ಜೀವನ ಎಲ್ಲ ಕರ್ಮಗಳೂ, ಕ್ಷೀಯಂತೇ= ನಾಶವನ್ನು ಹೊಂದುತ್ತವೆ, ಇತ್ಯಾದಿ ವಾಕ್ಯೈಃ= ಇದೇ ಮೊದಲಾದ ವಾಕ್ಯಗಳಿಂದ, ಶ್ರುತೌ= ಶ್ರುತಿಯಲ್ಲಿ, ವಿಜ್ಞಾನ= ಜ್ಞಾನದಿಂದ, ಪುಣ್ಯಪಾಪಾದಿಕರ್ಮಣಾಂ= ಪುಣ್ಯಪಾಪಾದಿ ಕರ್ಮಗಳಿಗೂ, ಚ= ಮತ್ತು, ಅಜ್ಞಾನಸ್ಯ= ಅಜ್ಞಾನಕ್ಕೂ, ನಾಶಃ= ನಾಶವೇ, ಶ್ರುತಃ= ಶ್ರುತವಾಗಿದೆ. ಅಪರಃ= ಬೇರೆ ಅರ್ಥವು, ನ ಚ= ಶ್ರುತವಾಗಿಲ್ಲ. ಅತಃ= ಆದ್ದರಿಂದ, ಜ್ಞಾನೇನ= ಜ್ಞಾನದಿಂದ, ಸರ್ವಜಗನ್ನಾಶಃ= ಎಲ್ಲ ಜಗತ್ತಿನ ನಾಶವು ಉಂಟಾಗುತ್ತದೆ ಎಂಬುದು, ಅತಿಸಾಹಸಂ= ಅತಿ ಸಾಹಸದ ಮಾತು.

**ಅನುವಾದ- ತನ್ನಲ್ಲಿಯೇ ಈಶ್ವರನನ್ನು ನೋಡಿದರೆ ಅಜ್ಞಾನವು ನಾಶವನ್ನು ಹೊಂದುತ್ತದೆ. ಸರ್ವ ಸಂಶಯಗಳು ಪರಿಹಾರವನ್ನು ಹೊಂದುತ್ತವೆ. ಈ ಜೀವನ ಪುಣ್ಯಪಾಪಾದಿ ಕರ್ಮಗಳು ನಾಶವನ್ನು ಹೊಂದುತ್ತವೆ. ಇದೇ ಮೊದಲಾದ ವಾಕ್ಯಗಳಿಂದ ಜ್ಞಾನದಿಂದ ಬಂಧಕ್ಕೂ, ಪುಣ್ಯಪಾಪಾದಿಕರ್ಮಗಳಿಗೂ ಮತ್ತು ಅಜ್ಞಾನಕ್ಕೂ ನಾಶವೇ ಹೇಳಲ್ಪಟ್ಟಿದೆ.**

**ಬೇರೆಯದಕ್ಕೆ ಹೇಳಲ್ಪಟ್ಟಿಲ್ಲ. ಆದ್ದರಿಂದ ಜ್ಞಾನದಿಂದ ಸರ್ವಜಗತ್ತಿನ ನಾಶವು ಉಂಟಾಗುತ್ತದೆ ಎಂಬ ಮಾತು ಅತಿಸಾಹಸವಾದುದು.**

**ಭಾವವಿಲಾಸಿನೀ – ಕಿಂ ಚಾಜ್ಞಾನಸಂಶಯಪುಣ್ಯಪಾಪಾತಿರಿಕ್ತಜಗತೋ ಜ್ಞಾನನಾಶ್ಯತ್ವಸ್ಯ ಕ್ವಾಪ್ಯಶ್ರವಣಾತ್ ತನ್ಮಿಥ್ಯಾತ್ವಕಥಾ ನ ಕಥಂಚಿದಪ್ಯುಪಯೋಗಿನೀತ್ಯಾಹ – ಭಿದ್ಯತ ಇತಿ । ॥ ೭೪೪-೭೪೫ ॥**

**ವಿವರಣೆ-** ಬ್ರಹ್ಮಸಾಕ್ಷಾತ್ಕಾರದಿಂದ ಅಜ್ಞಾನವು ತನ್ನ ಕಾರ್ಯವಾದ ಸಮಸ್ತ ಜಗತ್ತಿನ ಸಹಿತವಾಗಿ ನಾಶವಾಗುತ್ತದೆ. ಇದೇ ಜಗತ್ತು ಮಿಥ್ಯೆ ಎನ್ನುವುದರ ಅರ್ಥ ಎಂದು ಅದ್ವೈತ ಮತವು ಹೇಳುವುದು. ಆದರೆ 'ಭಿದ್ಯತೇ ಹೃದಯಗ್ರಂಥಿಃ' ಇತ್ಯಾದಿ ಶ್ರುತಿವಾಕ್ಯಗಳನ್ನು ಗಮನಿಸಿದಾಗ, ಬ್ರಹ್ಮಸಾಕ್ಷಾತ್ಕಾರದಿಂದ ಜೀವನ ಸಂಸಾರ ಬಂಧಕ್ಕೆ ಕಾರಣವಾದ ಪುಣ್ಯಪಾಪರೂಪವಾದ ಕರ್ಮಗಳೂ, ಅಜ್ಞಾನ ಇವುಗಳ ನಾಶವಾಗುವುದೆಂದು ತಿಳಿದು ಬರುವುದೇ ವಿನಾ ಇನ್ನಾವುದರ ನಾಶವೂ ಬ್ರಹ್ಮಸಾಕ್ಷಾತ್ಕಾರದಿಂದ ಆಗುವುದೆಂದು ತಿಳಿದು ಬರುವುದಿಲ್ಲ. ಹೀಗಿರುವಾಗ ಬ್ರಹ್ಮಜ್ಞಾನದಿಂದ ಸಮಸ್ತ ಜಗತ್ತಿನ ನಾಶವಾಗುತ್ತದೆ. ಹೀಗೆ ಜಗತ್ತಿನ ಜ್ಞಾನದಿಂದ ನಾಶವಾಗುವಿಕೆಯೇ 'ಜಗತ್ತು ಮಿಥ್ಯೆ' ಎಂಬ ಮಾತಿನ ಅರ್ಥ ಎಂದು ಅದ್ವೈತಿಗಳು ಯಾವುದೇ ಪ್ರಮಾಣದ ಆಧಾರವಿಲ್ಲದೆ ಹೇಳುವುದು ಅತ್ಯಂತ ಸಾಹಸವೇ ಸರಿ ಎಂದು ಭಾವ.

ಅಲ್ಲದೆ, ಅಜ್ಞಾನ, ಸಂಶಯ, ಪುಣ್ಯಪಾಪ- ಇವುಗಳಿಗಿಂತ ಭಿನ್ನವಾದ ಜಗತ್ತಿನ ನಾಶ ಯಾವ ಶ್ರುತಿಯಿಂದಲೂ ತಿಳಿದು ಬರದಿರುವುದರಿಂದ ಜಗತ್ತಿನ ಮಿಥ್ಯಾತ್ವವನ್ನು ಹೇಳುವುದು ಯಾವ ರೀತಿಯಿಂದಲೂ ಉಪಯುಕ್ತವಲ್ಲ ಎಂದು 'ಭಿದ್ಯತೇ ಹೃದಯ ಗ್ರಂಥಿಃ' ಇತ್ಯಾದಿ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ಜ್ಞಾನದಿಂದ ಘಟಾದಿ ಜಗತ್ತಿನ ನಾಶವಾಗುವುದು ಎಂಬ ಅದ್ವೈತಿಗಳ ವಾದ ಯುಕ್ತಿಯುಕ್ತವಲ್ಲ ಎಂಬ ಈ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-**

**ಇದಾನೀಂ ನಷ್ಟನಾನಾರ್ಥನಾಶೋಂತೇ ಜ್ಞಾನತಃ ಕಥಂ ।**
**ಪ್ರಾಗೇವ ನಾಸ್ತಿತಾ ತಸ್ಯ ಯತಃ ಸರ್ವಸ್ಯ ಸಂಮತಾ ॥ ೭೪೬ ॥**

**ಅರ್ಥ-** ಇದಾನೀಂ= ಈಗಲೇ, ನಷ್ಟ= ನಷ್ಟವಾದ, ನಾನಾರ್ಥನಾಶಃ= ನಾನಾರ್ಥಗಳ ನಾಶವು, ಅಂತೇ= ಕೊನೆಯಲ್ಲಿ, ಜ್ಞಾನತಃ= ಜ್ಞಾನದಿಂದ, ಕಥಂ= ಹೇಗೆ ಉಂಟಾಗುತ್ತದೆ? ಯತಃ= ಏಕೆಂದರೆ, ತಸ್ಯ= ಆ ನಷ್ಟವಾದ ಪದಾರ್ಥಕ್ಕೆ, ನಾಸ್ತಿತಾ= ನಾಸ್ತಿತ್ವವು, ಪ್ರಾಗೇವ= ಮೊದಲೇ, ಸರ್ವಸ್ಯ ಸಂಮತಾ= ಸರ್ವಸಮ್ಮತವಾಗಿದೆ.

**ಅನುವಾದ- ಮೊದಲೇ ನಷ್ಟವಾದ ಪದಾರ್ಥಕ್ಕೆ ಕೊನೆಯಲ್ಲಿ ಜ್ಞಾನದಿಂದ ಹೇಗೆ ಇನ್ನೊಮ್ಮೆ ನಾಶವು ಉಂಟಾಗುತ್ತದೆ? ಏಕೆಂದರೆ ಅಂತಹ ಪದಾರ್ಥಗಳಿಗೆ ನಾಸ್ತಿತ್ವವು ಮೊದಲೇ ಸರ್ವ ಸಮ್ಮತವಾಗಿದೆ.**

**ಭಾವವಿಲಾಸಿನೀ** – ಅಯುಕ್ತಶ್ಚ ಜ್ಞಾನೇನ ಜಗನ್ನಾಶ ಇತ್ಯಾಹ – ಇದಾನೀಮಿತಿ ॥ ನಷ್ಟಸ್ಯ ಪುನರ್ನಾಶಾಯೋಗಾತ್ । ಮಾಸ್ತು ಜ್ಞಾನೇನ ನಾಶೋ ಬಾಧಃ ಕಿಂತು ನಾಸ್ತಿತ್ವಬೋಧ ಏವ ಬಾಧಃ । ಸ ಚ ನಷ್ಟಸ್ಯಾಪಿ ಘಟತ ಇತ್ಯತ ಆಹ – ಪ್ರಾಗೇವೇತಿ ॥ ಪ್ರಾಗ್ಬ್ರಹ್ಮಜ್ಞಾನಾತ್ಪ್ರಾಕ್ । ತಸ್ಯ ಇದಾನೀಂ ನಷ್ಟಸ್ಯ । ಧ್ವಸ್ತಘಟಾದೌ ನಾಸ್ತೀತಿ ವ್ಯವಹಾರಸ್ಯ ಸರ್ವಸಂಮತತ್ವಾತ್ । ತ್ರಿಕಾಲನಾಸ್ತಿತ್ವಸ್ಯ ಚ ತಥಾ ಬೋಧಕಶಬ್ದಾಭಾವೇನ ಪರಮತೇ ಶಬ್ದಜನ್ಯಾಪರೋಕ್ಷಜ್ಞಾನೇ ಉಲ್ಲೇಖಸ್ಯೈವಾಯೋಗಾತ್ । ನಾಸ್ತಿತ್ವೋಲ್ಲೇಖಮಾತ್ರಸ್ಯ ಪ್ರಾಗೇವ ಸಿದ್ಧತ್ವಾದಿತಿ ಭಾವಃ ॥ ೭೪೬ ॥

**ವಿವರಣೆ**- ಜ್ಞಾನನಿವರ್ತ್ಯತ್ವ ಅಂದರೆ ಬ್ರಹ್ಮಜ್ಞಾನದಿಂದ ನಾಶವಾಗುವಿಕೆಯೇ ಜಗತ್ತು ಮಿಥ್ಯೆ ಎಂಬ ಮಾತಿನ ಅರ್ಥ ಎಂದು ಅದ್ವೈತಿಗಳ ವಾದ. ಆದರೆ ಬ್ರಹ್ಮಜ್ಞಾನ ಉಂಟಾಗುವ ಮುಂಚೆಯೇ ಮುದ್ಗರ ಪ್ರಹಾರಾದಿಗಳಿಂದ ಘಟಾದಿ ವಸ್ತುಗಳು ನಾಶವಾಗುವುದು ಎಲ್ಲರಿಗೂ ಸಂಮತವಾದ ವಿಷಯ. ಆದ್ದರಿಂದ, ಬ್ರಹ್ಮಜ್ಞಾನದಿಂದ ಘಟಾದಿ ಜಗತ್ತು ನಾಶವಾಗುವುದು ಎಂದೊಪ್ಪಿದರೆ ನಷ್ಟವಾದ ವಸ್ತುವಿಗೆ ಪುನಃ ನಾಶವನ್ನು ಹೇಳಿದಂತಾಯಿತು. ಇದು ಹೇಗೆ ಯುಕ್ತ ಎಂದು ರಾಜರು ಪ್ರಶ್ನಿಸುತ್ತಿದ್ದಾರೆ.

ಬ್ರಹ್ಮಜ್ಞಾನದಿಂದ ಜಗತ್ತಿನ ನಾಶವಾಗುವುದು ಎಂಬ ಮತ ಯುಕ್ತಿ ವಿರುದ್ಧವಾದುದೆಂದು, 'ಇದಾನೀಂ' ಇತ್ಯಾದಿ ಶ್ಲೋಕದಲ್ಲಿ ಹೇಳಲಾಗುತ್ತಿದೆ. ಒಮ್ಮೆ ನಾಶ ಹೊಂದಿದ ವಸ್ತುವಿಗೆ ಪುನಃ ನಾಶ ಸಾಧ್ಯವಿಲ್ಲವಷ್ಟೇ.

ಹಾಗಾದರೆ, ಜಗತ್ತಿಗೆ ಬಾಧವೆಂದರೆ ಜ್ಞಾನದಿಂದ ನಾಶವಾಗುವುದು ಎಂದು ಹೇಳಲಾಗದಿದ್ದರೆ ಬೇಡ. ಜಗತ್ತಿಗೆ ಬಾಧವೆಂದರೆ ಜಗತ್ತಿನ ನಾಸ್ತಿತ್ವ ಬೋಧ ಅಂದರೆ 'ಜಗತ್ತು ಇಲ್ಲ' ಎಂಬ ಜ್ಞಾನವೇ ಆಗಿದೆ. ಇಂತಹ ಬಾಧ ಈಗಾಗಲೇ ನಷ್ಟವಾಗಿರುವ ವಸ್ತುಗಳ ವಿಷಯದಲ್ಲೂ ಬರುವ ಸಾಧ್ಯತೆ ಇದೆ ಎಂಬ ಆಕ್ಷೇಪಕ್ಕೆ ಉತ್ತರವಾಗಿ 'ಪ್ರಾಗೇವ ನಾಸ್ತಿತಾ' ಇತ್ಯಾದಿಯಾಗಿ ಹೇಳಲಾಗಿದೆ. ಪ್ರಾಗ್ ಎಂದರೆ ಬ್ರಹ್ಮಜ್ಞಾನ ಬರುವ ಮುಂಚೆಯೇ ಎಂದು ಅರ್ಥ. ತಸ್ಯ- ಈಗಾಗಲೇ ನಷ್ಟವಾಗಿರುವ ವಸ್ತುವಿಗೆ ಎಂದು ಅರ್ಥ.

('ನಾಸ್ತಿ' ಎಂಬ ಜ್ಞಾನವೇ ಬಾಧವೆನ್ನುವುದಾದರೆ, ಅಂತಹ ಜ್ಞಾನವೂ ಬ್ರಹ್ಮಜ್ಞಾನಕ್ಕಿಂತಲೂ ಮುಂಚೆಯೇ ಧ್ವಂಸ ಹೊಂದಿದ ವಸ್ತುಗಳ ವಿಷಯದಲ್ಲಿ ಆ ರೀತಿಯ ಜ್ಞಾನವಿದೆ. ಆ ಬಗೆಯ ಜ್ಞಾನವಿದೆ ಎನ್ನುವುದಕ್ಕೆ ನಾವು ಮಾಡುವ 'ನಾಸ್ತಿ' ಎಂಬ ವ್ಯವಹಾರವೇ ಆಧಾರವಾಗಿದೆ. ಅಂತಹ ವ್ಯವಹಾರವೇ ಇಲ್ಲ ಎಂದು ಹೇಳಲಂತೂ ಸಾಧ್ಯವಿಲ್ಲ). ಏಕೆಂದರೆ ಧ್ವಸ್ತವಾದ ಘಟಾದಿ ಪದಾರ್ಥಗಳ ವಿಷಯದಲ್ಲಿ 'ನಾಸ್ತಿ' ಎಂಬ ವ್ಯವಹಾರವಿದೆ ಎನ್ನುವುದು ಸರ್ವರಿಗೂ ಸಮ್ಮತವೇ ಆಗಿದೆ. ('ಕಾಲತ್ರಯದಲ್ಲೂ ಜಗತ್ತಿಲ್ಲ' ಎಂಬ ಜ್ಞಾನವೇ ಜಗತ್ತಿನ ಬಾಧ. 'ನೇಹ ನಾನಾಸ್ತಿ' ಎಂಬ ಶ್ರುತಿಯಿಂದ ಅಂತಹ ಜ್ಞಾನವು ಬರುವುದು ಎಂದು ಹೇಳಿದರೆ ಅದೂ ಯುಕ್ತವಲ್ಲ). ಏಕೆಂದರೆ (ನೇಹ ನಾನಾಸ್ತಿ) ಇತ್ಯಾದಿ ಶ್ರುತಿಯಲ್ಲಿ ಜಗತ್ತಿನ ತ್ರೈಕಾಲಿಕ ನಾಸ್ತಿತ್ವವನ್ನು ತಿಳಿಸುವ ಶಬ್ದವೇ ಇಲ್ಲವಾದ್ದರಿಂದ ಪರಮತ ರೀತ್ಯಾ

ಅಂತಹ ಶ್ರುತಿಗಳಿಂದ ಉಂಟಾಗುವುದೆಂದು ಹೇಳಲಾಗುವ ಅಪರೋಕ್ಷಜ್ಞಾನದಲ್ಲಿ ತ್ರೈಕಾಲಿಕ ನಾಸ್ತಿತ್ವದ ಉಲ್ಲೇಖವೇ ಇರಲು ಸಾಧ್ಯವಿಲ್ಲ. (ಶ್ರುತಿಯಲ್ಲಿ 'ನಾಸ್ತಿ' ಎಂಬ ಪದವಿರುವುದರಿಂದ 'ನಾಸ್ತಿ' ಎಂಬ ಜ್ಞಾನವೇ ಬಾಧವೆನ್ನುವುದಾದರೆ) ಘಟಾದಿ ಜಗತ್ತಿಗೆ ಕೇವಲ ನಾಸ್ತಿತ್ವವನ್ನು ಉಲ್ಲೇಖಿಸುವ ಜ್ಞಾನವು ಶ್ರುತಿಯಿಂದ ಅಪರೋಕ್ಷಜ್ಞಾನವು ಉಂಟಾಗುವ ಮುಂಚೆಯೇ ಇರುವುದರಿಂದ (ಅದನ್ನು ಜಗತ್ತಿನ ಬಾಧವೆನ್ನಲಾಗದು).

**ನಾಸ್ತಿತ್ವಜ್ಞಾನವೇ ಬಾಧ. ಈಗಾಗಲೇ ಅಂತಹ ಜ್ಞಾನವಿದ್ದರೂ ಪುನಃ 'ನೇಹ ನಾನಾಸ್ತಿ' ಇತ್ಯಾದಿ ಶ್ರುತಿಯಿಂದ ಅಂತಹ ಜ್ಞಾನ ಹುಟ್ಟುವುದೆಂದು ಹೇಳಿದಲ್ಲಿ ಈ ಮುಂದಿನ ಶ್ಲೋಕದಲ್ಲಿ ಅದನ್ನು ನಿರಾಕರಿಸಲಾಗಿದೆ-**

**ಅತೋ ನಾಸ್ತಿತ್ವಬೋಧೋಂತೇ ಕಥಮಸ್ಯೇತಿ ಚಿಂತ್ಯತೇ ।**
**ಅನುವಾದಿತಯಾ ವಾಕ್ಯಮಮಾನಂ ಸ್ಯಾದ್ಧಿ ತೇಷು ತೇ ॥ ೭೪೭ ॥**

**ಅರ್ಥ-** ಅತಃ= ಆದ್ದರಿಂದ, ಅಸ್ಯ= ಈಗಲೇ ನಾಸ್ತಿ ಎಂಬ ಜ್ಞಾನಕ್ಕೆ ವಿಷಯವಾದ ಪದಾರ್ಥಗಳಿಗೆ, ಅಂತೇ= ಕೊನೆಯಲ್ಲಿ, ನಾಸ್ತಿತ್ವಬೋಧಃ= ನಾಸ್ತಿತ್ವಜ್ಞಾನವು, ಕಥಂ= ಹೇಗೆ ಉಂಟಾಗುತ್ತದೆ ಎಂದು, ಚಿಂತ್ಯತೇ= ಚಿಂತಿಸಲ್ಪಡುತ್ತದೆ, ತೇಷು= ಮೊದಲೇ ನಷ್ಟವಾದ ವಸ್ತುಗಳ ವಿಷಯದಲ್ಲಿ, ವಾಕ್ಯಂ= ಚರಮಸಾಕ್ಷಾತ್ಕಾರಜನಕವಾದ ವಾಕ್ಯವಾದರೂ, ಅನುವಾದಿತಯಾ= ಅನುವಾದಕವಾಗುವುದರಿಂದ, ತೇ= ನಿನಗೆ, ಅಮಾನಂ ಸ್ಯಾದ್ಧಿ= ಅಪ್ರಮಾಣವಾಗುವುದಷ್ಟೇ ?

**ಅನುವಾದ-** ಆದ್ದರಿಂದ ಈಗಲೇ ನಾಸ್ತಿತ್ವ ಜ್ಞಾನ ಇರುವ ವಸ್ತುಗಳಿಗೆ ಕೊನೆಯಲ್ಲಿ ಹೇಗೆ ನಾಸ್ತಿತ್ವ ಜ್ಞಾನ ಉಂಟಾಗುತ್ತದೆ ಎಂದು ಚಿಂತಿಸಲ್ಪಡುತ್ತದೆ (ಕೊನೆಯಲ್ಲಿ ನಾಸ್ತಿತ್ವ ಜ್ಞಾನವು ಉಂಟಾಗುವುದಿಲ್ಲ ಎಂದು ಅಭಿಪ್ರಾಯ). ಈಗಿರುವ ನಾಸ್ತಿತ್ವವನ್ನೇ ಚರಮಜ್ಞಾನವು ತಿಳಿಸುತ್ತದೆ ಎಂದು ಹೇಳಿದರೆ ಆಗ ಚರಮಜ್ಞಾನವು ಅನುವಾದಕವಾಗುವುದರಿಂದ ನಿನ್ನ ರೀತಿಯಲ್ಲಿ ಅದು ಅಪ್ರಮಾಣವಾಗುತ್ತದೆ.

**ಭಾವವಿಲಾಸಿನೀ –** ಅತಃ ಇದಾನೀಮೇವ ನಾಸ್ತಿತ್ವಬೋಧಾತ್ । ಅಂತೇ ಬ್ರಹ್ಮಜ್ಞಾನದಶಾಯಾಮ್ । ಅಸ್ಯ ಇದಾನೀಮೇವ ನಾಸ್ತೀತಿ ಪ್ರತೀಯಮಾನಸ್ಯ ಜಗತಃ । ನಾಸ್ತಿತ್ವಬೋಧೋಽಪೀದಾನೀಮೇವ ಜಾಯತೇ ನ ತು ಬ್ರಹ್ಮಜ್ಞಾನದಶಾಯಾಮಿತಿ ಭಾವಃ । ಇದಾನೀಂ ಜ್ಞಾತಸ್ಯ ಪುನರ್ಬ್ರಹ್ಮಜ್ಞಾನದಶಾಯಾಮಪಿ ಜ್ಞಾನೇ ಕೋ ದೋಷ ಇತ್ಯತ ಆಹ – **ಅನುವಾದಿತಯೇತಿ** ॥ ವಾಕ್ಯಂ ಬ್ರಹ್ಮಜ್ಞಾನಜನಕ ವಾಕ್ಯಮ್ । ತೇಷು ಪ್ರಾಗೇವ ಪ್ರತ್ಯಕ್ಷಾದಿನಾ ನಾಸ್ತೀತಿ ಜ್ಞಾತೇಷು ॥ ೭೪೭ ॥

**ವಿವರಣೆ-** ಬ್ರಹ್ಮಾಪರೋಕ್ಷಜ್ಞಾನ ಉಂಟಾಗುವ ಸಮಯದಲ್ಲಿ ಜಗತ್ತಿನ ನಾಸ್ತಿತ್ವ ಬೋಧವು ಉಂಟಾಗುವುದೆಂದು ಅದ್ವೈತಿಗಳ ಆಶಯವಾಗಿದೆ. ಆದರೆ ಬ್ರಹ್ಮಜ್ಞಾನಕ್ಕಿಂತಲೂ ಮೊದಲೇ ಧ್ವಂಸ ಹೊಂದಿದ ಘಟಾದಿ ಪದಾರ್ಥಗಳು ನಾಸ್ತಿ ಎಂದು ತೋರುವುದರಿಂದ

ಬ್ರಹ್ಮಜ್ಞಾನಕಾಲದಲ್ಲಿ ನಾಸ್ತಿತ್ವ ಜ್ಞಾನ ಬರುವುದೆಂದು ಹೇಗೆ ಹೇಳಲು ಸಾಧ್ಯವೆಂದು ವಿಚಾರ ಮಾಡಬೇಕಾದ ಅಂಶವಾಗಿದೆ. ಮೊದಲೇ ನಾಸ್ತಿ ಎಂದು ತಿಳಿದ ವಸ್ತುಗಳು ಶ್ರುತಿಯಿಂದ ಬ್ರಹ್ಮಾಪರೋಕ್ಷಜ್ಞಾನ ಉಂಟಾಗುವ ಸಮಯದಲ್ಲಿ ಪುನಃ 'ನಾಸ್ತಿ' ಎಂದು ತೋರುವುದೆಂದು ಹೇಳಿದಲ್ಲಿ ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ ವಿಷಯವನ್ನೇ ಶ್ರುತಿಗಳು ಅನುವಾದ ಮಾಡುತ್ತಿರುವುದರಿಂದ, ಅನುವಾದಕ ವಾಕ್ಯಗಳು ಅಪ್ರಮಾಣವೆಂದು ಹೇಳುವ ಅದ್ವೈತ ಮತದ ಪ್ರಕಾರ 'ನೇಹ ನಾನಾಸ್ತಿ' ಇತ್ಯಾದಿ ಶ್ರುತಿಗಳೂ ಅಪ್ರಮಾಣವೆಂದು ಹೇಳಬೇಕಾಗುವುದು.

'ಅತಃ' ಎಂದರೆ ಈಗಲೇ ನಾಸ್ತಿತ್ವ ಜ್ಞಾನವಿರುವುದರಿಂದ ಎಂದು ಅರ್ಥ. 'ಅಂತೇ' ಎಂದರೆ ಬ್ರಹ್ಮಜ್ಞಾನ ಕಾಲದಲ್ಲಿ ಎಂದು ಅರ್ಥ. ಅಸ್ಯ= ಈಗಲೇ (ಬ್ರಹ್ಮಜ್ಞಾನ ಬರುವ ಮುಂಚೆಯೇ ನಾಸ್ತಿ ಎಂದು ತೋರುವ ಜಗತ್ತಿಗೆ, ನಾಸ್ತಿತ್ವಜ್ಞಾನವೂ ಈಗಲೇ ಉಂಟಾಗುವುದು ಹೊರತು ಬ್ರಹ್ಮಜ್ಞಾನಕಾಲದಲ್ಲಿ ಅಲ್ಲವೆಂದು ಭಾವ. ಈಗಲೇ ತಿಳಿದಿರುವ ನಾಸ್ತಿತ್ವವು ಪುನಃ ಬ್ರಹ್ಮಜ್ಞಾನ ಸಮಯದಲ್ಲೂ ತಿಳಿದುಬರುವುದೆಂದು ಹೇಳಿದರೆ ದೋಷವೇನು? ಎಂಬ ಶಂಕೆಗೆ ಉತ್ತರ 'ಅನುವಾದಿತಯಾ' ಎಂದು. ವಾಕ್ಯಂ= ಬ್ರಹ್ಮಜ್ಞಾನಕ್ಕೆ ಕಾರಣವಾದ (ಶ್ರುತಿ) ವಾಕ್ಯವು. ತೇಷು= ಮುಂಚೆಯೇ ಪ್ರತ್ಯಕ್ಷಾದಿ ಪ್ರಮಾಣಗಳಿಂದ ನಾಸ್ತಿ ಎಂದು ತಿಳಿದು ಬಂದಿರುವ ಪದಾರ್ಥಗಳ ವಿಷಯದಲ್ಲಿ.

**ಈಗ ನಾಶ ಹೊಂದುವ ಪದಾರ್ಥಗಳು ಜ್ಞಾನದಿಂದ ನಾಶವನ್ನು ಪಡೆಯುವುದಿಲ್ಲವಾದರೂ, ಪ್ರಲಯ ಕಾಲದಲ್ಲಿ ನಾಶವಾಗುವ ಪದಾರ್ಥಗಳು ಬ್ರಹ್ಮಜ್ಞಾನದಿಂದ ನಾಶವನ್ನು ಪಡೆಯುತ್ತವೆ ಎಂಬ ವಾದವನ್ನು ಈ ಮುಂದಿನ ಶ್ಲೋಕದಿಂದ ನಿರಾಕರಿಸಲಾಗಿದೆ-**

**ಕಿಂತು ಪ್ರಲಯಕಾಲೀನವಹ್ನ್ಯರ್ಕಾದ್ಯೈರ್ಜಗತ್ ಕ್ಷಯಃ ।**
**ಮುದ್ಗರಾದಿಕುಠಾರಾದ್ಯೈರ್ಮಧ್ಯೇ ಮಧ್ಯೇರ್ಥನಾಸ್ತಿತಾ ॥ ೭೪೮ ॥**

**ಅರ್ಥ-** ಕಿಂತು= ಆದರೆ, ಪ್ರಲಯಕಾಲೀನವಹ್ನ್ಯರ್ಕಾದ್ಯೈಃ= ಪ್ರಲಯಕಾಲದ ವಹ್ನಿ ಸೂರ್ಯ ಮೊದಲಾದವುಗಳಿಂದ, ಜಗತ್ ಕ್ಷಯಃ= ಜಗತ್ತಿನ ನಾಶವು ಉಂಟಾಗುತ್ತದೆ, ಮಧ್ಯೇ ಮಧ್ಯೇ= ಪ್ರಲಯಕ್ಕಿಂತಲೂ ಮೊದಲು ಸ್ಥಿತಿ ಕಾಲದಲ್ಲಿ ಮಧ್ಯ ಮಧ್ಯದಲ್ಲಿ, ಮುದ್ಗರಾದಿಕುಠಾರಾದ್ಯೈಃ= ದಂಡ ಕುಠಾರ ಮೊದಲಾದವುಗಳಿಂದ, ಅರ್ಥ ನಾಸ್ತಿತಾ= ಅರ್ಥ ನಾಸ್ತಿತ್ವವು ಉಂಟಾಗುತ್ತದೆ.

**ಅನುವಾದ-** **ಆದರೆ ಪ್ರಲಯಕಾಲದಲ್ಲಿ ವಹ್ನಿ ಸೂರ್ಯ ಮೊದಲಾದವುಗಳಿಂದ ಜಗತ್ ಕ್ಷಯ ಉಂಟಾಗುತ್ತದೆ. ಪ್ರಲಯಕ್ಕಿಂತಲೂ ಮೊದಲು ಸ್ಥಿತಿ ಕಾಲದಲ್ಲಿ ಮಧ್ಯ ಮಧ್ಯದಲ್ಲಿ ಮುದ್ಗರ ಕುಠಾರಾದಿಗಳಿಂದ ಅರ್ಥನಾಸ್ತಿತ್ವವು ಉಂಟಾಗುತ್ತದೆ.**

**ಭಾವವಿಲಾಸಿನೀ** – ಇದಾನೀಂ ನಷ್ಟಘಟಾದೀನಾಂ ಜ್ಞಾನೇನ ನಾಶಸ್ಯ ನಾಸ್ತಿತ್ವಬೋಧಸ್ಯ ಚಾಯೋಗೇಽಪಿ ಪ್ರಲಯೇ ನಶ್ಯಜ್ಜಗತೋ ಜ್ಞಾನೇನ ನಾಶೋ ವಾ ಕ್ರಿಯತೇ ನಾಸ್ತಿತ್ವಂ ವೋಲ್ಲಿಖ್ಯತ ಇತ್ಯತ ಆಹ – **ಕಿಂತ್ವಿತಿ** ।। ಜಗತ್ ಕ್ಷಯ ಇತ್ಯುಪಲಕ್ಷಣಮ್ । ನಾಸ್ತಿತ್ವಬೋಧೋಽಪಿ ಸಂಹೃತತ್ವಾದೇವ ಚಕ್ಷುರಾದ್ಯೈರೇವ ಭವತಿ । ನ ತು ತದರ್ಥಮಪಿ ಬ್ರಹ್ಮಜ್ಞಾನಮಪೇಕ್ಷ್ಯತ ಇತಿ ದ್ರಷ್ಟವ್ಯಮ್ । ನಾಸ್ತಿತೇತ್ಯುಪಲಕ್ಷಣಮ್ । ನಾಶೋಽಪಿ ಗ್ರಾಹ್ಯಃ । ಜ್ಞಾನೇನ ನಾಶೋ ನ ಚೇತ್ ಕೇನ ತಯೋರ್ನಾಶ ಇತಿ ಶಂಕಾಪರಿಹಾರಾಯೋಭಯತ್ರಾಪಿ ನಾಶಕಕಥನಮ್ । ಅತ ಏವ ಕಿಂತ್ವಿತ್ಯುಕ್ತಮ್ ।। ೭೪೮ ।।

**ವಿವರಣೆ**- ಈಗ ನಾಶಹೊಂದಿದ ಘಟಾದಿ ಪದಾರ್ಥಗಳು ಜ್ಞಾನದಿಂದ ನಾಶವನ್ನು ಪಡೆಯದಿದ್ದರೂ ಪ್ರಲಯ ಕಾಲದಲ್ಲಿ ಜಗತ್ತಿನ ನಾಶವು ಬ್ರಹ್ಮಜ್ಞಾನದಿಂದ ಆಗುವುದೆಂದು ಅದ್ವೈತಿಗಳು ಹೇಳಿದರೆ ಆ ವಾದವನ್ನೂ ಶ್ರೀವಾದಿರಾಜರು ನಿರಾಕರಿಸುತ್ತಾರೆ. ಪ್ರಲಯ ಕಾಲದಲ್ಲಿ ಜಗತ್ತಿನ ನಾಶವು ಆ ಕಾಲದ ಅಗ್ನಿ, ಸೂರ್ಯ ಮೊದಲಾದವುಗಳಿಂದ ಆಗುವುದು. ಪ್ರಲಯಕ್ಕೆ ಮುಂಚೆ ಸಂಸಾರದ ಮಧ್ಯಕಾಲದಲ್ಲಿ ಪದಾರ್ಥಗಳು ಒನಕೆ, ಕೊಡಲಿ ಮುಂತಾದ ಸಾಧನಗಳಿಂದ ಆಗುವುದು. ಹೀಗಾಗಿ, ಜಗತ್ತಿನ ಪದಾರ್ಥಗಳ ನಾಶವು ಎಂದೂ ಜ್ಞಾನದಿಂದ ಉಂಟಾಗುವುದಿಲ್ಲವಾದ್ದರಿಂದ ಜ್ಞಾನ ಬಾಧ್ಯತ್ವರೂಪವಾದ ಮಿಥ್ಯಾತ್ವವನ್ನು ಶ್ರುತಿಗಳು ಹೇಳುವವು ಎಂಬ ಅದ್ವೈತವಾದ ಸಮಂಜಸವಲ್ಲ.

ಈಗ ನಾಶ ಹೊಂದಿದ ಘಟಾದಿಗಳಿಗೆ ಜ್ಞಾನದಿಂದ ನಾಶವಾಗಲಿ, ನಾಸ್ತಿತ್ವ ಬೋಧವಾಗಲಿ ಆಗದಿದ್ದರೂ ಪ್ರಲಯ ಕಾಲದಲ್ಲಿ ನಾಶವಾಗುವ ಜಗತ್ತು ಜ್ಞಾನದಿಂದ ನಾಶವನ್ನು ಹೊಂದುವುದು ಅಥವಾ ಜ್ಞಾನವು ಜಗತ್ತಿನ ನಾಸ್ತಿತ್ವವನ್ನು ಗ್ರಹಿಸುವುದು ಎಂಬ ವಾದಕ್ಕೆ ಉತ್ತರವಾಗಿ 'ಕಿಂತು' ಇತ್ಯಾದಿಯಾಗಿ ಹೇಳಲಾಗಿದೆ. (ಶ್ಲೋಕದಲ್ಲಿ) ಜಗತ್ತಿನ ಕ್ಷಯ ಎಂದು ಹೇಳಿರುವುದು ಉಪಲಕ್ಷಣವಾಗಿದೆ. ಜಗತ್ತಿನ ನಾಸ್ತಿತ್ವ ಜ್ಞಾನವೂ ಜಗತ್ತು ನಾಶಹೊಂದಿರುವುದರಿಂದ ಚಕ್ಷುರಾದಿ ಇಂದ್ರಿಯಗಳಿಂದಲೇ ಉಂಟಾಗುವುದು. ಆದ್ದರಿಂದ ಅಂತಹ ನಾಸ್ತಿತ್ವಜ್ಞಾನಕ್ಕಾಗಿಯೂ ಬ್ರಹ್ಮಜ್ಞಾನದ ಆವಶ್ಯಕತೆ ಇಲ್ಲವೆಂದು ತಿಳಿಯಬೇಕು. (ಶ್ಲೋಕದಲ್ಲಿ) ನಾಸ್ತಿತಾ ಅಂದರೆ ಅಭಾವವು ಎಂದು ಹೇಳಿದ್ದು ಉಪಲಕ್ಷಣ. ನಾಶವನ್ನೂ ಆ ಪದದಿಂದ ಗ್ರಹಿಸಬೇಕು. ಜ್ಞಾನದಿಂದ ನಾಶವಾಗದಿದ್ದರೆ, ಬೇರೆ ಯಾವ ಸಾಧನದಿಂದ ಅವುಗಳ ನಾಶವಾಗುವುದೆಂಬ ಶಂಕೆಯನ್ನು ಪರಿಹರಿಸಲು ಪ್ರಲಯ ಕಾಲ ಹಾಗು ಅದಕ್ಕೆ ಮುಂಚಿನ ಕಾಲ. ಈ ಎರಡೂ ಸಂದರ್ಭಗಳಲ್ಲಿ ಪದಾರ್ಥಗಳ ನಾಶಕ್ಕೆ ಸಾಧನಗಳನ್ನು ಹೇಳಲಾಗಿದೆ. ಹೀಗೆ ಬೇರೆ ಸಾಧನಗಳನ್ನು ಹೇಳುವ ದೃಷ್ಟಿಯಿಂದಲೇ 'ಕಿಂತು' ಎಂದು ಹೇಳಲಾಗಿದೆ.

ಅದ್ವೈತ ಸಿದ್ಧಾಂತದ ಮಿಥ್ಯಾವಾದವು ಅಪೇಕ್ಷಿತ ಫಲವನ್ನು ನೀಡಲಾಗದಿರುವುದರಿಂದ ವ್ಯರ್ಥವೇ ಸರಿ ಎಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

**ತಚ್ಛಿನ್ನಮೂಲಶಾಖಾಗ್ರೋ ಮಿಥ್ಯಾವಾದಾಖ್ಯಪಾದಪಃ ।**
**ನ ಫಲಾಯ ನ ಪತ್ರಾಯ ನ ಚ್ಛಾಯಾಯೈ ಭವೇತ್ ತವ ॥ ೭೪೯ ॥**

**ಅರ್ಥ-** ತತ್= ಆದ್ದರಿಂದ, ಛಿನ್ನಮೂಲಶಾಖಾಗ್ರಃ= ಛಿನ್ನವಾದ ಮೂಲವನ್ನು ಛಿನ್ನವಾದ ಶಾಖಾಗ್ರವನ್ನು ಹೊಂದಿದ, ಮಿಥ್ಯಾವಾದಾಖ್ಯಪಾದಪಃ= ಮಿಥ್ಯಾವಾದವೆಂಬ ವೃಕ್ಷವು, ತವ= ನಿನಗೆ, ಫಲಾಯ ನ ಭವೇತ್= ಫಲವನ್ನು ಕೊಡಲಾರದು, ಪತ್ರಾಯ ನ ಭವೇತ್= ಪತ್ರವನ್ನೂ ಕೊಡಲಾರದು, ಚ= ಮತ್ತು, ಛಾಯಾಯೈ ನ ಭವೇತ್= ನೆರಳನ್ನೂ ಕೊಡಲಾರದು.

**ಅನುವಾದ-** ಆದ್ದರಿಂದ ಛಿನ್ನವಾದ ಮೂಲವನ್ನೂ ಛಿನ್ನವಾದ ಶಾಖಾಗ್ರವನ್ನೂ ಹೊಂದಿರುವ ಮಿಥ್ಯಾವಾದವೆಂಬ ವೃಕ್ಷವು ನಿನಗೆ ಫಲವನ್ನಾಗಲೀ, ಪತ್ರವನ್ನಾಗಲೀ ಅಥವಾ ನೆರಳನ್ನಾಗಲೀ ಕೊಡುವುದಿಲ್ಲ.

**ಭಾವವಿಲಾಸಿನೀ –** ತತ್ ತಸ್ಮಾತ್ । ಪ್ರಾಜನಷ್ಟೇ ಪ್ರಲಯಕಾಲನಷ್ಟೇ ಚ ನಾಶನಾಸ್ತಿತ್ವ-ಬೋಧಯೋರನ್ಯಫಲತ್ವೇನ ಬ್ರಹ್ಮಜ್ಞಾನಫಲತ್ವಾಯೋಗಾತ್ ಛಿನ್ನಂ ಮೂಲಂ ಇದಾನೀಂತನ-ನಾಸ್ತಿತ್ವಾಖ್ಯಂ, ಶಾಖಾಗ್ರಂ ಪ್ರಲಯಕಾಲೀನನಾಶನಾಸ್ತಿತ್ವಾಖ್ಯಂ ಚ ಯಸ್ಯ । ಉಭಯತ್ರಾಪಿ ಜ್ಞಾನನಾಶ್ಯತ್ವಸ್ಯ ಜ್ಞಾನೇನೈವ ನಾಸ್ತಿತಯೋಲ್ಲಿಖ್ಯಮಾನತ್ವಸ್ಯ ಚಾಭಾವೇನ ಮಿಥ್ಯಾತ್ವಸ್ಯೈವ ಭಗ್ನತ್ವಾದಿತಿ ಭಾವಃ । ಅಥವಾ ಉಕ್ತಪ್ರಕಾರೇಣ ಸ್ವಪ್ರಕ್ರಿಯಯೈವಾರೋಪಾಯೋಗಾದ್ ಬಾಧಯೋಗಾಚ್ಚ । ಛಿನ್ನಮಾರೋಪಾಖ್ಯಂ ಮೂಲಂ ಬಾಧಾಖ್ಯಶಾಖಾಗ್ರಂ ಚ ಯಸ್ಯ ಸ ತಥೋಕ್ತಃ । ಅಲ್ಪತ್ವಾದಾದಿತ್ವಾಚ್ಚಾದ್ಯಸ್ಯ ಮೂಲತಾ ಬಹುವಿಸ್ತಾರವತ್ತ್ವಾದಂತ್ಯಸ್ಯಾಗ್ರತಾ । ಮಿಥ್ಯಾಭೂತಾರ್ಥೇ ಆರೋಪಸ್ಯ ಪೂರ್ವಕಾಲೀನತ್ವಾದ್ಬಾಧಸ್ಯ ಚ ಚರಮಕಾಲೀನತ್ವಾತ್ ಉಭಯಾಭಾವೇ ಮಿಥ್ಯಾತ್ವಸ್ಯ ಸುತರಾಮಭಾವಾಚ್ಚೈವಮುಕ್ತಮಿತಿ ಜ್ಞಾತವ್ಯಮ್ ॥ ೭೪೯ ॥

**ವಿವರಣೆ-** ಬ್ರಹ್ಮಜ್ಞಾನದಿಂದ ಜಗತ್ತು ನಾಶ ಹೊಂದುವುದು ಅಥವಾ ಜಗತ್ತು ನಾಸ್ತಿ, ನಾಸೀತ್, ನ ಭವಿಷ್ಯತಿ ಎಂಬ ಬೋಧವು ಬ್ರಹ್ಮಜ್ಞಾನದಿಂದ ಉಂಟಾಗುವುದು ಎಂದು ಸಿದ್ಧವಾಗುವುದೇ 'ಜಗತ್ತು ಮಿಥ್ಯೆ' ಎಂಬ ಮಿಥ್ಯಾವಾದದ ಫಲವಾಗಿದೆ. ಆದರೆ, ಈಗಾಗಲೇ ನಿರೂಪಿಸಿದಂತೆ ಸಂಸಾರ ಕಾಲದಲ್ಲಾಗಲಿ, ಪ್ರಲಯಕಾಲದಲ್ಲಾಗಲಿ ಜಗತ್ತಿನ ನಾಶ ಅಥವಾ ಅದರ ನಾಸ್ತಿತ್ವಜ್ಞಾನ ಕಾರಣಾಂತರಗಳಿಂದ ಉಂಟಾಗುವುದೇ ಹೊರತು ಬ್ರಹ್ಮಜ್ಞಾನದಿಂದಲ್ಲ ಎಂದು ಸಿದ್ಧವಾಗುವುದರಿಂದ ಮಿಥ್ಯಾವಾದ ವೃಕ್ಷವು ಅದ್ವೈತ ಸಿದ್ಧಾಂತವು ಅಪೇಕ್ಷಿಸುವ ಯಾವ ಫಲವನ್ನೂ ನೀಡದಿರುವುದರಿಂದ ಹಣ್ಣು, ಎಲೆ, ನೆರಳು ಯಾವುದನ್ನೂ ನೀಡದ ಮರದಂತೆ ನಿರುಪಯುಕ್ತವೇ ಸರಿ ಎಂದು ಭಾವ.

ಶ್ಲೋಕದಲ್ಲಿ 'ತತ್' ಎಂದು ಪದವಿಭಾಗ ಮಾಡಬೇಕು. ಆದ್ದರಿಂದ ಅಂದರೆ ಹಿಂದೆ ಹೇಳಲಾದ ಕಾರಣಗಳಿಂದ ಎಂದು ಅರ್ಥ. ಮೊದಲೇ ನಷ್ಟವಾದ ಮತ್ತು ಪ್ರಲಯ ಕಾಲದಲ್ಲಿ ನಷ್ಟವಾದ ಪದಾರ್ಥಗಳ ನಾಶ ಅಥವಾ ಅವುಗಳು 'ನಾಸ್ತಿ' ಎಂಬ ಜ್ಞಾನವು ಇನ್ನೊಂದರ ಫಲವಾಗಿರುವುದರಿಂದ, ಬ್ರಹ್ಮಜ್ಞಾನದ ಫಲವಾಗಲು ಸಾಧ್ಯವಿಲ್ಲವಾದ್ದರಿಂದ (ಮಿಥ್ಯಾವಾದವೆಂಬ ವೃಕ್ಷವು) 'ಈಗ ಇಲ್ಲದಿರುವಿಕೆ' ಎಂಬ ಕತ್ತರಿಸಿದ ಬೇರನ್ನುಳ್ಳದ್ದಾಗಿದೆ ಅಂತೆಯೇ ಪ್ರಲಯಕಾಲದ ನಾಶ ಅಥವಾ ನಾಸ್ತಿತ್ವ ಬೋಧವೆಂಬ ಕತ್ತರಿಸಿದ ಕೊಂಬೆಯ ತುದಿಭಾಗವನ್ನುಳ್ಳದ್ದಾಗಿದೆ. ಎರಡೂ ಸ್ಥಳಗಳಲ್ಲಿ ಜ್ಞಾನದಿಂದ ನಾಶವಾಗುವಿಕೆ ಅಥವಾ ಜ್ಞಾನವು 'ನಾಸ್ತಿ' ಎಂದು ಗ್ರಹಿಸುವುದು ಇಲ್ಲವಾದ್ದರಿಂದ ಜಗನ್ಮಿಥ್ಯಾತ್ವವೇ ಭಗ್ನವಾಗಿದೆ ಎಂದು ಭಾವ.

ಅಥವಾ, ಈಗಾಗಲೇ ಹೇಳಿದಂತೆ ತನ್ನ ಪ್ರಕ್ರಿಯೆಗನುಗುಣವಾಗಿಯೇ ಆರೋಪ ಮತ್ತು ಬಾಧಗಳು ಯುಕ್ತವಾಗದಿರುವುದರಿಂದ ಮಿಥ್ಯಾವಾದವೆಂಬ ವೃಕ್ಷದ ಆರೋಪವೆಂಬ ಬೇರು ಮತ್ತು ಬಾಧವೆಂಬ ಕೊಂಬೆಯ ಅಗ್ರಭಾಗ ಛಿನ್ನವಾಗಿದೆ ಎಂದು ಅಭಿಪ್ರಾಯ. (ಸಂಸಾರ ಕಾಲದಲ್ಲಿ ಆಗುವ ಘಟಾದಿ ಜಗತ್ತಿನ ನಾಶವು) (ಅಲ್ಪವಾದುದರಿಂದ ಮತ್ತು ಮೊದಲು ಸಂಭವಿಸುವುದರಿಂದ ಅದನ್ನು ಬೇರೊಂದು, ಪ್ರಲಯಕಾಲದ ಜಗನ್ನಾಶವು) ಬಹುವಿಸ್ತಾರವನ್ನು ಪಡೆದಿರುವುದರಿಂದ ಮತ್ತು ಕೊನೆಯದ್ದಾದುದರಿಂದ ಮರದ ತುದಿಯೆಂದೂ ಹೇಳಲಾಗಿದೆ. ಮಿಥ್ಯೆಯಾದ ವಿಷಯಗಳ ಭ್ರಾಂತಿಯು ಮೊದಲು ಉಂಟಾಗುವುದರಿಂದ, ಅವುಗಳ ಬಗ್ಗೆ ಬಾಧವು ಕೊನೆಗೆ ಉಂಟಾಗುವುದರಿಂದ, ಎರಡೂ ಇಲ್ಲವಾದರೆ ಮಿಥ್ಯಾತ್ವವೇ ಸುತರಾಂ ಇಲ್ಲವಾಗುವುದರಿಂದ (ಈ ಶ್ಲೋಕದಲ್ಲಿ) ಹೀಗೆ ಹೇಳಲಾಗಿದೆ ಎಂದು ತಿಳಿಯಬೇಕು.

ಭೇದ, ಪರಬ್ರಹ್ಮನ ಗುಣಗಳು ಮತ್ತು ಜಗತ್ತು ಇವುಗಳು ಪಾರಮಾರ್ಥಿಕ ಸತ್ಯವೆಂದು ಸಾಧಿಸುವ ಅನುಮಾನವನ್ನು ಈ ಮುಂದಿನ ಶ್ಲೋಕದಲ್ಲಿ ಪ್ರಯೋಗಿಸಲಾಗಿದೆ-

ಇದಾನೀಂ ಬಾಧ್ಯರಜತಾಧಿಕಸತ್ತಾಶ್ರಯತ್ವತಃ ।
ಭೇದೋ ಬ್ರಹ್ಮಗುಣಾ ವಿಶ್ವಂ ಬ್ರಹ್ಮವತ್ ಪರಮಾರ್ಥಸತ್ ॥ ೭೫೦ ॥

**ಅರ್ಥ-** ಭೇದಃ= ಭೇದವು, ಬ್ರಹ್ಮಗುಣಾಃ= ಬ್ರಹ್ಮಗುಣಗಳು, ವಿಶ್ವಂ= ಜಗತ್ತೂ ಸಹ, ಬ್ರಹ್ಮವತ್= ಬ್ರಹ್ಮನಂತೆ, ಇದಾನೀಂ ಬಾಧ್ಯರಜತಾಧಿಕಸತ್ತಾಶ್ರಯತ್ವತಃ= ಈ ಕಾಲದಲ್ಲೇ ಬಾಧ್ಯವಾದ ರಜತಕ್ಕಿಂತಲೂ ಹೆಚ್ಚಿನ ಸತ್ತ್ವವನ್ನು ಹೊಂದಿರುವುದರಿಂದ, ಪರಮಾರ್ಥಸತ್= ಪಾರಮಾರ್ಥಿಕ ಸತ್ಯವೇ ಆಗುತ್ತದೆ.

**ಅನುವಾದ-** 'ಭೇದಃ ಬ್ರಹ್ಮಗುಣಾಃ ವಿಶ್ವಂ ಚ, ಪಾರಮಾರ್ಥಿಕ ಸತ್ಯಂ, ಇದಾನೀಂ ಬಾಧ್ಯ ರಜತಾಧಿಕಸತ್ತಾವತ್ತ್ವಾತ್ ಬ್ರಹ್ಮವತ್' ಎಂಬ ಅನುಮಾನದಿಂದ ಭೇದಕ್ಕೂ ಮತ್ತು ಜಗತ್ತಿಗೂ ಪಾರಮಾರ್ಥಿಕಸತ್ತ್ವವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ** – ಪುನರಪ್ಯನುಮಾನಾಂತರೇಣ ಭೇದಸ್ಯ ಬ್ರಹ್ಮಗುಣಾನಾಂ ವಿಶ್ವಸ್ಯ ಚ ಸತ್ಯತಾಂ ಸ್ಥಾಪಯತಿ ॥ ಇದಾನೀಮಿತಿ ॥ ೭೫೦ ॥

**ವಿವರಣೆ-** ಅದ್ವೈತಮತದ ಪ್ರಕಾರ ಶುಕ್ತಿಯಲ್ಲಿ ಭ್ರಾಂತಿಯಿಂದಾಗಿ ತೋರುವ ರಜತವು ಸಂಸಾರ ಕಾಲದಲ್ಲೇ ಬಾಧಜ್ಞಾನಕ್ಕೆ ವಿಷಯವಾಗಿ ಪ್ರಾತಿಭಾಸಿಕ ಸತ್ಯವೆನಿಸಿದೆ. ಪರಬ್ರಹ್ಮನು ಶುಕ್ತಿರಜತಕ್ಕಿಂತ ಹೆಚ್ಚಿನ ಸತ್ಯತೆಯನ್ನು ಪಡೆದಿದ್ದು ಪಾರಮಾರ್ಥಿಕ ಸತ್ಯವೆಂದು ಒಪ್ಪಲಾಗಿದೆ. ಶ್ರೀವಾದಿರಾಜರು, ಪರಬ್ರಹ್ಮನಂತೆ ಸಂಸಾರಕಾಲದಲ್ಲೇ ಬಾಧಿತವಾದ ಪಂಚವಿಧ ಭೇದಗಳು, ಶ್ರುತಿಗಳಿಂದ ತಿಳಿದುಬರುವ ಪರಮಾತ್ಮನ ಗುಣಗಳು ಮತ್ತು ಜಗತ್ತು ಪರಮಾತ್ಮನಂತೆ ಶುಕ್ತಿ ರಜತದ ಸತ್ಯತ್ವಕ್ಕಿಂತ ಹೆಚ್ಚಿನ ಮಟ್ಟದ ಸತ್ಯತ್ವವುಳ್ಳವುಗಳಾದ್ದರಿಂದ ಪರಮಾತ್ಮನಂತೆ ಪಾರಮಾರ್ಥಿಕ ಸತ್ಯವಾಗಿರಬೇಕೆಂದು ಅನುಮಾನ ಪ್ರಮಾಣದಿಂದ ಸಾಧಿಸುತ್ತಿದ್ದಾರೆ.

ಮತ್ತೊಮ್ಮೆ, ಇನ್ನೊಂದು ಅನುಮಾನದ ಮೂಲಕ ಭೇದ, ಬ್ರಹ್ಮನ ಗುಣಗಳೂ ಮತು ಜಗತ್ತು ಇವುಗಳಿಗೆ 'ಇದಾನೀಂ' ಎಂಬ ಶ್ಲೋಕದಲ್ಲಿ ಸತ್ಯತ್ವವನ್ನು ಸ್ಥಾಪಿಸುತ್ತಿದ್ದಾರೆ. ಮೇಲೆ ಹೇಳಿದ ಅನುಮಾನಕ್ಕೆ ವ್ಯಭಿಚಾರ ದೋಷವಿಲ್ಲವೆಂದು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ-

**ದೇಹಾತ್ಮನೋರೇಕತಾ ಚ ನಭೋನೈಲ್ಯಂ ಚ ತೇ ಮತೇ ।**
**ಯತ್ ಪ್ರಾತಿಭಾಸಿಕಂ ಸರ್ವಂ ತದ್ಧೇತುರ್ನ ವಿಪಕ್ಷಗಃ ॥ ೭೫೧ ॥**

**ಅರ್ಥ-** ತೇ ಮತೇ= ನಿನ್ನ ಮತದಲ್ಲಿ, ದೇಹಾತ್ಮನೋರೇಕತಾ ಚ= ದೇಹಾತ್ಮೈಕ್ಯವು, ನಭೋನೈಲ್ಯಂ ಚ= ಮತ್ತು ನಭೋನೈಲ್ಯವು, ಯತ್= ಯಾವ ಕಾರಣದಿಂದ, ಪ್ರಾತಿಭಾಸಿಕಂ= ಪ್ರಾತಿಭಾಸಿಕವಾಗಿದೆಯೋ, ಆದ್ದರಿಂದ, ಹೇತುಃ= ನಾವು ಪ್ರಯೋಗಿಸಿರುವ ಹೇತುವು, ನ ವಿಪಕ್ಷಗಃ= ವಿಪಕ್ಷವೃತ್ತಿಯಾಗಿಲ್ಲ.

**ಅನುವಾದ-** ದೇಹಾತ್ಮೈಕ್ಯವು ಮತ್ತು ನಭೋನೈಲ್ಯಾದಿ ನಿನ್ನ ಮತದಲ್ಲಿ ಪ್ರಾತಿಭಾಸಿಕವಾಗಿರುವುದರಿಂದ ಈ ಅನುಮಾನದಲ್ಲಿ ನಾವು ಪ್ರಯೋಗಿಸಿದ ಹೇತುವಿಗೆ ವಿಪಕ್ಷವೃತ್ತಿತ್ವವಿಲ್ಲ.

**ಭಾವವಿಲಾಸಿನೀ** – ಯತ್ ಯಸ್ಮಾತ್ । ತತ್ ತಸ್ಮಾತ್ ಪ್ರಾತಿಭಾಸಿಕತ್ವೇನ ಶುಕ್ತಿರಜತಾಧಿಕ ಸತ್ತಾಶ್ರಯತ್ವಾಭಾವಾತ್ ॥ ೭೫೧ ॥

**ವಿವರಣೆ-** ಘಟಾದಿ ಜಗತ್ತಿಗೆ ಸಂಸಾರ ಕಾಲದಲ್ಲಿ ಹೇಗೆ ಬಾಧವಿಲ್ಲವೋ ಅದರಂತೆ 'ನಾನು ಕೃಶ', 'ನಾನು ಸ್ಥೂಲ' ಇತ್ಯಾದಿ ಭ್ರಮಕ್ಕೆ ವಿಷಯವಾಗಿರುವ ದೇಹಾತ್ಮೈಕ್ಯಕ್ಕೂ ಬಾಧವಿಲ್ಲ. ಹಾಗೆಯೇ ಆಕಾರದಲ್ಲಿ ತೋರುವ ನೀಲವರ್ಣಕ್ಕೂ ಈಗ ಬಾಧವಿಲ್ಲ. ಆದ್ದರಿಂದ ಈಗ ಬಾಧ್ಯವಾಗಿರುವ ಶುಕ್ತಿರಜತಕ್ಕಿಂತಲೂ ಹೆಚ್ಚಿನ ಸತ್ಯತ್ವ ಅವುಗಳಲ್ಲಿ ಇದೆ

ಎಂದು ಒಪ್ಪಬೇಕಾಗುವುದು. ಆದರೆ ಅವುಗಳಲ್ಲಿ ಪಾರಮಾರ್ಥಿಕ ಸತ್ಯತ್ವವೆಂಬ ಸಾಧ್ಯವಿಲ್ಲ. ಆದ್ದರಿಂದ ನಿಮ್ಮ ಅನುಮಾನದ ಹೇತು ಸಾಧ್ಯವಿಲ್ಲದಿರುವ, ಆದ್ದರಿಂದ ವಿಪಕ್ಷವೆನಿಸುವ ದೇಹಾತ್ಮೈಕ್ಯ ಮತ್ತು ನಭೋನೈಲ್ಯಗಳಲ್ಲಿ ಇರುವುದರಿಂದ ನಿಮ್ಮ ಅನುಮಾನಕ್ಕೆ ವ್ಯಭಿಚಾರ ದೋಷವಿದೆ ಎಂಬ ಅದ್ವೈತಿಗಳ ವಾದವನ್ನು ಶ್ರೀರಾಜರು ಇಲ್ಲಿ ನಿರಾಕರಿಸುತ್ತಿದ್ದಾರೆ. ಪಾರಮಾರ್ಥಿಕ ಸತ್ಯವಲ್ಲದ ದೇಹಾತ್ಮೈಕ್ಯ ಮೊದಲಾದವು ಅದ್ವೈತ ಮತದ ಪ್ರಕಾರ ಪ್ರಾತಿಭಾಸಿಕವೇ ಆಗಿವೆ. ಆದ್ದರಿಂದ ಶುಕ್ತಿರಜತದ ಸತ್ಯತ್ವ ಮತ್ತು ದೇಹಾತ್ಮೈಕ್ಯಾದಿಗಳ ಸತ್ಯತ್ವ ಇವುಗಳು ಸಮಾನವಾಗಿದ್ದು 'ಅಧಿಕಸತ್ತಾಶ್ರಯತ್ವ' ಎಂಬ ಹೇತುವೂ ದೇಹಾತ್ಮೈಕ್ಯಾದಿಗಳಲ್ಲಿ ಇಲ್ಲ. ಆದ್ದರಿಂದ ವ್ಯಭಿಚಾರ ದೋಷಕ್ಕೆ ಈ ಅನುಮಾನದಲ್ಲಿ ಅವಕಾಶವಿಲ್ಲವೆಂದು ತಾತ್ಪರ್ಯ.

ಯತ್= ಯಾವ ಕಾರಣದಿಂದ, ತತ್= ಆ ಕಾರಣದಿಂದ ಅಂದರೆ ಪ್ರಾತಿಭಾಸಿಕ ಆಗಿರುವುದರಿಂದ ಶುಕ್ತಿರಜತಕ್ಕಿಂತಲೂ ಹೆಚ್ಚಿನ ಸತ್ಯತ್ವಕ್ಕೆ ಆಶ್ರಯವಾಗಿಲ್ಲದಿರುವುದರಿಂದ.

**ವಸ್ತುತಃ, ಶುಕ್ತಿರಜತ ಹೇಗೆ ಸಂಸಾರ ಕಾಲದಲ್ಲೇ ಬಾಧ್ಯವಾಗಿದೆಯೋ ಅದರಂತೆಯೇ ನಭೋನೈಲ್ಯ ಮತ್ತು ದೇಹಾತ್ಮೈಕ್ಯಗಳೂ ಸಂಸಾರ ಕಾಲದಲ್ಲೇ ಬಾಧ್ಯವಾಗಿದ್ದು, ಬ್ರಹ್ಮಜ್ಞಾನದಿಂದಲೇ ಅವುಗಳು ಬಾಧ್ಯವಾಗುತ್ತವೆ ಎಂಬ ಅದ್ವೈತ ಮತದ ವಾದವೇ ಅಯುಕ್ತವೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಿದ್ದಾರೆ-**

ಬಾಧ್ಯಂ ಯಚ್ಛುಕ್ತಿರೂಪ್ಯಾದಿ ತದದ್ಯೈವ ಹಿ ಬಾಧ್ಯತೇ ।
ನಭೋನೈಲ್ಯಂ ಚ ತತ್ರತ್ಯೈರ್ನ ನೀಲಮಿತಿ ಬಾಧ್ಯತೇ ॥ ೭೫೨ ॥

**ಅರ್ಥ-** ಬಾಧ್ಯಂ= ಬಾಧ್ಯಮಾನವಾದ, ಯತ್= ಯಾವ, ಶುಕ್ತಿರೂಪ್ಯಾದಿ= ಶುಕ್ತಿರಜತಾದಿಗಳು ಇದೆಯೋ, ತತ್= ಅದು, ಅದ್ಯೈವ= ಈಗಲೇ, ಬಾಧ್ಯತೇ ಹಿ= ಬಾಧಿಸಲ್ಪಡುವುದಷ್ಟೇ, ನಭೋನೈಲ್ಯಂ ಚ= ನಭೋನೈಲ್ಯವೂ ಕೂಡ, ಅದ್ಯೈವ= ಈಗಲೇ, ತತ್ರತ್ಯೈಃ= ಆ ಪ್ರದೇಶದಲ್ಲಿರುವ ಜನರಿಂದ, ನ ನೀಲಮಿತಿ= ಆಕಾಶವು ನೀಲವಾಗಿಲ್ಲ ಎಂದು, ಬಾಧ್ಯತೇ= ಬಾಧಿಸಲ್ಪಡುತ್ತದೆ.

**ಅನುವಾದ-** ಬಾಧ್ಯವಾದ ಶುಕ್ತಿರೂಪ್ಯಾದಿಗಳು ಈಗಲೇ ಬಾಧಿಸಲ್ಪಡುತ್ತವೆ. ನಭೋನೈಲ್ಯವಾದರೂ ಆ ಪ್ರದೇಶದಲ್ಲಿರುವ ಜನರಿಂದ ಆಕಾಶವು ನೀಲಿಯಾಗಿಲ್ಲ ಎಂದು ಈಗಲೇ ಬಾಧಿಸಲ್ಪಡುತ್ತದೆ.

**ಭಾವವಿಲಾಸಿನೀ –** ಕಿಂ ಚ ಬಾಧ್ಯಂ ಸರ್ವಮಿದಾನೀಮೇವ ಬಾಧ್ಯತೇ । ಅನಾದಿಕಾಲಮಾರಭ್ಯ ಏತಾವತ್ಕಾಲಪರ್ಯಂತಮಬಾಧಿತಸ್ಯ ಜಗತೋ ಬ್ರಹ್ಮವದುಪರ್ಯಪಿ ನ ಬಾಧ ಇತಿ ವಕ್ತುಂ ನಭೋನೈಲ್ಯಭ್ರಮೇ ದೇಹಾತ್ಮೈಕ್ಯಭ್ರಮೇ ಚ ಯತ್ತತ್ಯೈರಿದಾನೀಮಬಾಧ್ಯತ್ವೇ ಸತಿ ಬ್ರಹ್ಮಜ್ಞಾನೇನೈವ ಬಾಧ್ಯತ್ವಮಂಗೀಕೃತಮ್ ತನ್ನಿರಾಸಾಯ ತಯೋರುಭಯೋರ್ವಸ್ತುಸ್ಥಿತಿಂ ಪ್ರದರ್ಶಯತಿ॥ **ಬಾಧ್ಯಮಿತಿ॥** ತತ್ರತ್ಯೈಃ ಭ್ರಾಮ್ಯಮಾಣನಭೋದೇಶಸ್ಥೈಃ ಸ್ವಸಮೀಪಸ್ಥೇ ನಭಸಿ । ನ ಕಸ್ಯಾಪಿ ಭ್ರಮಃ।

ಕಿಂತು ದೂರಸ್ಥೇ। ತತ್ರಾಪಿ ತತ್ರತ್ಯಸ್ಯ ನ ನೀಲಮಿತಿ ಧೀರಸ್ತ್ಯೇವ। ಅತಸ್ತಸ್ಯಾಪೀದಾನೀಮೇವ ಬಾಧ್ಯತ್ವಮಿತಿ ಭಾವಃ ॥ ೭೫೨ ॥

**ವಿವರಣೆ-** ಬಾಧ್ಯವಾಗುವ ಪದಾರ್ಥಗಳಲ್ಲಿ ಎರಡು ವಿಧ. ಕೆಲವು ಸಂಸಾರಕಾಲದಲ್ಲೇ ಬಾಧ್ಯವಾಗತಕ್ಕವು ಶುಕ್ತಿರಜತಾದಿಗಳು ಈ ವರ್ಣಕ್ಕೆ ಸೇರಿದವು. ಇನ್ನು ಕೆಲವು ಬ್ರಹ್ಮಜ್ಞಾನದಿಂದಲೇ ಬಾಧ್ಯವಾಗುವವು. ನಭೋನೈಲ್ಯ, ದೇಹಾತ್ಮೈಕ್ಯಗಳು ಇಂತಹವು. ಅವುಗಳು ಮಿಥ್ಯೆ ಎಂದು ನಾವು ತಿಳಿದಿದ್ದರೂ ಅವುಗಳಿಗೆ ಬಾಧ ಬರುವುದು ಬ್ರಹ್ಮಜ್ಞಾನದ ನಂತರವೇ ಎಂದು ಅದ್ವೈತ ಮತದ ಅಭಿಪ್ರಾಯ. ಆದರೆ, ವಸ್ತುಸ್ಥಿತಿ ಹಾಗಿಲ್ಲ. ಬಾಧ್ಯವೆಂದು ಒಪ್ಪಲಾದ ಎಲ್ಲವುಗಳಿಗೂ ಬ್ರಹ್ಮಜ್ಞಾನಕ್ಕೆ ಮುಂಚೆಯೇ ಬಾಧವಿರುತ್ತದೆ. ದೂರದಲ್ಲಿರುವ ನಮಗೆ ಆಕಾಶ ನೀಲಿಯಾಗಿದೆ ಎಂದು ಕಂಡರೂ ಆ ಪ್ರದೇಶದಲ್ಲೇ ಇರುವವರಿಗೆ ಆಕಾಶವು ನೀಲಿಯಾಗಿಲ್ಲ ಎಂಬ ಬಾಧಜ್ಞಾನವು ಈಗಲೇ ಇದೆ ಎಂದು ಶ್ರೀ ರಾಜರು ಅದ್ವೈತಿಗಳ ವಾದವನ್ನು ನಿರಾಕರಿಸುತ್ತಿದ್ದಾರೆ.

ಮತ್ತು, ಬಾಧ್ಯವಾದುದೆಲ್ಲವೂ ಈಗಲೇ ಬಾಧಿಸಲ್ಪಡುತ್ತದೆ. ಅನಾದಿಕಾಲದಿಂದ ಈ ಕಾಲದವರೆಗೆ ಬಾಧವಿಲ್ಲದೆ ಇರತಕ್ಕ ಜಗತ್ತಿಗೆ ಬ್ರಹ್ಮನಿಗೆ ಹೇಗೆ ಬಾಧವಿಲ್ಲವೋ ಹಾಗೆಯೇ ಮುಂದೂ ಬಾಧವಿರುವುದಿಲ್ಲ ಎಂದು ಹೇಳಲು ನಭೋನೈಲ್ಯಭ್ರಮ ಮತ್ತು ದೇಹಾತ್ಮೈಕ್ಯಭ್ರಮ ಇವುಗಳ ವಿಷಯದಲ್ಲಿ ಪರರು (ಅದ್ವೈತಿಗಳು) ಅವುಗಳು ಈಗ ಅಬಾಧಿತವಾಗಿದ್ದು ಬ್ರಹ್ಮಜ್ಞಾನದಿಂದಲೇ ಬಾಧಿತವಾದವು ಎಂದು ಅಂಗೀಕರಿಸಿರುವುದನ್ನು ನಿರಾಕರಿಸುವ ಸಲುವಾಗಿ ಅವೆರಡರ ಬಗ್ಗೆ ವಸ್ತುಸ್ಥಿತಿಯನ್ನು 'ಬಾಧ್ಯಂ' ಎಂದು ಆರಂಭವಾಗುವ ಈ ಮುಂದಿನ ಶ್ಲೋಕದಲ್ಲಿ ನಿರೂಪಿಸುತ್ತಿದ್ದಾರೆ.

'ತತ್ರತ್ಯೈಃ' ಎಂದರೆ ಭ್ರಮಗೆ ವಿಷಯವಾಗಿರುವ ಆಕಾಶದ ಪ್ರದೇಶದಲ್ಲಿ ಇರುವುದರಿಂದ ಎಂದು ಅರ್ಥ. ತನ್ನ ಸ್ವರೂಪದಲ್ಲೇ ಇರುವ ಆಕಾಶದ ವಿಷಯದಲ್ಲಿ ಯಾರಿಗೂ ಭ್ರಾಂತಿಯಿಲ್ಲ. ದೂರದಲ್ಲಿರುವವರಿಗೆ ಮಾತ್ರ ಆ ರೀತಿ ಭ್ರಮವಿರುವುದು. ದೂರದಲ್ಲಿರುವವರಿಗೂ ಆ ಪ್ರದೇಶದಲ್ಲಿರುವ ಆಕಾಶದ ಬಗ್ಗೆ 'ಇದು ನೀಲಿಯಲ್ಲ' ಎಂದು ಜ್ಞಾನವಿದ್ದೇ ಇದೆ. ಆದ್ದರಿಂದ ನಭೋನೈಲ್ಯಕ್ಕೂ ಈಗಲೇ ಅಂದರೆ ಸಂಸಾರಕಾಲದಲ್ಲೇ ಬಾಧ್ಯತ್ವವಿದೆ ಎಂದು ಆಶಯ.

ಅಥವಾ, ನಭೋನೈಲ್ಯವು ಬಾಧ್ಯವೇ ಅಲ್ಲ. ಬ್ರಹ್ಮನಂತೆ ಅದು ಪಾರಮಾರ್ಥಿಕ ಸತ್ಯವೇ ಆಗಿದೆ. ಆದ್ದರಿಂದ ನಮ್ಮ ಅನುಮಾನಕ್ಕೆ ನಭೋನೈಲ್ಯದಲ್ಲಿ ವ್ಯಭಿಚಾರ ಹೇಳುವ ಪ್ರಸಕ್ತಿಯೇ ಇಲ್ಲವೆಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

**ಆಕಾಶೇ ನೀಲಿಮೋದೇತೀತ್ಯಾದಿವೇದೋಕ್ತಿತಸ್ತು ತತ್ ।**
**ಅಬಾಧ್ಯಮೇವ ವಾ ನೈಲ್ಯಂ ನೋಭಯತ್ರಾಪಿ ನ ಕ್ಷತಿಃ ॥ ೭೫೩ ॥**

**ದೇಹೋಹಮಿತಿ ವಿಜ್ಞಾನಂ ನ ಹಿ ಕಸ್ಯಾಪಿ ದೇಹಿನಃ ।**
**ನಾಹಂ ದೇಹ ಇತಿ ಜ್ಞಾನಂ ಸರ್ವೇಷಾಮಪಿ ಸರ್ವದಾ ॥ ೭೫೪ ॥**

**ಮಮ ದೇಹ ಇತಿ ಪ್ರಾಹುಃ ಸರ್ವೇಪಿ ಕಥಮನ್ಯಥಾ ।**
**ದೇಹಾತ್ಮೈಕ್ಯಭ್ರಮಸ್ಯೇತ್ಥಮವಕಾಶೋ ನ ವಿದ್ಯತೇ ॥ ೭೫೫ ॥**

**ಅರ್ಥ-** ವಾ= ಅಥವಾ, ಆಕಾಶೇ ನೀಲಿಮೋದೇತಿ= ಆಕಾಶವು ನೀಲಿಯ ಬಣ್ಣದಿಂದ ಕೂಡಿದುದಾಗಿ ಉತ್ಪತ್ತಿಯನ್ನು ಹೊಂದುತ್ತದೆ, ಇತ್ಯಾದಿವೇದೋಕ್ತಿತಃ ತು= ಇದೇ ಮೊದಲಾದ ವೇದವಾಕ್ಯಗಳಿಂದಲೇ, ತತ್ ನೈಲ್ಯಂ= ಆ ನೈಲ್ಯವು, ಅಬಾಧ್ಯಮೇವ= ಅಬಾಧ್ಯವೇ ಆಗಿದೆ, ಆದ್ದರಿಂದ, ಉಭಯತ್ರಾಪಿ= ನಭೋನೈಲ್ಯದಲ್ಲಿಯೂ ಮತ್ತು ದೇಹಾತ್ಮೈಕ್ಯದಲ್ಲಿಯೂ, ನ ಕ್ಷತಿಃ= ವ್ಯಭಿಚಾರರೂಪವಾದ ದೋಷವಿಲ್ಲ.

ಕಸ್ಯಾಪಿ ದೇಹಿನಃ= ಯಾವ ದೇಹಿಗೂ ಸಹ, ದೇಹೋಹಮಿತಿ ವಿಜ್ಞಾನಂ= ನಾನೇ ದೇಹವೆಂಬ ಜ್ಞಾನವು, ನ ಹಿ= ಇಲ್ಲವಷ್ಟೇ ?, ಸರ್ವೇಷಾಂ= ಎಲ್ಲರಿಗೂ, ಸರ್ವದಾಪಿ= ಯಾವಾಗಲೂ ಕೂಡ, ನಾಹಂ ದೇಹಃ= ನಾನು ದೇಹವಲ್ಲ, ಇತಿ= ಎಂಬ, ಜ್ಞಾನಂ= ಜ್ಞಾನವು ಇರುವುದಷ್ಟೇ ?

ಅನ್ಯಥಾ= ದೇಹಾತ್ಮ ಭೇದಜ್ಞಾನವು ಇಲ್ಲದಿದ್ದರೆ, ಸರ್ವೇಪಿ= ಎಲ್ಲರೂ ಕೂಡ, ಮಮ ದೇಹ ಇತಿ= ನನ್ನ ದೇಹ ಎಂದು, ಕಥಂ ಪ್ರಾಹುಃ= ಹೇಗೆ ಹೇಳುತ್ತಾರೆ?, ಇತ್ಥಂ= ಈ ರೀತಿಯಾಗಿ, ದೇಹಾತ್ಮೈಕ್ಯಭ್ರಮಸ್ಯ= ದೇಹಾತ್ಮೈಕ್ಯಭ್ರಮಕ್ಕೆ, ಅವಕಾಶೋ ನ ವಿದ್ಯತೇ= ಅವಕಾಶವೇ ಇಲ್ಲ.

**ಅನುವಾದ -** ಆಕಾಶೇ ನೀಲಿಮೋದೇತಿ ಇತ್ಯಾದಿ ವೇದವಾಕ್ಯಗಳಿಂದ ಆ ನಭೋನೈಲ್ಯವು ಅಬಾಧ್ಯವೆಂದೇ ತಿಳಿಯುತ್ತದೆ. ಆದ್ದರಿಂದ ನಭೋನೈಲ್ಯದಲ್ಲಾಗಲೀ, ದೇಹಾತ್ಮೈಕ್ಯದಲ್ಲಾಗಲೀ ವ್ಯಭಿಚಾರವಿಲ್ಲ.

ಯಾವ ದೇಹಿಗೂ ನಾನೇ ದೇಹವೆಂಬ ಜ್ಞಾನವು ಇಲ್ಲ. ಎಲ್ಲರಿಗೂ ಯಾವಾಗಲೂ ನಾನು ದೇಹವಲ್ಲ ಎಂಬ ಜ್ಞಾನವೇ ಇರುವುದಷ್ಟೇ ?

ಹಾಗಿಲ್ಲದಿದ್ದರೆ ಎಲ್ಲರೂ ಸಹ ನನ್ನ ದೇಹ ಎಂದು ಹೇಗೆ ಹೇಳುತ್ತಾರೆ? ಈ ರೀತಿಯಲ್ಲಿ ದೇಹಾತ್ಮೈಕ್ಯ ಭ್ರಮಕ್ಕೆ ಅವಕಾಶವೇ ಇಲ್ಲ.

**ಭಾವವಿಲಾಸಿನೀ –** ತತ್ ದೂರೇ ಪ್ರತೀಯಮಾನಂ ನಭೋನೈಲ್ಯಮ್ । ಸಮೀಪೇ ನೈಲ್ಯಾಪ್ರತೀತೇಃ ದೂರೇ ಚ ಪ್ರತೀತೇಃ ನಯನಪಕ್ಷ್ಮಣಾಮಿವ ತದಾಽತಿಸಾಮೀಪ್ಯಮೇವಾರ್ಥದೋಷಃ ಕಲ್ಪ್ಯತ ಇತಿ ಭಾವಃ ॥ ೭೫೩-೭೫೫ ॥

**ವಿವರಣೆ-** ಇದುವರೆಗೆ ನಭೋನೈಲ್ಯ ಅಸತ್ಯವೆಂದೊಪ್ಪಿ ನಮ್ಮ ಅನುಮಾನಕ್ಕೆ ವ್ಯಭಿಚಾರ ದೋಷವಿಲ್ಲವೆಂದು ಹೇಳಲಾಯಿತು. ಈಗ ಬ್ರಹ್ಮನಂತೆ ನಭೋನೈಲ್ಯವೂ ಪರಮಾರ್ಥಸತ್ತೇ ಆಗಿದೆ ಎಂಬ ಪಕ್ಷವನ್ನು ಅಂಗೀಕರಿಸಿ ಅನುಮಾನ ದೋಷವನ್ನು ನಿರಾಕರಿಸುತ್ತಿದ್ದಾರೆ. ಆಕಾಶನೈಲ್ಯವು ಸತ್ಯವಾದುದೆಂದು ಹೇಳಲು 'ಆಕಾಶೇ ನೀಲಿಮೋದೇತಿ' ಎಂಬ ವೇದವಾಕ್ಯವು ಪ್ರಮಾಣವಾಗಿದೆ. ಒಟ್ಟಿನಲ್ಲಿ, ಆಕಾಶನೈಲ್ಯವು ಬಾಧ್ಯವೆನ್ನುವ ಪಕ್ಷವನ್ನು ಅಂಗೀಕರಿಸಿದರೂ ಅಬಾಧ್ಯವೆಂಬ ಪಕ್ಷವನ್ನು ಸ್ವೀಕರಿಸಿದರೂ ನಮಗೆ ಯಾವುದೇ ಹಾನಿಯಿಲ್ಲವೆಂದು ಭಾವ.

'ತತ್' ಎಂದರೆ ದೂರದಲ್ಲಿ ಕಾಣಿಸುವ ನಭೋನೈಲ್ಯವು ಎಂದು ಅರ್ಥ. ಸಮೀಪದಲ್ಲಿ ಆಕಾಶದ ನೈಲ್ಯವು ಕಾಣಿಸದಿರುವುದರಿಂದ ದೂರದಲ್ಲಿ ಅದು ಕಾಣಿಸುವುದರಿಂದ ಕಣ್ಣಿನ ರೆಪ್ಪೆಗಳ ವಿಷಯದಲ್ಲಿ ಹೇಗೋ ಹಾಗೆ (ಹತ್ತಿರದಲ್ಲಿರುವ ನಭೋನೈಲ್ಯವು ಕಾಣಿಸದಿರಲು) ಅತಿಸಾಮಿಪ್ಯವೆಂಬ ಪದಾರ್ಥದೋಷವು ಕಾರಣವೆಂದು ಕಲ್ಪಿಸಲಾಗುವುದು ಎಂದು ಭಾವ.

ಎಲ್ಲರಿಗೂ ಎಲ್ಲ ಕಾಲದಲ್ಲೂ 'ನನ್ನ ದೇಹ' ಎಂಬ ಜ್ಞಾನವಿರುವುದು ಅನುಭವ ಸಿದ್ಧ. ಈ ಜ್ಞಾನವು ದೇಹ-ಆತ್ಮಗಳ ಭೇದವನ್ನು ಗ್ರಹಿಸುವುದರಿಂದ ದೇಹಾತ್ಮೈಕ್ಯ ಭ್ರಾಂತಿಗೆ ಅವಕಾಶವೇ ಇಲ್ಲವೆಂದು ಭಾವ.

**ಗೌರೋಹಮಿತ್ಯಾದಿವಾಕ್ ಚ ಗೌರಾದ್ಯಂಗೇಽಭಿಮಾನತಃ ।**
**ಅಹಂತಾಯಾ ವ್ಯವಹೃತಿರುಪಚಾರೇಣ ಕೇವಲಂ ।**
**ನ ಹಿ ಸಿಂಹಾತ್ಮಕಂ ಮರ್ತ್ಯಂ ವಕ್ತಿ ವಾಗೌಪಚಾರಿಕೀ ॥ ೭೫೬ ॥**

**ಅರ್ಥ-** ಗೌರೋಹಂ ಇತ್ಯಾದಿವಾಕ್ಚ= ನಾನು ಬೆಳ್ಳಗಿದ್ದೇನೆ ಎಂಬ ಮೊದಲಾದ ವಾಕ್ಯಗಳು, ಗೌರಾದ್ಯಂಗೇ= ಬೆಳ್ಳಗಿರುವ ಅವಯವಗಳಲ್ಲಿ, ಅಭಿಮಾನತಃ= ಅಭಿಮಾನವಿರುವ ಕಾರಣದಿಂದಾಗಿ, ಕೇವಲಂ= ಕೇವಲ, ಉಪಚಾರೇಣ= ಉಪಚಾರದಿಂದ, ಅಹಂತಾಯಾ ವ್ಯವಹೃತಿಃ= ಅಹಂ ಎಂಬ ವ್ಯವಹಾರರೂಪವಾಗುತ್ತದೆ, ಔಪಚಾರಿಕೀ ವಾಕ್= ಉಪಚರಿತವಾದ ವಾಕ್ಯವು, ಮರ್ತ್ಯಂ= ಮನುಷ್ಯನನ್ನು, ಸಿಂಹಾತ್ಮಕಂ= ಸಿಂಹಾಭಿನ್ನನೆಂದು, ನ ವಕ್ತಿಃ= ಹೇಳುವುದಿಲ್ಲವಷ್ಟೇ ?

**ಅನುವಾದ- ಗೌರೋಹಂ-** ನಾನು ಬೆಳ್ಳಗಿದ್ದೇನೆ ಇದೇ ಮೊದಲಾದ ವಾಕ್ಯವು ಬೆಳ್ಳಗಿರುವ ಅವಯವಗಳಲ್ಲಿ ಅಭಿಮಾನವಿರುವ ಕಾರಣ ಕೇವಲ ಉಪಚಾರದಿಂದ ಅಹಂ ಎಂಬ ವ್ಯವಹಾರ ರೂಪವಾಗಿರುತ್ತದೆ. ಸಿಂಹೋ ದೇವದತ್ತಃ ಎಂಬ ಉಪಚರಿತವಾಕ್ಯವು ದೇವದತ್ತನಿಗೆ ಸಿಂಹಾಭೇದವನ್ನು ಹೇಳುವುದಿಲ್ಲವಷ್ಟೇ ?

**ವಿವರಣೆ-** ದೇಹಾತ್ಮ ಭೇದಜ್ಞಾನ ಎಲ್ಲರಿಗೂ ಎಲ್ಲ ಕಾಲದಲ್ಲೂ ಇರುವುದಾದರೆ 'ಗೌರೋಹಂ' - ನಾನು ಬಿಳಿಯಾಗಿದ್ದೇನೆ ಎಂಬ ಜ್ಞಾನವಿರುವುದು ಹೇಗೆ? ಇಂತಹ

ಜ್ಞಾನ ಬಿಳಿಯಾದ ಶರೀರಕ್ಕೂ ಆತ್ಮನಿಗೂ ಐಕ್ಯವನ್ನು ಗ್ರಹಿಸುತ್ತದೆಯಲ್ಲವೇ ಎಂಬ ಆಕ್ಷೇಪಕ್ಕೆ ಶ್ರೀರಾಜರು ಇಲ್ಲಿ ಉತ್ತರ ನೀಡಿದ್ದಾರೆ. ಅವರ ಆಶಯ ಹೀಗಿದೆ - ದೇಹಾತ್ಮಗಳ ಭೇದಜ್ಞಾನ ಎಲ್ಲರಿಗೂ ಎಲ್ಲ ಕಾಲಕ್ಕೂ ಇದ್ದೇ ಇರುವುದು. 'ಗೌರೋಹಂ' ಎಂಬ ನಮ್ಮ ವ್ಯವಹಾರ ಕೇವಲ ಔಪಚಾರಿಕವಾದುದು. ಅದಕ್ಕೆ ಕಾರಣ ನಮಗೆ ಶರೀರದಲ್ಲಿರುವ ಅಭಿಮಾನ. ಔಪಚಾರಿಕವಾದಮಾತಿಗೆ ಮೇಲೆ ತೋರುವ ಅರ್ಥ ನಿಜವಾದ ಅರ್ಥವಲ್ಲ. 'ಸಿಂಹೋ ದೇವದತ್ತಃ' ಎಂಬ ಉಪಚಾರದ ಮಾತು ದೇವದತ್ತನು ಸಿಂಹಸದೃಶ ಎಂಬ ಅರ್ಥವನ್ನು ಪಡೆದಿದೆ ಹೊರತು ದೇವದತ್ತನಿಗೂ ಸಿಂಹಕ್ಕೂ ಅಭೇದವನ್ನು ಹೇಳುವುದಿಲ್ಲ.

'ವಾಕ್' - 'ಸಿಂಹೋ ದೇವದತ್ತಃ' ಎಂಬ ಮಾತು. ಹೇಗೆ 'ಸಿಂಹೋ ದೇವದತ್ತಃ' ಎಂಬ ವಾಕ್ಯಪ್ರಯೋಗ ಔಪಚಾರಿಕವಾದ್ದರಿಂದ ಅದರಿಂದ ಸಿಂಹ-ದೇವದತ್ತರ ತಾದಾತ್ಮ್ಯ ತೋರುವುದಿಲ್ಲವೋ, ಅದರ ಬದಲು ಸಾದೃಶ್ಯವೇ ತೋರುವುದೋ ಹಾಗೆಯೇ 'ಗೌರೋಽಹಂ' ಎಂಬ ಔಪಚಾರಿಕ ಪ್ರಯೋಗದಿಂದಲೂ ದೇಹತಾದಾತ್ಮ್ಯದ ಜ್ಞಾನವುಂಟಾಗುವುದಿಲ್ಲ. ಏಕೆಂದರೆ, 'ಮಮ ದೇಹಃ' - 'ಇದು ನನ್ನ ದೇಹ' ಎಂಬ ಭೇದಜ್ಞಾನ ಜಾಗರೂಕವಾಗಿದೆ. ಅದರ ಬದಲು (ದೇಹದಲ್ಲಿರುವ) ಅಭಿಮಾನದಿಂದಾಗಿ ತನ್ನ ದೇಹದಲ್ಲಿ 'ತಾನೇ ದೇಹ' ಎಂಬ ವ್ಯವಹಾರವೆಂದು ಭಾವ.

**ಯತೋಽಸ್ತಿ ಪುತ್ರೇ ಮಿತ್ರಾದೌ ವಿತ್ತೇವಾಽತಿಪ್ರಿಯೇ ನೃಣಾಂ ।**
**ನಷ್ಟೇ ನಷ್ಟೋಹಮಿತಿ ವಾಕ್ ತುಷ್ಟೇ ತುಷ್ಟೋಹಮಿತ್ಯಪಿ ॥ ೭೫೭ ॥**

**ಅತೋ ಬಾಧ್ಯಸ್ಯ ಸರ್ವಸ್ಯ ಬಾಧೋಽದ್ಯಾಪಿ ಹಿ ವಿದ್ಯತೇ ॥ ೭೫೮ ॥**

**ಅರ್ಥ-** ಯತಃ= ಯಾವ ಕಾರಣದಿಂದ, ಅತಿ ಪ್ರಿಯೇ= ಅತಿ ಪ್ರಿಯರಾದ, ಪುತ್ರೇ= ಪುತ್ರನಾಗಲೀ, ಮಿತ್ರಾದೌ= ಮಿತ್ರನಾಗಲೀ, ವಿತ್ತೇವಾ= ಧನವಾಗಲೀ, ನಷ್ಟೇ= ನಷ್ಟವಾದಾಗ, ನಷ್ಟೋಹಂ ಇತಿ= ನಾನೇ ನಾಶವನ್ನು ಹೊಂದಿದೆ ಎಂಬ, ವ್ಯವಹಾರವು, ನೃಣಾಂ= ಮನುಷ್ಯರಿಗೆ, ಅಸ್ತಿ= ಇದೆಯೋ, ತುಷ್ಟೇ= ಪುತ್ರಾದಿಗಳು ಸಂತುಷ್ಟರಾದರೆ, ತುಷ್ಟೋಹಮಿತ್ಯಪಿ= ನಾನು ಸಂತುಷ್ಟನಾಗಿದ್ದೇನೆ ಎಂಬ ವ್ಯವಹಾರವೂ ಕೂಡ ಇದೆಯೋ, ಅತಃ= ಆ ಕಾರಣದಿಂದ ಇಂತಹ ಮಾತುಗಳು ಔಪಚಾರಿಕವಾದವು, ಬಾಧ್ಯಸ್ಯ ಸರ್ವಸ್ಯ= ಬಾಧ್ಯಮಾನವಾದ ಎಲ್ಲ ವಸ್ತುಗಳ, ಬಾಧಃ= ಬಾಧವಾದರೂ, ಅದ್ಯಾಪಿ= ಈಗಲೂ ಕೂಡ, ವಿದ್ಯತೇ ಹಿ= ಇದೆಯಷ್ಟೇ ?

**ಅನುವಾದ-** ಅತಿಪ್ರಿಯರಾದ ಪುತ್ರಮಿತ್ರಾದಿಗಳು ನಷ್ಟರಾದರೆ ನಾನೇ ನಷ್ಟನೆಂದೂ, ಅವರು ತುಷ್ಟರಾದರೆ ನಾನೇ ತುಷ್ಟನೆಂದೂ ಬುದ್ಧಿ ಇರುವುದರಿಂದ ಅಂತಹ ವಾಕ್ಯಗಳೆಲ್ಲವೂ ಔಪಚಾರಿಕವಾದವುಗಳು. ಆದ್ದರಿಂದ ಬಾಧ್ಯಮಾನವಾದ ಎಲ್ಲ ವಸ್ತುಗಳ ಬಾಧವು ಈಗಲೇ ಇದೆ.

**ಭಾವವಿಲಾಸಿನೀ** – ವಾಕ್ ಸಿಂಹೋ ದೇವದತ್ತ ಇತಿ ವಾಕ್ । ಯಥಾ ಸಿಂಹೋ ದೇವದತ್ತ ಇತಿ ಪ್ರಯೋಗಸ್ಯೌಪಚಾರಿಕತ್ವಾನ್ನ ತೇನ ಸಿಂಹದೇವದತ್ತತಾದಾತ್ಮ್ಯಸ್ಯ ಪ್ರತೀತಿಃ ಕಿಂತು ಸಾದೃಶ್ಯಸ್ಯೈವ ತಥಾ ಗೌರೋऽಹಮಿತ್ಯೌಪಚಾರಿಕಪ್ರಯೋಗೇऽಪಿ ನ ದೇಹತಾದಾತ್ಮ್ಯಪ್ರತೀತಿಃ ಮಮ ದೇಹ ಇತಿ ಭೇದಬುದ್ಧೇರ್ಜಾಗರೂಕತ್ವಾತ್ । ಕಿಂ ತ್ವಭಿಮಾನಾದೇವ ಸ್ವೀಯೇ ಸ್ವತ್ವವ್ಯವಹಾರ ಇತಿ ಭಾವಃ॥೭೫೬-೭೫೮ ॥

**ವಿವರಣೆ-** ಲೋಕದಲ್ಲಿ ತನ್ನ ಮಕ್ಕಳು, ಮಿತ್ರರು, ಧನ ಮೊದಲಾದ ತನಗೆ ಅತಿಪ್ರಿಯವಾದದ್ದು ನಾಶ ಹೊಂದಿದಾಗ ತನಗೇ ನಾಶವಾಗಿದೆ ಎಂಬ ವ್ಯವಹಾರ, ಹಾಗೆಯೇ ಅವರು ಸಂತುಷ್ಟರಾಗಿದ್ದಾಗ ತಾನು ಸಂತುಷ್ಟನಾಗಿದ್ದೇನೆ ಎಂಬ ವ್ಯವಹಾರವಿರುವುದು ಪ್ರಸಿದ್ಧವಾಗಿದೆ. ಅದಕ್ಕೆ ಕಾರಣ ಅವರಲ್ಲಿ ತನಗಿರುವ ಅಭಿಮಾನ. ಅದರಂತೆ ದೇಹದಲ್ಲಿ ತನಗಿರುವ ಅಭಿಮಾನದಿಂದ ಮನುಷ್ಯರು ನಾನೇ ದೇಹವೆಂಬ ಅರ್ಥ ತೋರುವಂತೆ ಔಪಚಾರಿಕವಾದ ಮಾತನ್ನಾಡುವುದಿದ್ದರೂ ಅವೆಂದೂ ಅವರಿಗೆ ದೇಹಾತ್ಮೈಕ್ಯ ಭ್ರಾಂತಿಯಿದೆ ಎನ್ನಲು ಪ್ರಮಾಣವಾಗುವುದಿಲ್ಲ. ಒಟ್ಟಿನಲ್ಲಿ, ನಭೋನೈಲ್ಯ ದೇಹಾತ್ಮೈಕ್ಯ ಮೊದಲಾದ ನಿದರ್ಶನಗಳನ್ನು ತೋರಿಸಿ ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ಸಾಧಿಸಲು ನಾವು ಹೇಳಿದ ಅನುಮಾನಕ್ಕೆ ವ್ಯಭಿಚಾರ ದೋಷವನ್ನು ಹೇಳಲು ಸಾಧ್ಯವಿಲ್ಲವೆಂದು ಭಾವ.

ಅನಾದಿಕಾಲದಿಂದ ವರ್ತಮಾನ ಕಾಲದವರೆಗೆ ಯಾರಿಗೂ ಜಗತ್ತಿನ ವಿಷಯದಲ್ಲಿ ಬಾಧವಿಲ್ಲದಿರುವುದರಿಂದ ಜಗತ್ತು ಬಾಧ್ಯವೆಂಬ ಅದ್ವೈತ ಮತ ಅಂಗೀಕಾರಾರ್ಹವಲ್ಲವೆಂದು ಮುಂದಿನ ಎರಡು ಶ್ಲೋಕಗಳಲ್ಲಿ ಹೇಳಲಾಗಿದೆ-

ಅನಾದಿಕಾಲತಃ ಸರ್ವಂ ದೃಶ್ಯತೇ ಜಗದೀದೃಶಂ ।
ಬಾಧೋ ನ ಲಭ್ಯತೇ ಸರ್ವಮಸ್ತೀತ್ಯದ್ಯಾಪಿ ವೀಕ್ಷ್ಯತೇ ॥ ೭೫೯ ॥

**ಅರ್ಥ-** ಅನಾದಿಕಾಲತಃ= ಅನಾದಿಕಾಲದಿಂದಲೂ, ಈದೃಶಂ ಸರ್ವಂ ಜಗತ್= ಇಂತಹ ಎಲ್ಲ ಜಗತ್ತು, ದೃಶ್ಯತೇ= ಜ್ಞಾನಗೋಚರವಾಗಿದೆ, ಬಾಧೋ ನ ಲಭ್ಯತೇ= ಇದುವರೆಗೆ ಬಾಧವು ಉಂಟಾಗಿಲ್ಲ, ಅದ್ಯಾಪಿ= ಈ ದಿನವೂ ಕೂಡ, ಸರ್ವಮಸ್ತೀತ್ಯದ್ಯಾಪಿ= ಎಲ್ಲವೂ ಇದೆ ಎಂದೇ, ವೀಕ್ಷ್ಯತೇ= ತಿಳಿಯಲ್ಪಡುತ್ತದೆ.

**ಅನುವಾದ-** ಅನಾದಿಕಾಲದಿಂದಲೂ ಸರ್ವಜಗತ್ತು ಹೀಗೆಯೇ ಇದೆ. ಬಾಧವು ಬಂದಿಲ್ಲ ಮತ್ತು ಜಗತ್ತು ಇದೆ ಎಂಬ ಜ್ಞಾನವೇ ಬರುತ್ತದೆ.

ಯೋ ನಾಸ್ತ್ಯತ್ರಾಸ್ತಿ ಸೋನ್ಯತ್ರ ಗೃಹೇ ನಾಸ್ತ್ಯಸೌ ಬಹಿಃ ।
ಸರ್ವತ್ರ ಸರ್ವದೇದಂ ತು ನಾಸ್ತ್ಯೇವೇತಿ ಕ್ವ ಧೀರ್ವದ ॥ ೭೬೦ ॥

**ಅರ್ಥ-** ಯಃ= ಯಾವ ವಸ್ತುವು, ಅತ್ರ ನಾಸ್ತಿ= ಇಲ್ಲಿ ಇಲ್ಲವೋ, ಸಃ= ಆ ವಸ್ತುವು, ಅನ್ಯತ್ರ ಅಸ್ತಿ= ಬೇರೆ ಕಡೆಯಲ್ಲಿ ಇರುತ್ತದೆ, ಯಃ= ಯಾವನು, ಗೃಹೇ ನಾಸ್ತಿ= ಮನೆಯಲ್ಲಿ

ಇಲ್ಲವೋ, ಅಸೌ= ಅವನು, ಬಹಿಃ= ಹೊರಗಡೆ, ಅಸ್ತಿ= ಇರುತ್ತಾನೆ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಸರ್ವದಾ= ಯಾವಾಗಲೂ, ಇದಂ ನಾಸ್ತ್ಯೇವ= ಇದು ಇಲ್ಲವೇ ಇಲ್ಲ ಎಂಬ, ಧೀಃ= ಬುದ್ಧಿಯು, ಕ್ವ= ಎಲ್ಲಿದೆ ಎಂದು, ವದ= ಹೇಳು.

**ಅನುವಾದ-** ಯಾವ ಘಟವು ಇಲ್ಲಿ ಇಲ್ಲವೋ ಅದು ಇನ್ನೊಂದು ಕಡೆ ಇರುತ್ತದೆ. ಯಾವ ಚೇತನನು ಮನೆಯಲ್ಲಿ ಇಲ್ಲವೋ ಅವನು ಹೊರಗಡೆ ಇರುತ್ತಾನೆ. ಈ ಜಗತ್ತೆಲ್ಲವೂ ಯಾವಾಗಲೂ ಎಲ್ಲಿಯೂ ಇಲ್ಲವೆಂಬ ಜ್ಞಾನವು ಎಲ್ಲಿದೆ ಎಂದು ಹೇಳು.

**ಭಾವವಿಲಾಸಿನೀ**— ಯೋ ಘಟಃ ಅತ್ರ ನಾಸ್ತಿ ಸೋಽನ್ಯತ್ರೇತ್ಯನ್ವಯಃ। ಏವಮುತ್ತರತ್ರಾಪಿ ॥೭೬೦॥

**ವಿವರಣೆ-** ಸಾರ್ವದೇಶಿಕ, ಸಾರ್ವಕಾಲಿಕವಾದ ಬಾಧವು ಅನಾನುಭವಿಕವಾದುದು ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ವರ್ತಮಾನ ಕಾಲದವರೆಗೆ ಜಗತ್ತಿಗೆ ಬಾಧವಿಲ್ಲದಿದ್ದರೂ ಭಾವಕಾಲದಲ್ಲಿ ಜಗತ್ತು ಬಾಧ್ಯವಾಗಬಹುದು ಎಂಬ ಅದ್ವೈತಿಗಳ ಶಂಕೆಯನ್ನು ಮುಂದಿನ ಎರಡು ಶ್ಲೋಕಗಳಲ್ಲಿ ನಿರಾಕರಿಸಲಾಗಿದೆ.

ವರ್ತಮಾನ ಪದಾರ್ಥಗಳಲ್ಲಿ 'ಅನಾದಿ ಕಾಲದಿಂದ ಅನುವೃತ್ತವಾಗಿರುವ ಸತ್ತ್ವವಿದೆ' ಎಂದು ನಾವು ಅಂಗೀಕರಿಸಬಹುದಾದರೂ ಈ ಹಿಂದೆಯೇ ನಷ್ಟವಾದ ಪದಾರ್ಥಗಳಲ್ಲಿ ಅಂತಹ ಸತ್ತ್ವವಿತ್ತು ಎನ್ನಲು ಆಧಾರವೇನು? ಎಂಬ ಆಕ್ಷೇಪಕ್ಕೆ ಈ ಮುಂದಿನ ಶ್ಲೋಕದಲ್ಲಿ ಉತ್ತರವನ್ನು ನೀಡಲಾಗಿದೆ-

ಅನಾದಿತೋಽನುವೃತ್ತೇನ ಸತ್ತ್ವೇನ ಸಹಿತಂ ಜಗತ್ ।
ನ ಭಾವಿಬಾಧಬಾಧ್ಯಂ ಸ್ಯಾದ್ ಬ್ರಹ್ಮವತ್ ಪರಮಾರ್ಥಸತ್ ॥ ೭೬೧ ॥

ಅನುವೃತ್ತಿರನುಚ್ಛೇದಃ ಸತ್ತಾ ಚಾಸ್ತೀತಿ ವೇದ್ಯತಾ ।
ತದಾ ತದಸ್ತೀತಿ ಬುದ್ಧಿರ್ನಷ್ಟೇಷ್ವಪಿ ವಿದ್ಯತೇ ॥ ೭೬೨ ॥

**ಅರ್ಥ**- ಅನಾದಿತಃ= ಅನಾದಿಕಾಲದಿಂದಲೂ, ಅನುವೃತ್ತೇನ ಸತ್ತ್ವೇನ= ಅನುವೃತ್ತವಾದ ಸತ್ತ್ವದಿಂದ, ಸಹಿತಂ= ಕೂಡಿದ, ಜಗತ್= ಜಗತ್ತು, ಭಾವಿಬಾಧಬಾಧ್ಯಂ ನ ಸ್ಯಾತ್= ಮುಂದೆ ಉಂಟಾಗುವ ಬಾಧದಿಂದ ಬಾಧ್ಯವಾಗುವುದಿಲ್ಲ, ಬ್ರಹ್ಮವತ್= ಬ್ರಹ್ಮನಂತೆ, ಪರಮಾರ್ಥಸತ್= ಪರಮಾರ್ಥ ಸತ್ಯವೇ ಆಗುತ್ತದೆ. ಅನುವೃತ್ತಿಃ= ಅನುವೃತ್ತಿ ಎಂದರೆ, ಅನುಚ್ಛೇದಃ= ಉಚ್ಛೇದಾಭಾವ ವಿನಾಶಾಭಾವ ಎಂದು ಅರ್ಥ, ಸತ್ತ್ವಂ ಚ= ಸತ್ತ್ವವೆಂದರೆ, ಅಸ್ತೀತಿ ವೇದ್ಯತಾ= ಇದೆ ಎಂಬ ಜ್ಞಾನಕ್ಕೆ ವಿಷಯವಾಗಿರುವಿಕೆ (ಅಸ್ತಿತ್ವ ಪ್ರಕಾರಕ ಜ್ಞಾನ ವಿಷಯತ್ವ), ನಷ್ಟೇಷ್ವಪಿ= ನಷ್ಟವಾದ ವಸ್ತುಗಳಲ್ಲಿಯೂ ಕೂಡ, ತದಾ= ಆಗ, ತತ್= ಆ ನಷ್ಟವಾದ ವಸ್ತುವು, ಅಸ್ತಿ= ಇದೆ ಎಂಬ, ಬುದ್ಧಿಃ= ಬುದ್ಧಿಯು, ವಿದ್ಯತೇ= ಇರುವುದಷ್ಟೇ ?

**ಅನುವಾದ-** ವಿಮತಂ ಜಗತ್ ನ ಭಾವಿಬಾಧಬಾಧ್ಯಂ, ಪರಮಾರ್ಥಸತ್ ವಾ, ಅನಾದಿತೋನುವೃತ್ತ ಸತ್ತ್ವ ಸಹಿತತ್ವಾತ್, ಬ್ರಹ್ಮವತ್ ಎಂಬ ಅನುಮಾನದಿಂದಲೂ ಜಗತ್ತಿಗೆ ಪಾರಮಾರ್ಥಿಕ ಸತ್ತ್ವವೇ ಸಿದ್ಧವಾಗುತ್ತದೆ. ಅನುವೃತ್ತಿ ಎಂದರೆ ಅನುಚ್ಛೇದ ಎಂದು ಅರ್ಥ. ಸತ್ತಾ ಎಂದರೆ ಅಸ್ತಿತ್ವ ಪ್ರಕಾರಕ ಜ್ಞಾನ ವಿಷಯತ್ವ ಎಂದು ಅರ್ಥ. ನಷ್ಟವಾದ ವಸ್ತುಗಳಲ್ಲಿಯೂ ಸಹ ಆಗ (ನಾಶಕ್ಕಿಂತ ಮೊದಲು) ಅದು ಇದೆ ಎಂಬ ಬುದ್ಧಿಯು ಇದೆಯಷ್ಟೇ ?

**ಭಾವವಿಲಾಸಿನೀ** – ಹೇತುಗರ್ಭಮನುಮಾನಾಂತರಮಾಹ – **ಅನಾದಿತ ಇತಿ**।। ಅನೇನ ವಿಮತಂ. ಜಗತ್ ನ ಭಾವಿಬಾಧಕಬಾಧ್ಯವ್ । ಅನಾದಿತೋಽನುವೃತ್ತಸತ್ತ್ವಸಹಿತತ್ವಾತ್ ಬ್ರಹ್ಮವದಿತ್ಯನುಮಾನಮುಕ್ತಂ ಭವತಿ ।। ೭೬೧-೭೬೨ ।।

**ವಿವರಣೆ-** 'ಜಗತ್ತು ಭಾವಿಕಾಲದಲ್ಲೂ ಬಾಧಜ್ಞಾನದಿಂದ ಬಾಧ್ಯವಾಗುವುದಿಲ್ಲ, ಬದಲಾಗಿ ಅದು ಪರಮಾರ್ಥಸತ್ತ್ವವೇ ಆಗಿದೆ. ಅನಾದಿಕಾಲದಿಂದ ಮುಂದುವರೆದಿರುವ ಸತ್ತ್ವ ಜಗತ್ತಿನಲ್ಲಿರುವುದರಿಂದ, ಬ್ರಹ್ಮನಂತೆ' ಎಂಬ ಅನುಮಾನ ಪ್ರಯೋಗವು ಇಲ್ಲಿ ವಿವಕ್ಷಿತವಾಗಿದೆ. ಅನಾದಿಕಾಲದಿಂದ ಸತ್ತ್ವ ಮುಂದುವರೆದಿದ್ದರೂ ಜಗತ್ತು ಮುಂದೊಂದು ಕಾಲದಲ್ಲಿ ಬಾಧ್ಯವಾಗಬಾರದು ಎಂದು ಶಂಕಿಸುವುದಾದಲ್ಲಿ ಬ್ರಹ್ಮನ ವಿಷಯದಲ್ಲೂ ಅಂತಹ ಶಂಕೆ ಬಂದೀತು. ಬ್ರಹ್ಮ ಪಾರಮಾರ್ಥಿಕ ಸತ್ಯವಲ್ಲ ಎಂದೂ ಅಂಗೀಕರಿಸಬೇಕಾದೀತು ಎಂದು ಭಾವ.

ಜಗತ್ತಿಗೆ ಬಾಧವಿಲ್ಲ ಎಂಬ ವಿಷಯದಲ್ಲಿ ಹೇತುಯುಕ್ತವಾದ ಮತ್ತೊಂದು ಅನುಮಾನವನ್ನು 'ಅನಾದಿತಃ' ಇತ್ಯಾದಿ ಶ್ಲೋಕದಲ್ಲಿ ಹೇಳಲಾಗಿದೆ. ಈ ಶ್ಲೋಕದಿಂದ ಸೂಚಿತವಾಗುವ ಅನುಮಾನ ಹೀಗಿದೆ - 'ವಿಮತಂ ಜಗತ್ ನ ಭಾವಿಬಾಧಕ ಬಾಧ್ಯಂ, ಅನಾದಿತಃ ಅನುವೃತ್ತಸತ್ತ್ವಸಹಿತತ್ವಾತ್, ಬ್ರಹ್ಮವತ್'.

ಹಿಂದೆಯೇ ನಷ್ಟವಾದ ಪದಾರ್ಥಗಳು ವರ್ತಮಾನ ಕಾಲದಲ್ಲಿ ನಮಗೆ ಅನಾದಿ ಕಾಲದಿಂದ ಅನುವೃತ್ತವಾದ ಸತ್ತ್ವವುಳ್ಳವು ಎಂದು ತೋರಲು ಸಾಧ್ಯವಿಲ್ಲದಿದ್ದರೂ, ಯಾವಾಗ ಆ ಪದಾರ್ಥಗಳಿದ್ದವೋ ಆ ಕಾಲದಲ್ಲಿ ಅವು 'ಅನುವೃತ್ತವಾಗಿದೆ', 'ನಾಶವನ್ನು ಪಡೆದಿಲ್ಲ', 'ಅಸ್ತಿ' ಎಂಬ ಜ್ಞಾನಕ್ಕೆ ವಿಷಯವಾಗಿವೆ' ಈ ಬಗೆಯ ಜ್ಞಾನಗಳು ಆಯಾಯಾ ಸಮಯದಲ್ಲಿ ಇರುವುದರಿಂದ ನಷ್ಟವಾದ ಪದಾರ್ಥಗಳೂ ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವೇ ಆಗಿವೆ. ಭಾವಿಕಾಲದಲ್ಲಿ 'ನಾಸ್ತಿ ನಾಸೀತ್ ನ ಭವಿಷ್ಯತಿ' ಎಂಬ ರೀತಿಯ ಬಾಧ ಬುದ್ಧಿಯು ನಷ್ಟಪದಾರ್ಥಗಳ ವಿಷಯದಲ್ಲೂ ಬರುವುದು ಸಾಧ್ಯವಿಲ್ಲ.

**ಆಗಮವಾಕ್ಯಗಳಿಂದ ಭಾವಿಕಾಲದಲ್ಲಿ ಜಗತ್ತಿನ ವಿಷಯವಾಗಿ ಬಾಧಜ್ಞಾನವು ಬರುವುದು ಎಂಬ ಅದ್ವೈತಿಗಳ ವಾದವನ್ನು ಮುಂದಿನ ಎರಡು ಶ್ಲೋಕಗಳಲ್ಲಿ ನಿರಾಕರಿಸಲಾಗಿದೆ-**

**ಶಬ್ದಮಾತ್ರೇಣ ದೃಷ್ಟೋಽರ್ಥೋ ನಾನ್ಯಥೀಕ್ರಿಯತೇ ಬುಧೈಃ ।**
**ಪ್ರವಾಹಯಂತಿ ಕಿಂ ತೀರಂ ಮಂಚಂ ಸಂಚಾರಯಂತಿ ಕಿಮ್ ॥ ೭೬೩ ॥**

**ಅರ್ಥ-** ಬುಧೈಃ= ವಿವೇಕಿಗಳಾದವರಿಂದ, ದೃಷ್ಟೋಽರ್ಥಃ= ಪ್ರತ್ಯಕ್ಷಸಿದ್ಧವಾದ ಅರ್ಥವು, ಶಬ್ದಮಾತ್ರೇಣ= ಕೇವಲ ಶಬ್ದ ಪ್ರಯೋಗದಿಂದ, ಅನ್ಯಥಾ ನ ಕ್ರಿಯತೇ= ಬೇರೆ ರೀತಿಯಾಗಿ ಹೇಳಲ್ಪಡುವುದಿಲ್ಲ, ತೀರಂ= ತೀರವನ್ನೇ, ಕಿಂ ಪ್ರವಾಹಯಂತಿ= ನೀರಿನಂತೆ ಹರಿಸುತ್ತಾರೇನು? ಮಂಚಂ= ಮಂಚವನ್ನು, ಸಂಚಾರಯಂತಿ ಕಿಂ= ಸಂಚರಿಸುವಂತೆ ಮಾಡುತ್ತಾರೆಯೇ?

**ಅನುವಾದ- ವಿವೇಕಿಗಳಾದವರು ಪ್ರತ್ಯಕ್ಷದಿಂದ ದೃಷ್ಟವಾದ ಅರ್ಥವನ್ನು ಕೇವಲ ಶಬ್ದ ಪ್ರಯೋಗವಿದೆ ಎಂಬ ಕಾರಣದಿಂದ ಬೇರೆ ರೀತಿಯಾಗಿ ನಿರೂಪಿಸುವುದಿಲ್ಲ. ತೀರದಲ್ಲೇ ಪ್ರವಾಹವನ್ನು ಹರಿಸುತ್ತಾರೆಯೇ? ಅಥವಾ ಮಂಚವನ್ನೇ ಸಂಚರಿಸುವಂತೆ ಮಾಡುತ್ತಾರೆಯೇ?**

**ಭಾವವಿಲಾಸಿನೀ – ಕಿಂಚ ಆಗಮ ಏವ ಖಲು ಭಾವಿಬಾಧಕತಯಾ ಪರೇಣೋಚ್ಯತೇ । ಸೋಽಪಿ ನ ದೃಷ್ಟಾರ್ಥಬಾಧಕಃ ಕಿಂತು ದೃಷ್ಟ್ಯಾ ಬಾಧಿತಃ ಸ್ವಯಮೇವಾರ್ಥಾಂತರಂ ಭಜತ ಇತ್ಯಾಹ – ಶಬ್ದಮಾತ್ರೇಣೇತಿ ॥ ೭೬೩ ॥**

**ವಿವರಣೆ-** ಶಬ್ದ ಮತ್ತು ಪ್ರತ್ಯಕ್ಷಗಳ ನಡುವೆ ಪ್ರತ್ಯಕ್ಷಕ್ಕೇ ಪ್ರಾಬಲ್ಯವಿರುವುದು. ಪ್ರತ್ಯಕ್ಷದಿಂದ ಒಂದು ವಸ್ತು ಯಾವ ರೀತಿಯಲ್ಲ ತಿಳಿದುಬರುವುದೋ ಅದಕ್ಕನುಸಾರವಾಗಿ ಪಂಡಿತರು ಪದಾರ್ಥದ ಸ್ವಭಾವವನ್ನು ನಿರ್ಣಯಿಸಿವರು ಹೊರತು ಒಂದು ವಾಕ್ಯದ ಆಧಾರದಿಂದ ವಿಪರೀತವಾಗಿ ಪದಾರ್ಥದ ಸ್ವಭಾವವನ್ನು ಮಾರ್ಪಡಿಸುವುದಿಲ್ಲ. ತೀರವೇ ಬೇರೆ, ಪ್ರವಾಹವೇ ಬೇರೆ ಎಂದು ಪ್ರತ್ಯಕ್ಷಸಿದ್ಧವಾಗಿರುವಾಗ 'ಗಂಗಾಯಾಂ ಘೋಷಃ' 'ಗಂಗೆಯಲ್ಲಿ ಗೊಲ್ಲರ ಹಳ್ಳಿಯಿದೆ' ಎಂಬ ವಾಕ್ಯವನ್ನೇ ಆಧಾರವಾಗಿಟ್ಟುಕೊಂಡು ಪ್ರತ್ಯಕ್ಷ ವಿರುದ್ಧವಾಗಿ ಗಂಗಾತೀರವೇ ಗಂಗಾಪ್ರವಾಹವೆಂದು ಯಾವ ವಿವೇಕಿಯೂ ನಿರ್ಧರಿಸುವುದಿಲ್ಲ. ಹಾಗೆಯೇ, ಮಂಚ ಬೇರೆ, ಮಂಚದಲ್ಲಿರುವ ಪುರುಷ ಬೇರೆ ಎಂದು ಪ್ರತ್ಯಕ್ಷಸಿದ್ಧವಾಗಿರುವಾಗ, 'ಮಂಚ ಕ್ರೋಶತಿ' - 'ಮಂಚ ಕೂಗುತ್ತಿದೆ' ಎಂಬ ವಾಕ್ಯವನ್ನು ಆಧರಿಸಿ ನಿಶ್ಚಲಯವಾದ ಮಂಚವನ್ನು ಚಲಿಸುವ ಪುರುಷನೆಂದು ಯಾವ ವಿವೇಕಿಯೂ ನಿರ್ಣಯಿಸಿರುವುದಿಲ್ಲ. ಆದ್ದರಿಂದ ಪ್ರತ್ಯಕ್ಷದಿಂದ ಜಗತ್ತು ಸತ್ಯವೆಂದು ಸಿದ್ಧವಾಗಿರುವಾಗ ಭಾವಿಕಾಲದಲ್ಲಿ ಜಗತ್ತಿಗೆ ವೇದವಾಕ್ಯದಿಂದ ಬಾಧ ಬರುವುದೆಂದು ಹೇಳುವುದು ಅಯುಕ್ತವೆಂದು ಭಾವ.

ಪ್ರತ್ಯಕ್ಷ ವಿರುದ್ಧವಾಗಿ ಆಗಮವು ಒಂದು ವಿಷಯವನ್ನು ಹೇಳುವಂತೆ ಕಂಡಾಗ ಆ ವಾಕ್ಯಕ್ಕೆ ಮೇಲೆ ತೋರುವ ಅರ್ಥವನ್ನು ಬಿಟ್ಟು ಪ್ರತ್ಯಕ್ಷಬಾಧಿತವಲ್ಲದ ಮತ್ತೊಂದು ಅರ್ಥವನ್ನೇ ಪ್ರಾಜ್ಞರು ಹೇಳುವರು. ಇದೇ ಸಮೀಚೀನವಾದ ಪದ್ಧತಿ ಎಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

ಏಕಾಭಾವೇಽಪರಾಂ ವೃತ್ತಿಮಾಶ್ರಿತ್ಯ ತಮಬಾಧಿತೇ ।
ಅರ್ಥೇ ಪ್ರವರ್ತಯಂತಿ ಸ್ಮ ದೃಷ್ಟಂ ಮಾರ್ಷ್ಟುಂ ಹಿ ಕಃ ಕ್ಷಮಃ ॥ ೭೬೪ ॥

**ಅರ್ಥ-** ಏಕಾಭಾವೇ= ಒಂದು ವೃತ್ತಿ ಇಲ್ಲದಿದ್ದರೆ, ಅಪರಾಂ ವೃತ್ತಿಮಾಶ್ರಿತ್ಯ= ಇನ್ನೊಂದು ವೃತ್ತಿಯನ್ನು ಸ್ವೀಕರಿಸಿ, ತಂ= ಆ ವಾಕ್ಯವನ್ನು, ಅಬಾಧಿತೇ ಅರ್ಥೇ= ಅಬಾಧಿತವಾದ ಅರ್ಥದಲ್ಲಿ, ಪ್ರವರ್ತಯಂತಿ= ಪ್ರವರ್ತಿಸುವಂತೆ ಮಾಡುತ್ತಾರೆ, ದೃಷ್ಟಂ= ಪ್ರತ್ಯಕ್ಷ ದೃಷ್ಟವಾದ ಅರ್ಥವನ್ನು, ಮಾರ್ಷ್ಟುಂ= ತೊಡೆದು ಹಾಕಲು (ನಿರಾಕರಣೆ ಮಾಡಲು), ಕೋ ಹಿ ಕ್ಷಮಃ= ಯಾವನು ತಾನೇ ಸಮರ್ಥನಾಗುತ್ತಾನೆ?

**ಅನುವಾದ-** ಒಂದು ವೃತ್ತಿಯು ಕೂಡದಿದ್ದರೆ ಇನ್ನೊಂದು ವೃತ್ತಿಯನ್ನು ಆಶ್ರಯಿಸಿ ಆ ವಾಕ್ಯವನ್ನು ಅಬಾಧಿತಾರ್ಥಬೋಧಕವನ್ನಾಗಿ ಮಾಡುತ್ತಾರೆ. ಪ್ರತ್ಯಕ್ಷದೃಷ್ಟವಾದ ಅರ್ಥವನ್ನು ತೊಡೆದು ಹಾಕಲು ಯಾವನು ತಾನೇ ಸಮರ್ಥನಾಗುತ್ತಾನೆ?

**ಭಾವವಿಲಾಸಿನೀ** – ತಂ ಆಗಮಮ್ ॥ ೭೬೪ ॥

**ವಿವರಣೆ-** ಶಬ್ದವು ಶಕ್ತಿ ಅಥವಾ ಲಕ್ಷಣಾ ಎಂಬ ಎರಡು ವೃತ್ತಿಗಳಲ್ಲಿ ಒಂದನ್ನು ಆಶ್ರಯಿಸಿ ತನ್ನ ಅರ್ಥವನ್ನು ಹೇಳುತ್ತದೆ. ಶಕ್ತಿವೃತ್ತಿಯಿಂದ ಭಾಸವಾಗುವ ಅರ್ಥವು ಪ್ರತ್ಯಕ್ಷ ಬಾಧಿತವಾಗಿದ್ದರೆ ಅದನ್ನು ಬಿಟ್ಟು ಇನ್ನೊಂದು ವೃತ್ತಿಯಾದ ಲಕ್ಷಣಾವೃತ್ತಿಯನ್ನು ಆಶ್ರಯಿಸಿ ವಾಕ್ಯಕ್ಕೆ ಅಬಾಧಿತವಾದ ಅರ್ಥವನ್ನು ಹೇಳುವುದು ಲೋಕ-ಶಾಸ್ತ್ರಗಳ ಕ್ರಮವಾಗಿದೆ. ಪ್ರತ್ಯಕ್ಷ ಸಿದ್ಧವಾದುದನ್ನು ಅಪಲಾಪ ಮಾಡುವುದು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ, ಭಾವಿಕಾಲದಲ್ಲಿ ಜಗತ್ತಿಗೆ ಬಾಧವುಂಟಾಗುವುದೆಂದು ಹೇಳುವಂತೆ ತೋರುವ ವಾಕ್ಯಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸಿ ಅಬಾಧಿತವಾದ ಅರ್ಥವನ್ನು ಹೇಳುವುದೇ ಯುಕ್ತವೆಂದು ಭಾವ. 'ತಂ' ಎಂದರೆ ಆಗಮವನ್ನು ಎಂದು ಅರ್ಥ.

ಪ್ರಕೃತ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಉಪಸಂಹರಿಸುತ್ತಿದ್ದಾರೆ-

ಅತೋಽಬಾಧಿತಮೇವಾಸ್ತು ವಿಶ್ವಂ ಸರ್ವಸುಖಪ್ರದಂ ।
ವಾಕ್ಯಂ ಚ ಪ್ರತಿವಾದ್ಯುಕ್ತರೀತ್ಯಾಽರ್ಥಂ ಪ್ರಾಪ್ಯ ಜೀವತು ॥ ೭೬೫ ॥

**ಅರ್ಥ-** ಅತಃ= ಆದ್ದರಿಂದ, ಸರ್ವಸುಖಪ್ರದಂ= ಎಲ್ಲರಿಗೂ ಸುಖವನ್ನು ಕೊಡುವ, ವಿಶ್ವಂ= ವಿಶ್ವವು, ಅಬಾಧಿತಮೇವ ಅಸ್ತು= ಅಬಾಧಿತವೇ ಆಗಲಿ, ವಾಕ್ಯಂ ಚ= ನೇಹ ನಾನಾ

ಇತ್ಯಾದಿ ವಾಕ್ಯಗಳು, ಪ್ರತಿವಾದ್ಯುಕ್ತರೀತ್ಯಾ= ಪ್ರತಿವಾದಿಗಳಾದ ತತ್ತ್ವವಾದಿಗಳಾದ ನಾವು ಹೇಳಿದ ರೀತಿಯಲ್ಲಿ, ಅರ್ಥಂ= ಅರ್ಥವನ್ನು, ಪ್ರಾಪ್ಯ= ಹೊಂದಿ, ಜೀವತು= ಬದುಕಿರಲಿ.

**ಅನುವಾದ-** ಆದ್ದರಿಂದ ಎಲ್ಲರಿಗೂ ಸುಖವನ್ನು ಕೊಡುವ ವಿಶ್ವವು ಅಬಾಧಿತವೇ ಆಗಲಿ. 'ಏಕಮೇವಾ ದ್ವಿತೀಯಂ, ನೇಹ ನಾನಾಸ್ತಿ ಕಿಂಚನ' ಮೊದಲಾದ ವಾಕ್ಯಗಳು ಪ್ರತಿವಾದಿಗಳಾದ ನಾವು ಹೇಳುವ ಅರ್ಥವನ್ನು ಸ್ವೀಕರಿಸಿ ಬದುಕಲಿ (ಪ್ರಮಾಣವಾಗಲಿ).

**ಭಾವವಿಲಾಸಿನೀ –** ಅತಃ ಆಗಮಸ್ಯ ಪ್ರತ್ಯಕ್ಷಬಾಧಕತ್ವಾಯೋಗಾತ್ ॥ ೭೬೫ ॥

**ವಿವರಣೆ-** 'ಅತಃ' ಎಂದರೆ 'ಆಗಮಕ್ಕೆ ಪ್ರತ್ಯಕ್ಷವನ್ನು ಬಾಧಿಸುವ ಸಾಮರ್ಥ್ಯ ವಿಲ್ಲದಿರುವುದರಿಂದ ಎಂದು ಅರ್ಥ.

ಪ್ರತ್ಯಕ್ಷಾದಿ ಪ್ರಮಾಣ ವಿರೋಧವನ್ನು ಲೆಕ್ಕಿಸದೆ ಶ್ರುತಿಯ ಆಧಾರದಿಂದ ಜಗತ್ತು ಬಾಧ್ಯವೆನ್ನುವುದಾದರೆ, ಬ್ರಹ್ಮನು ಅಸತ್ತೆಂದು ಹೇಳುವಂತೆ ತೋರುವ ವಾಕ್ಯಗಳಿಂದ ಬ್ರಹ್ಮನೂ ಅಸತ್ತಾಗಲಿ ಎಂಬ ಅನಿಷ್ಟಾಪತ್ತಿಯನ್ನು ಹೇಳಲು ಮುಂದಿನ ಶ್ಲೋಕ ಹೊರಟಿದೆ -

ಲೋಕಮರ್ಯಾದಯಾ ರುದ್ಧಾ ನ ಸ್ಯುಶ್ಚೇದ್ವಾಕ್ಯಮೂಷಿಕಾಃ ।
ಏಕೋ ದೇವಾಲಯಂ ಗಚ್ಛೇದನ್ಯೋ ದೇವಸ್ಯ ಮಸ್ತಕಂ ।
ಅಸದೇವೇದಮಗ್ರೇಭೂದಿತಿ ವಾಙ್ನಾಸ್ತಿ ಕಿಂ ಶ್ರುತೌ ॥ ೭೬೬ ॥

**ಅರ್ಥ-** ವಾಕ್ಯಮೂಷಿಕಾಃ= ವಾಕ್ಯವೆಂಬ ಇಲಿಗಳು, ಲೋಕಮರ್ಯಾದಯಾ= ಲೋಕಮರ್ಯಾದೆಯಿಂದ, ರುದ್ಧಾ ನ ಸ್ಯುಃ ಚೇತ್= ತಡೆಯಲ್ಪಡದಿದ್ದರೆ, ಏಕಃ= ಒಂದು ಇಲಿಯು, ದೇವಾಲಯಂ ಗಚ್ಛೇತ್= ದೇವಾಲಯಕ್ಕೆ ಹೋಗುತ್ತದೆ, ಅನ್ಯಃ= ಇನ್ನೊಂದು ಇಲಿಯು, ದೇವಸ್ಯ= ದೇವರ, ಮಸ್ತಕಂ ಗಚ್ಛೇತ್= ತಲೆಯ ಮೇಲೆ ಏರುತ್ತದೆ, ಶ್ರುತೌ= ವೇದದಲ್ಲಿ, ಅಸದೇವ ಇದಮಗ್ರೇ ಅಭೂತ್= ಸೃಷ್ಟಿಗಿಂತ ಮೊದಲು ಅಸತ್ತೇ ಇದ್ದಿತು, ಇತಿ= ಎಂಬ, ವಾಕ್= ವಾಕ್ಯವು, ನಾಸ್ತಿ ಕಿಂ= ಇಲ್ಲವೇನು?

**ಅನುವಾದ-** ಈ ವಾಕ್ಯವೆಂಬ ಮೂಷಿಕಗಳನ್ನು ಲೋಕಮರ್ಯಾದೆಯಿಂದ ತಡೆಯಬೇಕು. ಇಲ್ಲದಿದ್ದರೆ ಒಂದು ಮೂಷಿಕವು ದೇವಾಲಯಕ್ಕೆ ಹೋಗುತ್ತದೆ, ಇನ್ನೊಂದು ಮೂಷಿಕವು ದೇವರ ತಲೆಯನ್ನೇ ಏರುತ್ತದೆ. ವೇದದಲ್ಲಿ ಸೃಷ್ಟಿಗಿಂತಲೂ ಮೊದಲು ಅಸತ್ತೇ ಇದ್ದಿತು ಎಂಬ ವಾಕ್ಯವು ಇಲ್ಲವೇನು?

**ಭಾವವಿಲಾಸಿನೀ –** ಬ್ರಹ್ಮಪ್ರತಿಬಂದ್ಯಾಪಿ ವಾಕ್ಯಂ ನ ವಿಶ್ವಘಾತಕಮಿತಿ ಸಾಹಿತ್ಯ ಮುದ್ರಯಾಽಽಹ – **ಲೋಕಮರ್ಯಾದಯೇತಿ** ॥ ಬಹ್ವರ್ಥವಿಸರಣಶೀಲತ್ವಾನ್ಮೂಷಿಕಾ ಇತ್ಯುಕ್ತಮ್ । ಏಕಃ ನೇಹನಾನೇತ್ಯಾದಿರೂಪಃ । ದೇವಾಲಯಂ ಭಗವತ್ಸನ್ನಿಧಾನಪಾತ್ರತ್ವಾದ್ದೇವಾಲಯಸ್ಥಾನೀಯಂ ವಿಶ್ವಮ್। ಅನ್ಯಃ ಅಸದೇವೇದಮಗ್ರ ಆಸೀದಿತ್ಯಾದಿರೂಪಃ। ದೇವಸ್ಯ ಬ್ರಹ್ಮಣಃ। ತದೇವ ದರ್ಶಯತಿ॥ **ಅಸದೇವೇತಿ** ॥ ೭೬೬ ॥

**ವಿವರಣೆ-** ವಾಕ್ಯಗಳು ಇಲಿಗಳಿದ್ದಂತೆ. ಲೋಕದಲ್ಲಿ ವಾಕ್ಯವನ್ನು ಅರ್ಥೈಸುವ ರೀತಿಯನ್ನನುಸರಿಸಿ ಅವುಗಳಿಗೆ ಅರ್ಥ ಹೇಳಬೇಕು. ಹಾಗೆ ವಾಕ್ಯಗಳನ್ನು ಪ್ರತಿಬಂಧಿಸದಿದ್ದರೆ ಅವುಗಳು ಇಲಿಗಳಂತೆ ಇಷ್ಟಬಂದೆಡೆಗೆ ಓಡುವವು. ಒಂದು ಮೂಷಿಕ ದೇವಾಲಯಕ್ಕೆ ಹೋಗಬಹುದು. ಇನ್ನೊಂದು ಮೂಷಿಕ ದೇವಾಲಯದಲ್ಲಿ ದೇವರ ತಲೆಯ ಮೇಲೂ ಕೂಡಬಹುದು. ಹಾಗೆ ದೇವರನ್ನೂ ಧಿಕ್ಕರಿಸಬಹುದು. ಹಾಗೆಯೇ, ಒಂದು ವೇದವಾಕ್ಯ ಭಗವಂತನ ಸಾನ್ನಿಧ್ಯಸ್ವರೂಪವನ್ನು ತಿಳಿಸಿದರೆ, ಇನ್ನೊಂದು ವೇದವಾಕ್ಯ ಪರಮಾತ್ಮನೇ ಇಲ್ಲವೆಂದೂ ಹೇಳಬಹುದು. ಹಾಗೆ ಹೇಳುವಂತೆ ಭಾಸವಾಗುವ 'ಅಸವೇಣೇದಮಗ್ರ ಆಸೀತ್' ಇತ್ಯಾದಿ ವಾಕ್ಯಗಳೂ ವೇದದಲ್ಲಿ ಸಿಗುತ್ತದೆ. ಆದ್ದರಿಂದ ಬ್ರಹ್ಮನ ಅಸ್ತಿತ್ವವನ್ನು ಒಪ್ಪುವ ಅದ್ವೈತಿಗಳು ಲೋಕಮರ್ಯಾದೆಯನ್ನನುಸರಿಸಿ 'ಅಸದೇವ ಇತ್ಯಾದಿ ವಾಕ್ಯಗಳಿಗೆ ಅರ್ಥ ಮಾಡುವಂತೆ, 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯಗಳಿಗೂ ಅರ್ಥ ಹೇಳಬೇಕು. ಹಾಗೆ ವ್ಯಾಖ್ಯಾನ ಮಾಡಿದಲ್ಲಿ ಅಂತಹ ಶ್ರುತಿಗಳಿಂದ ವಿಶ್ವಮಿಥ್ಯಾತ್ವವು ಸಿದ್ಧಿಸುವುದಿಲ್ಲವೆಂದು ಭಾವ.

ಬ್ರಹ್ಮನನ್ನು ಪ್ರತಿಬಂಧಿಯಾಗಿ ತೋರಿಸಿ ಶ್ರುತಿಯು ವಿಶ್ವಮಿಥ್ಯಾತ್ವವನ್ನು ಹೇಳುವುದಿಲ್ಲವೆಂದು ಸಾಹಿತ್ಯಶೈಲಿಯಿಂದ 'ಲೋಕಮರ್ಯಾದಯಾ' ಇತ್ಯಾದಿ ಶ್ಲೋಕದಲ್ಲಿ ಹೇಳುತ್ತಿದ್ದಾರೆ. ಅನೇಕಾರ್ಥಗಳ ಕಡೆಗೆ ಹೋಗುವ ಸ್ವಭಾವವಿರುವುದರಿಂದ (ವಾಕ್ಯಗಳನ್ನು) ಮೂಷಿಕಗಳೆಂದು ಹೇಳಲಾಗಿದೆ. 'ಏಕಃ' ಎಂದರೆ 'ನೇಹ ನಾನಾ' ಇತ್ಯಾದಿಯಾದದ್ದು ಎಂದರ್ಥ. 'ದೇವಾಲಯಂ' ಎಂದರೆ ಭಗವಂತನ ಸನ್ನಿಧಾನ ಪಾತ್ರವಾಗಿರುವುದರಿಂದ ದೇವಾಲಯ ಸ್ಥಾನದಲ್ಲಿರುವ ಜಗತ್ತನ್ನು ಎಂದು ಅರ್ಥ. 'ಅನ್ಯಃ' ಎಂದರೆ 'ಅಸದೇವೇದಮಗ್ರ ಆಸೀತ್' ಇತ್ಯಾದಿಯಾದ ಎಂದು ಅರ್ಥ. 'ದೇವಸ್ಯ'= ಬ್ರಹ್ಮನ ಅದನ್ನೇ (ಬ್ರಹ್ಮನ ಅಸ್ತಿತ್ವವನ್ನೇ ನಿರಾಕರಿಸುವಂತೆ ತೋರುವ ವಾಕ್ಯವನ್ನೇ) 'ಅಸದೇವ' ಎಂದು ತೋರಿಸುತ್ತಿದ್ದಾರೆ.

**ಭಾವಿಕಾಲದಲ್ಲಿ ಉಂಟಾಗುವುದೆಂದು ಹೇಳಲಾಗುವ ಬಾಧಕದ ಆಕಾರವನ್ನು ವಿಮರ್ಶಿಸಿ ಮುಂದಿನ ಮೂರು ಶ್ಲೋಕಗಳಲ್ಲಿ ನಿರಾಕರಿಸಲಾಗಿದೆ-**

**ಘಟೋ ನೇತಿ ನಿಷೇಧೇ ತು ಬಾಧಸ್ತೇ ನೈವ ಸಿದ್ಧ್ಯತಿ ।**
**ಪ್ರಧ್ವಂಸಪ್ರಾಗಭಾವಾಭ್ಯಾಮಪಿ ನೇತ್ಯುಕ್ತಿಸಂಭವಾತ್ ॥ ೭೬೭ ॥**

**ಅರ್ಥ-** ಘಟೋ ನ= ಘಟವು ಇಲ್ಲ, ಇತಿ= ಎಂದು, ನಿಷೇಧೇ ತು= ನಿಷೇಧವನ್ನು ಮಾಡಿದರೆ, ಪ್ರಧ್ವಂಸಪ್ರಾಗಭಾವಾಭ್ಯಾಮಪಿ= ಧ್ವಂಸ ಮತ್ತು ಪ್ರಾಗಭಾವದಿಂದಲೂ ಸಹ, ನೇತ್ಯುಕ್ತಿ ಸಂಭವಾತ್= ಇಲ್ಲ ಎಂಬ ವಚನವು ಕೂಡುವುದರಿಂದ, ತೇ= ನಿನಗೆ, ಬಾಧಃ= ಬಾಧವು, ನೈವ ಸಿದ್ಧ್ಯತಿ= ಸಿದ್ಧಿಸುವುದೇ ಇಲ್ಲ.

**ಅನುವಾದ-** ಘಟವು ಇಲ್ಲ ಎಂದು ಹೇಳಿದರೆ ಘಟಧ್ವಂಸ ಮತ್ತು ಘಟಪ್ರಾಗಭಾವದಿಂದಲೂ, ಇಲ್ಲ ಎಂಬ ಈ ವಾಕ್ಯವು ಕೂಡುವುದರಿಂದ ನಿನಗೆ ಅಭಿಮತವಾದ ಬಾಧೆವು ಸಿದ್ಧಿಸುವುದೇ ಇಲ್ಲ.

**ಭಾವವಿಲಾಸಿನೀ –** ತೇ ತವ ॥ ೭೬೭ ॥

**ವಿವರಣೆ-** ಭಾವಿ ಬಾಧವು 'ಘಟೋ ನ', 'ಪಟೋ ನ' ಇತ್ಯಾದಿ ಆಕಾರವನ್ನು ಪಡೆದಿರುವುದು ಎಂದು ಹೇಳಿದಲ್ಲಿ ಅಂತಹ ಬಾಧವು ಜಗತ್ತಿನ ಮಿಥ್ಯಾತ್ವದಲ್ಲಿ ಪರ್ಯವಸಾನ ಹೊಂದಬೇಕಾಗಿಲ್ಲ. ಏಕೆಂದರೆ ಘಟದ ಪ್ರಧ್ವಂಸ ಅಥವಾ ಪ್ರಾಗಭಾವವನ್ನೂ 'ಘಟೋ ನ' ಎಂಬ ವಾಕ್ಯದ ಮೂಲಕ ಹೇಳಲು ಸಾಧ್ಯವಿದೆ. ಘಟಾದಿ ಜಗತ್ತಿನ ತ್ರೈಕಾಲಿಕ ನಿಷೇಧವನ್ನೇ ಅಂತಹ ವಾಕ್ಯಗಳು ಸೂಚಿಸಬೇಕಾಗಿಲ್ಲ.

ಸತ್ಯೋ ನೇತಿ ನಿಷೇಧೇ ತು ಬಾಧೋಯಂ ಸ್ಯಾನ್ನ ಚಾನ್ಯಥಾ ।
ತಾದೃಙ್ ನಿಷೇಧೋ ನೈವಾಸ್ತಿ ವೇದೇ ವಾ ವೈದಿಕೇಷು ವಾ ॥ ೭೬೮ ॥

**ಅರ್ಥ-** ಸತ್ಯೋ ನ= ಸತ್ಯವಲ್ಲ, ಇತಿ ನಿಷೇಧೇ ತು= ಎಂದು ನಿಷೇಧ ಮಾಡಿದರೆ ಮಾತ್ರ, ಅಯಂ= ಈ ನಿಷೇಧವು, ಬಾಧಃ ಸ್ಯಾತ್= ಬಾಧವಾಗುತ್ತದೆ, ಚ= ಮತ್ತು, ಅನ್ಯಥಾ= ಬೇರೆ ರೀತಿಯಾಗಿ ನಿಷೇಧ ಮಾಡಿದರೆ, ನ= ಬಾಧವಾಗುವುದಿಲ್ಲ, ತಾದೃಙ್ನಿಷೇಧಃ= ಅಂತಹ ಸತ್ಯವಲ್ಲ ಎಂಬ ನಿಷೇಧವು, ವೇದೇ ವಾ= ವೇದದಲ್ಲಾಗಲೀ, ವೈದಿಕೇಷು ವಾ= ವೇದಾನುಸಾರಿ ಗ್ರಂಥಗಳಲ್ಲಾಗಲೀ, ನೈವಾಸ್ತಿ= ಇಲ್ಲವೇ ಇಲ್ಲ.

**ಅನುವಾದ-** ಸತ್ಯವಲ್ಲ ಎಂದು ನಿಷೇಧ ಮಾಡಿದರೆ ಮಾತ್ರ ಆ ನಿಷೇಧವು ಬಾಧವಾಗುತ್ತದೆ. ಬೇರೆ ಯಾವ ರೀತಿಯಲ್ಲಿ ನಿಷೇಧ ಮಾಡಿದರೂ ಬಾಧವಾಗುವುದಿಲ್ಲ. ಸತ್ಯವಲ್ಲ ಎಂಬ ನಿಷೇಧವಾದರೂ ವೇದದಲ್ಲಾಗಲೀ, ವೇದಾನುಸಾರಿ ಗ್ರಂಥಗಳಲ್ಲಾಗಲೀ ಎಲ್ಲಿಯೂ ಕಂಡುಬರುವುದಿಲ್ಲ.

**ಭಾವವಿಲಾಸಿನೀ –** ತಾದೃಕ್ - ಸತ್ಯೋ ನೇತ್ಯಾಕಾರಕಃ ॥ ೭೬೮ ॥

**ವಿವರಣೆ-** ಜಗತ್ತಿನ ಮಿಥ್ಯಾತ್ವವನ್ನು ಸೂಚಿಸುವ ಅದ್ವೈತಿಗಳಿಗೆ ಅಭಿಮತವಾದ ಬಾಧವು 'ಸತ್ಯೋ ನ' ಎಂಬ ಆಕಾರದ್ದೇ ಆಗಿರಬೇಕು ಹೊರತು ಬೇರೆ ಯಾವ ಆಕಾರವುಳ್ಳದ್ದಾಗಿರಲೂ ಸಾಧ್ಯವಿಲ್ಲ. ಆದರೆ 'ಪ್ರಪಂಚಃ ಸತ್ಯೋ ನ' ಎಂಬ ಆಕಾರದ ಬಾಧವು ವೇದಗಳಲ್ಲಾಗಲಿ, ವೇದಾನುಸಾರಿಯಾದ ಇತರ ಗ್ರಂಥಗಳಲ್ಲಾಗಲಿ ಎಲ್ಲೂ ಶ್ರುತವಾಗಿಲ್ಲ, ಅದ್ವೈತಿಗಳು ಹೇಳುವಂತೆ ವೇದದಲ್ಲಿ 'ಏಕಮೇವಾದ್ವಿತೀಯಂ', 'ನೇಹ ನಾನಾಸ್ತಿ ಕಿಂಚನ' ಎಂಬ ಆಕಾರದ ಜಗನ್ನಿಷೇಧವು ಮಾತ್ರ ಶ್ರುತವಾಗಿದೆ. ಆದರೆ, ಈಗಾಗಲೇ ಹೇಳಿದಂತೆ, ಆ ರೀತಿಯ ನಿಷೇಧವು ಜಗನ್ಮಿಥ್ಯಾತ್ವಕ್ಕೆ ಸಾಧಕವಾದದ್ದಲ್ಲ. ವಿಶ್ವಮಿಥ್ಯಾತ್ವವನ್ನು ಸ್ಪಷ್ಟವಾಗಿ

ತಿಳಿಸುವ 'ವಿಶ್ವಂ ಸತ್ಯಂ ನ' ಈ ಆಕಾರದ ನಿಷೇಧವಂತೂ ಎಲ್ಲ ಶ್ರುತವಾಗಿಲ್ಲವೆಂದು ಭಾವ.

'ಅಸೌ' ಎಂಬ ಪದಕ್ಕೆ ಜಗನ್ನಿಷೇಧ ಎಂದು ಅರ್ಥ.

ಕಾರಣವಿಲ್ಲದೆ ಶಂಕೆ ಉಂಟಾಗಲಾರದು. ಭಾವಿಬಾಧಕ ಶಂಕೆಯೂ ಅದಕ್ಕಪವಾದವಲ್ಲ. ಆದರೆ ಅಂತಹ ಕಾರಣವಿಲ್ಲದ್ದರಿಂದಲೂ ಭಾರಿಬಾಧಕ ಶಂಕೆ ಅಸಂಭಾವಿತ ಎಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ-

ಕಿಂತ್ವದ್ವಿತೀಯಂ ನೇಹಾಸ್ತೀತ್ಯಾಕಾರಃ ಪರಮಸ್ತ್ಯಸೌ ।
ತಸ್ಮಾನ್ನ ವರ್ತಮಾನಸ್ತೇ ಬಾಧೋಽಯಂ ಶ್ರೂಯತೇ ಕ್ವಚಿತ್ ॥ ೭೬೯ ॥

ಭಾವಿಬಾಧಕಶಂಕಾಯಾಃ ಕಿಂ ಕಾರಣಮುದೀರಯ ॥ ೭೭೦ ॥

**ಅರ್ಥ-** ಕಿಂತು= ಆದರೆ, ಅದ್ವಿತೀಯಂ= ಅದ್ವಿತೀಯವಾದುದು, ನೇಹಾಸ್ತಿ= ಇಲ್ಲಿ ಇಲ್ಲ, ಇತ್ಯಾಕಾರಃ= ಎಂಬ ಆಕಾರವುಳ್ಳ, ಅಸೌ= ಈ ಜಗನ್ನಿಷೇಧವು, ಅಸ್ತಿ= ಇದೆ, ತಸ್ಮಾತ್= ಆದ್ದರಿಂದ, ತೇ= ನಿನಗೆ, ವರ್ತಮಾನಃ ಅಯಂ ಬಾಧಃ= ವರ್ತಮಾನ ಕಾಲೀನವಾದ ಅಂತಹ ನಿಷೇಧವು, ಕ್ವಚಿತ್= ಎಲ್ಲಿಯೂ, ನ ಶ್ರೂಯತೇ= ಕೇಳಿಬರುವುದಿಲ್ಲ (ಇಲ್ಲ), ಭಾವಿಬಾಧಕಶಂಕಾಯಾಃ= ಭವಿಷ್ಯತ್ ಕಾಲದಲ್ಲಿ ಬಾಧವು ಬರುವುದು ಎಂಬ ಶಂಕೆಗೆ, ಕಿಂ ಕಾರಣಂ= ಏನು ಕಾರಣವೆಂದು, ಉದೀರಯ= ಹೇಳು.

**ಅನುವಾದ-** ಆದರೆ ಕೇವಲ ಅದ್ವಿತೀಯಂ ಎಂದಾಗಲೀ, ನೇಹಾಸ್ತಿ ಎಂದಾಗಲೀ ಆಕಾರವುಳ್ಳ ಜಗನ್ನಿಷೇಧವು ಇದೆ. ಆದ್ದರಿಂದ ನಿನಗೆ ಅಭಿಮತವಾದ ಬಾಧವು ವರ್ತಮಾನ ಕಾಲದಲ್ಲಂತೂ ಎಲ್ಲಿಯೂ ಕೇಳಿ ಬರುವುದಿಲ್ಲ. ಇನ್ನು ಭವಿಷ್ಯತ್ಕಾಲದಲ್ಲಿ ಅಂತಹ ಬಾಧವು ಉಂಟಾಗುತ್ತದೆ ಎಂಬುದಕ್ಕೆ ಏನು ಕಾರಣವೆಂದು ಹೇಳು.

**ಭಾವವಿಲಾಸಿನೀ –** ಅಸೌ ಜಗನ್ನಿಷೇಧಃ ॥ ೭೬೯-೭೭೦ ॥

'ಜಗತ್ತು ಸತ್ಯವೇ ಆಗಿದೆ' ಎಂಬ ನಿಶ್ಚಯಾತ್ಮಕ ಅನುಭವವಿಲ್ಲದಿದ್ದರೆ ಸಂಶಯಕ್ಕೆ ಅವಕಾಶವಿರುತ್ತಿತ್ತು. ಆದರೆ, ನಮಗೆ ಜಗತ್ತಿನ ಸತ್ಯತ್ವಾನುಭವವೇ ದೃಢವಾಗಿರುವುದರಿಂದ ಬಾಧಶಂಕೆಗೆ ಕಾರನವೇ ಇಲ್ಲದ್ದರಿಂದ ಅಂತಹ ಶಂಕೆಯು ಉಂಟಾಗಲು ಸಾಧ್ಯವಿಲ್ಲ ಎಂದು ಭಾವ.

ಬಾಧಶಂಕಾ ತು ಮಿಥ್ಯಾತ್ವಶಂಕಾಂ ಕುರ್ಯಾನ್ನ ನಿಶ್ಚಯಂ ।
ನ ಚೇತ್ ತಯ್ಯೈವ ಸಚ್ಚ ಸ್ಯಾದ್ ಯತ್ ಸಾ ಕೋಟ್ಯವಿರೋಧಿನೀ॥ ೭೭೧ ॥

**ಅರ್ಥ-** ಬಾಧಶಂಕಾ ತು= ಬಾಧಶಂಕೆಯಾದರೂ, ಮಿಥ್ಯಾತ್ವಶಂಕಾಂ= ಮಿಥ್ಯಾತ್ವಶಂಕೆಯನ್ನು, ಕುರ್ಯಾತ್= ಉಂಟುಮಾಡಬಹುದು, ನಿಶ್ಚಯಂ= ಮಿಥ್ಯಾತ್ವ

ನಿಶ್ಚಯವನ್ನು, ನ ಕುರ್ಯಾತ್= ಉಂಟುಮಾಡುವುದಿಲ್ಲ. ನ ಚೇತ್= ಇಲ್ಲದಿದ್ದರೆ, ತಯೈವ= ಆ ಬಾಧಶಂಕೆಯಿಂದಲೇ, ಸಚ್ಚ ಸ್ಯಾತ್= ಸತ್ಯತ್ವವೂ ಸಿದ್ಧವಾಗಲಿ, ಯತ್= ಏಕೆಂದರೆ, ಸಾ= ಆ ಶಂಕೆಯು, ಕೋಟ್ಯವಿರೋಧಿನೀ= ಎರಡು ಕೋಟಿಗಳನ್ನು ಉಲ್ಲೇಖ ಮಾಡುವುದಷ್ಟೇ.

**ಅನುವಾದ-** ಬಾಧಶಂಕೆಯು ಮಿಥ್ಯಾತ್ವಶಂಕೆಯನ್ನು ಉಂಟುಮಾಡಬಹುದೇ ಹೊರತು ಮಿಥ್ಯಾತ್ವ ನಿಶ್ಚಯವನ್ನು ಉಂಟುಮಾಡುವುದಿಲ್ಲ. ಇಲ್ಲದಿದ್ದರೆ ಬಾಧಶಂಕೆಯಿಂದಲೇ ಜಗತ್ತಿಗೆ ಸತ್ಯತ್ವವೂ ಸಿದ್ಧವಾಗಲೀ. ಏಕೆಂದರೆ ಆ ಶಂಕೆಯು ಕೋಟಿದ್ವಯವನ್ನು ಉಲ್ಲೇಖ ಮಾಡುವುದಷ್ಟೇ?

**ಭಾವವಿಲಾಸಿನೀ** – ಕಿಂಚ ಭಾವಿಬಾಧಕಶಂಕಯಾ ನ ಮಿಥ್ಯಾತ್ವನಿಶ್ಚಯ ಇತ್ಯಾಹ – **ಬಾಧಶಂಕೇತಿ** ॥ ತಥೈವ ಬಾಧಶಂಕಯೈವ । ಯತ್ ಯಸ್ಮಾತ್ । ಸಾ ಶಂಕಾ (ಅ)ವಿರೋಧಿನೀ ಮಿಥ್ಯಾತ್ವಸ್ಯೈಕ ಕೋಟ್ಯೋಲ್ಲೇಖೇ ತದ್ವಿರುದ್ಧಸತ್ಯತ್ವಮಪರಕೋಟ್ಯೋಲ್ಲಿಖಂತೀತ್ಯರ್ಥಃ ॥ ೭೭೧ ॥

**ವಿವರಣೆ-** ಬಾಧಶಂಕೆ ಎಂದರೆ ಬಾಧ ಮತ್ತು ಬಾಧಾಭಾವ ಕೋಟಿಗಳನ್ನು ಉಲ್ಲೇಖಿಸುವ ಸಂಶಯ. ಆದ್ದರಿಂದ ಮಿಥ್ಯಾತ್ವ ತದಭಾವ ಶಂಕೆಯು ಉಂಟಾಗಬಹುದು. ಮಿಥ್ಯಾತ್ವಾಭಾವವೆಂದರೆ ಸತ್ಯತ್ವವೆಂದೇ ಅರ್ಥ. ಆದ್ದರಿಂದ ಮಿಥ್ಯಾತ್ವ, ಸತ್ಯತ್ವ ಶಂಕೆಯೇ ಉಂಟಾಗಬಹುದೇ ಹೊರತಾಗಿ ಮಿಥ್ಯಾತ್ವ ಕೋಟಿಯ ನಿಶ್ಚಯವಾಗುವುದಿಲ್ಲ. ಮಿಥ್ಯಾತ್ವ ಕೋಟಿಯು ನಿಶ್ಚಯವಾಗುತ್ತದೆ ಎಂದು ಹೇಳಿದರೆ ಇನ್ನೊಂದು ಕೋಟಿಯಾದ ಸತ್ಯತ್ವದ ನಿಶ್ಚಯವು ಏಕಾಗಬಾರದು? ನಿಶ್ಚಯಾತ್ಮಕವಾದ ಜ್ಞಾನದಲ್ಲಿ ಅದು ಯಥಾರ್ಥವಾಗಿರಲಿ ಅಥವಾ ಅಯಥಾರ್ಥವಾಗಿರಲಿ ಒಂದೇ ಕೋಟಿಯು ತೋರುತ್ತದೆ. ಪರಸ್ಪರ ವಿರುದ್ಧವಾದ ಕೋಟಿಗಳು ತೋರುವುದಿಲ್ಲ. ಆದರೆ ಶಂಕೆಯಲ್ಲಿ ಉಲ್ಲೇಖಿಸಲ್ಪಡುವ ಕೋಟಿಗಳು ಪರಸ್ಪರವಾಗಿ ವಿರುದ್ಧವಾದರೂ ತೋರುತ್ತವೆ. ಸಂಶಯವು ಎರಡು ಕೋಟಿಗಳು ಒಟ್ಟಿಗೆ ತೋರುವುದಕ್ಕೆ ವಿರೋಧಿಯಲ್ಲ. ಒಂದು ಕೋಟಿಯಿಂದ ಒಂದು ನಿಶ್ಚಯವಾಗುವುದಾದರೆ ಇನ್ನೊಂದು ಕೋಟಿಯಿಂದ ಅದಕ್ಕೆ ವಿರುದ್ಧವಾದುದರ ನಿಶ್ಚಯ ಏಕಾಗಬಾರದು ಎಂದು ಅಭಿಪ್ರಾಯ.

ತ್ರೈಕಾಲಿಕನಿಷೇಧೋಪಿ ನ ಸ್ವರೂಪೇಣ ತೇ ಮತೇ ।
ನೃಶೃಂಗವದಸತ್ತ್ವಾಪ್ತ್ಯಾ ತತಃ ಸತ್ತ್ವನಿಷೇಧನಂ ।
ಬಾಧೋವಶ್ಯಂ ತ್ವಯಾ ವಾಚ್ಯಂ ಸ ತು ನ ಶ್ರೂಯತೇ ಕ್ವಚಿತ್ ॥ ೭೭೨ ॥

**ಅರ್ಥ-** ತೇ ಮತೇ= ನಿನ್ನ ಮತದಲ್ಲಿ, ನೃಶೃಂಗವತ್= ನರವಿಷಾಣದಂತೆ, ಅಸತ್ತ್ವಾಪ್ತ್ಯಾ= ಅಸತ್ತ್ವ ಪತ್ತಿ ಉಂಟಾಗುವುದರಿಂದ, ತ್ರೈಕಾಲಿಕನಿಷೇಧೋಪಿ= ತ್ರೈಕಾಲಿಕ

ನಿಷೇಧವೂ ಕೂಡ, ಸ್ವರೂಪೇಣ= ಸ್ವರೂಪದಿಂದಲೇ, ನ= ಅಲ್ಲ, ತತಃ= ಆದ್ದರಿಂದ, ಸತ್ತ್ವನಿಷೇಧನಂ= ಸತ್ತ್ವನಿಷೇಧವೇ, ಬಾಧಃ= ಬಾಧವೆಂದು, ಅವಶ್ಯಂ= ಅವಶ್ಯವಾಗಿ, ತ್ವಯಾ= ನಿನ್ನಿಂದ, ವಾಚ್ಯಃ= ಹೇಳಲ್ಪಡಬೇಕು, ಸ ತು= ಅಂತಹ ಸತ್ತ್ವನಿಷೇಧವಾದರೂ, ಕ್ವಚಿತ್= ಎಲ್ಲಿಯೂ, ನ ಶ್ರೂಯತೇ= ಕೇಳಿಬರುವುದಿಲ್ಲ.

**ಅನುವಾದ-** ಸ್ವರೂಪೇಣ ತ್ರೈಕಾಲಿಕ ನಿಷೇಧವನ್ನು ಮಾಡಿದರೆ ನಿನ್ನ ಮತದಲ್ಲಿ ಜಗತ್ತಿಗೆ ಅಸತ್ತ್ವವೇ ಉಂಟಾಗುವುದರಿಂದ ಜಗತ್ತಿನ ನಿಷೇಧವೂ ಸಹ ಸ್ವರೂಪೇಣ ತ್ರೈಕಾಲಿಕ ನಿಷೇಧವಲ್ಲ. ಆದ್ದರಿಂದ ಸತ್ತ್ವನಿಷೇಧವೇ ಬಾಧವೆಂದು ನೀನು ಅವಶ್ಯವಾಗಿ ಹೇಳಲೇಬೇಕು. ಅಂತಹ ಸತ್ತ್ವನಿಷೇಧವಾದರೂ ಎಲ್ಲಿಯೂ ಕಂಡುಬರುವುದಿಲ್ಲ (ಕೇಳಿಬರುವುದಿಲ್ಲ).

**ಭಾವವಿಲಾಸಿನೀ –** ನನು ಮಾಸ್ತು ಸತ್ಯಂ ನೇತಿ ಜಗತೋ ನಿಷೇಧಃ ಕಿಂತು ತ್ರೈಕಾಲಿಕನಿಷೇಧ ಏವ ಬಾಧೋ ಭವಿಷ್ಯತೀತ್ಯತ ಆಹ – **ತ್ರೈಕಾಲಿಕೇತಿ** ॥ ಸಃ ಸತ್ತ್ವನಿಷೇಧಃ । ಸ ಇತ್ಯುಪಲಕ್ಷಣಮ್ । ಪ್ರಾಗುಕ್ತಯುಕ್ತ್ಯಾ ತ್ರೈಕಾಲಿಕನಿಷೇಧೋಽಪಿ ನ ಶ್ರೂಯತ ಇತಿ ದ್ರಷ್ಟವ್ಯಮ್ । ಇದಮುಕ್ತಂ ಭವತಿ । ವಿಶ್ವಂ ನಾಸ್ತೀತಿ ನಿಷೇಧೋ ಘಟೋ ನಾಸ್ತೀತಿವನ್ನ ಮಿಥ್ಯಾತ್ವಪ್ರಯೋಜಕೋ ಬಾಧಃ । ತ್ರೈಕಾಲಿಕನಿಷೇಧೋಽಪ್ಯಸತ್ತ್ವಾಪಾದಕತ್ವಾನ್ನಪರಮತೇ ಬಾಧಃ । ನ ಚಾಸೌ ಶ್ರೂಯತೇ । ಸತ್ಯತ್ವನಿಷೇಧಸ್ತು ಬಾಧಃ ಸ್ಯಾತ್ । ಅಶ್ರುತತ್ವಾನ್ನ ಜಗತಿ ಸ ವಕ್ತುಂ ಶಕ್ಯಃ । ಅತಃ ಕಥಂ ಬಾಧಶಂಕೇತಿ ॥ ೭೭೨ ॥

**ವಿವರಣೆ-** ಸತ್ತ್ವನಿಷೇಧವೂ ಎಲ್ಲಿಯೂ ಇಲ್ಲ ಎಂಬುದು ಉಪಲಕ್ಷಣ. ತ್ರೈಕಾಲಿಕ ನಿಷೇಧವೂ ಎಲ್ಲಿಯೂ ಇಲ್ಲ ಎಂಬುದನ್ನೂ ಇಟ್ಟುಕೊಳ್ಳಬೇಕು. ಒಟ್ಟು ಇಷ್ಟು ಅಭಿಪ್ರಾಯ. 'ವಿಶ್ವಂ ನಾಸ್ತಿ' ಎಂಬ ನಿಷೇಧವು 'ಘಟೋ ನಾಸ್ತಿ' ಎಂಬ ನಿಷೇಧದಂತೆ ಮಿಥ್ಯಾತ್ವ ಪ್ರಯೋಜಕವಾದ ಬಾಧರೂಪವಾಗುವುದಿಲ್ಲ. ತ್ರೈಕಾಲಿಕ ನಿಷೇಧವೂ ಸಹ ಅಸತ್ತ್ವಾಪಾದಕವಾದುದರಿಂದ ಪರಮತದಲ್ಲಿ ಬಾಧವೆಂದು ಅಂಗೀಕರಿಸಲ್ಪಡುವುದಿಲ್ಲ. ಮತ್ತು ತ್ರೈಕಾಲಿಕ ನಿಷೇಧವು ಎಲ್ಲಿಯೂ ಇಲ್ಲ. ಸತ್ತ್ವನಿಷೇಧವು ಮಾತ್ರ ಬಾಧವಾಗುತ್ತದೆ. ಆದರೆ ಶ್ರುತಿಯಲ್ಲಿ ಎಲ್ಲಿಯೂ ಸತ್ತ್ವನಿಷೇಧವು ಇಲ್ಲದಿರುವುದರಿಂದ ಅಂತಹ ಬಾಧವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಬಾಧಶಂಕೆ ಉಂಟಾಗಲು ಏನು ಕಾರಣ ಎಂದು ಅಭಿಪ್ರಾಯ.

ಕಿಂಚ ತ್ರಿಕಾಲನಾಸ್ತಿತ್ವಂ ಬಾಧಃ ಕಿಲ ಭವನ್ಮತೇ ।
ನಾಸ್ತ್ಯದ್ವಿತೀಯಮಿತ್ಯಾದೌ ವರ್ತಮಾನಾರ್ಥಕೋಽಸ್ತಿ ಲಟ್ ।
ನ ವಿದ್ಯತೇ ದ್ವಿತೀಯಂ ಚ ಯಸ್ಯ ತದ್ಧ್ಯದ್ವಿತೀಯಕಂ ॥ ೭೭೩ ॥

**ಅರ್ಥ-** ಕಿಂಚ= ಮತ್ತು, ಭವನ್ಮತೇ= ನಿನ್ನ ಮತದಲ್ಲಿ, ತ್ರಿಕಾಲನಾಸ್ತಿತ್ವಂ= ತ್ರೈಕಾಲಿಕ ನಿಷೇಧವು, ಬಾಧಃ ಕಿಲ= ಬಾಧವಷ್ಟೇ? ನಾಸ್ತಿ ಅದ್ವಿತೀಯಮಿತ್ಯಾದೌ= 'ನೇಹನಾನಾಸ್ತಿ

ಕಿಂಚನ' 'ಅದ್ವಿತೀಯಂ' ಬ್ರಹ್ಮ ಮೊದಲಾದ ವಾಕ್ಯಗಳಲ್ಲಿ, ವರ್ತಮಾನಾರ್ಥಕಃ= ವರ್ತಮಾನಾರ್ಥಕವಾದ, ಲಟ್ ಅಸ್ತಿ= ಲಟ್ ಪ್ರತ್ಯಯವಿದೆ, ನ ವಿದ್ಯತೇ ದ್ವಿತೀಯಂ ಯಸ್ಯ= ಯಾವುದಕ್ಕೆ ದ್ವಿತೀಯವಿಲ್ಲವೋ, ತದ್ಧಿ= ಅದೇ, ಅದ್ವಿತೀಯಕಂ= ಅದ್ವಿತೀಯವಾದುದಷ್ಟೇ ?

**ಅನುವಾದ-** ಮತ್ತು ನಿನ್ನ ಮತದಲ್ಲಿ ತ್ರೈಕಾಲಿಕ ನಿಷೇಧವು ಬಾಧವಷ್ಟೇ ? 'ನೇಹ ನಾನಾಸ್ತಿ' 'ಅದ್ವಿತೀಯಂ' ಮೊದಲಾದ ವಾಕ್ಯಗಳಲ್ಲಿ ವರ್ತಮಾನಾರ್ಥಕವಾದ ಲಟ್ ಪ್ರತ್ಯಯವಿದೆ. 'ನ ವಿದ್ಯತೇ ದ್ವಿತೀಯಂ ಯಸ್ಯ' ಎಂಬ ವಿಗ್ರಹವಾಕ್ಯದಿಂದಲೇ ಅದ್ವಿತೀಯಂ ಎಂದು ಸಮಾಸವಾಗುವುದಷ್ಟೇ ?

**ಭಾವವಿಲಾಸಿನೀ –** ತ್ರೈಕಾಲಿಕನಿಷೇಧಸ್ಯಾಶ್ರುತತ್ವಂ ಸ್ಮಾರಯತಿ ॥ **ಕಿಂಚೇತಿ** ॥ ೭೭೩ ॥

**ವಿವರಣೆ-** ಹಿಂದೆ ಹೇಳಿದ ತ್ರೈಕಾಲಿಕ ನಿಷೇಧಾಭಾವವನ್ನೇ ಇಲ್ಲಿ ಮತ್ತೊಮ್ಮೆ ಸ್ಮರಣೆಗೆ ತಂದುಕೊಡುತ್ತಿದ್ದಾರೆ. 'ನೇಹ ನಾನಾಸ್ತಿ' ಎಂಬಲ್ಲಿ ಅಸ್ತಿ ಎಂಬಲ್ಲಿ ಲಟ್ ಪ್ರತ್ಯಯವಿದೆ. 'ಅದ್ವಿತೀಯಂ' ಎಂಬಲ್ಲಿ ಲಟ್ ಪ್ರತ್ಯಯವು ಕಾಣುವುದಿಲ್ಲ. ಆದ್ದರಿಂದ ವಿಗ್ರಹವಾಕ್ಯವನ್ನು ಪ್ರದರ್ಶನೆ ಮಾಡಿ ಲಟ್ ಪ್ರತ್ಯಯವನ್ನು ತೋರಿಸುತ್ತಿದ್ದಾರೆ.

ಅತೋ ದ್ವೇಧಾಪಿ ಬಾಧಸ್ತೇ ಶ್ರುತೇರ್ಹೃದಯಶೋಧನೇ ।
ನಾಸ್ತಿ ತದ್ ಬಾಧ ಏವಾಯಂ ನಾಭೂದಸ್ತಿ ಭವಿಷ್ಯತಿ ॥ ೭೭೪ ॥

**ಅರ್ಥ-** ಅತಃ= ಆದ್ದರಿಂದ, ಶ್ರುತೇರ್ಹೃದಯಶೋಧನೇ= ಶ್ರುತಿಯ ಅಭಿಪ್ರಾಯವನ್ನು ವಿಮರ್ಶೆ ಮಾಡಿದರೆ, ದ್ವೇಧಾಪಿ= ತ್ರೈಕಾಲಿಕ ನಿಷೇಧ ಮತ್ತು ತ್ರೈಕಾಲಿಕ ಸತ್ತ್ವನಿಷೇಧ ಎಂಬ ಎರಡು ರೂಪವುಳ್ಳ, ತೇ ಬಾಧಃ= ನಿನಗೆ ಅಭಿಪ್ರೇತವಾದ ಬಾಧವು, ನಾಸ್ತಿ= ಇಲ್ಲ, ತತ್= ಆದ್ದರಿಂದ, ಅಯಂ ಬಾಧ ಏವ= ಈ ನಿನ್ನ ಬಾಧವೇ, ನ ಭೂತ್= ಹಿಂದೆ ಇರಲಿಲ್ಲ, ನಾಸ್ತಿ= ಈಗ ಇಲ್ಲ, ನ ಭವಿಷ್ಯತಿ= ಮುಂದೆ ಉಂಟಾಗುವುದಿಲ್ಲ.

**ಅನುವಾದ-** ಶ್ರುತಿಯ ಹೃದಯವನ್ನು ವಿಮರ್ಶೆ ಮಾಡಿದರೆ ನಿನಗೆ ಅಭಿಮತವಾದ ತ್ರೈಕಾಲಿಕ ನಿಷೇಧರೂಪವಾದ ಅಥವಾ ತ್ರೈಕಾಲಿಕ ಸತ್ತ್ವನಿಷೇಧರೂಪವಾದ ಬಾಧವು ಎಲ್ಲಿಯೂ ಇಲ್ಲ. ಆದ್ದರಿಂದ ನಿನ್ನ ಬಾಧವೇ ವರ್ತಮಾನಕಾಲದಲ್ಲಿ ಇಲ್ಲ, ಭೂತಕಾಲದಲ್ಲಿ ಇರಲಿಲ್ಲ ಮತ್ತು ಭವಿಷ್ಯತ್ಕಾಲದಲ್ಲಿ ಇರುವುದಿಲ್ಲ.

**ಭಾವವಿಲಾಸಿನೀ –** ತತ್ ತಸ್ಮಾತ್ ತ್ರಿಕಾಲನಾಸ್ತಿತ್ವಸ್ಯ ಕ್ವಾಪ್ಯಶ್ರವಣಾತ್ ॥ ೭೭೪ ॥

**ವಿವರಣೆ-** ತ್ರೈಕಾಲಿಕ ನಿಷೇಧವೇ ಬಾಧವೆಂದು ಹೇಳಿದರೆ ಅದು ಜಗತ್ತಿಗೆ ಬರುವುದಿಲ್ಲ. ನಿನಗೆ ಅಭಿಮತವಾದ ಬಾಧಕ್ಕೇ ಬರುತ್ತದೆ. ಆದ್ದರಿಂದ ನಿನ್ನ ಬಾಧಕ್ಕೇ ಬಾಧ್ಯತ್ವವು ಬರುವುದರಿಂದ ಜಗತ್ತು ಅಬಾಧ್ಯವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ನ ಹೀದಾನೀಂ ವರ್ತಮಾನವೇದಾದನ್ಯೋಽಪಿ ಕಶ್ಚನ ।
ಭವಿಷ್ಯನ್ನಸ್ತಿ ತೇ ವೇದೋ ಬಾಧೋಽಯಂ ಯತ್ರ ಗೀಯತೇ ॥ ೭೭೫ ॥

**ಅರ್ಥ-** ಇದಾನೀಂ ವರ್ತಮಾನವೇದಾತ್= ಈಗಿರುವ ವೇದಕ್ಕಿಂತ, ಅನ್ಯೋಽಪಿ= ಭಿನ್ನವಾದ, ಕಶ್ಚನ= ಯಾವುದೋ, ಭವಿಷ್ಯನ್ ವೇದಃ= ಭವಿಷ್ಯಕಾಲದ ವೇದವು, ಯತ್ರ= ಯಾವ ವೇದದಲ್ಲಿ, ಅಯಂ ಬಾಧಃ= ನಿನಗೆ ಅಭಿಮತವಾದ ಈ ಬಾಧವು, ಗೀಯತೇ= ಹೇಳಲ್ಪಡುತ್ತದೆಯೋ ಅಂತಹ ವೇದವು, ತೇ= ನಿನಗೆ, ನ ಹಿ ಅಸ್ತಿ= ಇಲ್ಲವಷ್ಟೇ.

**ಅನುವಾದ-** ಈಗ ಇರುವ ವೇದಕ್ಕಿಂತಲೂ ಅತಿರಿಕ್ತವಾದ ಮತ್ತು ಯಾವ ವೇದದಲ್ಲಿ ನಿನಗೆ ಅಭಿಮತವಾದ ಬಾಧವು ಹೇಳಲ್ಪಡುತ್ತದೆಯೋ, ಅಂತಹ ಭವಿಷ್ಯತ್ ವೇದವು ನಿನಗೂ ಇಲ್ಲವಷ್ಟೇ ?

**ಭಾವವಿಲಾಸಿನೀ** – ಯತ್ರ ಭವಿಷ್ಯದ್ವೇದೇ । ಅತೋ ಭಾವಿಬಾಧಕಶಂಕಾಪಿ ನ ಘಟತ ಇತಿ ಭಾವಃ॥೭೭೫ ॥

**ವಿವರಣೆ-** ವೇದವು ಅನಾದಿನಿತ್ಯವಾಗಿರುವುದರಿಂದ ಈಗ ಇಲ್ಲದಿರುವ ವೇದದಲ್ಲಿ ಅಂತಹ ಬಾಧವು ಹೇಳಲ್ಪಡುತ್ತದೆ ಎಂದು ಹೇಳುವಂತಿಲ್ಲ. ವೇದಕ್ಕೆ ಅನಾದಿನಿತ್ಯತ್ವವನ್ನು ಒಪ್ಪಿದವರಿಗೆ ಈಗ ಇಲ್ಲದಿರುವ ವೇದ ಎಂಬುದು ವ್ಯಾಹತವಾಗುತ್ತದೆ.

ನಿರ್ವಿಕಲ್ಪಕರೂಪೈವ ಚರಮಾಪಿ ಪ್ರಮಾ ತವ ।
ನ ತತ್ರ ನಾಸ್ತಿತಾಬೋಧೋ ಬಾಧೋಽತಃ ಕ್ವ ಭವಿಷ್ಯತಿ ॥ ೭೭೬ ॥

ವಿಮತಾ ಜಗತೀ ಸೇಯಂ ಸತ್ಯೈವ ಪರಮಾರ್ಥತಃ ।
ಅಬಾಧ್ಯತ್ವಾದ್ ಯಥಾ ಬ್ರಹ್ಮೇತ್ಯನುಮಾ ತನ್ನ ಬಾಧ್ಯತೇ ।
ತ್ರೇಧಾಪಿ ಬಾಧಾಯೋಗೇನ ಬಾಧಾಯೋಗ್ಯಂ ಯತೋ ಜಗತ್ ॥೭೭೭॥

**ಅರ್ಥ-** ತವ= ನಿನಗೆ, ಚರಮಾ ಪ್ರಮಾಪಿ= ಚರಮ ಸಾಕ್ಷಾತ್ಕಾರವೂ ಕೂಡ, ನಿರ್ವಿಕಲ್ಪಕ ರೂಪೈವ= ನಿರ್ವಿಕಲ್ಪಕರೂಪವಾದದ್ದೇ. ತತ್ರ= ಅದರಲ್ಲಿ, ನಾಸ್ತಿತಾ ಬೋಧಃ= ನಾಸ್ತಿತಾ ಬೋಧವು (ನಾಸ್ತಿತ್ವ ವಿಷಯಕತ್ವವು), ನ= ಇಲ್ಲ. ಅತಃ= ಆದ್ದರಿಂದ, ಬಾಧಃ= ಬಾಧವು, ಕ್ವ ಭವಿಷ್ಯತಿ= ಎಲ್ಲಿ ಉಂಟಾಗುತ್ತದೆ?

ಸೇಯಂ ವಿಮತಾ ಜಗತೀ= ಅಂತಹ ಈ ವಿಪ್ರತಿಪನ್ನವಾದ ಜಗತ್ತು, ಪರಮಾರ್ಥತಃ ಸತ್ಯೈವ= ಪಾರಮಾರ್ಥಿಕವಾಗಿ ಸತ್ಯವೇ ಆಗಿದೆ, ಅಬಾಧ್ಯತ್ವಾತ್= ಅಬಾಧ್ಯವಾಗಿರುವುದರಿಂದ, ಯಥಾ ಬ್ರಹ್ಮ= ಬ್ರಹ್ಮನಂತೆ, ಇತ್ಯನುಮಾ= ಎಂಬ ಅನುಮಾನವು, ತತ್= ಆ ಕಾರಣದಿಂದ, ನ ಬಾಧ್ಯತೇ= ಬಾಧಿಸಲ್ಪಡುವುದಿಲ್ಲ (ದುಷ್ಟವಾಗುವುದಿಲ್ಲ), ತ್ರೇಧಾಪಿ= ಮೂರು ರೀತಿಯಿಂದಲೂ ಕೂಡ ಎಂದರೆ ವಿಶ್ವಂ ಸತ್ಯಂ ನ ಎಂಬ ರೂಪದಿಂದಲಾಗಲೀ, 'ವಿಶ್ವಂ ಕಾಲತ್ರಯೇಪಿ ನ' ಎಂಬ ರೂಪದಿಂದಾಗಲೀ, 'ವಿಶ್ವಂ ಕಾಲತ್ರಯೇ ಸತ್ ನ' ಎಂಬ ರೂಪದಿಂದಾಗಲೀ, ಬಾಧಾಯೋಗೇನ= ಬಾಧವು ಕೂಡುವುದಿಲ್ಲವಾದ್ದರಿಂದ, ಜಗತ್= ಜಗತ್ತು, ಯತಃ ಬಾಧಾಯೋಗ್ಯಂ= ಬಾಧಾಯೋಗ್ಯವಾದ ಕಾರಣದಿಂದ (ಅಬಾಧ್ಯತ್ವರೂಪವಾದ ಹೇತುವು ಅಲ್ಲಿ ಬಂದೇ ಬರುತ್ತದೆ).

**ಅನುವಾದ-** ನಿನಗೆ ಚರಮ ಪ್ರಮೆಯೂ ಕೂಡ ನಿರ್ವಿಕಲ್ಪಕರೂಪವಾದುದೇ. ಅದರಲ್ಲಿ ನಾಸ್ತಿತ್ವದ ಉಲ್ಲೇಖವಿಲ್ಲ. ಆದ್ದರಿಂದ ಬಾಧವು ಎಲ್ಲಿ ಉಂಟಾಗುತ್ತದೆ? 'ವಿಮತಾ ಜಗತೀ ಪರಮಾರ್ಥತಃ ಸತೀ ಅಬಾಧ್ಯತ್ವಾತ್ ಯಥಾ ಬ್ರಹ್ಮ' ಎಂಬ ಜಗತ್ತಿಗೆ ಸತ್ಯತ್ವವನ್ನು ಸಾಧನೆ ಮಾಡುವ ನಮ್ಮ ಅನುಮಾನವು ಬಾಧ್ಯವಾಗುವುದಿಲ್ಲ. ಮೂರು ರೀತಿಯಿಂದಲೂ ಬಾಧವು ಕೂಡುವುದಿಲ್ಲವಾದ್ದರಿಂದ ಜಗತ್ತಿಗೆ ಬಾಧಾಯೋಗ್ಯತ್ವ ಇರುವ ಕಾರಣ ಜಗತ್ತಿನಲ್ಲಿ ಅಬಾಧ್ಯತ್ವ ರೂಪ ಹೇತುವು ಬರುವುದರಿಂದ ಸ್ವರೂಪಾಸಿದ್ಧಿರೂಪವಾದ ದೋಷವು ಇಲ್ಲ. ಬಾಧರೂಪವಾದ ದೋಷವಂತೂ ಹಿಂದೆ ಮತ್ತು ಈಗ ಹೇಳುವ ರೀತಿಯಲ್ಲಿ ಇಲ್ಲವೇ ಇಲ್ಲ. ಆದ್ದರಿಂದ ಅನುಮಾನಕ್ಕೆ ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ –** ಪ್ರಕಾರಾಂತರೇಣಾಪಿ ಭಾವಿಬಾಧಕಶಂಕಾಂ ನಿವಾರಯತಿ ।। ನಿರ್ವಿಕಲ್ಪಕೇತಿ।। ತತ್ ತಸ್ಮಾತ್ । ಉಕ್ತವಿಧಯಾ ಬಾಧಸ್ಯೈವಾಭಾವಾತ್ । ನ ಬಾಧ್ಯತೇ ಅಸಿದ್ಧ್ಯಾಖ್ಯದೋಷೇಣ ಬಾಧಿತವಿಷಯತ್ವಾಖ್ಯದೋಷೇಣ ಚ ದೂಷ್ಯತ ಇತ್ಯರ್ಥಃ । ತ್ರೇಧಾ ವಿಶ್ವಂ ಸತ್ಯಂ ನೇತ್ಯಾಕಾರೇಣ, ವಿಶ್ವಂ ಕಾಲತ್ರಯೇऽಪಿ ನೇತ್ಯಾಕಾರೇಣ, ವಿಶ್ವಂ ಕಾಲತ್ರಯೇ ಸನ್ನೇತ್ಯಾಕಾರೇಣೇತ್ಯರ್ಥಃ । ಯತ ಇತ್ಯಸ್ಯ ಪೂರ್ವೇಣಾನ್ವಯಃ ।। ೭೭೬-೭೭೭ ।।

ವಿಶ್ವಂ ಸತ್ಯಮಿತಿ ಸ್ಪಷ್ಟಂ ಸತ್ಯತ್ವಂ ಗರ್ಜತಿ ಶ್ರುತಿಃ ।
ವಿಶ್ವಂ ಮಿಥ್ಯೇತಿ ವಿಸ್ಪಷ್ಟಂ ಮಿಥ್ಯಾತ್ವಂ ಕುತ್ರ ಕಥ್ಯತೇ ।। ೭೭೮ ।।

**ಅರ್ಥ-** ವಿಶ್ವಂ ಸತ್ಯಮಿತಿ= ವಿಶ್ವವು ಸತ್ಯ ಎಂದು, ಸ್ಪಷ್ಟಂ= ಸ್ಪಷ್ಟವಾಗಿ, ಶ್ರುತಿಃ= ಶ್ರುತಿಯು, ಸತ್ಯತ್ವಂ= ಸತ್ಯತ್ವವನ್ನು, ಗರ್ಜತಿ= ಗರ್ಜಿಸುತ್ತಿದೆ, ವಿಶ್ವಂ ಮಿಥ್ಯೇತಿ= ವಿಶ್ವವು ಮಿಥ್ಯ ಎಂದು, ವಿಸ್ಪಷ್ಟಂ= ಸ್ಪಷ್ಟವಾಗಿ, ಮಿಥ್ಯಾತ್ವಂ= ಮಿಥ್ಯಾತ್ವವು, ಕುತ್ರ= ಎಲ್ಲಿ, ಕಥ್ಯತೇ= ಹೇಳಲ್ಪಡುತ್ತದೆ?

**ಅನುವಾದ-** ವಿಶ್ವವು ಸತ್ಯವೆಂದು ಸ್ಪಷ್ಟವಾಗಿ ಶ್ರುತಿಯು ಸತ್ಯತ್ವವನ್ನು ಗರ್ಜಿಸುತ್ತಿದೆ. ವಿಶ್ವಂ ಮಿಥ್ಯಾ ಎಂದು ಸ್ಪಷ್ಟವಾಗಿ ಮಿಥ್ಯಾತ್ವವನ್ನು ಹೇಳುವ ಶ್ರುತಿಯು ಎಲ್ಲಿದೆ?

**ಭಾವವಿಲಾಸಿನೀ –** ನ ಕೇವಲಂ ಸತ್ಯಂ ನೇತ್ಯಸ್ಯಾಶ್ರುತತ್ವಂ ಪ್ರತ್ಯುತ ಸತ್ತ ಸ್ಯೈವ ಶ್ರುತತ್ವಮಸ್ತೀತ್ಯಾಹ– ವಿಶ್ವಂ ಸತ್ಯಮಿತಿ ॥ ಕಿಂ ಚ ಸತ್ಯತ್ವಶ್ರುತಿವದ್ವಿಶ್ವಂ ಮಿಥ್ಯೇತಿ ಸ್ಪಷ್ಟಶ್ರುತ್ಯಭಾವಾಚ್ಚ ನ ಮಿಥ್ಯಾತ್ವಮಿತ್ಯಾಹ– ವಿಶ್ವಂ ಮಿಥ್ಯೇತಿ ॥ ೭೭೮ ॥

**ವಿವರಣೆ-** 'ವಿಶ್ವಂ ಸತ್ಯಂ ಮಘವಾನಾ' ಎಂಬ ಮೊದಲಾದ ವೇದಮಂತ್ರಗಳು 'ಯಾಥಾರ್ಥ ತತೋ ಅರ್ಥಾನ್ ವ್ಯದಧಾತ್' ಮೊದಲಾದ ಉಪನಿಷದ್ ವಾಕ್ಯಗಳು ಸ್ಪಷ್ಟವಾಗಿ ಸತ್ಯತ್ವವನ್ನು ಹೇಳುತ್ತದೆ. ವಿಶ್ವಕ್ಕೆ ಮಿಥ್ಯಾತ್ವವನ್ನು ಹೇಳುವ ಶ್ರುತಿವಾಕ್ಯವು ಎಲ್ಲಿಯೂ ಇಲ್ಲ ಎಂದು ಅಭಿಪ್ರಾಯ.

ತಿಲಾನುನ್ಮಥ್ಯ ಕಸ್ತೈಲಂ ಘೃತೇ ಸತ್ಯಪಿ ಸಾಧಯೇತ್ ।
ಕಿಂ ಶ್ರೌತಸತ್ಯತಾಂ ತ್ಯಕ್ತ್ವಾ ಮಿಥ್ಯಾತ್ವಾಯೋಕ್ತಿಪೀಡನೈಃ ॥ ೭೭೯ ॥

**ಅರ್ಥ-** ಘೃತೇ ಸತ್ಯಪಿ= ಘೃತವು ಇದ್ದರೂ ಕೂಡ, ತಿಲಾನುನ್ಮಥ್ಯ= ಎಳ್ಳು ಕಾಳುಗಳನ್ನು ಹಿಂಡಿ, ಕಃ= ಯಾವನು, ತೈಲಂ= ಎಣ್ಣೆಯನ್ನು, ಸಾಧಯೇತ್= ಸಂಪಾದಿಸುತ್ತಾನೆ? ಶ್ರೌತಸತ್ಯತಾಂ= ಶ್ರುತಿಯು ಹೇಳಿದ ಸತ್ಯತ್ವವನ್ನು, ತ್ಯಕ್ತ್ವಾ= ಪರಿತ್ಯಜಿಸಿ, ಮಿಥ್ಯಾತ್ವಾಯ= ಮಿಥ್ಯಾತ್ವವನ್ನು ಸಂಪಾದನೆ ಮಾಡುವುದಕ್ಕೋಸ್ಕರ, ಉಕ್ತಿಪೀಡನೈಃ= ವೇದವಾಕ್ಯಗಳನ್ನು ಹಿಂಸಿಸುವುದರಿಂದ, ಕಿಂ= ಏನು ಪ್ರಯೋಜನ?

**ಅನುವಾದ-** ಘೃತವು ಇರುವಾಗ ಯಾವನು ಎಳ್ಳು ಕಾಳುಗಳನ್ನು ಹಿಂಡಿ ತೈಲವನ್ನು ಸಂಪಾದಿಸುತ್ತಾನೆ? ಶ್ರುತಿಯಲ್ಲಿ ಹೇಳಿದ ಸ್ಪಷ್ಟವಾಕ್ಯಗಳನ್ನು ಬಿಟ್ಟು ಮಿಥ್ಯಾತ್ವವನ್ನು ಸಂಪಾದನೆ ಮಾಡಲು ಶ್ರೌತವಾಕ್ಯಗಳನ್ನು ಹಿಂಸಿಸುವುದರಿಂದ ಏನು ಪ್ರಯೋಜನ?

**ಭಾವವಿಲಾಸಿನೀ –** ಸ್ಪಷ್ಟಸತ್ಯತ್ವಶ್ರುತೌ ಸತ್ಯಾಮೈಕ್ಯಶ್ರುತ್ಯನ್ಯಥಾನುಪಪತ್ತ್ಯಾ ಮಿಥ್ಯಾತ್ವಕಲ್ಪನಂತು ನೋಚಿತಮಿತಿ ಸಾಹಿತ್ಯಮುದ್ರಯಾಽಽಹ – ತಿಲಾನಿತಿ ॥ ದಾರ್ಷ್ಟಾಂತಿಕೇಽಪಿ ಯೋಜಯತಿ ॥ ಕಿಮಿತಿ॥೭೭೯॥

**ವಿವರಣೆ-** ಮಿಥ್ಯಾತ್ವವು ಶ್ರೌತಾರ್ಥವಲ್ಲ. ಶ್ರುತಿಗೆ ಬಲಾತ್ಕಾರದಿಂದ ಅರ್ಥಾಂತರವನ್ನು ಮಾಡಿ ಆರ್ಥಿಕವಾಗಿ ಮಿಥ್ಯಾತ್ವವನ್ನು ಹೇಳಬೇಕಾಗುತ್ತದೆ ಎಂದು ಅಭಿಪ್ರಾಯ.

ಶ್ರೌತೋಽರ್ಥೋ ಮೇ ತವಾರ್ಥಾರ್ಥ ಶ್ರುತ್ಯೈವೃತ್ತ್ಯಂತರಂ ದಿಶೇತ್ ।
ಯತ್ ಪೃಥ್ವ್ಯೌರಸಪುತ್ರಸ್ಯ ದತ್ತಪುತ್ರಸ್ತು ದತ್ತಭುಕ್ ॥ ೭೮೦ ॥

**ಅರ್ಥ-** ಮೇ= ನನ್ನ, ಶ್ರೌತೋರ್ಥಃ= ಶ್ರುತಿಯ ಶಬ್ದಶಕ್ತಿಯಿಂದಲೇ ಲಭ್ಯವಾದ ಅರ್ಥವು, ತವ= ನಿನ್ನ, ಆರ್ಥಾರ್ಥಶ್ರುತ್ಯೈ= ಆರ್ಥಿಕಾರ್ಥವಾಗಿ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗೆ, ವೃತ್ಯಂತರಂ= ಅಮುಖ್ಯ ವೃತ್ತಿಯನ್ನು, ದಿಶೇತ್= ಕೊಡುತ್ತದೆ, ಯತ್= ಏಕೆಂದರೆ, ಔರಸಪುತ್ರಸ್ಯ= ತನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಿಗೆ, ಪೃಥು= ಆಸ್ತಿಯ ದೊಡ್ಡ ಭಾಗವು ಸಲ್ಲುತ್ತದೆ, ದತ್ತಪುತ್ರಸ್ತು= ದತ್ತಪುತ್ರನಾದರೂ, ದತ್ತಭುಕ್= ಔರಸಪುತ್ರನು ಕೊಟ್ಟಷ್ಟು ಮಾತ್ರ ತಂದೆಯ ಆಸ್ತಿಯನ್ನು ಸ್ವೀಕರಿಸುತ್ತಾನೆ.

**ಅನುವಾದ-** ನನ್ನ ಶ್ರೌತಾರ್ಥವಾದರೂ ಆರ್ಥಿಕವಾಗಿ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ನಿನ್ನ ಶ್ರುತಿಗೆ ವೃತ್ಯಂತರವನ್ನು (ಅಮುಖ್ಯವೃತ್ತಿಯನ್ನು) ಕೊಡುತ್ತದೆ. ಏಕೆಂದರೆ, ಔರಸ ಪುತ್ರನಿಗೆ ತಂದೆಯ ಆಸ್ತಿಯ ಬಹುಭಾಗವು ಸಲ್ಲುತ್ತದೆ. ದತ್ತಪುತ್ರನಾದರೂ, ಔರಸಪುತ್ರನು ಕೊಟ್ಟ ಭಾಗವನ್ನು ಮಾತ್ರ ಸ್ವೀಕರಿಸುತ್ತಾನೆ.

**ಭಾವವಿಲಾಸಿನೀ –** ಆರ್ಥಾರ್ಥಶ್ರುತ್ಯೈ ಆರ್ಥಿಕಾರ್ಥತಯಾ ಮಿಥ್ಯಾತ್ವಪ್ರತಿಪಾದಕಶ್ರುತ್ಯೈ । ವೃತ್ಯಂತರಮ್ ಅರ್ಥಾಂತರಮ್ । ಇದಮಪಿ ಸಾಹಿತ್ಯಮುದ್ರಯಾ ರಂಜಯತಿ ॥ ಯದಿತಿ॥ ಯತ್ ಯಸ್ಮಾತ್ । ಔರಸಪುತ್ರಸ್ಯ ಸ್ವೋದರಾದೇವ ಜಾತಪುತ್ರಸ್ಯ । ದತ್ತಪುತ್ರಃ ಅನ್ಯದ್ವಾರೋತ್ಪನ್ನಪುತ್ರಃ। ದತ್ತಭುಕ್ ಔರಸಪುತ್ರೇಣ ದತ್ತಭೂಮಿಮಾತ್ರಭುಕ್ । ಏವಮಿಹಾಪಿ ಸಾಕ್ಷಾಚ್ಛ್ರುತ್ಯೈವೋಕ್ತಾರ್ಥ ಶ್ರುತೇರೌರಸಾರ್ಥತ್ವಾನ್ನ ಚಾಲಯಿತುಂ ಶಕ್ಯಃ । ಆರ್ಥಿಕಾರ್ಥಸ್ತು ಅನುಮಾಫಲರೂಪತಯಾಽಮುಖ್ಯತ್ವಾತ್ । ಸತ್ಯತ್ವಶ್ರುತೇರನುಕೂಲಾರ್ಥ ಏವ ಪರ್ಯವಸ್ಯೇತ್। ಸ್ಪಷ್ಟಸತ್ಯತ್ವಶ್ರುತಿವಿರೋಧಾತ್ । ಐಕ್ಯಶ್ರುತೇರನ್ಯಥಾನುಪಪತ್ತಿರ್ನಮಿಥ್ಯಾತ್ವಮಾಕ್ಷಿಪೇತ್ । ಕಿಂತು ಸತ್ಯತ್ವಾನುಕೂಲಸಾದೃಶ್ಯಾದ್ಯರ್ಥಕತ್ವಮೇವಾಕ್ಷಿಪೇತ್ । ವಿಶ್ವಂ ಮಿಥ್ಯೇತ್ಯೇವ ಸಾಕ್ಷಾನ್ನಿರವಕಾಶಶ್ರುತಿರಸ್ತಿ ಚೇನ್ನ ಹಾತುಂ ಶಕ್ಯಾ । ಐಕ್ಯಶ್ರುತ್ಯನ್ಯಥಾನುಪಪತ್ತಿಸ್ತು ಸಿಂಹೋ ದೇವದತ್ತ ಇತ್ಯಾದಾವಿವ ಸಾದೃಶ್ಯಾರ್ಥಕತಯಾಪಿ ಪರಿಹರ್ತುಂ ಶಕ್ಯತ್ವಾನ್ನ ಮಿಥ್ಯಾತ್ವಸ್ಯೈವ ಸಾಧಿಕೇತಿ ಭಾವಃ ॥ ೭೮೦ ॥

**ವಿವರಣೆ-** ಶ್ರೌತಾರ್ಥವು ಔರಸಪುತ್ರನಂತೆ. ದತ್ತಪುತ್ರನೆಂದರೆ ಪತ್ನಿಯನ್ನು ಬಿಟ್ಟು ಬೇರೆಯವಳಲ್ಲಿ ಹುಟ್ಟಿದ ಪುತ್ರ ಎಂದು ಅರ್ಥ. ಅಂತಹ ದತ್ತಪುತ್ರನು ಔರಸಪುತ್ರನು ಕೊಟ್ಟ ಭಾಗವನ್ನು ಮಾತ್ರ ಸ್ವೀಕರಿಸುತ್ತಾನೆ. ಆದರಂತೆ ಇಲ್ಲಿ ಶ್ರೌತಾರ್ಥವು ಔರಸಪುತ್ರನಂತೆ ಸಾಕ್ಷಾತ್ತಾಗಿ ಶ್ರುತಿಯಿಂದಲೇ ಹೇಳಲ್ಪಡುವುದರಿಂದ ಅದನ್ನು ಅಲುಗಾಡಿಸಲು ಸಾಧ್ಯವಿಲ್ಲ. ಆರ್ಥಿಕಾರ್ಥವಾದರೂ ಅನುಮಾನದ ಫಲರೂಪವಾಗಿರುವುದರಿಂದ ದತ್ತ ಪುತ್ರನಂತೆ ಅಮುಖ್ಯವಾಗಿರುವ ಕಾರಣದಿಂದ ಸತ್ಯತ್ವ ಶ್ರುತಿಗೆ ಅನುಕೂಲವಾದ ಅರ್ಥವನ್ನೇ ಹೇಳಬೇಕು. ಸತ್ಯತ್ವ ಶ್ರುತಿಯ ಸ್ಪಷ್ಟವಿರೋಧವಿರುವುದರಿಂದ ಐಕ್ಯಶ್ರುತಿಗೆ ಇರುವ ಅನ್ಯಥಾ ಅನುಪಪತ್ತಿಯು ಮಿಥ್ಯಾತ್ವವನ್ನು ಆಕ್ಷೇಪ ಮಾಡಿಕೊಡುವುದಿಲ್ಲ. ಆದರೆ ಸತ್ಯತ್ವಕ್ಕೆ ಅನುಕೂಲವಾದ ಸಾದೃಶ್ಯಾದಿ ಅರ್ಥಗಳನ್ನೇ ಆಕ್ಷೇಪ ಮಾಡಿಕೊಡುತ್ತದೆ. 'ವಿಶ್ವಂ ಮಿಥ್ಯಾ' ಎಂಬ ನಿರವಕಾಶ ಶ್ರುತಿ

ಯಾವುದಾದರೂ ಇದ್ದರೆ ಆಗ ಅದರ ಅರ್ಥವನ್ನು ಪರಿತ್ಯಾಗ ಮಾಡಲು ಬರುತ್ತಿರಲಿಲ್ಲ. ಐಕ್ಯ ಶ್ರುತಿಯ ಅನುಪಪತ್ತಿಯಾದರೂ 'ಸಿಂಹೋ ದೇವದತ್ತಃ' ಎಂಬಲ್ಲಿ ಇದ್ದಂತೆ ಸಾದೃಶ್ಯಾರ್ಥದಲ್ಲಿ ಪರಿಹಾರವನ್ನು ಹೊಂದುವುದರಿಂದ ಮಿಥ್ಯಾತ್ವಕ್ಕೆ ಸಾಧಕವಾಗುವುದಿಲ್ಲ ಎಂದು ಅಭಿಪ್ರಾಯ.

**ಕಿಂಚೇದಂ ತೇ ತಿಲಾಕಾರಶಿಲಾನಾಮೇವ ಪೇಷಣಂ ।**
**ಯತೋ ಯತ್ನೇಪಿ ಮಹತಿ ಮಿಥ್ಯಾತ್ವಂ ನ ಶ್ರುತಿರ್ಜಗೌ ॥ ೭೮೧ ॥**

**ಅರ್ಥ-** ಕಿಂಚ= ಮತ್ತು, ಇದಂ= ಇದು, ತೇ= ನಿನಗೆ, ತಿಲಾಕಾರಶಿಲಾನಾಮೇವ= ಎಳ್ಳಿನ ಆಕಾರದಲ್ಲಿರುವ ಶಿಲೆಗಳ, ಪೇಷಣ ಮೇವ= ಹಿಂಡುವಿಕೆಯೇ ಸರಿ, ಯತಃ= ಏಕೆಂದರೆ, ಮಹತಿ ಯತ್ನೇಪಿ= ಮಹಾಪ್ರಯತ್ನವನ್ನು ಮಾಡಿದರೂ, ಶ್ರುತಿಃ= ಶ್ರುತಿಯು, ಮಿಥ್ಯಾತ್ವಂ= ಮಿಥ್ಯಾತ್ವವನ್ನು, ನ ಜಗೌ= ಹೇಳಲಿಲ್ಲ.

**ಅನುವಾದ-** ಮತ್ತು ಇದು ನಿನಗೆ ತಿಲಾಕಾರದ ಕಲ್ಲುಗಳನ್ನು ಹಿಂಡುವುದೇ ಆಗಿದೆ. ಏಕೆಂದರೆ ಮಹಾಪ್ರಯತ್ನವನ್ನು ಮಾಡಿದರೂ ಶ್ರುತಿಯು ಮಿಥ್ಯಾತ್ವವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ** – ಇದಂ ಶ್ರುತ್ಯಾ ಮಿಥ್ಯಾತ್ವಕಥನಮ್ । ಕುತ ಇತ್ಯತ ಆಹ–ಯತ ಇತಿ ॥ ಉಕ್ತವಿಧಯಾ ಶತಶಃ ಪ್ರಯತ್ನೇಽಪಿ ನೇಹ ನಾನೇತ್ಯಾದಿಶ್ರುತಿತೋ ಮಿಥ್ಯಾತ್ವಾಲಾಭಾದಿತಿ ಭಾವಃ ॥ ೭೮೧ ॥

**ವಿವರಣೆ-** ಘೃತವಿರುವಾಗ ತಿಲಗಳನ್ನು ಏಕೆ ಹಿಂಡುತ್ತೀಯೇ ಎಂಬ ಹಿಂದಿನ ಶ್ಲೋಕದಲ್ಲಿ, ತಿಲವನ್ನು ಹಿಂಡಿದರೂ ತೈಲವು ದೊರೆಯುತ್ತದೆ. ಅದು ಘೃತಕ್ಕೆ ಪ್ರತಿನಿಧಿಯಾಗಿರುತ್ತದೆ ಎಂಬ ಅರ್ಥವು ದೊರೆಯುವುದರಿಂದ ಅದು ಅಂಗೀಕೃತ್ಯವಾದವೆಂದು ತಿಳಿಸಲು, ಇದು ತಿಲಗಳನ್ನು ಹಿಂಡುವುದೂ ಅಲ್ಲ, ಶಿಲೆಗಳನ್ನು ಹಿಂಡುವುದು. ಆದ್ದರಿಂದ ಅಲ್ಲಿ ತೈಲವು ದೊರೆಯದಿದ್ದಂತೆ ಇಲ್ಲಿ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ತಿಳಿಸುತ್ತಾರೆ.

**ಅಸನ್ನಾಸೀದಿತಿ ವ್ಯರ್ಥಂ ಯದಸತ್ ಸರ್ವಥಾಪ್ಯಸತ್ ।**
**ಸ್ವರೂಪಕೀರ್ತನೇನ್ನೈವ ತದಸತ್ತ್ವಸ್ಯ ಸಿದ್ಧಿತಃ ।**
**ಸತ್ತ್ವಪ್ರಸಕ್ತ್ಯಭಾವಾಚ್ಚ ವ್ಯರ್ಥಂ ತಸ್ಯ ನಿಷೇಧನಂ ॥ ೭೮೨ ॥**

**ಯದಿದಾನೀಂ ನ ತತ್ತುಚ್ಛಂ ತದಾನೀಂ ಕಿಂ ನಿಷಿಧ್ಯತೇ ।**
**ತದಾನೀಂ ನೇತಿ ವಚನಮಿದಾನೀಂ ಸತ ಏವ ಹಿ ॥ ೭೮೩ ॥**

**ಅರ್ಥ-** ಅಸತ್= ಅಸತ್ತಾದುದು, ನಾಸೀತ್= ಇರಲಿಲ್ಲ, ಇತಿ= ಎಂದು ಹೇಳುವುದು, ವ್ಯರ್ಥಂ= ವ್ಯರ್ಥವಾದುದು, ಯತ್= ಏಕೆಂದರೆ, ಅಸತ್= ಅಸತ್ತಾದುದು, ಸರ್ವಥಾಪಿ= ಎಲ್ಲ ರೀತಿಯಿಂದಲೂ (ಎಲ್ಲರ ಸಮ್ಮತಿಯಿಂದಲೂ), ಅಸತ್= ಅಸತ್ತೇ ಆಗಿದೆ,

ಸ್ವರೂಪಕೀರ್ತನೇನೈವ= ಅಸತ್ ಎಂದು ಅದರ ಸ್ವರೂಪವನ್ನು ಹೇಳುವುದರಿಂದಲೇ, ತದಸತ್ತ್ವಸ್ಯ= ಅದರ ಅಸತ್ತ್ವವು, ಸಿದ್ಧಿತಃ= ಸಿದ್ಧವಾಗುವುದರಿಂದ, ಚ= ಮತ್ತು, ಸತ್ತ್ವಪ್ರಸಕ್ತ್ಯಭಾವಾತ್= ಅದಕ್ಕೆ ಸತ್ತ್ವಪ್ರಸಕ್ತಿಯೂ ಇಲ್ಲದಿರುವುದರಿಂದ, ತಸ್ಯ ನಿಷೇಧನಂ= ನಾಸೀತ್ ಎಂದು ನಿಷೇಧವನ್ನು ಮಾಡುವುದು, ವ್ಯರ್ಥಂ= ವ್ಯರ್ಥವಾಗುತ್ತದೆ, ಯದಿದಾನೀಂ= ಯಾವುದು ಈಗ ಇದೆಯೋ, ತತ್= ಅದು, ತುಚ್ಛಂ ನ= ತುಚ್ಛವಾದುದಲ್ಲ (ಅತ್ಯಂತ ಅಸತ್ತಾದುದಲ್ಲ), ತದಾನೀಂ= ಆಗ (ಪ್ರಳಯ ಕಾಲದಲ್ಲಿ), ಕಿಂ ನಿಷಿಧ್ಯತೇ= ಯಾವುದು ನಿಷೇಧಿಸಲ್ಪಡುತ್ತದೆ? ತದಾನೀಂ ನೇತಿ ವಚನಂ= ಆಗ ಇರಲಿಲ್ಲ ಎಂಬ ವಾಕ್ಯವು, ಇದಾನೀಂ ಸತ ಏವ ಹಿ= ಈಗ ಇರುವುದಕ್ಕೆ ಮಾತ್ರ ಉಪಪನ್ನವಾಗುತ್ತದೆಯಷ್ಟೇ ?

**ಅನುವಾದ- 'ಅಸತ್ ನಾಸೀತ್' ಎಂದು ಅಸತ್ತನ್ನು ನಿಷೇಧ ಮಾಡುವುದು ವ್ಯರ್ಥವಾಗುತ್ತದೆ. ಏಕೆಂದರೆ ಅಸತ್ತಾದುದು ಸರ್ವವಾದಿಗಳ ರೀತಿಯಿಂದಲೂ ಅಸತ್ತೇ ಆಗಿದೆ. ಅಸತ್ ಎಂದು ಸ್ವರೂಪಕೀರ್ತನೆ ಮಾಡುವುದರಿಂದಲೇ ವಸ್ತುವಿನ ಅಸತ್ತ್ವವು ಸಿದ್ಧವಾಗುವುದರಿಂದ ಮತ್ತು ಅಸತ್ತಿಗೆ ಸತ್ತ್ವಪ್ರಸಕ್ತಿಯೂ ಇಲ್ಲದಿರುವುದರಿಂದ ನಾಸೀತ್ ಎಂದು ಹೇಳಿ ಸತ್ತ್ವವನ್ನು ನಿಷೇಧ ಮಾಡುವುದು ವ್ಯರ್ಥ. ಯಾವುದು ಈಗ ಇದೆಯೋ ಅದು ತುಚ್ಛವಲ್ಲ, ಅದನ್ನು ಆ ಕಾಲದಲ್ಲಿ ಎಂದರೆ ಪ್ರಳಯ ಕಾಲದಲ್ಲಿ ಹೇಗೆ ನಿಷೇಧ ಮಾಡುವುದು? ಆಗ ಇರಲಿಲ್ಲ ಎಂಬ ವಾಕ್ಯವು ಈಗ ಇರುವುದಕ್ಕೆ ಮಾತ್ರ ಉಪಪನ್ನವಾಗುವುದಷ್ಟೇ ?**

**ಭಾವವಿಲಾಸಿನೀ –** ತ್ರೈಕಾಲಿಕನಿಷೇಧಸತ್ಯತ್ವನಿಷೇಧಾಖ್ಯಮಿಥ್ಯಾತ್ವಸ್ಯಾಶ್ರೌತತ್ವೇಽಪಿ ನಾಸದಾಸೀನ್ನೋ ಸದಾಸೀದಿತಿ ಶ್ರುತ್ಯಾ ಸದಸದಭಾವಕಾಲೇಽಪಿ ತಮ ಆಸೀದಿತಿ ಅಜ್ಞಾನಸ್ಯ ಸ್ಥಿತಿಕಥನಾತ್ತಸ್ಯ ಸದಸದ್ವೈಲಕ್ಷಣ್ಯಂ ಸೇತ್ಸ್ಯತೀತ್ಯಾಶಂಕಾಂ ಪರಿಹರತಿ ॥ **ಅಸನ್ನೇತಿ** ॥ ಸ್ವರೂಪಕೀರ್ತನೇನ ಅಸದಿತಿ ಸ್ವರೂಪಕೀರ್ತನೇನ । ತದಸತ್ತ್ವಸ್ಯ ಅಸತೋಽಸತ್ತ್ವಸ್ಯ । ಶ್ರುತಾವಸತ್ಪದೇನ ಕೇವಲಮತ್ಯಂತಾಸದೇವೋಚ್ಯತೇ ಚೇತ್ ಅಸತ್ಪದೇನೈವ ತಸ್ಯಾಭಾವಸಿದ್ಧೇಃ ಪುನರ್ನಾಸೀದಿತಿ ವ್ಯರ್ಥಮಿತಿ ಭಾವಃ । ತಸ್ಯ ಅಸತಃ ॥ ೭೮೨-೭೮೩ ॥

**ವಿವರಣೆ-** ತ್ರೈಕಾಲಿಕ ನಿಷೇಧ ಅಥವಾ ಸತ್ಯತ್ವನಿಷೇಧರೂಪವಾದ ಮಿಥ್ಯಾತ್ವವು ಶ್ರುತಿಯಲ್ಲಿ ಉಕ್ತವಾಗದಿದ್ದರೂ 'ನಾಸದಾಸೀತ್ ನೋಸದಾಸೀತ್' ಎಂಬ ಶ್ರುತಿಯು ಸತ್ ಮತ್ತು ಅಸತ್ ಇಲ್ಲದಿರುವ ಪ್ರಳಯ ಕಾಲದಲ್ಲಿ 'ತಮ ಆಸೀತ್' ಎಂದು ಅಜ್ಞಾನದ ಸ್ಥಿತಿಯನ್ನು ಹೇಳುವುದರಿಂದ ಸದಸದ್ವೈಲಕ್ಷಣ್ಯರೂಪವಾದ ಮಿಥ್ಯಾತ್ವವು ಸಿದ್ಧಿಸುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ನೀಡುತ್ತಾರೆ. 'ನ ಅಸತ್ ಆಸೀತ್' ಎಂಬಲ್ಲಿ ಅಸತ್ ಶಬ್ದವು ಅತ್ಯಂತ ಅಸತ್ತನ್ನೇ ಹೇಳುವುದಾದರೆ ಅದಕ್ಕೆ ಪುನಃ ನಾಸೀತ್ ಎಂದು ಸತ್ತ್ವವನ್ನು ನಿಷೇಧ ಮಾಡುವುದು

ವ್ಯರ್ಥವಾಗುತ್ತದೆ. ಆದ್ದರಿಂದ ಅಸತ್ ಶಬ್ದವು ಇಲ್ಲಿ ಅತ್ಯಂತ ಅಸತ್ ಅನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

ಅನುವಾದಕವಾಕ್ಯಂ ತೇ ಸ್ವಾರ್ಥಸ್ಯಾಸಾಧಕಂ ಕಿಲ ।
ಸರ್ವಸಿದ್ಧಾನುವಾದೋಽಯಂ ಕಮರ್ಥಂ ಸಾಧಯೇತ್ ತವ ।
ಯತ್ ಪ್ರಸಿದ್ಧಾ ವಾಯುರಂತರಿಕ್ಷಂ ಚಾಸದಿತಿ ಶ್ರುತಿಃ ॥ ೭೮೪ ॥

ಅತಃ ಶ್ರೌತಮತಜ್ಞತ್ವಂ ಯುಕ್ತಿಜ್ಞತ್ವಂ ಚ ಬಾಲಿಶೇ ।
ಯದಸತ್ ತತ್ ತವಾಪ್ಯದ್ಧಾ ನಾಸೀದಿತ್ಯಾಹ ಸಾ ಶ್ರುತಿಃ ॥ ೭೮೫ ॥

**ಅರ್ಥ-** ತೇ= ನಿನ್ನ ಮತದಲ್ಲಿ, ಅನುವಾದಕವಾಕ್ಯಂ= ಅನುವಾದಕವಾದ ವಾಕ್ಯವು, ಸ್ವಾರ್ಥಸ್ಯ= ಸ್ವಾರ್ಥವನ್ನು, ಅಸಾಧಕಂ ಕಿಲ= ಸಾಧಿಸುವುದಿಲ್ಲವಷ್ಟೇ, ಅಯಂ= ಈ, ಸರ್ವಸಿದ್ಧಾನುವಾದಃ= ಸರ್ವ ವಾದಿಗಳು ಅಂಗೀಕರಿಸಿದ, ಅತ್ಯಂತಾಸತ್ತಿನ ಸತ್ತಾ ಭಾವದ ಅನುವಾದವು, ತವ= ನಿನಗೆ, ಕಂ ಅರ್ಥಂ= ಯಾವ ಅರ್ಥವನ್ನು, ಸಾಧಯೇತ್= ಸಾಧಿಸುತ್ತದೆ, ಯತ್= ಏಕೆಂದರೆ, ವಾಯುರಂತರಿಕ್ಷಂ ಚ= ವಾಯು ಮತ್ತು ಅಂತರಿಕ್ಷವು, ಅಸತ್= ಅಸತ್ ಎಂದು ಕರೆಯಲ್ಪಡುತ್ತದೆ, ಇತಿ= ಎಂಬ, ಶ್ರುತಿಃ= ಶ್ರುತಿಯು, ಪ್ರಸಿದ್ಧಾ= ಪ್ರಸಿದ್ಧವಾಗಿದೆ, ಅತಃ= ಆದ್ದರಿಂದ, ಬಾಲಿಶೇ= ಬಾಲಕನಲ್ಲಿ ಅಥವಾ ಮೂರ್ಖನಲ್ಲಿ, ಯತ್=ಯಾವ, ಶ್ರೌತಮತಜ್ಞತ್ವಂ= ಶ್ರುತಿಯ ಅಭಿಪ್ರಾಯವನ್ನು ತಿಳಿದಿರುವಿಕೆ ಮತ್ತು, ಯುಕ್ತಿಜ್ಞತ್ವಂ= ಯುಕ್ತಿಯ ತಿಳಿವಳಿಕೆ, ಅಸತ್= ಇಲ್ಲವೋ, ತತ್= ಆ ಎರಡು ಧರ್ಮಗಳು, ತವಾಪಿ= ನಿನಗೂ ಕೂಡ, ನಾಸೀತ್= ಇಲ್ಲ, ಇತಿ= ಎಂದು, ಸಾ ಶ್ರುತಿಃ= ಆ ಶ್ರುತಿಯು, ಆಹ= ಹೇಳುತ್ತದೆ.

**ಅನುವಾದ-** ನಿನ್ನ ಮತದಲ್ಲಿ ಅನುವಾದಕವಾದ ವಾಕ್ಯವು ಸ್ವಾರ್ಥಸಾಧಕವಲ್ಲವಷ್ಟೇ. ಸರ್ವವಾದಿ ಸಮ್ಮತವಾದ ಅಸತ್ತಿನ ಸತ್ತಾ ಭಾವದ ಈ ಅನುವಾದವು ವಾಯುವು ಮತ್ತು ಅಂತರಿಕ್ಷವು ಅಸತ್ತೆಂದು ಕರೆಯಲ್ಪಡುತ್ತದೆ ಎಂಬ ಪ್ರಸಿದ್ಧವಾಗಿರುವ ಶ್ರುತಿ ಇರುವಾಗ ನಿನಗೆ ಯಾವ ಅರ್ಥವನ್ನು ಸಾಧಿಸಿಕೊಡುತ್ತದೆ? ಆದ್ದರಿಂದ ಬಾಲಕನಲ್ಲಿ ಅಥವಾ ಮೂರ್ಖನಲ್ಲಿ ಅಸತ್ತಾದ ಯಾವ ಶ್ರೌತಮತಜ್ಞತ್ವವು ಮತ್ತು ಯುಕ್ತಿಜ್ಞತ್ವವು ಇದೆಯೋ ಅದು ನಿನ್ನಲ್ಲಿಯೂ ಇಲ್ಲ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ.

**ಭಾವವಿಲಾಸಿನೀ** – ಸರ್ವಸಿದ್ಧಾನುವಾದಃ ಸರ್ವಸಿದ್ಧಸ್ಯಾಸತೋಽತ್ಯಂತಾಭಾವಸ್ಯ ಶ್ರುತ್ಯಾಕಥನಮ್ । ಅರ್ಥಮ್ ಅಸದ್ವೈಲಕ್ಷಣ್ಯಾಖ್ಯಾರ್ಥಮ್ । ಅನುವಾದೇಽಸಾಧಕತ್ವಸ್ಯ ಪರೇಣಾಂಗೀಕಾರಾದಿತಿ ಭಾವಃ। ಯತ್ ಯಸ್ಮಾತ್ । ಪ್ರಸಿದ್ಧಾ ಮಾಧ್ಯಂದಿನೋಪನಿಷದಿ । ಅತಃ ಮಾಯಾವಾದಿನಿ ಶ್ರುತಿಮತಜ್ಞತ್ವಯುಕ್ತಿಜ್ಞತ್ವಯೋರಭಾವಾತ್ । ಬಾಲಿಶೇ ಬಾಲಕೇ ಮೂರ್ಖೇ ವಾ । ಅಸದವಿದ್ಯಮಾನಂ

ಯಚ್ಛ್ರುತಿಜ್ಞತ್ವಂ ಯುಕ್ತಿಜ್ಞತ್ವಂ ತತ್ತವಾಪಿ ಮಾಯಾವಾದಿನೋಽಪಿ ನಾಸೀತ್ ಇತಿ ಸಾ ನಾಸದಾಸೀದಿತಿ ಶ್ರುತಿರಾಹೇತಿ ಸಂಬಂಧಃ। ನಾಸದಾಸೀದಿತಿ ಶ್ರುತಿಃ ಪ್ರಲಯೇಽತ್ಯಂತಾಸತೋಽಭಾವಂ ವೈಯರ್ಥ್ಯಾನ್ನ ವಕ್ತಿ। ಕಿಂತು ವಾಯ್ವಂತರಿಕ್ಷಾಖ್ಯಂ ಭೂತದ್ವಯಮ್। ಉಕ್ತಮಾಧ್ಯಂದಿನಶ್ರುತಿಸಮಾಖ್ಯಯಾ ಇದಾನೀಂ ಸಂಭಾವಿತಸತ್ವಂ ಪ್ರಲಯೇ ನಾಸೀದಿತ್ಯಾಹ। ಯದಿ ಚಾಸತ ಏವಾಭಾವೋ ವಕ್ತವ್ಯ ಇತಿ ಪರಸ್ಯಾಗ್ರಹಃ ತದಾ ಮೂರ್ಖೇಷು ಅಸತ್ ಯಚ್ಛ್ರುತಿಮತಜ್ಞತ್ವಂ ಯುಕ್ತಿತ್ವಂ ಚ ತನ್ಮಾಯಾವಾದಿನ್ಯಪಿ ನಾಸೀದಿತ್ಯೇವ ಶ್ರುತೇರರ್ಥ ಇತಿ ಪರಪರಿಹಾಸಃ ॥ ೭೮೪-೭೮೫ ॥

**ವಿವರಣೆ-** 'ನಾಸದಾಸೀತ್ ನೋಸದಾಸೀತ್' ಎಂಬುದು ಋಗ್ವೇದದ ಮಂತ್ರ. ವಾಯುಶ್ಚ ಅಂತರಿಕ್ಷಂ ಚ ಅಸತ್' ಎಂಬುದು ಬೃಹದಾರಣ್ಯೋಪನಿಷತ್ತಿನ ವಾಕ್ಯ. ಆ ವಾಕ್ಯದ ಸಮಾಖ್ಯೆಯಿಂದ ನಾಸದಾಸೀತ್ ಎಂಬ ಮಂತ್ರವು ಪ್ರಳಯ ಕಾಲದಲ್ಲಿ ವಾಯು ಮತ್ತು ಅಂತರಿಕ್ಷಗಳು ಇರಲಿಲ್ಲವೆಂದೇ ಹೇಳುತ್ತದೆ, ಹೊರತಾಗಿ ಅತ್ಯಂತಾಸತ್ತಿಗೆ ಸತ್ತ್ವವನ್ನು ನಿಷೇಧ ಮಾಡುವುದಿಲ್ಲ ಎಂದು ಹೇಳಿ ಪರವಾದಿಗಳನ್ನು ಪರಿಹಾಸ ಮಾಡಲು ಶ್ರುತಿಗೆ ರಾಜರು ಇನ್ನೊಂದು ಅರ್ಥವನ್ನು ಹೇಳುತ್ತಾರೆ. 'ನ ಅಸತ್ ಆಸೀತ್' ಎಂದು ಪದಚ್ಛೇದ, 'ಅಸತ್ ನ ಆಸೀತ್' ಎಂದು ಅನ್ವಯ. ಅಸತ್ ಎಂದರೆ ಬಾಲಕನಲ್ಲಿ ಅಥವಾ ಮೂರ್ಖನಲ್ಲಿ ಇಲ್ಲದಿರುವ ಶ್ರೌತಮತಜ್ಞತ್ವ ಮತ್ತು ಯುಕ್ತಿಜ್ಞತ್ವ ಎಂದು ಅರ್ಥ. ನ ಆಸೀತ್ ಎಂದರೆ ಅದ್ವೈತ ವಾದಿಯಾದ ನಿನಗೂ ಅದು ಇಲ್ಲ ಎಂದು ಅರ್ಥ. ಹಾಗಾಗಿ ನೀನು ಬಾಲಕ ಅಥವಾ ಮೂರ್ಖನಾಗಿದ್ದೀಯೆ ಎಂದು ಶ್ರುತಿಯ ಅಭಿಪ್ರಾಯ.

ಸನ್ನಾಸೀದಿತಿ ವಾಕ್ಚಾಹ ಸತ್ ತೇ ನೇದಂ ವಚಸ್ತ್ವಿತಿ ॥ ೭೮೬ ॥

**ಅರ್ಥ-**ಸನ್ನಾಸೀದಿತಿ ವಾಕ್ ಚ= ಸತ್ತಾಗಿ ಇರಲಿಲ್ಲ ಎಂಬ ವಾಕ್ಯವೂ ಕೂಡ ಅದೇ ಮಾಧ್ಯಂದಿನ ಶ್ರುತಿಯಲ್ಲಿ ಸತ್ ಶಬ್ದ ವಾಚ್ಯವಾದ, ಪೃಥಿವಿ ಅಗ್ನಿ ಮತ್ತು ಜಲಗಳು ಇರಲಿಲ್ಲವೆಂದು, ಆಹ= ಹೇಳುತ್ತದೆ, ಚ= ಮತ್ತು, ತೇ= ನಿನ್ನ, ಇದಂ ವಚಃ= ಸತ್ಯವನ್ನೇ ನಿಷೇಧ ಮಾಡುತ್ತದೆ ಎಂಬ ವಚನವು, ನ ಸತ್= ಸಮೀಚೀನವಲ್ಲ ಎಂದು ಹೇಳುತ್ತದೆ.

**ಅನುವಾದ-** 'ನೋ ಸದಾಸೀತ್' ಎಂಬ ವಾಕ್ಯ ಖಂಡವೂ ಕೂಡ ವಾಯು ಮತ್ತು ಅಂತರಿಕ್ಷಗಳಿಗಿಂತ ಅತಿರಿಕ್ತವಾದ ಭೂಮಿ, ಜಲ ಮತ್ತು ಅಗ್ನಿಗಳು ಪ್ರಳಯಕಾಲದಲ್ಲಿ ಇರಲಿಲ್ಲವೆಂದೇ ಹೇಳುತ್ತದೆ. ಸತ್ ಶಬ್ದಕ್ಕೆ ಪೃಥಿವ್ಯಾದಿಗಳು ಅರ್ಥವಲ್ಲ, ಸತ್ಯವಾದ ಪದಾರ್ಥವೇ ಅರ್ಥ ಎಂದು ನೀನು ಆಗ್ರಹ ಮಾಡುವುದಾದರೆ 'ನೋ ಸದಾಸೀತ್' ಎಂಬ ವಾಕ್ಯ ಖಂಡದಿಂದ ತದ್ರೂಪನಾದ ಬ್ರಹ್ಮನಿಗೇ ನಿಷೇಧ ಉಂಟಾಗುವುದರಿಂದ ನಿನ್ನ ವಾಕ್ಯವು ಸತ್ಯವಲ್ಲ ಎಂದರೆ ಸಮೀಚೀನವಾದುದಲ್ಲ ಎಂದು ಶ್ರುತಿಯು ಹೇಳುತ್ತದೆ.

**ಭಾವವಿಲಾಸಿನೀ** – ಸನ್ನಾಸೀದಿತಿ ಶ್ರುತಿರಪಿ ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ಸದಿತಿ ತಸ್ಯಾಮೇವೋಪನಿಷದಿ ವಿದ್ಯಮಾನವಾಕ್ಯಾನುಸಾರೇಣ ಸತ್ಪದವಾಚ್ಯಂ ವಾಯ್ವಂತರಿಕ್ಷಾತಿರಿಕ್ತ

ಪೃಥಿವ್ಯಾದಿಭೂತತ್ರಯಮಪಿ ಪ್ರಲಯೇ ನಾಸೀದಿತ್ಯಾಹ । ಯದಿ ಚ ಸದೇವ ನಾಸೀದಿತಿ ವಕ್ತವ್ಯಮಿತಿ ತವಾಗ್ರಹಃ ತದಾ ಸತ್ಪದವಾಚ್ಯಬ್ರಹ್ಮಣೋ ನಾಸ್ತಿತ್ವಸ್ಯ ತ್ವದ್ರೀತ್ಯೈವಾಸಂಭವಾತ್ ಅಸಂಭವದರ್ಥಕಂ ಶಾಸ್ತ್ರರೂಪಂ ತೇ ವಚ ಏವ ಸತ್ ಸಮೀಚೀನಂ ನಾಸೀದಿತ್ಯಾಹೇತಿ ಪರಪರಿಹಾಸಃ । ವದಸಿ ಚೇತ್ ಉಪನಿಷತ್ಸಮಾಖ್ಯಯಾಽರ್ಥಂ ವದ । ನೋ ಚೇತ್ತ್ವದಭಿಲಷಿತಾರ್ಥದ್ವಯಸ್ಯಾಪ್ಯುಕ್ತರೀತ್ಯಾ ಯುಕ್ತಿವಿರುದ್ಧತ್ವಾತ್ ವಿರೋಧಮಜಾನತಸ್ತವ ನಿಂದನಮೇವ ಖಂಡದ್ವಯಸ್ಯಾಪ್ಯರ್ಥ ಇತಿ ಭಾವಃ॥೭೮೬॥

**ವಿವರಣೆ-** 'ನಾ ಸದಾಸೀತ್' ಎಂಬ ಶ್ರುತಿಯು ಹೇಗೆ ಪರರ ಪರಿಹಾಸವನ್ನು ಮಾಡುತ್ತದೆಯೋ, ಅದರಂತೆ 'ನೋ ಸದಾಸೀತ್' ಎಂಬ ಶ್ರುತಿಯ ಭಾಗವೂ ಪರರನ್ನು ಪರಿಹಾಸ ಮಾಡುತ್ತದೆ ಎಂದು ಇಲ್ಲಿ ಹೇಳುತ್ತಾರೆ. 'ನೋ ಸದಾಸೀತ್' ಎಂದರೆ ಪೃಥಿವ್ಯಾದಿ ಭೂತತ್ರಯವು ಇರಲಿಲ್ಲ ಎಂಬುದು ಉಪನಿಷತ್ತಿಗೆ ಸಮ್ಮತವಾದ ಅರ್ಥ. ಅದನ್ನು ಪರಿತ್ಯಜಿಸಿ ಸತ್ ಎಂದರೆ ಸತ್ಯವಾದುದೇ ಎಂದು ಅರ್ಥ ಮಾಡಿದರೆ, ಆಗ ಸತ್ಯವಾದ ಬ್ರಹ್ಮನಿಗೇ ಸತ್ವನಿಷೇಧವು ಪ್ರಾಪ್ತವಾಗುವುದರಿಂದ ಇಲ್ಲಿ ಸತ್ಯವಾದುದೇ ಸತ್ ಶಬ್ದವಾಚ್ಯ ಎಂಬ ನಿನ್ನ ವಚನವು ಸಮೀಚೀನವಲ್ಲವೆಂದು ಈ ವಾಕ್ಯಭಾಗವು ನಿನ್ನನ್ನು ನಿಂದಿಸುವುದಕ್ಕೇ ಪ್ರವೃತ್ತವಾಗಿದೆ ಎಂದು ಅಭಿಪ್ರಾಯ.

> ಸಚ್ಛಬ್ದಾರ್ಥೋ ಜಗಚ್ಚೇತ್ ಸ್ಯಾತ್ ಸ್ವಾನ್ಯತ್ವಂ ತರ್ಹಿ ಸಿದ್ಧ್ಯತಿ ।
> ಇಷ್ಟಾಸಿದ್ಧಿರಬಾಧ್ಯತ್ವರೂಪಸತ್ತ್ವಾನಿಷೇಧನಾತ್ ॥ ೭೮೭ ॥

**ಅರ್ಥ-**ಸಚ್ಛಬ್ದಾರ್ಥಃ= ಸಚ್ಛಬ್ದಾರ್ಥವು, ಜಗತ್= ಜಗತ್ತು , ಸ್ಯಾತ್ ಚೇತ್= ಎಂದಾದರೆ, ಸ್ವಾನ್ಯತ್ವಂ= ಸ್ವ+ಅನ್ಯತ್ವವೇ ಎಂದರೆ ಬಾಧ್ಯ ಜಗದನ್ಯತ್ವವೇ, ಸಿದ್ಧ್ಯತಿ= ಸಿದ್ಧವಾಗುತ್ತದೆ, ತರ್ಹಿ= ಆ ಕಾರಣದಿಂದ, ತವ= ನಿನಗೆ, ಆಗ, ಅಬಾಧ್ಯತ್ವರೂಪಸತ್ತ್ವಾನಿಷೇಧಾತ್= ಅಬಾಧ್ಯತ್ವರೂಪ ಸತ್ತ್ವವನ್ನು ನಿಷೇಧ ಮಾಡದೇ ಇರುವುದರಿಂದ, ಇಷ್ಟಾಸಿದ್ಧಿಃ= ಇಷ್ಟಸಿದ್ಧಿಯಾಗುವುದಿಲ್ಲ.

**ಅನುವಾದ-** ಸಚ್ಛಬ್ದಾರ್ಥವು ಜಗತ್ತು ಎಂದಾದರೆ 'ನೋ ಸದಾಸೀತ್' ಎಂಬ ವಾಕ್ಯಭಾಗದಿಂದ ಆಗ ಇದ್ದ ಜಗತ್ತಿಗೆ ಜಗದನ್ಯತ್ವವೇ ಸಿದ್ಧವಾಗುತ್ತದೆ. ಜಗತ್ತಿಗೆ ಅಬಾಧ್ಯತ್ವರೂಪವಾದ ಸತ್ತ್ವ ನಿಷೇಧವು ಸಿದ್ಧವಾಗದಿರುವುದರಿಂದ ನಿನ್ನ ಇಷ್ಟ ಸಿದ್ಧಿಯಾಗುವುದಿಲ್ಲ.

**ಭಾವವಿಲಾಸಿನೀ** – ಸನ್ನಾಸೀದಿತ್ಯತ್ರ ಪರಮತೇ ಕಥಂ ಯುಕ್ತಿವಿರೋಧ ಇತ್ಯತ ಆಹ –**ಸಚ್ಛಬ್ದೇತಿ।**

**ವಿವರಣೆ-** 'ನೋ ಸದಾಸೀತ್' ಎಂಬ ಶ್ರುತಿಭಾಗವು ಅಬಾಧ್ಯತ್ವರೂಪವಾದ ಸತ್ತ್ವವನ್ನು ನಿಷೇಧ ಮಾಡಿದರೆ ಆಗ ಜಗತ್ತಿಗೆ ಬಾಧ್ಯತ್ವರೂಪವಾದ ಮಿಥ್ಯಾತ್ವವು ಉಂಟಾಗುತ್ತದೆ. ಸತ್ ಶಬ್ದಕ್ಕೆ ಜಗತ್ತು ಎಂದು ಅರ್ಥವನ್ನು ಹೇಳಿದರೆ, ಪ್ರಳಯದಲ್ಲಿ ಜಗತ್ತು ಇರಲಿಲ್ಲ

ಎಂದು ಹೇಳಿದರೆ ಪ್ರಳಯದಲ್ಲಿದ್ದ ದೇಶ, ಕಾಲ, ತಮಸ್ಸು ಮೊದಲಾದ ಜಗತ್ತಿಗೆ ಬಾಧ್ಯವಾದ ಜಗದನ್ಯತ್ವವೇ ಸಿದ್ಧವಾಗುತ್ತದೆ. ಆದ್ದರಿಂದ ಬಾಧ್ಯತ್ವವು ಸಿದ್ಧವಾಗುವುದಿಲ್ಲ. ನಿನಗೆ ಇಷ್ಟವಾಗುವ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಸದ್ ಬ್ರಹ್ಮೈವ ಭವೇತ್ ತಸ್ಮಾದ್ ಯದ್ವೈಲಕ್ಷಣ್ಯಮೀಪ್ಸಿತಂ ।**
**ನಾಸೀತ್ ತದಾ ತಚ್ಚ ಕಿಲ ಯದ್ ಬ್ರಹ್ಮ ಪರಮಾರ್ಥಸತ್ ॥ ೭೮೮ ॥**

**ಅರ್ಥ**-ತಸ್ಮಾತ್= ಆದ್ದರಿಂದ, ಸತ್= ಸತ್‌ಶಬ್ದವಾಚ್ಯವಾದುದು, ಯದ್ವೈಲಕ್ಷಣ್ಯಮೀಪ್ಸಿತಂ= ಯಾವ ವೈಲಕ್ಷಣ್ಯವು ನಿನಗೆ ಇಷ್ಟವಾಗಿದೆಯೋ ಅಂತಹ, ಬ್ರಹ್ಮೈವ= ಬ್ರಹ್ಮನೇ, ಭವೇತ್= ಆಗಬೇಕು, ನೋಸದಾಸೀತ್ ಎಂದರೆ, ಸದಾ ಆ ಪ್ರಳಯ ಕಾಲದಲ್ಲಿ, ಯತ್= ಯಾವ, ಪರಮಾರ್ಥಸತ್= ಪರಮಾರ್ಥ ಸತ್ಯನಾದ, ಬ್ರಹ್ಮ= ಬ್ರಹ್ಮನು ಇದ್ದಾನೋ, ತಚ್ಚ= ಅವನೂ ಸಹ, ನಾಸೀತ್ ಕಿಲ= ಇರಲಿಲ್ಲ ಎಂದು ಅರ್ಥವಾಗುವುದಷ್ಟೇ.

**ಅನುವಾದ**- ಆದ್ದರಿಂದ ಯಾವ ಬ್ರಹ್ಮವೈಲಕ್ಷಣ್ಯವು ನಿನಗೆ ಜಗತ್ತಿನಲ್ಲಿ ಇಷ್ಟವಾಗಿದೆಯೋ ಅಂತಹ ಬ್ರಹ್ಮನೇ ಸಚ್ಛಬ್ದಾರ್ಥವೆಂದು ಹೇಳಬೇಕು. ನೋಸದಾಸೀತ್ ಎಂದು ಆ ಬ್ರಹ್ಮನನ್ನು ನಿಷೇಧ ಮಾಡಿದರೆ ಪರಮಾರ್ಥಸತ್ಯವಾದ ಬ್ರಹ್ಮನೂ ಸಹ ಪ್ರಳಯಕಾಲದಲ್ಲಿ ಇರಲಿಲ್ಲವೆಂದೇ ಅರ್ಥವು ಸಿದ್ಧವಾಗುವುದಷ್ಟೇ?

**ಭಾವವಿಲಾಸಿನೀ** – ತಸ್ಮಾತ್ ಜಗತಃ ಸ್ವಸ್ಯೈವ ಸ್ವವೈಲಕ್ಷಣ್ಯೇ ಅಬಾಧ್ಯವೈಲಕ್ಷಣ್ಯಾಸಿದ್ಧೇಃ । ಯದ್ವೈಲಕ್ಷಣ್ಯಂ ಯಸ್ಯ ಬ್ರಹ್ಮಣೋ ವೈಲಕ್ಷಣ್ಯಮ್ ॥ ೭೮೭ ॥

**ಹಂತ ಮಿಥ್ಯಾಭವದ್ ಬ್ರಹ್ಮ ಸತ್ಯಂ ಜಗದಭೂದಿದಂ ।**
**ಯದಾವಯೋರ್ಮತೇ ನಾಸ್ತಿ ನಿರಧಿಷ್ಠಾನಕಭ್ರಮಃ ॥ ೭೮೯ ॥**

**ಅರ್ಥ**-ಹಂತ= ಬಹಳ ಸಂತೋಷ, ಬ್ರಹ್ಮ= ನಿನ್ನ ಬ್ರಹ್ಮನು, ಮಿಥ್ಯಾಭವತ್= ಮಿಥ್ಯಾಭೂತನಾದನು, ಇದಂ ಜಗತ್= ಈ ಜಗತ್ತು, ಸತ್ಯಮಭೂತ್= ಸತ್ಯವಾಯಿತು, ಯತ್= ಏಕೆಂದರೆ, ಅವಯೋರ್ಮತೇ= ನಮ್ಮಿಬ್ಬರ ಮತದಲ್ಲಿ, ನಿರಧಿಷ್ಠಾನಕ ಭ್ರಮಃ= ನಿರಧಿಷ್ಠಾನಕ ಭ್ರಮವು, ನಾಸ್ತಿ= ಇಲ್ಲ.

**ಅನುವಾದ**- ಬಹಳ ಸಂತೋಷ. ನಿನ್ನ ನಿರ್ಗುಣ ಬ್ರಹ್ಮನು ಮಿಥ್ಯಾಭೂತನಾದನು ಮತ್ತು ಈ ಜಗತ್ತು ಸತ್ಯವಾಯಿತು. ಏಕೆಂದರೆ ನಮ್ಮಿಬ್ಬರ ಮತದಲ್ಲಿ ನಿರಧಿಷ್ಠಾನಕ ಭ್ರಮವಿಲ್ಲ.

**ಭಾವವಿಲಾಸಿನೀ** – ಯತ್ ಯಸ್ಮಾತ್ । ತಸ್ಮಾತ್ಸತ್ಯಂ ಜಗದಭೂದಿತಿ ಪೂರ್ವೇಣಾನ್ವಯಃ । ಪ್ರಲಯೇ ಬ್ರಹ್ಮಣೋಽಸತ್ತ್ವೇ ಮಿಥ್ಯಾತ್ವಾವಶ್ಯಂಭಾವಾತ್ ನಿರಧಿಷ್ಠಾನಕಭ್ರಮಸ್ಯ ಚಾಯೋಗಾತ್ ಬ್ರಹ್ಮಾರೋಪಾಯೈವ ಜಗತ್ಸತ್ಯತ್ವಸಿದ್ಧಿರಿತಿ ಭಾವಃ ॥ ೭೮೯ ॥

**ವಿವರಣೆ-** ಪ್ರಳಯಕಾಲದಲ್ಲಿ ಅಂತಹ ಬ್ರಹ್ಮನು ಇದ್ದರೆ ಅವನಲ್ಲಿ ಜಗತ್ತು ಆರೋಪಿತ ಎಂದು ಹೇಳಬೇಕು. ಏಕೆಂದರೆ ಜಗದಾರೋಪಕ್ಕೆ ಬ್ರಹ್ಮನೇ ಅಧಿಷ್ಠಾನವಷ್ಟೇ? ಆದರೆ 'ನೋಸದಾಸೀತ್' ಎಂಬ ಶ್ರುತಿಯು ಪ್ರಳಯ ಕಾಲದಲ್ಲಿ ಬ್ರಹ್ಮನನ್ನೇ ನಿಷೇಧ ಮಾಡುವುದರಿಂದ ಆಗ ಬ್ರಹ್ಮನು ಇಲ್ಲ, ಜಗತ್ತು ಇದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಆರೋಪಾಧಿಷ್ಠಾನವಾದ ಬ್ರಹ್ಮನು ಇಲ್ಲದೇ ಜಗತ್ತು ಇರುವುದರಿಂದ, ಜಗತ್ತು ಆರೋಪಿತವಲ್ಲ ಎಂದು ಸಿದ್ಧವಾಗುತ್ತದೆ. ಏಕೆಂದರೆ ಅಧಿಷ್ಠಾನವಿಲ್ಲದ ಭ್ರಮವನ್ನು ಬೌದ್ಧರು ಮಾತ್ರ ಅಂಗೀಕರಿಸುತ್ತಾರೆ ನಾವಿಬ್ಬರೂ ಅಂಗೀಕರಿಸುವುದಿಲ್ಲ ಎಂದು ಅಭಿಪ್ರಾಯ.

**ಅರ್ಥಾನ್ನಾರ್ಥಾಂತರಂ ಸಿದ್ಧಮನರ್ಥೋಽಯಂ ಮಹಾನಭೂತ್ ॥ ೭೯೦ ॥**

**ಅರ್ಥ-**ಅರ್ಥಾತ್= ಆರ್ಥಿಕವಾಗಿ, ಅರ್ಥಾಂತರಂ= ಸದಸದ್ವೈಲಕ್ಷಣ್ಯರೂಪವಾದ ಅರ್ಥಾಂತರವು, ನ ಸಿದ್ಧಂ= ಸಿದ್ಧವಾಗಲಿಲ್ಲ, ಅಯಂ ಮಹಾನನರ್ಥಃ= ಪ್ರಳಯದಲ್ಲಿ ಬ್ರಹ್ಮಾಭಾವರೂಪವಾದ ದೊಡ್ಡ ಅನರ್ಥವೇ, ಅಭೂತ್= ಉಂಟಾಯಿತು.

**ಅನುವಾದ-** ಶ್ರುತಿಯಿಂದ ಆರ್ಥಿಕವಾಗಿ ಸದಸದ್ವೈಲಕ್ಷಣ್ಯರೂಪವಾದ ಮಿಥ್ಯಾತ್ವವು ಸಿದ್ಧವಾಗಲಿಲ್ಲ, ಪ್ರಳಯದಲ್ಲಿ ಬ್ರಹ್ಮನ ಅಭಾವರೂಪವಾದ ದೊಡ್ಡ ಅನರ್ಥವೇ ಉಂಟಾಯಿತು.

**ಭಾವವಿಲಾಸಿನೀ –** ಅರ್ಥಾಂತರಂ ಜಗತಸ್ಸದಸದ್ವೈಲಕ್ಷಣ್ಯಮ್ । ಅನರ್ಥಃ ಬ್ರಹ್ಮಣಃ ಪ್ರಲಯೇಽಭಾವ ಏವ ॥ ೭೯೦ ॥

**ನೋ ಸದಾಸೀದಿದಂ ವಾಕ್ಯಂ ಪರಸ್ಯಾನರ್ಥಕಾರಕಂ ।**
**ಇತ್ಯೇವಾಹ ಶ್ರುತೇರಂಶೋ ದ್ವಿತೀಯೋಽಪ್ಯೇಷ ಪೂರ್ವವತ್ ॥ ೭೯೧ ॥**

**ಅಂತರಿಕ್ಷಾಚ್ಚ ವಾಯೋಶ್ಚ ಯದನ್ಯತ್ ತತ್ ಸದಿತ್ಯಪಿ ।**
**ಯಚ್ಛ್ರುತಿಃ ಸ್ವಯಮೇವಾಹ ತತೋಽಪ್ಯೇತದಸಂಗತಂ ॥ ೭೯೨ ॥**

**ಅರ್ಥ-**ಪರಸ್ಯ ಅನರ್ಥಕಾರಕಂ= ಪರವಾದಿಗೆ ಅನರ್ಥವನ್ನು ಉಂಟು ಮಾಡುವ, ಇದಂ ವಾಕ್ಯಂ= ನೋಸದಾಸೀತ್ ಎಂಬ ವಾಕ್ಯವು, ನೋ ಸದಾಸೀತ್= ಶುಭವಾಗಲಿಲ್ಲ, ಇತ್ಯೇವ= ಎಂದೇ, ಶ್ರುತೇಃ ಏಷ ದ್ವಿತೀಯ ಅಂಶೋಽಪಿ= ಈ ಶ್ರುತಿಯ ಎರಡನೇ ಅಂಶವು, ಪೂರ್ವವತ್= ನಾ ಸದಾಸೀತ್ ಎಂಬ ಪೂರ್ವಭಾಗವು ಹೇಳಿದಂತೆಯೇ, ಆಹ= ಹೇಳಿತು. ಯತ್= ಯಾವ ಕಾರಣದಿಂದ, ಶ್ರುತಿಃ= ಶ್ರುತಿಯು, ಸ್ವಯಮೇವ= ತಾನಾಗಿಯೇ, ಅಂತರಿಕ್ಷಾಚ್ಚ ವಾಯೋಶ್ಚ= ಅಂತರಿಕ್ಷಕ್ಕಿಂತಲೂ ಮತ್ತು ವಾಯುವಿಗಿಂತಲೂ, ಯದನ್ಯತ್= ಯಾವುದು ಭಿನ್ನವಾಗಿದೆಯೋ, ತತ್ಸತ್= ಅದು ಸತ್, ಇತ್ಯಪಿ= ಎಂದೂ, ಆಹ= ಹೇಳಿತೋ,

ತತೋಽಪಿ= ಆ ಕಾರಣದಿಂದಲೂ, ಏತತ್= ಈ ನಿನ್ನ ಅರ್ಥವು, ಅಸಂಗತಂ= ಅಸಂಗತವಾದುದು.

**ಅನುವಾದ-** ಪರನಿಗೆ ಅನರ್ಥಕಾರಕವಾದ ನೋ ಸದಾಸೀತ್ ಎಂಬ ಶ್ರುತಿಯ ದ್ವಿತೀಯ ಅಂಶವು ಸಹ, ನಾಸದಾಸೀತ್ ಎಂಬ ಪ್ರಥಮ ಅಂಶದಂತೆ ಪರನಿಗೆ ಶುಭವಾಗಲಿಲ್ಲ ಎಂದೇ ಅರ್ಥವನ್ನು ಹೇಳಿತು. ಯಾವ ಕಾರಣದಿಂದ ಶ್ರುತಿಯು ಅಂತರಿಕ್ಷ ಮತ್ತು ವಾಯುಗಳಿಗಿಂತ ಭಿನ್ನವಾದುದು ಸತ್ ಪದಾರ್ಥ ಎಂದು ತಾನೇ ಹೇಳಿದೆಯೋ, ಆದ್ದರಿಂದಲೂ ಪರನು ಹೇಳುವ ಅರ್ಥವು ಅಸಂಗತವಾದುದು.

**ಭಾವವಿಲಾಸಿನೀ –** ಅಸತ್ ಬ್ರಹ್ಮಾಭಾವಕಥನಾದಮಂಗಲಮ್ । ಅತ ಏವ ಪರಸ್ಯಾನರ್ಥಕಾರಕಂ ಚೇದಂ ವಾಕ್ಯಮ್ । ಪ್ರಲಯೇ ಬ್ರಹ್ಮಾಭಾವಕಥಕಂ ವಾಕ್ಯಂ ನಾಸೀದಿತಿ ಪರಪರಿಹಾಸಾಯ ಶ್ರುತೇರರ್ಥಾಂತರ ಕಥನಮಿದಮ್ । ಅಂಶಃ ಪೂರ್ವಾಂಶಃ । ಏಷಃ ಅಂಶಃ । ಪೂರ್ವವತ್ ಪೂರ್ವೋಕ್ತರೀತ್ಯೈವ ಪರಿಹಾಸಃ । ಪೂರ್ವಾಂಶಸ್ಯ ತು ಪೂರ್ವೋಕ್ತರೀತ್ಯಾ ಇದಾನೀಮುಕ್ತರೀತ್ಯಾ ಚ ಪರಪರಿಹಾಸೋಽರ್ಥ ಇತಿ ಭಾವಃ ॥ ೭೯೦-೭೯೨ ॥

ಅಹೋ ಬತ ಮಹಾನೇಷ ಪ್ರಮಾದೋ ಧೀಮತಾಮಪಿ ।
ಯತ್ ಸ್ವೋಕ್ತವಚನಸ್ಯಾರ್ಥಃ ಸ್ವೇಷ್ಟಬ್ರಹ್ಮವಿನಷ್ಟತಾ ।
ತಮಸಸ್ತ್ವವಿನಷ್ಟಸ್ಯ ತದಾನೀಮವಶಿಷ್ಟತಾ ॥ ೭೯೩ ॥

**ಅರ್ಥ-**ಅಹೋ ಬತ= ದೊಡ್ಡ ಆಶ್ಚರ್ಯವು, ಧೀಮತಾಮಪಿ= ಮೇಧಾವಿಗಳಿಗೂ ಕೂಡ, ಏಷಃ= ಇದು, ಮಹಾನ್ ಪ್ರಮಾದಃ= ದೊಡ್ಡ ಪ್ರಮಾದವಾಯಿತು, ಯತ್= ಏಕೆಂದರೆ, ಸ್ವೋಕ್ತವಚನಸ್ಯ= ತಮ್ಮ ಇಷ್ಟವನ್ನು ಸಾಧನೆ ಮಾಡಲು ತಾವು ಉದಾಹರಿಸಿದ ವಾಕ್ಯಕ್ಕೆ, ಸ್ವೇಷ್ಟಬ್ರಹ್ಮವಿನಷ್ಟತಾ= ತಮಗೆ ಇಷ್ಟನಾದ ಬ್ರಹ್ಮನ ವಿನಾಶವೇ ಉಂಟಾಯಿತು, ವಿನಷ್ಟಸ್ಯ= ವಿನಾಶವನ್ನು ಹೊಂದದೇ ಇದ್ದ, ತಮಸಃ= ಅಜ್ಞಾನಕ್ಕೆ, ತದಾನೀಂ= ಆಗ, ಅವಶಿಷ್ಟತಾ= ಅವಸ್ಥಾನವು ಉಂಟಾಯಿತು.

**ಅನುವಾದ-** ಇದು ದೊಡ್ಡ ಆಶ್ಚರ್ಯ! ಮೇಧಾವಿಗಳಿಗೂ ಇದು ದೊಡ್ಡ ಪ್ರಮಾದವಾಯಿತು. ಏಕೆಂದರೆ ತಮ್ಮ ಅಭೀಷ್ಟಸಿದ್ಧಿಗಾಗಿ ಉದಾಹರಿಸಿದ ವಾಕ್ಯದಿಂದ ತಮಗೆ ಇಷ್ಟನಾದ ಬ್ರಹ್ಮನ ನಾಶವೂ ಅವಿನಷ್ಟವಾದ ಅಜ್ಞಾನಕ್ಕೆ ಪ್ರಳಯಕಾಲದಲ್ಲಿ ಅವಸ್ಥಾನವೂ ಉಂಟಾಯಿತು.

**ಭಾವವಿಲಾಸಿನೀ–** ಸ್ವಪರಮೇಷ್ಟಭೂತಬ್ರಹ್ಮಾಭಾವಪ್ರತಿಪಾದಕಸ್ಯಾನಿಷ್ಟಭೂತತಮಸ್ಸದ್ಭಾವ ಪ್ರತಿಪಾದಕವಾಕ್ಯೇ ಬಹುಮಾನವಂತಂ ಪರಂ ಪರಿಹಸತಿ ॥ **ಅಹೋ ಬತೇತಿ** ॥ ತದಾನೀಂ ಪರಬ್ರಹ್ಮಣಃ ಪ್ರಲಯದಶಾಯಾಮ್ ॥ ೭೯೩ ॥

**ವಿವರಣೆ-** ತಾವು ವೈದಿಕರೆಂದು ಅಭಿಮಾನ ಪಡುವ ಪರವಾದಿಗಳಿಗೆ ವೇದವಾಕ್ಯದ ವ್ಯಾಖ್ಯಾನವು ಎಷ್ಟು ವಿರುದ್ಧವಾಗಿದೆ ಎಂದು ಗ್ರಂಥಕಾರರು ಇಲ್ಲಿ ತೋರಿಸಿದ್ದಾರೆ.

**ಅತಃ ಶ್ರುತ್ಯರ್ಥಕುಶಲೋ ಭಾರತೀಪತಿರೇವ ನಃ ।**
**ಅನ್ಯಸ್ತದ್ಭೃತ್ಯಭೃತ್ಯಶ್ಚೇನ್ಮಾನ್ಯೋ ಭವತಿ ಕಶ್ಚನ ॥ ೭೯೪ ॥**

**ಅರ್ಥ-**ಅತಃ= ಆದ್ದರಿಂದ, ನಃ= ನಮ್ಮ, ಭಾರತೀಪತಿರೇವ= ಭಾರತಿಪತಿಗಳಾದ ವಾಯುದೇವರೇ, ಶ್ರುತ್ಯರ್ಥಕುಶಲಃ= ಶ್ರುತ್ಯರ್ಥವನ್ನು ಹೇಳುವುದರಲ್ಲಿ ಕುಶಲರಾದವರು, ಅನ್ಯಃ ಕಶ್ಚನ= ಬೇರೆ ಯಾವನಾದರೂ, ತದ್ಭೃತ್ಯಭೃತ್ಯಶ್ಚೇತ್= ಮಧ್ವಾಚಾರ್ಯರ ಭೃತ್ಯಭೃತ್ಯನಾದರೆ, ಮಾನ್ಯೋ ಭವತಿ= ಮಾನ್ಯನಾಗುತ್ತಾನೆ.

**ಅನುವಾದ- ಆದ್ದರಿಂದ ಭಾರತೀಪತಿಗಳಾದ ನಮ್ಮ ವಾಯುದೇವರೇ ಶ್ರುತ್ಯರ್ಥವನ್ನು ಹೇಳುವುದರಲ್ಲಿ ಕುಶಲರಾದವರು. ಬೇರೆ ಯಾರಾದರೂ ಅವರ ಭೃತ್ಯಭೃತ್ಯನಾದರೆ ಮಾತ್ರ ಮಾನ್ಯರಾಗುತ್ತಾರೆ.**

**ಭಾವವಿಲಾಸಿನೀ – ಅತಃ ಪರಾಚಾರ್ಯವಚ್ಛ್ರುತಿಸ್ವಮತಯುಕ್ತಿವಿರುದ್ಧಾರ್ಥಕಥಕತ್ವಾತ್ । ಸ್ವಸ್ವಮೂಲರೂಪನಾಮ್ನಾ ಆಚಾರ್ಯಾಣಾಮಾಹ್ವಾನಂ ಸರಸವಾಗ್ವಿಲಾಸವತ್ತ್ಯಾ ಭಾರತ್ಯಾಃ ಪತ್ಯುರವತಾರಸ್ಯ ಮಧ್ವಮುನೇರ್ನೇದಂ ಕೌಶಲಮಪೂರ್ವಮಿತಿ ಸೂಚನಾರ್ಥಮ್ ॥೭೯೪॥**

**ವಿವರಣೆ-** ಭಾರತೀದೇವಿಯು ಸಕಲ ವಾಗಭಿಮಾನಿನಿಯಾದ್ದರಿಂದ ಅವರ ಪತಿಯಾದ ವಾಯುದೇವರಿಗೆ ಶ್ರುತ್ಯರ್ಥವನ್ನು ಸರಿಯಾಗಿ ಹೇಳುವುದು ದೊಡ್ಡ ಆಶ್ಚರ್ಯವಲ್ಲ ಎಂದು ಅಭಿಪ್ರಾಯ.

**ಯದದ್ವೈತಪರಂ ವಾಕ್ಯಂ ಮಿಥ್ಯಾತ್ವಮಪಿ ತೇನ ತೇ ।**
**ಗೌರ್ಗೋವತ್ಸಪ್ರಸೂರೇವ ಮಹಿಷಾಶ್ವಪ್ರಸೂಶ್ಚ ಕಿಂ ॥ ೭೯೫ ॥**

**ಅರ್ಥ-**ಯತ್= ಯಾವುದು, ಅದ್ವೈತಪರಂ= ಅದ್ವೈತ ಪರವಾದ, ವಾಕ್ಯಂ= ವಾಕ್ಯವಿದೆಯೋ, ತೇನ= ಆ ವಾಕ್ಯದಿಂದ, ತೇ= ನಿನ್ನ ಮತದಲ್ಲಿ, ಮಿಥ್ಯಾತ್ವಮಪಿ= ಮಿಥ್ಯಾತ್ವವು ಹೇಳಲ್ಪಡುತ್ತದೆ ಎಂದು ಅಭಿಪ್ರಾಯವಷ್ಟೇ, ಗೌಃ= ಹಸುವು, ಗೋವತ್ಸಪ್ರಸೂರೇವ= ಗೋವತ್ಸವನ್ನು ಮಾತ್ರ ಪ್ರಸವಿಸುತ್ತದೆ, ಮಹಿಷಾಶ್ವಪ್ರಸೂಶ್ಚ= ಎಮ್ಮೆಯ ಕರುವನ್ನಾಗಲೀ ಅಥವಾ ಕುದುರೆಯ ಮರಿಯನ್ನಾಗಲೀ, ಕಿಂ= ಪ್ರಸವಿಸುತ್ತದೆಯೇ?

**ಅನುವಾದ- ಐಕ್ಯವನ್ನು ಹೇಳುವ ಯಾವ ವಾಕ್ಯವಿದೆಯೋ ಅದೇ ಮಿಥ್ಯಾತ್ವವನ್ನು ಹೇಳುತ್ತದೆ ಎಂದು ನಿನ್ನ ಮತವಾಗಿದೆ. ಗೋವು ಗೋವತ್ಸವನ್ನೇ ಪ್ರಸವಿಸುತ್ತದೆ. ಎಮ್ಮೆಯ**

ಕರುವನ್ನಾಗಲೀ ಅಥವಾ ಕುದುರೆಯ ಮರಿಯನ್ನಾಗಲೀ ಎಂದಾದರೂ ಪ್ರಸವಿಸುತ್ತದೆಯೇ?

**ಭಾವವಿಲಾಸಿನೀ–** ತತ್ತ್ವಮಸ್ಯಾದ್ಯೈಕ್ಯವಾಕ್ಯೇ ಶ್ರುತ್ಯಾ ಸಾಕ್ಷಾಜ್ಜೀವಾಭೇದೋಽರ್ಥಾ ನ್ಮಿಥ್ಯಾತ್ವಂ ಚ ಬೋಧ್ಯತ ಇತಿ ಯತ್ಪರೋ ವಕ್ತಿ ತಚ್ಚ ಭೇದಸೌರಭಾದೌ ಸವಿಸ್ತರಂ ನಿರಸ್ತಮಪಿ ದೃಷ್ಟಾಂತಮುಖೇನ ದೂಷಯಿತುಂ ಪುನರಾಹ – **ಯದದ್ವೈತೇತಿ** ॥ ತೇನ ವಾಕ್ಯೇನ । ತೇ ಮತೇ । ಮಿಥ್ಯಾತ್ವಂ ಜಗನ್ಮಿಥ್ಯಾತ್ವಮ್ ಉಚ್ಯತ ಇತಿ ಯೋಗ್ಯತಯಾ ಸಂಬಂಧಃ । ತದಪಿ ನ ಯುಕ್ತಮಿತ್ಯತ್ರ ದೃಷಾಂತಮಾಹ – **ಗೌರಿತಿ** ॥ ಪ್ರಸೂಃ ಮಾತಾ । ಮಹಿಷಾಶ್ವಯೋರಿವ ಅಭೇದಮಿಥ್ಯಾತ್ವಯೋಃ ಪರಸ್ಪರವಿರೋಧಾತ್ ಕಥಮೇಕವಾಕ್ಯಬೋಧ್ಯತಾ । ಅತೋ ವಾಕ್ಯಮನುಕೂಲಮರ್ಥಾಂತರಂ ವದೇದಿತಿ ಭಾವಃ ॥೭೫॥

**ವಿವರಣೆ-** ತತ್ತ್ವಮಸಿ ಇತ್ಯಾದಿ ವಾಕ್ಯಗಳು ಶ್ರೌತಾರ್ಥವಾಗಿ ಐಕ್ಯವನ್ನು, ಆರ್ಥಿಕಾರ್ಥವಾಗಿ ಮಿಥ್ಯಾತ್ವವನ್ನು ಬೋಧಿಸುತ್ತದೆ ಎಂಬ ಪರವಾದಿಗಳ ಅಭಿಪ್ರಾಯವನ್ನು ಭೇದಸೌರಭದಲ್ಲಿ ವಿಸ್ತಾರವಾಗಿ ನಿರಾಕರಣೆ ಮಾಡಿದ್ದರೂ, ದೃಷ್ಟಾಂತಮುಖದಿಂದ ಇಲ್ಲಿ ಪುನಃ ನಿರಾಕರಣೆ ಮಾಡುತ್ತಾರೆ. ಗೋವು ಗೋವತ್ಸವನ್ನು ಮಾತ್ರ ಪ್ರಸವಿಸುತ್ತದೆ. ವಿರುದ್ಧವಾದ ಮಹಿಷಾದಿ ವತ್ಸಗಳನ್ನು ಪ್ರಸವಿಸುವುದಿಲ್ಲ. ಆದರಂತೆ ಅಭೇದ ಮತ್ತು ಮಿಥ್ಯಾತ್ವಗಳು ವಿರುದ್ಧವಾದವು. ಆದ್ದರಿಂದ ಶ್ರೌತಾರ್ಥವಾಗಿ ಅಭೇದವನ್ನು ಹೇಳುವ ವಾಕ್ಯವು, ಆರ್ಥಿಕಾರ್ಥವಾಗಿ ಮಿಥ್ಯಾತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಐಕ್ಯವಾಕ್ಯಕ್ಕೆ ಜಗತ್ಸತ್ಯತ್ವಕ್ಕೆ ಅನುಕೂಲವಾದ ಅರ್ಥಾಂತರವನ್ನೇ ಹೇಳಬೇಕು ಎಂದು ಅಭಿಪ್ರಾಯ.

ದೃಷ್ಟಾ ದೃಷ್ಟವಿರೋಧೇ ತು ವಾಕ್ಯಸ್ಯಾನ್ಯಾರ್ಥತೈವ ಹಿ ।
ಆಗೋಪಾಲಾವಿಪಾಲಂ ಚ ಯದ್ ದೃಷ್ಟಂ ದೃಷ್ಟಮೇವ ತತ್ ॥ ೭೬ ॥

**ಅರ್ಥ-** ದೃಷ್ಟವಿರೋಧೇ ತು= ಪ್ರತ್ಯಕ್ಷವಿರೋಧವು ಬಂದರೆ, ವಾಕ್ಯಸ್ಯ= ವಾಕ್ಯಕ್ಕೆ, ಅನ್ಯಾರ್ಥತೈವ= ಅನ್ಯಾರ್ಥವೇ, ದೃಷ್ಟಾ ಹಿ= ನೋಡಲ್ಪಟ್ಟಿದೆಯಷ್ಟೇ, ಆಗೋಪಾಲಾ-ವಿಪಾಲಂ ಚ= ದನ ಕಾಯುವವರಿಂದ ಮತ್ತು ಕುರಿ ಕಾಯುವವರಿಂದ ಹಿಡಿದು, ಯದ್ದೃಷ್ಟಂ= ಯಾವುದು ದೃಷ್ಟವಾಗಿದೆಯೋ, ತತ್= ಅದು, ದೃಷ್ಟಮೇವ= ನೋಡಲ್ಪಟ್ಟದ್ದೇ.

**ಅನುವಾದ-** ಪ್ರತ್ಯಕ್ಷ ವಿರೋಧವು ಬಂದರೆ ವಾಕ್ಯಕ್ಕೆ ಅರ್ಥಾಂತರವನ್ನು ಮಾಡುವುದು ಎಲ್ಲ ಕಡೆಯಲ್ಲೂ ಕಂಡುಬಂದಿದೆ. ದನ ಕಾಯುವವರಿಂದ ಮತ್ತು ಕುರಿಯನ್ನು ಕಾಯುವವರಿಂದ ಹಿಡಿದು ಯಾವುದು ನೋಡಲ್ಪಟ್ಟದೆಯೋ, ಅದು ನೋಡಲ್ಪಟ್ಟದ್ದೇ ಆಗಿದೆ (ಅದಕ್ಕೆ ಎಂದೂ ಬಾಧವು ಬರುವುದಿಲ್ಲ).

**ಭಾವವಿಲಾಸಿನೀ** – ತದೇವ ದರ್ಶಯತಿ ।।ದೃಷ್ಟೇತಿ।। ದೃಷ್ಟವಿರೋಧೇ ಸಿಂಹಪುರುಷಯೋರ್ದೃಷ್ಟಭೇದವಿರೋಧೇ । ಏವಶಬ್ದೇನ ದೃಷ್ಟಭೇದಮಿಥ್ಯಾತ್ವಂ ಭೇದಕಧರ್ಮಮಿಥ್ಯಾತ್ವಂ ಚ ವ್ಯವಚ್ಛಿನತ್ತಿ । ತಥಾ ಜೀವಪರಮಯೋರೈಕ್ಯಘಟನಾಯ ಆವಿಪಾಲಗೋಪಾಲಂ ದೃಷ್ಟಜೀವೇಶ್ವರಭೇದಸ್ಯ ಸರ್ವಜ್ಞತ್ವಾಲ್ಪಜ್ಞತ್ವಾದಿ ಭೇದಕಧರ್ಮಾಣಾಂ ಚ ನ ಮಿಥ್ಯಾತ್ವಂ ಕಿಂತು ದೃಷ್ಟವಿರೋಧೇ ನೈಕ್ಯವಾಕ್ಯಸ್ಯೈವಾರ್ಥಾಂತರಪರತಾ । ತತಶ್ಚ ನೇದೃಶವಾಕ್ಯೈರಪಿ ಜಗನ್ಮಿಥ್ಯಾತ್ವಸಿದ್ಧಿರಿತಿ ಭಾವಃ । ಏವಂ ಚ ಸೌರಭಸಂಗತತ್ವಾಚ್ಚ ಪುನರ್ವಚನಮ್ ।। ೭೯೬ ।।

**ವಿವರಣೆ**- 'ಸಿಂಹೋ ದೇವದತ್ತಃ' ಎಂಬಲ್ಲಿ ಆಪಾತತಃ ತೋರುವ ಅರ್ಥಕ್ಕೆ ಪ್ರತ್ಯಕ್ಷ ವಿರೋಧವು ಬಂದಾಗ ಅದಕ್ಕೆ ಬೇರೆ ಅರ್ಥವನ್ನು ಮಾಡುವುದು ಕಂಡುಬಂದಿದೆ. ಅದರಂತೆ ಆವಿಪಾಲಗೋಪಾಲರಿಂದ ಹಿಡಿದು ಎಲ್ಲರ ಅನುಭವಕ್ಕೆ ವಿಷಯವಾದ ಜೀವೇಶ್ವರ ಭೇದವು ಮತ್ತು ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಾದಿ ವಿರುದ್ಧ ಧರ್ಮಗಳು ಎಂದೂ ಮಿಥ್ಯೆಯಾಗಲು ಸಾಧ್ಯವಿಲ್ಲ. ಆದ್ದರಿಂದ ಐಕ್ಯವಾಕ್ಯಕ್ಕೆ ಅರ್ಥಾಂತರವನ್ನು ಹೇಳಬೇಕು. ಆದ್ದರಿಂದ ಇಂತಹ ವಾಕ್ಯಗಳಿಂದಲೂ ಜಗನ್ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

''ಯತ್ರ ಮಿಥ್ಯಾ ಪ್ರಪಂಚಸ್ಯ ವಾಕ್ಯೈರ್ವೇದಾಂತಗೋಚರೈಃ ।
ದೃಶ್ಯಮಾನಮಿದಂ ಸರ್ವಮನಿತ್ಯಮಿತಿ ಚೋಚ್ಯತೇ ।। ೭೯೭ ।।''

ಇತಿ ಪಾದ್ಮೇ ಮಹೇಶೇನ ತ್ರಿಂಶಾಧ್ಯಾಯೇ ಕಿಲೋದಿತಂ ।
ಅತೋ ಮಿಥ್ಯೇತಿ ವಾಗ್ವಿಶ್ವಸ್ಯಾನಿತ್ಯತ್ವಂ ವದೇತ್ ಪರಂ ।। ೭೯೮ ।।

**ಅರ್ಥ**-ಯತ್ರ= ಎಲ್ಲಿ, ವೇದಾಂತಗೋಚರೈಃ ವಾಕ್ಯೈಃ= ವೇದಾಂತ ವಾಕ್ಯಗಳಿಂದ, ಪ್ರಪಂಚಸ್ಯ= ಪ್ರಪಂಚಕ್ಕೆ, ಮಿಥ್ಯಾಂ= ಮಿಥ್ಯಾತ್ವವು, ಉಚ್ಯತೇ= ಹೇಳಲ್ಪಡುತ್ತದೆಯೋ, ತತ್ರ= ಅಲ್ಲಿ, ದೃಶ್ಯಮಾನಂ= ಪ್ರತ್ಯಕ್ಷಾದಿ ಗೋಚರವಾದ, ಇದಂ ಸರ್ವಂ= ಈ ಎಲ್ಲ ಜಗತ್ತೂ, ಅನಿತ್ಯಮಿತಿ= ಅನಿತ್ಯವೆಂದು, ಉಚ್ಯತೇ= ಹೇಳಲ್ಪಡುತ್ತದೆ, ಇತಿ= ಹೀಗೆ, ಪಾದ್ಮೇ= ಪದ್ಮಪುರಾಣದಲ್ಲಿ, ತ್ರಿಂಶಾಧ್ಯಾಯೇ= ಮೂವತ್ತನೆಯ ಅಧ್ಯಾಯದಲ್ಲಿ, ಮಹೇಶೇನ ಉದಿತಂ ಕಿಲ= ರುದ್ರದೇವರಿಂದಲೇ ಹೇಳಲ್ಪಟ್ಟಿದೆಯಷ್ಟೇ ? ಅತಃ= ಆದ್ದರಿಂದ, ಮಿಥ್ಯೇತಿ ವಾಕ್= ಮಿಥ್ಯಾ ಎಂಬ ವಚನವು, ವಿಶ್ವಸ್ಯ= ವಿಶಕ್ಕೆ, ಪರಂ= ಕೇವಲ, ಅನಿತ್ಯತ್ವಂ= ಅನಿತ್ಯತ್ವವನ್ನು, ವದೇತ್= ಹೇಳುತ್ತದೆ.

**ಅನುವಾದ**- ಎಲ್ಲಿ ವೇದಾಂತವಾಕ್ಯಗಳಲ್ಲಿ ಪ್ರಪಂಚಕ್ಕೆ ಮಿಥ್ಯಾತ್ವವು ಹೇಳಲ್ಪಡುತ್ತದೆಯೋ, ಅಲ್ಲಿ ದೃಶ್ಯಮಾನವಾದ ಈ ವಿಶ್ವವೆಲ್ಲವೂ ಅನಿತ್ಯವೆಂದೇ ಹೇಳಲ್ಪಡುತ್ತದೆ ಎಂದು ಪಾದ್ಮಪುರಾಣದಲ್ಲಿ ಮೂವತ್ತನೆಯ ಅಧ್ಯಾಯದಲ್ಲಿ ರುದ್ರದೇವರೇ ಹೇಳಿದ್ದಾರೆ. ಆದ್ದರಿಂದ ಮಿಥ್ಯಾ ಎಂಬ ಶಬ್ದವು ಜಗತ್ತಿಗೆ ಕೇವಲ ಅನಿತ್ಯತ್ವವನ್ನೇ ಹೇಳುತ್ತದೆ.

**ಭಾವವಿಲಾಸಿನೀ –** ಮಿಥ್ಯಾತ್ವಪ್ರತಿಪಾದಕವಾಕ್ಯಾನಾಮರ್ಥಾಂತರಂ ಕೇವಲಂ ನ ಮಯೈವೋಚ್ಯತೇ ಕಿಂತು ವ್ಯಾಸೇನಾಪ್ಯುಕ್ತಮಿತಿ ಭಾವೇನ ತದ್ವಾಕ್ಯಂ ಪಠತಿ ॥ ಯತ್ರೇತಿ ॥ ಮಿಥ್ಯಾಮಿಥ್ಯಾತ್ವಮ್ । ಉಚ್ಯತ ಇತ್ಯಸ್ಯಾತ್ರಾಪ್ಯನುಕರ್ಷಃ । ತತ್ರ ವೇದಾಂತೇ ಉಚ್ಯತ ಇತಿ ಸಂಬಂಧಃ । ಅತಃ ವೇದವ್ಯಾಸೇನೈವೋಕ್ತತ್ವಾತ್॥ ೭೯೭-೭೯೮ ॥

**ವಿವರಣೆ-** ಮಿಥ್ಯಾತ್ವ ಪ್ರತಿಪಾದಕ ವಾಕ್ಯಗಳಿಗೆ ಅರ್ಥಾಂತರವನ್ನು ನಾವು ಮಾತ್ರ ಹೇಳುವುದಲ್ಲ ವೇದವ್ಯಾಸರು ಪುರಾಣಗಳಲ್ಲಿ ಹೇಳಿದ್ದಾರೆ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ. ಪ್ರಥಮ ಶ್ಲೋಕದಲ್ಲಿ ಮಿಥ್ಯಾ ಪ್ರಪಂಚಸ್ಯ ಎಂದು ಬೇರೆ ಬೇರೆ ಪದಗಳು. ಮಿಥ್ಯಾ ಶಬ್ದಕ್ಕೆ ಮಿಥ್ಯಾತ್ವವೆಂದು ಅರ್ಥ.

ಯದಿ ರೂಪ್ಯಸ್ಯ ಮಿಥ್ಯಾತ್ವೇ ಮಿಥ್ಯಾ ದೃಶ್ಯತ್ವತೋ ಜಗತ್ ।
ಮೇಯತ್ವಾದ್ಘಟವತ್ತರ್ಹಿ ಪಟೋಽಪಿ ಸ್ಯಾದ್ಘಟಸ್ತವ ॥ ೭೯೯ ॥

ಅತೃತ್ವಾತ್ ಪಶುವನ್ಮಂದ ಶೃಂಗಂ ಸ್ಯಾತ್ ತವ ಮಸ್ತಕೇ ।
ಪುರುಷತ್ವಾನ್ಮೂಕವತ್ ತೇ ಮೂಕತಾ ಸ್ಯಾಜ್ಜಿತಂ ಪರೈಃ ॥ ೮೦೦ ॥

ಬಾಧಾಬಾಧಾನುಸರಣೇ ಶಿಷ್ಯಸ್ತ್ವಂ ಪ್ರತಿವಾದಿನಃ ।
ಬಾಧಶಂಕಾಖ್ಯಪಂಕೇನ ಕಿಂ ಕಿಂ ನ ಸ್ಯಾದ್ಧಿ ಪಂಕಿಲಮ್ ॥ ೮೦೧ ॥

**ಅರ್ಥ**-ಯದಿ= ಒಂದು ಪಕ್ಷ, ದೃಶ್ಯತ್ವತಃ= ದೃಶ್ಯಮಾನವಾದ್ದರಿಂದ, ರೂಪ್ಯಸ್ಯ= ಶುಕ್ತಿರೂಪ್ಯವು, ಮಿಥ್ಯಾತ್ವೇ= ಮಿಥ್ಯೆಯಾದರೆ, ದೃಶ್ಯತ್ವತಃ= ದೃಶ್ಯವಾದ್ದರಿಂದ, ಜಗತ್= ಜಗತ್ತು, ಮಿಥ್ಯಾ= ಮಿಥ್ಯೆಯೆಂದು ಹೇಳುವುದಾದರೆ, ಘಟವತ್= ಘಟದಂತೆ, ಮೇಯತ್ವಾತ್= ಪ್ರಮೇಯವಾಗಿರುವುದರಿಂದ (ಪ್ರಮೇಯತ್ವ ಇರುವುದರಿಂದ), ಪಟೋಽಪಿ= ಪಟವೂ ಸಹ, ತವ= ನಿನಗೆ, ಘಟಃ ಸ್ಯಾತ್= ಘಟವಾಗಲಿ. ಮಂದ= ಎಲೈ ಮೂಢನೇ, ಅತೃತ್ವಾತ್= ಅತೃತ್ವ ಇರುವುದರಿಂದ, ಪಶುವತ್= ಪಶುವಿನಂತೆ, ತವ ಮಸ್ತಕೇ= ನಿನ್ನ ತಲೆಯಲ್ಲಿ, ಶೃಂಗಂ ಸ್ಯಾತ್= ಶೃಂಗವು ಉಂಟಾಗಲಿ. ಮೂಕವತ್= ಮೂಕನಂತೆ, ಪುರುಷತ್ವಾತ್= ಪುರುಷತ್ವ ಇರುವುದರಿಂದ, ತೇ= ನಿನಗೆ, ಮೂಕತಾ ಸ್ಯಾತ್= ಮೂಕತ್ವ ಉಂಟಾಗಲಿ. ಆಗ, ಪರೈಃ= ಪರವಾದಿಗಳಿಂದ, ಜಿತಂ= ಜಯಿಸಲ್ಪಡುತ್ತೀಯೆ. ಬಾಧಾ ಬಾಧಾನುಸರಣೇ= ಬಾಧ ಮತ್ತು ಬಾಧಾಭಾವವನ್ನು ಅನುಸರಿಸಿ ಮಿಥ್ಯಾತ್ವ ತದಭಾವಗಳನ್ನು ವ್ಯವಸ್ಥೆ ಮಾಡುವುದಾದರೆ, ತ್ವಂ= ನೀನು, ಪ್ರತಿವಾದಿನಃ= ಪ್ರತಿವಾದಿಗಳಾದ ನಮಗೆ, ಶಿಷ್ಯಃ= ಶಿಷ್ಯನಾಗುತ್ತೀಯೆ, ಬಾಧಶಂಕಾಖ್ಯಪಂಕೇನ= ಬಾಧ ಶಂಕೆ ಎಂಬ ಕೆಸರಿನಿಂದ, ಕಿಂ ಕಿಂ= ಯಾವ ಯಾವುದು, ಪಂಕಿಲಂ ನ ಸ್ಯಾತ್= ಕೊಳಚೆಯಾಗುವುದಿಲ್ಲ?

**ಅನುವಾದ-** ದೃಶ್ಯವಾದ ರೂಪ್ಯವು ಮಿಥ್ಯೆಯಾದ ಕಾರಣದಿಂದ ದೃಶ್ಯವಾದ ಜಗತ್ತೂ ಮಿಥ್ಯೆಯೆಂದಾದರೆ ಘಟವು ಪಟದಂತೆ ಪ್ರಮೇಯತ್ವವನ್ನು ಹೊಂದಿರುವುದರಿಂದ ಘಟವು ಪಟವಾಗಲಿ. ಮೂರ್ಖನೇ! ಅದನ ಕರ್ತೃತ್ವ ಇರುವುದರಿಂದ ಪಶುವಿನಂತೆ ನಿನ್ನ ತಲೆಯಲ್ಲಿ ಶೃಂಗವು ಉಂಟಾಗಲಿ, ಮೂಕನಂತೆ ಪುರುಷತ್ವ ಇರುವುದರಿಂದ ನಿನಗೆ ಮೂಕತ್ವವು ಉಂಟಾಗಲಿ. ಆಗ ಪರರೇ ಜಯಶಾಲಿಗಳಾಗುತ್ತಾರೆ. ಬಾಧ ಮತ್ತು ತದಭಾವಗಳನ್ನು ಅನುಸರಿಸುವುದಾದರೆ ನೀನು ಪ್ರತಿವಾದಿಗಳಿಗೆ ಶಿಷ್ಯನಾಗುತ್ತೀಯೆ. ಬಾಧಶಂಕೆ ಎಂಬ ಕೆಸರು ಎಲ್ಲೆಲ್ಲಿ ಉಂಟಾಗುವುದಿಲ್ಲ?

**ಭಾವವಿಲಾಸಿನೀ –** ವಿಶ್ವಮಿಥ್ಯಾತ್ವಶ್ರುತೀರ್ನಿರಾಕೃತ್ಯ ವಿಶ್ವಂ ಮಿಥ್ಯಾದೃಶ್ಯತ್ವಾಚ್ಛುಕ್ತಿರೂಪ್ಯವದಿತ್ಯನುಮಾನಂ ಪ್ರತಿಬಂಧ್ಯಾ ತಾವನ್ನಿರಾಕರೋತಿ ॥ **ಯದೀತಿ** ॥ ಏವಂ ಚ ಏತೈರನುಮಾನೈರ್ಮಿಥ್ಯಾತ್ವವಾದಿನಃ ಪಶುತ್ವೇ ಮೂಕತ್ವೇ ಚ ಜಾತೇ ಸತ್ಯತ್ವವಾದಿನ ಏವ ಜಯೋಽಭೂದಿತಿ ಭಾವಃ । ಬಾಧೇನ ಮದುಕ್ತಾನುಮಾನದೂಷಣೇ ವಿಶ್ವಸತ್ಯತ್ವಸ್ಯ ಸರ್ವಜನಸಂಪ್ರತಿಪನ್ನತ್ವಾತ್ತೇನೈವ ತ್ವದನುಮಾನಮಪಿ ದುಷ್ಟಂ ಸ್ಯಾದಿತ್ಯಾಹ **–ಬಾಧೇತಿ** ॥ ೭೯೯-೮೦೦ ॥

**ವಿವರಣೆ-** ವಿಶ್ವಮಿಥ್ಯಾತ್ವ ಶ್ರುತಿಯನ್ನು ನಿರಾಕರಿಸಿ ವಿಶ್ವಂ ಮಿಥ್ಯಾದೃಶ್ಯತ್ವಾತ್ ಶುಕ್ತಿರೂಪ್ಯವತ್ ಎಂಬ ಅನುಮಾನವನ್ನು ಆಭಾಸಸಾಮ್ಯವನ್ನು ಹೇಳಿ ನಿರಾಕರಣೆ ಮಾಡುತ್ತಾರೆ. ಘಟಃ ಪಟಾಭಿನ್ನಃ ಮೇಯತ್ವಾತ್ ಪಟವತ್, ಪರವಾದೀ ಶೃಂಗವಾನ್ ಅತೃತ್ವಾತ್ ಪಶುವತ್, ಪರವಾದೀ ಮೂಕಃ ಪುರುಷತ್ವಾತ್ ಸಮ್ಮತವತ್, ಮೊದಲಾದ ಆಭಾಸಾನುಮಾನ ಯೋಗಕ್ಷೇಮವೇ ನಿನ್ನ ಅನುಮಾನಕ್ಕೆ ಬರುತ್ತದೆ. ಬಾಧ ಇದ್ದಲ್ಲಿ ಮಾತ್ರ ಮಿಥ್ಯಾತ್ವ, ಬಾಧವಿಲ್ಲದಿದ್ದರೆ ಸತ್ಯತ್ವ ಎಂದು ಅಂಗೀಕರಿಸಿದರೆ ಅದು ನಮ್ಮ ಮತವಾಯಿತು. ಕೇವಲ ಬಾಧ ಶಂಕೆಯಿಂದಲೇ ಮಿಥ್ಯಾತ್ವ ಉಂಟಾಗುವುದಿಲ್ಲ. ಏಕೆಂದರೆ ಬಾಧಶಂಕೆಯು ಬೌದ್ಧಾದಿವಾದಿಗಳ ಮತವನ್ನು ಅವಲಂಬಿಸಿ ಬ್ರಹ್ಮನಲ್ಲಿಯೂ ಉಂಟಾಗುತ್ತದೆ ಎಂದು ಅಭಿಪ್ರಾಯ.

ಕ್ಷೀರಂ ಪಿಬಸಿ ತೃಪ್ತಸ್ಯ ಸುಖಂ ಸಾಕ್ಷೀ ಪ್ರಪಶ್ಯತಿ ।
ಸ್ವಪ್ರಸೂಃ ಕಿಲ ಮಾತಾ ನ ಕಥಂ ಪಿಬಸಿ ನಿಂದಸಿ ॥ ೮೦೨ ॥

**ಅರ್ಥ-**ಕ್ಷೀರಂ ಪಿಬಸಿ= ಹಾಲನ್ನು ಕುಡಿಯುತ್ತೀಯೆ, ತೃಪ್ತಸ್ಯ ಸುಖಂ= ತೃಪ್ತವಾದ ನಿನ್ನ ಸುಖವನ್ನು, ಸಾಕ್ಷೀ ಪ್ರಪಶ್ಯತಿ= ಸಾಕ್ಷಿಯು ನೋಡುತ್ತದೆ, ಸ್ವಪ್ರಸೂಃ= ನಿನ್ನ ತಾಯಿಯೇ, ನ ಮಾತಾ ಕಿಲ= ನಿನ್ನ ತಾಯಿಯೇ ವಂಧ್ಯೆಯಷ್ಟೇ? ಕಥಂ= ಹೇಗೆ, ಪಿಬಸಿ= ಹಾಲನ್ನು ಕುಡಿಯುತ್ತೀಯೆ, ಮತ್ತು, ನಿಂದಸಿ= ಮಿಥ್ಯೆಯೆಂದು ನಿಂದಿಸುತ್ತೀಯೆ?

**ಅನುವಾದ-** ಹಾಲನ್ನು ಕುಡಿಯುತ್ತೀಯೆ, ತೃಪ್ತನಾದ ನಿನ್ನ ಸುಖವನ್ನು ಸಾಕ್ಷಿಯು ನೋಡುತ್ತದೆ. ನಿನ್ನ ಕ್ರಿಯೆಯಿಂದ ಹಾಲನ್ನು ಕುಡಿಯುತ್ತೀಯೆ, ಮಾತಿನಿಂದ ಮಿಥ್ಯೆ

ಎಂದು ನಿಂದಿಸುತ್ತೀಯೆ. ಇದು ನಿನ್ನ ತಾಯಿಯನ್ನೇ ವಂಧ್ಯೆ ಎಂದು ಹೇಳಿದಂತೆ ವ್ಯಾಹತವಾದುದು.

**ಭಾವವಿಲಾಸಿನೀ** – ಕಿಂಚ ವಿಶ್ವಮಿಥ್ಯಾತ್ವವಾದಸ್ತ್ವನುಭವವಿರುದ್ಧ ಇತ್ಯಾಹ – **ಕ್ಷೀರಮಿತಿ** ॥ ಪ್ರಸೂಃ ಪ್ರಸವಿತ್ರೀ। ಸ್ವಪೋಷಕತ್ವಾತ್ ಕ್ಷೀರಸ್ಯ ಸ್ವಪ್ರಸೂತ್ವಮುಕ್ತಮ್ । ನಿಂದಾಮಿ ಚ ಪಿಬಾಮಿ ಚೇತಿ ದುರ್ನೀತಿರಪಿ ತ್ವಯ್ಯೇವ ದೃಷ್ಟೇತ್ಯಾಹ – **ಕಥಮಿತಿ** ॥ ಕರ್ಮಣಾ ಪಿಬಸಿ ವಾಚಾ ಮಿಥ್ಯೇತಿ ನಿಂದಸೀತ್ಯರ್ಥಃ । ಪ್ರಾಕ್ಸ್ವನ್ಯಾಯವಿರೋಧ ಉಕ್ತಃ । ಮಧ್ಯೇ ಸ್ವಾನುಭವಸಿದ್ಧಸುಖದಾತೃತಯಾ ಸ್ವಪೋಷಕಕ್ಷೀರಸ್ಯ ಪೋಷಕತ್ವೋಕ್ತ್ಯಾ ಮಿಥ್ಯಾತ್ವೋಕ್ತ್ಯಾ ಚ ಮಾತಾ ವಂಧ್ಯೇತಿವತ್ಸ್ವವಚನವಿರೋಧಃ । ಅಂತೇ ಸ್ವಕ್ರಿಯಾವಿರೋಧಶ್ಚೋಕ್ತ ಇತಿ ದ್ರಷ್ಟವ್ಯಮ್ ॥ ೮೦೨ ॥

**ವಿವರಣೆ**- ವಿಶ್ವಮಿಥ್ಯಾತ್ವವಾದವು ನಿನ್ನ ಅನುಭವಕ್ಕೆ ವಿರುದ್ಧವಾದುದು ಎಂದು ಹೇಳುತ್ತಾರೆ. ತೃಪ್ತಿ ಉಂಟಾಗುವಂತೆ ಹಾಲನ್ನು ಕುಡಿದು ಪುನಃ ಕ್ಷೀರವನ್ನು ಮಿಥ್ಯಾ ಎಂದು ಹೇಳುವುದು ನಿನ್ನ ದುರ್ನೀತಿ. ಇದು ಸ್ವಕ್ರಿಯಾವಿರುದ್ಧವಾದುದು ಮತ್ತು ಸ್ವನ್ಯಾಯವಿರುದ್ಧವಾದುದು ಎಂದು ಅಭಿಪ್ರಾಯ.

ಅಸತ್ತ್ವಮೇವ ಮಿಥ್ಯಾತ್ವಂ ಮಮ ಸರ್ವಸ್ಯ ಸಂಮತಂ ।
ಅಪಸಿದ್ಧಾಂತದೋಷೇಣ ನ ತತ್ ಸಾಧ್ಯಂ ಭವೇತ್ ತವ ॥ ೮೦೩ ॥

**ಅರ್ಥ**-ಮಮ= ನನಗೂ, ಸರ್ವಸ್ಯ= ಮತ್ತು ಎಲ್ಲರಿಗೂ, ಮಿಥ್ಯಾತ್ವಂ= ಮಿಥ್ಯಾತ್ವವು, ಅಸತ್ತ್ವಮೇವ= ಅಸತ್ತ್ವರೂಪವೆಂದೇ, ಸಂಮತಂ= ಸಮ್ಮತವಾಗಿದೆ. ತವ= ನಿನಗಾದರೂ, ಅಪಸಿದ್ಧಾಂತದೋಷೇಣ= ಅಪಸಿದ್ಧಾಂತವು ಬರುವ ಪ್ರಸಂಗವಿರುವುದರಿಂದ, ತತ್= ಅಂತಹ ಮಿಥ್ಯಾತ್ವವು, ಸಾಧ್ಯಂ ನ= ಸಾಧ್ಯವಲ್ಲ.

**ಅನುವಾದ**- ನನಗೂ ಮತ್ತು ಎಲ್ಲ ವಾದಿಗಳಿಗೂ ಮಿಥ್ಯಾತ್ವವು ಅಸತ್ತ್ವವೆಂದೇ ಸಮ್ಮತವಾಗಿದೆ. ನೀನು ಅಸತ್ತ್ವವನ್ನು ಸಾಧನೆ ಮಾಡಿದರೆ ಅಪಸಿದ್ಧಾಂತ ದೋಷವು ಬರುವುದರಿಂದ ಅಂತಹ ಮಿಥ್ಯಾತ್ವವು ನಿನಗೆ ಸಾಧ್ಯವಲ್ಲ.

**ಭಾವವಿಲಾಸಿನೀ** – ಮಮ ಮತೇ । ಸರ್ವಸ್ಯ ಶುಕ್ತಿರಜತಾದೇಶ್ಶಶವಿಷಾಣಾದೇಶ್ಚ । ತತ್ ಅಸತ್ತ್ವರೂಪಮಿಥ್ಯಾತ್ವಮ್ । ನನು ಸಾರ್ವದೇಶಿಕಸಾರ್ವಕಾಲಿಕ ನಿಷೇಧಪ್ರತಿಯೋಗಿತ್ವ-ರೂಪಮಸತ್ತ್ವಂ ನ ಮದಭಿಮತಮಿಥ್ಯಾತ್ವಮ್ । ಯೇನ ತತ್ಸಾಧನೇ ಅಪಸಿದ್ಧಾಂತಸ್ಸ್ಯಾತ್ । ಕಿಂತು ಪ್ರತಿಪನ್ನೋಪಾಧೌ ತ್ರೈಕಾಲಿಕನಿಷೇಧಪ್ರತಿಯೋಗಿತ್ವಮೇವ। ಇದಂ ಚ ಪ್ರತಿಪನ್ನಸ್ಯ ರಜತಸ್ಯೋಪಾಧೌ ಶುಕ್ತಿಶಕಲೇ ತ್ರೈಕಾಲಿಕನಿಷೇಧ ಪ್ರತಿಯೋಗಿತ್ವರೂಪಮಿತಿ ನಿರುಪಾಖ್ಯಾದಸತೋ ವ್ಯಾವೃತ್ತಮ್ । ಅತೋ ನಾಪಸಿದ್ಧಾಂತ ಇತಿ ಚೇತ್ ಅತ್ರಾಪಿ ಪ್ರಷ್ಟವ್ಯಮ್ । ಪ್ರತಿಪನ್ನಸ್ಯ ಯಸ್ಯ ಕಸ್ಯಚಿದ್ರಜತಸ್ಯ ವಾ ಅನುಭೂಯಮಾನಾರೋಪೇ ಪುರತಃ ಪ್ರತೀತಸ್ಯ ವಾ ಉಪಾಧೌ ತ್ರೈಕಾಲಿಕನಿಷೇಧಃ ಉತ ಶುಕ್ತಿತಯಾ ಪ್ರತಿಪನ್ನಸ್ಯ ರಜತಸ್ಯ । ನಾದ್ಯಃ ಕೇನಚಿದಾನೀತಸ್ಯೈವ ರಜತಸ್ಯ ಶುಕ್ತಿಶಕಲೋಪರಿ ನಿಕ್ಷೇಪೇ ಸತಿ

ಸತ್ತ್ವಸಂಭವೇನೋಕ್ತನಿಷೇಧಸ್ಯಾಯುಕ್ತತಯಾ ದೃಷ್ಟಾಂತಸ್ಯ ಸಾಧ್ಯವೈಕಲ್ಯಪ್ರಸಂಗಾತ್ । ಪಕ್ಷೇ ಚ ಸರ್ವಾಧಾರೇ ಬ್ರಹ್ಮಣಿ ಪ್ರತಿಪನ್ನಸ್ಯ ಜಗತಃ ಘಟಾಧಾರಭೂತಲೇ ಪ್ರತೀತಘಟಸ್ಯೇವ ನಿಷೇಧಾಸಂಭವೇನ ಬಾಧಾಚ್ಚ ।

ನ ದ್ವಿತೀಯಃ । ಶುಕ್ತಿತಯಾ ಪ್ರತೀತಸ್ಯ ಶುಕ್ತ್ಯಾತ್ಮಕರಜತಸ್ಯ ಸಾರ್ವದೇಶಿಕಸಾರ್ವಕಾಲಿಕ ನಿಷೇಧಪ್ರತಿಯೋಗಿತ್ವೇನ ಸದಾ ಸರ್ವತ್ರಾಪ್ಯಸತಶ್ಶಶಶೃಂಗಾದವಿಶೇಷೇಣ ತಾದೃಶಮಿಥ್ಯಾತ್ವಸಾಧನೇ ಪುನರಪಸಿದ್ಧಾಂತತಾದವಸ್ಥ್ಯಾತ್ । ಉಪಾಧಾವಿತಿ ವಿಶೇಷಣಸ್ಯ ವೈಯರ್ಥ್ಯಾಚ್ಚ । ನಚ ವಾಚ್ಯಮುಕ್ತನಿಷೇಧಪ್ರತಿಯೋಗಿತ್ವೇಽಪ್ಯಪರೋಕ್ಷತಯಾ ಪ್ರತೀತತ್ವಾನ್ನಾಸತ್ತ್ವಮಿತಿ । ಗಂಧವತ್ತ್ವರೂಪಪೃಥಿವೀ ಲಕ್ಷಣವತ್ತ್ವೇನ ಸಮಯೋರ್ಘಟ ಪರಮಾಣ್ವೋಃ ಪ್ರತ್ಯಕ್ಷಾಪ್ರತ್ಯಕ್ಷ-ಪಾರ್ಥಿವರೂಪತ್ವವಜ್ಜಗಚ್ಛಶೃಂಗಯೋರಪ್ಯುಕ್ತನಿಷೇಧಪ್ರತಿಯೋಗಿತ್ವಸಾಮ್ಯೇ ಪ್ರತ್ಯಕ್ಷಾ-ಪ್ರತ್ಯಕ್ಷಾಸದ್ರೂಪತ್ವಸ್ಯೈವ ಪ್ರಾಪ್ತತ್ವೇನಾಸತ್ತ್ವಾಪರಿಹಾರಾತ್ । ನಿರುಪಾಖ್ಯಪದೇನೈವಂ ಖ್ಯಾಯಮಾನತಯಾ ಪ್ರತೀಯಮಾನತಯಾ ಚ ನಿರೂಪಾಖ್ಯತ್ವಮಸತ್ತ್ವಮಿತಿ ವದತಾಽಪ್ಯ-ಪ್ರತ್ಯಕ್ಷತ್ವಮೇವ ನಿರುಪಾಖ್ಯತ್ವಂ ವಕ್ತವ್ಯಮ್ । ತಚ್ಚಾತೀಂದ್ರಿಯಧರ್ಮಾದೌ ಗತತ್ವಾತ್ ನಾಸತ್ತ್ವೋಪಯೋಗಿ । ಕಿಂತೂಕ್ತನಿಷೇಧ ಏವ ತದ್ವಿಷಯತ್ವೇ ಚ ಕಥಮಸತ್ತ್ವಪರಿಹಾರಃ । ಪಾರಮಾರ್ಥಿಕತ್ವೇನ ತಾದೃಶನಿಷೇಧಪ್ರತಿಯೋಗಿತ್ವಸಾಧನಾನ್ನಾಪಸಿದ್ಧಾಂತ ಇತಿ ಚೇನ್ನ । ಪರಮಾರ್ಥತೋ ಜಗತ್ಸದಾ ಸರ್ವತ್ರ ನಾಸ್ತೀತ್ಯಾಕಾರಕಶ್ರುತೇರಭಾವೇನ ಶ್ರುತಿಜನ್ಯತಾದೃಶ ಬಾಧಸ್ಯಾಪ್ಯವಿದ್ಯಮಾನತಯಾ ಏತಾದೃಶನಿಷೇಧಪ್ರತಿಯೋಗಿತ್ವಸಾಧನೇ ಪುನರ್ಬಾಧಪ್ರಸಂಗಾತ್ । ದೃಷ್ಟಾಂತೇಽಪಿ ನೇದಂ ರಜತಮಿತ್ಯೇವ ಬಾಧದರ್ಶನೇನ ಸಾಧ್ಯವೈಕಲ್ಯಾಚ್ಚ । ಯದಿ ಚ ಭ್ರಮಕಾಲೇಽಯಂ ಘಟ ಇತ್ಯಾದ್ಯಾಕಾರೇಣ ಬ್ರಹ್ಮತಯಾ ಪ್ರತೀತಂ ಜಗತ್ ಉಕ್ತನಿಷೇಧಪ್ರತಿಯೋಗೀತಿ ಸಾಧ್ಯತೇ ತದಾ ಪ್ರತಿವಾದಿಮತೇ ಏತಾದೃಶಜಗತೋಽ-ಪ್ರಸಿದ್ಧತ್ವಾದಾಶ್ರಯಾಸಿದ್ಧಿಃ । ತದಭಾವಸಾಧನಸ್ಯೇಷ್ಟತ್ವಾತ್ಸಿದ್ಧ ಸಾಧನತಾ ಚ । ಅನಾರೋಪಿತ-ಜಗತೋಽಪ್ರತಿಷೇಧೇನ ಪರಸ್ಯಾರ್ಥಾಂತರತಾ ಚ ಸ್ಯಾತ್ ॥ ೮೦೩ ॥

**ವಿವರಣೆ-** ಸಾರ್ವದೇಶಿಕ, ಸಾರ್ವಕಾಲಿಕ ನಿಷೇಧ ಪ್ರತಿಯೋಗಿತ್ವರೂಪವಾದ ಮಿಥ್ಯಾತ್ವವು ನನಗೆ ಅಭಿಮತವಾದ ಮಿಥ್ಯಾತ್ವವಲ್ಲ. ಅಂತಹ ಮಿಥ್ಯಾತ್ವವನ್ನು ಸಾಧನೆ ಮಾಡಿದರೆ ಅಪಸಿದ್ಧಾಂತವು ಬರುತ್ತಿತ್ತು. ನಾವು ಸಾಧನೆ ಮಾಡುವುದು ಪ್ರತಿಪನ್ನೋಪಾಧಿಯಲ್ಲಿ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವನ್ನು ಮಾತ್ರ. ಪ್ರತಿಪನ್ನೋಪಾಧಿಯಾದ ಶುಕ್ತಿಯಲ್ಲಿ ರಜತಕ್ಕೆ ತ್ರೈಕಾಲಿಕನಿಷೇಧಪ್ರತಿಯೋಗಿತ್ವವು ಇದೆ. ನಿರುಪಾಖ್ಯವಾದ ಅಸತ್ತಿಗೆ ಪ್ರತಿಪನ್ನೋಪಾಧಿಯೇ ಇಲ್ಲದಿರುವುದರಿಂದ ಅಸತ್ತಿನಲ್ಲಿ ಇಂತಹ ಮಿಥ್ಯಾತ್ವವಿಲ್ಲ. ಆದ್ದರಿಂದ ಅಪಸಿದ್ಧಾಂತ ದೋಷವು ಬರುವುದಿಲ್ಲ ಎಂದು ಅದ್ವೈತಿಗಳು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಪ್ರತಿಪನ್ನವಾದ ರಜತದ ನಿಷೇಧ ಎಂದು ಹೇಳಿದರೆ ಎಲ್ಲಿಯಾದರೂ ಪ್ರತಿಪನ್ನವಾದ ರಜತ ನಿಷೇಧವೋ ಅಥವಾ ಪ್ರಕೃತ ಆರೋಪದಲ್ಲಿ ಪುರೋವೃತ್ತಿ ದೇಶದಲ್ಲಿ

ಪ್ರತೀತವಾದ ರಜತದ ನಿಷೇಧವೋ ಅಥವಾ ಶುಕ್ತ್ಯಭೇದೇನ ಪ್ರತೀತವಾದ ರಜತದ ನಿಷೇಧವೋ? ಮೊದಲಿನ ಎರಡು ಪಕ್ಷಗಳಲ್ಲಿ ಶುಕ್ತಿಯ ಮೇಲೆ ಯಾರಾದರೂ ಒಂದು ರಜತವನ್ನು ತಂದಿಟ್ಟಿದ್ದರೆ ಆ ರಜತಕ್ಕೆ ಪ್ರತಿಪನ್ನೋಪಾಧಿಯಾದ ಶುಕ್ತಿಯಲ್ಲಿ ರಜತವನ್ನು ನಿಷೇಧ ಮಾಡಲು ಸಾಧ್ಯವಿಲ್ಲವಾದ್ದರಿಂದ ರಜತಕ್ಕೆ ನಿಷೇಧಪ್ರತಿಯೋಗಿತ್ವವು ಬರುವುದಿಲ್ಲ, ಸತ್ತ್ವವೇ ಉಂಟಾಗುತ್ತದೆ. ಆದ್ದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯವು ಬರುತ್ತದೆ ಮತ್ತು ಪಕ್ಷದಲ್ಲಿಯಾದರೂ ಬ್ರಹ್ಮನು ಜಗದಾಧಾರತ್ವೇನ ಪ್ರತಿಪನ್ನನಾಗಿದ್ದಾನೆ. ಘಟಾಧಾರವಾದ ಭೂತಲದಲ್ಲಿ ಘಟವನ್ನು ಹೇಗೆ ಪ್ರತಿಷೇಧ ಮಾಡಲು ಸಾಧ್ಯವಿಲ್ಲವೋ, ಅದರಂತೆ ಬ್ರಹ್ಮನಲ್ಲಿ ಆಶ್ರಯಿಸಿದ ಜಗತ್ತನ್ನೂ ಬ್ರಹ್ಮನಲ್ಲಿ ಪ್ರತಿಷೇಧ ಮಾಡಲು ಸಾಧ್ಯವಿಲ್ಲದ್ದರಿಂದ ಬಾಧವೇ ಬರುತ್ತದೆ. ಇನ್ನು ಎರಡನೆಯ ಪಕ್ಷದಲ್ಲಿ ಶುಕ್ತ್ಯಭಿನ್ನತ್ವೇನ ಪ್ರತೀತವಾದ ಶುಕ್ತ್ಯಭಿನ್ನವಾದ ರಜತವು ಸರ್ವದೇಶದಲ್ಲಿಯೂ, ಸರ್ವ ಕಾಲದಲ್ಲಿಯೂ ಇಲ್ಲದಿರುವುದರಿಂದ ಅದಕ್ಕೆ ಸಾರ್ವದೇಶಿಕ ಸಾರ್ವಕಾಲಿಕ ನಿಷೇಧಪ್ರತಿಯೋಗಿತ್ವವು ಶಶಶೃಂಗಕ್ಕೆ ಬರುವಂತೆಯೇ ಬರುತ್ತದೆ. ಆದ್ದರಿಂದ ಅಂತಹ ಮಿಥ್ಯಾತ್ವವನ್ನು ಸಾಧನೆ ಮಾಡಿದರೆ ಪುನಃ ಅಪಸಿದ್ಧಾಂತ ದೋಷವೇ ಬರುತ್ತದೆ. ಸಾರ್ವದೇಶಿಕ ಸಾರ್ವಕಾಲಿಕ ನಿಷೇಧವನ್ನು ಅಂಗೀಕರಿಸುವಾಗ ಉಪಾಧೌ ಎಂಬುದು ವ್ಯರ್ಥವಾಗುತ್ತದೆ. ಪ್ರತಿಪನ್ನಸ್ಯ ಎಂದು ಇಷ್ಟೇ ಸಾಕು. ಇಂತಹ ನಿಷೇಧ ಪ್ರತಿಯೋಗಿತ್ವವು ಇದ್ದರೂ ಅಪರೋಕ್ಷತಯಾ ಪ್ರತೀತಿ ಇರುವುದರಿಂದ ಜಗತ್ತಿಗೆ ಅಸತ್ತ್ವ ಉಂಟಾಗುವುದಿಲ್ಲ ಎಂದು ಪರಿಹಾರವನ್ನು ಹೇಳಲು ಸಾಧ್ಯವಿಲ್ಲ. ಘಟ ಮತ್ತು ಪರಮಾಣುಗಳಲ್ಲಿ ಗಂಧವತ್ತ್ವರೂಪವಾದ ಪೃಥಿವೀ ಲಕ್ಷಣವು ಸಮಾನವಾಗಿದ್ದರೂ, ಘಟವು ಪ್ರತ್ಯಕ್ಷವಾಗುತ್ತದೆ ಪರಮಾಣುವು ಪ್ರತ್ಯಕ್ಷವಾಗುವುದಿಲ್ಲ. ಸತ್ಯವಾದ ಪದಾರ್ಥದಲ್ಲಿಯೂ ಹೀಗೆ ಭೇದವಿದ್ದಂತೆ ಜಗತ್ತು ಪ್ರತೀತವಾಗುತ್ತದೆ, ಶಶಶೃಂಗವು ಪ್ರತೀತವಾಗುವುದಿಲ್ಲ ಎಂಬ ಕಾರಣದಿಂದ ಅಸತ್ತಿನಲ್ಲಿಯೂ ಇಂತಹ ವಿಭಾಗವನ್ನು ಅಂಗೀಕರಿಸಬಹುದಾದ್ದರಿಂದ ಪ್ರತೀಯಮಾನತ್ವವು ಅಸತ್ತ್ವಕ್ಕೆ ವಿರೋಧಿಯಲ್ಲ. ಇನ್ನು ಅಸತ್ತ್ವವೆಂದರೆ ನಿರುಪಾಖ್ಯತ್ವ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ನಿರುಪಾಖ್ಯ ಪದದಿಂದಲೇ ಅಸತ್ತಿನ ಪ್ರತೀತಿ ಉಂಟಾಗುತ್ತದೆ. ಆದ್ದರಿಂದ ನಿರುಪಾಖ್ಯತ್ವಂ ಎಂದು ಹೇಳಿದರೂ ಅಪ್ರತ್ಯಕ್ಷತ್ವ ಎಂದೇ ಅಭಿಪ್ರಾಯವನ್ನು ಹೇಳಬೇಕು. ಅಪ್ರತ್ಯಕ್ಷತ್ವವಾದರೂ ಅತೀಂದ್ರಿಯವಾದ ಧರ್ಮಾದಿಗಳಲ್ಲಿ ಇರುವುದರಿಂದ ಅದು ಅಸತ್ತ್ವಕ್ಕೆ ಉಪಯೋಗಿಯಲ್ಲ. ತ್ರೈಕಾಲಿಕ ಸಾರ್ವದೇಶಿಕ ನಿಷೇಧವೇ ಅಸತ್ತ್ವಕ್ಕೆ ಉಪಯೋಗಿಯಾದುದು. ಅದನ್ನು ಜಗತ್ತಿನಲ್ಲಿ ಅಂಗೀಕರಿಸಿದ ಮೇಲೆ ಹೇಗೆ ಅಪಸಿದ್ಧಾಂತ ದೋಷವು ಬರುವುದಿಲ್ಲ? ನಾವು ಜಗತ್ತಿನ ಸ್ವರೂಪವನ್ನು ಅಂಗೀಕರಿಸಿ ಪಾರಮಾರ್ಥಿಕ ಆಕಾರದಿಂದ ಅಂತಹ ನಿಷೇಧವನ್ನು ಅಂಗೀಕರಿಸುತ್ತೇವೆ ಎಂಬ ಸಮಾಧಾನವು ಸರಿಯಲ್ಲ. ಏಕೆಂದರೆ ಪಾರಮಾರ್ಥಿಕವಾಗಿ ಜಗತ್ತು ಎಲ್ಲಿಯೂ ಇಲ್ಲ ಎಂಬ ಶ್ರುತಿಯು ಇಲ್ಲದಿರುವುದರಿಂದ ಅಂತಹ ಸಾಧ್ಯವನ್ನು ಸಾಧನೆ ಮಾಡಿದರೆ ಪುನಃ ಅನುಮಾನಕ್ಕೆ ಬಾಧ ದೋಷವೇ ಬರುತ್ತದೆ. ದೃಷ್ಟಾಂತವಾದ ರಜತದಲ್ಲಿಯೂ ಕೂಡ

ಇದು ರಜತವಲ್ಲ ಎಂದೇ ಬಾಧಬರುತ್ತದೆಯೇ ಹೊರತು, ಇದು ಪಾರಮಾರ್ಥಿಕವಾಗಿ ರಜತವಲ್ಲ ಎಂಬ ಬಾಧದ ಆಕಾರವು ಯಾರಿಗೂ ಅನುಭವ ಸಿದ್ಧವಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಬರುತ್ತದೆ. ಒಂದು ಪಕ್ಷ ಭ್ರಮಕಾಲದಲ್ಲಿ ಅಯಂ ಘಟಃ ಇತ್ಯಾದಿ ಪ್ರತೀತಿಯಲ್ಲಿ ಬ್ರಹ್ಮಾಭಿನ್ನತ್ವೇನ ಪ್ರತೀತವಾದ ಜಗತ್ತಿಗೆ ಅಂತಹ ನಿಷೇಧಪ್ರತಿಯೋಗಿತ್ವವನ್ನು ಸಾಧನೆ ಮಾಡುತ್ತೇವೆ ಎಂದು ಹೇಳಿದರೆ ಪ್ರತಿವಾದಿಗಳಾದ ನಮಗೆ ಬ್ರಹ್ಮಾಭಿನ್ನತಯಾ ಪ್ರತೀತವಾದ ಜಗತ್ತು ಅಪ್ರಸಿದ್ಧವಾದ್ದರಿಂದ ಆಶ್ರಯಾಸಿದ್ಧಿರೂಪವಾದ ದೋಷವು ಬರುತ್ತದೆ. ಅಂತಹ ಅಪ್ರಸಿದ್ಧ ಜಗತ್ತಿನ ಅಭಾವವನ್ನು ಸಾಧನೆ ಮಾಡಿದರೆ ಸಿದ್ಧಸಾಧನದೋಷವೂ ಬರುತ್ತದೆ. ಅನಾರೋಪಿತವಾದ ಜಗತ್ತನ್ನು ನಿಷೇಧ ಮಾಡದಿರುವುದರಿಂದ ಅನುಮಾನಕ್ಕೆ ಅರ್ಥಾಂತರತಾ ದೋಷವೂ ಬರುತ್ತದೆ ಎಂದು ಅಭಿಪ್ರಾಯ.

**ಅನ್ಯತ್ ಸದಸತೋರನ್ಯದಿತ್ಯಾದ್ಯಂ ಸರ್ವಮೇವ ಹಿ ।**
**ಮಮಾಪ್ರಸಿದ್ಧಂ ತದ್ಧೇತುರಪ್ರಸಿದ್ಧವಿಶೇಷಣಃ ।**
**ದೃಷ್ಟಾಂತಃ ಸಾಧ್ಯವಿಕಲಃ ಕಿಂ ಹೇತುಶತಕೇನ ತೇ ॥ ೮೦೪ ॥**

**ಅರ್ಥ**-ಅನ್ಯತ್= ಸದ್ವಿವಿಕ್ತವಾದುದು, ಸದಸತೋರನ್ಯತ್= ಸದಸದ್ವಿಲಕ್ಷಣವಾದುದು, ಇತ್ಯಾದ್ಯಂ= ಇದೇ ಮೊದಲಾದ, ಸರ್ವಮೇವ= ಎಲ್ಲ ಸಾಧ್ಯಗಳೂ, ಮಮ= ನನಗೆ, ಅಪ್ರಸಿದ್ಧಂ ಹಿ= ಅಪ್ರಸಿದ್ಧವಾದುದಷ್ಟೇ, ತತ್= ಆದ್ದರಿಂದ, ಹೇತುಃ= ಅನುಮಾನಕ್ಕೆ, ಅಪ್ರಸಿದ್ಧ ವಿಶೇಷಣಃ= ಅಪ್ರಸಿದ್ಧ ವಿಶೇಷಣತ್ವರೂಪವಾದ ದೋಷವು, ದೃಷ್ಟಾಂತಃ= ದೃಷ್ಟಾಂತಕ್ಕೆ, ಸಾಧ್ಯವಿಕಲಃ= ಸಾಧ್ಯವೈಕಲ್ಯರೂಪವಾದ ದೋಷವು ಬರುತ್ತದೆ, ತೇ= ನಿನ್ನ, ಹೇತುಶತಕೇನ= ನೂರು ಹೇತುಗಳಿಂದ, ಕಿಂ= ನನಗೆ ಆಗುವ ಹಾನಿಯೇನು?

**ಅನುವಾದ**- ಮಿಥ್ಯಾತ್ವವನ್ನಾಗಲೀ, ಸದಸದ್ವಿಲಕ್ಷಣತ್ವವನ್ನಾಗಲೀ, ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯವನ್ನಾಗಲೀ, ಜ್ಞಾನನಿವರ್ತ್ಯತ್ವವನ್ನಾಗಲೀ ಸಾಧನೆ ಮಾಡಿದರೆ ಅವೆಲ್ಲವೂ ನನಗೆ ಅಪ್ರಸಿದ್ಧವಾದುದು. ಆದ್ದರಿಂದ ನೂರು ಹೇತುಗಳಿಂದಲೂ ಎಂದರೆ ಜಡತ್ವ, ಪರಿಚ್ಛಿನ್ನತ್ವ ಮೊದಲಾದ ನೂರು ಹೇತುಗಳಿಂದಲೂ ಮಿಥ್ಯಾತ್ವವನ್ನೇ ಸಾಧನೆ ಮಾಡಬೇಕಷ್ಟೇ? ಆ ಮಿಥ್ಯಾತ್ವವಾದರೂ ನಮ್ಮಿಬ್ಬರಿಗೂ ಸಮ್ಮತವಾದುದು ಇಲ್ಲ. ನಿನಗೆ ಮಾತ್ರ ಪ್ರಸಿದ್ಧವಾದುದನ್ನು ಹೇಳಿದರೆ ಅಪ್ರಸಿದ್ಧ ವಿಶೇಷಣತ್ವ ದೋಷವು ಬರುತ್ತದೆ. ಮೃತಪುತ್ರನನ್ನು ರಕ್ಷಣೆ ಮಾಡಲು ನೂರು ಜನ ಪಿತೃಗಳು ಬಂದರೂ ಅವರಿಂದ ಅವನನ್ನು ಬದುಕಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ**– ಅನ್ಯತ್ ಅಸತ್ವಾದನ್ಯನ್ಮಿಥ್ಯಾತ್ವಮ್ । ಸದಸತೋರನ್ಯತ್ಸದಸದ್ವಿಲಕ್ಷಣಮ್ । ಆದ್ಯಪದೇನ ಸ್ವಾತ್ಯಂತಾಭಾವಸಮಾನಾಧಿಕರಣತ್ವಜ್ಞಾನವಿನಾಶ್ಯತ್ವಾದಿಕಂ ಗೃಹ್ಯತೇ । ತತ್ ತಸ್ಮಾತ್ । ಹೇತುಶತಕೇನ ಜಡತ್ವಾತ್ಪರಿಚ್ಛಿನ್ನತ್ವಾದಿತ್ಯಾದಿನಾ ಹೇತುಶತಕೇನ । ಹೇತುಶತಕಸ್ಯಾಪಿ ಮಿಥ್ಯಾತ್ವಂ ಖಲು ಸಾಧ್ಯಮ್ ।

ತಚ್ಛೋಕ್ತವಿಧಯಾ ಏಕಂ ತವ ನಾಭೂತ್ । ಅನ್ಯದನ್ಯಸ್ಯಾಪ್ರಸಿದ್ಧಮ್ । ಏವಂ ಚ ಮೃತಪುತ್ರರಕ್ಷಣಾಯ ಪಿತ್ರಾ ಣಾಂ ಶತೇನಾಪಿ ನಾಲಮಿತಿ ಭಾವಃ ॥ ೮೦೪ ॥

ಪರೋಕ್ಷಜ್ಞಾನಮಸತಿ ಶಬ್ದಾದಸ್ತೀತಿ ತೇ ಮತಂ ।
ತಚ್ಚ ಖಂಡಪದಂ ಶಕ್ತಿಗ್ರಹೇ ಸತ್ಯೇವ ಬೋಧಯೇತ್ ।
ಶಕ್ಯಸಂಬದ್ಧಮಥವಾ ನಾಸಂಬದ್ಧಾರ್ಥಬೋಧಕಂ ॥ ೮೦೫ ॥

**ಅರ್ಥ**-ಅಸತಿ= ಅಸತ್ತಿನಲ್ಲಿ (ಅಸದ್ವಿಷಯಕವಾದ), ಶಬ್ದಾತ್= ಶಬ್ದದಿಂದ, ಪರೋಕ್ಷಜ್ಞಾನಂ= ಪರೋಕ್ಷಜ್ಞಾನವು, ಅಸ್ತೀತಿ= ಇದೆ ಎಂದು, ತೇ ಮತಂ= ನಿನ್ನ ಮತ, ತಚ್ಚ= ಆ ಅಸತ್ ಬೋಧಕ ವಾಕ್ಯದಲ್ಲಿರುವ ಶಶವಿಷಾಣ ಮೊದಲಾದ, ಖಂಡಪದಂ= ಖಂಡಪದವು, ಶಕ್ತಿಗ್ರಹೇ ಸತ್ಯೇವ= ಶಕ್ತಿಗ್ರಹವು ಇದ್ದರೆ ಮಾತ್ರ, ಬೋಧಯೇತ್= ಅರ್ಥವನ್ನು ಬೋಧಿಸುತ್ತದೆ, ಅಥವಾ, ಶಕ್ಯಸಂಬದ್ಧಂ= ಶಕ್ಯಾರ್ಥದ ಸಂಬಂಧವಿದ್ದರೆ, ಬೋಧಯೇತ್= ಬೋಧಿಸುತ್ತದೆ, ಅಸಂಬದ್ಧಾರ್ಥ ಬೋಧಕಂ ನ= ಅಸಂಬದ್ಧಾರ್ಥವನ್ನು ಬೋಧಿಸುವುದಿಲ್ಲ.

**ಅನುವಾದ**- ಶಬ್ದದಿಂದ ಅಸದ್ವಿಷಯಕವಾದ ಪರೋಕ್ಷಜ್ಞಾನವು ಉಂಟಾಗುತ್ತದೆ ಎಂದು ನಿನ್ನ ಮತ. ಅಸತ್ ಬೋಧಕವಾದ ವಾಕ್ಯದಲ್ಲಿರುವ ಖಂಡಪದವಾದರೂ ಶಕ್ತಿಗ್ರಹವು ಇದ್ದರೆ ಮಾತ್ರ ಅರ್ಥವನ್ನು ಬೋಧಿಸುತ್ತದೆ ಅಥವಾ ಶಕ್ಯಾರ್ಥದ ಸಂಬಂಧವಿದ್ದರೆ ಮಾತ್ರ ಅರ್ಥವನ್ನು ಬೋಧಿಸುತ್ತದೆ. ಅಸಂಬದ್ಧವಾದ ಅರ್ಥವನ್ನು ಎಂದೂ ಬೋಧಿಸುವುದಿಲ್ಲ.

**ಭಾವವಿಲಾಸಿನೀ** – ಸಚ್ಚೇನ್ನ ಬಾಧ್ಯೇತ ಅಸಚ್ಚೇನ್ನ ಪ್ರತೀಯೇತೇತಿ ಶುಕ್ತಿರಜತೇ ಸದಸದ್ವೈಲಕ್ಷಣ್ಯ ಪ್ರಸಿದ್ಧಿಸಂಪಾದನಾಯಾರ್ಥಾಪತ್ತಿಂ ವದತಾ ಪ್ರತೀತ್ಯಾ ಅಸದ್ವೈಲಕ್ಷಣ್ಯಂ ಶುಕ್ತಿರಜತಾದೌ ಪರೇಣೋಚ್ಯತೇ । ತತ್ರ ಪರೋಕ್ಷಪ್ರತೀತ್ಯಾ ವಾ ಅಪರೋಕ್ಷಪ್ರತೀತ್ಯಾ ವೇತಿ ವಿಕಲ್ಪ್ಯೋಭಯಥಾಪಿ ತವ ನಾಸದ್ವೈಲಕ್ಷಣ್ಯಸಿದ್ಧಿರಿತ್ಯಾಹ – **ಪರೋಕ್ಷೇತಿ** ॥ ಅತ್ಯಂತಾಸತ್ಯಪಿ ಜ್ಞಾನಮರ್ಥೇ ಶಬ್ದಃ ಕರೋತಿ ಹೀತಿ ತದ್ವಚನಾದಿತಿ ಭಾವಃ । ತದ್ಬೋಧಕವಾಕ್ಯಸ್ಥಿತಂ ಖಂಡಪದಮ್ । ಶಕ್ತಿಗ್ರಹೇ ಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಕತ್ವರೂಪಶಕ್ತಿಗ್ರಹೇ । ಅಮುಖ್ಯವೃತ್ತ್ಯಾ ಬೋಧಕಂ ಚೇತ್ ಶಕ್ಯೇನ ಮುಖ್ಯಾರ್ಥೇನ ಸಂಬದ್ಧಂತೀರಾದಿಕಂ ಬೋಧಯೇದಿತಿ ಸಂಬಂಧಃ ॥ ೮೦೫ ॥

**ವಿವರಣೆ**- ಸಚ್ಚೇನಬಾಧ್ಯೇತ ಅಸಚ್ಚೇನ್ನಪ್ರತಿಯೇತ ಎಂದು ಖ್ಯಾತಿಬಾಧಾನುಪಪತ್ತಿಯನ್ನು ಹೇಳಿ ಶುಕ್ತಿರಜತದಲ್ಲಿ ಸದಸದ್ವೈಲಕ್ಷಣ್ಯವನ್ನು ಪ್ರಸಿದ್ಧಿಯನ್ನು ಮಾಡುವ ಪರನು ಪ್ರತೀತವಾದ್ದರಿಂದ ಶುಕ್ತಿರಜತಾದಿಗಳಲ್ಲಿ ಅಸದ್ವೈಲಕ್ಷಣ್ಯವನ್ನು ಒಪ್ಪುತ್ತಾನೆ. ಅರ್ಥಾಪತ್ತಿಯಲ್ಲಿ ಅಸಚ್ಚೇನ್ನಪ್ರತೀಯೇತ ಎಂದರೆ ಅಸತ್ತಾದರೆ ಪರೋಕ್ಷ ಪ್ರತೀತಿ ಉಂಟಾಗದಿರಲಿ ಎಂದು ಅರ್ಥವೋ ಅಥವಾ ಅಪರೋಕ್ಷ ಪ್ರತೀತಿ ಉಂಟಾಗದಿರಲಿ ಎಂಬ ಅರ್ಥವೋ ಎಂದು

ವಿಕಲ್ಪವನ್ನು ಮಾಡಿ ಯಾವ ಪಕ್ಷದಲ್ಲಿಯೂ ಶುಕ್ತಿರಜತಾದಿಗಳಿಗೆ ಅಸದ್ವೈಲಕ್ಷಣ್ಯವು ಸಿದ್ಧಿಸುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ. 'ಅತ್ಯಂತಾಸತ್ಯಪಿಹ್ಯರ್ಥೇ ಶಬ್ದೋ ಜ್ಞಾನಂ ಕರೋತಿ ಹಿ' ಎಂದು ಪರರು ಶಬ್ದದಿಂದ ಅಸದ್ವಿಷಯಕವಾದ ಜ್ಞಾನವನ್ನು ಒಪ್ಪಿದ್ದಾರೆ. ಶಬ್ದದಿಂದ ಅಸತ್ ಪ್ರತೀತಿ ಉಂಟಾಗಬೇಕಾದರೆ ಶಕ್ತಿಗ್ರಹವು ಉಂಟಾಗಬೇಕು. ಅಮುಖ್ಯಾರ್ಥ ಪ್ರತೀತಿ ಉಂಟಾಗಬೇಕಾದರೆ ಶಕ್ಯಾರ್ಥದ ಸಂಬಂಧವು ಬೇಕು. ಅರ್ಥದಿಂದ ಯಾವ ಸಂಬಂಧವೂ ಇಲ್ಲದಿದ್ದರೆ ಶಬ್ದವು ಅಂತಹ ಅರ್ಥವನ್ನು ಬೋಧಿಸುವುದಿಲ್ಲ ಎಂದು ಅಭಿಪ್ರಾಯ.

**ಪದದ್ವಯಾತ್ಮಕಂ ವಾಕ್ಯಂ ಸಮಸ್ತಂ ವಾ ಪದಂ ಭವೇತ್ ।**
**ಯೋಗ್ಯತಾವಶ್ಯಕೀ ತತ್ರ ಸಾಪಿ ಶಕ್ಯಾರ್ಥಸಂಗತಿಃ ॥ ೮೦೬ ॥**

**ಅರ್ಥ**-ವಾಕ್ಯಂ= ವಾಕ್ಯವು, ಪದದ್ವಯಾತ್ಮಕಂ ಭವೇತ್= ಪದದ್ವಯ ರೂಪವಾಗಿರಬಹುದು, ವಾ= ಅಥವಾ, ಸಮಸ್ತಂ ಪದಂ ಭವೇತ್= ಸಮಸ್ತ ಪದವಾಗಿರಬಹುದು, ತತ್ರ= ಆ ಎರಡು ಕಡೆಗಳಲ್ಲಿಯೂ, ಯೋಗ್ಯತಾ= ಯೋಗ್ಯತ್ವವು, ಆವಶ್ಯಕೀ= ಅವಶ್ಯಕವಾದುದು, ಸಾಪಿ= ಆ ಯೋಗ್ಯತೆಯಾದರೂ, ಶಕ್ಯಾರ್ಥಸಂಗತಿಃ= ಶಕ್ಯಾರ್ಥಗಳ ಪರಸ್ಪರ ಸಂಬಂಧ ರೂಪವಾದುದು.

**ಅನುವಾದ**- ಹಿಂದಿನ ಶ್ಲೋಕದಲ್ಲಿ ಹೇಳಿದ ಖಂಡಪದವು ಪದದ್ವಯಾತ್ಮಕ ವಾಕ್ಯವಾಗಿರಬಹುದು ಅಥವಾ ಸಮಸ್ತಪದವಾಗಿರಬಹುದು. ಆದರೂ ಅರ್ಥವನ್ನು ಬೋಧಿಸಲು ಯೋಗ್ಯತೆಯು ಆವಶ್ಯಕವಾಗಿದೆ. ಯೋಗ್ಯತೆ ಎಂದರೆ ಶಕ್ಯಾರ್ಥಗಳ ಪರಸ್ಪರ ಸಂಬಂಧ.

**ಭಾವವಿಲಾಸಿನೀ** – ಸಮಸ್ತಂ ಪದದ್ವಯಸಮಾಸಘಟಿತಮ್ । ಯಥಾ ಸರಸೀರುಹಮಿತಿ ಪದಮ್ । ದ್ವಿವಿಧವಾಕ್ಯೇಽಪ್ಯರ್ಥಪದಯೋಸ್ಸಾಕ್ಷಾದ್ವಾಚ್ಯವಾಚಕಭಾವಸಂಬಂಧೋ ವಾಽರ್ಥದ್ವಾರಾ ಸಂಬಂಧೋ ವಾಽಪೇಕ್ಷಿತಃ । ಸರ್ವಥಾಽಸಂಬದ್ಧಾರ್ಥಜ್ಞಾನಜನಕತ್ವಂ ನ ವಾಕ್ಯಸ್ಯಾಪೀತಿ ಭಾವಃ । ಪ್ರಯೋಜಕಾಂತರಮಪ್ಯಾಹ –**ಯೋಗ್ಯತೇತಿ** ॥ ಸಾ ಯೋಗ್ಯತಾ । ಶಕ್ಯಾರ್ಥಸಂಗತಿಃ ಶಕ್ಯಾರ್ಥಯೋಃ ಪರಸ್ಪರಸಂಬಂಧಃ ॥ ೮೦೬ ॥

**ಅಸಂಬದ್ಧಾರ್ಥಬೋಧಸ್ತು ನ ಶಬ್ದಾದಪಿ ಜಾಯತೇ ।**
**ಅಸತಃ ಸರ್ವಶೂನ್ಯಸ್ಯ ಕಥಂ ಶಬ್ದೋಽಪಿ ಬೋಧಕಃ ॥ ೮೦೭ ॥**

**ಅರ್ಥ**-ಅಸಂಬದ್ಧಾರ್ಥಬೋಧಸ್ತು= ಸಂಬಂಧ ಶೂನ್ಯವಾದ ಅರ್ಥದ ಬೋಧವು, ಶಬ್ದಾದಪಿ= ಶಬ್ದದಿಂದಲೂ ಸಹ, ನ ಜಾಯತೇ= ಉಂಟಾಗುವುದಿಲ್ಲ, ಸರ್ವಶೂನ್ಯಸ್ಯ= ಸರ್ವ ಸಂಬಂಧ ರಹಿತವಾದ, ಅಸತಃ= ಅಸತ್ತಿಗೆ, ಶಬ್ದೋಽಪಿ= ಶಬ್ದವಾದರೂ ಕೂಡ, ಕಥಂ= ಹೇಗೆ, ಬೋಧಕಃ= ಬೋಧಕವಾಗುತ್ತದೆ?

**ಅನುವಾದ-** ಶಬ್ದದಿಂದಲೂ ಸಂಬಂಧರಹಿತವಾದ ಅರ್ಥದ ಬೋಧವು ಉಂಟಾಗುವುದಿಲ್ಲ. ಸರ್ವಸಂಬಂಧಶೂನ್ಯವಾದ ಅಸತ್ತಿನ ಜ್ಞಾನವನ್ನು ಶಬ್ದವು ಹೇಗೆ ಉಂಟು ಮಾಡಿಕೊಡುತ್ತದೆ?

**ಭಾವವಿಲಾಸಿನೀ –** ಅಸಂಬದ್ಧಾರ್ಥಬೋಧ ಇತ್ಯತ್ರ ಸಂಬಂಧಪದೇನ ಸಾಕ್ಷಾಚ್ಛಬ್ದಾರ್ಥಯೋರರ್ಥಯೋಸ್ಸಂಬಂಧೋಽರ್ಥದ್ವಾರಾ ಸಂಬಂಧ ಇತಿ ತ್ರಿತಯಂ ಗೃಹ್ಯತೇ । ತತ್ರ ಸಾಕ್ಷಾತ್-ಸಂಬಂಧೇನಾರ್ಥಬೋಧಕಮುಖ್ಯವಾಕ್ಯೇ ಪರಂಪರಾಸಂಬಂಧೇನಾರ್ಥಬೋಧಕಾಮುಖ್ಯ-ವಾಕ್ಯೇಚಾರ್ಥಯೋರ್ಮಿಥಸ್ಸಂಬಂಧಾತ್ಮಿಕಾ ಯೋಗ್ಯತೋಭಯತ್ರಾಪ್ಯಪೇಕ್ಷಿತೇತಿ ವಿವೇಕೋ ದ್ರಷ್ಟವ್ಯಃ। ಸರ್ವಶೂನ್ಯಸ್ಯ ಸಂಬಂಧತ್ರಯಶೂನ್ಯಸ್ಯ । ಶಬ್ದಃ ಶಶಸ್ಯ ವಿಷಾಣಮಿತಿ ಭಿನ್ನಪದಾತ್ಮಕೋ ವಾ ಶಶವಿಷಾಣಮಿತಿ ಸಮಸ್ತಪದಾತ್ಮಕೋ ವಾ । ಶಶಶೃಂಗಸ್ಯ ಸಾಕ್ಷಾಚ್ಛಬ್ದಸಂಬಂಧಾಭಾವಾತ್ ಅರ್ಥದ್ವಾರಾ ಸಂಬಂಧಾಭಾವಾತ್ ಶಶವಿಷಾಣಪದಾರ್ಥಭೂತಯೋರ್ವಿಷಾಣ ಶಶಯೋರ್ಮಿಥಸ್ಸಂಬಂಧಾ-ಬಾವಾಚ್ಚ ಕಥಂ ಶಬ್ದಬೋಧ್ಯತೇತಿ ಭಾವಃ ॥೮೦೭॥

**ವಿವರಣೆ-** ಈ ಶಬ್ದಾರ್ಥ ಸಂಬಂಧವು ಮೂರು ರೂಪವಾದುದು. ಶಬ್ದಾರ್ಥಗಳ ಸಾಕ್ಷಾತ್ ಸಂಬಂಧ, ಶಬ್ದಾರ್ಥಗಳ ಪರಂಪರಾ ಸಂಬಂಧ ಮತ್ತು ಅರ್ಥದ್ವಾರಾ ಶಬ್ದಗಳ ಸಂಬಂಧ ಎಂದು ಮೂರು ವಿಧವಾದುದು. ಮುಖ್ಯವಾಕ್ಯವು ಶಬ್ದಾರ್ಥಗಳ ಸಾಕ್ಷಾತ್ ಸಂಬಂಧದಿಂದ ಅರ್ಥವನ್ನು ಬೋಧಿಸುತ್ತದೆ. ಅಮುಖ್ಯವಾಕ್ಯವು ಪರಂಪರಾ ಸಂಬಂಧದಿಂದ ಅರ್ಥವನ್ನು ಬೋಧಿಸುತ್ತದೆ. ಎರಡು ಕಡೆಗಳಲ್ಲಿಯೂ ಅರ್ಥಗಳಿಗೆ ಪರಸ್ಪರ ಸಂಬಂಧ ರೂಪವಾದ ಯೋಗ್ಯತೆಯು ಅವಶ್ಯಕವಾಗಿದೆ. ಅಸತ್ ಪದಾರ್ಥವು ಸರ್ವಸಂಬಂಧಶೂನ್ಯವಾದುದು. 'ಶಶಸ್ಯ ವಿಷಾಣಂ' ಎಂಬ ಭಿನ್ನಪದಾತ್ಮಕ ವಾಕ್ಯದಿಂದಾಗಲೀ, ಶಶವಿಷಾಣಂ ಎಂಬ ಸಮಸ್ತ ಪದದಿಂದಾಗಲೀ ಶಶ ಮತ್ತು ಶೃಂಗಗಳಿಗೆ ಸಾಕ್ಷಾತ್ ಸಂಬಂಧವಿಲ್ಲದಿರುವುದರಿಂದ, ಅರ್ಥದ್ವಾರಾ ಸಂಬಂಧವೂ ಇಲ್ಲದಿರುವುದರಿಂದ, ಶಶ ಮತ್ತು ವಿಷಾಣ ಪದಗಳ ಅರ್ಥವಾದ ಶಶ ಮತ್ತು ವಿಷಾಣಗಳಿಗೆ ಪರಂಪರಾಸಂಬಂಧವೂ ಇಲ್ಲದಿರುವುದರಿಂದ ಶಬ್ದವು ಹೇಗೆ ಅದನ್ನು ಬೋಧಿಸುತ್ತದೆ ಎಂದು ಅಭಿಪ್ರಾಯ.

ಯದಿ ದೋಷವಶಾಚ್ಛಬ್ದೋ ಬೋಧಯೇತ್ ತದಸಂಗಿ ಚ ।
ಅಸನ್ನಿಕೃಷ್ಟಮೇವಾಸ್ತು ಶುಕ್ತೌ ರಜತಮಪ್ಯಸತ್ ।
ದೋಷೋಪೋದ್ಬಲಿತಂ ಚಕ್ಷುರ್ಗೃಹ್ಣೀಯಾದವಿಶೇಷತಃ ॥ ೮೦೮ ॥

**ಅರ್ಥ-**ಯದಿ= ಒಂದು ಪಕ್ಷ, ದೋಷವಶಾತ್= ದೋಷ ಸಾಮರ್ಥ್ಯದಿಂದ, ಶಬ್ದಃ= ಶಬ್ದವು, ತದಸಂಗಿ ಚ= ಶಬ್ದಸಂಬಂಧ ರಹಿತವಾದುದನ್ನೂ, ಬೋಧಯೇತ್= ಬೋಧಿಸುವುದಾದರೆ, ಶುಕ್ತೌ= ಶುಕ್ತಿಯಲ್ಲಿ, ಅಸತ್ ರಜತಂ= ಇಲ್ಲದಿರುವ ರಜತವು, ಅಸನ್ನಿಕೃಷ್ಟಮೇವ= ಸನ್ನಿಕರ್ಷರಹಿತವಾಗಿಯೇ, ಅಸ್ತು= ಆಗಲಿ, ಅಸತ್ ಅಪಿ=

ಅಸತ್ತಾಗಿಯೂ ಕೂಡ, ಅಸ್ತು= ಆಗಲಿ, ದೋಷೋಪೋದ್ಬಲಿತಂ= ದೋಷ ಸಹಕೃತವಾದ, ಚಕ್ಷುಃ= ಚಕ್ಷುಸ್ಸು, ಅವಿಶೇಷತಃ= ಶಬ್ದ ಸ್ಥಳದಲ್ಲಿ ಇದ್ದಂತೆ, ಗೃಹ್ಣೀಯಾತ್= ರಜತವನ್ನು ವಿಷಯೀಕರಿಸುತ್ತದೆ.

**ಅನುವಾದ- ದೋಷದ ಬಲದಿಂದ ಶಬ್ದವು ತನ್ನ ಸಂಬಂಧರಹಿತವಾದ ಅರ್ಥವನ್ನು ಬೋಧಿಸುವುದಾದರೆ ಶುಕ್ತಿಯಲ್ಲಿ ಅಸತ್ತಾದ ರಜತವೂ ಕೂಡ ಸಂಬಂಧ ರಹಿತವಾದುದೇ ಆಗಲಿ. ದೋಷ ಸಹಕೃತವಾದ ಚಕ್ಷುಸ್ಸು ಯಾವ ವಿಶೇಷವೂ ಇಲ್ಲದಿರುವುದರಿಂದ ರಜತವನ್ನು ಗ್ರಹಿಸುತ್ತದೆ.**

**ಭಾವವಿಲಾಸಿನೀ –** ಅಥ ಸಂಬಂಧಾಭಾವೇಽಪಿ ಅಯೋಗ್ಯಾರ್ಥಕಪದಯೋಸ್ಸಹೋಚ್ಚಾರಣಾಖ್ಯದೋಷವಶಾದಸಂಬದ್ಧಸ್ಯಾಪಿ ಶಶವಿಷಾಣಸ್ಯ ಭ್ರಾಂತಿಶ್ಚೇತ್ ಅಸತಶ್ಶುಕ್ತಿರಜತಸ್ಯಾಪ್ಯಸಂಬದ್ಧಸ್ಯೈವ ದೋಷವಶಾದಪರೋಕ್ಷ- ಭ್ರಮೋಽಪ್ಯಸ್ತ್ವಿತ್ಯಾಹ – **ಯದೀತಿ ॥ ತತ್** ಶಶಶೃಂಗಮ್। ಅಸದಪ್ಯಸ್ತ್ವಿತಿ ಸಂಬಂಧಃ ॥ ೮೦೮ ॥

**ವಿವರಣೆ-** ಸಂಬಂಧವಿಲ್ಲದಿದ್ದರೂ ಶಬ್ದವು ಯೋಗ್ಯತಾಶೂನ್ಯವಾದ ಅರ್ಥವನ್ನು ಪ್ರತಿಪಾದಿಸುವ ಪದವನ್ನು ಜೊತೆಯಲ್ಲಿ ಉಚ್ಚಾರಣೆ ಮಾಡಿದ ದೋಷದ ವಶದಿಂದ ಸಂಬಂಧ ರಹಿತವಾದ ಶಶವಿಷಾಣದ ಭ್ರಾಂತಿಯನ್ನು ಉಂಟುಮಾಡುತ್ತದೆ ಎಂದಾದರೆ, ಅಸಂಬದ್ಧವಾದ ಶುಕ್ತಿರಜತಕ್ಕೂ ಸಹ ದೋಷವಶದಿಂದಲೇ ಚಕ್ಷುಸ್ಸು ಅಪರೋಕ್ಷ ಭ್ರಾಂತಿಯನ್ನು ಉಂಟುಮಾಡಲಿ ಎಂದು ಅಭಿಪ್ರಾಯ.

**ಅಪರೋಕ್ಷಪ್ರತೀತ್ಯಾ ತನ್ನಾಸತ್ತ್ವಂ ತಸ್ಯ ಗಚ್ಛತಿ ।**
**ಕ್ವಚಿದ್ ಭವತಿ ಶಾಸ್ತ್ರಾರ್ಥಃ ಕ್ವಚಿನ್ನೇತಿ ಕಥಂ ವದ ॥ ೮೦೯ ॥**

**ಅರ್ಥ**-ತತ್= ಆದ್ದರಿಂದ, ಅಪರೋಕ್ಷಪ್ರತೀತ್ಯಾ= ಅಪರೋಕ್ಷ ಪ್ರತೀತಿಯ ಕಾರಣದಿಂದ, ತಸ್ಯ= ಶುಕ್ತಿರಜತಾದಿಗಳಿಗೆ, ಅಸತ್ತ್ವಂ= ಅಸತ್ತ್ವವು, ನ ಗಚ್ಛತಿ= ಹೊರಟು ಹೋಗುವುದಿಲ್ಲ, ಕ್ವಚಿತ್= ಒಮ್ಮೆ, ಶಾಸ್ತ್ರಾರ್ಥಃ ಭವತಿ= ಶಾಸ್ತ್ರಾರ್ಥವಾಗುತ್ತದೆ, ಕ್ವಚಿನ್ನ= ಒಮ್ಮೆ ಆಗುವುದಿಲ್ಲ, ಇತಿ= ಎಂದು, ಕಥಂ= ಹೇಗೆ ಆಗುತ್ತದೆ ಎಂದು, ವದ= ಹೇಳು.

**ಅನುವಾದ- ಅಸತ್ತಿಗೂ ಕೂಡ ದೋಷವಶದಿಂದ ಪರೋಕ್ಷ ಪ್ರತೀತಿ ಉಂಟಾಗುವಂತೆ ಅಪರೋಕ್ಷ ಪ್ರತೀತಿಯೂ ಉಂಟಾಗಬಹುದಾದ್ದರಿಂದ ಅರ್ಥಾಪತ್ತಿಯಲ್ಲಿ ಪ್ರತೀತಿ ಶಬ್ದದಿಂದ ಅಪರೋಕ್ಷ ಪ್ರತೀತಿಯನ್ನು ವಿವಕ್ಷೆ ಮಾಡಿದರೂ ರಜತಕ್ಕೆ ಅಸದ್ವೈಲಕ್ಷಣ್ಯವು ಸಿದ್ಧವಾಗುವುದಿಲ್ಲ. ಅಸತ್ತಾದುದು ಪರೋಕ್ಷ ಪ್ರತೀತಿಗೆ ವಿಷಯವಾಗುತ್ತದೆ, ಅಪರೋಕ್ಷ ಪ್ರತೀತಿಗೆ ವಿಷಯವಾಗುವುದಿಲ್ಲ ಎಂಬ ವೈಲಕ್ಷಣ್ಯವು ಹೇಗೆ ಉಂಟಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ – ತತ್ ತಸ್ಮಾತ್ । ಅಸತೋಽಪಿ ದೋಷವಶಾತ್ ಪರೋಕ್ಷಪ್ರತೀತಿವತ್ ಅಪರೋಕ್ಷಪ್ರತೀತೇರಪಿ ಸಂಭವಾತ್ । ತಸ್ಯ ಶುಕ್ತಿರೂಪ್ಯಸ್ಯ ॥ ೮೦೯ ॥**

ಭೂತಲೇ ಘಟನಾಸ್ತಿತ್ವಂ ಚಕ್ಷುಷಾ ದೃಶ್ಯತೇ ಯದಾ ।
ಪ್ರತಿಯೋಗೀ ಕಥಂ ತತ್ರಾಸನ್ನಿಕೃಷ್ಟೋಽಪಿ ದೃಶ್ಯತೇ ॥ ೮೧೦ ॥

ಸನ್ನಿಕೃಷ್ಟಸತಾ ಸಾಕಂ ತತ್ಸತ್ತ್ವೇ ನಾಸ್ತಿತೈವ ನ ।
ಅನನ್ಯಗತ್ಯಾ ತನ್ಮಾತ್ರೇ ನಿಯಮಸ್ತ್ಯಜ್ಯತೇ ಯದಿ ॥ ೮೧೧ ॥

ನ ಶುಕ್ತಿರೂಪ್ಯಸತ್ತ್ವೇ ಸ್ಯಾದ್ ಭ್ರಮತಾ ಲೋಕಸಂಮತಾ ।
ಅನನ್ಯಗತ್ಯಾ ತದ್ ಭ್ರಾಂತೌ ಸನ್ನಿಕರ್ಷೋಽಪಿ ನೇಷ್ಯತಾಂ ॥ ೮೧೨ ॥

**ಅರ್ಥ**-ಯದಾ= ಯಾವಾಗ, ಚಕ್ಷುಷಾ= ಚಕ್ಷುಸ್ಸಿನಿಂದ, ಭೂತಲೇ= ಭೂತಲದಲ್ಲಿ, ಘಟನಾಸ್ತಿತ್ವಂ= ಘಟಾಭಾವವು, ದೃಶ್ಯತೇ= ವಿಷಯೀಕರಿಸಲ್ಪಡುತ್ತದೆಯೋ, ತದಾ= ಆಗ, ತತ್ರ= ಆ ಭೂತಲದಲ್ಲಿ, ಅಸನ್ನಿಕೃಷ್ಟೋಽಪಿ= ಸನ್ನಿಕೃಷ್ಟವಲ್ಲದ, ಪ್ರತಿಯೋಗೀ= ಪ್ರತಿಯೋಗಿಯು, ಕಥಂ ದೃಶ್ಯತೇ= ಹೇಗೆ ತೋರುತ್ತದೆ? ಸನ್ನಿಕೃಷ್ಟಸತಾ ಸಾಕಂ= ಸನ್ನಿಕೃಷ್ಟವಾದ ಸತ್ಪದಾರ್ಥವಾದ ಭೂತಲದ ಜೊತೆಯಲ್ಲಿ, ತತ್ ಸತ್ತ್ವೇ= ಪ್ರತಿಯೋಗಿಯು ಇದ್ದರೆ, ನಾಸ್ತಿತೈವ ನ= ಅಭಾವವೇ ಇರುವುದಿಲ್ಲ, ಯದಿ= ಒಂದು ಪಕ್ಷ, ಅನನ್ಯಗತ್ಯಾ= ಗತ್ಯಂತರವಿಲ್ಲದಿರುವುದರಿಂದ, ತನ್ಮಾತ್ರೇ= ಅಭಾವಪ್ರತಿಯೋಗಿಮಾತ್ರದಲ್ಲಿ, ನಿಯಮಃ= ಸನ್ನಿಕರ್ಷ ನಿಯಮವು, ತ್ಯಜ್ಯತೇ= ತ್ಯಜಿಸಲ್ಪಡುವುದಾದರೆ, ಶುಕ್ತಿರೂಪ್ಯ ಸತ್ತ್ವೇ= ಶುಕ್ತಿರೂಪ್ಯವು ಸತ್ಯವಾದರೆ, ಲೋಕಸಂಮತಾ= ಲೋಕಸಮ್ಮತವಾದ, ಭ್ರಮತಾ= ಭ್ರಾಂತಿತ್ವವೇ, ನ ಸ್ಯಾತ್= ಕೂಡುವುದಿಲ್ಲವಾದ್ದರಿಂದ, ಅನನ್ಯಗತ್ಯಾ= ಸನ್ನಿಕರ್ಷ ರೂಪವಾದ ಗತಿ ಇಲ್ಲದಿರುವುದರಿಂದ, ತತ್‌ತಸ್ಮಾತ್= ಆದ್ದರಿಂದ, ಭ್ರಾಂತೌ= ಭ್ರಾಂತಿಯಲ್ಲಿ, ಸನ್ನಿಕರ್ಷೋಽಪಿ= ಸನ್ನಿಕರ್ಷವೂ ಕೂಡ, ನೇಷ್ಯತಾಂ= ಸ್ವೀಕರಿಸಲ್ಪಡದಿರಲಿ.

**ಅನುವಾದ-** ಚಕ್ಷುಸ್ಸಿನಿಂದ ಯಾವಾಗ ಭೂತಲದಲ್ಲಿ ಘಟಾಭಾವವು ಗೃಹೀತವಾಗುತ್ತದೆಯೋ, ಆಗ ಅಲ್ಲಿ ಅಸನ್ನಿಕೃಷ್ಟವಾದ ಘಟರೂಪವಾದ ಪ್ರತಿಯೋಗಿಯು ಹೇಗೆ ಗೃಹೀತವಾಗುತ್ತದೆ? ಸನ್ನಿಕೃಷ್ಟವಾದ ಭೂತಲದ ಜೊತೆಯಲ್ಲಿ ಘಟಕ್ಕೂ ಸತ್ತ್ವವಿದ್ದರೆ ಆಗ ಘಟಾಭಾವವೇ ಇರುವುದಿಲ್ಲ. ಗತ್ಯಂತರವಿಲ್ಲದಿರುವುದರಿಂದ ಅಭಾವ ಪ್ರತಿಯೋಗಿಯ ವಿಷಯದಲ್ಲಿ ಸನ್ನಿಕರ್ಷಸತ್ತ್ವ ನಿಯಮವನ್ನು ಬಿಡುವುದಾದರೆ ಶುಕ್ತಿರೂಪ್ಯವು ಸತ್ಯವಾದರೆ ಲೋಕ ಸಮ್ಮತವಾದ ಭ್ರಮತ್ವವೇ ಕೂಡುವುದಿಲ್ಲವಾದ್ದರಿಂದ ಅಲ್ಲಿ ಭ್ರಮತ್ವವನ್ನು ಕೂಡಿಸಲು ಸನ್ನಿಕರ್ಷರೂಪವಾದ ಗತಿಯು ಇಲ್ಲದಿರುವುದರಿಂದ ಭ್ರಾಂತಿ ಸ್ಥಳದಲ್ಲಿ ಸನ್ನಿಕರ್ಷವನ್ನು ಅಂಗೀಕರಿಸುವುದು ಬೇಡ.

**ಭಾವವಿಲಾಸಿನೀ**– ಯುಕ್ತ್ಯಂತರೇಣಾಪ್ಯಸಂಬದ್ಧಾರ್ಥಾಪರೋಕ್ಷಪ್ರತೀತಿಮನುಭಾವಯತಿ ॥ **ಭೂತಲ** ಇತಿ ॥ ಪ್ರತಿಯೋಗೀ ಘಟಃ ॥ ತತ್ಸತ್ತ್ವೇ ಪ್ರತಿಯೋಗಿಸತ್ತ್ವೇ । ಅನನ್ಯಗತ್ಯಾಪ್ರತಿಯೋಗಿಸತ್ತ್ವ ಸಾಪೇಕ್ಷ ಚಕ್ಷುಸ್ಸನ್ನಿಕರ್ಷಾಪೇಕ್ಷಾಯಾಮಭಾವಸ್ಯೈವಾಭಾವಪ್ರಸಂಗಾತ್ ಸನ್ನಿಕರ್ಷಾಖ್ಯ ಗತ್ಯಯೋಗೇನೇತ್ಯರ್ಥಃ। ತನ್ಮಾತ್ರೇ ಅಭಾವಪ್ರತಿಯೋಗಿಮಾತ್ರೇ । ನಿಯಮಃ ಸನ್ನಿಕರ್ಷನಿಯಮಃ । ಪ್ರಕೃತೇಽಪಿ ಸಮಮಿತ್ಯಾಹ –ನೇತಿ ॥ ತತ್ ತಸ್ಮಾತ್ । ಸನ್ನಿಕರ್ಷಾಪೇಕ್ಷಾಯಾಂ ಶುಕ್ತಿರೂಪ್ಯಸ್ಯಾಪಿ ಸತ್ತ್ವ ಪ್ರಸಂಗಾತ್॥೮೧೦-೮೧೨॥

**ವಿವರಣೆ**- ಭೂತಲದಲ್ಲಿ ಘಟಾಭಾವಜ್ಞಾನ ಬಂದಾಗ ಇದು ಚಾಕ್ಷುಷ ಜ್ಞಾನ. ಆ ಅಭಾವಾಂಶದಲ್ಲಿ ಪ್ರತಿಯೋಗಿಯಾಗಿ ತೋರುವ ಘಟವೂ ಕೂಡ ಚಾಕ್ಷುಷವೆಂದೇ ಹೇಳಬೇಕು. ಆದರೆ ಚಕ್ಷುರ್ಘಟಸನ್ನಿಕರ್ಷವಿಲ್ಲ. ಸನ್ನಿಕರ್ಷವಿಲ್ಲದಿದ್ದಾಗ ಘಟವು ಹೇಗೆ ತೋರುತ್ತದೆ ಎಂಬ ಪ್ರಶ್ನೆಯು ಬರುತ್ತದೆ. ಸನ್ನಿಕರ್ಷವು ಬೇರೆ ಎಲ್ಲ ಕಡೆಯಲ್ಲಿಯೂ ಬೇಕು. ಅಭಾವಾಂಶದಲ್ಲಿ ಪ್ರತಿಯೋಗಿಯಲ್ಲಿ ಮಾತ್ರ ಸನ್ನಿಕರ್ಷಬೇಕೆಂಬ ನಿಯಮ ಬಿಡುತ್ತೇವೆ ಎಂದು ಹೇಳುವುದಾದರೆ, ಶುಕ್ತಿರೂಪ್ಯಸ್ಥಳದಲ್ಲಿಯೂ ಸಹ ಸನ್ನಿಕರ್ಷವನ್ನು ಪರಿತ್ಯಜಿಸಿ ದೋಷವಶದಿಂದಲೇ ಅಪರೋಕ್ಷರೂಪವಾದ ಭ್ರಾಂತಿ ಉಂಟಾಗುತ್ತದೆ ಎಂದು ಅಂಗೀಕರಿಸಿ ಎಂದು ಅಭಿಪ್ರಾಯ.

**ಅತಿಪ್ರಸಂಗದೋಷಂ ತು ದೋಷ ಏವಾಪನೇಷ್ಯತಿ ।**
**ಪ್ರತಿಮಲ್ಲಂ ಯಥಾ ಮಲ್ಲಸ್ತದಸತ್ತ್ವೇಽಪಿ ಕಾ ಕ್ಷತಿಃ ॥ ೮೧೩ ॥**

**ಅರ್ಥ**-ಅತಿಪ್ರಸಂಗದೋಷಂ ತು= ಅತಿಪ್ರಸಂಗ ದೋಷವನ್ನು, ದೋಷ ಏವ= ದೋಷವೇ, ಮಲ್ಲಃ= ಮಲ್ಲನು, ಯಥಾ= ಹೇಗೆ, ಪ್ರತಿಮಲ್ಲಂ= ಪ್ರತಿಮಲ್ಲನನ್ನು, ಅಪನೇಷ್ಯತಿ= ಪರಿಹರಿಸುತ್ತಾನೆಯೋ ಅದರಂತೆ, ಅಪನೇಷ್ಯತಿ= ಪರಿಹಾರ ಮಾಡುತ್ತದೆ, ತತ್= ಆದ್ದರಿಂದ, ಅಸತ್ತ್ವೇಪಿ= ಅಪರೋಕ್ಷ ಸ್ಥಳದಲ್ಲಿ ಅರ್ಥಕ್ಕೆ ಅಸತ್ತ್ವವಿದ್ದರೂ, ಕಾ ಕ್ಷತಿಃ= ಭ್ರಾಂತಿ ಉಂಟಾಗುವುದಕ್ಕೆ ಏನು ತೊಂದರೆಯಿದೆ.

**ಅನುವಾದ**- ಪ್ರತಿಮಲ್ಲನನ್ನು ಮಲ್ಲನು ಪರಿಹರಿಸುವಂತೆ ಅತಿಪ್ರಸಂಗ ದೋಷವನ್ನು ದೋಷವೇ ಪರಿಹರಿಸುತ್ತದೆ. ಹೀಗಿರುವಾಗ ಭ್ರಾಂತಿ ಸ್ಥಳದಲ್ಲಿ ಅರ್ಥಕ್ಕೆ ಅಸತ್ತ್ವವಿದ್ದರೂ ಏನು ತೊಂದರೆ? ಅಸಂಬದ್ಧ ಜ್ಞಾನವು ಉಂಟಾಗುವುದಾದರೆ ಶುಕ್ತಿರಜತ ಸ್ಥಳದಲ್ಲಿ ರಜ್ಜು ಸರ್ಪಭ್ರಮವು ಉಂಟಾಗಲಿ ಎಂಬ ಆಪತ್ತಿ ಇದೆ. ಶುಕ್ತಿರಜತವೂ ಅಸಂಬದ್ಧವಾದುದು, ರಜ್ಜುಸರ್ಪವೂ ಅಸಂಬದ್ಧವಾದುದು. ಎರಡರಲ್ಲಿ ಒಂದನ್ನು ಸ್ವೀಕರಿಸಿ, ಇನ್ನೊಂದನ್ನು ನಿರಾಕರಿಸಲು ಯಾವ ಕಾರಣವೂ ಇಲ್ಲ ಎಂಬ ಆಕ್ಷೇಪವು ಬರುತ್ತದೆ. ಅದಕ್ಕೆ ಉತ್ತರ ಎಂದರೆ ರಜತ ಸಾದೃಶ್ಯರೂಪವಾದ ದೋಷ ಇದಕ್ಕೆ ಕಾರಣ ಎಂದು. ರಜತಸಾದೃಶ್ಯವು ಶುಕ್ತಿರಜತದಲ್ಲಿದೆ, ರಜ್ಜುಸರ್ಪದಲ್ಲಿಲ್ಲ. ಆದ್ದರಿಂದ ಶುಕ್ತಿರಜತದ ಭ್ರಾಂತಿಯು ಬರುತ್ತದೆ, ರಜ್ಜುಸರ್ಪದ ಭ್ರಾಂತಿಯು ಬರುವುದಿಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ** – ಅತಿಪ್ರಸಂಗದೋಷಂ ಅಸಂಬದ್ಧತ್ವಾವಿಶೇಷಾತ್ ಶುಕ್ತಿರಜತಭ್ರಮುವತ್ ರಜ್ಜುಸರ್ಪಭ್ರಮೋಽಪ್ಯಸ್ತ್ವಿತಿ ದೋಷಮ್। ದೋಷಃ ಅಧಿಷ್ಠಾನಸ್ಯ ರಜತಸಾದೃಶ್ಯಾಖ್ಯದೋಷಃ। ತತ್ ತಸ್ಮಾತ್। ಉಕ್ತರೀತ್ಯಾ ಅಸತೋಽಪ್ಯಪರೋಕ್ಷಪ್ರತೀತಿಸಂಭವಾತ್ ॥ ೮೧೩ ॥

ಅಸದ್ ರಜತಮೇವೇತಿ ಹ್ಯನುಭೂತಿರ್ಬಲೀಯಸೀ ।
ನ ಚೇತ್ ತವ ಮತೇ ಸಾಕ್ಷೀ ತತ್ ಸಾಕ್ಷಾತ್ ಕುರುತೇ ಕಥಮ್ ॥೮೧೪॥

ಅಸನ್ನಿಕೃಷ್ಟತಜ್‌ಜ್ಞಾನೇ ಚಕ್ಷುಷೋಽಪ್ಯಸ್ತು ಸಾ ಗತಿಃ ।
ಸನ್ನಿಕರ್ಷೇ ತ್ವರ್ಥಸತ್ತ್ವಾತ್ ತಜ್‌ಜ್ಞಾನಂ ನ ಭ್ರಮೋ ಭವೇತ್ ॥ ೮೧೫ ॥

ಸನ್ನಿಕರ್ಷೇಣ ಚಕ್ಷುಷ್ಚ ಕುತಸ್ತನ್ನ ಪ್ರಕಾಶಯೇತ್ ।
ತಮೋ ಹಿ ಚಕ್ಷುಷಾ ದೃಶ್ಯಂ ಕೇವಲಾವಿದ್ಯಕಂ ಚ ತೇ ॥ ೮೧೬ ॥

**ಅರ್ಥ**-ರಜತಂ ಅಸದೇವೇತಿ= ರಜತವು ಅಸತ್ಯವಾದುದೇ ಎಂಬ, ಅನುಭೂತಿಃ= ಅನುಭವವು, ಬಲೀಯಸೀ= ಪ್ರಬಲವಾದುದು, ನ ಚೇತ್= ಇಲ್ಲದಿದ್ದರೆ, ತವ ಮತೇ= ನಿನ್ನ ಮತದಲ್ಲಿ, ಸಾಕ್ಷೀ= ಸಾಕ್ಷಿಯು, ತತ್= ತನ್ನಿಂದ ಅಸಂಬದ್ಧವಾದ ಆ ಶುಕ್ತಿರೂಪ್ಯವನ್ನು, ಕಥಂ= ಹೇಗೆ, ಸಾಕ್ಷಾತ್ಕುರುತೇ= ಸಾಕ್ಷಾತ್ಕರಿಸುತ್ತದೆ? ಅಸನ್ನಿಕೃಷ್ಟತಜ್‌ಜ್ಞಾನೇ= ಸಾಕ್ಷಿಯಿಂದ ಅಸನ್ನಿಕೃಷ್ಟವಾದ ರಜತದ ಜ್ಞಾನವು ಸಾಕ್ಷಿಯಿಂದ ಬರುವುದಾದರೆ, ಸಾ ಗತಿಃ= ಅದೇ ಮಾರ್ಗವು, ಚಕ್ಷುಷೋಽಪಿ= ಚಕ್ಷುಸ್ಸಿಗೂ, ಅಸ್ತು= ಇರಲಿ. ಸನ್ನಿಕರ್ಷೇತು= ಸನ್ನಿಕರ್ಷವೇ ಇದ್ದರೆ, ಅರ್ಥಸತ್ತ್ವಾತ್= ಅರ್ಥಸತ್ತ್ವವು ಸಿದ್ಧವಾಗುವುದರಿಂದ, ತಜ್‌ಜ್ಞಾನಂ= ಆ ಜ್ಞಾನವು, ಭ್ರಮೋ ನ ಭವೇತ್= ಭ್ರಮವೇ ಆಗುವುದಿಲ್ಲ, ಚಕ್ಷುಶ್ಚ= ಚಕ್ಷುಷಿನಿಂದಲೂ ಸಹ, ತತ್= ಆ ಸನ್ನಿಕೃಷ್ಟವಾದ ಆ ವಸ್ತುವನ್ನು, ಸನ್ನಿಕರ್ಷೇಣ= ಸನ್ನಿಕರ್ಷದಿಂದ, ಕುತಃ= ಏಕೆ, ನ ಪ್ರಕಾಶಯೇತ್= ಪ್ರಕಾಶಿಸಲಾರದು, ತೇ= ನಿನ್ನ ಮತದಲ್ಲಿ, ಕೇವಲಾಪಿದ್ಯಕಂ= ಅಪಿದ್ಯಾಮಾತ್ರೋಪಾದಾನಕವಾದ, ತಮಃ= ಅಂಧಕಾರವು, ಚಕ್ಷುಷಾ ದೃಶ್ಯಂ ಹಿ= ಚಕ್ಷುಸ್ಸಿಗೆ ಗೋಚರವಾಗುವುದಷ್ಟೇ?

**ಅನುವಾದ**- ಅಸದೇವ ರಜತಂ ಎಂಬ ಅನುಭವವು ಪ್ರಬಲವಾದುದು. ಇಲ್ಲದಿದ್ದರೆ ನಿನ್ನ ಮತದಲ್ಲಿಸಾಕ್ಷಿಯು ಅಸನ್ನಿಕೃಷ್ಟವಾದ ರಜತವನ್ನು ಹೇಗೆ ವಿಷಯೀಕರಿಸುತ್ತದೆ? ಸಾಕ್ಷಿಯು ಅಸನ್ನಿಕೃಷ್ಟವಾದ ರಜತವನ್ನೂ ಗ್ರಹಿಸುವುದಾದರೆ ಚಕ್ಷುಸ್ಸಿಗೂ ಅದೇ ಮಾರ್ಗವನ್ನು ಅನುಸರಿಸು. ಸನ್ನಿಕರ್ಷವು ಇದ್ದರೆ ಮಾತ್ರ ಅರ್ಥಸತ್ತ್ವವೇ ಸಿದ್ಧವಾಗುವುದರಿಂದ ಆ ಜ್ಞಾನವು (ಶುಕ್ತಿರಜತ ಜ್ಞಾನವು) ಭ್ರಾಂತಿಯೇ ಆಗಲಾರದು. ಚಕ್ಷುಸ್ಸಾದರೂ ಸನ್ನಿಕರ್ಷ ನಿಮಿತ್ತದಿಂದ ಏಕೆ ಪ್ರಕಾಶಿಸುವುದಿಲ್ಲ? ನಿನ್ನ ಮತದಲ್ಲಿ ಅವಿದ್ಯಾಮಾತ್ರಕಾರ್ಯವಾದ ಅಂಧಕಾರವೂ ಕೂಡ ಚಕ್ಷುಸ್ಸಿಗೆ ಗೋಚರವಾಗುವುದಷ್ಟೇ?

**ಭಾವವಿಲಾಸಿನೀ** – ನೇಯಂ ಸ್ವಕಪೋಲಕಲ್ಪನೇತ್ಯಾಹ – **ಅಸದಿತಿ**॥ ಹಿಶಬ್ದೇನ ಏತಾದೃಶಾನುಭವಸ್ಯ ಸರ್ವಜನಪ್ರಸಿದ್ಧತಾಂ ಸೂಚಯತಿ । ತಸ್ಮಾದನುಭವಕಲಹೋಽಪಿ ನಾಸ್ತೀತಿ ಭಾವಃ । ಪ್ರತಿಬಂಧ್ಯಂತರಂ ಚಾಹ – **ನ ಚೇದಿತಿ** ॥ ತತ್ ಸ್ವಾಸಂಬದ್ಧಶುಕ್ತಿರೂಪ್ಯಮ್ । ಸಾಕ್ಷಿಣೋಽಪಿ ಪರಸಂಬಂಧಿಸುಖಾದ್ಯಗ್ರಹಣೇನ ಸಂಬಂಧಸಾಪೇಕ್ಷತ್ವನಿಯಮಾದಿತಿ ಭಾವಃ। ಸನ್ನಿಕರ್ಷೇ ತು ಸಾಕ್ಷಿಣಶ್ಶುಕ್ತಿರಜತಸ್ಯ ಚ ಸನ್ನಿಕಾರ್ಷಾಂಗೀಕಾರೇ। ತತ್ ಜ್ಞಾನಂ ಶುಕ್ತಿರಜತಜ್ಞಾನಮ್ ತತ್ ಶುಕ್ತಿರಜತಂ। ನನು ಕೇವಲಾವಿದ್ಯಕತ್ವಾಚ್ಛುಕ್ತಿರಜತಸ್ಯ ನ ಚಾಕ್ಷುಷತ್ವಮಿತ್ಯತ ಆಹ – **ತಮ ಇತಿ** ॥ ೮೧೪-೮೧೬ ॥

**ವಿವರಣೆ**- ಈ ಪ್ರಮೇಯವು ಕೇವಲ ನಮ್ಮಿಂದ ಕಲ್ಪಿತವಾದುದಲ್ಲ. ಸರ್ವಜನಾನುಭವ ಸಿದ್ಧವಾಗಿದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಅದ್ವೈತ ಮತದಲ್ಲಿ ಶುಕ್ತಿರಜತ ಜ್ಞಾನವು ಸಾಕ್ಷಿರೂಪವಾದುದು. ಶುಕ್ತಿರಜತಕ್ಕೂ ಮತ್ತು ಸಾಕ್ಷಿಗೂ ಸಂಬಂಧವಿಲ್ಲದಿದ್ದರೂ ಹೇಗೆ ಸಾಕ್ಷಿಯು ಶುಕ್ತಿರಜತವನ್ನು ಗ್ರಹಿಸುತ್ತದೆಯೋ ಅದರಂತೆ ಚಕ್ಷುಸ್ಸಿಗೂ ಮತ್ತು ಶಶವಿಷಾಣಕ್ಕೂ ಸಂಬಂಧವಿಲ್ಲದಿದ್ದರೂ ಚಕ್ಷುಸ್ಸು ಶಶವಿಷಾಣವನ್ನು ಗ್ರಹಿಸಲಿ. ಸನ್ನಿಕರ್ಷವನ್ನು ಒಪ್ಪಿದರೆ ಮಾತ್ರ ಆ ಜ್ಞಾನವು (ಶುಕ್ತಿರಜತ ಜ್ಞಾನವು) ಭ್ರಾಂತಿಯೇ ಆಗಲಾರದು ಮತ್ತು ಚಕ್ಷುಸ್ಸೂ ಕೂಡ ಸನ್ನಿಕೃಷ್ಟವಾದ ರೂಪ್ಯವನ್ನು ಏಕೆ ಪ್ರಕಾಶಿಸುವುದಿಲ್ಲ (ಸಾಕ್ಷಿಯೇ ಅದನ್ನು ಪ್ರಕಾಶಿಸುತ್ತದೆ ಎಂದು ಏಕೆ ಹೇಳಬೇಕು)? ಸಾಕ್ಷಿಗಾದರೂ ಕೂಡ ಪರಸಂಬಂಧಿಯಾದ ವಸ್ತುವಿನ ಗ್ರಹಣಸಾಮರ್ಥ್ಯವಿಲ್ಲದಿರುವುದರಿಂದ ಅವಶ್ಯವಾಗಿ ಅಲ್ಲಿ ಸನ್ನಿಕರ್ಷವನ್ನು ಒಪ್ಪಲೇಬೇಕು. ಶುಕ್ತಿರಜತವು ಕೇವಲ ಅವಿದ್ಯಾ ಪರಿಣಾಮವಾಗಿರುವುದರಿಂದ ಚಕ್ಷುಸ್ಸಿಗೆ ಗೋಚರವಾಗುವುದಿಲ್ಲ ಎಂದು ಹೇಳಿದರೆ ಅಂಧಕಾರವೂ ಸಹ ಅವಿದ್ಯಾಮಾತ್ರೋಪಾದಾನಕವಾದುದು. ಅದು ಚಕ್ಷುಸ್ಸಿಗೆ ಗೋಚರವಾಗುತ್ತದೆ. ಹೀಗಿರುವಾಗ ಅವಿದ್ಯಾಮಾತ್ರೋಪಾದಾನಕವಾದ ಶುಕ್ತಿರಜತವು ಚಕ್ಷುಸ್ಸಿಗೆ ಏಕೆ ವಿಷಯವಾಗುವುದಿಲ್ಲ ಎಂದು ಅಭಿಪ್ರಾಯ.

**ಶಶಸ್ಯ ಶೃಂಗಿತಾಽಭಾವಂ ಯೋ ನ ಜಾನಾತಿ ದೂರತಃ ।**
**ಸ ತು ಕರ್ಣದ್ವಯಂ ದೃಷ್ಟ್ವಾ ಶಶಶೃಂಗಂ ಚ ಚಕ್ಷುಷಾ ।**
**ಕಿಂ ನ ಪ್ರತ್ಯೇತ್ಯಸತ್ ತಸ್ಮಾದಾಪರೋಕ್ಷಿಕಮೇವ ಹಿ ॥ ೮೧೭ ॥**

**ಅರ್ಥ**-ಯಃ= ಯಾವನು, ಶಶಸ್ಯ= ಶಶಕ್ಕೆ, ಶೃಂಗಿತಾಽಭಾವಂ= ಶೃಂಗಾಭಾವವನ್ನು, ನ ಜಾನಾತಿ= ತಿಳಿಯುವುದಿಲ್ಲವೋ, ಸಃ= ಅವನಾದರೂ, ದೂರತಃ= ದೂರದಿಂದ, ಕರ್ಣದ್ವಯಂ= ಶಶದ ಎರಡು ಕಿವಿಗಳನ್ನು, ದೃಷ್ಟ್ವಾ= ನೋಡಿ, ಶಶಶೃಂಗಂ= ಶಶಶೃಂಗವನ್ನು, ಚಕ್ಷುಷಾ= ಚಕ್ಷುಸ್ಸಿನಿಂದಲೇ, ಕಿಂ ನ ಪ್ರತ್ಯೇತಿ= ತಿಳಿಯುವುದಿಲ್ಲವೇ? ತಸ್ಮಾತ್= ಆದ್ದರಿಂದ, ಅಸತ್= ಅಸತ್ತಾದುದು, ಆಪರೋಕ್ಷಿಕಮೇವ ಹಿ= ಅಪರೋಕ್ಷ ಪ್ರತೀತಿ ವಿಷಯವೇ ಆಗುತ್ತದೆ.

**ಅನುವಾದ-** ಯಾವನು ಶಶಕ್ಕೆ ಶೃಂಗವಿಲ್ಲವೆಂದು ತಿಳಿದಿಲ್ಲವೋ ಅವನು ದೂರದಿಂದ ಅದರ ಕರ್ಣಗಳನ್ನು ನೋಡಿ, ಚಕ್ಷುಸ್ಸಿನಿಂದಲೇ ಶಶಶೃಂಗ ಜ್ಞಾನವನ್ನು ಹೊಂದುವುದಿಲ್ಲವೇ? ಆದ್ದರಿಂದ ಅಸತ್ ಪದಾರ್ಥಕ್ಕೆ ಅಪರೋಕ್ಷ ಜ್ಞಾನ ವಿಷಯತ್ವವು ಇದ್ದೇ ಇದೆಯಷ್ಟೇ?

**ಭಾವವಿಲಾಸಿನೀ –** ಪ್ರಕಾರಾಂತರೇಣಾಪ್ಯಸತೋಽಪರೋಕ್ಷಪ್ರತೀತಿಮನುಭಾವಯತಿ ॥ **ಶಶಸ್ಯೇತಿ** ॥ ಕರ್ಣದ್ವಯಂ ಶೃಂಗಾಕಾರಂ ಶಶಕರ್ಣದ್ವಯಮ್ । ಶಶಶೃಂಗಂ ಶಶಶೃಂಗಮಿತಿ ಊರ್ಧ್ವೀಭೂತಶಶಕರ್ಣಯೋರಿಮೇ ಶಶಶೃಂಗೇ ಇತಿ ಭ್ರಮಃ ಚಕ್ಷುಷೈವ ಜಾಯತ ಇತ್ಯರ್ಥಃ। ತಸ್ಮಾತ್ ಉಕ್ತವಿಧಯಾ ಚಕ್ಷುಷೈವ ಶಶಶೃಂಗಭ್ರಮಸ್ಯಾನುಭವಸಿದ್ಧತ್ವಾತ್ । ಆಪರೋಕ್ಷಿಕಮ್ ಅಪರೋಕ್ಷಭ್ರಮಯೋಗ್ಯಮ್ ॥ ೮೧೭ ॥

**ವಿವರಣೆ-** ಪ್ರಕಾರಾಂತರದಿಂದ ಅಸತ್ತಿನ ಅಪರೋಕ್ಷ ಪ್ರತೀತಿಯನ್ನು ಇಲ್ಲಿ ಸಾಧಿಸುತ್ತಾರೆ. ಕರ್ಣದ್ವಯವನ್ನು ನೋಡಿ ಶಶಶೃಂಗದ ಭ್ರಾಂತಿಯು ಅಂತಹ ಪುರುಷನಿಗೆ ಬರುತ್ತದೆ. ಅದು ಚಾಕ್ಷುಷವಾದ ಅಪರೋಕ್ಷ ಪ್ರತೀತಿ. ಆದ್ದರಿಂದ ಅಸತ್ತಾದುದು ಅಪರೋಕ್ಷ ಭ್ರಮಯೋಗ್ಯವಾದುದು ಎಂದು ಸಿದ್ಧವಾಗುತ್ತದೆ.

ಪ್ರಾತಿಭಾಸಿಕನಾಮಾಪಿ ಯದಿ ತಸ್ಯ ಪ್ರದೀಯತೇ ।
ಪ್ರಾಗ್ಜಾತಸ್ಯ ಕುಮಾರಸ್ಯ ತನ್ನಾಮಕರಣಾಂತರಂ ॥ ೮೧೮ ॥

**ಅರ್ಥ-**ಯದಿ= ಒಂದು ಪಕ್ಷ, ತಸ್ಯ= ಆ ಶಶವಿಷಾಣಕ್ಕೆ, ಪ್ರಾತಿಭಾಸಿಕನಾಮಾಪಿ= ಪ್ರಾತಿಭಾಸಿಕ ಎಂಬ ಹೆಸರೂ ಸಹ, ಪ್ರದೀಯತೇ= ಕೊಡಲ್ಪಡುವುದಾದರೆ, ತತ್= ಅದು, ಪ್ರಾಗ್ಜಾತಸ್ಯ ಕುಮಾರಸ್ಯ= ಮೊದಲೇ ಹುಟ್ಟಿದ ಕುಮಾರನಿಗೆ, ನಾಮಕರಣಾಂತರಂ= ಇನ್ನೊಂದು ನಾಮಕರಣವಷ್ಟೇ.

**ಅನುವಾದ-** ಪ್ರತೀತವಾದ ಶಶವಿಷಾಣಕ್ಕೆ ಪ್ರಾತಿಭಾಸಿಕ ಎಂದು ಹೆಸರನ್ನು ಕೊಡುವುದಾದರೆ ಅದು ಮೊದಲೇ ಹುಟ್ಟಿದ ಕುಮಾರನಿಗೆ ಇನ್ನೊಂದು ನಾಮಕರಣ ಮಾತ್ರ.

**ಭಾವವಿಲಾಸಿನೀ –** ನನು ಪ್ರತೀತಂ ಶಶಶೃಂಗಮಪಿ ಪ್ರಾತಿಭಾಸಿಕಮಿತಿ ಮಮ ಮತಮ್ । ಅತಃ ಕಥಮ್ ಅಸತೋಽಪರೋಕ್ಷಪ್ರತೀತಿರಿತಿ ಚೇತ್ । ಸತ್ಯಮ್ । ಪ್ರತೀತತ್ವೇ ಪ್ರಾತಿಭಾಸಿಕತ್ವಂ ವದತಾ ಪ್ರತೀತಿಃ ಕಸ್ಯೇತ್ಯುಕ್ತೇ ಅಸತ ಇತ್ಯೇವೋತ್ತರಂ ವಕ್ತವ್ಯಮ್ । ಪ್ರತೀತಿಸಮಸಮಯವರ್ತಿನೋ ವಾ ಪ್ರತೀತ್ಯುತ್ತರಕಾಲೀನಸ್ಯ ವಾ ಪ್ರಾತಿಭಾಸಿಕತ್ವಸ್ಯ ಪ್ರತೀತೇಃ ಪ್ರಾಗಭಾವಾತ್ । ಅತಃ ಕಥಂ ನಾಸತಃ ಪ್ರತೀತಿರಿತ್ಯಾಹ – **ಪ್ರಾತಿಭಾಸಿಕೇತಿ** ॥ ತಸ್ಯ ಶಶಶೃಂಗಸ್ಯ ॥ ೮೧೮ ॥

**ವಿವರಣೆ-** ಪ್ರತೀತವಾದ ಶಶವಿಷಾಣವು ಪ್ರಾತಿಭಾಸಿಕವಾದುದೆಂದೇ ನನ್ನ ಮತ. ಆದ್ದರಿಂದ ಅಸತ್ತಿಗೆ ಹೇಗೆ ಅಪರೋಕ್ಷ ಪ್ರತೀತಿ ಉಂಟಾಗುತ್ತದೆ ಎಂದು ಪ್ರಶ್ನೆಯನ್ನು

ಮಾಡಿದರೆ, ಪ್ರತೀತವಾದುದು ಪ್ರಾತಿಭಾಸಿಕ ಎಂದು ಹೇಳುವ ನೀನು, ಯಾವುದರ ಪ್ರತೀತಿ ಎಂದು ಕೇಳಿದರೆ ಅಸತ್ತಿನ ಪ್ರತೀತಿ ಎಂದೇ ಹೇಳಬೇಕು. ಪ್ರಾತಿಭಾಸಿಕವಾದುದು ಪ್ರತೀತಿ ಸಮಕಾಲವಾಗಿರಬಹುದು ಅಥವಾ ಪ್ರತೀತ್ಯುತ್ತರಕಾಲೀನವಾಗಿರಬಹುದು. ಪ್ರತೀತಿಯ ಪ್ರಾಕ್ ಕಾಲದಲ್ಲಂತೂ ಪ್ರಾತಿಭಾಸಿಕವಾದ ವಸ್ತುವಿಲ್ಲ. ಆದ್ದರಿಂದ ಯಾವುದರ ಪ್ರತೀತಿ ಎಂದು ಕೇಳಿದರೆ ಪ್ರಾಕ್ ಕಾಲೀನವಾದ ಶಶವಿಷಾಣದ ಪ್ರತೀತಿ ಎಂದೇ ಹೇಳಬೇಕು. ಪ್ರಾಕ್‌ಕಾಲೀನ ಶಶವಿಷಾಣವಾದರೂ ಅಸತ್ತೇ ಆಗಿದೆ. ಆದ್ದರಿಂದ ಅಸತ್ತಿನ ಅಪರೋಕ್ಷ ಪ್ರತೀತಿಯನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಅಸತಃ ಶಶಶೃಂಗಸ್ಯ ಪ್ರತ್ಯಕ್ಷೇಣ ಭ್ರಮೇ ಸತಿ ।
ಪ್ರಾತಿಭಾಸಿಕತಾ ಸ್ಯಾಚ್ಚೇತ್ ಪ್ರಾಗ್ಧೀರಸತ ಏವ ಸಾ ॥ ೮೧೯ ॥

**ಅರ್ಥ**-ಅಸತಃ ಶಶಶೃಂಗಸ್ಯ= ಅಸತ್ತಾದ ಶಶಶೃಂಗದ, ಪ್ರತ್ಯಕ್ಷೇಣ ಭ್ರಮೇ ಸತಿ= ಪ್ರತ್ಯಕ್ಷವಾದ ಭ್ರಮವು ಉಂಟಾದರೆ, ಪ್ರಾತಿಭಾಸಿಕತಾ= ಶಶಶೃಂಗಕ್ಕೆ ಪ್ರಾತಿಭಾಸಿಕತ್ವವು, ಸ್ಯಾತ್ ಚೇತ್= ಉಂಟಾದರೆ, ಪ್ರಾಗ್ಧೀಃ= ಪ್ರಾತಿಭಾಸಿಕ ನಾಮಕರಣಕ್ಕಿಂತ ಮೊದಲಿನದಾದ, ಸಾ= ಆ ಪ್ರತೀತಿಯು, ಅಸತ ಏವ= ಅಸದ್‌ವಿಷಯಕವೇ ಆಗಿದೆ.

**ಅನುವಾದ**- ಅಸತ್ತಾದ ಶಶಶೃಂಗದ ಪ್ರತ್ಯಕ್ಷರೂಪವಾದ ಭ್ರಮವು ಉಂಟಾದಾಗ ಶಶಶೃಂಗಕ್ಕೆ ಪ್ರಾತಿಭಾಸಿಕತ್ವವು ಬರುವುದಾದರೆ ಮೊದಲಿನ ಶಶಶೃಂಗದ ಜ್ಞಾನವು ಅಸತ್ ವಿಷಯಕವಾದುದೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ** – ಪ್ರಾಕ್ ಪ್ರಾತಿಭಾಸಿಕನಾಮಕರಣಾತ್ಪೂರ್ವಮ್ । ತಸ್ಮಾದಸತಃ ಪರೋಕ್ಷಯಾಽಪರೋಕ್ಷಯಾ ಚ ಭ್ರಾಂತ್ಯಾ ವಿಷಯೀಕರಣಸಂಭವೇನಾಸಚ್ಚೇನ್ನ ಪ್ರತೀಯೇತೇತಿ ವ್ಯಾಪ್ತ್ಯಸಂಭವಾತ್ ನಾರ್ಥಾಪತ್ತ್ಯಾಪಿ ಸದಸದ್ವೈಲಕ್ಷಣ್ಯಸಿದ್ಧಿರಿತಿ ಭಾವಃ ॥೮೧೯॥

**ವಿವರಣೆ**- ಆದ್ದರಿಂದ ಅಸತ್ತಾದುದು ಪರೋಕ್ಷವಾದ ಭ್ರಾಂತಿಯಲ್ಲಿಯೂ, ಅಪರೋಕ್ಷವಾದ ಭ್ರಾಂತಿಯಲ್ಲಿಯೂ ಪ್ರತೀತವಾಗಬಹುದಾದ್ದರಿಂದ ಅಸತ್ತಿಗೆ ಪ್ರತೀತಿ ಇಲ್ಲ ಎಂಬ ನಿನ್ನ ವ್ಯಾಪ್ತಿಯು ಭಗ್ನವಾಗುವುದರಿಂದ ಅರ್ಥಾಪತ್ತಿಯಿಂದಲೂ ಅಸದ್ವೈಲಕ್ಷಣ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಅರ್ಥಾಭಾವಕೃತಾಸತ್ತ್ವಂ ಕಸ್ತದಾ ತಸ್ಯ ಮೋಚಯೇತ್ ।
ಮಿಥ್ಯಾತ್ವಸಾಧಿಕಾ ದೃಷ್ಟಿಃ ಕಿಂ ತೇಽರ್ಥಾಭಾವಬಾಧಿಕಾ ॥ ೮೨೦ ॥

**ಅರ್ಥ**-ತದಾ= ಅಪರೋಕ್ಷವಾಗಿ ಪ್ರತೀತವಾದಾಗಲೂ, ಅರ್ಥಾಭಾವಕೃತಾಸತ್ತ್ವಂ= ಅರ್ಥಾಭಾವ ಪ್ರಯುಕ್ತವಾದ ಅಸತ್ತ್ವವನ್ನು, ತಸ್ಯ= ಆ ಶಶವಿಷಾಣಕ್ಕೆ, ಕಃ= ಯಾವನು, ಮೋಚಯೇತ್= ಪರಿಹರಿಸುತ್ತಾನೆ? ಮಿಥ್ಯಾತ್ವಸಾಧಿಕಾ= ಮಿಥ್ಯಾತ್ವವನ್ನು ಸಾಧಿಸುವ, ತೇ=

**ಅನುವಾದ-** ಯಾವನು ಶಶಕ್ಕೆ ಶೃಂಗವಿಲ್ಲವೆಂದು ತಿಳಿದಿಲ್ಲವೋ ಅವನು ದೂರದಿಂದ ಅದರ ಕರ್ಣಗಳನ್ನು ನೋಡಿ, ಚಕ್ಷುಸ್ಸಿನಿಂದಲೇ ಶಶಶೃಂಗ ಜ್ಞಾನವನ್ನು ಹೊಂದುವುದಿಲ್ಲವೇ? ಆದ್ದರಿಂದ ಅಸತ್ ಪದಾರ್ಥಕ್ಕೆ ಅಪರೋಕ್ಷ ಜ್ಞಾನ ವಿಷಯತ್ವವು ಇದ್ದೇ ಇದೆಯಷ್ಟೇ ?

**ಭಾವವಿಲಾಸಿನೀ –** ಪ್ರಕಾರಾಂತರೇಣಾಪ್ಯಸತೋಽಪರೋಕ್ಷಪ್ರತೀತಿಮನುಭಾವಯತಿ ॥ **ಶಶಸ್ಯೇತಿ** ॥ ಕರ್ಣದ್ವಯಂ ಶೃಂಗಾಕಾರಂ ಶಶಕರ್ಣದ್ವಯವ್ । ಶಶಶೃಂಗಂ ಶಶಶೃಂಗಮಿತಿ ಊರ್ಧ್ವೀಭೂತಶಶಕರ್ಣಯೋರಿಮೇ ಶಶಶೃಂಗೇ ಇತಿ ಭ್ರಮಃ ಚಕ್ಷುಷೈವ ಜಾಯತ ಇತ್ಯರ್ಥಃ। ತಸ್ಮಾತ್ ಉಕ್ತವಿಧಯಾ ಚಕ್ಷುಷೈವ ಶಶಶೃಂಗಭ್ರಮಸ್ಯಾನುಭವಸಿದ್ಧತ್ವಾತ್ । ಆಪರೋಕ್ಷಿಕಮ್ ಅಪರೋಕ್ಷಭ್ರಮಯೋಗ್ಯಮ್ ॥ ೮೧೭ ॥

**ವಿವರಣೆ-** ಪ್ರಕಾರಾಂತರದಿಂದ ಅಸತ್ತಿನ ಅಪರೋಕ್ಷ ಪ್ರತೀತಿಯನ್ನು ಇಲ್ಲಿ ಸಾಧಿಸುತ್ತಾರೆ. ಕರ್ಣದ್ವಯವನ್ನು ನೋಡಿ ಶಶಶೃಂಗದ ಭ್ರಾಂತಿಯು ಅಂತಹ ಪುರುಷನಿಗೆ ಬರುತ್ತದೆ. ಅದು ಚಾಕ್ಷುಷವಾದ ಅಪರೋಕ್ಷ ಪ್ರತೀತಿ. ಆದ್ದರಿಂದ ಅಸತ್ತಾದುದು ಅಪರೋಕ್ಷ ಭ್ರಮಯೋಗ್ಯವಾದುದು ಎಂದು ಸಿದ್ಧವಾಗುತ್ತದೆ.

ಪ್ರಾತಿಭಾಸಿಕನಾಮಾಪಿ ಯದಿ ತಸ್ಯ ಪ್ರದೀಯತೇ ।
ಪ್ರಾಗ್ಜಾತಸ್ಯ ಕುಮಾರಸ್ಯ ತನ್ನಾಮಕರಣಾಂತರಂ ॥ ೮೧೮ ॥

**ಅರ್ಥ-**ಯದಿ= ಒಂದು ಪಕ್ಷ, ತಸ್ಯ= ಆ ಶಶವಿಷಾಣಕ್ಕೆ, ಪ್ರಾತಿಭಾಸಿಕನಾಮಾಪಿ= ಪ್ರಾತಿಭಾಸಿಕ ಎಂಬ ಹೆಸರೂ ಸಹ, ಪ್ರದೀಯತೇ= ಕೊಡಲ್ಪಡುವುದಾದರೆ, ತತ್= ಅದು, ಪ್ರಾಗ್ಜಾತಸ್ಯ ಕುಮಾರಸ್ಯ= ಮೊದಲೇ ಹುಟ್ಟಿದ ಕುಮಾರನಿಗೆ, ನಾಮಕರಣಾಂತರಂ= ಇನ್ನೊಂದು ನಾಮಕರಣವಷ್ಟೇ.

**ಅನುವಾದ-** ಪ್ರತೀತವಾದ ಶಶವಿಷಾಣಕ್ಕೆ ಪ್ರಾತಿಭಾಸಿಕ ಎಂದು ಹೆಸರನ್ನು ಕೊಡುವುದಾದರೆ ಅದು ಮೊದಲೇ ಹುಟ್ಟಿದ ಕುಮಾರನಿಗೆ ಇನ್ನೊಂದು ನಾಮಕರಣ ಮಾತ್ರ.

**ಭಾವವಿಲಾಸಿನೀ –** ನನು ಪ್ರತೀತಂ ಶಶಶೃಂಗಮಪಿ ಪ್ರಾತಿಭಾಸಿಕಮಿತಿ ಮಮ ಮತಮ್ । ಅತಃ ಕಥಮ್ ಅಸತೋಽಪರೋಕ್ಷಪ್ರತೀತಿರಿತಿ ಚೇತ್ । ಸತ್ಯಮ್ । ಪ್ರತೀತತ್ವೇ ಪ್ರಾತಿಭಾಸಿಕತ್ವಂ ವದತಾ ಪ್ರತೀತಿಃ ಕಸ್ಯೇತ್ಯುಕ್ತೇ ಅಸತ ಇತ್ಯೇವೋತ್ತರಂ ವಕ್ತವ್ಯಮ್ । ಪ್ರತೀತಿಸಮಸಮಯವರ್ತಿನೋ ವಾ ಪ್ರತೀತ್ಯುತ್ತರಕಾಲೀನಸ್ಯ ವಾ ಪ್ರಾತಿಭಾಸಿಕತ್ವಸ್ಯ ಪ್ರತೀತೇಃ ಪ್ರಾಗಭಾವಾತ್ । ಅತಃ ಕಥಂ ನಾಸತಃ ಪ್ರತೀತಿರಿತ್ಯಾಹ – **ಪ್ರಾತಿಭಾಸಿಕೇತಿ** ॥ ತಸ್ಯ ಶಶಶೃಂಗಸ್ಯ ॥ ೮೧೮ ॥

**ವಿವರಣೆ-** ಪ್ರತೀತವಾದ ಶಶವಿಷಾಣವು ಪ್ರಾತಿಭಾಸಿಕವಾದುದೆಂದೇ ನನ್ನ ಮತ. ಆದ್ದರಿಂದ ಅಸತ್ತಿಗೆ ಹೇಗೆ ಅಪರೋಕ್ಷ ಪ್ರತೀತಿ ಉಂಟಾಗುತ್ತದೆ ಎಂದು ಪ್ರಶ್ನೆಯನ್ನು

ಮಾಡಿದರೆ, ಪ್ರತೀತವಾದುದು ಪ್ರಾತಿಭಾಸಿಕ ಎಂದು ಹೇಳುವ ನೀನು, ಯಾವುದರ ಪ್ರತೀತಿ ಎಂದು ಕೇಳಿದರೆ ಅಸತ್ತಿನ ಪ್ರತೀತಿ ಎಂದೇ ಹೇಳಬೇಕು. ಪ್ರಾತಿಭಾಸಿಕವಾದುದು ಪ್ರತೀತಿ ಸಮಕಾಲವಾಗಿರಬಹುದು ಅಥವಾ ಪ್ರತೀತ್ಯುತ್ತರಕಾಲೀನವಾಗಿರಬಹುದು. ಪ್ರತೀತಿಯ ಪ್ರಾಕ್ ಕಾಲದಲ್ಲಂತೂ ಪ್ರಾತಿಭಾಸಿಕವಾದ ವಸ್ತುವಿಲ್ಲ. ಆದ್ದರಿಂದ ಯಾವುದರ ಪ್ರತೀತಿ ಎಂದು ಕೇಳಿದರೆ ಪ್ರಾಕ್ ಕಾಲೀನವಾದ ಶಶವಿಷಾಣದ ಪ್ರತೀತಿ ಎಂದೇ ಹೇಳಬೇಕು. ಪ್ರಾಕ್‌ಕಾಲೀನ ಶಶವಿಷಾಣವಾದರೂ ಅಸತ್ತೇ ಆಗಿದೆ. ಆದ್ದರಿಂದ ಅಸತ್ತಿನ ಅಪರೋಕ್ಷ ಪ್ರತೀತಿಯನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಅಸತಃ ಶಶಶೃಂಗಸ್ಯ ಪ್ರತ್ಯಕ್ಷೇಣ ಭ್ರಮೇ ಸತಿ ।
ಪ್ರಾತಿಭಾಸಿಕತಾ ಸ್ಯಾಚ್ಚೇತ್ ಪ್ರಾಗ್ಧೀರಸತ ಏವ ಸಾ ॥ ೮೧೯ ॥

**ಅರ್ಥ**-ಅಸತಃ ಶಶಶೃಂಗಸ್ಯ= ಅಸತ್ತಾದ ಶಶಶೃಂಗದ, ಪ್ರತ್ಯಕ್ಷೇಣ ಭ್ರಮೇ ಸತಿ= ಪ್ರತ್ಯಕ್ಷವಾದ ಭ್ರಮವು ಉಂಟಾದರೆ, ಪ್ರಾತಿಭಾಸಿಕತಾ= ಶಶಶೃಂಗಕ್ಕೆ ಪ್ರಾತಿಭಾಸಿಕತ್ವವು, ಸ್ಯಾತ್ ಚೇತ್= ಉಂಟಾದರೆ, ಪ್ರಾಗ್ಧೀಃ= ಪ್ರಾತಿಭಾಸಿಕ ನಾಮಕರಣಕ್ಕಿಂತ ಮೊದಲಿನದಾದ, ಸಾ= ಆ ಪ್ರತೀತಿಯು, ಅಸತ ಏವ= ಅಸದ್‌ವಿಷಯಕವೇ ಆಗಿದೆ.

**ಅನುವಾದ**- ಅಸತ್ತಾದ ಶಶಶೃಂಗದ ಪ್ರತ್ಯಕ್ಷರೂಪವಾದ ಭ್ರಮವು ಉಂಟಾದಾಗ ಶಶಶೃಂಗಕ್ಕೆ ಪ್ರಾತಿಭಾಸಿಕತ್ವವು ಬರುವುದಾದರೆ ಮೊದಲಿನ ಶಶಶೃಂಗದ ಜ್ಞಾನವು ಅಸತ್ ವಿಷಯಕವಾದುದೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ** – ಪ್ರಾಕ್ ಪ್ರಾತಿಭಾಸಿಕನಾಮಕರಣಾತ್ಪೂರ್ವಮ್ । ತಸ್ಮಾದಸತಃ ಪರೋಕ್ಷಯಾಽಪರೋಕ್ಷಯಾ ಚ ಭ್ರಾಂತ್ಯಾ ವಿಷಯೀಕರಣಸಂಭವೇನಾಸಚ್ಚೇನ್ನ ಪ್ರತೀಯೇತೇತಿ ವ್ಯಾಪ್ತ್ಯಸಂಭವಾತ್ ನಾರ್ಥಾಪತ್ತ್ಯಾಪಿ ಸದಸದ್ವೈಲಕ್ಷಣ್ಯಸಿದ್ಧಿರಿತಿ ಭಾವಃ ॥೮೧೯॥

**ವಿವರಣೆ**- ಆದ್ದರಿಂದ ಅಸತ್ತಾದುದು ಪರೋಕ್ಷವಾದ ಭ್ರಾಂತಿಯಲ್ಲಿಯೂ, ಅಪರೋಕ್ಷವಾದ ಭ್ರಾಂತಿಯಲ್ಲಿಯೂ ಪ್ರತೀತವಾಗಬಹುದಾದ್ದರಿಂದ ಅಸತ್ತಿಗೆ ಪ್ರತೀತಿ ಇಲ್ಲ ಎಂಬ ನಿನ್ನ ವ್ಯಾಪ್ತಿಯು ಭಗ್ನವಾಗುವುದರಿಂದ ಅರ್ಥಾಪತ್ತಿಯಿಂದಲೂ ಅಸದ್ವೈಲಕ್ಷಣ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಅರ್ಥಾಭಾವಕೃತಾಸತ್ತ್ವಂ ಕಸ್ತದಾ ತಸ್ಯ ಮೋಚಯೇತ್ ।
ಮಿಥ್ಯಾತ್ವಸಾಧಿಕಾ ದೃಷ್ಟಿಃ ಕಿಂ ತೇಽರ್ಥಾಭಾವಬಾಧಿಕಾ ॥ ೮೨೦ ॥

**ಅರ್ಥ**-ತದಾ= ಅಪರೋಕ್ಷವಾಗಿ ಪ್ರತೀತವಾದಾಗಲೂ, ಅರ್ಥಾಭಾವಕೃತಾಸತ್ತ್ವಂ= ಅರ್ಥಾಭಾವ ಪ್ರಯುಕ್ತವಾದ ಅಸತ್ತ್ವವನ್ನು, ತಸ್ಯ= ಆ ಶಶವಿಷಾಣಕ್ಕೆ, ಕಃ= ಯಾವನು, ಮೋಚಯೇತ್= ಪರಿಹರಿಸುತ್ತಾನೆ? ಮಿಥ್ಯಾತ್ವಸಾಧಿಕಾ= ಮಿಥ್ಯಾತ್ವವನ್ನು ಸಾಧಿಸುವ, ತೇ=

ನಿನ್ನ, ದೃಷ್ಟಿಃ= ಅಪರೋಕ್ಷ ಪ್ರತೀತಿಯು, ಅರ್ಥಾಭಾವಬಾಧಿಕಾ ಕಿಂ= ಅರ್ಥಾಭಾವವನ್ನು ಬಾಧಿಸುತ್ತದೆಯೇ?

**ಅನುವಾದ-** ಅಸತ್ತಿನ ಅಪರೋಕ್ಷ ಪ್ರತೀತಿಯು ಬರುವಾಗ ಯಾವನು ಅರ್ಥಾಭಾವ ಪ್ರಯುಕ್ತವಾದ ಅಸತ್ವವನ್ನು ಅದಕ್ಕೆ ವಿಮೋಚನೆಗೊಳಿಸುತ್ತಾನೆ? ಮಿಥ್ಯಾತ್ವಸಾಧಕವಾದ ನಿನ್ನ ಅಪರೋಕ್ಷ ಪ್ರತೀತಿಯು ಅರ್ಥಾಭಾವಕ್ಕೆ ಬಾಧಕವಾಗುತ್ತದೆಯೇ?

**ಭಾವವಿಲಾಸಿನೀ –** ಪರಾಂಗೀಕೃತಪ್ರಾತಿಭಾಸಿಕತಾದಶಾಯಾಮಪಿ ಶಶಶೃಂಗಾದೇರಸತ್ತ್ವಂ ಯುಕ್ತ್ಯಾ ಸಾಧಯತಿ ।।**ಅರ್ಥೇತಿ**।। ತದಾ ಪ್ರತೀತಿದಶಾಯಾಮ್ । ತಸ್ಯ ಪ್ರತೀಯಮಾನಶಶಶೃಂಗಸ್ಯ । ತತ್ರಾಪಿ ಪರೇಣ ದೃಶ್ಯತ್ವತಃ ಪ್ರಾತಿಭಾಸಿಕತ್ವರೂಪಮಿಥ್ಯಾತ್ವಸಾಧನಾತ್ ಮಿಥ್ಯಾತ್ವಸಾಧಿಕೇತ್ಯುಕ್ತಮ್ ।।೮೨೦।।

**ವಿವರಣೆ-** ಪರರು ಅಂಗೀಕರಿಸಿದ ಪ್ರಾತಿಭಾಸಿಕತ್ವಾವಸ್ಥೆಯಲ್ಲಿಯೂ ಶಶಶೃಂಗಾದಿಗಳಿಗೆ ಯುಕ್ತಿಯಿಂದ ಇಲ್ಲಿ ಅಸತ್ತ್ವವನ್ನು ಸಾಧಿಸುತ್ತಾರೆ. ದೃಶ್ಯತ್ವರೂಪ ಹೇತುವಿನಿಂದ ಪ್ರಾತಿಭಾಸಿಕತ್ವ ರೂಪವಾದ ಮಿಥ್ಯಾತ್ವವನ್ನು ಪರರು ಸಾಧಿಸುವುದರಿಂದ ಮಿಥ್ಯಾತ್ವ ಸಾಧಿಕಾದೃಷ್ಟಿಃ ಎಂದು ಹೇಳಿದ್ದಾರೆ. ಪ್ರತೀತಿಯು ಅರ್ಥಸಾಧಕವೇ ಆಗುತ್ತದೆಯೇ ಹೊರತಾಗಿ ಅರ್ಥಾಭಾವವನ್ನು ಬಾಧಿಸುವುದಿಲ್ಲ. ಆದ್ದರಿಂದ ಶಶವಿಷಾಣದ ಪ್ರತೀತಿ ಉಂಟಾದಾಗ ಶಶವಿಷಾಣಾಭಾವಕ್ಕೆ ಅಪಹಾರವಿಲ್ಲವಾದ್ದರಿಂದ ಅರ್ಥಾಭಾವ ಪ್ರಯುಕ್ತವಾದ ಅಸತ್ತ್ವವು ಆಗಲೂ ಇರುತ್ತದೆ. ಆದ್ದರಿಂದ ಅಸತ್ತಿನ ಅಪರೋಕ್ಷ ಪ್ರತೀತಿಯು ಅವಶ್ಯವಾಗಿ ಅಂಗೀಕಾರಾರ್ಹವಾದುದು ಎಂದು ಅಭಿಪ್ರಾಯ.

ಸತ್ತ್ವಪ್ರತೀತಿರ್ಭ್ರಾಂತಿಶ್ಚೇದಸತ್ತ್ವೇ ಸತಿ ಶೋಭತೇ ।
ಪ್ರಮಾರೂಪಾ ಚ ಸಾ ನಾಸ್ತಿ ಕಿಂ ತಸ್ಯಾಸತ್ತ್ವಮೋಚಕಂ ।। ೮೨೧ ।।

**ಅರ್ಥ-**ಸತ್ತ್ವಪ್ರತೀತಿಃ= ಸತ್ತ್ವಪ್ರತೀತಿಯು, ಭ್ರಾಂತಿಶ್ಚೇತ್= ಭ್ರಾಂತಿಯಾಗುವುದಾದರೆ, ಅಸತ್ತ್ವೇ ಸತಿ= ಅಸತ್ತ್ವವಿದ್ದರೆ ಮಾತ್ರ, ಶೋಭತೇ= ಶೋಭಿಸುತ್ತದೆ (ಆಗುತ್ತದೆ), ಪ್ರಮಾರೂಪಾ= ಪ್ರಮಾರೂಪವಾದ, ಸಾ= ಸತ್ತ್ವಪ್ರತೀತಿಯು, ನಾಸ್ತಿ= ಇಲ್ಲ, ತಸ್ಯ= ಆ ಶಶವಿಷಾಣಕ್ಕೆ, ಅಸತ್ತ್ವಮೋಚಕಂ= ಅಸತ್ತ್ವಮೋಚಕವಾದುದು, ಕಿಂ= ಯಾವುದು?

**ಅನುವಾದ-** ಶಶವಿಷಾಣದಲ್ಲಿ ಉಂಟಾಗುವ ಸತ್ತ್ವಪ್ರತೀತಿಯು ಭ್ರಾಂತಿ ಎಂದು ಹೇಳುವುದಾದರೆ ಶಶವಿಷಾಣಕ್ಕೆ ಅಸತ್ತ್ವವಿದ್ದರೆ ಮಾತ್ರ ಆ ಭ್ರಾಂತಿಯು ಉಪಪನ್ನವಾಗುತ್ತದೆ. ಪ್ರಮಾ ರೂಪವಾದ ಶಶವಿಷಾಣದ ಸತ್ತ್ವಪ್ರತೀತಿಯಂತೂ ಇಲ್ಲ. ಇನ್ನು ಅದರ ಅಸತ್ತ್ವವನ್ನು ಮೋಚನೆ ಮಾಡುವುದು ಯಾವುದು ಇದೆ?

**ಭಾವವಿಲಾಸಿನೀ** – ಭ್ರಾಂತಿಕಾಲೀನಸತ್ತ್ವಪ್ರತೀತ್ಯಾऽಸತ್ತ್ವಬಾಧಕಶಂಕಾಂ ಪರಿಹರತಿ ॥ **ಸತ್ತ್ವೇತಿ॥** ಭ್ರಾಂತಿಶ್ಚೇದಿತಿ । ತದಭಾವವತಿ ತತ್ಪ್ರಕಾರಕತ್ವಸ್ಯ ಭ್ರಾಂತಿತ್ವಾತ್ ಸತ್ತ್ವಾಭಾವಾಸತ್ತ್ವಯೋಶ್ಚ ಪರ್ಯಾಯತ್ವಾದಿತಿ ಭಾವಃ । ಪ್ರಮಾ ಚೇತ್ಸ್ಯಾದಪಿ ಬಾಧಿಕಾ । ಸಾ ತು ನಾಸ್ತೀತ್ಯಾಹ – **ಪ್ರಮೇತಿ॥** ಸಾ ಸತ್ತ್ವಪ್ರತೀತಿಃ । ತಸ್ಯ ಪ್ರತೀಯಮಾನಶಶಶೃಂಗಸ್ಯ ॥ ೮೨೧ ॥

**ವಿವರಣೆ-** ಭ್ರಮಕಾಲೀನ ಸತ್ತ್ವಪ್ರತೀತಿಯಿಂದ ಶಶವಿಷಾಣಕ್ಕೆ ಅಸತ್ತ್ವವು ಬಾಧಿತವಾಗುತ್ತದೆ ಎಂಬ ಶಂಕೆಯನ್ನು ಇಲ್ಲಿ ಪರಿಹರಿಸುತ್ತಾರೆ. ಶಶವಿಷಾಣದಲ್ಲಿ ಸತ್ತ್ವಪ್ರತೀತಿಯು ಭ್ರಾಂತಿಯೇ ಆಗಿದೆ. ಭ್ರಾಂತಿಯಾಗಬೇಕಾದರೆ ತದಭಾವವತಿ ತತ್‌ಪ್ರಕಾರಕತ್ವ ಬೇಕು. ಎಂದರೆ ಪ್ರಕೃತದಲ್ಲಿ ಸತ್ತ್ವಾಭಾವವತಿ ಸತ್ವಪ್ರಕಾರಕತ್ವವು ಇದ್ದರೆ ಮಾತ್ರ ಭ್ರಾಂತಿಯಾಗುತ್ತದೆ. ಅರ್ಥದಲ್ಲಿ ಸತ್ತ್ವಾಭಾವವನ್ನು ಅಂಗೀಕರಿಸಿದ ಮೇಲೆ ಸತ್ತ್ವಾಭಾವವೆಂದರೂ, ಅಸತ್ತ್ವವೆಂದರೂ ಒಂದೇ ಆದ್ದರಿಂದ ಅಸತ್ತ್ವವನ್ನೇ ಅಂಗೀಕರಿಸಿದಂತಾಯಿತು. ಆದ್ದರಿಂದ ಭ್ರಾಂತಿಯೂ ಕೂಡ ಶಶವಿಷಾಣದ ಅಸತ್ತ್ವವನ್ನು ಪರಿಹಾರ ಮಾಡಿ ಅದಕ್ಕೆ ಪ್ರಾತಿಭಾಸಿಕತ್ವವನ್ನು ತಂದುಕೊಡುವುದಿಲ್ಲ ಎಂದು ಅಭಿಪ್ರಾಯ.

**ಅಸನ್ನಿಕೃಷ್ಟದೃಷ್ಟಿಸ್ತು ಸಮಾ ಪಕ್ಷದ್ವಯೇಪಿ ತೇ ।**
**ಪರಿಣಾಮಾತ್ ಪರೀಹಾರೇ ತ್ರಿಕಾಲ್ಯಾಂ ಬಾಧ್ಯತಾ ಗತಾ ॥ ೮೨೨ ॥**

**ಅರ್ಥ**-ಪಕ್ಷದ್ವಯೇಪಿ= ಪ್ರಾತಿಭಾಸಿಕ ಎಂಬ ಪಕ್ಷದಲ್ಲಿಯೂ ಮತ್ತು ಅಸತ್ ಎಂಬ ಪಕ್ಷದಲ್ಲಿಯೂ, ತೇ= ನಿನಗೆ, ಅಸನ್ನಿಕೃಷ್ಟದೃಷ್ಟಿಸ್ತು= ಸನ್ನಿಕರ್ಷ ರಹಿತವಾದ ಶಶವಿಷಾಣದ ಜ್ಞಾನವಾದರೂ, ಸಮಾ= ಸಮಾನವಾಗಿದೆ, ಪರಿಣಾಮಾತ್ಪರಿಹಾರೇ= ಭ್ರಾಂತಿ ಸಮಯದಲ್ಲಿ ಅವಿದ್ಯಾ ಪರಿಣಾಮರೂಪವಾದ್ದರಿಂದ ಅಸತ್ತ್ವವನ್ನು ಪರಿಹಾರ ಮಾಡುವುದಾದರೆ, ತ್ರಿಕಾಲ್ಯಾಂ= ಕಾಲತ್ರಯದಲ್ಲಿ, ಬಾಧ್ಯತಾ= ಬಾಧ್ಯತ್ವವು, ಗತಾ= ಹೊರಟು ಹೋಯಿತು.

**ಅನುವಾದ-** ಪ್ರಾತಿಭಾಸಿಕತ್ವಪಕ್ಷದಲ್ಲಿಯೂ, ಅಸತ್ತ್ವಪಕ್ಷದಲ್ಲಿಯೂ ನಿನಗೆ ಅಸನ್ನಿಕೃಷ್ಟದೃಷ್ಟಿ ಎಂಬುದು ಸಮಾನವಾಗಿದೆ. ಪ್ರಾತಿಭಾಸಿಕ ಪಕ್ಷದಲ್ಲಿ ಅವಿದ್ಯಾಪರಿಣಾಮ ಎಂದು ಅಂಗೀಕರಿಸಿ ಅಸತ್ತ್ವವನ್ನು ಪರಿಹಾರ ಮಾಡುವುದಾದರೆ ಕಾಲತ್ರಯವೃತ್ತಿನಿಷೇಧ-ಪ್ರತಿಯೋಗಿತ್ವ ರೂಪವಾದ ಬಾಧ್ಯತ್ವವೇ ಹೊರಟು ಹೋಯಿತು.

**ಭಾವವಿಲಾಸಿನೀ** – ಪಕ್ಷದ್ವಯೇ ಪ್ರಾತಿಭಾಸಿಕತ್ವಪಕ್ಷೇ ಅಸತ್ತ್ವಪಕ್ಷೇ ಚ । ನನು ಪ್ರತೀತಿದಶಾಯಾಮ್ ಅವಿದ್ಯಾಪರಿಣಾಮರೂಪತ್ವಾತ್ ಕಥಮಸತ್ತ್ವಮಿತ್ಯತ ಆಹ–**ಪರಿಣಾಮಾದಿತಿ॥** ವರ್ತಮಾನದಶಾಯಾಂ ಸತ್ತ್ವಪ್ರಸಂಗೇನ ಬಾಧಾಯೋಗಾದಿತಿ ಭಾವಃ ॥ ೮೨೨ ॥

**ವಿವರಣೆ-** ಪ್ರತೀತವಾದುದು ಅವಿದ್ಯಾಪರಿಣಾಮವೆಂದು ಒಪ್ಪಿದರೆ ಆ ಪರಿಣಾಮವು ವರ್ತಮಾನ ಕಾಲದಲ್ಲಿ ಸತ್ಯವೇ ಆಗುವುದರಿಂದ ಕಾಲತ್ರಯದಲ್ಲಿ ಅದನ್ನು ನಿಷೇಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಬಾಧ್ಯತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಪೂರ್ವಂ ಚ ನಾಸಚ್ಛೃಂಗಂ ಸ್ಯಾದನುತ್ಪನ್ನಘಟಾದಿವತ್ ।
ವಿದ್ಯುದ್ಬುದ್ಬುದಧೀಕಲ್ಪಾ ಧೀಶ್ಚ ತಸ್ಯ ಪ್ರಮಾ ಭವೇತ್ ॥ ೮೨೩ ॥

**ಅರ್ಥ**-ಪೂರ್ವಂ= ಪ್ರತೀತಿಗಿಂತ ಮೊದಲು, ಅನುತ್ಪನ್ನಘಟಾದಿವತ್= ಅನುತ್ಪನ್ನ ಘಟಾದಿಗಳಂತೆ, ಶೃಂಗಂ= ಶಶಶೃಂಗವು, ಅಸತ್ ನ ಸ್ಯಾತ್= ಅಸತ್ ಆಗುವುದಿಲ್ಲ, ವಿದ್ಯುದ್ಬುದ್ಬುದಧೀಕಲ್ಪಾ= ಆಗಲೇ ಉತ್ಪನ್ನವಾಗಿ ನಷ್ಟವಾದ ಮಿಂಚು ಮತ್ತು ಬುದ್ಬುಧಗಳ ಜ್ಞಾನದಂತೆ, ತಸ್ಯ ಧೀಶ್ಚ= ಪರಿಣಾಮರೂಪವಾದ ಶಶಶೃಂಗದ ಪ್ರತೀತಿಯೂ ಕೂಡ, ಪ್ರಮಾ ಭವೇತ್= ಪ್ರಮೆಯೇ ಆಗಬೇಕಾದೀತು.

**ಅನುವಾದ**- ಅನುತ್ಪನ್ನ ಘಟಾದಿಗಳು ಉತ್ಪತ್ತಿಗಿಂತಲೂ ಪೂರ್ವದಲ್ಲಿ ಹೇಗೆ ಅಸತ್ತಲ್ಲವೋ ಹಾಗೆ ಶಶಶೃಂಗವು ಪರಿಣಾಮಕ್ಕಿಂತ ಪೂರ್ವದಲ್ಲಿ ಅಸತ್ತಲ್ಲ ಎಂದೇ ಆಯಿತು. ವಿದ್ಯುತ್ ಮತ್ತು ಬುದ್ಬುಧಗಳ ಜ್ಞಾನವು ಎಂದರೆ ತತ್ಕಾಲದಲ್ಲಿ ಉತ್ಪನ್ನನಷ್ಟವಾದ ವಸ್ತುಗಳ ಜ್ಞಾನಗಳು ಹೇಗೆ ಪ್ರಮೆಯೇ ಆಗಿದೆಯೋ, ಅದರಂತೆ ಶಶವಿಷಾಣಜ್ಞಾನವು ಪ್ರಮೆಯೇ ಆಗಬೇಕಾದೀತು.

**ಭಾವವಿಲಾಸಿನೀ** – ದೂಷಣಾಂತರಂ ಚಾಹ – **ಪೂರ್ವಮಿತಿ** ॥ ಪ್ರತೀತಿದಶಾಯಾಂ ಶಶಶೃಂಗಸ್ಯೋತ್ಪನ್ನತ್ವೇ ಪೂರ್ವಂ ಪ್ರಾಗಭಾವಪ್ರತಿಯೋಗಿತ್ವಮೇವ ಸ್ಯಾತ್ । ನಾತ್ಯಂತಾಸತ್ತ್ವಮಿತಿ ಭಾವಃ। ತಸ್ಯ ಶಶಶೃಂಗಸ್ಯ । ತದಾನೀಮೇವೋತ್ಪನ್ನವಿನಷ್ಟತ್ವಾಂಗೀಕಾರಾದಪಿ ನ ಭ್ರಾಂತಿತ್ವಮಿತಿ ಸೂಚನಾಯ ನಿದರ್ಶನಮ್ ॥ ೮೨೩ ॥

**ವಿವರಣೆ**- ಪರಿಣಾಮ ಪಕ್ಷದಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. ಪ್ರತೀತಿ ದೆಶೆಯಲ್ಲಿ ಶಶವಿಷಾಣವು ಉತ್ಪನ್ನವಾಗುತ್ತದೆ ಎಂದು ಅಂಗೀಕರಿಸಿದರೆ ಅದಕ್ಕಿಂತ ಮೊದಲು ಅದರ ಪ್ರಾಗಭಾವವೇ ಸಿದ್ಧವಾಗುತ್ತದೆ. ಅತ್ಯಂತಾಭಾವವು ಸಿದ್ಧವಾಗುವುದಿಲ್ಲ. ಅನುತ್ಪನ್ನ ಘಟಾದಿಗಳಿಗೆ ಉತ್ಪತ್ತಿಗಿಂತ ಮೊದಲು ಹೇಗೆ ಪ್ರಾಗಭಾವ ಮಾತ್ರವಿರುತ್ತದೆಯೋ, ಅದರಂತೆ ಶಶವಿಷಾಣಕ್ಕೂ ಪ್ರಾಗಭಾವವು ಮಾತ್ರ ಇರುವುದರಿಂದ ಅದಕ್ಕೆ ಅಸತ್ತ್ವವು ಸಿದ್ಧವಾಗುವುದಿಲ್ಲ ಮತ್ತು ಆ ಕಾರಣದಿಂದ ಅದರ ಜ್ಞಾನವು ಭ್ರಾಂತಿಯಾಗುವುದಿಲ್ಲ ಎಂದು ಅಭಿಪ್ರಾಯ.

ತಸ್ಮಾತ್ ತದಸದೇವಾಸೀದತಸ್ತೇನ ಗತಂ ಮತಂ ॥ ೮೨೪ ॥

**ಅರ್ಥ**-ತಸ್ಮಾತ್= ಆ ಕಾರಣದಿಂದ, ತತ್= ಅಪರೋಕ್ಷ ಪ್ರತೀತಿಯಲ್ಲಿ ವಿಷಯವಾದ ಶಶವಿಷಾಣವು, ಅಸದೇವ ಆಸೀತ್= ಅಸತ್ತೇ ಆಗಿದೆ, ಅತಃ= ಆದ್ದರಿಂದ, ತೇನ= ಅಸತ್ತಿನ ಅಪರೋಕ್ಷ ಪ್ರತೀತಿ ಇರುವುದರಿಂದ, ಮತಂ= ಅಸತ್ತಿಗೆ ಅಪರೋಕ್ಷ ಜ್ಞಾನವಿಲ್ಲ ಎಂಬ ನಿನ್ನ ಮತವು, ಗತಂ= ಹೊರಟು ಹೋಯಿತು.

**ಅನುವಾದ-** ಆದ್ದರಿಂದ ಅಪರೋಕ್ಷ ಪ್ರತೀತಿಯಲ್ಲಿ ವಿಷಯವಾದ ಶಶವಿಷಾಣವು ಅಸತ್ತೆಂದೇ ಸಿದ್ಧವಾಯಿತು. ಅಸತ್ತಿಗೂ ಅಪರೋಕ್ಷಪ್ರತೀತಿವಿಷಯತ್ವವಿರುವುದರಿಂದ ಅಸತ್ತಿಗೆ ಅಪರೋಕ್ಷ ಪ್ರತೀತಿ ಇಲ್ಲ ಎಂಬ ನಿನ್ನ ಮತವು ಹೊರಟು ಹೋಯಿತು.

**ಭಾವವಿಲಾಸಿನೀ –** ತಸ್ಮಾತ್ಪರಿಣಾಮೇ ತದ್ಧೀಪ್ರಮಾತ್ವಪ್ರಸಂಗಾತ್ । ತತ್ ಪ್ರತೀಯಮಾನಂ ಶಶಶೃಂಗಮ್ । ಅತಃ ಅಸತ್ತ್ವಾತ್ । ತೇನ ಪ್ರಾಗುಕ್ತತದಪರೋಕ್ಷಜ್ಞಾನೇನ ॥ ೮೨೪ ॥

**ವಿವರಣೆ-** ಅಸತ್ತಿಗೆ ಅಪರೋಕ್ಷ ಪ್ರತೀತಿ ಇಲ್ಲ ಎಂಬ ವ್ಯಾಪ್ತಿಯನ್ನು ಅವಲಂಬಿಸಿ ಅರ್ಥಾಪತ್ತಿಯಿಂದ ಜಗತ್ತಿಗೆ ಅಸದ್ವೈಲಕ್ಷಣ್ಯವನ್ನು ಸಾಧನೆ ಮಾಡುವುದು ಶಕ್ಯವಿಲ್ಲ ಎಂದು ಅಭಿಪ್ರಾಯ.

ಅಯೋಗ್ಯಾರ್ಥಕವಾಕ್ಯಂ ಹಿ ಶಕ್ಯಭಾವಾನ್ನ ಶಕ್ಯವತ್ ।
ಶಕ್ಯಸಂಬಂಧಸಾದೃಶ್ಯಾಧೀನಾ ವೃತ್ತಿಸ್ತತೋಽಸ್ಯ ನ ॥ ೮೨೫ ॥

ಕರಣಸ್ಥಾಯೋಗ್ಯತಾಖ್ಯದೋಷೇಣ ನಯನಾದಿವತ್ ।
ಅಸನ್ನಿಕೃಷ್ಟಸ್ಯಾತ್ಯಂತಾಸತ ಏವ ಹಿ ಧೀರಭೂತ್ ॥ ೮೨೬ ॥

**ಅರ್ಥ-**ಅಯೋಗ್ಯಾರ್ಥಕವಾಕ್ಯಂ= ಅಯೋಗ್ಯಾರ್ಥಕವಾದ ಶಶವಿಷಾಣಂ ಎಂಬ ಮೊದಲಾದ ವಾಕ್ಯವು, ಶಕ್ಯಭಾವಾತ್= ಶಶ ಮತ್ತು ವಿಷಾಣ ರೂಪವಾದ ಪದಾರ್ಥಗಳಿಗೆ ಪರಸ್ಪರ ಅನ್ವಯಯೋಗ್ಯತ್ವವು ಇಲ್ಲದಿರುವುದರಿಂದ ಯೋಗ್ಯೇತರಾನ್ವಿತ ಸ್ವಾರ್ಥಾಭಿದಾಯಕತ್ವ ರೂಪವಾದ ಶಕ್ತಿ ಇಲ್ಲದಿರುವುದರಿಂದ, ಶಕ್ಯವತ್= ಇತರಾನ್ವಿತ ಅಪರ ಪದಾರ್ಥ ರೂಪವಾದ ಶಕ್ಯವುಳ್ಳದ್ದಾಗಿ, ನ= ಆಗುವುದಿಲ್ಲ, ತತಃ= ಶಕ್ಯವೇ ಇಲ್ಲದಿರುವುದರಿಂದ, ಶಕ್ಯಸಂಬಂಧಸಾದೃಶ್ಯಾಧೀನಾ= ಶಕ್ಯವಾದ ಒಂದೊಂದು ಪದಾರ್ಥ ನಿರೂಪಿತವಾದ ಅಯೋಗ್ಯಾರ್ಥ ನಿಷ್ಠವಾದ ಸಂಬಂಧ ಸಾದೃಶ್ಯಗಳು ಏನಿವೆಯೋ ಅದಕ್ಕೆ ಅಧೀನವಾದಂತಹ, ವೃತ್ತಿಃ= ಲಕ್ಷಣಾವೃತ್ತಿಯಾಗಲೀ ಅಥವಾ ಗೌಣೀವೃತ್ತಿಯಾಗಲೀ, ಅಸ್ಯ= ಈ ಶಶವಿಷಾಣ ಪದಕ್ಕೆ, ನ= ಇಲ್ಲ.

ಕರಣಸ್ಥಾಯೋಗ್ಯತಾಖ್ಯದೋಷೇಣ= ಕರಣದಲ್ಲಿರುವ ಅಯೋಗ್ಯತಾ ರೂಪವಾದ ದೋಷದಿಂದ, ನಯನಾದಿವತ್= ಚಕ್ಷುರಾದಿಗಳಂತೆ, ಅಸನ್ನಿಕೃಷ್ಟಸ್ಯ= ಸನ್ನಿಕರ್ಷರಹಿತವಾದ, ಅತ್ಯಂತಾಸತ ಏವ= ಅತ್ಯಂತ ಅಸತ್ಯವಾದುದರ, ಧೀರೇವ= ಬುದ್ಧಿಯೇ, ಅಭೂತ್ ಹಿ= ಉಂಟಾಯಿತಷ್ಟೇ ?

**ಅನುವಾದ-** ಶಶವಿಷಾಣ ಮುಂತಾದ ಶಬ್ದಗಳು ಯೋಗ್ಯೇತರಾನ್ವಿತಸ್ವಾರ್ಥಬೋಧಕಗಳಲ್ಲ. ಶಶ ಮತ್ತು ವಿಷಾಣ ರೂಪವಾದ ಪದಾರ್ಥಗಳಿಗೆ ಪರಸ್ಪರ ಅನ್ವಯಯೋಗ್ಯತ್ವವು ಇಲ್ಲದಿರುವುದರಿಂದ ಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಕತ್ವ ರೂಪವಾದ ಶಕ್ತಿ

ಇರುವುದಿಲ್ಲ. ಶಕ್ಯವೇ ಇಲ್ಲದಿದ್ದಾಗ ಶಕ್ಯಸಂಬಂಧವೂ ಇರುವುದಿಲ್ಲ. ಇದು ಇಲ್ಲದಿರುವಾಗ ಇದಕ್ಕೆ ಅಧೀನಗಳಾದ ಗೌಣೀವೃತ್ತಿ ಲಕ್ಷಣಾವೃತ್ತಿಗಳನ್ನು ಶಶವಿಷಾಣಶಬ್ದಕ್ಕೆ ಹೇಳಲಾಗುವುದಿಲ್ಲ.

ದೋಷಯುಕ್ತವಾದ ಚಕ್ಷುಸ್ಸು ಅಸನ್ನಿಕೃಷ್ಟವಾದ ಶುಕ್ತಿ ರಜತವನ್ನು ಬೋಧಿಸುವಂತೆ ಶಬ್ದವು ಅತ್ಯಂತ ಅಸತ್ತಾದ ಶಶವಿಷಾಣವನ್ನು ಭ್ರಾಂತಿಯಿಂದ ಬೋಧಿಸುತ್ತದೆ.

**ಭಾವವಿಲಾಸಿನೀ** – ಪ್ರಾಗರ್ಥಗತದೋಷೇಣೈವ ಶಶಶೃಂಗಭ್ರಮ ಇತ್ಯುಕ್ತಂ ನಾಸಂಬದ್ಧಾರ್ಥ-ಬೋಧಕಮಿತ್ಯೇವ ಚೋಕ್ತಮ್ । ಇದಾನೀಂ ತಂ ದೋಷಂ ಕರಣಗತಂ ಕರ್ತುಂ ಗೌಣ್ಯಾಮಪೇಕ್ಷಿತ ಸಾದೃಶ್ಯಾಖ್ಯನಿಮಿತ್ತಾಂತರಾಭಾವಂ ಚ ವಕ್ತುಂ ಪುನರಾಹ – **ಅಯೋಗ್ಯೇತಿ** ॥ ಅಯೋಗ್ಯಾರ್ಥಕವಾಕ್ಯಂ ಶಶವಿಷಾಣಮಿತ್ಯಾದಿವಾಕ್ಯಮ್ । ಶಕ್ಯಭಾವಾತ್ ಶಶವಿಷಾಣಪದಾರ್ಥಯೋಃ ಪರಸ್ಪರಮನ್ವಯಾಯೋಗ್ಯತ್ವೇನ ಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಕತ್ವರೂಪಶಕ್ಯಭಾವಾತ್ । ಶಕ್ಯವತ್ ಇತರಾನ್ವಿತಾಪರಪದಾರ್ಥರೂಪಶಕ್ಯವತ್ । ತತಃ ಶಕ್ಯಸ್ಯೈವಾಭಾವಾತ್ । ಶಕ್ಯಸಂಬಂಧಸಾದೃಶ್ಯಾಧೀನಾ ಶಕ್ಯಸ್ಯ ಏಕೈಕಪದಾರ್ಥಸ್ಯ ಸಂಬಂಧಸಾದೃಶ್ಯೇ ಅಯೋಗ್ಯಾರ್ಥನಿಷ್ಠೇ ಯೇ ಸಂಬಂಧಸಾದೃಶ್ಯೇ ತನ್ನಿರೂಪಪಿತ್ಯೈತದ್ಧರ್ಮಿಕಸಂಬಂಧಸಾದೃಶ್ಯೇ ಇತ್ಯರ್ಥಃ । ತದಧೀನಾ ಅಯೋಗ್ಯಾರ್ಥೇ ಲಾಕ್ಷಣಿಕೀ ಔಪಚಾರಿಕೀ ವಾ ವೃತ್ತಿಃ । ಅಸ್ಯ ಶಶವಿಷಾಣಪದಸ್ಯ ನೇತಿ ಸಂಬಂಧಃ ।

ಇದಮುಕ್ತಂ ಭವತಿ । ಶಶವಿಷಾಣಪದಾಚ್ಛಶಸಂಬಂಧಿವಿಷಾಣರೂಪೋಽರ್ಥಃ ನ ಮುಖ್ಯವೃತ್ತ್ಯಾ ವಾಚ್ಯಃ। ಯೋಗ್ಯೇತರಾನ್ವಿತ ಸ್ವಾರ್ಥಾಭಿಧಾಯಕವಾಕ್ಯಸ್ಯ ಯೋಗ್ಯಾನ್ವಿತಾರ್ಥ ಏವ ಶಕ್ತತ್ವಾತ್ । ಶಶವಿಷಾಣಸ್ಯ ಚ ಯೋಗ್ಯೇತರಾನ್ವಿತಾರ್ಥತ್ವಾಭಾವೇನ ಪ್ರತ್ಯುತಾನ್ಯೋನ್ಯಸಂಬಂಧಾಯೋಗ್ಯ ಶಶವಿಷಾಣಾಖ್ಯ-ವಿರುದ್ಧಾರ್ಥಘಟಿತತ್ವೇನ ಶಶವಿಷಾಣಪದಸ್ಯ ತತ್ರ ಶಕ್ತ್ಯಯೋಗಾತ್ । ಅರ್ಥಸ್ಯ ಚ ತದ್ವಾಕ್ಯಶಕ್ಯತ್ವಾಯೋಗಾಚ್ಚ ನ ಸಿಂಹೋ ದೇವದತ್ತ ಇತ್ಯಾದಿ ವಾಕ್ಯಸ್ಯ ಸಿಂಹೇನೈಕೀಭೂತದೇವದತ್ತೋಽರ್ಥಃ । ನಾಪ್ಯಮುಖ್ಯವೃತ್ತ್ಯಾ ಲಕ್ಷಣಯಾ ಗೌಣ್ಯಾ ವಾ ಶಶವಿಷಾಣರೂಪೋಽರ್ಥಶಶವಿಷಾಣಪದಾರ್ಥಃ । ಗಂಗಾಯಾಂ ಘೋಷ ಇತ್ಯತ್ರ ಗಂಗಾಪದಶಕ್ಯಾರ್ಥಭೂತಪ್ರವಾಹಸಂಬಂಧಸ್ಯ ತೀರ ಇವ ಶಶಾದಿಪದಶಕ್ಯ ಶಶಾದ್ಯರ್ಥ-ಸಂಬಂಧಸ್ಯಾಪಿ ಶಶವಿಷಾಣೇಽಭಾವಾತ್ । ಸಿಂಹಪದಶಕ್ಯಾರ್ಥಭೂತಸಿಂಹಸಾದೃಶ್ಯಸ್ಯ ದೇವದತ್ತ ಇವ ಶಶಾದಿಸಾದೃಶ್ಯಸ್ಯಾಪಿ ಶಶವಿಷಾಣೇಽಭಾವಾತ್ । ಇತರಾನ್ವಯವಿಶಿಷ್ಟಸ್ಯ ಶಕ್ಯತ್ವೇ ವಿಶೇಷ್ಯಸ್ಯಾಪಿ ಶಕ್ಯತ್ವಾತ್ ಶಕ್ಯಸಂಬಂಧಸಾದೃಶ್ಯನಿರೂಪಣೇ ಪ್ರವಾಹಾದಿಕಮೇವ ಶಕ್ಯಮ್ । ಸಪ್ತಮ್ಯಂತ ಗಂಗಾಪದೋಕ್ತಪ್ರವಾಹನಿಷ್ಠಾಧಾರತ್ವಂ ಪ್ರತಿ ಪದಾಂತರೋಕ್ತಘೋಷಸ್ಯ ಸಮಾನಾಧಿಕರಣ ಸಿಂಹಪದೋಕ್ತಸಿಂಹತಾದಾತ್ಮ್ಯಂ ಪ್ರತೀತರಪದಾರ್ಥದೇವದತ್ತಸ್ಯ ಚಾಪರಸಂಬಂಧಿತ್ವಾಯೋಗೇನ ಲಕ್ಷಣಾಗೌಣ್ಯೋಃ ಶಕ್ಯೇಽನ್ವಯವೈಶಿಷ್ಟ್ಯಾಸಂಭವಾತ್ ಮುಖ್ಯತಶ್ಶಬ್ದಸ್ಯ ಶಕ್ಯಂ ತು ವಿಶಿಷ್ಟಮೇವೇತಿ ದ್ರಷ್ಟವ್ಯಮ್ । ನಹಿ ಗಂಗಾಪದಮಪಿ ಸ್ವಾಯೋಗ್ಯಾರ್ಥರೂಪಂ ಪ್ರವಾಹನಿಷ್ಠಂ ಘೋಷಾಧಾರತ್ವಂ ಲಕ್ಷಯತಿ । ನ ವಾ ಸಿಂಹಪದಂ ಸಿಂಹೇನೈಕೀಭೂತಂ ದೇವದತ್ತಂ ಗೌಣ್ಯಾ ವಾ ವಕ್ತಿ । ಉಭಯೋರಪ್ಯಪ್ರಾಮಾಣಿಕತ್ವಮೇವ ಹ್ಯಲಕ್ಷ್ಯತ್ವೇಽಗೌಣತ್ವೇ ಬೀಜಮ್ । ಕಿಂತು ತತ್ಸಂಬಂಧಿತಯಾ

ತತ್ಸದೃಶತಯಾ ಚ ಪ್ರಮಿತಂ ತೀರಂ ದೇವದತ್ತಂ ವಾ ಅಮುಖ್ಯಯಾ ವೃತ್ತ್ಯಾ ವಕ್ತಿ । ಅತೋ ಮುಖ್ಯಾಮುಖ್ಯೇ ದ್ವೇ ಅಪಿ ವೃತ್ತೀ ಪ್ರಮಿತ ಏವ ಪದಾರ್ಥೇ ವರ್ತೇತೇ ನಾಪ್ರಮಿತೇ । ಅತಶ್ಶಶವಿಷಾಣಪದಮಪಿ ಪ್ರಮಿತೇಽರ್ಥಾಂತರೇ ಗೌಣ್ಯಾ ಲಕ್ಷಣಯಾ ವಾ ವೃತ್ತ್ಯಾ ಪ್ರವರ್ತೇತಾಪಿ। ನಹಿ ಕಶ್ಚಿದಪಿ ಶಶಕರ್ಣಂ ವಿಷಾಣೋಪಮತ್ವಾಚ್ಛಶವಿಷಾಣಮಿತಿ ವ್ಯವಹರತಿ ಚೇತ್ ಕೋಽಪ್ಯ-ಪರಾಧೋಽಸ್ತಿ। ಶಶವಿಷಾಣರೂಪಮರ್ಥಂ ತ್ವಪ್ರಾಮಾಣಿಕತ್ವಾತ್ ನ ಮುಖ್ಯಯಾ ನಾಪಿ ಲಕ್ಷಣಯಾ ನ ವಾ ಗೌಣ್ಯಾ ವೃತ್ತ್ಯಾ ವಕ್ತಿ । ಸ್ವಯೋಗ್ಯವೃತ್ತಿಂ ವಿನಾ ನಿಮಿತ್ತಾಂತರತೋ ಬೋಧ್ಯಸ್ಯ ಚ ಚಕ್ಷುರ್ಬೋಧ್ಯಚಕ್ಷುರಯೋಗ್ಯಸೌರಭವನ್ನ ತದರ್ಥತ್ವಮ್ । ಕಥಮನ್ಯಥಾ ಘಟಪಟಾದಿಕಮೇವ ಪದಾರ್ಥೋ ನ ಶಶವಿಷಾಣಾದಿರಿತಿ ॥ ಕಥಂ ತರ್ಹಿ ಶಶವಿಷಾಣಾದಿಶಬ್ದಾತ್ತತ್ಪ್ರತೀತಿರಿತ್ಯತೋ ದೋಷವಶಾದಸನ್ನಿಕೃಷ್ಟಸ್ಯಾಪಿ ಪ್ರತೀತಿರಿತ್ಯಾಹ – ಕರಣೇತಿ ॥ ಅಯೋಗ್ಯತಾಖ್ಯದೋಷೇಣ ಅಯೋಗ್ಯಾರ್ಥಕತ್ವಾಖ್ಯ ದೋಷೇಣ । ನಯನಾದಿವತ್ । ಯಥಾ ಕಾಚಾದಿದೋಷಕಲಿಲಂ ನಯನಮಸನ್ನಿಕೃಷ್ಟಮೇವ ಶುಕ್ತಿರಜತಂ ಬೋಧಯತಿ ತದ್ವದಿತ್ಯರ್ಥಃ ॥ ೮೨೫-೮೨೬ ॥

**ವಿವರಣೆ-** ಶಶವಿಷಾಣಶಬ್ದದಿಂದ ಶಶಸಂಬಂಧಿಯಾದ ವಿಷಾಣರೂಪವಾದ ಅರ್ಥವು ಮುಖ್ಯವೃತ್ತಿಯಿಂದ ವಾಚ್ಯವಾಗುವುದಿಲ್ಲ. ಯೋಗ್ಯೇತರಾನ್ವಿತ ಸ್ವಾರ್ಥಾ-ಭಿದಾಯಕ ವಾಕ್ಯವು ಯೋಗ್ಯಾನ್ವಿತಾರ್ಥದಲ್ಲಿಯೇ ಶಕ್ತವಾಗಿದೆ. ಶಶವಿಷಾಣವಾದರೂ ಯೋಗ್ಯೇತರಾನ್ವಿತಾರ್ಥವಲ್ಲವಾದ್ದರಿಂದ ಅದಕ್ಕೆ ವಿರುದ್ಧವಾಗಿ ಪರಸ್ಪರ ಸಂಬಂಧಕ್ಕೆ ಅಯೋಗ್ಯವಾದ ಶಶ ಮತ್ತು ವಿಷಾಣರೂಪವಾದ ವಿರುದ್ಧಾರ್ಥ ಯುಕ್ತವಾದುದರಿಂದ ಶಶವಿಷಾಣ ಪದಕ್ಕೆ ಅಲ್ಲಿ ಶಕ್ತಿ ಇಲ್ಲದಿರುವುದರಿಂದ ಶಶವಿಷಾಣರೂಪವಾದ ಅರ್ಥವು ಶಶವಿಷಾಣ ಎಂಬ ವಾಕ್ಯಕ್ಕೆ ಶಕ್ಯವಾಗುವುದಿಲ್ಲ. 'ಸಿಂಹೋ ದೇವದತ್ತಃ' ಎಂಬ ವಾಕ್ಯಕ್ಕೆ ಸಿಂಹಾಭಿನ್ನನಾದ ದೇವದತ್ತನೆಂದು ಅರ್ಥವಲ್ಲ. ಅದರಂತೆ ಇಲ್ಲಿ ಅಮುಖ್ಯವೃತ್ತಿ-ಯಿಂದಲೂ ಸಹ ಎಂದರೆ ಲಕ್ಷಣಾವೃತ್ತಿಯಿಂದಲಾಗಲೀ, ಗೌಣೀವೃತ್ತಿಯಿಂದಲಾಗಲೀ ಶಶವಿಷಾಣ ರೂಪವಾದ ಅರ್ಥವು ಶಶವಿಷಾಣ ಪದದಿಂದ ಪ್ರತಿಪಾದಿತವಾಗುವುದಿಲ್ಲ. ಏಕೆಂದರೆ ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾಪದ ಶಕ್ಯಾರ್ಥವಾದ ಪ್ರವಾಹದ ಸಂಬಂಧವು ತೀರದಲ್ಲಿ ಇರುವಂತೆ ಶಶಾದಿಪದಶಕ್ಯವಾದ ಶಶದ ಸಂಬಂಧವು ವಿಷಾಣದಲ್ಲಿ ಇಲ್ಲ. ಅದರಂತೆ ಸಿಂಹ ಪದ ಶಕ್ಯಾರ್ಥವಾದ ಸಿಂಹದ ಸಾದೃಶ್ಯವು ದೇವದತ್ತನಲ್ಲಿ ಇರುವಂತೆ ಶಶಾದಿ ಸಾದೃಶ್ಯವು ಶಶವಿಷಾಣದಲ್ಲಿ ಇಲ್ಲ. ಇತರಾನ್ವಯ ವಿಶಿಷ್ಟವಾದ ಅರ್ಥವು ಶಕ್ಯವಾದರೆ ಅದರಲ್ಲಿರುವ ವಿಶೇಷ್ಯವು ಶಕ್ಯವಾಗುವುದರಿಂದ, ಶಕ್ಯ ಸಂಬಂಧಿತ್ವವನ್ನಾಗಲೀ, ಶಕ್ಯ ಸಾದೃಶ್ಯವನ್ನಾಗಲೀ ನಿರೂಪಣೆ ಮಾಡುವಾಗ ಪ್ರವಾಹಾದಿಗಳೇ ಶಕ್ಯವಾಗುತ್ತದೆ. ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾ ಪದದಿಂದ ಹೇಳಲ್ಪಟ್ಟ ಪ್ರವಾಹನಿಷ್ಠ ಆಧಾರತ್ವವನ್ನು ಕುರಿತು ಪದಾಂತರ ಉಕ್ತವಾದ ಘೋಷಕ್ಕೆ ಅಪರ ಸಂಬಂಧವು ಕೂಡದಿರುವುದರಿಂದ ಅದರಂತೆ ಸಿಂಹೋ ದೇವದತ್ತಃ ಎಂಬಲ್ಲಿ ಸಿಂಹ ಪದೋಕ್ತವಾದ ಸಿಂಹದ ತಾದಾತ್ಮ್ಯವನ್ನು ಕುರಿತು ಇತರ ಪದಾರ್ಥವಾದ

ದೇವದತ್ತನಿಗೆ ಅಪರ ಸಂಬಂಧಿತ್ವವು ಕೂಡದೇ ಇರುವುದರಿಂದ ಲಕ್ಷಣಾ ಮತ್ತು ಗೌಣೀ ಸ್ಥಳದಲ್ಲಿ ಶಕ್ಯವಾದ ಘೋಷ ಮತ್ತು ದೇವದತ್ತನಿಗೆ ಅನ್ವಯ ವೈಶಿಷ್ಟ್ಯವೇ ಕೂಡದಿರುವುದರಿಂದ ಮುಖ್ಯವೃತ್ತಿಯಿಂದ ಶಬ್ದ ಪ್ರತಿವಾದ್ಯವಾದ ಸ್ಥಳದಲ್ಲಿ ವಿಶಿಷ್ಟವೇ ಶಕ್ಯವಾದುದು ಎಂದು ಅಂಗೀಕರಿಸಬೇಕು. ಗಂಗಾಪದವಾದರೂ ತನಗೆ ಅಯೋಗ್ಯ ಅರ್ಥವಾದ ಪ್ರವಾಹನಿಷ್ಠ ಘೋಷಾಧಾರತ್ವವನ್ನು ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುವುದಿಲ್ಲ. ಸಿಂಹ ಪದವೂ ಸಹ ಸಿಂಹಾಭಿನ್ನನಾದ ದೇವದತ್ತನನ್ನು ಗೌಣೀ ವೃತ್ತಿಯಿಂದ ಪ್ರತಿಪಾದನೆ ಮಾಡುವುದಿಲ್ಲ. ಪ್ರವಾಹನಿಷ್ಠ ಘೋಷಾಧಾರತ್ವವೂ ದೇವದತ್ತನಿಷ್ಟ ಸಿಂಹಾಭೇದವೂ ಲಕ್ಷಣಾವೃತ್ತಿ ಮತ್ತು ಗೌಣೀವೃತ್ತಿಯಿಂದ ಪ್ರತಿಪಾದಿಸಲ್ಪಡದಿರುವುದಕ್ಕೆ ಅವೆರಡೂ ಅಪ್ರಾಮಾಣಿಕವಾಗಿರುವುದೇ ನಿಮಿತ್ತವಾಗಿದೆ. ಆದರೆ ಪ್ರವಾಹ ಸಂಬಂಧಿತಯಾ ಪ್ರಮಿತವಾದ ತೀರವನ್ನು ಸಿಂಹಸದೃಶತಯಾ ಪ್ರಮಿತನಾದ ದೇವದತ್ತನನ್ನು ಅಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ ಮುಖ್ಯಮತ್ತು ಅಮುಖ್ಯವಾದ ಎರಡು ವೃತ್ತಿಗಳು ಪ್ರಮಿತವಾದ ಪದಾರ್ಥದಲ್ಲಿಯೇ ಇರುತ್ತದೆಯೇ ಹೊರತು ಅಪ್ರಮಿತವಾದ ಪದಾರ್ಥದಲ್ಲಿ ಇರುವುದಿಲ್ಲ. ಆದ್ದರಿಂದ ಶಶವಿಷಾಣಪದವೂ ಸಹ ಪ್ರಮಿತವಾದ ಅರ್ಥಾಂತರದಲ್ಲಿ ಗೌಣೀವೃತ್ತಿಯಿಂದಲಾಗಲೀ, ಲಕ್ಷಣಾವೃತ್ತಿಯಿಂದಲಾಗಲೀ ಪ್ರವರ್ತಿಸಬಹುದು. ಯಾವನಾದರೂ ಶಶದ ಕಿವಿಗಳನ್ನು ನೋಡಿ ಅಮುಖ್ಯವೃತ್ತಿಯಿಂದ ಶಶವಿಷಾಣ ಎಂದು ವ್ಯವಹಾರ ಮಾಡಿದರೆ ಅವನು ಅಪರಾಧಿಯಾಗುವುದಿಲ್ಲವಷ್ಟೇ? ಶಶವಿಷಾಣವನ್ನು ಮಾತ್ರ ಶಶವಿಷಾಣಪದವು ಮುಖ್ಯವೃತ್ತಿಯಿಂದಲಾಗಲೀ, ಲಕ್ಷಣಾವೃತ್ತಿಯಿಂದಲಾಗಲೀ ಹೇಳುವುದಿಲ್ಲ. ಶಬ್ದಕ್ಕೆ ಯೋಗ್ಯವಾದ ವೃತ್ತಿಯಿಲ್ಲದೆ ನಿಮಿತ್ತಾಂತರದಿಂದ ಶಬ್ದಬೋಧ್ಯವಾದ ಅರ್ಥವು ಚಕ್ಷುಸ್ಸಿಗೆ ಅಯೋಗ್ಯವಾದ ಸೌರಭವು ಚಕ್ಷುರ್ಜನ್ಯಜ್ಞಾನಕ್ಕೆ ವಿಷಯವಾದರೆ ಹೇಗೆ ಚಕ್ಷುಸ್ಸಿನ ಅರ್ಥವಾಗುವುದಿಲ್ಲವೋ, ಅದರಂತೆ ಪದದ ಅರ್ಥವಾಗುವುದಿಲ್ಲ. ಹಾಗಿಲ್ಲದಿದ್ದರೆ ಘಟಪಟಾದಿಗಳೇ ಪದಾರ್ಥ. ಶಶವಿಷಾಣಾದಿಗಳು ಪದಾರ್ಥವಲ್ಲ ಎಂದು ಪ್ರಾಮಾಣಿಕರು ಏಕೆ ಹೇಳುತ್ತಾರೆ?

ಹಾಗಾದರೆ ಶಶವಿಷಾಣ ಶಬ್ದದಿಂದ ಶಶವಿಷಾಣ ಪ್ರತೀತಿಯು ಹೇಗೆ ಉಂಟಾಗುತ್ತದೆ ಎಂಬ ಪ್ರಶ್ನೆಗೆ ದೋಷವಶದಿಂದ ಸನ್ನಿಕೃಷ್ಟವಾಗದಿದ್ದರೂ ಪ್ರತೀತಿ ಉಂಟಾಗುತ್ತದೆ ಎಂದು ಹೇಳುತ್ತಾರೆ. ದೋಷಯುಕ್ತವಾದ ಚಕ್ಷುಸ್ಸು ಅಸನ್ನಿಕೃಷ್ಟವಾದ ಶುಕ್ತಿರಜತವನ್ನು ಬೋಧಿಸುವಂತೆ ಅಯೋಗ್ಯತಾರೂಪವಾದ ಕರಣದೋಷವುಳ್ಳ ಶಬ್ದವು ಅಸನ್ನಿಕೃಷ್ಟವಾದ ಶಶವಿಷಾಣವನ್ನು ಭ್ರಾಂತಿಯಿಂದ ಬೋಧಿಸುತ್ತದೆ ಎಂದು ಅಭಿಪ್ರಾಯ.

ಇತಿ ಸರ್ವೈಃ ಸಮಾಧೇಯಂ ತತಃ ಪ್ರತ್ಯಕ್ಷದರ್ಶನೇ ।
ದೋಷಾದಸನ್ನಿಕೃಷ್ಟಸ್ಯ ಭಾನಂ ಕೋ ದೂಷಯೇದ್ ಬುಧಃ ॥ ೮೨ ॥

**ಶಬ್ದಾದಸನ್ನಿಕೃಷ್ಟಸ್ಯ ಶಶಶೃಂಗಸ್ಯ ಧೀರ್ಯಥಾ ।**
**ಅಕ್ಷಾದಸನ್ನಿಕೃಷ್ಟಸ್ಯ ಶುಕ್ತಿರೂಪಸ್ಯ ಧೀಸ್ತಥಾ ॥ ೮೨೮ ॥**

**ಅರ್ಥ**-ಇತಿ= ಈ ರೀತಿಯಾಗಿ, ಸರ್ವೈಃ= ಎಲ್ಲರಿಂದಲೂ, ಸಮಾಧೇಯಂ= ಸಮಾಧಾನವು ಹೇಳಲ್ಪಡಬೇಕು, ತತಃ= ಆದ್ದರಿಂದ, ಪ್ರತ್ಯಕ್ಷದರ್ಶನೇ= ಅಪರೋಕ್ಷ ಪ್ರತೀತಿಯಲ್ಲಿ, ದೋಷಾತ್= ದೋಷದಿಂದ, ಅಸನ್ನಿಕೃಷ್ಟಸ್ಯ ಭಾನಂ= ಸನ್ನಿಕರ್ಷರಹಿತವಾದ ವಸ್ತುವಿನ ಭಾನವನ್ನು, ಕೋ ಬುಧಃ= ಯಾವ ವಿವೇಕಿಯಾದವನು, ದೂಷಯೇತ್= ದೂಷಿಸುತ್ತಾನೆ? ಅಸನ್ನಿಕೃಷ್ಟಸ್ಯ= ಸನ್ನಿಕರ್ಷರಹಿತವಾದ, ಶಶಶೃಂಗಸ್ಯ= ಶಶಶೃಂಗದ, ಧೀಃ= ಪ್ರತೀತಿಯು, ಶಬ್ದಾತ್= ಶಬ್ದದಿಂದ, ಯಥಾ= ಹೇಗೆ ಉಂಟಾಗುತ್ತದೆಯೋ, ತಥಾ= ಆದರಂತೆ, ಅಸನ್ನಿಕೃಷ್ಟಸ್ಯ= ಸನ್ನಿಕರ್ಷರಹಿತವಾದ, ಶುಕ್ತಿರೂಪ್ಯಸ್ಯ= ಶುಕ್ತಿರೂಪ್ಯದ, ಧೀಃ= ಪ್ರತೀತಿಯು, ಅಕ್ಷಾತ್= ಚಕ್ಷುಸ್ಸಿನಿಂದ, ತಥಾ= ಹಾಗೆ ಉಂಟಾಗುತ್ತದೆ.

**ಅನುವಾದ**- ಹೀಗೆಯೇ, ಎಲ್ಲರೂ ಸಮಾಧಾನವನ್ನು ಹೇಳಬೇಕು. ಆದ್ದರಿಂದ ಪ್ರತ್ಯಕ್ಷ ಪ್ರತೀತಿಯಲ್ಲಿ ದೋಷನಿಮಿತ್ತದಿಂದ ಸನ್ನಿಕರ್ಷರಹಿತವಾದ ವಸ್ತುವಿನ ಭಾನವನ್ನು ಯಾವ ವಿವೇಕಿಯಾದವನು ದೂಷಿಸುತ್ತಾನೆ? ಶಬ್ದದಿಂದ ಸನ್ನಿಕರ್ಷರಹಿತವಾದ ಶಶಶೃಂಗದ ಜ್ಞಾನವು ಹೇಗೆ ಉಂಟಾಗುತ್ತದೆಯೋ, ಹಾಗೆಯೇ ಚಕ್ಷುರಿಂದ್ರಿಯದಿಂದ ಸನ್ನಿಕರ್ಷರಹಿತವಾದ ಶುಕ್ತಿರೂಪ್ಯದ ಪ್ರತೀತಿಯು ಉಂಟಾಗುತ್ತದೆ.

**ಭಾವವಿಲಾಸಿನೀ** – ಸರ್ವೈಃ ಶಬ್ದಾತ್ ಶಶವಿಷಾಣಜ್ಞಾನಮಂಗೀಕುರ್ವದ್ಭಿಃ । ತತಃ ಪರೋಕ್ಷಜ್ಞಾನೇಽಸನ್ನಿಕೃಷ್ಟ ಕರಣೇನ ಜ್ಞಾನಜನನಾಂಗೀಕಾರಾತ್ । ಏಕತ್ರ ನಿರ್ಣೀತಃ ಶಾಸ್ತ್ರಾರ್ಥೋಽಪರತ್ರಾಪೀತಿ ನ್ಯಾಯಾದಿತಿ ಭಾವಃ ॥ ೮೨೭-೮೨೮ ॥

**ವಿವರಣೆ**- ಶಶವಿಷಾಣ ಜ್ಞಾನವನ್ನು ಅಂಗೀಕಾರ ಮಾಡುವವರೆಲ್ಲರೂ ಹೀಗೆಯೇ ಅಸನ್ನಿಕೃಷ್ಟವಾದ ಶಶವಿಷಾಣದ ಜ್ಞಾನವನ್ನು ಉಪಪಾದನೆ ಮಾಡಬೇಕು. ಒಂದು ಕಡೆ ನಿರ್ಣೀತವಾದ ಶಾಸ್ತ್ರವೇ ಇನ್ನೊಂದು ಕಡೆ ಆಗುತ್ತದೆ ಎಂಬ ನ್ಯಾಯದಿಂದ ಶುಕ್ತಿರಜತ ಸ್ಥಳದಲ್ಲಿಯೂ ಅದೇ ನ್ಯಾಯವನ್ನು ಅನುಸರಿಸಿದರೆ ಅಸತ್ತಾದ ವಸ್ತುವಿಗೂ ಅಪರೋಕ್ಷ ಪ್ರತೀತಿಯು ಸಿದ್ಧವಾಗುತ್ತದೆ.

**ಪರೋಕ್ಷಧೀಃ ಪರೀಣಾಮಂ ಯಥಾ ನಾಪೇಕ್ಷತೇ ತವ ।**
**ಅಪರೋಕ್ಷಾಪಿ ಧೀಸ್ತದ್ವತ್ ತಂ ವ್ಯರ್ಥಂ ಕಿಮಪೇಕ್ಷತೇ ॥ ೮೨೯ ॥**

**ಅರ್ಥ**-ಪರೋಕ್ಷಧೀಃ= ಪರೋಕ್ಷ ಜ್ಞಾನವು, ತವ= ನಿನಗೆ, ಪರೀಣಾಮಂ= ಪರಿಣಾಮವನ್ನು, ಯಥಾ ನಾಪೇಕ್ಷತೇ= ಹೇಗೆ ಅಪೇಕ್ಷಿಸುವುದಿಲ್ಲವೋ, ತದ್ವತ್= ಅದರಂತೆ, ಅಪರೋಕ್ಷಧೀರಪಿ= ಅಪರೋಕ್ಷಪ್ರತೀತಿಯೂ ಕೂಡ, ವ್ಯರ್ಥಂ= ವ್ಯರ್ಥವಾದ, ತಂ= ಆ ಪರಿಣಾಮವನ್ನು, ಕಿಂ ಅಪೇಕ್ಷತೇ= ಏತಕ್ಕೆ ಅಪೇಕ್ಷಿಸುತ್ತದೆ?

**ಅನುವಾದ**- ಪರೋಕ್ಷಪ್ರತೀತಿಯು ನಿನ್ನ ಪರಿಣಾಮವನ್ನು ಹೇಗೆ ಅಪೇಕ್ಷಿಸುವುದಿಲ್ಲವೋ, ಅಪರೋಕ್ಷ ಪ್ರತೀತಿಯೂ ಕೂಡ ಅದರಂತೆ ವ್ಯರ್ಥವಾದ ಪರಿಣಾಮವನ್ನು ಏಕೆ ಅಪೇಕ್ಷಿಸುತ್ತದೆ.

**ಭಾವವಿಲಾಸಿನೀ** – ತಂ ಪರಿಣಾಮಮ್ ॥ ೮೨೯ ॥

**ವಿವರಣೆ**- ಶಶವಿಷಾಣದ ಪರೋಕ್ಷಪ್ರತೀತಿಯ ಸ್ಥಳದಲ್ಲಿ ಪರರು ಪರಿಣಾಮವನ್ನೇನೂ ಒಪ್ಪುವುದಿಲ್ಲ. ಅದರಂತೆ ಅಪರೋಕ್ಷ ಪ್ರತೀತಿಯ ಸ್ಥಳದಲ್ಲಿಯೂ ಪರಿಣಾಮವು ಬೇಡ. ಅಲ್ಲಿ ಪ್ರತೀತಿ ಉಂಟಾದಂತೆ ಇಲ್ಲಿಯೂ ಪ್ರತೀತಿಯು ಉಂಟಾಗಲಿ ಎಂದು ಅಭಿಪ್ರಾಯ.

**ಜ್ಞಾನಸ್ಯ ಸನ್ನಿಕರ್ಷತ್ವಕಥಾಪ್ಯತ್ರ ವೃಥೈವ ತತ್ ।**
**ದೋಷೇ ಸತಿ ತು ಕಿಂ ತೇನ ದೋಷಾಭಾವೇಽಪಿ ಕಿಂ ತತಃ ॥ ೮೩೦ ॥**

**ಅರ್ಥ**-ಅತ್ರ= ಅಸನ್ನಿಕೃಷ್ಟ ವಸ್ತುವಿನ ಜ್ಞಾನದ ವಿಷಯದಲ್ಲಿ, ಜ್ಞಾನಸ್ಯ ಸನ್ನಿಕರ್ಷತ್ವಕಥಾಪಿ= ಜ್ಞಾನದ ಸನ್ನಿಕರ್ಷತ್ವರೂಪವಾದ ವಾರ್ತೆಯು, ತತ್= ಆ ಕಾರಣದಿಂದ, ವೃಥೈವ= ವ್ಯರ್ಥವೇ ಆಗುತ್ತದೆ, ದೋಷೇ ಸತಿ= ದೋಷವಿದ್ದರೆ, ತೇನ= ಆ ಜ್ಞಾನರೂಪವಾದ ಸನ್ನಿಕರ್ಷದಿಂದ, ಕಿಂ= ಏನು ಪ್ರಯೋಜನ? ದೋಷಾಭಾವೇಪಿ= ದೋಷವು ಇಲ್ಲದಿದ್ದರೂ ಕೂಡ, ತತಃ= ಆ ಜ್ಞಾನರೂಪ ಸನ್ನಿಕರ್ಷದಿಂದ, ಕಿಂ= ಏನು ಪ್ರಯೋಜನ?

**ಅನುವಾದ**- ಅಸನ್ನಿಕೃಷ್ಟ ಅರ್ಥಜ್ಞಾನದ ಸ್ಥಳದಲ್ಲಿ ಜ್ಞಾನರೂಪವಾದ ಸನ್ನಿಕರ್ಷವನ್ನು ಅಂಗೀಕರಿಸುವ ನಿನ್ನ ಕಥೆಯು ವ್ಯರ್ಥವಾದುದೇ. ದೋಷವು ಇರುವಾಗ ಅಂತಹ ಸನ್ನಿಕರ್ಷದಿಂದ ಏನು ಪ್ರಯೋಜನ? ದೋಷವು ಇಲ್ಲದಿದ್ದರೂ ಅಂತಹ ಸನ್ನಿಕರ್ಷದಿಂದ ಏನು ಪ್ರಯೋಜನ?

**ಭಾವವಿಲಾಸಿನೀ** – ತತ್ ತಸ್ಮಾತ್ ದೋಷವಶಾದಸನ್ನಿಕೃಷ್ಟಸ್ಯೈವ ಶಾಬ್ದಜ್ಞಾನಜನಕತ್ವದರ್ಶನಾತ್। ತೇನ ಜ್ಞಾನಾಖ್ಯಸನ್ನಿಕರ್ಷೇಣ । ದಂಡಜ್ಞಾನಸದ್ಭಾವೇಪಿ ದಂಡಸನ್ನಿಕರ್ಷಾಭಾವದಶಾಯಾಂ ದಂಡೀತಿ ವಿಶಿಷ್ಟಜ್ಞಾನಾದರ್ಶನಾತ್ ವಿಶೇಷಣಸನ್ನಿಕರ್ಷ ಏವ ಜ್ಞಾನಜನಕೋ ನ ಜ್ಞಾನಮಾತ್ರಮ್ । ದೋಷವಶಾದಸನ್ನಿಕೃಷ್ಟಸ್ಯೈವ ವಿಶೇಷಣಸ್ಯ ಭ್ರಮೇ ವಿಶಿಷ್ಟಜ್ಞಾನಂ ಚೇತ್ಕಿಂ ಜ್ಞಾನಾಖ್ಯಸನ್ನಿಕರ್ಷೇಣಾಪಿ

ತತ್ರ ಪ್ರಯೋಜನವತ್ । ಮುಖ್ಯಸನ್ನಿಕರ್ಷಂ ವ್ಯರ್ಥೀಕುರ್ವತೋ ದೋಷಸ್ಯ ಪಾರಿಭಾಷಿಕಸನ್ನಿಕರ್ಷವ್ಯರ್ಥೀಕರಣಂ ಕಿಮು ವಕ್ತವ್ಯಮಿತಿ ಭಾವಃ ॥ ೮೩೦ ॥

**ವಿವರಣೆ-** ತತ್ ಎಂದರೆ ದೋಷವಶದಿಂದ ಅಸನ್ನಿಕೃಷ್ಟವಾದ ವಸ್ತುವಿನ ಶಾಬ್ದಪ್ರತೀತಿಯೇ ಉಂಟಾಗುವುದು ಎಂದು ಅರ್ಥ. ದಂಡಜ್ಞಾನವಿದ್ದರೂ ದಂಡಸನ್ನಿಕರ್ಷವು ಇಲ್ಲದಿರುವುದರಿಂದ ದಂಡೀ ಎಂಬ ಜ್ಞಾನವು ಉಂಟಾಗುವುದಿಲ್ಲ. ಆದ್ದರಿಂದ ವಿಶಿಷ್ಟ ಜ್ಞಾನವನ್ನು ಕುರಿತು ವಿಶೇಷಣ ಸನ್ನಿಕರ್ಷವು ಕಾರಣವೇ ಹೊರತು ಕೇವಲ ವಿಶೇಷಣ ಜ್ಞಾನವಲ್ಲ. ದೋಷವಿರುವ ಸ್ಥಳದಲ್ಲಿ ವಿಶೇಷಣಸನ್ನಿಕರ್ಷವಿಲ್ಲದಿದ್ದರೂ ದೋಷದ ಸಾಮರ್ಥ್ಯದಿಂದಲೇ ವಿಶಿಷ್ಟಜ್ಞಾನವು ಉಂಟಾಗುವುದಾದರೆ ಜ್ಞಾನರೂಪವಾದ ಸನ್ನಿಕರ್ಷದಿಂದ ಏನು ಪ್ರಯೋಜನ? ಮುಖ್ಯಸನ್ನಿಕರ್ಷವನ್ನೇ ವ್ಯರ್ಥವನ್ನಾಗಿ ಮಾಡುವ ದೋಷವು ಪಾರಿಭಾಷಿಕವಾದ ಜ್ಞಾನರೂಪ ಸನ್ನಿಕರ್ಷವನ್ನು ಸುತರಾಂ ವ್ಯರ್ಥವನ್ನಾಗಿ ಮಾಡುತ್ತದೆ. ದೋಷವೇ ಸನ್ನಿಕರ್ಷ ಕಾರ್ಯವನ್ನು ಮಾಡುವುದರಿಂದ ದೋಷ ಸ್ಥಳದಲ್ಲಿ ಮುಖ್ಯವಾದ ಸನ್ನಿಕರ್ಷವಾಗಲೀ, ಅಥವಾ ಅಮುಖ್ಯವಾದ ಸನ್ನಿಕರ್ಷವಾಗಲೀ ಅಪೇಕ್ಷಿತವಲ್ಲ ಎಂದು ಅಭಿಪ್ರಾಯ.

**ಶುಕ್ತೌ ಸರ್ಪಭ್ರಮಾದೃಷ್ಟೇ ರಜ್ಜೌ ರೂಪ್ಯಭ್ರಮೋಜ್ಝಿತೇಃ ।**
**ಸಾದೃಶ್ಯಸ್ಯ ಪ್ರತೀತ್ಯರ್ಥಂ ರಜತತ್ವಪ್ರಕಾರಿಕಾ ।**
**ಧೀರ್ವಾಚ್ಯಾ ಗೌರವಾತ್ ಸಾಧೀಸ್ತಸ್ಯೈವೇತಿ ನ ಕಲ್ಪ್ಯತೇ ॥ ೮೩೧ ॥**

**ಅರ್ಥ-**ಶುಕ್ತೌ= ಶುಕ್ತಿಯಲ್ಲಿ, ಸರ್ಪಭ್ರಮಾದೃಷ್ಟೇಃ= ಸರ್ಪಭ್ರಮವು ಉಂಟಾಗದಿರುವುದರಿಂದ, ರಜ್ಜೌ= ರಜ್ಜುವಿನಲ್ಲಿ, ರೂಪ್ಯಭ್ರಮೋಜ್ಝಿತೇಃ= ರಜತ ಭ್ರಮವು ಉಂಟಾಗುವುದಿಲ್ಲವಾದ್ದರಿಂದ, ಸಾದೃಶ್ಯಸ್ಯ ಪ್ರತೀತ್ಯರ್ಥಂ= ಸಾದೃಶ್ಯದ ಪ್ರತೀತಿಯ ಸಲುವಾಗಿ, ರಜತತ್ವಪ್ರಕಾರಿಕಾ ಧೀಃ ವಾಚ್ಯಾ= ರಜತತ್ವಪ್ರಕಾರಕಜ್ಞಾನವನ್ನು ಅಂಗೀಕರಿಸಬೇಕು, ಸಾ ಧೀಃ= ಆ ರಜತತತ್ವಪ್ರಕಾರಕಜ್ಞಾನವಾದರೂ, ತಸ್ಯೈವೇತಿ= ಭ್ರಾಂತಿಯಲ್ಲಿ ಪ್ರತೀತಿವಾದ ರಜತದ್ದೇ ಎಂದು, ಗೌರವಾತ್= ಗೌರವ ದೋಷ ಬರುವುದರಿಂದ, ನ ಕಲ್ಪ್ಯತೇ= ಕಲ್ಪಿಸಲ್ಪಡುವುದಿಲ್ಲ.

**ಅನುವಾದ-** **ಶುಕ್ತಿಯಲ್ಲಿ ಸರ್ಪಭ್ರಮವು ಉಂಟಾಗದೇ ಇರುವುದರಿಂದಲೂ ರಜ್ಜುವಿನಲ್ಲಿ ರೂಪ್ಯ ಭ್ರಮವು ಉಂಟಾಗದೇ ಇರುವುದರಿಂದಲೂ ರಜತ ಭ್ರಾಂತಿಯನ್ನು ಕುರಿತು ರಜತತ್ವ ಪ್ರಕಾರಕ ಜ್ಞಾನವು ಅಪೇಕ್ಷಿತವೆಂದು ಅಂಗೀಕರಿಸಬೇಕು. ಆ ರಜತತ್ವ ಜ್ಞಾನವಾದರೂ ಭ್ರಾಂತಿ ಪ್ರತಿಪನ್ನವಾದ ರಜತ ವಿಷಯಕವೇ ಆಗಬೇಕು ಎಂದು ಕಲ್ಪನೆ**

ಮಾಡಿದರೆ ಗೌರವ ದೋಷವು ಬರುವುದರಿಂದ ಹಾಗೆ ಕಲ್ಪನೆ ಮಾಡಬೇಕಾದ ಅಗತ್ಯವಿಲ್ಲ.

**ಭಾವವಿಲಾಸಿನೀ** – ಕುತಸ್ತರ್ಹಿ ಸರ್ವಥಾ ರಜತಮಜಾನತೋ ರಜತಭ್ರಮಾಭಾವ ಇತ್ಯತ ಆಹ – **ಶುಕ್ತಾವಿತಿ** ॥ ಶುಕ್ತಾವೇವ ರಜತಭ್ರಮುದೃಷ್ಟೇಃ ರಜ್ಜ್ವಾವೇವ ಸರ್ಪಭ್ರಮುದೃಷ್ಟೇಶ್ಚಾಧಿಷ್ಠಾನ ಪ್ರಧಾನಸಾದೃಶ್ಯಜ್ಞಾನಮಪಿ ಭ್ರಮಕಾರಣಮ್ । ಸಾದೃಶ್ಯಸ್ಯ ಜ್ಞಾನಾರ್ಥಮೇವಾಪರಸಂಬಂಧಿನೋ ರಜತಸ್ಯ ಜ್ಞಾನಂ ನ ಸನ್ನಿಕರ್ಷಘಟಕತಯೇತಿ ಭಾವಃ । ಗೌರವಾತ್ । ರಜತತ್ವಪ್ರಕಾರಕ-ರಜತಾಂತರಜ್ಞಾನೇ ಸಾದೃಶ್ಯಸ್ಯ ಜ್ಞಾತುಂ ಶಕ್ಯತ್ವಾತ್ । ಭ್ರಮವಿಶೇಷಣೀಭೂತರಜತಸ್ಯೈವ ಜ್ಞಾನಮಪೇಕ್ಷಿತಮಿತ್ಯಂಗೀಕಾರೇ ಕಲ್ಪನಾಗೌರವಾದಿತ್ಯರ್ಥಃ । ತಸ್ಯೈವ ಭ್ರಮವಿಶೇಷಣೀ-ಭೂತರಜತಸ್ಯೈವ ॥ ೮೩೧ ॥

**ವಿವರಣೆ**- ಹಾಗಾದರೆ ಸರ್ವಥಾ ರಜತ ಜ್ಞಾನವಿಲ್ಲದವನಿಗೆ ರಜತ ಭ್ರಮೆಯು ಏಕೆ ಉಂಟಾಗುವುದಿಲ್ಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಭ್ರಮವು ಉಂಟಾಗಬೇಕಾದರೆ ಅಧಿಷ್ಠಾನ ಮತ್ತು ಪ್ರಧಾನದ ಸಾದೃಶ್ಯ ಜ್ಞಾನವು ಭ್ರಮವನ್ನು ಕುರಿತು ಕಾರಣ. ಸಾದೃಶ್ಯ ಜ್ಞಾನಕ್ಕೋಸ್ಕರವಾಗಿಯೇ ಅಪರ ಪದಾರ್ಥವಾದ ರಜತದ ಜ್ಞಾನವು ಅಪೇಕ್ಷಿತವಾಗುತ್ತದೆ. ಹೊರತು ಸನ್ನಿಕರ್ಷವನ್ನು ಉಪಪಾದನೆ ಮಾಡುವುದಕ್ಕಾಗಿ ಅಲ್ಲ. ರಜತಜ್ಞಾನವು ಸಾದೃಶ್ಯ ಜ್ಞಾನವನ್ನು ಮತ್ತು ಸನ್ನಿಕರ್ಷವನ್ನು ಉಪಪಾದನೆ ಮಾಡುತ್ತದೆ ಎಂದು ಅಂಗೀಕರಿಸಿದರೆ ಗೌರವ ದೋಷವು ಬರುತ್ತದೆ. ರಜತತ್ವಪ್ರಕಾರಕಜ್ಞಾನವಾದರೂ ರಜತಾಂತರದಲ್ಲಿ ಉಂಟಾಗಿರುತ್ತದೆ. ಭ್ರಮವಿಶೇಷ್ಯವಾದ ರಜತದಲ್ಲಿಯೇ ಭ್ರಮಕಾರಣವಾದ ರಜತತ್ವಪ್ರಕಾರಕಜ್ಞಾನವನ್ನು ಅಂಗೀಕರಿಸಿದರೆ ಗೌರವ ದೋಷವು ಬರುತ್ತದೆ. ಆದ್ದರಿಂದ ಯಾರಿಗೆ ಸರ್ವಥಾ ರಜತಜ್ಞಾನವಿಲ್ಲವೋ, ಅವನಿಗೆ ಭ್ರಮಕ್ಕೆ ಕಾರಣವಾದ ರಜತತ್ವ ಪ್ರಕಾರಕ ಜ್ಞಾನವೇ ಇಲ್ಲದಿರುವುದರಿಂದ ರಜತಭ್ರಾಂತಿಯು ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

ವಿಶೇಷಣಜ್ಞಾನಜನ್ಯಾ ವಿಶಿಷ್ಟಸ್ಯ ಪ್ರಮಾಪಿ ನ ।
ಅಭಾವತ್ವಪ್ರಕಾರತ್ವ ಪೂರ್ವಾಪೂರ್ವಾರ್ಥದರ್ಶನಾತ್ ॥ ೮೩೨ ॥

**ಅರ್ಥ**-ಅಭಾವತ್ವಪ್ರಕಾರತ್ವ ಪೂರ್ವಾಪೂರ್ವಾರ್ಥದರ್ಶನಾತ್= ಅಭಾವತ್ವ ಪ್ರಕಾರತ್ವ ಮೊದಲಾದ ಅಪೂರ್ವ ಅರ್ಥದ ಜ್ಞಾನವು ಇರುವುದರಿಂದ, ವಿಶಿಷ್ಟಸ್ಯ ಪ್ರಮಾಪಿ= ವಿಶಿಷ್ಟ ವಿಷಯಕ ಪ್ರಮೆಯೂ, ವಿಶೇಷಣಜ್ಞಾನಜನ್ಯಾ ನ= ವಿಶೇಷಣ ಜ್ಞಾನಜನ್ಯವಲ್ಲ.

**ಅನುವಾದ-** ಮೊದಲು ತೋರದಿದ್ದ ಅಭಾವತ್ವ ಮತ್ತು ಪ್ರಕಾರತ್ವ ರೂಪವಾದ ಧರ್ಮಗಳು ವಿಶಿಷ್ಟ ಜ್ಞಾನದಲ್ಲಿ ವಿಷಯವಾಗುವುದರಿಂದ ವಿಶಿಷ್ಟ ಪ್ರಮೆಯೂ ಕೂಡ ವಿಶೇಷಣ ಜ್ಞಾನಜನ್ಯವಲ್ಲ.

**ಭಾವವಿಲಾಸಿನೀ** – ನನು ವಿಶಿಷ್ಟಜ್ಞಾನಂ ವಿಶೇಷಣಜ್ಞಾನಜನ್ಯಂ ವಿಶಿಷ್ಟಜ್ಞಾನತ್ವಾದ್ದಂಡೀತಿ ವಿಶಿಷ್ಟ-ಜ್ಞಾನವದಿತ್ಯನುಮಾನಾತ್ ತಸ್ಯೈವ ಜ್ಞಾನಮಂಗೀಕ್ರಿಯತ ಇತ್ಯತ ಆಹ – **ವಿಶೇಷಣೇತಿ ॥** ಅಭಾವತ್ವಮ್ ಅಭಾವವಿಶಿಷ್ಟಜ್ಞಾನೇ । ಪ್ರಕಾರತ್ವಮ್ ಅನುವ್ಯವಸಾಯರೂಪವಿಶಿಷ್ಟಜ್ಞಾನೇ । ವಿಶೇಷಣೀಭೂತಮಪೀದಂ ದ್ವಯಂ ಪ್ರಾಗಜ್ಞಾತಮೇವ ಜ್ಞಾಯತೇ । ಅತೋ ವಿಶಿಷ್ಟಜ್ಞಾನತ್ವಾದಿತಿ ಹೇತೋರತ್ರೈವ ವ್ಯಭಿಚಾರಃ । ನ ಚ ವಾಚ್ಯಮಭಾವವಿಶಿಷ್ಟಜ್ಞಾನೇ ಅಭಾವತ್ವವಿಶೇಷಣಸ್ಯ ಪ್ರಾಗ್ ಜ್ಞಾನಾಭಾವೇಽಪಿ ಭೂತಲಾದಿ ವಿಶೇಷಣಾಂತರಸ್ಯ ಜ್ಞಾನಮಸ್ತ್ಯೇವ । ಅತೋ ನ ವ್ಯಭಿಚಾರ ಇತಿ। ಅನಯೋಃ ಪ್ರಾಗಜ್ಞಾತಯೋರೇವ ವಿಶೇಷಣತ್ವವತ್ ಸಕಲವಿಶೇಷಣಾನಾಮಪಿ ಪ್ರಾಗಜ್ಞಾತಾನಾಮೇವ ವಿಶೇಷಣತ್ವಸಂಭವಾದಪ್ರಯೋಜಕೋ ಹೇತುಸ್ಸ್ಯಾತ್ । ಭ್ರಮೇಽಪೀದಮಂಶವಿಶೇಷಣೀ-ಭೂತದೇಶಕಾಲಾದಿಜ್ಞಾನಜನ್ಯತ್ವೇನೈವ ವಿಶೇಷಣಜ್ಞಾನಜನ್ಯತ್ವಸಂಭವೇನ ಪ್ರಾಗ್ರಜತಾಖ್ಯವಿಶೇಷಣ-ಜ್ಞಾನಸ್ಯಾನಾವಶ್ಯಕತ್ವಾಪಾತಾಚ್ಚ । ಏವಂ ಚ ನೈತದನುಮಾನಬಲಾತ್ತಸ್ಯೈವ ಪ್ರಾಗ್ ಜ್ಞಾನಂ ಕಲ್ಪನೀಯಮಿತಿ ಭಾವಃ ॥ ೮೩೨ ॥

**ವಿವರಣೆ-** ವಿಶಿಷ್ಟ ಜ್ಞಾನಂ, ವಿಶೇಷಣ ಜ್ಞಾನಜನ್ಯಂ, ವಿಶಿಷ್ಟ ಜ್ಞಾನತ್ವಾತ್, ದಂಡೀತಿ ವಿಶಿಷ್ಟ ಜ್ಞಾನವತ್ ಎಂಬ ಅನುಮಾನದಿಂದ ಭ್ರಾಂತಿಯಲ್ಲಿ ವಿಶೇಷಣವಾದ ರಜತಜ್ಞಾನವನ್ನು ಪೂರ್ವಭಾವಿಯಾಗಿ ಅಂಗೀಕರಿಸುತ್ತೇವೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಅಭಾವ ವಿಶಿಷ್ಟಜ್ಞಾನದಲ್ಲಿ ಅಭಾವತ್ವವು ತೋರುತ್ತದೆ. ಅನುವ್ಯವಸಾಯರೂಪವಾದ ವಿಶಿಷ್ಟಜ್ಞಾನದಲ್ಲಿ ಪ್ರಕಾರಕತ್ವವು ಹೊಸದಾಗಿ ತೋರುತ್ತದೆ. ವಿಶೇಷಣವಾದ ಈ ಅಭಾವತ್ವ ಮತ್ತು ಪ್ರಕಾರಕತ್ವಗಳು ಮೊದಲು ಅಜ್ಞಾತವಾಗಿವೆ. ಆದ್ದರಿಂದ ವಿಶಿಷ್ಟಜ್ಞಾನತ್ವಾತ್ ಎಂಬ ಹೇತುವಿಗೆ ಈ ಸ್ಥಳದಲ್ಲಿಯೇ ವ್ಯಭಿಚಾರವು ಬರುತ್ತದೆ. ಅಭಾವವಿಶಿಷ್ಟಜ್ಞಾನದಲ್ಲಿ ಅಭಾವತ್ವ ರೂಪವಾದ ವಿಶೇಷಣದ ಜ್ಞಾನವು ಪೂರ್ವದಲ್ಲಿ ಇಲ್ಲದಿದ್ದರೂ ಭೂತಲಾದಿ ರೂಪ ವಿಶೇಷಣಾಂತರದ ಜ್ಞಾನವು ಇದ್ದೇ ಇದೆ. ಆದ್ದರಿಂದ ವ್ಯಭಿಚಾರವಿಲ್ಲ ಎಂದು ಹೇಳಲಾಗುವುದಿಲ್ಲ. ಮೊದಲು ಅಜ್ಞಾತವಾದ ಅಭಾವತ್ವ ಮತ್ತು ಪ್ರಕಾರಕತ್ವಗಳು ವಿಶೇಷಣವಾದಂತೆ ಎಲ್ಲ ವಿಶೇಷಣ ಸ್ಥಳದಲ್ಲಿಯೂ ಮೊದಲು ಅಜ್ಞಾತವಾದವುಗಳಿಗೆ ವಿಶೇಷಣತ್ವವು ಕೂಡುವುದರಿಂದ ಹೇತುವು ಅಪ್ರಯೋಜಕವಾಗುತ್ತದೆ. ಭ್ರಮಸ್ಥಳದಲ್ಲಿಯೂ ಸಹ ಇದಮಂಶದಲ್ಲಿ ವಿಶೇಷಣವಾದ ದೇಶಕಾಲಾದಿಗಳ ಜ್ಞಾನಜನ್ಯತ್ವದಿಂದಲೇ ವಿಶೇಷಣಜ್ಞಾನಜನ್ಯತ್ವವನ್ನು ಕೂಡಿಸಬಹುದಾದ್ದರಿಂದ ರಜತರೂಪವಾದ ವಿಶೇಷಣಜ್ಞಾನಕ್ಕೆ ಪೂರ್ವಕ್ಷಣದಲ್ಲಿ ಸತ್ವವು ಅನಾವಶ್ಯಕವೆಂದಾಗುತ್ತದೆ. ಆದ್ದರಿಂದ ಈ ಅನುಮಾನಬಲದಿಂದ

ಭ್ರಮದಲ್ಲಿ ವಿಶೇಷಣವಾಗಿ ತೋರುವ ರಜತಕ್ಕೆ ಭ್ರಮಕ್ಕಿಂತ ಪೂರ್ವದಲ್ಲಿ ಜ್ಞಾನವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಅವಿದ್ಯಮಾನಾರ್ಥಬೋಧಹೇತೌ ದೋಷೇ ಸತಿ ಭ್ರಮೇ ।**
**ಅಪ್ರತೀತಾರ್ಥಬೋಧಾಯ ಕುತೋऽನ್ಯಾನುಸೃತಿರ್ವದ ॥ ೮೩೩ ॥**

**ಅರ್ಥ**-ಭ್ರಮೇ= ಭ್ರಮ ಸ್ಥಳದಲ್ಲಿ, ಅವಿದ್ಯಮಾನಾರ್ಥಬೋಧಹೇತೌ= ಅವಿದ್ಯಮಾನ ಅರ್ಥಜ್ಞಾನಕ್ಕೆ ಕಾರಣವಾದ, ದೋಷೇ ಸತಿ= ದೋಷವು ಇರುತ್ತಿರಲು, ಅಪ್ರತೀತಾರ್ಥ ಬೋಧಾಯ= ಮೊದಲು ಅಜ್ಞಾತವಾದ ಅರ್ಥದ ಜ್ಞಾನಕ್ಕೋಸ್ಕರ, ಅನ್ಯಾನುಸೃತಿಃ= ವಿಶೇಷಣ ಜ್ಞಾನಾನುಸರಣವು, ಕುತಃ= ಏಕೆ ಎಂದು, ವದ= ಹೇಳು.

**ಅನುವಾದ**- ಭ್ರಮಸ್ಥಳದಲ್ಲಿ ಅವಿದ್ಯಮಾನಾರ್ಥ ಬೋಧಕ್ಕೆ ಕಾರಣವಾದ ದೋಷವು ಇರುವಾಗ ಅಪ್ರತೀತಾರ್ಥದ ಜ್ಞಾನಕ್ಕಾಗಿ ವಿಶೇಷಣಜ್ಞಾನವನ್ನು ಏಕೆ ಅನುಸರಿಸುತ್ತೀಯೆ ಎಂದು ಹೇಳು.

**ಭಾವವಿಲಾಸಿನೀ** – ಅವಿದ್ಯಮಾನಾರ್ಥಬೋಧಕದೋಷಸ್ಯಾಪ್ರತೀತಾರ್ಥಬೋಧಕತ್ವಂ ಸುತರಾಂ ಯುಕ್ತಮಿತ್ಯಾಹ – **ಅವಿದ್ಯಮಾನೇತಿ** ॥ ಅನ್ಯಾನುಸೃತಿಃ ವಿಶೇಷಣಜ್ಞಾನಾನು ಸೃತಿಃ ॥ ೮೩೩ ॥

**ಅತ್ರ ಪ್ರತೀತರಜತೇ ಕುತೋ ದೇಶಾಂತರಸ್ಥತಾ ।**
**ಇದಂತಾಮುಲ್ಲಿಖಂತೀ ಸಾ ಪ್ರತೀತಿಃ ಸಹತೇ ನ ತಾಂ ॥ ೮೩೪ ॥**

**ಅರ್ಥ**-ಅತ್ರ ಪ್ರತೀತರಜತೇ= ಪುರೋವೃತ್ತಿ ದೇಶದಲ್ಲಿ ಪ್ರತೀತವಾದ ರಜತಕ್ಕೆ, ದೇಶಾಂತರಸ್ಥತಾ= ದೇಶಾಂತರ ಸ್ಥಿತಿಯು, ಕುತಃ= ಯಾವ ಪ್ರಮಾಣದಿಂದ ಕಲ್ಪಿಸಲ್ಪಡುತ್ತದೆ? ಇದಂತಾ ಮುಲ್ಲಿಖಂತೀ= ಇದಂತ್ವವನ್ನು ಉಲ್ಲೇಖಮಾಡುವ, ಸಾ ಪ್ರತೀತಿಃ= ಆ ರಜತ ಪ್ರತೀತಿಯು, ತಾಂ= ದೇಶಾಂತರ ಸತ್ತ್ವವನ್ನು, ನ ಸಹತೇ= ಸಹಿಸುವುದಿಲ್ಲ.

**ಅನುವಾದ**- ಪುರೋವೃತ್ತಿ ದೇಶದಲ್ಲಿ ಪ್ರತೀತವಾದ ರಜತಕ್ಕೆ ದೇಶಾಂತರದಲ್ಲಿ ಸತ್ತ್ವವನ್ನು ಯಾವ ಪ್ರಮಾಣದಿಂದ ಅಂಗೀಕರಿಸುತ್ತೀಯೆ? ಇದಂತ್ವವನ್ನು ಉಲ್ಲೇಖಮಾಡುವ ಆ ಪ್ರತೀತಿಯು ರಜತದ ದೇಶಾಂತರ ಸತ್ತ್ವವನ್ನು ಸಹಿಸುವುದಿಲ್ಲ.

**ಭಾವವಿಲಾಸಿನೀ** – ನನ್ವಸತಃ ಪ್ರತೀತ್ಯಯೋಗಾತ್ ಅಸ್ಯೈವ ರಜತಸ್ಯಾನ್ಯತ್ರ ಸತ್ತ್ವೇ ವಕ್ತವ್ಯೇ ಬಲಾತ್ತಸ್ಯೈವ ಜ್ಞಾನಮಾಗತಮಿತ್ಯತ ಆಹ – **ಅತ್ರೇತಿ** ॥ ಇದಂತಾಮ್ ಏತದ್ದೇಶಕಾಲವರ್ತಿತಾಮ್ । ಸಾ ಇದಂರಜತಮಿತಿ ಪ್ರತೀತಿಃ । ತಾಂ ಅನ್ಯತ್ರ ಸತ್ತಾಮ್ ॥ ೮೩೪ ॥

**ವಿವರಣೆ-** ಅಸತ್ತಿಗೆ ಪ್ರತೀತಿಯು ಕೂಡುವುದಿಲ್ಲವಾದ್ದರಿಂದ ಈ ರಜತಕ್ಕೆ ಇನ್ನೊಂದು ಕಡೆ ಸತ್ತ್ವವನ್ನು ಹೇಳಬೇಕು. ಆದ್ದರಿಂದ ಇನ್ನೊಂದು ಕಡೆ ಸತ್ತಾದ ಎಂದರೆ ಇನ್ನೊಂದು ಕಡೆ ವಿದ್ಯಮಾನವಾದ ರಜತದ ಜ್ಞಾನವೇ ಇಲ್ಲಿ ಉಂಟಾಗುತ್ತದೆ ಎಂದು ಸಿದ್ಧವಾಗುತ್ತದೆ ಎಂಬ ಶಂಕೆಗೆ ಇಲ್ಲಿ ಪರಿಹಾರವನ್ನು ಹೇಳುತ್ತಾರೆ. ರಜತದಲ್ಲಿ ಇದಂತ್ವವು ಪ್ರತೀತವಾಗುತ್ತದೆ. ಇದಂತ್ವವೆಂದರೆ ಪುರೋದೇಶವೃತ್ತಿತ್ವ. ದೇಶಾಂತರ ಸತ್ತ್ವವನ್ನು ಅಂಗೀಕಾರ ಮಾಡಿದರೆ ಅದು ಪುರೋದೇಶವೃತ್ತಿತ್ವಕ್ಕೆ ವಿರುದ್ಧವಾದುದು. ಪುರೋದೇಶವೃತ್ತಿತ್ವವನ್ನು ವಿಷಯೀಕರಿಸುವ ಪ್ರತೀತಿಯು ಅದಕ್ಕೆ ವಿರುದ್ಧವಾದ ದೇಶಾಂತರಸತ್ತ್ವವನ್ನು ಸಹಿಸುವುದಿಲ್ಲ. ಆದ್ದರಿಂದ ದೇಶಾಂತರಸತ್ತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಘಟೋಽಯಮಿತಿ ದೃಷ್ಟೋಽಪಿ ಘಟೋ ನೋ ಚೇತ್ ಸ್ಥಲಾಂತರಂ ।**
**ಗಮಿಷ್ಯತಿ ತಥಾ ದ್ರಷ್ಟಾ ತ್ವಂ ಚೈನಮನುಯಾಸ್ಯಸಿ ॥ ೮೩ ॥**

**ಅರ್ಥ**-ನೋಚೇತ್= ಹಾಗೆ ಅಂಗೀಕಾರ ಮಾಡದಿದ್ದರೆ, ಘಟೋಽಯಂ ಇತಿ= ಇದು ಘಟವೆಂದು, ದೃಷ್ಟೋಽಪಿ ಘಟಃ= ನೂತನವಾಗಿ ನೋಡಲ್ಪಟ್ಟ ಘಟವೂ ಸಹ, ಸ್ಥಲಾಂತರಂ ಗಮಿಷ್ಯತಿ= ಬೇರೆಯ ಸ್ಥಳಕ್ಕೆ ಹೋಗುತ್ತದೆ, ತಥಾ= ಅದರಂತೆ, ದ್ರಷ್ಟಾ= ದ್ರಷ್ಟೃವಾದ, ತ್ವಂ ಚ= ನೀನೂ ಸಹ, ಏನಂ= ಆ ಘಟವನ್ನು, ಅನುಯಾಸ್ಯಸಿ= ಹಿಂಬಾಲಿಸಿ ಹೋಗುತ್ತೀಯೆ.

**ಅನುವಾದ-** ವಿಶಿಷ್ಟಜ್ಞಾನವನ್ನು ಕುರಿತು ವಿಶೇಷಣ ಜ್ಞಾನವು ಕಾರಣವೆಂದು ಹೇಳಿದರೆ ಅವೆರಡು ಜ್ಞಾನಗಳು ಸಮಾನಾಧಿಕರಣವಾಗಿ ಇರಬೇಕು. ಎಂದರೆ ಒಬ್ಬನೇ ವ್ಯಕ್ತಿಗೆ ಬರಬೇಕು. ಆಗ ಒಂದು ಹೊಸದಾದ ಘಟವನ್ನು ನೋಡಿ ಘಟವದ್ ಭೂತಲಂ ಎಂಬ ಜ್ಞಾನವು ಬಂದಾಗ ಪೂರ್ವದಲ್ಲಿ ಆ ಘಟದ ಜ್ಞಾನವಿಲ್ಲದ ಕಾರಣ ಆ ವಿಶಿಷ್ಟ ಜ್ಞಾನಕ್ಕೋಸ್ಕರವಾಗಿ ಮೊದಲು ವಿಶೇಷಣವಾದ ಘಟದ ಜ್ಞಾನವನ್ನು ಅಂಗೀಕರಿಸಬೇಕು. ಆಗ ಆ ಘಟವನ್ನು ಬೇರೆ ಪ್ರದೇಶಕ್ಕೆ ತೆಗೆದುಕೊಂಡು ಹೋಗಿ ಅದನ್ನು ನೋಡಿ ನೀನು ಘಟಜ್ಞಾನವನ್ನು ಸಂಪಾದಿಸಬೇಕು. ಹೀಗೆ ನಿನ್ನ ಮತರಕ್ಷಣೆಗೋಸ್ಕರ ಪಶ್ಚಾತ್ತನವಾದ ವಿಶೇಷಣಜ್ಞಾನವೂ ಸಹ ಕಾರಣವೆಂದು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಹೀಗೆ ಅನೇಕ ಅಪ್ರಾಮಾಣಿಕವಾದ ಪದಾರ್ಥವನ್ನು ಅಂಗೀಕರಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ** – ಇದಮಿತಿ ಪ್ರತೀತಸ್ಯಾನ್ಯತ್ರ ಸತ್ತಾಂಗೀಕಾರೇ ಬಾಧಕಮಾಹ – **ಘಟ ಇತಿ** ॥ ದೃಷ್ಟಃ ತತ್ರ ತದಾನೀಮೇವ ನೂತನತಯಾ ದೃಷ್ಟಃ । ಸಮಾನಾಧಿಕರಣವಿಶೇಷಣಜ್ಞಾನಸ್ಯೈವ ಕಾರಣತ್ವಾತ್ ದ್ರಷ್ಟೇತ್ಯಾದಿಕಮುಕ್ತಮ್ । ಅಭಿನವಸ್ಯಾಸ್ಯ ಪ್ರಾಗ್ದರ್ಶನಾಭಾವೇನ ಸಮಾನಾಧಿಕರಣಜ್ಞಾನಂ ಕಾರಣಂ ವದತಾಽಯಮೇವ ಘಟೋಽನ್ಯತ್ರ ನೇತವ್ಯಃ । ಸ್ವೇನಾಪಿ ತತ್ರ ಗಂತವ್ಯಮ್। ಸ್ವಮತರಕ್ಷಣಾರ್ಥಂ

ಪಶ್ಚಾತ್ತನಮಪಿ ಕಾರಣಮಂಗೀಕಾರ್ಯಮಿತ್ಯಪ್ರಾಮಾಣಿಕಪರಂಪರಾಽಂಗೀಕಾರ್ಯಾ ಸ್ಯಾದಿತಿ ಭಾವಃ॥ ೮೩೫ ॥

ವಿಶೇಷಣಜ್ಞಾನಜನ್ಯಾ ವಿಶಿಷ್ಟಾರ್ಥಸ್ಯ ಧೀರಿತಿ ।
ಕಿಮಪೂರ್ವಘಟವ್ಯಕ್ತೌ ಘಟತ್ವಾಕಾರಧೀರ್ನ ತೇ ॥ ೮೩೬ ॥

**ಅರ್ಥ**-ವಿಶಿಷ್ಟಾರ್ಥಸ್ಯ ಧೀಃ= ವಿಶಿಷ್ಟಾರ್ಥದ ಜ್ಞಾನವು, ವಿಶೇಷಣಜ್ಞಾನಜನ್ಯಾ= ವಿಶೇಷಣ ಜ್ಞಾನ ಜನ್ಯವಾದುದು, ಇತಿ= ಎಂಬ ಕಾರಣದಿಂದ, ತೇ= ನಿನಗೆ, ಅಪೂರ್ವಘಟವ್ಯಕ್ತೌ= ಮೊದಲು ನೋಡದೆ ಇದ್ದ ಒಂದು ಹೊಸ ಘಟದ ವ್ಯಕ್ತಿಯಲ್ಲಿ, ಘಟತ್ವಾಕಾರಧೀಃ= ಘಟತ್ವಪ್ರಕಾರಕ ಜ್ಞಾನವು, ನ ಕಿಂ= ಉಂಟಾಗುವುದಿಲ್ಲವೇ?

**ಅನುವಾದ**- ವಿಶಿಷ್ಟಜ್ಞಾನವು ವಿಶೇಷಣ ಜ್ಞಾನಜನ್ಯ ಎಂಬ ಕಾರಣದಿಂದ ನಿನಗೆ ಹೊಸದಾಗಿ ನೋಡಿದ ಒಂದು ಘಟವ್ಯಕ್ತಿಯಲ್ಲಿ ಘಟತ್ವಪ್ರಕಾರಕಜ್ಞಾನವು ಉಂಟಾಗುವುದಿಲ್ಲವೇನು?

**ಭಾವವಿಲಾಸಿನೀ** – ಕಿಂಚಾಯಂ ಘಟ ಇತಿ ಜ್ಞಾನೇ ತವಾಪಿ ಮತೇ ಪ್ರಾಗ್ಘಟತ್ವಜ್ಞಾನೇನೈವಾಲಂ ನ ತು ತದ್ಘಟವ್ಯಕ್ತೇರಪಿ ಪ್ರಾಗ್ ಜ್ಞಾನಮಪೇಕ್ಷಿತಮ್ । ಏವಂ ಸತೀದಂ ರಜತಮಿತಿ ಭ್ರಮೇಽಪಿ ತವಾಪಿ ಮತೇ ಪ್ರಾಗ್ರಜತತ್ವಜ್ಞಾನೇನೈವಾಲಂ ತಸ್ಯ ರಜತಸ್ಯೈವ ಪ್ರಾಗ್ ಜ್ಞಾನಂ ನಿರ್ನಿಬಂಧನಮಿತ್ಯಾಹ – **ವಿಶೇಷಣೇತಿ** ॥ ಅಪೂರ್ವಘಟವ್ಯಕ್ತೌ ಪೂರ್ವಾದೃಷ್ಟನೂತನಘಟವ್ಯಕ್ತೌ । ವ್ಯಕ್ತೇಃ ಪ್ರಾಗಜ್ಞಾತತ್ವೇಽಪಿ ವ್ಯಕ್ತ್ಯಂತರೇ ಪ್ರಾಗನುಭೂತಘಟತ್ವಮಾತ್ರಜ್ಞಾನೇನ ಪ್ರಾಗದೃಷ್ಟಕುಂಭಕಾರೇಣಾನೀತನೂತನಘಟವ್ಯಕ್ತೌ ಅಯಂ ಘಟ ಇತಿವಿಶಿಷ್ಟಧೀರ್ಯಥಾಸ್ತಿ ತಥಾ ಭ್ರಮೇಽಪಿ ರಜತತ್ವಜ್ಞಾನಮಾತ್ರೇಣ ಪ್ರಾಗಜ್ಞಾತಸ್ಯೈವ ರಜತಸ್ಯ ವಿಶಿಷ್ಟಧೀಸ್ಸ್ಯಾದಿತಿ ಭಾವಃ । ಅಸತೋ ಜ್ಞಾನಮನುಪಪನ್ನಮಿತಿ ವದತೋಽನ್ಯತ್ರ ಸರ್ವತ್ರಾಸತ್ತ್ವಂ ನಾತ್ರ ಪ್ರತೀತ್ಯನುಪಪತ್ತೌ ಬೀಜಮ್ । ಅನ್ಯತ್ರ ಸರ್ವತ್ರಾಸತೋಽಪಿ ಘಟಸ್ಯ ಪುರತಃ ಸತ್ತ್ವಮಾತ್ರೇಣ ಪ್ರತೀತಿದರ್ಶನಾತ್ । ಕಿಂತು ಪುರತೋಽಸತ್ತ್ವಮೇವ ಬೀಜಮ್ । ಏತದುಪಪಾದಕ-ತಯೈವಾತ್ಯಂತಾಸತ್ತ್ವಸ್ಯಾಪಿ ಬೀಜತ್ವಾಭಿಮಾನಃ ಪರಸ್ಯ । ಅತ್ರಾಸತ್ತ್ವಂ ತ್ವನ್ಯಥಾಖ್ಯಾತಿವಾದಿನಃ ತವಾಪಿ ಸಮಮ್ । ಯದಿ ಚ ಭ್ರಮಜನಕೀಭೂತದೋಷಬಲಾದತ್ರಾಸತ್ತ್ವಾಖ್ಯಂ ಪ್ರತೀತ್ಯ- ನುಪಪತ್ತಿಬೀಜಂ ಧಿಕೃತ್ಯ ಪ್ರತೀತಿಮುಪಪಾದಯಸಿ ತರ್ಹ್ಯಹಮಪಿ ಅಸತ್ತ್ವಪ್ರಯುಕ್ತಂ ಚ ತದ್ಬೀಜಂ ತೇನೈವ ಧಿಕೃತ್ಯ ಪ್ರತೀತಿಮುಪಪಾದಯಾಮಿ । ಅತೋ ಅಸತೋಽಪ್ಯಪರೋಕ್ಷಪ್ರತೀತೌ ನ ಕಾಚಿದನುಪಪತ್ತಿಃ । ಕುತಸ್ತರ್ಹಿ ಶಶಶೃಂಗಸ್ಯಾದರ್ಶನಮಿತಿ ಚೇತ್ ಭ್ರಮ ಕಾರಣೀಭೂತದೋಷಾಭಾವಾದಿತಿ ಬ್ರೂಮಃ । ಸತಿ ಚ ತಸ್ಮಿನ್ ದೂರಾದುಪವಿಷ್ಟಶಶಾಖ್ಯ ಮೃಗಸ್ವರೂಪಮಾತ್ರಮಾಲೋಕಯತೋಽನುಪದಿಷ್ಟ ತತ್ಸ್ವಭಾವ ಮನಾಲೋಕಯತಶ್ಚೋರ್ಧ್ವೀಭೂತತತ್ಕರ್ಣಯೋರನ್ಯಮೃಗ ಶೃಂಗಸಾದೃಶ್ಯಾತ್ ಇಮೇ ಶಶಶೃಂಗೇ ಇತಿ ಭವತ್ಯೇವ ಭ್ರಮಃ ॥ ೮೩೬ ॥

**ವಿವರಣೆ-** ಮತ್ತು ಅಯಂ ಘಟ ಎಂಬ ವಿಶಿಷ್ಟ ಜ್ಞಾನವನ್ನು ಕುರಿತು ನಿನ್ನ ಮತದಲ್ಲಿಯೂ ಸಹ ಮೊದಲು ಘಟತ್ವದ ಜ್ಞಾನವಿದ್ದರೆ ಸಾಕು ಆ ಘಟವ್ಯಕ್ತಿಯ ಜ್ಞಾನವೇ ಮೊದಲು ಇರಬೇಕಾಗಿಲ್ಲ. ಆದ್ದರಿಂದ ಇದಂ ರಜತಂ ಎಂಬ ಭ್ರಮಸ್ಥಳದಲ್ಲಿಯೂ ನಿನ್ನ ಮತದಂತೆ ಮೊದಲು ರಜತತ್ವಜ್ಞಾನವಿದ್ದರೆ ಸಾಕು. ಅದೇ ರಜತದ ಪ್ರಾಕ್‌ಕಾಲೀನಜ್ಞಾನವು ಅನಾವಶ್ಯಕವಾದುದು ಎಂದು ಇಲ್ಲಿ ಹೇಳುತ್ತಾರೆ. ಅಪೂರ್ವಘಟವ್ಯಕ್ತಿಯ ಸ್ಥಳದಲ್ಲಿ ವ್ಯಕ್ತಿಯು ಮೊದಲು ಅಜ್ಞಾತವಾಗಿದ್ದರೂ ಘಟವ್ಯಕ್ತ್ಯಂತರದಲ್ಲಿ ಮೊದಲು ಉಂಟಾದ ಘಟತ್ವಜ್ಞಾನಮಾತ್ರದಿಂದ ಮೊದಲು ನೋಡದೇ ಇದ್ದ ಕುಂಬಾರನಿಂದ ಆಗಲೇ ತರಲ್ಪಟ್ಟ ಹೊಸ ಘಟವ್ಯಕ್ತಿಯಲ್ಲೂ ಅಯಂ ಘಟಃ ಎಂಬ ವಿಶಿಷ್ಟಜ್ಞಾನವು ಹೇಗೆ ಉಂಟಾಗುತ್ತದೆಯೋ, ಹಾಗೆಯೇ ಭ್ರಮಸ್ಥಳದಲ್ಲಿಯೂ ಕೇವಲ ರಜತತ್ವಜ್ಞಾನದಿಂದಲೇ ಮೊದಲು ಅಜ್ಞಾತವಾದ ರಜತದ ವಿಶಿಷ್ಟಜ್ಞಾನವು ಉಂಟಾಗಲಿ ಎಂದು ಅಭಿಪ್ರಾಯ. ಅಸತ್ತಿನ ಜ್ಞಾನವು ಅನುಪಪನ್ನವಾಗುತ್ತದೆ ಎಂದು ಹೇಳುವ ನಿನಗೆ ಪುರೋವೃತ್ತಿ ದೇಶದಲ್ಲಿ ಪ್ರತೀತಿ ಅನುಪಪತ್ತಿಯನ್ನು ಕುರಿತು ಅನ್ಯತ್ರಸರ್ವತ್ವ ಅಸತ್ತ್ವವು ಪ್ರಯೋಜಕವಲ್ಲ. ಏಕೆಂದರೆ ಅನ್ಯತ್ರ ಸರ್ವತ್ರ ಅವಿದ್ಯಮಾನವಾದ ಘಟವು ಪುರೋವೃತ್ತಿದೇಶದಲ್ಲಿ ಸಂಬಂಧವಿರುವ ಕಾರಣದಿಂದ ಪ್ರತೀತವಾಗುತ್ತದೆ. ಆದ್ದರಿಂದ ಪ್ರತೀತ್ಯನುಪಪತ್ತಿಯನ್ನು ಕುರಿತು ಪುರೋವೃತ್ತಿದೇಶದಲ್ಲಿ ಅಸತ್ವವೇ ಪ್ರಯೋಜಕವೆಂದು ಹೇಳಬೇಕು. ಪುರೋವೃತ್ತಿ ದೇಶದಲ್ಲಿ ಅಸತ್ವವನ್ನು ಉಪಪಾದನೆ ಮಾಡುವುದಕ್ಕಾಗಿಯೇ ನೀನು ಅತ್ಯಂತಾಸತ್ವವು ಪ್ರತೀತ್ಯನುಪಪತ್ತಿ ಪ್ರಯೋಜಕವೆಂದು ಹೇಳುತ್ತೀಯೆ. ಪುರೋವೃತ್ತಿದೇಶದಲ್ಲಿ ಅಸತ್ವವಾದರೂ ಅನ್ಯಥಾ ಖ್ಯಾತಿಯನ್ನು ಅಂಗೀಕರಿಸುವ ನಿನಗೂ ಸಮ್ಮತವಾದುದು. ಒಂದು ಪಕ್ಷ ಭ್ರಮಜನಕವಾದ ದೋಷದ ಬಲದಿಂದ ಪ್ರತೀತ್ಯನುಪಪತ್ತಿ ಬೀಜವಾದ ಪುರೋವೃತ್ತಿ ದೇಶದಲ್ಲಿ ಅಸತ್ವವನ್ನು ತಿರಸ್ಕರಿಸಿ ನೀನು ಪ್ರತೀತಿಯನ್ನು ಉಪಪಾದನೆ ಮಾಡುವುದಾದರೆ ನಾನೂ ಸಹ ಅಸತ್ವಪ್ರಯುಕ್ತವಾದ ಪ್ರತೀತ್ಯನುಪಪತ್ತಿ ಬೀಜವನ್ನು ದೋಷದ ಬಲದಿಂದಲೇ ತಿರಸ್ಕರಿಸಿ ಪ್ರತೀತಿಯನ್ನು ಉಪಪಾದನೆ ಮಾಡುತ್ತೇನೆ. ಆದ್ದರಿಂದ ಅಸತ್ತಿನ ಅಪರೋಕ್ಷ ಪ್ರತೀತಿ ಉಂಟಾಗಲು ಯಾವ ಅನುಪಪತ್ತಿಯೂ ಇಲ್ಲ. ಹಾಗಾದರೆ ಶಶಶೃಂಗಕ್ಕೆ ಏಕೆ ಅಪರೋಕ್ಷ ಪ್ರತೀತಿಯಿಲ್ಲ ಎಂಬ ಪ್ರಶ್ನೆಗೆ ಭ್ರಮಕ್ಕೆ ಕಾರಣವಾದ ದೋಷವಿಲ್ಲದಿರುವುದರಿಂದ ಎಂದೇ ಉತ್ತರವನ್ನು ಹೇಳುತ್ತೇವೆ. ದೋಷವಿದ್ದರೆ ಮಾತ್ರ ಶಶಸ್ವರೂಪವನ್ನು ಉಪದೇಶದಿಂದ ತಿಳಿಯದಿದ್ದವನಿಗೆ ದೂರದಲ್ಲಿ ಕುಳಿತಿರುವ ಶಶವನ್ನು ನೋಡಿ ಶೃಂಗಗಳಂತೆ ಕಾಣುವ ಅದರ ಕಿವಿಗಳನ್ನು ನೋಡಿ ಇವು ಶಶಶೃಂಗಗಳು ಎಂಬ ಭ್ರಾಂತಿಯು ಬಂದೇ ಬರುತ್ತದೆ ಎಂದು ಅಭಿಪ್ರಾಯ.

ಯಥೈಕಸ್ಯಾಂ ಘಟವ್ಯಕ್ತೌ ಘಟತ್ವಾಕಾರಧೀಬಲಾತ್ ।
ಪೂರ್ವಾದೃಷ್ಟಘಟವ್ಯಕ್ತಿಶತಕೇಪಿ ವಿಶಿಷ್ಟಧೀಃ ।
ಪ್ರಾಗ್ದೃಷ್ಟಘಟಭೂನಿಷ್ಠಾಸ್ತೇ ಸರ್ವೇ ಕಿಂ ಘಟಾಸ್ತವ ॥ ೮೩೭ ॥

**ಅರ್ಥ**-ಯಥಾ= ಹೇಗೆ, ಏಕಸ್ಯಾಂ ಘಟವ್ಯಕ್ತೌ= ಒಂದು ಘಟವ್ಯಕ್ತಿಯಲ್ಲಿ, ಘಟತ್ವಾಕಾರಧೀ ಬಲಾತ್= ಉಂಟಾದ ಘಟತ್ವಪ್ರಕಾರಕ ಜ್ಞಾನಸಾಮರ್ಥ್ಯದಿಂದ, ಪೂರ್ವಾದೃಷ್ಟಘಟವ್ಯಕ್ತಿ ಶತಕೇಪಿ= ಮೊದಲು ನೋಡದಿದ್ದ ನೂರು ಘಟವ್ಯಕ್ತಿಗಳಲ್ಲಿಯೂ, ವಿಶಿಷ್ಟಧೀಃ= ವಿಶಿಷ್ಟ ಜ್ಞಾನವು ಉಂಟಾಗುವುದಷ್ಟೇ, ತೇ ಸರ್ವೇ ಘಟಾಃ= ಆ ಎಲ್ಲ ಘಟಗಳೂ, ತವ= ನಿನ್ನ ರೀತಿಯಲ್ಲಿ, ಪ್ರಾಗ್ದೃಷ್ಟಘಟಭೂನಿಷ್ಠಾಃ ಕಿಂ= ಮೊದಲು ನೋಡಿದ ಘಟದ ಭೂಮಿಯಲ್ಲಿಯೇ ಇದ್ದವುಗಳಾಗಿವೆಯೇ?

**ಅನುವಾದ**- ಮೊದಲು ಒಂದು ಘಟವ್ಯಕ್ತಿಯಲ್ಲಿ ಘಟತ್ವಪ್ರಕಾರಕ ಜ್ಞಾನವುಂಟಾದಾಗ ಆ ಜ್ಞಾನದ ಸಾಮರ್ಥ್ಯದಿಂದ ಮೊದಲು ನೋಡದಿದ್ದ ನೂರು ಘಟವ್ಯಕ್ತಿಗಳಲ್ಲಿಯೂ ಘಟತ್ವ ಪ್ರಕಾರಕ ಜ್ಞಾನರೂಪವಾದ ವಿಶಿಷ್ಟಜ್ಞಾನವು ಉಂಟಾಗುತ್ತದೆ. ಆ ಎಲ್ಲ ಘಟಗಳು ನಿನ್ನ ರೀತಿಯಲ್ಲಿ ಮೊದಲು ನೋಡಿದ ಘಟಭೂಮಿಯಲ್ಲಿಯೇ ಇದ್ದವುಗಳೇನು?

**ಭಾವವಿಲಾಸಿನೀ** – ಕಿಮಪೂರ್ವೇತ್ಯಾದಿನೋಕ್ತಂ ಪ್ರಮೇಯಂ ಪ್ರಪಂಚಯತಿ ॥ **ಯಥೇತಿ** ॥ ತೇ ಉಪರ್ಯುಪರಿ ದೃಶ್ಯಮಾನಾಃ ಸರ್ವೇ ಘಟಾಃ, ಪ್ರಾಗ್ದೃಷ್ಟಘಟಭೂನಿಷ್ಠಾಃ ಕಿಮಿತಿ ಸಂಬಂಧಃ। ಯೇನ ತೇಷಾಮಪಿ ತದೈವ ಜ್ಞಾನಂ ಸ್ಯಾತ್ । ಅತಃ ಏಕಘಟೇ ಘಟತ್ವಪ್ರಕಾರಕಧೀ-ಬಲಾದೇವೋಪರ್ಯುಪರಿದೃಶ್ಯಮಾನಘಟಶತಕೇಽಪಿ ಪ್ರಾಗಜ್ಞಾತ ಏವ ವಿಶಿಷ್ಟಧೀರಿತಿ ಭಾವಃ॥೮೩೭॥

ಯದಿ ಸಾಮಾನ್ಯತೋ ಜ್ಞಾತಾ ಸರ್ವಾ ವ್ಯಕ್ತಿಸ್ತದಾ ತವ ।
ವಿಶೇಷ್ಯಜ್ಞಾನಜನ್ಯತ್ವಮಪಿತರ್ಹ್ಯಾಗತಂ ಬಲಾತ್ ॥ ೮೩೮ ॥

**ಅರ್ಥ**-ಯದಿ= ಒಂದು ಪಕ್ಷ, ತದಾ= ಆ ಒಂದು ಘಟವ್ಯಕ್ತಿಯ ಜ್ಞಾನವು ಬಂದಾಗ, ತವ= ನಿನ್ನಂತೆ, ಸರ್ವಾಃ= ಎಲ್ಲ ಘಟವ್ಯಕ್ತಿಗಳೂ, ಸಾಮಾನ್ಯತೋ ಜ್ಞಾತಾಃ= ಸಾಮಾನ್ಯವಾಗಿ ಜ್ಞಾತವಾಗಿವೆ ಎಂದು ಹೇಳುವುದಾದರೆ, ತರ್ಹಿ= ಆಗ, ಬಲಾತ್= ಅದೇ ನ್ಯಾಯದಿಂದ, ವಿಶೇಷ್ಯಜ್ಞಾನಜನ್ಯತ್ವಮಪಿ= ವಿಶಿಷ್ಟಜ್ಞಾನಕ್ಕೆ ವಿಶೇಷಜ್ಞಾನಜನ್ಯತ್ವವೂ ಕೂಡ, ಆಗತಂ= ಪ್ರಾಪ್ತವಾಯಿತು.

**ಅನುವಾದ**- ಒಂದು ಘಟವ್ಯಕ್ತಿಯ ಜ್ಞಾನವು ಬಂದಾಗ ಸಾಮಾನ್ಯವಾಗಿ ಎಲ್ಲ ಘಟವ್ಯಕ್ತಿಗಳ ಜ್ಞಾನವು ಬಂದಿರುತ್ತದೆ ಎಂದು ಅಂಗೀಕರಿಸುವುದಾದರೆ ಆಗ ಅದೇ ನ್ಯಾಯದಿಂದ ವಿಶಿಷ್ಟ ಜ್ಞಾನಕ್ಕೆ ವಿಶೇಷ್ಯ ಜ್ಞಾನಜನ್ಯತ್ವವೂ ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ** – ತದಾ ಪ್ರಾಚೀನಘಟದರ್ಶನಸಮಯೇ । ತರ್ಹಿ ವಿಶೇಷಣೀಭೂತ ಘಟತ್ವಸ್ಯೇವ ವಿಶೇಷ್ಯಘಟಸ್ಯಾಪಿ ಪ್ರಾಗ್ದರ್ಶನಾವಶ್ಯಂಭಾವೇ । ಬಲಾದ್ಯುಕ್ತಿಬಲಾತ್ ॥೮೩೮॥

**ವಿವರಣೆ-** ಮೊದಲನೇ ಘಟವ್ಯಕ್ತಿಯ ಜ್ಞಾನ ಬಂದಾಗ ನೂರು ಘಟವ್ಯಕ್ತಿಗಳ ಜ್ಞಾನವು ಬಂದಿದೆ. ಆದ್ದರಿಂದ ನೂರು ಘಟವ್ಯಕ್ತಿಯ ವಿಶಿಷ್ಟ ಜ್ಞಾನವು ಬರುವಾಗ ವಿಶೇಷಣ ಭೂತವಾದ ಘಟಗಳ ಜ್ಞಾನವು ಮೊದಲೇ ಇರುವಾಗ ಯಾವ ಅನುಪಪತ್ತಿಯೂ ಇರುವುದಿಲ್ಲ ಎಂದು ಹೇಳುವುದಾದರೆ, ಆಗ ವಿಶಿಷ್ಟ ಜ್ಞಾನವು ವಿಶೇಷ್ಯಜ್ಞಾನ ಜನ್ಯ ಎಂಬ ನಿಯಮವನ್ನು ಅದೇ ನ್ಯಾಯದಿಂದ ಒಪ್ಪಬೇಕಾಗುತ್ತದೆ. ವಿಶೇಷಣ ಜ್ಞಾನದಂತೆ ವಿಶೇಷ್ಯ ಜ್ಞಾನವೂ ಸಹ ಪೂರ್ವವೃತ್ತಿಯಾಗಿರುವುದರಿಂದ ಒಂದನ್ನು ಮಾತ್ರ ಸ್ವೀಕಾರ ಮಾಡುವುದಕ್ಕೆ ಏನೂ ಕಾರಣವಿಲ್ಲ ಎಂದು ಅಭಿಪ್ರಾಯ. ಹೀಗೆ ಅಂಗೀಕರಿಸಿದರೆ ಏನು ಬಾಧಕವೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

ಏವಂ ಚ ಶುಕ್ತಿವ್ಯಕ್ತಿಶ್ಚ ಸ್ಯಾದಾಪಣಗತಾ ತವ ।
ರಜತತ್ವಪ್ರಕಾರೈವ ತೇನ ಧೀಃ ಪ್ರಾಗಪೇಕ್ಷಿತಾ ॥ ೮೩೯ ॥

**ಅರ್ಥ-**ಏವಂ ಚ= ಹಾಗೆ ಅಂಗೀಕರಿಸಿದ ಪಕ್ಷದಲ್ಲಿ, ತವ= ನಿನ್ನ ರೀತಿಯಲ್ಲಿ, ಶುಕ್ತಿವ್ಯಕ್ತಿಶ್ಚ= ಶುಕ್ತಿವ್ಯಕ್ತಿಯೂ ಕೂಡ, ಆಪಣಗತಾ ಸ್ಯಾತ್= ಆಪಣಸ್ಥವಾಗಬೇಕಾಗುತ್ತದೆ, ತೇನ= ಘಟತ್ವ ವಿಶಿಷ್ಟಜ್ಞಾನ ನಿದರ್ಶನದಿಂದ, ರಜತತ್ವಪ್ರಕಾರೈವ ಧೀಃ= ರಜತತ್ವ ಪ್ರಕಾರಜ್ಞಾನವೇ, ಪ್ರಾಗಪೇಕ್ಷಿತಾ= ಮೊದಲು ಅಪೇಕ್ಷಿತವೆಂದು ಸಿದ್ಧವಾಗುತ್ತದೆ.

**ಅನುವಾದ-** ಹಾಗೆ ಅಂಗೀಕರಿಸಿದರೆ ನಿನ್ನ ರೀತಿಯಿಂದಲೂ ಶುಕ್ತಿವ್ಯಕ್ತಿಯೂ ಆಪಣಸ್ಥವಾಗಬೇಕಾಗುತ್ತದೆ. ಆದ್ದರಿಂದ ಘಟತ್ವವಿಶಿಷ್ಟಜ್ಞಾನದ ದೃಷ್ಟಾಂತದಿಂದ ರಜತತ್ವ ಪ್ರಕಾರಕ ಜ್ಞಾನವೇ ಮೊದಲು ಅಪೇಕ್ಷಿತವೆಂದು ಅಂಗೀಕರಿಸಬೇಕು.

**ಭಾವವಿಲಾಸಿನೀ – ಅಸ್ತು ಕೋ ದೋಷ ಇತ್ಯಹ ಆಹ – ಏವಂ ಚೇತಿ ॥ ಭ್ರಮೇ ಶುಕ್ತೇರೇವ ವಿಶೇಷ್ಯತ್ವಾತ್।** ಸಾಪಿ ಪಾಗ್ದರ್ಶನಾಯ ವಿಶೇಷಣೀಭೂತರಜತವತ್ ಆಪಣಗತಾ ಭವೇದಿತಿ ಭಾವಃ । ತೇನ ಘಟತ್ವವಿಶಿಷ್ಟಜ್ಞಾನನಿದರ್ಶನೇನ ॥ ೮೩೯ ॥

**ವಿವರಣೆ-** ವಿಶಿಷ್ಟಜ್ಞಾನವನ್ನು ಕುರಿತು ವಿಶೇಷ್ಯಜ್ಞಾನವು ಕಾರಣವೆಂದು ಅಂಗೀಕರಿಸಿದರೆ ಭ್ರಮದಲ್ಲಿ ಶುಕ್ತಿಯೇ ವಿಶೇಷ್ಯವಾದುದರಿಂದ ಅದರ ಜ್ಞಾನವು ಮೊದಲು ಅಪೇಕ್ಷಿತವಾದುದರಿಂದ ಆಪಣಸ್ಥ ರಜತವನ್ನು ಅಂಗೀಕಾರ ಮಾಡಿದಂತೆ ಆಪಣಸ್ಥವಾದ ಶುಕ್ತಿಯ ಜ್ಞಾನವನ್ನು ಅಂಗೀಕಾರ ಮಾಡಬೇಕಾದ ಪ್ರಸಂಗವು ಉಂಟಾಗುತ್ತದೆ ಎಂದು ಅಭಿಪ್ರಾಯ.

ಪ್ರಾಗ್ದೃಷ್ಟಘಟಸಾದೃಶ್ಯಾದೇವಾನ್ಯತ್ರ ವಿಶಿಷ್ಟಧೀಃ ।
ತತ್ತದ್ವ್ಯಕ್ತಿಸ್ಥಾ ಧೀಸ್ತು ಘಟಾದಾವಪಿ ನೇಷ್ಯತೇ ॥ ೮೪೦ ॥

**ಅರ್ಥ**-ಪ್ರಾಗ್ದೃಷ್ಟಘಟಸಾದೃಶ್ಯಾದೇವ= ಮೊದಲು ನೋಡಿದ ಘಟದ ಸಾದೃಶ್ಯದಿಂದಲೇ, ಅನ್ಯತ್ರ= ಬೇರೆ ಘಟಗಳಲ್ಲಿ, ವಿಶಿಷ್ಟಧೀಃ= ಘಟತ್ವವಿಶಿಷ್ಟ ಜ್ಞಾನವು ಉಂಟಾಗುತ್ತದೆ, ತತ್ತದ್ವ್ಯಕ್ತಿಸ್ಥತಾ ಧೀಸ್ತು= ತತ್ತದ್ವ್ಯಕ್ತಿ ನಿಷ್ಠತ್ವೇನ ಜ್ಞಾನವಾದರೂ, ಘಟಾದಾವಪಿ= ಘಟದ ಸ್ಥಳಗಳಲ್ಲಿಯೂ, ನೇಷ್ಯತೇ= ಸ್ವೀಕರಿಸಲ್ಪಡುವುದಿಲ್ಲ.

**ಅನುವಾದ**- ಮೊದಲು ನೋಡಿದ ಘಟದ ಸಾದೃಶ್ಯದಿಂದಲೇ ಬೇರೆಯ ಕಡೆ ಘಟತ್ವ ವಿಶಿಷ್ಟಜ್ಞಾನವುಂಟಾಗುತ್ತದೆ. ತತ್ತದ್ವ್ಯಕ್ತಿನಿಷ್ಠತ್ವೇನ ಘಟತ್ವಜ್ಞಾನವಾದರೂ ಘಟಸ್ಥಳದಲ್ಲಿಯೂ ಅಪೇಕ್ಷಿತವಲ್ಲ.

**ಭಾವವಿಲಾಸಿನೀ** – ನನ್ವೇವಂ ತರ್ಹ್ಯೇಕತ್ರ ಘಟತ್ವಜ್ಞಾನಾತ್ ಅಜ್ಞಾತಘಟಾಂತರವ್ಯಕ್ತಿಷ್ವಿವ ಪಟಾದಿ ವ್ಯಕ್ತಿಷ್ವಪಿ ಕುತೋ ನ ತದ್ವಿಶಿಷ್ಟಧೀರಿತ್ಯತ ಆಹ – **ಪ್ರಾಗಿತಿ** ॥ ಸಾದೃಶ್ಯಾತ್ ಪೃಥುಬುಧ್ನೋದರಾಕಾರತ್ವಾಖ್ಯಸಾದೃಶ್ಯಾತ್ ॥ ೬೪೦ ॥

**ವಿವರಣೆ**- ಹಾಗಾದರೆ ಒಂದು ವ್ಯಕ್ತಿಯಲ್ಲಿ ಘಟತ್ವಜ್ಞಾನವು ಬಂದರೆ ಅಜ್ಞಾತ ಘಟಾಂತರ ವ್ಯಕ್ತಿಯಲ್ಲಿಯೂ ಘಟತ್ವಜ್ಞಾನ ಬರುವಂತೆ ಪಟಾದಿ ವ್ಯಕ್ತಿಗಳಲ್ಲಿ ಏಕೆ ಘಟತ್ವ ವಿಶಿಷ್ಟ ಜ್ಞಾನವು ಬರುವುದಿಲ್ಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಘಟತ್ವ ವಿಶಿಷ್ಟ ಜ್ಞಾನವನ್ನು ಕುರಿತು ಪೃಥುಬುಧ್ನೋದರಾಕಾರತ್ವರೂಪವಾದ ಸಾದೃಶ್ಯವು ಪ್ರಯೋಜಕವಾದುದು. ಅದು ಘಟಾಂತರ ವ್ಯಕ್ತಿಗಳಲ್ಲಿ ಇದೆ, ಪಟದಲ್ಲಿ ಇಲ್ಲ. ಆದ್ದರಿಂದ ಪಟದಲ್ಲಿ ಘಟತ್ವವಿಶಿಷ್ಟಜ್ಞಾನವು ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

ಏವಂಚ ರೂಪ್ಯಸಾದೃಶ್ಯಾಚ್ಛುಕ್ತೌ ರೂಪ್ಯತ್ವಧೀರ್ಭವೇತ್ ।
ಅಪೂರ್ವಜ್ಞಾತತದ್ವ್ಯಕ್ತೇಃ ಕುತಃ ಸ್ಯಾದಾಪಣಸ್ಥತಾ ॥ ೮೪೧ ॥

**ಅರ್ಥ**-ಏವಂಚ= ಘಟತ್ವ ವಿಶಿಷ್ಟ ಜ್ಞಾನದಲ್ಲಿಯೂ ಮೊದಲು ನೋಡಿದ ಘಟದ ಸಾದೃಶ್ಯವೇ ಪ್ರಯೋಜಕವಾಗಿ ಸಾಕಾಗುವುದರಿಂದ, ಶುಕ್ತೌ= ಶುಕ್ತಿಯಲ್ಲಿ, ರೂಪ್ಯಸಾದೃಶ್ಯಾತ್= ರೂಪ್ಯಸಾದೃಶ್ಯವಿರುವ ಕಾರಣ, ರೂಪ್ಯತ್ವಧೀಃ= ರೂಪ್ಯತ್ವವಿಶಿಷ್ಟ ಜ್ಞಾನವು, ಭವೇತ್= ಉಂಟಾಗುತ್ತದೆ, ಅಪೂರ್ವಜ್ಞಾತತದ್ವ್ಯಕ್ತೇಃ= ಅಪೂರ್ವವಾಗಿ ಜ್ಞಾತವಾದ ಆ ರೂಪ್ಯವ್ಯಕ್ತಿಗೆ, ಆಪಣಸ್ಥತಾ= ಆಪಣಸ್ಥತ್ವವು, ಕುತಃ ಸ್ಯಾತ್= ಹೇಗೆ ಉಂಟಾಗುತ್ತದೆ?

**ಅನುವಾದ**- ರೂಪ್ಯಸಾದೃಶ್ಯ ಎಂದರೆ ರೂಪ್ಯದಲ್ಲಿರುವ ಶ್ವೇತತ್ವಾದಿ ಸಾದೃಶ್ಯದಿಂದಲೇ ಶುಕ್ತಿಯಲ್ಲಿ ವಿಶಿಷ್ಟಜ್ಞಾನವು ಉಂಟಾಗುತ್ತದೆ. ರೂಪ್ಯತ್ವಪ್ರಕಾರಕ ಪ್ರತೀತಿಯಿಂದ ಸಾದೃಶ್ಯವನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬಹುದು. ಆದ್ದರಿಂದ ರೂಪ್ಯಸಾದೃಶ್ಯದಿಂದ ಶುಕ್ತಿಯಲ್ಲಿಯೇ ರಜತತ್ವ ವಿಶಿಷ್ಟ ಜ್ಞಾನವು ಉಂಟಾಗುತ್ತದೆ ಹೊರತಾಗಿ ರಜ್ಜುವಿನಲ್ಲಿ ಉಂಟಾಗುವುದಿಲ್ಲ.

**ಭಾವವಿಲಾಸಿನೀ** – ಏವಂಚ ಘಟತ್ವವಿಶಿಷ್ಟಪ್ರತೀತಾವಪಿ ಘಟತ್ವಪ್ರಕಾರಕಪ್ರತೀತ್ಯಾ ಪ್ರಾಗ್-ದೃಷ್ಟಘಟಸಾದೃಶ್ಯೇನ ಚ ಪೂರ್ಣತ್ವೇ ಸತಿ । ರೂಪ್ಯಸಾದೃಶ್ಯಾತ್ ಶ್ವೇತತ್ವಾದಿಸಾದೃಶ್ಯಾತ್ । ಇದಂ ಚೋಪಲಕ್ಷಣಮ್ । ರೂಪ್ಯತ್ವಪ್ರಕಾರಕಪ್ರತೀತ್ಯಾ ಚೇತ್ಯಪಿ ದ್ರಷ್ಟವ್ಯಮ್ । ತದ್ವ್ಯಕ್ತೇಃ ಶುಕ್ತೌ ಪ್ರತೀಯಮಾನರಜತವ್ಯಕ್ತೇಃ ॥ ೮೪೧ ॥

ಅನ್ಯತ್ರಾಪ್ಯತಿಸಾದೃಶ್ಯೇ ರೂಪ್ಯಧೀಃ ಸಾ ಪ್ರಮಾ ಭವೇತ್ ।
ಅಲ್ಪಸಾದೃಶ್ಯತೋ ಧೀಶ್ಚೇದ್ ಯಮಯೋರಿವ ಸ ಭ್ರಮಃ ॥ ೮೪೨ ॥

**ಅರ್ಥ**-ಅನ್ಯತ್ರಾಪಿ= ಬೇರೆ ಸ್ಥಳದಲ್ಲಿಯೂ ಕೂಡ, ಅತಿಸಾದೃಶ್ಯೇ= ಬಹಳ ಸಾದೃಶ್ಯವು ಇದ್ದರೆ, ಸಾ ರೂಪ್ಯಧೀಃ= ಆ ರಜತ ಜ್ಞಾನವು, ಪ್ರಮಾ ಭವೇತ್= ಪ್ರಮೆಯೇ ಆಗುತ್ತದೆ, ಯಮಯೋರಿವ= ಅವಳಿ ಮಕ್ಕಳಲ್ಲಿ ಇದ್ದಂತೆ, ಅಲ್ಪಸಾದೃಶ್ಯತಃ= ಅಲ್ಪಸಾದೃಶ್ಯದಿಂದ, ಧೀಶ್ಚೇತ್= ಜ್ಞಾನವುಂಟಾದರೆ, ಸಃ= ಆ ಜ್ಞಾನವು, ಭ್ರಮಃ= ಭ್ರಾಂತಿಯಾಗುತ್ತದೆ.

**ಅನುವಾದ**- ಅಪೂರ್ವ ಘಟಸ್ಥಳ ಮತ್ತು ಶುಕ್ತಿರಜತಸ್ಥಳ ಎರಡು ಕಡೆಗಳಲ್ಲಿಯೂ ಸಾದೃಶ್ಯದಿಂದಲೇ ವಿಶಿಷ್ಟ ಪ್ರತೀತಿ ಉಂಟಾಗುವುದಾದರೆ ಒಂದು ಜ್ಞಾನವು ಭ್ರಮ, ಇನ್ನೊಂದು ಜ್ಞಾನವು ಪ್ರಮೆ ಎಂದು ಹೇಗೆ ಆಗುತ್ತದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಅವಳಿ ಮಕ್ಕಳಲ್ಲಿ ಪರಸ್ಪರವಾಗಿ ಅಲ್ಪಸಾದೃಶ್ಯವಿರುತ್ತದೆ. ಆಗ ಒಬ್ಬನನ್ನು ನೋಡಿ ಇನ್ನೊಬ್ಬನೆಂದು ತಿಳಿದುಕೊಂಡರೆ ಅದು ಭ್ರಮವಾಗುತ್ತದೆ. ಬಹಳ ಸಾದೃಶ್ಯವಿದ್ದರೆ ಅದು ಪ್ರಮೆಯೇ ಆಗುತ್ತದೆ. ಆದ್ದರಿಂದ ಘಟಸ್ಥಳದಲ್ಲಿ ಬಹಳ ಸಾದೃಶ್ಯವು, ಶುಕ್ತಿರಜತ ಸ್ಥಳಗಳಲ್ಲಿ ಅಲ್ಪ ಸಾದೃಶ್ಯವು ಇರುವುದರಿಂದ ಒಂದು ಜ್ಞಾನವು ಪ್ರಮೆಯಾಗುತ್ತದೆ ಮತ್ತು ಇನ್ನೊಂದು ಜ್ಞಾನವು ಭ್ರಮವಾಗುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ** – ನನೂಭಯತ್ರಾಪಿ ಸಾದೃಶ್ಯಮಾತ್ರೇಣ ವಿಶಿಷ್ಟಪ್ರತೀತಾವೇಕತ್ರ ಪ್ರಮಾತ್ವಮಪರತ್ರ ಭ್ರಮತ್ವಂ ಚ ಕಿಂ ನಿಬಂಧನಮಿತ್ಯತ ಆಹ – **ಅನ್ಯತ್ರೇತಿ** ॥ ಅನ್ಯತ್ರ ಪ್ರಾಗದೃಷ್ಟವ್ಯಕ್ತ್ಯಂತರೇ । ಯಮಯೋರಿವ ಯಮೇ ಯಮಾಂತರತ್ವಭ್ರಮ ಇವೇತ್ಯರ್ಥಃ । ಸರ್ವಸಾದೃಶ್ಯೇ ಪ್ರಮಾತ್ವಮಲ್ಪಸಾದೃಶ್ಯೇ ಭ್ರಮತ್ವಮಿತ್ಯರ್ಥಃ ॥ ೮೪೨ ॥

ಪ್ರತ್ಯಭಿಜ್ಞಾಪ್ಯನ್ಯಕಾಲೇ ವಕ್ತಿ ದೇಶಾಂತರೇ ಸ್ಥಿತಿಂ ।
ತದೈವ ತಸ್ಯಾದಿದೂರದೇಶಸ್ಥತ್ವಂ ಕುತೋಽಪತತ್ ॥ ೮೪೩ ॥

**ಅರ್ಥ**-ಪ್ರತ್ಯಭಿಜ್ಞಾಪಿ= ಪ್ರತ್ಯಭಿಜ್ಞವೂ ಕೂಡ, ಅನ್ಯಕಾಲೇ= ಬೇರೆ ಕಾಲದಲ್ಲಿ, ದೇಶಾಂತರೇ ಸ್ಥಿತಿಂ= ಅನ್ಯದೇಶ ಸ್ಥಿತಿಯನ್ನು, ವಕ್ತಿ= ಹೇಳುತ್ತದೆ, ತದೈವ= ಜ್ಞಾನವು ಬರುವಾಗಲೇ, ತಸ್ಯ= ಆ ವಿಷಯಕ್ಕೆ, ಅತಿದೂರದೇಶಸ್ಥತ್ವಂ= ಅತಿದೂರ ದೇಶಸ್ಥಿತಿಯು, ಕುತಃ= ಯಾವ ಪ್ರಮಾಣದಿಂದ, ಆಪತತ್= ಸಿದ್ಧವಾಯಿತು?

**ಅನುವಾದ-** ಪ್ರತ್ಯಭಿಜ್ಞಾವೂ ಕೂಡ ತನ್ನ ವಿಷಯಕ್ಕೆ ಕಾಲಾಂತರದಲ್ಲಿ ದೇಶಾಂತರಸ್ಥಿತಿಯನ್ನು ಹೇಳುತ್ತದೆ. ಜ್ಞಾನವು ಬರುವ ಕಾಲದಲ್ಲಿಯೇ ವಿಷಯಕ್ಕೆ ದೇಶಾಂತರಸ್ಥತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ?

**ಭಾವವಿಲಾಸಿನೀ –** ಕಿಂಚ ಸೋಯಮಿತಿ ದೇಶಾಂತರಸ್ಥತ್ವಮುಲ್ಲಿಖಂತ್ಯಾಪಿ ಪ್ರತ್ಯಭಿಜ್ಞಯಾ ನ ತದೈವ ದೇಶಾಂತರಸ್ಥತ್ವಮಪೇಕ್ಷ್ಯತೇ । ದೇಶಾಂತರಸ್ಥತ್ವಗೋಷ್ಠೀರಹಿತಪ್ರತೀತೌ ಕುತಸ್ತದೈವ ತದಪೇಕ್ಷ್ಯತ ಇತ್ಯಾಹ – **ತದೈವೇತಿ** ॥ ಪ್ರತೀತಿಕಾಲ ಏವ । ತಸ್ಯ ಶುಕ್ತೌ ಪ್ರತೀಯಮಾನರಜತಸ್ಯ । ತಸ್ಮಾದನನುಭವಿಕಮೇತದಿತಿ ಭಾವಃ ॥ ೮೪೩ ॥

**ವಿವರಣೆ-** ಸೋಽಯಂ ಎಂಬ ಪ್ರತ್ಯಭಿಜ್ಞೆಯು ದೇಶಾಂತರಸ್ಥತ್ವವನ್ನು ಉಲ್ಲೇಖ ಮಾಡಿದರೂ ಪ್ರತ್ಯಭಿಜ್ಞೋತ್ಪತ್ತಿ ಸಮಯದಲ್ಲಿ ದೇಶಾಂತರಸ್ಥತ್ವವನ್ನು ಅಪೇಕ್ಷಿಸುವುದಿಲ್ಲ. ಕಾಲಾಂತರದಲ್ಲಿ ದೇಶಾಂತರಸ್ಥತ್ವವನ್ನು ಮಾತ್ರ ಅಪೇಕ್ಷಿಸುತ್ತದೆ. ಶುಕ್ತಿರಜತ ಪ್ರತೀತಿಯಂತೂ ದೇಶಾಂತರಸ್ಥತ್ವವಾರ್ತಾಶೂನ್ಯವಾದುದು. ಅಲ್ಲಿ ಏಕೆ ಪ್ರತೀತಿ ಕಾಲದಲ್ಲಿ ದೇಶಾಂತರಸ್ಥತ್ವವನ್ನು ಅಂಗೀಕರಿಸಬೇಕು? ಅದು ಅನುಭವ ವಿರುದ್ಧವಾದುದು ಎಂದು ಅಭಿಪ್ರಾಯ.

ವಿಶೇಷಣಸ್ಯ ಚ ಜ್ಞಾನಂ ಯದಿ ಸ್ಯಾತ್ ಸವಿಕಲ್ಪಕಂ ।
ಅನವಸ್ಥಾ ತದಾ ಸುಸ್ಥಾ ಯದಿ ತನ್ನಿರ್ವಿಕಲ್ಪಕಂ ॥ ೮೪೪ ॥

ನಾರಿಕೇಲದ್ವೀಪವಾಸೀ ತರ್ಹಿ ಸಾಮಾನ್ಯತೋಽಗ್ನಿದೃಕ್ ।
ದ್ವಿತೀಯಕ್ಷಣ ಏವಾಗ್ನಿವೈಶಿಷ್ಟ್ಯಮಪಿ ಪಶ್ಯತಿ ॥ ೮೪೫ ॥

**ಅರ್ಥ-**ವಿಶೇಷಣಸ್ಯ ಚ ಜ್ಞಾನಂ= ವಿಶೇಷಣ ಜ್ಞಾನವು, ಯದಿ= ಒಂದು ಪಕ್ಷ, ಸವಿಕಲ್ಪಕಂ ಸ್ಯಾತ್= ಸವಿಕಲ್ಪಕವಾದರೆ, ತದಾ= ಆಗ, ಅನವಸ್ಥಾ= ಅನವಸ್ಥೆಯು, ಸುಸ್ಥಾ= ಉಂಟಾಗುತ್ತದೆ, ಯದಿ= ಒಂದು ಪಕ್ಷ, ತತ್= ವಿಶೇಷಣಜ್ಞಾನವು, ನಿರ್ವಿಕಲ್ಪಕಂ= ನಿರ್ವಿಕಲ್ಪಕವೆಂದಾದರೆ, ತರ್ಹಿ= ಆಗ, ನಾರಿಕೇಲದ್ವೀಪವಾಸೀ= ನಾರಿಕೇಲದ್ವೀಪ ವಾಸಿಯಾದವನು, ಸಾಮಾನ್ಯತೋಗ್ನಿದೃಕ್= ನಾಮಜಾತ್ಯಾದಿಸಂಬಂಧ ರಹಿತತಯಾ ಅಗ್ನಿಜ್ಞಾನವುಳ್ಳವನು, ದ್ವಿತೀಯಕ್ಷಣ ಏವ= ಮುಂದಿನ ಕ್ಷಣದಲ್ಲಿಯೇ, ಅಗ್ನಿವೈಶಿಷ್ಟ್ಯಮಪಿ= ಅಗ್ನಿಯ ವೈಶಿಷ್ಟ್ಯವನ್ನೂ ಕೂಡ, ಪಶ್ಯತಿ= ನೋಡಲಿ.

**ಅನುವಾದ-** ಒಂದು ಪಕ್ಷ ವಿಶೇಷಣ ಜ್ಞಾನವು ಸವಿಕಲ್ಪಕವಾದರೆ ಅದೂ ಇನ್ನೊಂದು ಸವಿಕಲ್ಪಕ ವಿಶೇಷಣಜ್ಞಾನಜನ್ಯವೆಂದು ಅನವಸ್ಥಾ ದೋಷವು ಬರುತ್ತದೆ. ವಿಶೇಷಣಜ್ಞಾನವು ನಿರ್ವಿಕಲ್ಪಕವಾದರೆ ನಾರಿಕೇಲದ್ವೀಪವಾಸಿಯಾಗಿ ಮೊದಲನೆಯ ಬಾರಿಗೆ ಸಾಮಾನ್ಯವಾಗಿ ಎಂದರೆ ನಾಮಜಾತ್ಯಾದಿ ಸಂಬಂಧ ರಹಿತತ್ವೇನ ಅಗ್ನಿಯ ಜ್ಞಾನವನ್ನು ಹೊಂದಿದವನು ಮುಂದಿನ ಕ್ಷಣದಲ್ಲಿಯೇ ಅಗ್ನಿ ವೈಶಿಷ್ಟ್ಯವನ್ನೂ ನೋಡಲಿ.

**ಭಾವವಿಲಾಸಿನೀ** – ಕಿಂಚ ವಿಶಿಷ್ಟಜ್ಞಾನೇ ಕಲ್ಪ್ಯಮಾನಂ ವಿಶೇಷಣಜ್ಞಾನಂ ಸವಿಕಲ್ಪಕಂ ನಿರ್ವಿಕಲ್ಪಕಂ ವೇತಿ ವಿಕಲ್ಪ್ಯ ಪಕ್ಷದ್ವಯೇಽಪಿ ದೂಷಣಮಾಹ – **ವಿಶೇಷಣಸ್ಯೇತಿ** ॥ ಅನವಸ್ಥೇತ್ಯುಪಲಕ್ಷಣಮ್। ನಿರ್ವಿಕಲ್ಪಕಾಸಿದ್ಧಿಶ್ಚ ದ್ರಷ್ಟವ್ಯಾ । ತದ್ವಿಶೇಷಣಜ್ಞಾನಮ್ । ಸಾಮಾನ್ಯತಃ ನಾಮಜಾತ್ಯಾದಿಯೋಜನಾರಾಹಿತ್ಯೇನ ವಹ್ನಿವಹ್ನಿತ್ವವಿಷಯಕ ನಿರ್ವಿಕಲ್ಪಕಜ್ಞಾನವಾನಿತಿ ಯಾವತ್ । ಅಗ್ನಿವೈಶಿಷ್ಟ್ಯಂ ಅಯಮಗ್ನಿಮಾನಿತ್ಯಗ್ನಿವೈಶಿಷ್ಟ್ಯಮ್ । ಅಯಮಗ್ನಿರಿತ್ಯಗ್ನಿತ್ವವೈಶಿಷ್ಟ್ಯಂ ಚ । ಅಗ್ನಿನಿರ್ವಿಕಲ್ಪಕಸ್ಯಾಗ್ನಿತ್ವನಿರ್ವಿಕಲ್ಪಕಸ್ಯ ಚ ಸತ್ತ್ವೇನ ನಿರ್ವಿಕಲ್ಪಕರೂಪವಿಶೇಷಣಜ್ಞಾನಸ್ಯ ಸತ್ತ್ವಾತ್ । ಅತೋ ವ್ಯಾವರ್ತಕಜಾತೇರಗ್ನಿತ್ವಜಾತಿರಿಯಮಿತಿ ವಿಶಿಷ್ಯಜ್ಞಾನಾಭಾವಾದೇವ ತತ್ರ ವಿಶಿಷ್ಟಜ್ಞಾನಾಭಾವಃ । ಸ ಚ ವ್ಯಂಜಕಜ್ಞಾನಾಭಾವಾದಿತ್ಯೇವ ವಾಚ್ಯಮ್ । ಏವಂ ಚ ಕಥಂ ವಿಶೇಷಣನಿರ್ವಿಕಲ್ಪಕಾದ್ವಿಶಿಷ್ಟಧೀರಿತಿ ಭಾವಃ ।

ಘಟತ್ವನಿರ್ವಿಕಲ್ಪಕಾದೇವ ಘಟಸವಿಕಲ್ಪಕಂ ವದಂಸ್ತಾರ್ಕಿಕಸ್ತತ್ರಾತಿಪ್ರಸಂಗೇ ದತ್ತೇಽನುಭವಮುಪಲಪ್ಯಾಪಿ ಸ್ಯಾದೇವೇತಿ ವದೇತ್ । ಅತೋ ನಾಲಿಕೇರದ್ವೀಪವಾಸಿಪರ್ಯಂತಂ ಧಾವನಮ್ । ಕಿಂಚ ರೂಪೀತಿ ವಿಶಿಷ್ಟಜ್ಞಾನೇ ವಿಶೇಷಣೀಭೂತರೂಪಸ್ಯೇವ ವಿಶೇಷ್ಯಭೂತಘಟಸ್ಯಾಪಿ ತವ ಮತೇ ಪ್ರಾಜನಿರ್ವಿಕಲ್ಪಕಮಸ್ತಿ । ಜನಕಂ ಚ ನ ಭವತಿ । ತಥಾ ಚ ವಿಶೇಷಣಜ್ಞಾನಜನ್ಯತ್ವಮಾತ್ರಂ ಕುತಃಸಾಧ್ಯತೇ। ಉಭಯಜ್ಞಾನಜನ್ಯತ್ವಮಪಿ ಸಾಧ್ಯತಾಮ್ । ಯದಿ ಚೋಭಯಜ್ಞಾನಜನ್ಯತ್ವಸಾಧನೇ ದೃಷ್ಟಾಂತಾಭಾವಾತ್ ವಿಶೇಷಣಜ್ಞಾನಜನ್ಯತ್ವಮಾತ್ರಸಾಧನೇಽಪಿ ಮದಭಿಲಷಿತನಿರ್ವಿಕಲ್ಪಕಸಿದ್ಧೇರೇತಾವದೇವ ಸಾಧ್ಯತ ಇತಿಮತಂ ತದಾ ಪರೋಽಪಿ ತ್ವನ್ನ್ಯಾಯೇನೈವ ದಂಡೀತಿ ವಿಶಿಷ್ಟಜ್ಞಾನಂ ವಿಶೇಷಣವಿಶೇಷ್ಯಜ್ಞಾನಜನ್ಯಂ ವಿಶಿಷ್ಟಜ್ಞಾನತ್ವಾದ್ರೂಪೀತಿ ವಿಶಿಷ್ಟಜ್ಞಾನವದಿತಿ ಸಾಧಯತಿ ಚೇತ್ ಕಿಮುತ್ತರಮ್ । ದೃಷ್ಟಾಂತೇ ಉಭಯೋಃ ಸಾಧ್ಯಾಸಂಮತಿರುಭಯತ್ರ ಸಮಾ । ಅನುಮಿತಿರ್ವಾ ದೃಷ್ಟಾಂತೋಽಸ್ತು । ಯದಿ ಚ ತತ್ರಾಪಿ ದಂಡದೇವದತ್ತನಿರ್ವಿಕಲ್ಪಕ ಸಂಭವಾದಪಸಿದ್ಧಾಂತಮನಾದೃತ್ಯೇಷ್ಟಾಪತ್ತಿರಿತಿ ಬ್ರೂಷೇ ತದಾ ತಾವತೈವ ಚರಿತಾರ್ಥತ್ವಾತ್ವರಾಭಿಮತದಂಡಸವಿಕಲ್ಪಕಸ್ಯ ಗೌರವಾಜ್ಜನಕತಾ ಪ್ರಸಾಧ್ಯಾಂಗಕಾಪಿ ನ ಸ್ಯಾತ್ । ತ್ವದಭಿಲಷಿತದಂಡನಿರ್ವಿಕಲ್ಪಕಂ ಚ ನ ಪರಸ್ಯಾಭಿಮತಮ್ । ಅತಸ್ತ್ವದನುಮಾನದೃಷ್ಟಾಂತೇ ಪರರೀತ್ಯಾ ಸಾಧ್ಯವೈಕಲ್ಯಂ ಸ್ಯಾತ್ । ಯದಿ ಚ ಪರಸ್ಯ ಪರರೀತ್ಯೈವ ಸಾಧ್ಯಸಿದ್ಧಿಃ ಮಮ ತು ಮದ್ರೀತ್ಯೈವೇತಿ ಸಮಾಧತ್ಸೇ ತದಾ ಪರಃ ಸ್ವರೀತ್ಯಾ ತವ ಪಕ್ಷೀಭೂತರೂಪವಿಶಿಷ್ಟಜ್ಞಾನೇಽಪಿ ದಂಡಸವಿಕಲ್ಪಕಾಂತರವತ್ ರೂಪಸವಿಕಲ್ಪಕಾಂತರೇಣೈವ ತವ ಸಾಧ್ಯಮನ್ಯಥೀಕುರ್ವನ್ನರ್ಥಾಂತರೇಣ ತ್ವಾಂ ನಿಗೃಹ್ಣೀಯಾತ್ ।

ಯದಿಚ ರೂಪೇಂದ್ರಿಯಸನ್ನಿಕರ್ಷೇಣೈವ ರೂಪೀತಿ ವಿಶಿಷ್ಟಜ್ಞಾನಸಂಭವಾತ್ ರೂಪಸವಿಕಲ್ಪಕಾಂತರಮಲ್ಪೀಕುರುಷೇ ತದಾ ತೇನೈವ ತವ ನಿರ್ವಿಕಲ್ಪಕಂ ಪರೋಽಪ್ಯಲ್ಪೀಕುರ್ಯಾತ್। ದೃಷ್ಟಾಂತೇಽಪಿ ದಂಡೇಂದ್ರಿಯಸನ್ನಿಕರ್ಷೇಣೈವ ಸರ್ವಂ ನಿರ್ವಹನ್ಪ್ರಾಗ್ದಂಡಜ್ಞಾನಸ್ಯ ಕಾರಣತಾಮೇವಾನಂಗೀಕುರ್ವಂಶ್ಚ ಪುನರ್ದೃಷ್ಟಾಂತಂ ಸಾಧ್ಯವೈಕಲ್ಯಾಖ್ಯಶಲ್ಯೇನೈವಾಕಲ್ಯಂ ಕುರ್ಯಾತ್। ಯದ್ಯಪಿ ಪಕ್ಷೇ ದೃಷ್ಟಾಂತೇ ಚ ರೂಪದಂಡಾದಿನಾಮು-

ಸವಿಕಲ್ಪಕೋಪಯುಕ್ತಸಂಕೇತಗ್ರಹಾಯ ಪ್ರಾಗ್ರೂಪಾದಿಜ್ಞಾನಮಪೇಕ್ಷಿತಮ್ । ತಥಾಪಿ ತಸ್ಯ ರೂಪವ್ಯಕ್ತ್ಯಂತರೇ ದಂಡವ್ಯಕ್ತ್ಯಂತರೇ ಚ ತನ್ಮಾತ್ರೋಪದೇಶಮಾತ್ರೇಣಾಪಿ ಸಂಭವೇನ ಶಕ್ತಿಗ್ರಹೇ ಉಪಕ್ಷೀಣತ್ವೇನ ಚೋಭಯತ್ರಾಪಿ ವಿಶೇಷಣೀಭೂತಯೋರನಯೋರ್ದಂಡರೂಪಯೋರ್ಜ್ಞಾನ ಮಕಾರಣಮೇವ। ತಥಾ ಚ ಪುನಃ ಪಕ್ಷೇ ಬಾಧೋ ದೃಷ್ಟಾಂತೇ ಸಾಧ್ಯವೈಕಲ್ಯಂ ಚಾಪರಿಹಾರ್ಯಮೇವ। ಸಂಕೇತಗ್ರಹಸ್ಯ ಚ ವೃದ್ಧವ್ಯವಹಾರಾಖ್ಯಾನುಮಾನೇನ ವಾ ಗುರೂಪದೇಶಾಖ್ಯಶಬ್ದೇನ ವಾ ಜಾಯಮಾನಸ್ಯ ಸವಿಕಲ್ಪಕತ್ವಾವಶ್ಯಂಭಾವಾತ್ ತವೇಷ್ಟಾಸಿದ್ಧ್ಯಾಽನ್ಯಥಾಸಿದ್ಧಿಶ್ಚ । ಲಿಂಗಶಬ್ದಯೋರ್ನಿರ್ವಿಕಲ್ಪಕಜನಕತ್ವಸ್ಯ ತ್ವಯಾಽಪ್ಯನಂಗೀಕಾರಾತ್। ಅಸ್ಯ ಸರ್ವಸ್ಯ ಸೂಚನಾಯ ನಾಲಿಕೇರದ್ವೀಪವಾಸೀ ತರ್ಹಿಸಾಮಾನ್ಯತೋಽಗ್ನಿದೃಗಿತ್ಯಾದ್ಯುಕ್ತಮ್ । ತತ್ರ ಹಿ ದಾಹಕೋ ವಹ್ನಿರಿತ್ಯುಪದೇಶಜನ್ಯ- ವ್ಯಂಜಕ- ವ್ಯಂಗ್ಯಜಾತ್ಯಾದಿ- ಸವಿಕಲ್ಪಕಸ್ಯೈವ ವಹ್ನಿರಯಮಿತಿ ವಿಶಿಷ್ಟಜ್ಞಾನೋಪಯೋಗಿತಯಾ ಕಥನಾತ್ ॥೮೪೪- ೮೪೫॥

**ವಿವರಣೆ-** ವಿಶಿಷ್ಟಜ್ಞಾನವನ್ನು ಕುರಿತು ಕಾರಣತಯಾ ಕಲ್ಪಿಸುವ ವಿಶೇಷಣ ಜ್ಞಾನವು ಸವಿಕಲ್ಪಕವೋ ಅಥವಾ ನಿರ್ವಿಕಲ್ಪಕವೋ ಎಂದು ವಿಕಲ್ಪ ಮಾಡಿ ಎರಡು ಪಕ್ಷಗಳೂ ಕೂಡುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ. ವಿಶೇಷಣ ಜ್ಞಾನವು ಸವಿಕಲ್ಪಕವಾದರೆ ಅನವಸ್ಥಾ ದೋಷವು ಬರುವುದು ಸ್ಪಷ್ಟ. ಅನವಸ್ಥಾ ದೋಷವಷ್ಟೇ ಅಲ್ಲ ನಿರ್ವಿಕಲ್ಪಕ ಸಿದ್ಧಿಯೂ ಆಗುವುದಿಲ್ಲ ಎಂದು ಮುಂತಾದ ಬೇರೆ ದೋಷವನ್ನು ಹೇಳುತ್ತಾರೆ. ವಿಶೇಷಣ ಜ್ಞಾನವು ನಿರ್ವಿಕಲ್ಪಕ ಎಂಬ ಪಕ್ಷದಲ್ಲಿ ನಾರಿಕೇಲದ್ವೀಪವಾಸಿಯಾದವನು ಮೊದಲಬಾರಿಗೆ ಅಗ್ನಿಯನ್ನು ನೋಡಿದಾಗ ಅವನಿಗೆ ಅಗ್ನಿನಾಮದ ಅಥವಾ ಅಗ್ನಿತ್ವಜಾತಿಯ ಸಂಬಂಧವು ತಿಳಿಯದಿದ್ದರೂ ಅಯಂ ಏತದ್ವಾನ್ ಎಂಬ ವಿಶಿಷ್ಟಜ್ಞಾನವನ್ನು ಹೊಂದುತ್ತಾನೆ. ಆದರೆ ಅಯಂ ವಹ್ನಿಮಾನ್ ಎಂಬ ವಿಶಿಷ್ಟಜ್ಞಾನವೇ ಬರಲಿ ಎಂದು ನಮ್ಮ ಆಪತ್ತಿ. ಅಂತಹ ವಿಶಿಷ್ಟ ಜ್ಞಾನವನ್ನು ಕುರಿತು ವಿಶೇಷಣವಾದ ಅಗ್ನಿಯ ಜ್ಞಾನವು ಮತ್ತು ಅಗ್ನಿತ್ವದ ಜ್ಞಾನವು ಕಾರಣ. ಅಂತಹ ಜ್ಞಾನವು ಅವನಿಗೆ ಅಗ್ನಿಸನ್ನಿಕರ್ಷ ಉಂಟಾದಾಗ ಉಂಟಾಗಿಯೇ ಆಗುತ್ತದೆ. ಅಯಂ ಅಗ್ನಿಮಾನ್ ಎಂಬಲ್ಲಿ ಅಗ್ನಿಯ ವೈಶಿಷ್ಟ್ಯ. ಅಯಂ ಅಗ್ನಿಃ ಎಂಬಲ್ಲಿ ಅಗಿತ್ವದ ವೈಶಿಷ್ಟ್ಯ. ಹೀಗೆ ಈ ಎರಡು ವಿಶಿಷ್ಟ ಜ್ಞಾನಕ್ಕೆ ಕಾರಣವಾದ ಅಗ್ನಿ ನಿರ್ವಿಕಲ್ಪಕ ಮತ್ತು ಅಗ್ನಿತ್ವದ ನಿರ್ವಿಕಲ್ಪಕವು ಅವನಿಗೆ ಪೂರ್ವಕ್ಷಣದಲ್ಲಿ ಇರುವುದರಿಂದ ಮುಂದಿನ ಕ್ಷಣದಲ್ಲಿ ಅಯಂ ಅಗ್ನಿಃ ಎಂದು, ಅಯಂ ಅಗ್ನಿಮಾನ್ ಎಂದು ವಿಶಿಷ್ಟ ಜ್ಞಾನವು ಬರಲಿ ಎಂಬ ಆಪತ್ತಿಯು ಇದೆ. ಈ ಆಪತ್ತಿಯನ್ನು ಪರಿಹರಿಸಲು ವ್ಯಾವರ್ತಕವಾದ ಅಗ್ನಿತ್ವ ಜಾತಿಯು ಸಾಮಾನ್ಯವಾಗಿ ತಿಳಿದಿದ್ದರೂ ವಿಶಿಷ್ಯ ಅಗ್ನಿತ್ವೇನ ಜಾತಿಯನ್ನು ತಿಳಿದಿಲ್ಲ ಎಂದು ಹೇಳಬೇಕು. ವಿಶಿಷ್ಯ ಅಗ್ನಿತ್ವೇನ ಜಾತಿಯ ಜ್ಞಾನಾಭಾವವಾದರೂ ವ್ಯಂಜಕವಿಲ್ಲದ ಪ್ರಯುಕ್ತ ಎಂದು ಹೇಳಬೇಕು. ಆದ್ದರಿಂದ ಇಲ್ಲಿ ವಿಶೇಷಣ ನಿರ್ವಿಕಲ್ಪಕವಿದ್ದರೂ ವಿಶಿಷ್ಟ ಜ್ಞಾನವು ಉಂಟಾಗುವುದಿಲ್ಲವಾದ್ದರಿಂದ ವಿಶೇಷಣ ನಿರ್ವಿಕಲ್ಪಕವು ವಿಶಿಷ್ಟ ಜ್ಞಾನವನ್ನು ಕುರಿತು ಹೇಗೆ ಕಾರಣವಾಗುತ್ತದೆ ಎಂದು ನಮ್ಮ ಆಕ್ಷೇಪದ ಅಭಿಪ್ರಾಯ.

ಘಟತ್ವನಿರ್ವಿಕಲ್ಪಕದಿಂದಲೇ ಘಟಸವಿಕಲ್ಪಕವನ್ನು ಹೇಳುವ ತಾರ್ಕಿಕನು ಘಟ ಸ್ಥಳದಲ್ಲಿ ವಿಶಿಷ್ಟ ಜ್ಞಾನವು ಉಂಟಾಗಲಿ ಎಂಬ ಆಪಾದನೆಯನ್ನು ಮಾಡಿದರೆ, ಅನುಭವವನ್ನು ಅಪಲಾಪವನ್ನು ಮಾಡಿಯೂ ಕೂಡ ಅದನ್ನು ಒಪ್ಪಬಹುದು. ಏಕೆಂದರೆ ಅವನಿಗೆ ಘಟಾಂತರದಲ್ಲಿ ಘಟತ್ವ ನಿರ್ವಿಕಲ್ಪಕ ಜ್ಞಾನವು ಉಂಟಾಗಿದೆ. ಆದ್ದರಿಂದ ಇಲ್ಲಿ ನಾರಿಕೇಲದ್ವೀಪವಾಸಿಯವರೆಗೆ ಹೋಗಿದ್ದಾರೆ. ಅವನಿಗೆ ಮೊದಲು ಅಗ್ನಿಯ ಜ್ಞಾನವೇ ಇಲ್ಲವಾದುದರಿಂದ ಅಗ್ನಿ ನಿರ್ವಿಕಲ್ಪಕವಾಗಲೀ, ಅಗ್ನಿತ್ವ ನಿರ್ವಿಕಲ್ಪಕವಾಗಲೀ ಇಲ್ಲದಿರುವುದರಿಂದ ಇಲ್ಲಿ ಇಷ್ಟಾಪತ್ತಿಯನ್ನು ಹೇಳಲು ಬರುವುದಿಲ್ಲ ಮತ್ತು ರೂಪೀ ಘಟಃ ಎಂಬ ವಿಶಿಷ್ಟಜ್ಞಾನದಲ್ಲಿ ವಿಶೇಷಣವಾದ ರೂಪದ ನಿರ್ವಿಕಲ್ಪಕವು ಹೇಗೆ ಇದೆಯೋ, ಅದರಂತೆ ವಿಶೇಷ್ಯವಾದ ಘಟದ ನಿರ್ವಿಕಲ್ಪಕವೂ ಮೊದಲು ಇದ್ದೇ ಇದೆ. ಆ ವಿಶೇಷ್ಯ ನಿರ್ವಿಕಲ್ಪಕವು ವಿಶಿಷ್ಟ ಜ್ಞಾನವನ್ನು ಕುರಿತು ಕಾರಣವಾಗುತ್ತದೆ. ಆದ್ದರಿಂದ ವಿಶಿಷ್ಟ ಜ್ಞಾನಕ್ಕೆ ವಿಶೇಷಣ ಜ್ಞಾನಮಾತ್ರ ಜನ್ಯತ್ವವನ್ನು ಏಕೆ ಸಾಧಿಸುತ್ತೀಯೆ? ಉಭಯ ಜ್ಞಾನಜನ್ಯತ್ವವನ್ನೂ ಸಾಧಿಸು. ಉಭಯ ಜ್ಞಾನಜನ್ಯತ್ವವನ್ನು ಸಾಧನೆ ಮಾಡಲು ಯಾವುದೂ ದೃಷ್ಟಾಂತವಿಲ್ಲ ಮತ್ತು ವಿಶೇಷಣಜ್ಞಾನಜನ್ಯತ್ವವನ್ನು ಸಾಧನೆ ಮಾಡಿದರೆ ನಿರ್ವಿಕಲ್ಪಕವು ಸಿದ್ಧವಾಗುತ್ತದೆ. ಆದ್ದರಿಂದ ಉಭಯಜ್ಞಾನಜನ್ಯತ್ವವನ್ನು ಸಾಧಿಸುವುದಿಲ್ಲ ಎಂದು ಹೇಳುವುದಾದರೆ ನಿನ್ನ ನ್ಯಾಯವನ್ನೇ ಅನುಸರಿಸಿ ಪರವಾದಿಯು ದಂಡೀ ಇತಿ ವಿಶಿಷ್ಟ ಜ್ಞಾನಂ, ವಿಶೇಷಣ ವಿಶೇಷ್ಯ-ಉಭಯ ಜ್ಞಾನಜನ್ಯಂ, ವಿಶಿಷ್ಟಜ್ಞಾನತ್ವಾತ್, ರೂಪೀತಿ ವಿಶಿಷ್ಟ ಜ್ಞಾನವತ್ ಎಂಬ ಅನುಮಾನದಿಂದ ಉಭಯಜ್ಞಾನಜನ್ಯತ್ವವನ್ನು ಸಾಧನೆ ಮಾಡಿದರೆ ನಿನ್ನ ಉತ್ತರವೇನು? ದೃಷ್ಟಾಂತದಲ್ಲಿ ಉಭಯಜ್ಞಾನಜನ್ಯತ್ವವು ನನಗೆ ಸಮ್ಮತವಲ್ಲ ಎಂದು ನೀನು ಹೇಳುವುದಾದರೆ ನಿನ್ನ ಅನುಮಾನದ ದೃಷ್ಟಾಂತದಲ್ಲಿ ವಿಶೇಷಣ ಜ್ಞಾನಜನ್ಯತ್ವರೂಪವಾದ ಸಾಧ್ಯವು ತನಗೂ ಸಮ್ಮತವಲ್ಲ ಎಂದು ಪರವಾದಿಯು ಹೇಳಬಹುದು. ಅಥವಾ ಪರವಾದಿಗೆ ಉಭಯಜ್ಞಾನಜನ್ಯತ್ವವನ್ನು ಸಾಧಿಸಲು ಅನುಮಿತಿಯು ದೃಷ್ಟಾಂತವಾಗುತ್ತದೆ. ಅಲ್ಲಿ ಸಾಧ್ಯವೈಕಲ್ಯವನ್ನು ನೀನು ಶಂಕಿಸುವಂತಿಲ್ಲ. ಒಂದು ಪಕ್ಷ; ಪರನ ಅನುಮಾನದಲ್ಲಿ ದಂಡದೇವದತ್ತ ಉಭಯ ನಿರ್ವಿಕಲ್ಪಕ ಜ್ಞಾನವಿರುವುದರಿಂದ ಅಪಸಿದ್ಧಾಂತವನ್ನೂ ಕಡೆಗಣಿಸಿ ನೀನು ಇಷ್ಟಾಪತ್ತಿಯನ್ನು ಹೇಳುವುದಾದರೆ ಅಷ್ಟರಿಂದಲೇ ವಿಶಿಷ್ಟಜ್ಞಾನವು ಉಪಪನ್ನವಾಗುವುದರಿಂದ ನಿನಗೆ ಅಭಿಮತವಾದ ದಂಡಸವಿಕಲ್ಪಕಜ್ಞಾನವು ಪ್ರಸಾಧ್ಯಾಂಗವೂ ಆಗಲಾರದು. ನಿನಗೆ ಸಮ್ಮತವಾದ ದಂಡನಿರ್ವಿಕಲ್ಪಕವು ಪರನಿಗೆ ಸಮ್ಮತವಾಗುವುದಿಲ್ಲ. ಆದರೆ ನಿನ್ನ ಅನುಮಾನ ದೃಷ್ಟಾಂತದಲ್ಲಿ ಪರರೀತ್ಯಾ ಸಾಧ್ಯವೈಕಲ್ಯವು ಬಂದೇ ಬರುತ್ತದೆ. ಒಂದು ಪಕ್ಷ ಪರನಿಗೆ ಅವನ ರೀತಿಯಿಂದಲೇ ದೃಷ್ಟಾಂತದಲ್ಲಿ ಸಾಧ್ಯಸಿದ್ಧಿಯಾಗುತ್ತದೆ. ನನಗೆ ನನ್ನ ರೀತಿಯಲ್ಲಿಯೇ ದೃಷ್ಟಾಂತದಲ್ಲಿ ಸಾಧ್ಯ ಸಿದ್ಧಿಯಾಗುತ್ತದೆ ಎಂದು ಸಮಾಧಾನವನ್ನು ನೀನು ಹೇಳುವುದಾದರೆ ಆಗ ಪರನು ತನ್ನ ರೀತಿಯಿಂದ ಪಕ್ಷವಾದ ರೂಪವಿಶಿಷ್ಟ ಜ್ಞಾನದಲ್ಲಿಯೂ ಕಾರಣವಾಗಿ ದಂಡಸವಿಕಲ್ಪಕದಂತೆ ರೂಪಸವಿಕಲ್ಪಕಾಂತರವನ್ನೇ ಒಪ್ಪಿ ನಿನ್ನ

ಸಾಧ್ಯಕ್ಕೆ ಅನ್ಯಥೋಪಪತ್ತಿಯನ್ನು ಹೇಳಿ ಅರ್ಥಾಂತರತಾ ದೋಷದಿಂದ ನಿನ್ನನ್ನು ನಿಗ್ರಹಿಸಬಹುದು.

ಒಂದು ಪಕ್ಷ ರೂಪೇಂದ್ರಿಯ ಸನ್ನಿಕರ್ಷದಿಂದಲೇ ರೂಪೀ ಎಂಬ ವಿಶಿಷ್ಟ ಜ್ಞಾನವು ಉಂಟಾಗಬಹುದಾದ್ದರಿಂದ ನೀನು ರೂಪಸವಿಕಲ್ಪಕಾಂತರವನ್ನು ನಿರಾಕರಿಸುವುದಾದರೆ ಪರನೂ ಸಹ ಆ ಸನ್ನಿಕರ್ಷದಿಂದಲೇ ವಿಶಿಷ್ಟಜ್ಞಾನವನ್ನು ಒಪ್ಪಿ ನಿನ್ನ ನಿರ್ವಿಕಲ್ಪಕವನ್ನು ನಿರಾಕರಿಸಬಹುದು. ದೃಷ್ಟಾಂತದಲ್ಲಿಯೂ ಕೂಡ ದಂಡೇಂದ್ರಿಯ ಸನ್ನಿಕರ್ಷದಿಂದಲೇ ವಿಶಿಷ್ಟ ಜ್ಞಾನವನ್ನು ನಿರ್ವಾಹ ಮಾಡುವ ಅವನು ದಂಡಜ್ಞಾನಕ್ಕೆ ಕಾರಣತ್ವವನ್ನೇ ಒಪ್ಪದೆ ದಂಡೀ ಎಂಬ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಹೇಳಬಹುದು. ಪಕ್ಷವಾದ ರೂಪದಲ್ಲಿಯೂ ದೃಷ್ಟಾಂತವಾದ ದಂಡದಲ್ಲಿಯೂ ರೂಪದಂಡಾದಿನಾಮ ಸವಿಕಲ್ಪಕವನ್ನು ಕುರಿತು ಕಾರಣವಾದ ಶಕ್ತಿಗ್ರಹಕ್ಕೋಸ್ಕರ ಮೊದಲು ರೂಪಾದಿ ಜ್ಞಾನವು ಅಪೇಕ್ಷಿತವಾಗುತ್ತದೆ. ಆದರೂ ಅದು ಇನ್ನೊಂದು ರೂಪವ್ಯಕ್ತಿಯಲ್ಲಿ ಮತ್ತು ಇನ್ನೊಂದು ದಂಡವ್ಯಕ್ತಿಯಲ್ಲಿ ಉಂಟಾಗಬಹುದಾದ್ದರಿಂದ ವಿಶೇಷಣ ಜ್ಞಾನಕ್ಕೆ ಶಕ್ತಿಗ್ರಹದಲ್ಲಿಯೇ ಚರಿತಾರ್ಥತ್ವವು ಬರುವುದರಿಂದ ಪಕ್ಷ ಮತ್ತು ದೃಷ್ಟಾಂತ ಎರಡರಲ್ಲಿಯೂ ವಿಶೇಷಣವಾದ ದಂಡ ಮತ್ತು ರೂಪಗಳ ಜ್ಞಾನವು ವಿಶಿಷ್ಟಜ್ಞಾನವನ್ನು ಕುರಿತು ಕಾರಣವಲ್ಲ ಎಂದೇ ಆಗುತ್ತದೆ. ಆದ್ದರಿಂದ ಪುನಃ ಪಕ್ಷದಲ್ಲಿ ಬಾಧವೂ, ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೂ ಬಂದೇ ಬರುತ್ತದೆ. ಶಕ್ತಿಗ್ರಹವಾದರೋ ವೃದ್ಧ ವ್ಯವಹಾರರೂಪವಾದ ಅನುಮಾನದಿಂದಾಗಲೀ ಅಥವಾ ಗುರೂಪದೇಶರೂಪವಾದ ಶಬ್ದದಿಂದಾಗಲೀ ಉಂಟಾಗುವುದರಿಂದ ಅದು ಅವಶ್ಯಕವಾಗಿ ಸವಿಕಲ್ಪಕವಾಗಿಯೇ ಇರುತ್ತದೆ. ಆ ಕಾರಣದಿಂದ ನಿನ್ನ ಇಷ್ಟಸಿದ್ಧಿಯಾಗುವುದಿಲ್ಲ. ಪರೋಕ್ಷ ನಿರ್ವಿಕಲ್ಪಕವನ್ನು ನೀನೂ ಅಂಗೀಕಾರ ಮಾಡುವುದಿಲ್ಲವಷ್ಟೇ. ಇದೆಲ್ಲವನ್ನೂ ಸೂಚಿಸಲು ಮೂಲಕಾರರು ನಾರಿಕೇಲದ್ವೀಪವಾಸೀ ಸಾಮಾನ್ಯತೋ ಅಗ್ನಿದೃಕ್ ಎಂದು ಹೇಳಿದ್ದಾರೆ. ವಹ್ನಿವಿಶಿಷ್ಟ ಜ್ಞಾನವುಂಟಾಗಲು 'ದಾಹಕೋವಹ್ನಿಃ' ಎಂಬ ಉಪದೇಶದಿಂದ ಜನ್ಯವಾದ ದಾಹಕತ್ವ ವ್ಯಂಗ್ಯ ಅಗ್ನಿತ್ವಜಾತಿ ಸವಿಕಲ್ಪಕವೇ ಅಯಂ ವಹ್ನಿಃ ಎಂಬ ವಿಶಿಷ್ಟಜ್ಞಾನವನ್ನು ಕುರಿತು ಕಾರಣವೆಂದು ಹೇಳಲ್ಪಡುತ್ತದೆಯಷ್ಟೇ ಆದ್ದರಿಂದ ಇದಂಪ್ರಥಮತಃ ಅಗ್ನಿಯನ್ನು ನೋಡುವವನಿಗೆ ಏತದ್ವಾನ್ ಎಂಬ ಇಷ್ಟೇ ವಿಶಿಷ್ಟಜ್ಞಾನವು ಬಂದರೂ ಸಾಮಗ್ರಿ ಇರುವುದರಿಂದ ಅಯಂ ವಹ್ನಿಮಾನ್ ಎಂಬ ವಿಶಿಷ್ಟಜ್ಞಾನವು ಉಂಟಾಗಲಿ ಎಂದು ನಮ್ಮ ಆಪಾದನೆಯ ಅಭಿಪ್ರಾಯ.

ಸವಿಕಲ್ಪಕಧೀಪಕ್ಷೇ ವ್ಯಂಜಕಾನುಸ್ಮೃತಿರ್ಭವೇತ್ ।
ಅನವಸ್ಥಾಭಿಯಾ ವ್ಯಂಜಕೇ ತು ನ ವ್ಯಂಜಕಾಂತರಂ ।
ವಿಶೇಷಣಜ್ಞಾನಜನ್ಯತ್ವನಿಯಮಸ್ತದ್ ವೃಥಾ ತವ ॥ ೮೪೬ ॥

**ಅರ್ಥ**-ಸವಿಕಲ್ಪಕಧೀಪಕ್ಷೇ= ವಿಶಿಷ್ಟಜ್ಞಾನವನ್ನು ಕುರಿತು ವಿಶೇಷಣ ಸವಿಕಲ್ಪಕವು ಕಾರಣ ಎಂಬ ಪಕ್ಷದಲ್ಲಿ, ವ್ಯಂಜಕಾನುಸೃತಿಃ= ವ್ಯಂಜಕಗಳ ಅನುಸರಣವು, ಭವೇತ್= ಉಂಟಾದೀತು, ಅನವಸ್ಥಾಭಿಯಾ= ಅನವಸ್ಥಾ ದೋಷವು ಬರುವುದೆಂಬ ಭಯದಿಂದ, ವ್ಯಂಜಕೇ ತು= ವ್ಯಂಜಕದಲ್ಲಾದರೂ, ನ ವ್ಯಂಜಕಾಂತರಂ= ಇನ್ನೊಂದು ವ್ಯಂಜಕವನ್ನು ಅಂಗೀಕರಿಸುವುದಿಲ್ಲ, ತತ್= ಆದ್ದರಿಂದ, ತವ= ನಿನ್ನ, ವಿಶೇಷಣಜ್ಞಾನಜನ್ಯತ್ವನಿಯಮಃ= ವಿಶಿಷ್ಟಜ್ಞಾನವು ವಿಶೇಷಣ ಜ್ಞಾನ ಜನ್ಯ ಎಂಬ ನಿಯಮವು, ವೃಥಾ= ವ್ಯರ್ಥವಾದುದು.

**ಅನುವಾದ**- ವಿಶೇಷಣ ಜ್ಞಾನವು ಸವಿಕಲ್ಪಕರೂಪವಾದುದು ಎಂಬ ಪಕ್ಷದಲ್ಲಿ ಜಾತಿವ್ಯಂಜಕದ ಅವಸರಣೆಯನ್ನು ಮಾಡಬೇಕು. ಆದರೆ ಅನವಸ್ಥಾ ದೋಷ ಪ್ರಸಂಗದ ಭಯವಿರುವುದರಿಂದ ವ್ಯಂಜಕಕ್ಕೆ ಇನ್ನೊಂದು ವ್ಯಂಜಕವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ವಿಶಿಷ್ಟಜ್ಞಾನವು ವಿಶೇಷಣ ಜ್ಞಾನಜನ್ಯ ಎಂಬ ನಿನ್ನ ವಾದವು ವ್ಯರ್ಥವಾದುದು.

**ಭಾವವಿಲಾಸಿನೀ** – ಸವಿಕಲ್ಪಕಜ್ಞಾನಪಕ್ಷೇ ಪ್ರಾಗನವಸ್ಥೋಕ್ತಾ । ಇದಾನೀಂ ವಿಶಿಷ್ಟಜ್ಞಾನೇ ವಿಷಯೀಭೂತವಿಶೇಷಣಸ್ಯೈವ ವಾ ಸವಿಕಲ್ಪಕಂ ವಿವಕ್ಷಿತಮುತ ಯಸ್ಯ ಕಸ್ಯ ಚಿದ್ವಿಶೇಷಣಸ್ಯ ವೇತಿ ವಿಕಲ್ಪ್ಯ ದೂಷಯತಿ ॥ **ಸವಿಕಲ್ಪಕೇತಿ** ॥ ವ್ಯಂಜಕಾನುಸೃತಿಃ ಘಟತ್ವಜಾತಿಮತೀಯಂ ವ್ಯಕ್ತಿರಿತಿ ಜಾತಿವೈಶಿಷ್ಟ್ಯಜ್ಞಾನೇ ಪರೇಣಾಪಿ ಪೃಥುಬುಧ್ನೋದರತ್ವಾಖ್ಯ ವ್ಯಂಜಕಸ್ಯೈವ ಸವಿಕಲ್ಪಕಾನುಸೃತಿಃ ಕ್ರಿಯತೇ ನತು ವಿಶೇಷಣೀಭೂತಜಾತೇರೇವ ಪ್ರಾಕ್‌ಸವಿಕಲ್ಪಕಾನುಸೃತಿಃ । ತಸ್ಮಾದಾದ್ಯಃ ಪಕ್ಷೋ ನ ಘಟತೇ ದ್ವಿತೀಯಂ ದೂಷಯತಿ ॥ **ಅನವಸ್ಥೇತಿ** ॥ ವ್ಯಂಜಕೇ ಪೃಥುಬುಧ್ನೋದರಾಕಾರತ್ವಜ್ಞಾನೇ ಜಾತೌವ್ಯಂಜಕಸವಿಕಲ್ಪಕಾನುಸರಣವತ್ ವ್ಯಂಜಕೇ ವ್ಯಂಜಕಾಂತರಸವಿಕಲ್ಪಕಾನು- ಸರಣಾಭಾವೇನ ದ್ವಿತೀಯಃ ಪಕ್ಷೋಽಪಿ ನ ಘಟತೇ । ದ್ವಿವಿಧಸಾಧ್ಯಾಂಗೀಕರಣೇಽಪಿ ಉಕ್ತರೀತ್ಯಾ ಜಾತೌ ವ್ಯಂಜಕೇ ಚ ತ್ವದ್ಧೇತೋರ್ವ್ಯಭಿಚಾರಾದಿತಿ ಭಾವಃ । ನನು ದಂಡೀತಿ ವಿಶಿಷ್ಟಜ್ಞಾನೇ ದಂಡಾಖ್ಯವಿಶೇಷಣಸವಿಕಲ್ಪಕಜನ್ಯತ್ವಂ ಸಾಧ್ಯತ ಇತ್ಯಸ್ಯಾಪೀದಮೇವೋತ್ತರಮ್ । ಯಥಾ ವ್ಯಂಜಕೇ ವ್ಯಂಜಕಾಂತರಮನವಸ್ಥಾಭಿಯಾ ನಾಪೇಕ್ಷ್ಯತೇ ಕಿಂತು ವ್ಯಂಜಕೇಂದ್ರಿಯಸನ್ನಿಕರ್ಷಾದೇವ ತದ್ವಿಶಿಷ್ಟಧೀರಂಗೀಕ್ರಿಯತೇ । ತಥಾ ದಂಡೀತ್ಯತ್ರಾಪಿ ಪ್ರಾಗ್‌ದಂಡಸವಿಕಲ್ಪಕಾಂತರಮನಪೇಕ್ಷ್ಯತಾಮ್। ಅಪೇಕ್ಷಣೇ ತತ್ರಾಪ್ಯನವಸ್ಥಾಯಾ ದುರ್ವಾರತ್ವಾತ್ । ಅತೋ ದೃಷ್ಟಾಂತಾಭಾವಾತ್ತವ ಪಕ್ಷೇ ರೂಪೀತಿ ವಿಶಿಷ್ಟಜ್ಞಾನೇ ಪಕ್ಷಸಮೇಸ್ಮಿನ್ ದಂಡವಿಶಿಷ್ಟಜ್ಞಾನೇ ವಾ ಸಾಧಯಿತುಮಪಿ ನ ಶಕ್ಯಮ್ । ಯತ್‌ಕಿಂಚಿದ್ವಿಶೇಷಣಜ್ಞಾನಜನ್ಯತ್ವಸ್ಯ ಪ್ರತ್ಯಕ್ಷಮಾತ್ರೇಽಯಮಿತ್ಯುಪನೀತಕಾಲಭಾನೇನ ಸಿದ್ಧಸಾಧನತ್ವಾತ್ । ಯಾವದ್ವಿಶೇಷಣಜ್ಞಾನಜನ್ಯತ್ವಸ್ಯಾಭಾವವಿಶಿಷ್ಟಜ್ಞಾನೇ ವ್ಯಭಿಚರಿತತ್ವೇನ ಸಾಧನಾಯೋಗಾಚ್ಚ ।

ಯದಿ ಚ ವಹ್ನ್ಯನುಮಿತಿ ರೂಪವಿಶಿಷ್ಟಜ್ಞಾನಸ್ಯ ವ್ಯಾಪ್ತಿರೂಪವಿಶೇಷಣಸವಿಕಲ್ಪಕಜನ್ಯತ್ವಸ್ಯ ಸರ್ವೈರಂಗೀಕಾರಾತ್ ಸ ಏವ ದೃಷ್ಟಾಂತಃ ತಥಾಪಿ ಪ್ರಕೃತೇ ತದನುಸರಣಂ ವ್ಯರ್ಥಮಿತ್ಯತ್ರ ಯುಕ್ತಿಮಪ್ಯನೇನೈವಾಹ – **ಅನವಸ್ಥೇತಿ** ॥ ವ್ಯಂಜಕೇ ಪೃಥುಬುಧ್ನೋದರತ್ವಾದೌ । ಯಥಾ

ಜಾತೇರ್ವ್ಯಂಜಕಜ್ಞಾನಾನುಸರಣೇऽಪಿ ನ ವ್ಯಂಜಕಸ್ಯ ತದನುಸರಣಮ್ । ಅನವಸ್ಥಾಪ್ರಸಂಗಾತ್। ವ್ಯಂಜಕೇ ವ್ಯಂಜಕಾಂತರಾನಂಗೀಕಾರಾಚ್ಚ । ಏವಂ ಜಾತೌ ದೃಷ್ಟನಿಯಮಸ್ಯ ವ್ಯಂಜಕೇ ಪರಿತ್ಯಾಗವತ್ ಅನುಮಿತೌ ದೃಷ್ಟನಿಯಮಸ್ಯ ಪ್ರತ್ಯಕ್ಷೇऽಪಿ ಪರಿತ್ಯಾಗೋऽಸ್ತು ವಿಜಾತೀಯ- ಕಾರ್ಯೇ ದೃಷ್ಟನಿಯಮಸ್ಯ ವಿಜಾತೀಯಕಾರ್ಯಾಂತರೇऽಪಿ ಕಲ್ಪನಾಯಾಂ ಕಾರಣಾ- ಭಾವಾತ್ । ತಥಾ ಸತಿ ಲಿಂಗಜನ್ಯತ್ವಸ್ಯಾಪಿ ಪ್ರತ್ಯಕ್ಷೇ ಕಲ್ಪನಾಪ್ರಸಂಗಾದಿತಿ ಭಾವಃ । ತತ್ ತಸ್ಮಾತ್ ಉಕ್ತರೀತ್ಯಾ ವ್ಯಭಿಚಾರಾದಪ್ರಯೋಜಕತ್ವಾಚ್ಚ ॥ ೮೪೬ ॥

**ವಿವರಣೆ-** ವಿಶೇಷಣ ಸವಿಕಲ್ಪಕವು ಕಾರಣ ಎಂಬ ಪಕ್ಷದಲ್ಲಿ ಹಿಂದೆ ಅನವಸ್ಥಾ ದೋಷವು ಹೇಳಲ್ಪಟ್ಟಿತು. ಈಗ ವಿಶೇಷಣಸವಿಕಲ್ಪಕವು ಕಾರಣ ಎಂದು ಅಂಗೀಕರಿಸಿದರೆ, ವಿಶಿಷ್ಟಜ್ಞಾನದಲ್ಲಿ ವಿಷಯವಾದ ವಿಶೇಷಣಸವಿಕಲ್ಪಕವು ಕಾರಣವೋ, ಅಥವಾ ಯಾವುದಾದರೂ ಒಂದು ವಿಶೇಷಣದ ಸವಿಕಲ್ಪಕವು ಕಾರಣವೋ ಎಂದು ವಿಕಲ್ಪ ಮಾಡಿ ದೂಷಿಸುತ್ತಾರೆ. 'ಘಟತ್ವ ಜಾತಿ ಮತೀ ಇಯಂ ವ್ಯಕ್ತಿಃ' ಎಂಬ ಜಾತಿ ವೈಶಿಷ್ಟ್ಯ ಜ್ಞಾನದಲ್ಲಿ ಜಾತಿಯು ವಿಶೇಷಣವಾಗುತ್ತದೆ. ಇಲ್ಲಿ ಜಾತಿಯು ವಿಶೇಷಣವಾಗಿ ತೋರಲು ಜಾತಿಯ ಸವಿಕಲ್ಪಕವೇ ಕಾರಣವಲ್ಲ, ಜಾತಿ ವ್ಯಂಜಕವಾದ ಪೃಥುಬುಧ್ನೋಧರಾಕಾರದ ಸವಿಕಲ್ಪಕವು ಕಾರಣ ಎಂದು ಹೇಳುತ್ತಾರೆ. ಆದ್ದರಿಂದ ವಿಶಿಷ್ಟ ಜ್ಞಾನದಲ್ಲಿ ವಿಷಯವಾದ ವಿಶೇಷಣದ ನಿರ್ವಿಕಲ್ಪಕವೇ ಕಾರಣ ಎಂಬ ಮೊದಲನೆಯ ಪಕ್ಷವು ನಿರಾಕೃತವಾಗುತ್ತದೆ. ಅನವಸ್ಥಾಭಿಯಾ ಎಂಬ ಶ್ಲೋಕಭಾಗದಿಂದ ಎರಡನೆಯ ಪಕ್ಷವನ್ನು ನಿರಾಕರಿಸುತ್ತಾರೆ. ಜಾತಿಯ ಜ್ಞಾನ ಬರಲು ಜಾತಿ ವ್ಯಂಜಕವಾದ ಪೃಥುಬುಧ್ನೋದರಾಕಾರದ ಜ್ಞಾನವನ್ನು ಅಪೇಕ್ಷಿಸಿದಂತೆ ಪೃಥುಬುಧ್ನೋದರಾಕಾರರೂಪವಾದ ವ್ಯಂಜಕದ ಜ್ಞಾನಕ್ಕಾಗಿ ಇನ್ನೊಂದು ವ್ಯಂಜಕ ಸವಿಕಲ್ಪಕವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಯಾವುದೋ ಒಂದು ವಿಶೇಷಣದ ಸವಿಕಲ್ಪಕವು ಪ್ರಕೃತ ವಿಶೇಷಣದ ವಿಶೇಷಣತ್ವವನ್ನು ಕುರಿತು ಉಪಯೋಗಿಯಾಗುತ್ತದೆ ಎಂಬ ದ್ವಿತೀಯ ಪಕ್ಷವು ಕೂಡುವುದಿಲ್ಲ. ಒಟ್ಟಿನಲ್ಲಿ ಎರಡು ವಿಧವಾದ ಸಾಧ್ಯವನ್ನು ಅಂಗೀಕರಿಸಿದರೂ ಮೊದಲನೆಯ ಸಾಧ್ಯದಲ್ಲಿ ಜಾತಿಯಲ್ಲಿಯೂ, ಎರಡನೆಯ ಸಾಧ್ಯದಲ್ಲಿ ಜಾತಿವ್ಯಂಜಕದಲ್ಲಿಯೂ ನಿನ್ನ ಹೇತುವಿಗೆ ವ್ಯಭಿಚಾರದೋಷವು ಬರುತ್ತದೆ ಎಂದು ಅಭಿಪ್ರಾಯ. ದಂಡೀ ಎಂಬ ವಿಶಿಷ್ಟ ಜ್ಞಾನದಲ್ಲಿ ದಂಡರೂಪವಾದ ವಿಶೇಷಣ ಸವಿಕಲ್ಪಕ ಜ್ಞಾನಜನ್ಯತ್ವವನ್ನು ಮಾತ್ರ ಸಾಧನೆ ಮಾಡುತ್ತೇವೆ ಎಂದು ಹೇಳಿದರೂ ಇದೇ ಉತ್ತರ. ಹೇಗೆ ಅನವಸ್ಥಾ ಭಯದಿಂದ ವ್ಯಂಜಕಕ್ಕೆ ಇನ್ನೊಂದು ವ್ಯಂಜಕವನ್ನು ಅನ್ವೇಷಣ ಮಾಡುವುದಿಲ್ಲವೋ, ಆದರೆ ವ್ಯಂಜಕ ಮತ್ತು ಚಕ್ಷುರಿಂದ್ರಿಯ ಸಂಯೋಗದಿಂದಲೇ ವ್ಯಂಜಕ ವಿಶಿಷ್ಟ ಜ್ಞಾನವು ಉಂಟಾಗುತ್ತದೆ ಎಂದು ಅಂಗೀಕರಿಸಲ್ಪಡುತ್ತದೆಯೋ, ಅದರಂತೆ ದಂಡೀ ಎಂಬ ವಿಶಿಷ್ಟ ಜ್ಞಾನದಲ್ಲಿಯೂ ಮೊದಲು ದಂಡಸವಿಕಲ್ಪಕವನ್ನು ಅಂಗೀಕರಿಸುವುದು ಬೇಡ. ಹಾಗೆ ಅಂಗೀಕರಿಸಿದರೆ ಅನವಸ್ಥಾದೋಷವು ಬಂದೇ ಬರುತ್ತದೆ. ಆದ್ದರಿಂದ ದೃಷ್ಟಾಂತವೂ ಇಲ್ಲದಿರುವುದರಿಂದ ಪಕ್ಷವಾದ ರೂಪೀ ಎಂಬ ವಿಶಿಷ್ಟ ಜ್ಞಾನದಲ್ಲಿಯೂ ಪಕ್ಷಸಮವಾದ ದಂಡೀ ಎಂಬ ವಿಶಿಷ್ಟ ಜ್ಞಾನದಲ್ಲಿಯೂ

ವಿಶೇಷಣಸವಿಕಲ್ಪಕವನ್ನು ಕಾರಣತಯಾ ಸಾಧನೆ ಮಾಡಲು ಸಾಧ್ಯವಿಲ್ಲ. ಯತ್‌ಕಿಂಚಿತ್ ವಿಶೇಷಣಜ್ಞಾನಜನ್ಯತ್ವವನ್ನು ಸಾಧನೆ ಮಾಡುವುದಾದರೆ ಪ್ರತ್ಯಕ್ಷಸಾಮಾನ್ಯದಲ್ಲಿ ಅಯಂ ಎಂಬ ಅಂಶದಲ್ಲಿ ಸಾಕ್ಷಿಯಿಂದ ಉಪನೀತವಾದ ಕಾಲವು ವಿಶೇಷಣವಾಗಿ ತೋರುವುದರಿಂದ ಸಿದ್ಧಸಾಧನವೇ ಉಂಟಾಗುತ್ತದೆ. ಯಾವತ್‌ವಿಶೇಷಣಜ್ಞಾನಜನ್ಯತ್ವವನ್ನು ಸಾಧಿಸಿದರೆ ಅಭಾವವಿಶಿಷ್ಟಜ್ಞಾನದಲ್ಲಿ ಮೊದಲು ಅಭಾವತ್ವಜ್ಞಾನವು ಇಲ್ಲದಿರುವುದರಿಂದ ವ್ಯಭಿಚಾರ ದೋಷವು ಬರುವುದರಿಂದ ಹಾಗೆ ಸಾಧನೆ ಮಾಡಲು ಸಾಧ್ಯವಿಲ್ಲ.

ವಹ್ನ್ಯನುಮತಿ ರೂಪವಾದ ವಿಶಿಷ್ಟಜ್ಞಾನವು ವ್ಯಾಪ್ತಿರೂಪವಾದ ವಿಶೇಷಣದ ಸವಿಕಲ್ಪಕ ಜ್ಞಾನಜನ್ಯವೆಂದು ಸರ್ವರೂ ಅಂಗೀಕರಿಸುವುದರಿಂದ ಅನುಮಿತಿಯು ದೃಷ್ಟಾಂತವಾಗುತ್ತದೆ ಎಂದು ಹೇಳಿದರೂ, ಪ್ರಕೃತವಾದ ಪ್ರತ್ಯಕ್ಷದಲ್ಲಿ ಅನುಮಿತಿಯ ನ್ಯಾಯವನ್ನು ಅನುಸರಿಸುವುದು ವ್ಯರ್ಥವೇ ಸರಿ. ಜಾತಿಜ್ಞಾನವನ್ನು ಕುರಿತು ವ್ಯಂಜಕವನ್ನು ಅನುಸರಿಸಿದರೂ ವ್ಯಂಜಕ ಜ್ಞಾನವನ್ನು ಕುರಿತು ಅನವಸ್ಥಾ ಬರುವುದರಿಂದ ವ್ಯಂಜಕಾಂತರವನ್ನು ಅನುಸರಣೆ ಮಾಡುವುದಿಲ್ಲ. ಹೀಗೆ ಜಾತಿಯಲ್ಲಿ ದೃಷ್ಟವಾದ ನಿಯಮವು ವ್ಯಂಜಕದಲ್ಲಿ ಪರಿತ್ಯಜಿಸಲ್ಪಡುತ್ತದೆ. ಅದರಂತೆ ಅನುಮಿತಿಯಲ್ಲಿ ದೃಷ್ಟವಾದ ನಿಯಮವು ಪ್ರತ್ಯಕ್ಷದಲ್ಲಿ ಪರಿತ್ಯಜಿಸಲ್ಪಡಲಿ. ವಿಜಾತೀಯ ಕಾರ್ಯದಲ್ಲಿ ಯಾವ ನಿಯಮವಿದೆಯೋ ಅದನ್ನು ಇನ್ನೊಂದು ವಿಜಾತೀಯ ಕಾರ್ಯದಲ್ಲಿ ಕಲ್ಪನೆ ಮಾಡಲು ಯಾವ ಕಾರಣವೂ ಇಲ್ಲ. ಹಾಗೆ ಕಲ್ಪನೆ ಮಾಡುವುದಾದರೆ ಅನುಮಿತಿಯು ಲಿಂಗ ಜನ್ಯವಾದುದರಿಂದ ಪ್ರತ್ಯಕ್ಷವೂ ಲಿಂಗಜನ್ಯವೆಂದು ಕಲ್ಪನೆ ಮಾಡಬೇಕಾದ ಪ್ರಸಂಗವು ಬಂದೀತು. ಆದ್ದರಿಂದ ಉಪಪಾದನೆ ಮಾಡಿದ ವ್ಯಭಿಚಾರ ಮತ್ತು ಅಪ್ರಯೋಜಕತ್ವದೋಷದಿಂದ ವಿಶೇಷಣಸವಿಕಲ್ಪಕವು ವಿಶಿಷ್ಟಜ್ಞಾನವನ್ನು ಕುರಿತು ಕಾರಣವೆಂದು ಸಿದ್ಧವಾಗುವುದಿಲ್ಲ.

ಘಟೇ ಘಟತ್ವಮಿತಿ ದೀರ್ಘಟತ್ವಜ್ಞಾನಜಾ ನ ಚೇತ್ ।
ಘಟೋಽಯಮಿತಿ ಧೀಃ ಕಸ್ಮಾದ್ ಘಟತ್ವಜ್ಞಾನಜಾ ವದ ।
ತಜ್ಜೀವತಿ ಜ್ಞಾನಸಾಮ್ಯೇ ತ್ವಚ್ಚಾದ್ಧನಿಯಮಂ ತ್ಯಜ ॥ ೮೪೭ ॥

**ಅರ್ಥ**-ಘಟೇ ಘಟತ್ವಮಿತಿ ಧೀಃ= ಘಟೇ ಘಟತ್ವಂ ಎಂಬ ಜ್ಞಾನವು, ಘಟತ್ವ ಜ್ಞಾನಜಾ ನ ಚೇತ್= ಘಟತ್ವ ಜ್ಞಾನಜನ್ಯವಲ್ಲದಿದ್ದರೆ, ಘಟೋಽಯಮಿತಿ ಧೀಃ= ಅಯಂ ಘಟಃ ಎಂಬ ಜ್ಞಾನವು, ಕಸ್ಮಾತ್= ಯಾವ ಕಾರಣದಿಂದ, ಘಟತ್ವಜ್ಞಾನಜಾ= ವಿಶೇಷಣವಾದ ಘಟತ್ವದ ಜ್ಞಾನ ಜನ್ಯವಾದುದು ಎಂದು, ವದ= ಹೇಳು, ತತ್= ಆದ್ದರಿಂದ, ಜ್ಞಾನಸಾಮ್ಯೇ= ಜ್ಞಾನದ್ವಯ ಸಾಮ್ಯವು, ಜೀವತಿ= ವೈಷಮ್ಯಕ್ಕೆ ಕಾರಣವಿಲ್ಲದೆ ಸ್ಥಿರವಾಗಿ ಬದುಕಿರುವಾಗ, ತ್ವಚ್ಚಾದ್ಧನಿಯಮಂ= ನಿನ್ನ ವ್ಯರ್ಥವಾದ ನಿಯಮವನ್ನು, ತ್ಯಜ= ಪರಿತ್ಯಜಿಸು.

**ಅನುವಾದ**- ಘಟೇ ಘಟತ್ವಂ ಎಂಬ ಜ್ಞಾನವು ಘಟತ್ವ ಜ್ಞಾನಜನ್ಯವಲ್ಲದಿದ್ದರೆ ಅಯಂ ಘಟಃ ಎಂಬ ಜ್ಞಾನವು ಏಕೆ ಘಟತ್ವಜ್ಞಾನಜನ್ಯವಾಗುತ್ತದೆ ಎಂದು ಹೇಳು. ಎರಡು

**ಜ್ಞಾನಗಳಿಗೂ ಸಾಮ್ಯವಿರುವಾಗ ವೈಷಮ್ಯಹೇತುವಾದ ಯಾವ ಮಾರಕವೂ ಇಲ್ಲದಿರುವುದರಿಂದ ಅವೆರಡೂ ಸ್ಥಿರವಾಗಿ ಜೀವಿಸುತ್ತಿರುವುದರಿಂದ ವ್ಯರ್ಥಾಂಗೀಕಾರ ರೂಪವಾದ ನಿನ್ನ ಶ್ರಾದ್ಧ ನಿಯಮವನ್ನು ಪರಿತ್ಯಜಿಸು.**

**ಭಾವವಿಲಾಸಿನೀ** – ದುರಾಗ್ರಹಾದೇವ ಪರೇಣೇದಮುಚ್ಯತೇ ನತು ವಸ್ತುಸ್ಥಿತೀತಿ ಭಾವೇನಾಹ – **ಘಟ ಇತಿ ।।** ಯದಿ ಘಟತ್ವಂ ಸರ್ವತ್ರ ಪ್ರಾಗ್‌ಜ್ಞಾತಮೇವ ಜ್ಞಾಯತ ಇತಿ ನಿಯಮಃ ತದಾ ಘಟೋಽಯಮಿತ್ಯತ್ರಾಪಿ ಸ್ಯಾತ್ । ತಚ್ಚ ನಾಸ್ತಿ । ಘಟೇ ಘಟತ್ವಮಿತಿ ಪ್ರತೀತೌ ವಿಶೇಷ್ಯಭೂತಘಟತ್ವಸ್ಯ ತ್ವಯಾಪಿ ಪ್ರಾಗಜ್ಞಾತಸ್ಯೈವ ಜ್ಞಾನಾಂಗೀಕಾರಾತ್ । ಯದಿ ಚಾತ್ರ ಘಟತ್ವೇಂದ್ರಿಯಸನ್ನಿಕರ್ಷೇಣೈವಾಲಮ್ । ಕಿಂ ಪ್ರಾಗ್‌ಜ್ಞಾನೇನೇತಿ ಮತಮ್ । ಏವಂ ತರ್ಹ್ಯತ್ರ ವಿಶೇಷ್ಯಭೂತಘಟತ್ವಜ್ಞಾನಜನಕೇಂದ್ರಿಯಾರ್ಥಸನ್ನಿಕರ್ಷಸ್ಯ ವಿಶೇಷಣತಾದ್ರಿಶಾಯಾಮಪಿ ಸತ್ತ್ವಾತ್ತೇನೈವ ಕುತೋ ನ ತತ್‌ಜ್ಞಾನಮ್ । ನಹಿ ಘಟಪ್ರಕಾಶಕಃ ಪ್ರದೀಪಃ ಸ್ವಗೃಹೇ ಚೇತ್ ಸ್ವಯಮೇವ ಪ್ರಕಾಶಯತಿ । ಪರಗೃಹೇ ಚೇತ್ ಪರಸಹಾಯೇನೇತ್ಯಸ್ತಿ । ಅತಃ ಪರಸ್ಯಾಯಂ ದುರಾಗ್ರಹ ಏವ । ತತ್ ತಸ್ಮಾತ್ ಜ್ಞಾನದ್ವಯಸ್ಯ ವಿಶೇಷಾಭಾವಾತ್ । ಜ್ಞಾನಸಾಮ್ಯೇ ಜ್ಞಾನದ್ವಯಸಾಮ್ಯೇ । ಜೀವತಿ ವೈಷಮ್ಯಕರಣಹೇತ್ವಾಖ್ಯಮಾರಕಾಭಾವೇನ ಸ್ಥಿರತಯಾ ಸ್ಥಿತೇ ಸತಿ । ತ್ವಚ್ಛ್ರಾದ್ಧನಿಯಮಂ ತ್ವಯಾಂಗೀಕೃತಶ್ರಾದ್ಧನಿಯಮಮ್ । ವೃಥಾಂಗೀಕಾರಸ್ಯ ಶ್ರಾದ್ಧನಿಯಮ ಇತಿ ವಿದುಷಾಂ ಸಂಕೇತಃ । ತಂ ತ್ಯಜೇತಿ ಯೋಜನಾ । ಜ್ಞಾನದ್ವಯಸ್ಯ ಸಾಮ್ಯೇ ಸತ್ಯೇಕತ್ರ ವಿಶೇಷಾಂಗಿಕಾರೋಽನುಚಿತ ಇತಿ ಭಾವಃ । ಮೃತೇ ಖಲು ಶ್ರಾದ್ಧಂ ಕರ್ತವ್ಯಂ ಜೀವತಃ ಶ್ರಾದ್ಧಮನುಚಿತಮಿತಿ ಧ್ವನಿಃ ।। ೮೪೭ ।।

**ವಿವರಣೆ**- ದುರಾಗ್ರಹದಿಂದಲೇ ಪರನಿಂದ ವಿಶೇಷಣ ಜ್ಞಾನವು ವಿಶಿಷ್ಟಜ್ಞಾನಕ್ಕೆ ಕಾರಣ ಎಂದು ಹೇಳಲ್ಪಡುತ್ತದೆ, ವಸ್ತು ಸ್ಥಿತಿಯಿಂದಲ್ಲ ಎಂದು ಇಲ್ಲಿ ಹೇಳುತ್ತಾರೆ. ಘಟದ ಜ್ಞಾನ ಬರಬೇಕಾದರೆ ಮೊದಲು ಘಟತ್ವದ ಜ್ಞಾನವಿರಬೇಕು ಎಂಬ ನಿಯಮವು ಎಲ್ಲ ಕಡೆಯಲ್ಲಿಯೂ ಇದ್ದರೆ, ಘಟೇ ಘಟತ್ವಂ ಎಂಬ ಜ್ಞಾನ ಬರಬೇಕಾದರೆ ಮೊದಲು ಘಟತ್ವದ ಜ್ಞಾನವಿರಬೇಕು. ಆದರೆ ಅದು ಇಲ್ಲ. ಘಟತ್ವವು ವಿಶೇಷ್ಯವಾಗಿ ತೋರುವುದರಿಂದ ಮೊದಲು ಅಜ್ಞಾತವಾದ ಘಟತ್ವದ ಜ್ಞಾನವೇ ಬರುವುದೆಂದು ನೀನೂ ಅಂಗೀಕರಿಸಿದ್ದೀಯೆ. ಆ ಜ್ಞಾನದ ಸ್ಥಳದಲ್ಲಿ ಘಟತ್ವ ಮತ್ತು ಇಂದ್ರಿಯಸನ್ನಿಕರ್ಷ ಇದ್ದರೆ ಸಾಕು ಮೊದಲು ಘಟತ್ವದ ಜ್ಞಾನ ಬೇಕಾಗಿಲ್ಲ ಎಂದು ನೀನು ಹೇಳುವುದಾದರೆ, ಅಯಂ ಘಟಃ ಎಂಬಲ್ಲಿ ಘಟತ್ವವು ವಿಶೇಷಣವಾಗಿ ತೋರುವಾಗಲೂ, ಪ್ರತೀತ್ಯಂತರದಲ್ಲಿ ವಿಶೇಷ್ಯವಾಗಿದ್ದ ಘಟತ್ವಜ್ಞಾನಜನಕವಾದ ಇಂದ್ರಿಯ ಮತ್ತು ಅರ್ಥಸನ್ನಿಕರ್ಷವು ಇರುವುದರಿಂದ ಅದರಿಂದಲೇ ಏಕೆ ಘಟತ್ವದ ಜ್ಞಾನವು ಬರುವುದಿಲ್ಲ? ಇಂದ್ರಿಯಸನ್ನಿಕರ್ಷವು ಒಂದು ಕಡೆ ಸ್ವಯಂ ಘಟತ್ವಜ್ಞಾನವನ್ನು ಉಂಟು ಮಾಡಿಕೊಡುವುದಾದರೆ ಇನ್ನೊಂದು ಕಡೆಯಲ್ಲಿ ಏಕೆ

ಉಂಟುಮಾಡಿಕೊಡುವುದಿಲ್ಲ? ತನ್ನ ಮನೆಯಲ್ಲಿ ಘಟವನ್ನು ತಾನೇ ಪ್ರಕಾಶಿಸುವ ದೀಪವು ಇನ್ನೊಂದು ಮನೆಯಲ್ಲಿ ಮಾತ್ರ ಅನ್ಯ ಸಹಾಯವನ್ನು ಅಪೇಕ್ಷಿಸುತ್ತದೆ ಎಂಬುದು ಇಲ್ಲವಷ್ಟೇ ? ಆದ್ದರಿಂದ ಇದು ಪರನ ದುರಾಗ್ರಹವೇ ಸರಿ. ಘಟೇ ಘಟತ್ವಂ ಎಂಬ ಜ್ಞಾನದಲ್ಲಿಯೂ, ಅಯಂ ಘಟಃ ಎಂಬ ಜ್ಞಾನದಲ್ಲಿಯೂ ಘಟ, ಘಟತ್ವ ಮತ್ತು ತತ್ಸಂಬಂಧಗಳು ತೋರುತ್ತವೆ. ಹೀಗೆ ಎರಡು ಜ್ಞಾನಗಳಿಗೆ ಸಾಮ್ಯವಿದೆ. ವೈಷಮ್ಯವನ್ನು ಮಾಡುವುದಕ್ಕೆ ಯಾವ ಕಾರಣವೂ ಇಲ್ಲ ಎಂದು ಅಭಿಪ್ರಾಯ.

ಘಟತ್ವನಿರ್ವಿಕಲ್ಪೋತ್ಥಾ ನ ಘಟತ್ವವಿಶಿಷ್ಟಧೀಃ ।
ಘಟತ್ವಸವಿಕಲ್ಪತ್ವಾದ್ ಘಟತ್ವೇನ ಪ್ರತೀತಿವತ್ ॥ ೮೪೮ ॥

**ಅರ್ಥ**-ಘಟತ್ವವಿಶಿಷ್ಟಧೀಃ= ಘಟತ್ವ ವಿಶಿಷ್ಟಜ್ಞಾನವು, ನ ಘಟತ್ವನಿರ್ವಿಕಲ್ಪೋತ್ಥಾ= ಘಟತ್ವ ನಿರ್ವಿಕಲ್ಪಕ ಜ್ಞಾನಜನ್ಯವಲ್ಲ, ಘಟತ್ವ ಸವಿಕಲ್ಪಕತ್ವಾತ್= ಘಟತ್ವ ಸವಿಕಲ್ಪಕ ಜ್ಞಾನವಾದ್ದರಿಂದ, ಘಟತ್ವೇನ ಪ್ರತೀತಿವತ್= ಇಹ ಘಟತ್ವಂ ಎಂಬ ಪ್ರತೀತಿಯಂತೆ ಎಂಬ ಅನುಮಾನವು (ನಿನ್ನ ನಿರ್ವಿಕಲ್ಪಕ ಜ್ಞಾನವನ್ನು ನಿರಾಕರಿಸುತ್ತದೆ).

**ಅನುವಾದ**- ಘಟೋಯಂ ಇತಿ ವಿಶಿಷ್ಟ ಧೀಃ, ನ ಘಟತ್ವ ಜ್ಞಾನಜನ್ಯಾ, ಲೌಕಿಕ ಘಟತ್ವ ಪ್ರತ್ಯಕ್ಷತ್ವಾತ್, ಇಹ ಘಟತ್ವಮಿತಿ ಪ್ರತೀತಿವತ್ ಎಂಬ ಅನುಮಾನವು ನಿನಗೆ ಅಭಿಮತವಾದ ವಿಶೇಷಣ ಸವಿಕಲ್ಪಕ ಜ್ಞಾನಕಾರಣತ್ವವನ್ನು ನಿರಾಕರಿಸುತ್ತದೆ.

**ಭಾವವಿಲಾಸಿನೀ** – ಪ್ರತ್ಯನುಮಾನಂ ರಚಯತಿ ॥ **ಘಟತ್ವೇತಿ** ॥ ಘಟತ್ವವಿಶಿಷ್ಟಧೀಃ ಘಟೋಽಯಮಿತಿ ವಿಶಿಷ್ಟಧೀರಿತ್ಯರ್ಥಃ । ಘಟತ್ವೇಹಪ್ರತೀತಿವತ್ ಘಟತ್ವಸ್ಯ ಇಹೇತಿ ಪ್ರತೀತಿವತ್। ಇಹ ಘಟತ್ವಮಿತಿ ಪ್ರತೀತಿವದಿತ್ಯರ್ಥಃ । ತಥಾ ಚಾಯಂ ಪ್ರಯೋಗಃ । ಘಟೋಽಯಮಿತಿ ವಿಶಿಷ್ಟಧೀಃ ನ ಜನ್ಯಘಟತ್ವಜ್ಞಾನಜನ್ಯಾ । ಲೌಕಿಕಘಟತ್ವಾಸ್ತಿತ್ವಪ್ರತ್ಯಕ್ಷತ್ವಾತ್ । ಇಹ ಘಟತ್ವಮಿತಿ ಪ್ರತೀತಿವತ್ । ಉಭಯತ್ರ ಸಾಮ್ಯಸ್ಫೋರಣಾಯ ಘಟತ್ವಪದಮ್ । ಘಟೇ ಘಟತ್ವಮಿತಿ ಘಟತ್ವವಿಶೇಷ್ಯಕಜ್ಞಾನೇ ಘಟತ್ವನಿರ್ವಿಕಲ್ಪಕಾಜನ್ಯತ್ವಸ್ಯ ಪರೇಣಾಪ್ಯಂಗೀಕಾರಾತ್ ನ ದೃಷ್ಟಾಂತಸ್ಯ ಸಾಧ್ಯವೈಕಲ್ಯಮಿತಿ ಭಾವಃ ॥ ೮೪೮ ॥

**ವಿವರಣೆ**- ಅಯಂ ಘಟಃ ಮತ್ತು ಇಹ ಘಟತ್ವಂ ಎಂಬ ಜ್ಞಾನಗಳಿಗೆ ಸಾಮ್ಯವನ್ನು ತೋರಿಸುವುದಕ್ಕೋಸ್ಕರ ಘಟತ್ವೇನ ಪ್ರತೀತಿವತ್ ಎಂದು ಹೇಳಿದ್ದಾರೆ. ಘಟೇ ಘಟತ್ವಂ ಎಂಬ ಘಟತ್ವವಿಶೇಷ್ಯಕಜ್ಞಾನದಲ್ಲಿ ಘಟತ್ವನಿರ್ವಿಕಲ್ಪಕಜನ್ಯತ್ವವಿಲ್ಲ ಎಂದು ಪರನೂ ಅಂಗೀಕರಿಸುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ ಎಂದು ಅಭಿಪ್ರಾಯ.

ಅಸನ್ನಿಕರ್ಷಭಂಗಾಯ ಯದಿ ತಜ್ಜ್ಞಾನಮಿಷ್ಯತೇ ।
ತತ್ರೈವ ತರ್ಹಿ ತಜ್ಜ್ಞಾನಂ ವಾಚ್ಯಂ ನಾನ್ಯತ್ರ ಕುತ್ರಚಿತ್ ॥ ೮೪೯ ॥

**ಚಂದನೇ ಸೌರಭಜ್ಞಾನಂ ತತ್ರ ತಸ್ಯ ಪ್ರಮಾತರಿ ।**
**ಉಪನಾಯಕತಾಮೇತಿ ಧೀಃ ಸಾ ತತ್ಸನ್ನಿಕರ್ಷಜಾ ॥ ೮೫೦ ॥**

**ಅರ್ಥ**-ಅಸನ್ನಿಕರ್ಷಭಂಗಾಯ= ಅಸನ್ನಿಕರ್ಷ ದೋಷವನ್ನು ಪರಿಹಾರ ಮಾಡುವುದಕ್ಕಾಗಿ, ಯದಿ= ಒಂದು ಪಕ್ಷ, ತಜ್‌ಜ್ಞಾನಮಿಷ್ಯತೇ= ರಜತಜ್ಞಾನವನ್ನು ಅಂಗೀಕರಿಸುವುದಾದರೆ, ತರ್ಹಿ= ಆಗ, ತತ್ರೈವ= ಶುಕ್ತಿಯಲ್ಲಿಯೇ, ತಜ್‌ಜ್ಞಾನಂ= ರಜತಜ್ಞಾನವನ್ನು, ವಾಚ್ಯಂ= ಹೇಳಬೇಕು, ಅನ್ಯತ್ರ ಕುತ್ರಚಿತ್= ಬೇರೆ ಆಪಣಾದಿ ಸ್ಥಳದಲ್ಲಿ ಎಲ್ಲಿಯೂ, ನ ವಾಚ್ಯಂ= ಹೇಳಬಾರದು, ಚಂದನೇ= ಚಂದನದಲ್ಲಿ, ಸೌರಭಜ್ಞಾನಂ= ಸೌರಭಜ್ಞಾನವು, ತತ್ರ= ಚಂದನದಲ್ಲಿ, ತಸ್ಯ= ಆ ಸೌರಭದ, ಪ್ರಮಾತರಿ= ಪ್ರಮಾತೃವಿಗೆ, ಉಪನಾಯಕತಾಂ= ಉಪನಾಯಕತ್ವವನ್ನು, ಏತಿ= ಹೊಂದುತ್ತದೆ, ಸಾ ಧೀಃ= ಆ ಸೌರಭ ಜ್ಞಾನವಾದರೂ, ತತ್ಸನ್ನಿಕರ್ಷಜಾ= ಆ ಜ್ಞಾನರೂಪವಾದ ಸನ್ನಿಕರ್ಷದಿಂದ ಜನ್ಯವಾದುದು.

**ಅನುವಾದ-** ಚಕ್ಷುಸ್ಸನ್ನಿಕರ್ಷವಿಲ್ಲದೆ ಚಾಕ್ಷುಷಜ್ಞಾನದಲ್ಲಿ ಹೇಗೆ ವಿಷಯವಾಗುತ್ತದೆ ಎಂಬ ಆಪತ್ತಿಯನ್ನು ಪರಿಹಾರ ಮಾಡುವುದಕ್ಕಾಗಿ ಸನ್ನಿಕರ್ಷವನ್ನು ಉಪಪಾದನೆ ಮಾಡಲು ರಜತಜ್ಞಾನವನ್ನು ಅಂಗೀಕರಿಸುವುದಾದರೆ ಆಗ ಪುರೋವೃತ್ತಿಯಾದ ಶುಕ್ತಿಶಕಲದಲ್ಲಿಯೇ ರಜತಜ್ಞಾನವನ್ನು ಅಂಗೀಕರಿಸಬೇಕು. ಆಪಣಾದಿಗಳಲ್ಲಿರುವ ರಜತದ ಜ್ಞಾನವನ್ನು ಅಂಗೀಕರಿಸಬಾರದು. ಚಂದನದಲ್ಲಿ ಸೌರಭಜ್ಞಾನವೇ, ಚಂದನದಲ್ಲಿ ಸೌರಭವನ್ನು ತಿಳಿಯುವ ಪುರುಷನಿಗೆ ಉಪನಾಯಕವಾಗುತ್ತದೆ. ಆ ಸೌರಭವಾದರೂ ಸೌರಭ ಜ್ಞಾನರೂಪವಾದ ಸನ್ನಿಕರ್ಷ ಜನ್ಯವಾದುದು.

**ಭಾವವಿಲಾಸಿನೀ** – ನನು ಚಕ್ಷುಸ್ಸನ್ನಿಕೃಷ್ಟತ್ವೇನ ಚಕ್ಷುರಯೋಗ್ಯರಜತಸ್ಯೋಪನಾಯಕತಯಾ ಸುರಭಿ ಚಂದನಮಿತಿ ಚಾಕ್ಷುಷಪ್ರತೀತೌ ಸೌರಭಜ್ಞಾನವತ್ ರಜತಜ್ಞಾನಮಪಿ ಸನ್ನಿಕರ್ಷಸ್ಥಾನೀಯತ್ವೇನಾಂಗೀಕಾರ್ಯಮಿತ್ಯತ ಆಹ – **ಅಸನ್ನಿಕರ್ಷೇತಿ** ॥ ತತ್ ಜ್ಞಾನಂ ರಜತಜ್ಞಾನಮ್ । ತತ್ರೈವ ಯದ್ವಿಶೇಷಣತಯಾ ಪ್ರತೀಯತೇ ತತ್ರ ವಿಶೇಷ್ಯೇ ಶುಕ್ತಿಶಕಲ ಇತ್ಯರ್ಥಃ ॥ ತಸ್ಯ ಸೌರಭಸ್ಯ । ತತ್ರ ಚಂದನೇ । ತತ್ರ ಪ್ರಮಾತರಿ ಚೋತ್ಪನ್ನೇತ್ಯರ್ಥಃ । ಸಾ ತತ್ರೈವ ಜಾಯಮಾನಾ ವಿಶಿಷ್ಟಧೀಃ । ತತ್‌ಸನ್ನಿಕರ್ಷಜಾ ತಾದೃಶಜ್ಞಾನಾಖ್ಯಸನ್ನಿಕರ್ಷಜಾ ॥ ೮೪೯- ೮೫೦ ॥

**ವಿವರಣೆ-** ಶುಕ್ತಿರಜತದ ಸ್ಥಳದಲ್ಲಿ ರಜತಕ್ಕೂ ಚಕ್ಷುಸ್ಸಿಗೂ ಸನ್ನಿಕರ್ಷವಿಲ್ಲದಿರುವುದರಿಂದ ಚಕ್ಷುಸ್ಸಿಗೆ ಅಯೋಗ್ಯವಾದ ರಜತವು ಜ್ಞಾನದಲ್ಲಿ ತೋರುವ ಸಲುವಾಗಿ ಸುರಭಿಚಂದನಂ ಎಂಬ ಚಾಕ್ಷುಷ ಪ್ರತೀತಿಯಲ್ಲಿ ಸೌರಭಜ್ಞಾನವನ್ನು ಸನ್ನಿಕರ್ಷಸ್ಥಾನದಲ್ಲಿ ಅಂಗೀಕರಿಸಿದಂತೆ, ರಜತಜ್ಞಾನವನ್ನೂ ಸನ್ನಿಕರ್ಷ ಸ್ಥಾನದಲ್ಲಿ ಅಂಗೀಕರಿಸಬೇಕು ಎಂಬ ಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಹಾಗೆ ಸನ್ನಿಕರ್ಷರೂಪವಾಗಿ ಜ್ಞಾನವನ್ನು

ಅಂಗೀಕರಿಸುವುದಾದರೆ ಎಲ್ಲಿ ತೋರುತ್ತದೆಯೋ ಅಲ್ಲಿಯೇ ಅದರ ಜ್ಞಾನವನ್ನು ಅಂಗೀಕರಿಸಬೇಕು. ಚಂದನದಲ್ಲಿ ಸೌರಭವು ತೋರಿದರೆ ಚಂದನದಲ್ಲಿ ಸೌರಭ ಜ್ಞಾನವೇ ಸನ್ನಿಕರ್ಷವೇ ಹೊರತು, ಇನ್ನೊಂದು ಚಂದನವ್ಯಕ್ತಿಯಲ್ಲಿ ಸೌರಭಜ್ಞಾನವು ಇಲ್ಲಿ ಸನ್ನಿಕರ್ಷವಾಗುವುದಿಲ್ಲ. ಆದ್ದರಿಂದ ಪುರೋವೃತ್ತಿಯಾದ ಶುಕ್ತಿಯಲ್ಲೇ ರಜತಜ್ಞಾನ ರೂಪವಾದ ಸನ್ನಿಕರ್ಷವನ್ನು ಒಪ್ಪಬೇಕು. ನೀನು ಅದನ್ನು ಬಿಟ್ಟು ಆಪಣಸ್ಥರಜತಕ್ಕೂ ಮತ್ತು ಚಕ್ಷುಸ್ಸಿಗೂ ಸನ್ನಿಕರ್ಷವನ್ನು ಅಂಗೀಕರಿಸುತ್ತೀಯೆ. ಸುರಭಿಚಂದನಂ ಎಂಬ ಜ್ಞಾನವು ಪ್ರಮಾ. ಚಂದನದಲ್ಲಿಯೇ ಸೌರಭಜ್ಞಾನವು ಅಲ್ಲಿ ಸನ್ನಿಕರ್ಷ. ಇದಂ ರಜತಂ ಎಂಬ ಜ್ಞಾನವು ಭ್ರಾಂತಿ. ರಜತಜ್ಞಾನವನ್ನಾದರೂ ನೀನು ಶುಕ್ತಿಯಲ್ಲಿ ಒಪ್ಪದೇ ಅನ್ಯತ್ರ ಒಪ್ಪುತ್ತೀಯೆ. ಇದು ಅಯುಕ್ತವಾದುದು ಎಂದು ಅಭಿಪ್ರಾಯ.

ಚಂದನತ್ವವತಿ ವ್ಯಕ್ತ್ಯಂತರೇ ಸೌರಭಸಂಯುತೇ ।
ತಜ್‌ಜ್ಞಾನಮೇವ ಯೋಗೋ ನ ಚಕ್ಷುಷಾತ್ರಾಪಿ ತದ್ಧಿಯಃ ।
ಆದರ್ಶನಾತ್ತೇನ ಯೋಗಸ್ತತ್ರೈವ ಸ ಪರತ್ರ ನ ॥ ೮೫೧ ॥

**ಅರ್ಥ**-ಸೌರಭಸಂಯುತೇ= ಸೌರಭಸಂಯುಕ್ತವಾದ, ಚಂದನತ್ವವತಿ= ಚಂದನ ತ್ವವನ್ನು ಹೊಂದಿದ, ವ್ಯಕ್ತ್ಯಂತರೇ= ಇನ್ನೊಂದು ವ್ಯಕ್ತಿಯಲ್ಲಿ, ತಜ್‌ಜ್ಞಾನಮೇವ= ಸೌರಭ ಜ್ಞಾನವೇ, ಯೋಗೋ ನ= ಈ ಚಂದನವ್ಯಕ್ತಿಯಲ್ಲಿ ಸೌರಭವು ತೋರಲು ಉಪಯೋಗಿಯಾದ ಸನ್ನಿಕರ್ಷವಲ್ಲ, ಏಕೆಂದರೆ, ಅತ್ರಾಪಿ= ಈ ಚಂದನವ್ಯಕ್ತಿಯಲ್ಲೂ ಕೂಡ, ಚಕ್ಷುಷಾ= ಚಕ್ಷುಸ್ಸಿನಿಂದ, ತದ್ಧಿಯಃ= ಆ ಸೌರಭ ಜ್ಞಾನವು, ಆದರ್ಶನಾತ್= ಸನ್ನಿಕರ್ಷವಾಗಿ ಕಾಣುವುದಿಲ್ಲ, ತೇನ= ಆ ಕಾರಣದಿಂದ, ಸಃ ಯೋಗಃ= ಆ ಸನ್ನಿಕರ್ಷವು, ತತ್ರೈವ= ಎಲ್ಲಿ ಪ್ರತೀತಿ ಉಂಟಾಗುತ್ತದೆಯೋ, ಅಲ್ಲಿಯೇ ಆಗಬೇಕು, ಪರತ್ರ ನ= ಬೇರೆ ಕಡೆಯಲ್ಲಿ ಆಗಬಾರದು.

**ಅನುವಾದ**- ಸೌರಭಯುಕ್ತವಾದ ಚಂದನತ್ವವನ್ನು ಹೊಂದಿದ ವ್ಯಕ್ತ್ಯಂತರದಲ್ಲಿ ಸೌರಭಜ್ಞಾನವು ಈ ಚಂದನವ್ಯಕ್ತಿಯಲ್ಲಿ ಸೌರಭವು ತೋರುವುದಕ್ಕೆ ಅಪೇಕ್ಷಿತವಾದ ಸನ್ನಿಕರ್ಷವಲ್ಲ. ಏಕೆಂದರೆ ಚಕ್ಷುಸ್ಸಿನಿಂದ ಪುರೋವೃತ್ತಿ ಚಂದನದಲ್ಲಿ ಆ ಸೌರಭ ಜ್ಞಾನವು ಬರುವುದಿಲ್ಲ. ಆದ್ದರಿಂದ ಎಲ್ಲಿ ಜ್ಞಾನವು ಉಂಟಾಗುತ್ತದೆಯೋ, ಅಲ್ಲಿಯೇ ಸನ್ನಿಕರ್ಷವನ್ನು ಹೇಳಬೇಕು. ವ್ಯಕ್ತ್ಯಂತರ ಸನ್ನಿಕರ್ಷವು ಈ ವ್ಯಕ್ತಿಯಲ್ಲಿ ಜ್ಞಾನವು ಬರುವುದಕ್ಕೆ ಅನುಪಯುಕ್ತವಾದುದು.

**ಭಾವವಿಲಾಸಿನೀ**– ತತ್ ಜ್ಞಾನಂ ಚಂದನಾಂತರೇ ಜಾತಸೌರಭಜ್ಞಾನಮ್ । ಅತ್ರ ಅಸ್ಮಿನ್ ಚಂದನೇ। ತದ್ಧಿಯಃ ಸೌರಭವೈಶಿಷ್ಟ್ಯಧಿಯಃ । ಚಕ್ಷುಷಾಽತ್ರಾಪಿ ತದ್ಧಿಯಃ ಅದರ್ಶನಾದಿತಿ ಯೋಜನಾ । ತೇನ ಕಾರಣೇನ । ಸಃ ಯೋಗ ಇತಿ ಸಂಬಂಧಃ ॥ ೮೫೧ ॥

**ಶುಕ್ತಿವ್ಯಕ್ತಾವೇವ ತಸ್ಮಾದ್ ರಜತತತ್ವಸ್ಯ ಧೀರ್ಯದಿ ।**
**ಸೈವೋಪಸ್ಥಾಪಿಕಾ ಭೂಯಾಚ್ಚಕ್ಷುಷೋ ಮನಸೋಽಪಿ ವಾ ।**
**ದೋಷಾದಸನ್ನಿಕೃಷ್ಟಸ್ಯ ಧೀರೇವಾತ್ರೋಚಿತಾ ತತಃ ॥ ೮೫೨ ॥**

**ಅರ್ಥ**-ತಸ್ಮಾತ್= ಆದ್ದರಿಂದ, ಶುಕ್ತಿವ್ಯಕ್ತಾವೇವ= ಶುಕ್ತಿವ್ಯಕ್ತಿಯಲ್ಲಿಯೇ, ಯದಿ= ಒಂದು ಪಕ್ಷ, ರಜತತ್ವ ಧೀಃ= ರಜತತತ್ವಜ್ಞಾನವು ಉಂಟಾದರೆ, ಸೈವ= ಆ ರಜತತ್ವಜ್ಞಾನವೇ, ಚಕ್ಷುಷಃ= ಚಕ್ಷುಸ್ಸಿಗಾಗಲೀ, ವಾ= ಅಥವಾ, ಮನಸೋಽಪಿ= ಮನಸ್ಸಿಗಾಗಲೀ, ಉಪಸ್ಥಾಪಿಕಾ ಭೂಯಾತ್= ಉಪಸ್ಥಾಪಕವಾದ ಸನ್ನಿಕರ್ಷವಾಗುತ್ತದೆ, ತತಃ= ಆ ಕಾರಣದಿಂದ, ದೋಷಾತ್= ದೋಷದ ಸಾಮರ್ಥ್ಯದಿಂದ, ಅಸನ್ನಿಕೃಷ್ಟಸ್ಯ ಏವ= ಸನ್ನಿಕರ್ಷರಹಿತವಾದ ವಸ್ತುವಿನದೇ, ಧೀಃ= ಜ್ಞಾನವು, ಅತ್ರ= ಶುಕ್ತಿರಜತ ಸ್ಥಳದಲ್ಲಿ, ಉಚಿತಾ= ಯೋಗ್ಯವಾದುದು.

**ಅನುವಾದ- ಆದ್ದರಿಂದ ಶುಕ್ತಿವ್ಯಕ್ತಿಯಲ್ಲಿಯೇ ರಜತತ್ವದ ಜ್ಞಾನವು ಉಂಟಾದರೆ ಆ ಜ್ಞಾನವನ್ನೇ ಚಕ್ಷುಸ್ಸಿಗಾಗಲೀ ಅಥವಾ ಮನಸ್ಸಿಗಾಗಲೀ ಸನ್ನಿಕರ್ಷವೆಂದು ಅಂಗೀಕರಿಸಬೇಕು. ಆದ್ದರಿಂದ ದೋಷದ ಬಲದಿಂದಲೇ ಸನ್ನಿಕರ್ಷವಿಲ್ಲದಿದ್ದರೂ ಇಲ್ಲಿ ಅಸನ್ನಿಕೃಷ್ಟಾರ್ಥ ವಿಷಯದ ಜ್ಞಾನವು ಉಂಟಾಗುತ್ತದೆ ಎಂದು ಅಂಗೀಕರಿಸುವುದೇ ಯುಕ್ತವಾದುದು.**

**ಭಾವವಿಲಾಸಿನೀ** – ಸಾಕ್ಷಾತ್ ಜ್ಞಾನಸ್ಯ ಮನಸಿ ವಿದ್ಯಮಾನತ್ವಾತ್ ಮನೋದ್ವಾರಾ ಚಕ್ಷುಷೋಽಪ್ಯುಪಕಾರಿತ್ವಾದ್ದ್ವಯಮಪ್ಯುಕ್ತಮ್ । ತತಃ ಶುಕ್ತಿಕಾಯಾಮೇವ ಪ್ರಾಗ್ರಜತಜ್ಞಾನಾಭಾವಾತ್ ॥ ೮೫೨ ॥

**ವಿವರಣೆ**- ಜ್ಞಾನವು ಸಾಕ್ಷಾತ್ತಾಗಿ ಮನಸ್ಸಿನಲ್ಲಿರುವುದರಿಂದ ಮನಸ್ಸಿಗೆ ಸಂಬಂಧವಾಗಬಹುದು. ಆದರೂ ಮನೋದ್ವಾರಾ ಚಕ್ಷುಸ್ಸಿಗೂ ಉಪಕಾರಕವಾದ್ದರಿಂದ ಚಕ್ಷುಸ್ಸಿಗೂ ಸಂಬಂಧವಾಗಬಹುದು ಎಂದು ಅಭಿಪ್ರಾಯ. ಶುಕ್ತಿರಜತತ್ವ ಜ್ಞಾನವು ಉಂಟಾಗಬೇಕಾದರೆ ಅದೇ ಶುಕ್ತಿಯಲ್ಲಿ ರಜತತ್ವ ಜ್ಞಾನವು ಸನ್ನಿಕರ್ಷ ಎಂದು ಹೇಳಬೇಕು. ಆ ರಜತತ್ವಜ್ಞಾನವಾದರೂ ಶುಕ್ತಿರಜತಜ್ಞಾನಕ್ಕಿಂತ ಮೊದಲು ಇಲ್ಲ. ಆದ್ದರಿಂದ ಅಂತಹ ಜ್ಞಾನರೂಪ ಸನ್ನಿಕರ್ಷವನ್ನು ಬಿಟ್ಟು ದೋಷದಿಂದಲೇ ಸನ್ನಿಕರ್ಷವಿಲ್ಲದಿದ್ದರೂ ರಜತಜ್ಞಾನವು ಉಂಟಾಗುತ್ತದೆ ಎಂದು ಹೇಳಬೇಕು ಎಂದು ಅಭಿಪ್ರಾಯ.

**ಅಸತೋ ಯದಿ ನ ಜ್ಞಾನಂ ಕಥಂ ತತ್ರಾಸತೋಽಪಿ ತತ್ ।**
**ದೋಷಾಚ್ಚೇದ್ ದೋಷ ಏವಾಸ್ತು ತರ್ಹಿ ಸರ್ವಧುರಂಧರಃ॥ ೮೫೩ ॥**

**ಅರ್ಥ**-ಅಸತಃ= ಅಸತ್ತಿನ, ಜ್ಞಾನಂ= ಜ್ಞಾನವು, ಯದಿ ನ= ಉಂಟಾಗುವುದಿಲ್ಲ ಎನ್ನುವುದಾದರೆ, ತತ್ರ ಅಸತೋಽಪಿ= ಅಲ್ಲಿ ಇಲ್ಲದಿರುವ ಪದಾರ್ಥಕ್ಕೂ, ಕಥಂ= ಹೇಗೆ, ತತ್=

ಜ್ಞಾನವು ಉಂಟಾಗುತ್ತದೆ, ದೋಷಾಚ್ಚೇತ್= ದೋಷದಿಂದ ಎಂದು ಹೇಳುವುದಾದರೆ, ತರ್ಹಿ= ಆಗ, ಸರ್ವಧುರಂಧರಃ= ಎಲ್ಲ ಕಡೆಗಳಲ್ಲಿಯೂ ಸರ್ವನಿರ್ವಾಹಕವಾದ, ದೋಷ ಏವಾಸ್ತು= ದೋಷವೇ ಜ್ಞಾನಜನಕವಾಗಲಿ.

**ಅನುವಾದ-** ಅಸತ್ತಿನ ಜ್ಞಾನವು ಉಂಟಾಗುವುದಿಲ್ಲ ಎನ್ನುವುದಾದರೆ ಅಲ್ಲಿ - ಅಸತ್ತಾದ ವಸ್ತುವಿನ ಜ್ಞಾನವಾದರೂ ಹೇಗೆ ಉಂಟಾಗುತ್ತದೆ (ಸನ್ನಿಕರ್ಷಾಭಾವವು ಎರಡು ಕಡೆಗಳಲ್ಲಿಯೂ ಸಮವಾಗಿದೆ). ದೋಷದಿಂದ ಉಂಟಾಗುತ್ತದೆ ಎಂದು ಹೇಳುವುದಾದರೆ ದೋಷವೇ ಸರ್ವಕಾರ್ಯನಿರ್ವಾಹಕವಾಗಲಿ.

**ಭಾವವಿಲಾಸಿನೀ** – ತತ್ರ ಪ್ರತೀತಿಸ್ಥಲೇ । ತತ್ ಜ್ಞಾನಮ್ ॥ ೮೫೩ ॥

**ವಿವರಣೆ-** ಅಲ್ಲಿ ಇಲ್ಲದಿರುವ ವಸ್ತುವಿನ ಜ್ಞಾನವು ಸನ್ನಿಕರ್ಷವಿಲ್ಲದಿದ್ದರೂ ದೋಷದಿಂದ ಉಂಟಾಗುತ್ತದೆ ಎನ್ನುವುದಾದರೆ ಎಲ್ಲೂ ಇಲ್ಲದಿರುವ ವಸ್ತುವಿನ ಜ್ಞಾನವೂ ಸನ್ನಿಕರ್ಷವಿಲ್ಲದಿದ್ದರೂ ದೋಷದಿಂದಲೇ ಉಂಟಾಗಲಿ ಎಂದು ಅಭಿಪ್ರಾಯ.

ವಿಶೇಷಣಜ್ಞಾನಜತ್ವಸಿದ್ಧ್ಯೈ ತಸ್ಯಾಪಣಸ್ಥತಾ ।
ಯದಿ ಸ್ಯಾದಕ್ಷಸಂಯೋಗಜತ್ವಾತ್ತರ್ಹ್ಯಸ್ತು ತತ್ರ ತತ್ ।
ಬಾಧಾದಿದಂ ನ ಚೇತ್ತರ್ಹಿ ಬಾಧಾದೇವ ಭವೇನ್ನ ಸಾ ॥ ೮೫೪ ॥

**ಅರ್ಥ**-ವಿಶೇಷಣಜ್ಞಾನಜತ್ವಸಿದ್ಧ್ಯೈ= ವಿಶೇಷಣಜ್ಞಾನಜನ್ಯತ್ವವನ್ನು ಸಂಪಾದಿಸಲು, ಯದಿ= ಒಂದು ಪಕ್ಷ, ತಸ್ಯ= ರಜತಕ್ಕೆ, ಆಪಣಸ್ಥತಾ ಸ್ಯಾತ್= ಆಪಣಸ್ಥತ್ವವನ್ನು ಅಂಗೀಕರಿಸಿದರೆ, ಅಕ್ಷಸಂಯೋಗಜತ್ವಾತ್= ಇಂದ್ರಿಯ ಸನ್ನಿಕರ್ಷ ಜನ್ಯವಾದುದರಿಂದ, ತತ್ರ= ಅಲ್ಲಿಯೇ (ಎಂದರೆ ಶುಕ್ತಿಯಲ್ಲಿಯೇ), ತತ್= ಅದು, ಅಸ್ತು= ಇರಲಿ, ಬಾಧಾತ್= ಬಾಧವು ಇರುವುದರಿಂದ, ಇದಂ= ಪುರೋದೇಶದಲ್ಲಿ, ನ ಚೇತ್= ಇಲ್ಲವೆಂದಾದರೆ, ಬಾಧಾದೇವ= ಬಾಧ ಬರುವುದರಿಂದಲೇ, ಸಾ= ಆಪಣಸ್ಥತ್ವವೂ, ನ ಭವೇತ್= ಇರುವುದಿಲ್ಲವಷ್ಟೇ.

**ಅನುವಾದ-** ವಿಶೇಷಣ ಜ್ಞಾನಜನ್ಯತ್ವವನ್ನು ಸಂಪಾದನೆ ಮಾಡಲು ರಜತಕ್ಕೆ ಆಪಣಸ್ಥತ್ವವನ್ನು ಅಂಗೀಕರಿಸುವುದಾದರೆ ಇದಂ ರಜತಂ ಎಂಬ ಜ್ಞಾನವು ಇಂದ್ರಿಯ ಸನ್ನಿಕರ್ಷ ಜನ್ಯವಾದುದರಿಂದ ಶುಕ್ತಿದೇಶದಲ್ಲಿಯೇ ರಜತಕ್ಕೆ ಸತ್ತ್ವವಿರಲಿ. ಬಾಧವಿರುವುದರಿಂದ ಪುರೋದೇಶವೃತ್ತಿತ್ವವು ರಜತಕ್ಕೆ ಇಲ್ಲ ಎಂದು ಹೇಳುವುದಾದರೆ ಬಾಧವಿರುವುದರಿಂದಲೇ ರಜತಕ್ಕೆ ಆಪಣಸ್ಥತ್ವವೂ ಇಲ್ಲ.

**ಭಾವವಿಲಾಸಿನೀ** – ತತ್ರ ಪುರೋವರ್ತಿದೇಶೇ । ತದ್ರಜತಮ್ । ಇದಂ ಪುರೋವರ್ತಿತ್ವಮ್ । ಸಾ ಆಪಣಸ್ಥಾತಾ ॥ ೮೫೪ ॥

**ವಿವರಣೆ-** ಬಾಧಕಜ್ಞಾನವು ನಾಸೀದಸ್ತಿ ಭವಿಷ್ಯತಿ ಎಂದು ಕಾಲತ್ರಯದಲ್ಲಿಯೂ ರಜತವನ್ನೂ ನಿಷೇಧಿಸುವುದರಿಂದ ಆಪಣಸ್ಥತ್ವವನ್ನೂ ನಿಷೇಧಿಸುತ್ತದೆ. ಆದ್ದರಿಂದ ಆಪಣಸ್ಥತ್ವವನ್ನಾದರೂ ಹೇಗೆ ಅಂಗೀಕಾರ ಮಾಡುತ್ತೀರಿ ಎಂದು ಆಕ್ಷೇಪ.

**ರಜತಂ ದೃಷ್ಟಮಿತ್ಯುಕ್ತೇ ಕಿಮಾಪಣಗತಂ ತ್ವಿತಿ ।**
**ಪೃಷ್ಟಸ್ತನ್ನೈತದನ್ಯಚ್ಚೇತ್ಯಾಹ ಕಿಂ ನಾಖಿಲೋ ಜನಃ ।**
**ಸರ್ವಾನುಭವಬಾಧಾಯ ನಾಲಂ ತ್ವತ್ ಪ್ರಕ್ರಿಯಾತಟಿತ್ ॥ ೮೫೫ ॥**

**ಅರ್ಥ-**ರಜತಂ ದೃಷ್ಟಮಿತ್ಯುಕ್ತೇ= ರಜತವನ್ನು ನೋಡಿದೆನು ಎಂದು ಹೇಳಿದಾಗ, ಕಿಮಾಪಣಗತಂ ತ್ವಿತಿ ಪೃಷ್ಟಃ= ಆಪಣಸ್ಥವಾದ ರಜತವನ್ನು ನೋಡಿದೆಯಾ ಎಂದು ಕೇಳಿದರೆ, ತನ್ನ ಏತದನ್ಯತ್ ಚ= ಅಲ್ಲ ಇದು ಬೇರೆಯಾದುದು, ಇತಿ= ಎಂದು, ಅಖಿಲೋ ಜನಃ= ಎಲ್ಲ ಜನರೂ, ಕಿಂ ನಾಹ= ಹೇಳುವುದಿಲ್ಲವೇನು, ತ್ವತ್ಪ್ರಕ್ರಿಯಾ ತಟಿತ್= ಅಸ್ಥಿರವಾದ ನಿನ್ನ ಪ್ರಕ್ರಿಯೆಯು, ಸರ್ವಾನುಭವಬಾಧಾಯ= ಎಲ್ಲರ ಅನುಭವವನ್ನು ಬಾಧಿಸಲು, ನಾಲಂ= ಸಮರ್ಥವಾಗುವುದಿಲ್ಲ.

**ಅನುವಾದ-** ರಜತವನ್ನು ನೋಡಿದೆ ಎಂದು ಹೇಳಿದ ವ್ಯಕ್ತಿಯನ್ನು ಕುರಿತು ಆಪಣಸ್ಥ ರಜತವನ್ನು ನೋಡಿದೆಯಾ ಎಂದು ಕೇಳಿದರೆ ಆಪಣಸ್ಥ ರಜತವನ್ನಲ್ಲ ಬೇರೆ ರಜತವನ್ನು ನೋಡಿದೆ ಎಂದು ಎಲ್ಲರೂ ಹೇಳುತ್ತಾರೆ. ನಿನ್ನ ಶಿಥಿಲವಾದ ಪ್ರಕ್ರಿಯೆಯು ಇಂತಹ ಸರ್ವಾನುಭವವನ್ನು ಬಾಧಿಸಲು ಸಮರ್ಥವಾಗುವುದಿಲ್ಲ.

**ಭಾವವಿಲಾಸಿನೀ –** ಬಾಧಮೇವ ದರ್ಶಯತಿ ॥ರಜತಮಿತಿ॥ ತದಾಪಣಗತಮ್ । ಏತತ್ಪುರೋವರ್ತಿದೇಶೇ ಪ್ರತೀಯಮಾನಮ್ । ಅಖಿಲೋ ಜನಃ । ಅತ್ರ ದೃಷ್ಟಂ ರಜತಂ ತದಾಪಣಸ್ಥಂ ನ ಕಿಂತ್ವನ್ಯದೇವೇತಿ ನಾಹ ಕಿಮಿತಿ ಸಂಬಂಧಃ । ಅತೋಽತ್ರ ದೃಷ್ಟರಜತಸ್ಯಾಪಣಸ್ಥಿತಾ ಸರ್ವಾನುಭವಬಾಧಿತೇತಿ ಭಾವಃ । ಪರಪ್ರಕ್ರಿಯಾಯಾ ಅಸ್ಥಿರತ್ವಾತ್ತಟಿದಿತ್ಯುಕ್ತಮ್ ॥ ೮೫೫ ॥

**ವಿವರಣೆ-** ಹಿಂದಿನ ಶ್ಲೋಕದಲ್ಲಿ ಹೇಳಿದ ಆಪಣಸ್ಥತ್ವಬಾಧವನ್ನೇ ಇಲ್ಲಿ ವಿವರಿಸುತ್ತಾರೆ. ಎಲ್ಲರೂ ನಾನು ನೋಡಿದುದು ಆಪಣಸ್ಥರಜತವನ್ನಲ್ಲ ಎಂದು ಹೇಳುವುದರಿಂದ, ದೃಷ್ಟವಾದ ರಜತಕ್ಕೆ ಆಪಣಸ್ಥತ್ವವು ಸರ್ವಾನುಭವ ಬಾಧಿತವಾದುದು ಎಂದು ಅಭಿಪ್ರಾಯ.

**ಶಶಶೃಂಗಂ ಯಥಾ ನಾಸ್ತಿ ನಾಸೀನ್ನಾಪಿ ಭವಿಷ್ಯತಿ ।**
**ಶುಕ್ತ್ಯಾತ್ಮಕಂ ತಥಾ ರೂಪ್ಯಂ ನಾಸೀದಸ್ತಿ ಭವಿಷ್ಯತಿ ।**
**ಏವಂ ದ್ವಯೋಶ್ಚ ಸಾಮ್ಯೇಪಿ ಕಸ್ಮಾದಸ್ಮಿಂಸ್ತತೋನ್ಯತಾ ॥ ೮೫೬ ॥**

**ಅರ್ಥ-**ಯಥಾ= ಹೇಗೆ, ಶಶಶೃಂಗಂ= ಶಶಶೃಂಗವು, ನಾಸ್ತಿ= ಈಗ ಇಲ್ಲ, ನಾಸೀತ್= ಹಿಂದೆ ಇರಲಿಲ್ಲ, ನಾಪಿ ಭವಿಷ್ಯತಿ= ಮುಂದೆಯೂ ಇರುವುದಿಲ್ಲವೋ, ತಥಾ= ಹಾಗೆ,

ಶುಕ್ತ್ಯಾತ್ಮಕಂ ರೂಪ್ಯಂ= ಶುಕ್ತ್ಯಭಿನ್ನವಾದ ರೂಪ್ಯವು, ನಾಸೀದಸ್ತಿ ಭವಿಷ್ಯತಿ= ಹಿಂದೆ ಇರಲಿಲ್ಲ, ಈಗ ಇಲ್ಲ, ಮತ್ತು ಮುಂದೆ ಇರುವುದಿಲ್ಲ, ಏವಂ= ಹೀಗೆ, ದ್ವಯೋಶ್ಚ= ಶುಕ್ತಿರಜತಕ್ಕೂ ಮತ್ತು ಶಶಶೃಂಗಕ್ಕೂ, ಸಾಮ್ಯೇಽಪಿ= ಸಾಮ್ಯವೇ ಇದ್ದರೂ, ಕಸ್ಮಾತ್= ಯಾವ ಕಾರಣದಿಂದ, ಅಸ್ಮಿನ್= ಈ ರಜತದಲ್ಲಿ, ತತಃ= ಶಶಶೃಂಗಕ್ಕಿಂತ, ಅನ್ಯತಾ= ವೈಲಕ್ಷಣ್ಯವು (ಸ್ವೀಕರಿಸಲ್ಪಡುತ್ತದೆ)

**ಅನುವಾದ-** ಶಶಶೃಂಗವು ಹೇಗೆ ಈಗ ಇಲ್ಲ, ಹಿಂದೆ ಇರಲಿಲ್ಲ ಮತ್ತು ಮುಂದೆ ಇರುವುದಿಲ್ಲವೋ ಹಾಗೆಯೇ ಶುಕ್ತ್ಯಾತ್ಮಕವಾದ ರಜತವು ಹಿಂದೆ ಇರಲಿಲ್ಲ, ಈಗ ಇಲ್ಲ ಮತ್ತು ಮುಂದೆಯೂ ಇರುವುದಿಲ್ಲ. ಹೀಗೆ ಶುಕ್ತಿರಜತ ಮತ್ತು ಶಶಶೃಂಗಗಳಿಗೆ ಸಾಮ್ಯವೇ ಇದ್ದರೂ, ಶುಕ್ತಿರಜತದಲ್ಲಿ ಶಶಶೃಂಗಕ್ಕಿಂತ ವೈಲಕ್ಷಣ್ಯವನ್ನು ಏಕೆ ಒಪ್ಪುತ್ತೀಯೇ?

**ಭಾವವಿಲಾಸಿನೀ**– ಶುಕ್ತಿರಜತಸ್ಯ ಶಶಶೃಂಗಸ್ಯ ಚ ಸಾಮ್ಯಮಾಹ–**ಶಶಶೃಂಗಮಿತಿ**॥ ಏವಂ ಕಾಲತ್ರಯೇಽಪಿ ಸತ್ತಾನಿಷೇಧಸಾಮ್ಯೇ । ಅನ್ಯಥಾ ವಿಲಕ್ಷಣತಾ ॥ ೮೫೬ ॥

ಪೂರ್ವಾಕಾರವಿಕಾರಶ್ಚ ಕಥಂ ಸ್ಯಾದ್ ದೃಷ್ಟಿಮಾತ್ರತಃ ।
ನ ಚೇದೈಕ್ಯಂ ಚ ಭೇದಃ ಸ್ಯಾಚ್ಚರಮೇ ದರ್ಶನೇ ತವ ।
ಅಸತ್ ಪುರಾ ಕಥಂ ನೋಚೇದ್ ದೃಷ್ಟೇಃ ಸ್ಯಾದಸತೋಽಪರಂ ॥ ೮೫೭ ॥

**ಅರ್ಥ**-ದೃಷ್ಟಿಮಾತ್ರತಃ= ಕೇವಲ ದರ್ಶನದಿಂದ, ಪೂರ್ವಾಕಾರವಿಕಾರಶ್ಚ= ಮೊದಲಿನ ಆಕಾರದ ನಾಶವೂ ಸಹ, ಕಥಂ ಸ್ಯಾತ್= ಹೇಗೆ ಆಗುತ್ತದೆ, ನ ಚೇತ್= ದರ್ಶನದಿಂದ ಪೂರ್ವಾಕಾರವು ವಿಕಾರವನ್ನು ಹೊಂದುವುದಾದರೆ, ತವಚರಮೇ ದರ್ಶನೇ= ನಿನ್ನ ಚರಮ ಸಾಕ್ಷಾತ್ಕಾರವು ಉಂಟಾದಾಗ, ಐಕ್ಯಂ ಚ= ಐಕ್ಯವೂ ಕೂಡ, ಭೇದಃ ಸ್ಯಾತ್= ಭೇದವೇ ಆಗಲಿ, ನೋಚೇತ್= ಪೂರ್ವಾಕಾರವು ವಿಕಾರವ್ನನ್ನು ಹೊಂದುವುದಿಲ್ಲ ಎಂದಾದರೆ, ಪುರಾ ಅಸತ್= ಮೊದಲು ಅಸತ್ತಾಗಿದುದು, ದೃಷ್ಟೇಃ= ದರ್ಶನ ಉಂಟಾದಾಗ, ಅಸತೋಽಪರಂ= ಅಸತ್ತಿಗಿಂತ ವಿಲಕ್ಷಣವಾಗಿ, ಕಥಂ ಸ್ಯಾತ್= ಹೇಗೆ ಆಗುತ್ತದೆ?

**ಅನುವಾದ-** ಕೇವಲ ದರ್ಶನದಿಂದ ಪೂರ್ವಾಕಾರದ ವಿಕಾರವು ಹೇಗೆ ಉಂಟಾಗುತ್ತದೆ? ದರ್ಶನದಿಂದ ಪೂರ್ವಾಕಾರವು ವಿಪರಿಣಾಮವನ್ನು ಹೊಂದುವುದಾದರೆ ನಿನ್ನ ಚರಮ ಸಾಕ್ಷಾತ್ಕಾರವು ಉಂಟಾದಾಗ ಐಕ್ಯವು ಭೇದವಾಗಿ ವಿಕಾರವನ್ನು ಹೊಂದಲಿ. ಹಾಗೆ ಪೂರ್ವಾಕಾರವಿಕಾರವು ಉಂಟಾಗುವುದಿಲ್ಲ ಎನ್ನುವುದಾದರೆ ಮೊದಲು ಅಸತ್ತಾಗಿದ್ದುದು ದರ್ಶನದಿಂದ ಹೇಗೆ ಅಸದ್ ವಿಲಕ್ಷಣವಾಗುತ್ತದೆ?

**ಭಾವವಿಲಾಸಿನೀ** – ಇದಾನೀಂ ಪ್ರಕೃತಮನುಸರನ್ನಾಗಸತಶ್ಶಶಶೃಂಗಸ್ಯ ಪ್ರತೀತಿದಶಾಯಾಂ ಪ್ರಾತಿಭಾಸಿಕತ್ವಂ ಪರೇಣೋಕ್ತಮ್ । ತದೇವ ದೂಷಣಾಂತರೇಣಾಪಿ ದೂಷಯತಿ ॥ **ಪೂರ್ವೇತಿ** ॥

ಪೂರ್ವಾಕಾರವಿಕಾರಃ ಪ್ರಾಕ್ತನಾಸತ್ತ್ವಾಕಾರಸ್ಯ ಪುನಃ ಪ್ರಾತಿಭಾಸಿಕತ್ವರೂಪವಿಕಾರಃ । ನ ಚೇತ್ ದೃಷ್ಟಿಪಮಾತ್ರೇಣ ಪೂರ್ವಾಕಾರವಿಕಾರಭಾವೋ ನ ಚೇತ್ । ಪೂರ್ವಮನ್ಯಾಕಾರಸ್ಯ ದೃಷ್ಟಿದಶಾಯಾಮಾಕಾರಾಂತರಂ ಭವತಿ ಚೇದಿತಿ ಯಾವತ್ । ಐಕ್ಯಂ ಪ್ರಾಗ್ವಿದ್ಯಮಾನಮೈಕ್ಯಂ ಚರಮೇ ದರ್ಶನೇ ಭೇದಸ್ಸ್ಯಾದಿತಿ ಸಂಬಂಧಃ ॥ ೮೫೭ ॥

**ವಿವರಣೆ-** ಮಧ್ಯಪ್ರಸಕ್ತವಾದ ನಿರ್ವಿಕಲ್ಪಕವಾದವನ್ನು ನಿರಾಕರಿಸಿ ಈಗ ಪರಮಪ್ರಕೃತವಾದ ಶಶಶೃಂಗಾದಿಗಳಿಗೆ ಪ್ರತೀತಿ ದೆಶೆಯಲ್ಲಿ ಪರರು ಒಪ್ಪಿರುವ ಪ್ರಾತಿಭಾಸಿಕತ್ವವನ್ನು ನಿರಾಕರಿಸುತ್ತಾರೆ. ಮೊದಲು ಅಸತ್ತಾದ ಶಶಶೃಂಗವು ಜ್ಞಾನವು ಉಂಟಾದಾಗ ಪ್ರಾತಿಭಾಸಿಕವಾಗುತ್ತದೆ ಎಂದು ಅಂಗೀಕಾರ ಮಾಡಿದರೆ ಮೊದಲು ಇದ್ದ ಐಕ್ಯವು ಅನಂತರ ಪ್ರಾತಿಭಾಸಿಕವಾಗಲಿ ಎಂಬ ಇವೇ ಮುಂತಾದ ಆಪತ್ತಿಗಳು ಬರುವುದರಿಂದ ಪೂರ್ವಾಕಾರ ವಿಕಾರವನ್ನು ಅಂಗೀಕರಿಸಬಾರದು. ಅಸತ್ತು ಅಸತ್ತಾಗಿಯೇ ಇರುತ್ತದೆ ಪ್ರಾತಿಭಾಸಿಕವಾಗುವುದಿಲ್ಲ. ಅಸತ್ತಿಗೂ ಅಪರೋಕ್ಷ ಪ್ರತೀತಿ ಇದೆ ಎಂದು ಅಭಿಪ್ರಾಯ.

ವಿಮತಂ ಶುಕ್ತಿರಜತಂ ನಾಸತೋ ವ್ಯತಿರಿಚ್ಯತೇ ।
ತ್ರಿಕಾಲ್ಯಾಂ ಚ ನಿಷೇಧ್ಯತ್ವಾನ್ಮಾಯಿಮಸ್ತಕಶೃಂಗವತ್ ॥ ೮೫೮ ॥

ಅನಾನುಭವಿಕಂ ತಸ್ಮಾನ್ಮತಮೇತದ್ ದುರಾತ್ಮನಾಮ್ ।
ನೃಶೃಂಗವಚ್ಛುಕ್ತಿರೂಪ್ಯಮಸದೇವೇತಿ ನಿರ್ಮಲಮ್ ॥ ೮೫೯ ॥

**ಅರ್ಥ**-ವಿಮತಂ ಶುಕ್ತಿರಜತಂ= ವಿವಾದಗ್ರಸ್ತವಾದ ಶುಕ್ತಿರಜತವು, ನಾಸತೋ ವ್ಯತಿರಿಚ್ಯತೇ= ಅಸತ್ತಿಗಿಂತ ವಿಲಕ್ಷಣವಾದುದಲ್ಲ, ತ್ರಿಕಾಲ್ಯಾಂ ಚ ನಿಷೇಧ್ಯತ್ವಾತ್= ಕಾಲತ್ರಯದಲ್ಲೂ ನಿಷೇಧಿಸಲ್ಪಡುವುದರಿಂದ, ಮಾಯಿಮಸ್ತಕಶೃಂಗವತ್= ಮಾಯಿಯ ತಲೆಯ ಮೇಲಿದ್ದ ಶೃಂಗದಂತೆ (ಎಂಬ ಅನುಮಾನದಿಂದ ಶುಕ್ತಿರಜತಕ್ಕೆ ಅಸತ್ತ್ವವೇ ಸಿದ್ಧವಾಗುತ್ತದೆ).

ತಸ್ಮಾತ್= ಆದ್ದರಿಂದ, ದುರಾತ್ಮನಾಂ= ದುಷ್ಟರ, ಏತನ್ಮತಂ= ಈ ಮತವು, ಅನಾನುಭವಿಕಂ= ಅನುಭವ ವಿರುದ್ಧವಾದುದು, ನೃಶೃಂಗವತ್= ಮನುಷ್ಯ ಶೃಂಗದಂತೆ, ಶುಕ್ತಿರೂಪ್ಯಂ= ಶುಕ್ತಿರೂಪ್ಯವು, ಅಸದೇವ= ಅಸತ್ತಾದುದೇ, ಇತಿ= ಎಂಬ ಪ್ರಮೇಯವೇ, ನಿರ್ಮಲಂ= ನಿರ್ದುಷ್ಟವಾದುದು.

**ಅನುವಾದ-** ವಿಮತಂ ಶುಕ್ತಿರಜತಂ, ನ ಅಸದ್ವ್ಯತಿರಿಕ್ತಂ, ತ್ರಿಕಾಲ್ಯಾಂ ನಿಷೇಧ್ಯತ್ವಾತ್, ನೃಶೃಂಗವತ್ ಎಂಬ ಅನುಮಾನದಿಂದ ಶುಕ್ತಿರಜತಕ್ಕೆ ಅಸತ್ತ್ವವೇ ಸಿದ್ಧವಾಗುತ್ತದೆ. ಶುಕ್ತಿರಜತಕ್ಕೆ ಪ್ರಾತಿಭಾಸಿಕತ್ವವನ್ನು ಹೇಳುವ ದುಷ್ಟರ ಈ ಮತವು ಅನುಭವ ವಿರುದ್ಧವಾಗಿದೆ. ನೃಶೃಂಗದಂತೆ ಶುಕ್ತಿರಜತವೂ ಕೂಡ ಅಸತ್ತಾದುದೇ ಎಂಬ ಪ್ರಮೇಯವೇ ನಿರ್ದುಷ್ಟವಾದುದು.

**ಭಾವವಿಲಾಸಿನೀ – ಶುಕ್ತಿರಜತಸ್ಯಾಸದ್ವೈಲಕ್ಷಣ್ಯಾಭಾವೇऽನುಮಾನಮಾಹ – ವಿಮತಮಿತಿ॥** ನ ವ್ಯತಿರಿಚ್ಯತ ಇತಿ ಸಂಬಂಧಃ । ಸರ್ವಾನುಭವಸಿದ್ಧಮಸತ್ತ್ವಮಪಲಪನ್ವರಃ ಪಶುರಿತಿ ಜ್ಞಾಪನಾಯ ಮಾಯಿಮಸ್ತಕಶೃಂಗವದಿತ್ಯುಕ್ತಮ್ ॥ ೮೫೮– ೮೫೯॥

**ವಿವರಣೆ-** ನೃಶೃಂಗವತ್ ಎಂಬ ದೃಷ್ಟಾಂತವನ್ನೇ ಹೇಳಬಹುದಾದರೂ ಪರನನ್ನು ಪರಿಹಾಸ ಮಾಡಲು ಮಾಯಿಮಸ್ತಕಶೃಂಗವತ್ ಎಂದು ಹೇಳಿದ್ದಾರೆ.

**ಅಸತಃ ಶಶಶೃಂಗಸ್ಯ ಪ್ರತ್ಯಕ್ಷೇಣ ಭ್ರಮೇ ಸತಿ ।**
**ಪ್ರಾತಿಭಾಸಿಕತಾ ಸ್ಯಾಚ್ಚೇತ್ ಪ್ರಾಗ್ಧೀರಸತ ಏವ ಸಾ ॥ ೮೬೦ ॥**

**ಅರ್ಥ-**ಅಸತಃ ಶಶಶೃಂಗಸ್ಯ= ಅಸತ್ತಾದ ಶಶಶೃಂಗದ, ಪ್ರತ್ಯಕ್ಷೇಣ ಭ್ರಮೇ ಸತಿ= ಭ್ರಾಂತಿಯು ಪ್ರತ್ಯಕ್ಷದಿಂದ ಉಂಟಾದಾಗ, ಪ್ರಾತಿಭಾಸಿಕತಾ ಚೇತ್ ಸ್ಯಾತ್= ಪ್ರಾತಿಭಾಸಿಕತ್ವವು ಉಂಟಾಗುತ್ತದೆ ಎನ್ನುವುದಾದರೆ, ಪ್ರಾಗ್ಧೀಃ ಸಾ= ಪ್ರಾತಿಭಾಸಿಕತ್ವ ಪ್ರಾಪ್ತಿಗಿಂತಲೂ ಮೊದಲಿನ ಶಶಶೃಂಗ ಜ್ಞಾನವು, ಅಸತ ಏವ= ಅಸದ್ವಿಷಯಕವೇ ಆಗಿದೆ.

**ಅನುವಾದ- ಅಸತ್ತಾದ ಶಶಶೃಂಗದ ಭ್ರಾಂತಿಯು ಪ್ರತ್ಯಕ್ಷದಿಂದ ಬರುತ್ತಿರಲು ಅದಕ್ಕೆ ಪ್ರಾತಿಭಾಸಿಕತ್ವವು ಉಂಟಾಗುತ್ತದೆ ಎಂದು ಹೇಳುವುದಾದರೆ ಅದಕ್ಕಿಂತ ಮೊದಲು ಇದ್ದ ಶಶಶೃಂಗದ ಜ್ಞಾನವು ಅಸತ್ ವಿಷಯಕವಾದುದೇ ಎಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ –** ಪ್ರಾಕ್ಪ್ರಾತಿಭಾಸಿಕತ್ವಸಂಪತ್ತೇಃ ಪ್ರಾಕ್ । ಸಾ ಪ್ರಾತಿಭಾಸಿಕತ್ವ-ಸಂಪಾದಿಕಾ ॥ ೮೬೦ ॥

**ಸನ್ ಘಟಃ ಸನ್ ಪಟಃ ಸ್ತಂಭಃ ಸನ್ನಿತ್ಯಾದೀನಿ ದೇಹಿನಾಂ ।**
**ಸತ್ತ್ವಾಪರೋಕ್ಷಜ್ಞಾನಾನಿ ವರ್ತಂತೇ ತತ್ರ ತತ್ರ ಹಿ ॥ ೮೬೧ ॥**

**ಕಾಲತ್ರಯಾಬಾಧ್ಯತಾ ಚ ಸಾಕ್ಷ್ಯುಪಸ್ಕೃತಚಕ್ಷುಷಾ ।**
**ಕುತೋ ನ ಗೃಹ್ಯತೇ ನೋಚೇಚ್ಚಕ್ಷುಷೇದಂತ್ವಧೀಃ ಕಥಂ ।**
**ವರ್ತಮಾನೋಽಪಿ ಕಾಲೋಽಯಂ ಸಾಕ್ಷಿವೇದ್ಯೋ ನ ಚಾಕ್ಷುಷಃ ॥ ೮೬೨ ॥**

**ಅರ್ಥ-**ದೇಹಿನಾಂ= ದೇಹಿಗಳಿಗೆ, ಸನ್ ಘಟಃ ಸನ್ ಪಟಃ ಸ್ತಂಭಃ ಸನ್ನಿತ್ಯಾದೀನಿ= ಘಟವು ಸತ್ಯವಾಗಿದೆ, ಪಟವು ಸತ್ಯವಾಗಿದೆ, ಸ್ತಂಭವು ಸತ್ಯವಾಗಿದೆ ಇವೇ ಮೊದಲಾದ, ಸತ್ತ್ವಾಪರೋಕ್ಷ ಜ್ಞಾನಾನಿ= ಸತ್ತ್ವದ ಅಪರೋಕ್ಷ ಜ್ಞಾನಗಳು, ತತ್ರ ತತ್ರ= ಅಲ್ಲಲ್ಲಿ, ವರ್ತಂತೇ ಹಿ= ಇರುತ್ತವೆಯಷ್ಟೇ, ಸಾಕ್ಷ್ಯುಪಸ್ಕೃತಚಕ್ಷುಷಾ= ಸಾಕ್ಷಿಯಿಂದ ಸಹಕೃತವಾದ ಚಕ್ಷುಸ್ಸಿನಿಂದ, ಕಾಲತ್ರಯಾಬಾಧ್ಯತಾ= ಕಾಲತ್ರಯ ಅಬಾಧ್ಯತ್ವವಾದರೂ, ಕುತೋ ನ ಗೃಹ್ಯತೇ= ಏಕೆ ಗ್ರಹಿಸಲ್ಪಡುವುದಿಲ್ಲ, ನೋಚೇತ್= ಹಾಗೆ ಗ್ರಹಿಸಲ್ಪಡುವುದಿಲ್ಲವೆಂದಾದರೆ,

ಚಕ್ಷುಷಾ= ಚಕ್ಷುಸ್ಸಿನಿಂದ, ಇದಂತ್ವಧೀಃ= ಇದಂತ್ವ ಪ್ರತೀತಿಯಾದರೂ, ಕಥಂ= ಹೇಗೆ ಉಂಟಾಗುತ್ತದೆ, ಅಯಂ ವರ್ತಮಾನ ಕಾಲೋಪಿ= ಈ ವರ್ತಮಾನ ಕಾಲವೂ ಕೂಡ, ಸಾಕ್ಷಿವೇದ್ಯಃ= ಸಾಕ್ಷಿವೇಗ್ಯೆವೇ ಆಗಿದೆ, ನ ಚಾಕ್ಷುಷಃ= ಚಕ್ಷುರ್ವೇದ್ಯವಲ್ಲ.

**ಅನುವಾದ-** ದೇಹಿಗಳಿಗೆ ಘಟವು ಸತ್ಯವಾಗಿದೆ, ಪಟವು ಸತ್ಯವಾಗಿದೆ, ಸ್ತಂಭವು ಸತ್ಯವಾಗಿದೆ ಎಂದು ಅಲ್ಲಲ್ಲಿ ಸತ್ತ್ವದ ಅಪರೋಕ್ಷ ಜ್ಞಾನಗಳು ಇವೆಯಷ್ಟೇ. ಸಾಕ್ಷಿಸಹಕೃತವಾದ ಚಕ್ಷುಸ್ಸಿನಿಂದ ಕಾಲತ್ರಯಾಬಾಧ್ಯತ್ವರೂಪವಾದ ಸತ್ವವು ಏಕೆ ಗೃಹೀತವಾಗುವುದಿಲ್ಲ? ಹಾಗೆ ಚಕ್ಷುಸ್ಸಿನಿಂದ ಕಾಲವು ಗೃಹೀತವಾಗುವುದಿಲ್ಲವೆಂದಾದರೆ ಅಯಂ ಘಟಃ ಎಂಬಲ್ಲಿ ವರ್ತಮಾನ ಕಾಲವಾದರೂ ಹೇಗೆ ಚಕ್ಷುಸ್ಸಿನಿಂದ ಗ್ರಹೀತವಾಗುತ್ತದೆ? ಕಾಲವು ಸಾಕ್ಷಿವೇದ್ಯವೇ ಹೊರತು ಚಕ್ಷುರ್ವೇದ್ಯವಲ್ಲವಷ್ಟೇ?

**ಭಾವವಿಲಾಸಿನೀ** – ಇದಾನೀಂ ದೃಶ್ಯತ್ವಾನುಮಾನಸ್ಯ ಕಾಲಾತ್ಯಯಾಪದಿಷ್ಟತಾಮಾಹ – **ಸನ್ ಘಟ ಇತ್ಯಾದಿನಾ ॥** ಸನ್‌ಘಟ ಇತ್ಯಾದಿ ಧರ್ಮಿಗ್ರಾಹಕಪ್ರತ್ಯಕ್ಷೇಣ ಜಗತಸ್ಸತ್ತ್ವಸಿದ್ಧೇರ್ಬಾಧಿತವಿಷಯಕಂ ಮಿಥ್ಯಾತ್ವಾನುಮಾನಮಿತಿ ಭಾವಃ । ಸನ್‌ಘಟಸ್ಸನ್ಪಟ ಇತ್ಯಾದಿವ್ಯವಹಾರೇಷು ಸಚ್ಛಬ್ದೇನ ಸತ್ತ್ವಸ್ಯಾದೌ ಗ್ರಹಣೇ ಇದಂ ರಜತಮಿತ್ಯತ್ರೇದಂತ್ವಸ್ಯೇವ ತಸ್ಯಾಪ್ಯಧಿಷ್ಠಾನಬ್ರಹ್ಮಗತತ್ವಶಂಕಾ ಸ್ಯಾದಪಿ। ವಿಶ್ವಂ ಸತ್ಯಂ ಘಟೋಽಸ್ತಿ ಪಟೋಽಸ್ತಿ ಪರ್ವತೋಽಗ್ನಿಮಾನಿತ್ಯಾದೌ ಪ್ರಾಗ್ವಿಶ್ವಘಟಾದಿಕಂ ಧರ್ಮಿಣಮನೂದ್ಯ ಪಶ್ಚಾದೇವ ಸತ್ಯತ್ವಾದಿಧರ್ಮವಿಧಾನದರ್ಶನೇನ ಸರ್ವತ್ರಾಪಿ ಘಟಸ್ಸನ್ಪಟಸ್ಸನ್ನಿತ್ಯಾದಿವ್ಯವಹಾರೋ ನ್ಯಾಯ್ಯಃ। ಯದ್ಯಪಿ ಗ್ರಂಥಕೃತಾಛಂದೋಬದ್ಧಗ್ರಂಥತ್ವೇನ ಛಂದೋಭಂಗಭಿಯಾ ಪ್ರಾಕ್ತದ್ಯೋಗದ್ವಯೇ ಸತ್ಪದಸ್ಯಾದೌ ಪ್ರಯೋಗಃ ಕೃತಃ ತಥಾಪಿ ಯುಕ್ತೇರನುಲ್ಲಂಘ್ಯತ್ವಾತ್ಪಾಠಕ್ರಮಾದರ್ಥಕ್ರಮೋ ಜ್ಯಾಯಾನಿತಿ ನ್ಯಾಯೇನ ಘಟಸ್ಸನ್ಪಟಸ್ಸನ್ನಿತ್ಯೇವಾನ್ವಯಃ ಕರ್ತವ್ಯಃ । ಏವಂ ಚ ಪ್ರಾಕ್ಸದಂಶಪ್ರಯೋಗಾಭಾವೇನ ಪರಕೀಯಶಂಕಾಯಾ ಗರ್ಭಸ್ರಾವ ಏವೇತಿ ಭಾವೇನಾಂತೇ ಸ್ತಂಭಸ್ಸನ್ನಿತಿ ಪ್ರಯೋಗಃ ಕೃತಃ ।

ನನು ಕಾಲತ್ರಯಾಬಾಧ್ಯತ್ವರೂಪಸತ್ತ್ವಂ ಕಥಂ ಕಾಲಾಗೋಚರ ಚಕ್ಷುಷಾ ಗೃಹ್ಯತ ಇತಿ ಚೇತ್ ನ। ಉಕ್ತವಿಧಯಾ ಸತ್ಯತ್ವಗ್ರಾಹಕತ್ವೇನ ಸರ್ವಾನುಭವಸಿದ್ಧಚಕ್ಷುಷಿ ಕಥಂತಾಯಾ ಏವಾನವಕಾಶಾತ್ । ಅನ್ಯಥಾ ಗಂಧಾಗ್ರಾಹಕೇ ಚಕ್ಷುಷಿ ರೂಪಗ್ರಾಹಕತ್ವಮಪಿ ಕಥಮಿತಿ ಚೋದ್ಯಸ್ಯ ಕಿಮುತ್ತರಮ್ । ಅನುಭವಬಲೇನ ಗ್ರಾಹಕತ್ವಶಕ್ತಿಕಲ್ಪನಸ್ಯೋಭಯತ್ರ ಸಾಮ್ಯಾತ್ । ಅಂಧೇ ರೂಪಜ್ಞಾನಾದರ್ಶನಾತ್ ಅನಂಧೇ ಚ ತದ್ದರ್ಶನಾತ್ ಅನ್ವಯವ್ಯತಿರೇಕಾಭ್ಯಾಮೇವ ರೂಪಗ್ರಾಹಕತ್ವಂ ಕಲ್ಪ್ಯತೇ ಚೇತ್ ತತ ಏವ ರೂಪನಿಷ್ಠಸತ್ತ್ವಗ್ರಾಹಕತ್ವಮಪಿ ಕಲ್ಪ್ಯತಾಮ್ । ರೂಪದರ್ಶನಸ್ಯೇವ ರೂಪನಿಷ್ಠಸತ್ತ್ವದರ್ಶನಸ್ಯಾಪಿ ಉಕ್ತವಿಧಯಾಽನ್ವಯವ್ಯತಿರೇಕಯೋಃ ಸಾಮ್ಯಾತ್ । ಮಹತ್ವೇ ಸತ್ಯುದ್ಭೂತರೂಪವತೋ ಗ್ರಾಹಕಸ್ಯ ಚಕ್ಷುಷಃ ಕಥಂ ತದ್ರಹಿತಕಾಲತ್ರಯಗ್ರಾಹಿತ್ವಮಿತಿ ಚೇತ್ ನ । ತದ್ರಹಿತರೂಪಸ್ಯಾಪ್ಯ ಗ್ರಹಣಪ್ರಸಂಗಾತ್। ದ್ರವ್ಯಗ್ರಹ ಏವ ತತ್ಪ್ರಯೋಜಕಂ ನ ಗುಣಗ್ರಹ ಇತಿ ಚೇತ್ ನ । ಸ್ವಾತಂತ್ರ್ಯೇಣ ದ್ರವ್ಯಗ್ರಹೇ

ತತ್ಪ್ರಯೋಜಕಂ ನೋಪನೀತದ್ರವ್ಯಗ್ರಹ ಇತಿ ಮಯಾಪಿ ವಕ್ತುಂ ಶಕ್ಯತ್ವಾತ್ । ಕಿಂಚ ಕಿಮರ್ಥಮಿದಂ ಪ್ರಯೋಜಕಂ ದ್ರವ್ಯ ಏವ ನ ಗುಣ ಇತಿ ವಿಭಾಗಃ ಕ್ರಿಯತೇ । ರೂಪರಹಿತರೂಪಸ್ಯಾಪಿ ಗ್ರಹಣಾಚ್ಚೇತ್ ತರ್ಹಿ ರೂಪರಹಿತಕಾಲಸ್ಯಾಪಿ ಗ್ರಹಣಾದ್ದ್ರವ್ಯೇऽಪಿ ವಿಭಾಗಃ ಕ್ರಿಯತಾಮ್ । ಕುತಸ್ತರ್ಹಿ ಚಕ್ಷುಷಾऽನ್ಯತ್ರ ಕಾಲಾನವಲೋಕನಮಿತಿ ಚೇತ್ ತಪ್ತವಾರಿಸ್ಥತೇಜಸಿ ತವ ರೂಪಾನವಲೋಕನವದಿತಿ ಬ್ರೂಮಃ । ತತ್ರಾನುದ್ಭೂತಂ ತದಿತಿ ಚೇತ್ ಅನ್ಯತ್ರ ಕಾಲೋऽಪ್ಯನುದ್ಭೂತ ಇತಿ ಬ್ರೂಮಃ । ಅನುದ್ಭೂತತ್ವಂ ಗುಣಗತಾ ಜಾತಿಃ ಕಥಂ ಕಾಲ ಇತಿ ಚೇತ್ ನ । ಲಾಘವಾದುದ್ಭೂತತ್ವಮೇವ ಜಾತಿಃ । ತದಭಾವೋऽನುದ್ಭೂತತ್ವಮ್ । ತಚ್ಚಾಪ್ರತೀತ್ಯಾಖ್ಯಫಲಬಲೋನ್ನೇಯಂ ಯತ್ರ ಯತ್ರಾಪ್ರತೀತಿಸ್ತತ್ರ ತತ್ರ ಕಲ್ಪ್ಯತೇ । ಕ್ವಚಿಚ್ಚಕ್ಷುರ್ಗ್ರಾಹ್ಯೇ ಸರ್ವಥಾ ತದಯೋಗ್ಯತಾಯಾ ವಕ್ತುಮಶಕ್ಯತ್ವಾತ್ । ಅನ್ಯತ್ರಾಪ್ರತೀತಾವಿದಮೇವ ತಂತ್ರಮ್ । ಉಪನಾಯಕಜ್ಞಾನಸ್ಯಾಪಿ ಘಟಸ್ಥಲ ಇವ ಸರ್ವತ್ರಾಪಿ ಸತ್ತ್ವಾತ್ । ಅನ್ಯಥಾ ತಪ್ತವಾರಿಸ್ಥತೇಜೋರೂಪೇ ಕಥಂ ತತ್ಕಲ್ಪನಮ್ । ಏಕಭಾಗೇನ ದರ್ಶನಮಪರಭಾಗೇನಾದರ್ಶನಂ ಚ ತಪ್ತವಾರಿಸ್ಥತೇಜೋರೂಪವದೇವ । ಪ್ರತೀತಿಮನುರುಧ್ಯಕಲ್ಪಯತಾ ಸರ್ವಂ ಚ ಕಲ್ಪನೀಯಮ್ । ಸುಹೃದ್ಭಾವೇನ ಪೃಚ್ಛಂತಂ ಪ್ರತ್ಯುತ್ತರಮಾಹ – ಕಾಲೇತಿ ॥ ೮೬೧-೮೬೨ ॥

**ವಿವರಣೆ-** ಇನ್ನು ದೃಶ್ಯತ್ವಾನುಮಾನಕ್ಕೆ ಬಾಧರೂಪದೋಷವನ್ನು ಇಲ್ಲಿಂದ ಆರಂಭಿಸಿ ಉಪಪಾದನೆ ಮಾಡುತ್ತಾರೆ. ಸನ್ ಘಟಃ ಮೊದಲಾದ ಪ್ರತ್ಯಕ್ಷದಿಂದ ಜಗತ್ತಿಗೆ ಸತ್ಯತ್ವವು ಸಿದ್ಧವಾಗುವುದರಿಂದ ದೃಶ್ಯತ್ವಾನುಮಾನವು ಬಾಧರೂಪದೋಷಯುಕ್ತವಾಗಿದೆ ಎಂದು ಅಭಿಪ್ರಾಯ. ಸನ್ ಘಟಃ ಸನ್ ಪಟಃ ಮೊದಲಾದ ವ್ಯವಹಾರಗಳಿಗೆ ಸತ್ ಶಬ್ದವನ್ನು ಮೊದಲು ಪ್ರಯೋಗ ಮಾಡಿದರೆ ಇದಂ ರಜತಂ ಎಂಬಲ್ಲಿ ಇದಂ ಅರ್ಥವು ಹೇಗೆ ಅಧಿಷ್ಠಾನವೋ ಹಾಗೆ ಸತ್ ಶಬ್ದಾರ್ಥವಾದ ಸತ್ವವು ಬ್ರಹ್ಮಗತವಾದುದೇ ಎಂಬ ಶಂಕೆಯು ಬರಬಹುದು. ವಿಶ್ವಂ ಸತ್ಯಂ, ಘಟೋಸ್ತಿ, ಪಟೋಸ್ತಿ, ಪರ್ವತೋಗ್ನಿಮಾನ್ ಇತ್ಯಾದಿ ವ್ಯವಹಾರಗಳಲ್ಲಿ ಮೊದಲು ಧರ್ಮಿಗಳಾದ ವಿಶ್ವಘಟಾದಿಗಳನ್ನು ಅನುವಾದ ಮಾಡಿ ಅನಂತರವೇ ಸತ್ಯತ್ವರೂಪವಾದ ಧರ್ಮವನ್ನು ವಿಧಾನ ಮಾಡುವುದರಿಂದ ಘಟಃ ಸನ್ ಪಟಃ ಸನ್ ಎಂಬ ವ್ಯವಹಾರವೇ ಯುಕ್ತವಾದುದು. ಗ್ರಂಥಕಾರರು ಛಂದಸ್ಸಿನ ಆನುಗುಣ್ಯಕ್ಕಾಗಿ ಸನ್ ಘಟಃ ಸನ್ ಪಟಃ ಎಂದು ಹೇಳಿದ್ದರೂ ಅದನ್ನು ಘಟಃ ಸನ್ ಪಟಃ ಸನ್ ಎಂಬುದಾಗಿಯೇ ತೆಗೆದುಕೊಳ್ಳಬೇಕು. ಪಾಠಕ್ರಮಕ್ಕಿಂತಲೂ, ಅರ್ಥಕ್ರಮವೇ ಶ್ರೇಷ್ಠವಾದುದರಿಂದ ಈ ರೀತಿಯ ವಿಪರಿಣಾಮವನ್ನು ಮಾಡಬೇಕು. ಇದನ್ನು ಸೂಚಿಸುವುದಕ್ಕಾಗಿಯೇ ಗ್ರಂಥಕಾರರು ಕೊನೆಯಲ್ಲಿ ಸ್ತಂಭಃ ಸನ್ ಎಂದು ಹೇಳಿದ್ದಾರೆ. ಆದ್ದರಿಂದ ಎಲ್ಲವೂ ಸತ್ ಪದಾರ್ಥದಲ್ಲಿ ಅಧ್ಯಸ್ತವಾದುದು ಎಂಬ ಪರಕೀಯ ಶಂಕೆಯು ಗರ್ಭಸ್ರಾವ ಗತಿಯಿಂದಲೇ ಹೊರಟು ಹೋಗುತ್ತದೆ.

ಸತ್ತ್ವವು ಕಾಲತ್ರಯಾಬಾಧ್ಯತ್ವರೂಪವಾದುದು. ಅದು ಕಾಲವಿಷಯಕವಲ್ಲದ ಚಕ್ಷುಸ್ಸಿನಿಂದ ಹೇಗೆ ಗ್ರಹಿಸಲ್ಪಡುತ್ತದೆ ಎಂಬ ಪ್ರಶ್ನೆಯನ್ನು ಮಾಡಿದರೆ ಚಕ್ಷುಸ್ಸು ಈ ದೃಷ್ಟಾಂತಗಳನ್ನು ಹೇಳಿದ ರೀತಿಯಲ್ಲಿ ಸತ್ತ್ವಗ್ರಾಹಕವೆಂದು ಸರ್ವಾನುಭವ ಸಿದ್ಧವಾಗಿರುವುದರಿಂದ ಇಲ್ಲಿ ಹೇಗೆ ಎಂಬ ಶಂಕೆಗೇ ಅವಕಾಶವಿಲ್ಲ. ಇಲ್ಲದಿದ್ದರೆ ಗಂಧಾಗ್ರಾಹಕವಲ್ಲದ ಚಕ್ಷುಸ್ಸು ರೂಪವನ್ನು ಹೇಗೆ ಗ್ರಹಣ ಮಾಡುತ್ತದೆ ಎಂಬ ಆಕ್ಷೇಪಕ್ಕೂ ಉತ್ತರವಿಲ್ಲವೆಂದಾಗುತ್ತದೆ. ಅನುಭವ ಬಲದಿಂದ ರೂಪಗ್ರಾಹಕ ಶಕ್ತಿಯನ್ನು ಅಂಗೀಕರಿಸುತ್ತೇವೆ ಎಂದು ಹೇಳಿದರೆ ಅನುಭವ ಬಲದಿಂದಲೇ ಚಕ್ಷುಸ್ಸಿಗೆ ಕಾಲಗ್ರಾಹಕ ಶಕ್ತಿಯನ್ನೂ ಅಂಗೀಕರಿಸುತ್ತೇವೆ ಎಂದು ಉತ್ತರ. ಅಂಧನಿಗೆ ರೂಪಜ್ಞಾನವಿಲ್ಲದಿರುವುದರಿಂದ ಅಂಧನಲ್ಲದವನಿಗೆ ರೂಪಜ್ಞಾನವಿರುವುದರಿಂದ ಅನ್ವಯ ವ್ಯತಿರೇಕಗಳಿಂದಲೇ ಚಕ್ಷುಸ್ಸಿಗೆ ರೂಪಗ್ರಾಹಕತ್ವವನ್ನು ಕಲ್ಪಿಸುತ್ತೇವೆ ಎಂದು ಹೇಳಿದರೆ, ಅದೇ ಅನ್ವಯ ವ್ಯತಿರೇಕಗಳಿಂದಲೇ ರೂಪನಿಷ್ಠ ಸತ್ತ್ವಗ್ರಾಹಕತ್ವವನ್ನು ಅಂಗೀಕರಿಸು. ಏಕೆಂದರೆ ರೂಪದರ್ಶನದಂತೆ ರೂಪನಿಷ್ಠ ಸತ್ತ್ವದರ್ಶನಕ್ಕೂ ಈ ಅನ್ವಯ ವ್ಯತಿರೇಕಗಳು ಇವೆಯಷ್ಟೇ? ಚಕ್ಷುಸ್ಸು ಮಹತ್ತ್ವ ವಿಶಿಷ್ಟವಾದ ಉದ್ಭೂತರೂಪವುಳ್ಳ ದ್ರವ್ಯವನ್ನು ಮಾತ್ರ ಗ್ರಹಿಸುತ್ತದೆ. ಅದಿಲ್ಲದ ಕಾಲತ್ರಯವನ್ನು ಹೇಗೆ ಗ್ರಹಿಸುತ್ತದೆ ಎಂದು ಪ್ರಶ್ನೆಯನ್ನು ಮಾಡಿದರೆ ಮಹತ್ತ್ವಾವಿಶಿಷ್ಟವಾದ ಉದ್ಭೂತರೂಪವಿಲ್ಲದ ರೂಪವನ್ನು ಹೇಗೆ ಗ್ರಹಿಸುತ್ತದೆಯೋ ಹಾಗೆಯೇ ಎಂದು ಉತ್ತರ. ಇಲ್ಲದಿದ್ದರೆ ಚಕ್ಷುಸ್ಸಿನಿಂದ ರೂಪಗ್ರಹಣವೂ ಆಗದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ. ಮಹತ್ತ್ವ ವಿಶಿಷ್ಟ ಉದ್ಭೂತರೂಪವು ದ್ರವ್ಯಗ್ರಹಣವನ್ನು ಕುರಿತು ಮಾತ್ರ ಕಾರಣ, ಗುಣಗ್ರಹಣವನ್ನು ಕುರಿತು ಕಾರಣವಲ್ಲ ಎಂದು ನೀನು ಹೇಳುವುದಾದರೆ, ನಾನೂ ಸಹ ಸ್ವಾತಂತ್ರ್ಯೇಣ ದ್ರವ್ಯಗ್ರಹಣದಲ್ಲಿಯೇ ಅದು ಪ್ರಯೋಜಕವಾದುದು, ಉಪನೀತ ದ್ರವ್ಯಗ್ರಹಣದಲ್ಲಿ ಅದು ಪ್ರಯೋಜಕವಲ್ಲ. ಆದ್ದರಿಂದ ಕಾಲವು ಚಕ್ಷುಸ್ಸಿನಿಂದ ಗೃಹೀತವಾಗುತ್ತದೆ ಎಂದು ಹೇಳುತ್ತೇನೆ. ಮತ್ತು ಈ ಪ್ರಯೋಜಕವು ದ್ರವ್ಯದಲ್ಲಿಯೇ ಇದೆ, ಗುಣದಲ್ಲಿ ಇಲ್ಲ ಎಂಬ ವಿಭಾಗವನ್ನು ಏಕೆ ಮಾಡುತ್ತೀಯೆ ಎಂದು ನಮ್ಮ ಪ್ರಶ್ನೆ. ರೂಪರಹಿತವಾದ ರೂಪವನ್ನು ಚಕ್ಷುಸ್ಸು ಗ್ರಹಣ ಮಾಡುವುದರಿಂದ ನಾನು ಹೀಗೆ ವಿಭಾಗವನ್ನು ಮಾಡುತ್ತೇವೆಂದು ಹೇಳುವುದಾದರೆ, ರೂಪರಹಿತವಾದ ಕಾಲವನ್ನು ಚಕ್ಷುಸ್ಸು ಗ್ರಹಣ ಮಾಡುವುದರಿಂದ ದ್ರವ್ಯದಲ್ಲೂ ಅಂತಹ ವಿಭಾಗವನ್ನು ಒಪ್ಪು. ಎಂದರೆ ಮಹತ್ತ್ವ ವಿಶಿಷ್ಟ ಉದ್ಭೂತರೂಪವು ಪೃಥಿವ್ಯಾದಿತ್ರಯಗ್ರಹಣಕ್ಕೆ ಮಾತ್ರ ಕಾರಣ ಕಾಲಾದಿಗ್ರಹಣಕ್ಕೆ ಅಲ್ಲ ಎಂದು ವಿಭಾಗವನ್ನೂ ಒಪ್ಪು. ಹಾಗಾದರೆ ಚಕ್ಷುಸ್ಸಿಗೆ ಕಾಲವು ಯೋಗ್ಯವೇ ಆಗುವುದಾದರೆ ಬೇರೆ ಸ್ಥಳದಲ್ಲಿ ಕಾಲಪ್ರತೀತಿಯು ಏಕೆ ಇಲ್ಲ ಎಂದು ಕೇಳಿದರೆ, ತಪ್ತಜಲದಲ್ಲಿರುವ ತೇಜಸ್ಸಿನಲ್ಲಿ ರೂಪಪ್ರತೀತಿಯು ಇಲ್ಲದಿರುವಂತೆ ಅನ್ಯತ್ರ ಕಾಲದ ಅಪ್ರತೀತಿಯು ಉಪಪನ್ನವಾಗುತ್ತದೆ ಎಂದು ನಮ್ಮ ಉತ್ತರ. ತಪ್ತಜಲದಲ್ಲಿರುವ ರೂಪವು ಅನುದ್ಭೂತವಾದುದು ಎಂದು ಹೇಳಿದರೆ ಅನ್ಯತ್ರ ಕಾಲವು ಅನುದ್ಭೂತವಾದುದು ಎಂದು ಹೇಳುತ್ತೇವೆ. ಅನುದ್ಭೂತತ್ವವು ಗುಣಗತವಾದ ಜಾತಿ, ಅದು ಕಾಲದಲ್ಲಿ ಹೇಗೆ ಬರಲು ಸಾಧ್ಯ ಎಂದು ಆಕ್ಷೇಪಿಸಿದರೆ ಲಾಘವದಿಂದ ಉದ್ಭೂತತ್ವವೇ ಜಾತಿ. ಅನುದ್ಭೂತತ್ವವೆಂದರೆ ಅದರ ಅಭಾವ. ಎಲ್ಲೆಲ್ಲಿ ಆ ಪ್ರತೀತಿ ಇದೆಯೋ,

ಅಲ್ಲಲ್ಲಾ ಫಲಬಲದಿಂದ ಇಂತಹ ಅನುದ್ಭೂತತ್ವವನ್ನು ಕಲ್ಪಿಸುತ್ತೇವೆ. ಹೊರತಾಗಿ ಒಂದು ಕಡೆಯಲ್ಲಿ ಚಕ್ಷುಸ್ಸಿಗೆ ಗ್ರಾಹ್ಯವಾದರೆ ಸರ್ವಥಾ ಅಯೋಗ್ಯತ್ವವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಅನ್ಯತ್ರ ಪ್ರತೀತವಾಗದೇ ಇರುವುದಕ್ಕೂ ನೀನಾದರೂ ಇದೇ ಕಾರಣವನ್ನು ಹೇಳಬೇಕು. ಏಕೆಂದರೆ ಉಪನಾಯಕವಾದ ಕಾಲಜ್ಞಾನವು ಘಟಸ್ಥಳದಲ್ಲಿ ಇರುವಂತೆ ಬೇರೆ ಎಲ್ಲ ಸ್ಥಳದಲ್ಲಿಯೂ ಇದ್ದೇ ಇದೆ. ಹಾಗಿಲ್ಲದಿದ್ದರೆ ತಪ್ತವಾರಿಸ್ಥಿತ ತೇಜಸ್ಸಿನ ರೂಪದಲ್ಲಿ ಹೇಗೆ ಅಪ್ರತೀತಿಯನ್ನು ಉಪಪಾದನೆಯನ್ನು ಮಾಡುತ್ತೀಯೇ? ತಪ್ತವಾರಿಸ್ಥತೇಜಸ್ಸಿಗೆ ಸ್ಪರ್ಶಾಂಶದಿಂದ ದರ್ಶನ ರೂಪಾಂಶದಿಂದ ಅದರ್ಶನ ಎಂದು ಹೇಳುವುದಾದರೆ ಅಯಂ ಘಟಃ ಅಯಂ ಪಟಃ ಇತ್ಯಾದಿ ಪ್ರತೀತಿಗಳಲ್ಲಿ ಚಕ್ಷುಸ್ಸಿನಿಂದ ಕಾಲದ ದರ್ಶನ, ಬೇರೆ ಸ್ಥಳದಲ್ಲಿ ಚಕ್ಷುಸ್ಸಿನಿಂದ ಕಾಲದ ದರ್ಶನವಿಲ್ಲ ಎಂದು ಹೇಳುತ್ತೇವೆ. ಪ್ರತೀತಿಯನ್ನು ಅನುಸರಿಸಿ ಕಲ್ಪನೆ ಮಾಡುವವರು ಪ್ರತೀತಿಗೆ ಅನುಗುಣವಾಗಿಯೇ ಕಲ್ಪನೆ ಮಾಡಬೇಕಷ್ಟೇ?

ಸ್ನೇಹಭಾವದಿಂದ ಕೇಳುವುದಾದರೆ ನಮ್ಮ ಉತ್ತರವು ಬೇರೆಯೇ ಇದೆ. ದೇಶ ಕಾಲಗಳನ್ನು ವಿಷಯೀಕರಿಸದೇ ಯಾವ ಪ್ರತೀತಿಯೂ ಉಂಟಾಗುವುದಿಲ್ಲ. ಚಾಕ್ಷುಷಾದಿ ಸರ್ವ ಪ್ರತೀತಿಗಳಲ್ಲಿಯೂ ದೇಶಕಾಲವು ತೋರುತ್ತದೆ. ಆದರೆ ದೇಶಕಾಲಾದಿಗಳು ಚಕ್ಷುಸ್ಸಿಗೆ ಯೋಗ್ಯವಲ್ಲ. ಆದರೂ ಸಾಕ್ಷಿಗೆ ಯೋಗ್ಯವಾದ ದೇಶಕಾಲಗಳು ಚಾಕ್ಷುಷಾದಿ ಜ್ಞಾನಗಳಲ್ಲಿ ಘಟಾದಿ ವಿಷಯಗಳಲ್ಲಿ ಉಪನೀತವಾಗಿ ತೋರುತ್ತವೆ ಎಂದು ನೀನಾದರೂ ಒಪ್ಪಬೇಕು. ಇಲ್ಲದಿದ್ದರೆ ನೀನಾದರೂ ಅಯಂ ಘಟಃ ಎಂಬ ಪ್ರತ್ಯಕ್ಷದಲ್ಲಿ ದೇಶಕಾಲಗಳು ತೋರುತ್ತವೆ ಎಂದು ಹೇಗೆ ಸಮರ್ಥಿಸುತ್ತೀಯೆ. ದೇಶಕಾಲಗಳು ನಿನ್ನ ರೀತಿಯಲ್ಲಿಯೂ ಚಕ್ಷುಸ್ಸಿಗೆ ಯೋಗ್ಯವಲ್ಲವಷ್ಟೇ ಎಂದು ಅಭಿಪ್ರಾಯ.

**ಕಿಂಚ ತ್ರಿಕಾಲಬಾಧ್ಯತ್ವಮೇಕಕಾಲೇಪ್ಯಬಾಧನೇ ।**
**ನ ಸ್ಯಾದತಶ್ಚಕ್ಷುಷೈವ ತ್ರಿಕಾಲಾಬಾಧ್ಯತೇಯತೇ ॥ ೮೬೩ ॥**

**ಅರ್ಥ**-ಕಿಂಚ= ಮತ್ತು, ಏಕಕಾಲೇಪಿ= ಒಂದು ಕಾಲದಲ್ಲಿಯೇ, ಅಬಾಧನೇ= ಬಾಧವಿಲ್ಲದಿದ್ದರೆ, ತ್ರಿಕಾಲಬಾಧ್ಯತ್ವಂ= ಕಾಲತ್ರಯದಲ್ಲಿ ಬಾಧ್ಯತ್ವವು, ನ ಸ್ಯಾತ್= ಉಂಟಾಗುವುದಿಲ್ಲ. ಅತಃ= ಆದ್ದರಿಂದ, ಚಕ್ಷುಷೈವ= ಚಕ್ಷುಸ್ಸಿನಿಂದಲೇ, ತ್ರಿಕಾಲಾಬಾಧ್ಯತಾ= ತ್ರಿಕಾಲಾಬಾಧ್ಯತ್ವವು, ಈಯತೇ= ವಿಷಯೀಕರಿಸಲ್ಪಡುತ್ತವೆ.

**ಅನುವಾದ**- ಮತ್ತು ಏಕಕಾಲದಲ್ಲಿ ಅಬಾಧಿತವಾದರೂ ತ್ರಿಕಾಲಬಾಧ್ಯತ್ವವು ಉಂಟಾಗುವುದಿಲ್ಲ. ಆದ್ದರಿಂದ ಚಕ್ಷುಸ್ಸಿನಿಂದಲೇ ತ್ರಿಕಾಲಾಬಾಧ್ಯತ್ವವು ಗ್ರಹಿಸಲ್ಪಡುತ್ತದೆ.

**ಭಾವವಿಲಾಸಿನೀ** – ಪ್ರಕಾರಾಂತರೇಣಾಪಿ ತ್ರಿಕಾಲಬಾಧ್ಯತ್ವರೂಪಸತ್ತ್ವಗ್ರಾಹಕತಾ-ಮುಪಪಾದಯತಿ ॥ **ಕಿಂಚೇತಿ** ॥ ಅತಃ ಏಕಕಾಲಾಬಾಧ್ಯತ್ವಗ್ರಾಹಿತ್ವೇऽಪಿ ತ್ರೈಕಾಲಿಕಬಾಧ-ಪ್ರತಿಪಕ್ಷೇಪಸಮರ್ಥತ್ವಾತ್ ॥ ೮೬೩ ॥

**ವಿವರಣೆ-** ಪ್ರಕಾರಾಂತರದಿಂದ ಚಕ್ಷುಸ್ಸಿಗೆ ತ್ರಿಕಾಲಾಬಾಧ್ಯತ್ವರೂಪ ಸತ್ತ್ವ ಗ್ರಾಹಕತ್ವವನ್ನು ಇಲ್ಲಿ ಉಪಪಾದನೆ ಮಾಡುತ್ತಾರೆ. ಏಕಕಾಲಾಬಾಧ್ಯತ್ವವನ್ನು ಗ್ರಹಣ ಮಾಡಿದರೂ, ತ್ರೈಕಾಲಿಕ ಬಾಧವನ್ನು ನಿರಾಕರಿಸಲು ಸಮರ್ಥವಾದ್ದರಿಂದ ಚಕ್ಷುಸ್ಸಿನಿಂದಲೇ ತ್ರಿಕಾಲಾಬಾಧ್ಯತ್ವವು ಗೃಹೀತವಾಗುತ್ತದೆ ಎಂದು ಅಭಿಪ್ರಾಯ.

**ಕಿಂಚ ಬ್ರಹ್ಮಗತಂ ಸತ್ತ್ವಂ ಸನ್ ಘಟಸ್ತ್ವಿತಿ ದೃಶ್ಯತೇ ।**
**ಇತಿ ತೇಽಪಿ ಮತಂ ತಚ್ಚ ತ್ರಿಕಾಲಾಬಾಧ್ಯತಾ ನ ಕಿಮ್ ॥ ೮೬೪ ॥**

**ಅರ್ಥ-**ಕಿಂಚ= ಮತ್ತು, ಬ್ರಹ್ಮಗತಂ= ಬ್ರಹ್ಮಗತವಾದ, ಸತ್ತ್ವಂ= ಸತ್ತ್ವವೇ, ಸನ್ ಘಟಃ ಇತಿ= ಸನ್ ಘಟಃ ಎಂದು, ದೃಶ್ಯತೇ= ಘಟದಲ್ಲಿ ತೋರುತ್ತದೆ, ಇತಿ= ಎಂದು, ತೇಽಪಿ ಮತಂ= ನಿನ್ನ ಮತವಾದರೂ ಇದೆ, ತಚ್ಚ= ಆ ಬ್ರಹ್ಮಗತವಾದ ಸತ್ತ್ವವಾದರೂ, ತ್ರಿಕಾಲಾಬಾಧ್ಯತಾ ನ ಕಿಂ= ತ್ರಿಕಾಲಾಬಾಧ್ಯತ್ವ ರೂಪವಲ್ಲವೇ?

**ಅನುವಾದ-** ಮತ್ತು ಬ್ರಹ್ಮಗತವಾದ ಸತ್ತ್ವವೇ ಸನ್ ಘಟಃ ಎಂಬಲ್ಲಿ ಘಟದಲ್ಲಿ ತೋರುತ್ತದೆ ಎಂದು ನಿನ್ನ ಮತ. ಆದ್ದರಿಂದ ಆ ಸತ್ತ್ವವು ತ್ರಿಕಾಲಾಬಾಧ್ಯತ್ವರೂಪವಲ್ಲವೇ?

**ಭಾವವಿಲಾಸಿನೀ –** ಅಪಿ ಚ ಸನ್‌ಘಟ ಇತ್ಯಾದೌ ಅಧಿಷ್ಠಾನ ಬ್ರಹ್ಮನಿಷ್ಠಸತ್ತ್ವೈವೋಲ್ಲಿಖ್ಯತ ಇತಿ ವದತಾ ಪರೇಣಾಪೀದಂ ಸಮಾಧೇಯಮಿತ್ಯಾಹ – **ಕಿಂಚೇತಿ** ॥ ತತ್ ಬ್ರಹ್ಮ-ನಿಷ್ಠಸತ್ತ್ವಮ್ ॥ ೮೬೪ ॥

**ವಿವರಣೆ-** ಘಟದಲ್ಲಿ ಬೇರೆ ಸತ್ತ್ವವನ್ನು ಒಪ್ಪದೆ ಬ್ರಹ್ಮಗತ ಸತ್ತ್ವವೇ ಘಟದಲ್ಲಿ ತೋರುತ್ತದೆ ಎಂದು ನೀನು ಹೇಳುವುದರಿಂದ ಬ್ರಹ್ಮನಲ್ಲಿರುವ ಸತ್ತ್ವವು ತ್ರಿಕಾಲಾಬಾಧ್ಯತ್ವ ರೂಪವಾದುದರಿಂದ ಅದು ಚಕ್ಷುಸ್ಸಿನಿಂದಲೇ ಘಟದಲ್ಲಿ ಗೃಹೀತವಾಗುತ್ತದೆ ಎಂದು ಒಪ್ಪಬೇಕು ಎಂದು ಅಭಿಪ್ರಾಯ.

**ತ್ರಿಕಾಲಾಬಾಧ್ಯತಾ ತಸ್ಮಾಚ್ಚಕ್ಷುಷೈವ ನಿರೀಕ್ಷ್ಯತೇ ।**
**ತತ್ತದ್ಗತಾ ಮೇಽನ್ಯಗಾ ತೇ ಶಕ್ತಿಸ್ತೂಭಯಸಂಮತಾ ॥ ೮೬೫ ॥**

**ಅರ್ಥ-**ತಸ್ಮಾತ್= ಆ ಕಾರಣದಿಂದ, ತ್ರಿಕಾಲಾಬಾಧ್ಯತಾ= ತ್ರಿಕಾಲಾಬಾಧ್ಯತ್ವವು, ಚಕ್ಷುಷೈವ= ಚಕ್ಷುಸ್ಸಿನಿಂದಲೇ, ನಿರೀಕ್ಷ್ಯತೇ= ಗ್ರಹಿಸಲ್ಪಡುತ್ತದೆ, ಮೇ= ನನಗೆ, ತತ್ತದ್ಗತಾ= ಆ ಸತ್ತ್ವವು, ಘಟಪಟಾದಿ ನಿಷ್ಠವಾಗಿದೆ, ತೇ= ನಿನಗೆ, ಅನ್ಯಗಾ= ಬ್ರಹ್ಮನಲ್ಲಿರುವ ಸತ್ತ್ವವಾಗಿದೆ, ಶಕ್ತಿಸ್ತು= ತ್ರಿಕಾಲಾಬಾಧ್ಯತ್ವ ಗ್ರಹಣ ಶಕ್ತಿಯಾದರೂ, ಉಭಯಸಂಮತಾ= ನಮ್ಮಿಬ್ಬರಿಗೂ ಸಂಮತವಾಗಿದೆ.

**ಅನುವಾದ-** ಆದ್ದರಿಂದ ತ್ರಿಕಾಲಾಬಾಧ್ಯತ್ವವು ಚಕ್ಷುಸ್ಸಿನಿಂದಲೇ ಗೃಹೀತವಾಗುತ್ತದೆ. ನನ್ನ ಮತದಲ್ಲಿ ಅದು ಘಟಪಟಾದಿಗತವಾಗಿದೆ. ನಿನ್ನ ಮತದಂತೆ ಬ್ರಹ್ಮಗತವಾದ

ತ್ರಿಕಾಲಾಬಾಧ್ಯತ್ವ ರೂಪವಾದ ಸತ್ತ್ವವು ಘಟಪಟಾದಿಗಳಲ್ಲಿ ತೋರುತ್ತದೆ. ಚಕ್ಷುಸ್ಸಿಗೆ ತ್ರಿಕಾಲಾಬಾಧ್ಯತ್ವ ಗ್ರಹಣ ಶಕ್ತಿಯಂತೂ ಇಬ್ಬರಿಗೂ ಸಮ್ಮತವಾದುದು.

**ಭಾವವಿಲಾಸಿನೀ** – ತಸ್ಮಾತ್ ತ್ರಿಕಾಲಬಾಧ್ಯತ್ವಗ್ರಾಹಕತ್ವಸ್ಯ ತ್ವಯಾಪ್ಯಂಗೀಕಾರಾತ್ । ತತ್ರದ್ಗತಾ ಘಟಪಟಾದಿಪದಾರ್ಥೇಷ್ವೇವ ಸ್ಥಿತಾ ಅಬಾಧ್ಯತಾ । ಮೇ ಮಮ ಮತೇ । ಅನ್ಯಗಾ ಬ್ರಹ್ಮ-ನಿಷ್ಠಾ । ತೇ ತವ ಮತೇ । ಶಕ್ತಿಃ ಚಕ್ಷುಷಸ್ತ್ರಿಕಾಲಾಬಾಧ್ಯತ್ವಗ್ರಹಣಶಕ್ತಿಃ ॥ ೮೬೫ ॥

ಅನ್ವಯವ್ಯತಿರೇಕಾಖ್ಯಸಾಚಿವ್ಯೇ ಸತಿ ಚಕ್ಷುಷಾ ।
ಯಥಾ ಕಾರಣತಾ ದಂಡೇ ಗೃಹ್ಯತೇ ಸರ್ವಲೌಕಿಕೈಃ ॥ ೮೬೬ ॥

ದೋಷಾಭಾವಸ್ಥಲೀಯತ್ವಯುಕ್ತ್ಯುಪೋದ್ಬಲಿತಂ ತಥಾ ।
ತ್ರಿಕಾಲಾಬಾಧ್ಯತಾಂ ಸ್ವಾರ್ಥೇ ಗೃಹ್ಣೀಯಾಚ್ಚಕ್ಷುರೇವ ಹಿ ॥ ೮೬೭ ॥

**ಅರ್ಥ**-ಅನ್ವಯವ್ಯತಿರೇಕಾಖ್ಯಸಾಚಿವ್ಯೇ ಸತಿ= ಅನ್ವಯವ್ಯತಿರೇಕ ರೂಪವಾದ ಸಹಕಾರಿಯು ಇರುತ್ತಿರಲು, ಚಕ್ಷುಷಾ= ಚಕ್ಷುಸ್ಸಿನಿಂದ, ಯಥಾ= ಹೇಗೆ, ಸರ್ವಲೌಕಿಕೈಃ= ಎಲ್ಲ ಲೌಕಿಕರಿಂದಲೂ, ದಂಡೇ= ದಂಡದಲ್ಲಿ, ಕಾರಣತಾ= ಘಟಕಾರಣತ್ವವು, ಗೃಹ್ಯತೇ= ಗೃಹೀತವಾಗುತ್ತದೆಯೋ, ತಥಾ= ಅದರಂತೆ, ದೋಷಾಭಾವಸ್ಥಲೀಯತ್ವ ಯುಕ್ತ್ಯುಪೋದ್ಬಲಿತಂ= ದೋಷಾಭಾವ ಸ್ಥಳ ಸಂಬಂಧರೂಪವಾದ ಯುಕ್ತಿಯಿಂದ ಸಹಿತವಾದ, ಚಕ್ಷುರೇವ= ಚಕ್ಷುಸ್ಸೇ, ಸ್ವಾರ್ಥೇ= ತನಗೆ ವಿಷಯವಾದ ಘಟಾದಿಗಳಲ್ಲಿ, ತ್ರಿಕಾಲಾಬಾಧ್ಯತಾಂ= ತ್ರಿಕಾಲಾಬಾಧ್ಯತ್ವವನ್ನು, ಗೃಹ್ಣೀಯಾದ್ಧಿ= ಗ್ರಹಣ ಮಾಡುವುದಷ್ಟೇ.

**ಅನುವಾದ**- ಹೇಗೆ ಅನ್ವಯ ವ್ಯತಿರೇಕ ಸಹಕಾರವುಳ್ಳ ಚಕ್ಷುಸ್ಸಿನಿಂದ ಎಲ್ಲ ಲೌಕಿಕರೂ ದಂಡದಲ್ಲಿ ಘಟಕಾರಣತ್ವವನ್ನು ಗ್ರಹಿಸುತ್ತಾರೋ, ಅದರಂತೆ ದೋಷಾಭಾವ ಸ್ಥಲೀಯತ್ವ ನಿಶ್ಚಯ ಸಹಿತವಾದ ಚಕ್ಷುಸ್ಸೇ ತನ್ನ ವಿಷಯವಾದ ಘಟಾದಿಗಳಲ್ಲಿ ತ್ರಿಕಾಲಾಬಾಧ್ಯತ್ವವನ್ನು ಗ್ರಹಿಸುತ್ತದೆ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ಸತ್ತ್ವಗ್ರಾಹಿತ್ವಮುಪಪಾದಯತಿ । **ಅನ್ವಯೇತಿ**॥ ಚಕ್ಷುಷೋ ಯಥಾಕಾರಣತಾಯಾಸ್ತ್ವಾಯೋಗ್ಯತ್ವೇಽಪ್ಯಕಾರಣರಾಸಭಾದಿತೋ ವ್ಯಾವೃತ್ತಾನ್ವಯವ್ಯತಿರೇಕಾಖ್ಯ-ಸಹಕಾರಿಸಾಮರ್ಥ್ಯಾಚ್ಚಕ್ಷುರೇವ ತಾಂ ಗೃಹ್ಣಾತಿ । ತಥಾ ದೋಷಸ್ಥಲೀಯ-ಬಾಧ್ಯಶುಕ್ತಿರಜತಸತ್ತ್ವಾದ್ವ್ಯಾವೃತ್ತದೋಷಾಭಾವಸ್ಥಲೀಯತ್ವಾಖ್ಯ ಯುಕ್ತ್ಯುಪೋದ್ಬಲಿತಂ ಚಕ್ಷುಸ್ತ್ರಿಕಾಲಾಬಾಧ್ಯಸತ್ತಾಂ ಗೃಹ್ಣಾತೀತಿ ಭಾವಃ ॥ ೮೬೬-೮೬೭ ॥

**ವಿವರಣೆ**- ಪ್ರಕಾರಾಂತರದಿಂದ ಚಕ್ಷುಸ್ಸಿಗೆ ತ್ರಿಕಾಲಾಬಾಧ್ಯತ್ವರೂಪ ಸತ್ತ್ವಗ್ರಾಹಿತ್ಯವನ್ನು ಉಪಪಾದನೆ ಮಾಡುತ್ತಾರೆ. ಕಾರಣತ್ವವು ಚಕ್ಷುಸ್ಸಿಗೆ ಅಯೋಗ್ಯವಾದರೂ ಅಕಾರಣವಾದ ರಾಸಭಾದಿಗಳಿಂದ ವ್ಯಾವೃತ್ತವಾದ ಅನ್ವಯವ್ಯತಿರೇಕಸಹಕಾರಿಸಾಮರ್ಥ್ಯದಿಂದ ಚಕ್ಷುಸ್ಸೇ

ಹೇಗೆ ಕಾರಣತ್ವವನ್ನು ಗ್ರಹಣ ಮಾಡುತ್ತದೆಯೋ ಅದರಂತೆ ದೋಷಸ್ಥಲ ಸಂಬಂಧಿಯಾದ ಬಾಧ್ಯವಾದ ಶುಕ್ತಿರಜತಸತ್ತ್ವದಿಂದ ವ್ಯಾವೃತ್ತವಾದ ದೋಷಾಭಾವ ಸ್ಥಲೀಯತ್ವರೂಪಯುಕ್ತಿಯಿಂದ ಸಹಕೃತವಾದ ಚಕ್ಷುಸ್ಸೇ ತ್ರಿಕಾಲಾಬಾಧ್ಯಸತ್ತ್ವವನ್ನು ಗ್ರಹಣ ಮಾಡುತ್ತದೆ ಎಂದು ಅಭಿಪ್ರಾಯ.

**ಯದ್ಯಧಿಷ್ಠಾನಗಂ ಸತ್ತ್ವಂ ಭಾಸತೇ ಘಟಗಂ ನ ತತ್ ।**
**ನೀಲೋ ಘಟ ಇತಿ ಜ್ಞಾನೇ ನೈಲ್ಯಂ ಬ್ರಹ್ಮಗತಂ ಭವೇತ್ ।**
**ಅಸದ್ ರಜತಮಿತ್ಯತ್ರಾಸತ್ತ್ವಂ ಬ್ರಹ್ಮಗತಂ ಭವೇತ್ ॥ ೮೬೮ ॥**

**ಅರ್ಥ-**ಯದಿ= ಒಂದು ಪಕ್ಷ, ಅಧಿಷ್ಠಾನಗಂ= ಅಧಿಷ್ಠಾನದಲ್ಲಿರುವ, ಸತ್ತ್ವಂ= ಸತ್ತ್ವವೇ, ಭಾಸತೇ= ಘಟದಲ್ಲಿ ತೋರುತ್ತದೆ, ತತ್= ಆ ಸತ್ತ್ವವು, ಘಟಗಂ ನ= ಘಟನಿಷ್ಠವಲ್ಲ ಎಂದು ಅಂಗೀಕರಿಸುವುದಾದರೆ, ನೀಲೋ ಘಟ ಇತಿ ಜ್ಞಾನೇ= ನೀಲೋ ಘಟಃ ಎಂಬ ಜ್ಞಾನದಲ್ಲಿ, ನೈಲ್ಯಂ= ತೋರುವ ನೈಲ್ಯವು, ಬ್ರಹ್ಮಗತಂ ಭವೇತ್= ಬ್ರಹ್ಮಗತವಾಗಬೇಕಾಗುತ್ತದೆ, ಅಸದ್ರಜತಮಿತ್ಯತ್ರ= ಅಸದ್ ರಜತಂ ಎಂಬಲ್ಲಿ, ಅಸತ್ತ್ವಂ= ಅಸತ್ತ್ವವು, ಬ್ರಹ್ಮಗತಂ ಭವೇತ್= ಬ್ರಹ್ಮಗತವಾಗಬೇಕಾಗುತ್ತದೆ.

**ಅನುವಾದ-** ಅಧಿಷ್ಠಾನಗತವಾದ ಸತ್ತ್ವವೇ ಘಟದಲ್ಲಿ ತೋರುತ್ತದೆ. ಘಟದಲ್ಲಿ ಬೇರೆ ಸತ್ತ್ವವಿಲ್ಲ ಎಂದು ಅಂಗೀಕರಿಸಿದರೆ, ನೀಲೋ ಘಟಃ ಎಂಬ ಜ್ಞಾನದಲ್ಲಿ ತೋರುವ ನೈಲ್ಯವು ಬ್ರಹ್ಮಗತವಾಗಬೇಕಾದೀತು. ಅಸದ್ ರಜತಂ ಎಂಬಲ್ಲಿ ತೋರುವ ಅಸತ್ತ್ವವು ಬ್ರಹ್ಮಗತವಾಗಬೇಕಾದೀತು.

**ಭಾವವಿಲಾಸಿನೀ–** ಪ್ರತಿಬಂದೀಗ್ರಹಣಾಯ ಗೃಹೀತಾಮಪಿ ಅಧಿಷ್ಠಾನಗತಸತ್ತ್ವಮೇವ ಘಟಾದೌ ಪ್ರತೀಯತ ಇತಿ ಪರಪ್ರಕ್ರಿಯಾಂ ಸ್ವೇನೋಚ್ಯಮಾನಜಗತ್ಸತ್ಯತಾವಿರೋಧಿತ್ವಾದಸಹಮಾನಃ ಕಿಂಚಿದ್ದೂಷಯತಿ ॥ **ಯದೀತಿ** ॥ ತತ್ಸತ್ತ್ವಮ್ । ಸನ್‌ಘಟ ಇತಿ ಪ್ರತೀತೇರ್ನೀಲೋ ಘಟ ಇತ್ಯಾದಿ ಪ್ರತೀತೇಶ್ಚಾವಿಶೇಷಾದಿತಿ ಭಾವಃ । ಉಪಲಕ್ಷಣಂ ಚೈತತ್ । ಬ್ರಹ್ಮಗತಸತ್ತ್ವಸ್ಯೈವ ಜಗತಿಪ್ರತಿಭಾಸಾಂಗೀಕಾರೇ ಪುನಸ್ಸತ್ವಾಂತರಸ್ಯಾನಾನುಭವಿಕತ್ವೇನ ವ್ಯಾವಹಾರಿಕಸತ್ತ್ವಸ್ಯಾಭಾವ-ಪ್ರಸಂಗಾತ್ ಸತ್ತಾತ್ರೈವಿಧ್ಯಭಂಗಪ್ರಸಂಗ ಇತ್ಯಪಿ ದ್ರಷ್ಟವ್ಯಮ್ ॥ ೮೬೮ ॥

**ವಿವರಣೆ-** ಸನ್ ಘಟಃ ಎಂಬ ಪ್ರತೀತಿಗೂ ನೀಲೋ ಘಟಃ ಎಂಬ ಪ್ರತೀತಿಗೂ ಯಾವ ವ್ಯತ್ಯಾಸವೂ ಇಲ್ಲ. ಆದ್ದರಿಂದ ಸತ್ತ್ವವು ಬ್ರಹ್ಮಗತವಾದರೆ ನೈಲ್ಯವೂ ಬ್ರಹ್ಮಗತವೇ ಆಗಬೇಕು ಎಂಬ ಆಪತ್ತಿಯನ್ನು ಕೊಡುತ್ತಾರೆ. ಈ ದೋಷವನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಬ್ರಹ್ಮಗತ ಸತ್ತ್ವವೇ ಜಗತ್ತಿನಲ್ಲಿ ತೋರುವುದಾದರೆ ಜಗತ್ತಿನಲ್ಲಿ ಪುನಃ ಬೇರೆ ಸತ್ತ್ವವನ್ನು ಅಂಗೀಕರಿಸುವ ಅವಶ್ಯಕತೆ ಇಲ್ಲದಿರುವುದರಿಂದ ವ್ಯಾವಹಾರಿಕ ಸತ್ತ್ವವೇ ಸಿದ್ಧವಾಗದಿರುವ ಕಾರಣದಿಂದ ಸತ್ತಾತ್ರೈವಿಧ್ಯವೇ ಭಗ್ನವಾಗುತ್ತದೆ ಎಂಬ ದೋಷವನ್ನೂ

ತೆಗೆದುಕೊಳ್ಳಬೇಕು. ಘಟದಲ್ಲಿ ಬ್ರಹ್ಮನಲ್ಲಿರುವ ಸತ್ತ್ವ ಮತ್ತು ತನ್ನಲ್ಲೇ ಇರುವ ಸತ್ತ್ವ ಎಂದು ಎರಡು ಸತ್ತ್ವಗಳು ತೋರುವುದಿಲ್ಲವಷ್ಟೇ? ತೋರುವುದು ಒಂದೇ ಸತ್ತ್ವ ಅದು ಬ್ರಹ್ಮಗತವಾದುದು. ಆದ್ದರಿಂದ ವ್ಯಾವಹಾರಿಕ ಸತ್ತ್ವವು ಸಿದ್ಧಿಸುವುದಿಲ್ಲ ಎಂದು ಅಭಿಪ್ರಾಯ.

**ತ್ವಯಾ ಪ್ರತೀತಮಪ್ಯೇತದಸದಿತ್ಯೇವ ಚೋದಿತೇ ।**
**ಸದೇವೇದಮಿತಿ ಪ್ರಾಹುಃ ಸತ್ತ್ವಂ ತತ್ ಕಥಮನ್ಯಗಂ ।**
**ಆಮ್ರಾನ್ ಪೃಷ್ಟಃ ಕೋವಿದಾರಾನಾಚಕ್ಷಾಣೋಽಸ್ತಿ ಕಃ ಪುಮಾನ್ ॥ ೮೬ ॥**

**ಅರ್ಥ-**ತ್ವಯಾ ಪ್ರತೀತಮಪಿ= ನಿನ್ನಿಂದ ನೋಡಲ್ಪಟ್ಟರೂ ಕೂಡ, ಏತತ್= ಇದು, ಅಸತ್= ಸತ್ಯವಲ್ಲ, ಇತ್ಯೇವ= ಎಂದು, ಚೋದಿತೇ= ಆಕ್ಷೇಪಿಸಿದರೆ, ಸದೇವೇದಮಿತಿ= ಇದು ಸತ್ಯವಾದುದೇ ಎಂದು, ಪ್ರಾಹುಃ= ಹೇಳುತ್ತಾರೆ, ತತ್= ಆ ಕಾರಣದಿಂದ, ಸತ್ತ್ವಂ= ಸತ್ತ್ವವು, ಅನ್ಯಗಂ ಕಥಂ= ಹೇಗೆ ಅನ್ಯಗತವಾಗುತ್ತದೆ, ಆಮ್ರಾನ್ ಪೃಷ್ಟಃ= ಆಮ್ರಗಳನ್ನು ತಿಳಿದರೆ, ಕೋವಿದಾರಾನ್= ಕೋವಿದಾರ ವೃಕ್ಷಗಳನ್ನು, ಆಚಕ್ಷಾಣಃ= ಹೇಳುವಂತಹ, ಪುಮಾನ್= ವಿವೇಕಿ ಪುರುಷನು, ಕಃ ಅಸ್ತಿ= ಯಾವನು ಇದ್ದಾನೆ?

**ಅನುವಾದ-** ನೀನು ನೋಡಿದ್ದರೂ ಅದು ಸತ್ಯವಲ್ಲ ಎಂದು ಆಕ್ಷೇಪಿಸಿದರೆ ಅದು ಸತ್ಯವಾದುದೇ ಎಂದು ಹೇಳುತ್ತಾರೆ. ಆದ್ದರಿಂದ ಸತ್ತ್ವವು ಹೇಗೆ ಅನ್ಯಗತವಾಗುತ್ತದೆ? ಆಮ್ರಗಳನ್ನು ಕೇಳಿದರೆ ಯಾವ ವಿವೇಕಿಯಾದ ಪುರುಷನು ಕೋವಿದಾರಗಳನ್ನು ಹೇಳುತ್ತಾನೆ?

**ಭಾವವಿಲಾಸಿನೀ–** ಸಕಲಾನುಭವವಿರೋಧಾಚ್ಚ ನೇದಮಧಿಷ್ಠಾನಗತಸತ್ತ್ವಮಿತ್ಯಾಹ – **ತ್ವಯೇತಿ॥** ಏತದ್‌ಘಟಪಟಾದಿಕಮ್ । ಅಸತ್ ಸತ್ತ್ವಾಭಾವವತ್ । ಘಟಪಟಾದೇರೇವ ಸತ್ತ್ವಾಭಾವೇ ಚೋದಿತೇ ತಸ್ಯೈವ ಸತ್ತ್ವಮವಧಾರಯಂತಸ್ಸಂತಸ್ತದ್ಗತತಯೈವ ಸತ್ತ್ವಮನುಭವಂತಿ । ನೌದಾಸೀನ್ಯೇನ ನಾಪ್ಯನ್ಯಗತತ್ವೇನೇತಿ ಭಾವಃ । ನ ಚ ವಾಚ್ಯಂ ಶುಕ್ತಿಕಾರಜತಸತ್ತ್ವಾ-ನುಭವವದಯಮಪ್ಯನುಭವೋ, ಭ್ರಮ ಏವೇತಿ । ಅತಿದೂರತ್ವಾದಿ ದೋಷಾಭಾವೇನ ಘಟಾದಿಸ್ಸನ್ನೇತಿ ಬಾಧಕಾಭಾವೇನ ಚ ವೈಷಮ್ಯಾತ್। ತೂಷ್ಣೀಮೇವ ಭ್ರಾಂತತ್ವೇಽಧಿಷ್ಠಾನ-ಗತಮಪಿ ಸತ್ತ್ವಂ ಭ್ರಾಂತಂ ಸ್ಯಾತ್ । ಅಧಿಷ್ಠಾನಗತಸತ್ತ್ವಸ್ಯಾಪಿ ಭ್ರಾಂತತ್ವೇ ಕಥಂ ನಿರಧಿಷ್ಠಾನಕೋ ಭ್ರಮ ಇತಿ ಚೇತ್ ನ । ನಿಷ್ಪ್ರಧಾನಕಭ್ರಮವದೇವಾಸ್ಯಾಪಿ ವಕ್ತುಂ ಶಕ್ಯತ್ವಸ್ಯ ಪ್ರಾಗೇವೋಕ್ತತ್ವಾತ್। ತತ್ತನ್ನಿಷ್ಠತಯಾಽನುಭೂತಮಬಾಧಿತಂ ಸತ್ತ್ವಂ ಬಲಾದಧಿಷ್ಠಾನಗತಂ ಕೃತ್ವಾ ತಸ್ಯಾಧಿಷ್ಠಾನತಾಂ ಸಂಪಾದ್ಯಾನಾನುಭವಿಕಂ ಚ ಕಂಚನ ದೋಷಂ ಪರಿಕಲ್ಪ್ಯಾಬಾಧಿತಸರ್ವಾನುಭವಸ್ಯ ಭ್ರಮತ್ವಮಾಪಾದ್ಯ ಸ್ವಾಪೇಕ್ಷಿತತತ್ತದರ್ಥಕ್ರಿಯಾಕಾರಿಣಾಂ ಧನವನಿತಾವಸನಾನ್ನಪಾನಾದೀನಾಂ ಮಿಥ್ಯಾತ್ವಕಲ್ಪನಾತೋಽಪಿ ಯಥಾನುಭಾವಂ ತತ್ತದರ್ಥಸತ್ತಾಂಗೀಕಾರಸ್ಯೈವ ಲಘುತ್ವಾಚ್ಚ। ಅನ್ಯಥಾ ಜಡ ಏವಾಯಮನಿತ್ಯ ಏವಾಯಮಿತ್ಯಾದ್ಯನುಭವಸಿದ್ಧಜಡತ್ವಾನಿತ್ಯತ್ವಾದೀನಾಮಪಿ

**ಅಧಿಷ್ಠಾನಬ್ರಹ್ಮಗತತ್ವಂ ಸ್ಯಾತ್ । ಸಮಾನನ್ಯಾಯತ್ವಾತ್ । ಅರ್ಧಜರತೀಯಾನುಪಪತ್ತೇಶ್ಚ । ಬ್ರಹ್ಮಣಿ ಜಡತ್ವಾನಿತ್ಯತ್ವಾದಿಕಂ ಶ್ರುತಿಯುಕ್ತಿಬಾಧಿತಂ ಚೇತ್ತರ್ಹ್ಯರ್ಥಕ್ರಿಯಾಕಾರಿಣಿ ಜಗತ್ಯಪಿ ಸರ್ವಾನುಭವಶ್ರುತಿಯುಕ್ತಿಬಾಧಿತಂ ಮಿಥ್ಯಾತ್ವಂ ಕಥಮಂಗೀಕುರುಷೇ । ಪ್ರಮಾಣತ್ರಯ-ಪ್ರಮಿತಾಂ ಚ ಸತ್ತಾಂ ಕಥಮನ್ಯತ್ರ ನಯಸಿ । ಕಥಂ ಚ ವಿಶ್ವಂ ಸತ್ಯಮಿತ್ಯಾದ್ಯಾಗಮಾನಂ ಪ್ರತ್ಯಕ್ಷಸಿದ್ಧಾನುವಾದಿತ್ವೇನಾಪ್ರಾಮಾಣ್ಯಮಾನಯಸಿ ॥ ೮೬ ॥**

**ವಿವರಣೆ**- ಸಕಲಾನುಭವ ವಿರೋಧವು ಬರುವುದರಿಂದ ಘಟದಲ್ಲಿ ತೋರುವ ಸತ್ತ್ವವು ಅಧಿಷ್ಠಾನಗತವಾದುದಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ನೀನು ನೋಡಿದ ಘಟಪಟಾದಿಗಳಲ್ಲಿ ಸತ್ತ್ವವಿಲ್ಲ ಎಂದು ಆಕ್ಷೇಪಿಸಿದರೆ ಲೌಕಿಕರು ಘಟಪಟಾದಿಗಳಲ್ಲೇ ಸತ್ತ್ವವನ್ನು ಅವಧಾರಣೆ ಮಾಡುತ್ತಾರೆಯೇ ಹೊರತು ಘಟಪಟಾದಿಗಳಲ್ಲಿ ಸತ್ತ್ವವೇ ತೋರಲಿಲ್ಲವೆಂದಾಗಲೀ ಅಥವಾ ಅನ್ಯಗತವಾದ ಸತ್ತ್ವವು ಘಟಪಟಾದಿಗಳಲ್ಲಿ ತೋರಿತು ಎಂದಾಗಲೀ ಹೇಳುವುದಿಲ್ಲ. ಘಟದಲ್ಲಿಯೇ ಸತ್ತ್ವವನ್ನು ನೋಡಿದುದಾಗಿ ಹೇಳುತ್ತಾರೆ. ಆದ್ದರಿಂದಲೂ ಚಕ್ಷುಸ್ಸಿಗೆ ಸತ್ತ್ವಗ್ರಾಹಕತ್ವವು ಸಿದ್ಧವಾಗುತ್ತದೆ. ಶುಕ್ತಿರಜತ ಸತ್ತ್ವಗ್ರಹಣದಂತೆ ಘಟಸತ್ತ್ವಗ್ರಹಣವು ಏಕೆ ಭ್ರಾಂತಿಯಾಗಬಾರದು ಎಂದು ಪ್ರಶ್ನೆ ಮಾಡಿದರೆ ಈ ಎರಡು ಪ್ರತ್ಯಕ್ಷಗಳಿಗೆ ವೈಷಮ್ಯವಿದೆ ಎಂದು ನಮ್ಮ ಉತ್ತರ. ಶುಕ್ತಿರಜತ ಪ್ರತ್ಯಕ್ಷದಲ್ಲಿ ಕಾಚಾದಿ ದೋಷವಿದೆ. ಘಟಪ್ರತ್ಯಕ್ಷದಲ್ಲಿ ಅತಿದೂರತ್ವಾದಿ ಯಾವ ದೋಷವೂ ಇಲ್ಲ ಮತ್ತು ಬಾಧಕವೂ ಇಲ್ಲ. ಶುಕ್ತಿರಜತಸ್ಥಲದಲ್ಲಾದರೆ ನೇದಂ ರಜತಂ ಎಂಬ ಬಾಧಕವೂ ಇದೆ. ಈ ವೈಷಮ್ಯದಿಂದ ಈ ಪ್ರತ್ಯಕ್ಷವು ಶುಕ್ತಿರಜತಸತ್ತ್ವಗ್ರಹಣಾದಿಪ್ರತ್ಯಕ್ಷಕ್ಕೆ ಸಮಾನವಾದುದಲ್ಲ. ನಿಷ್ಕಾರಣವಾಗಿ ಘಟಸತ್ತ್ವಪ್ರತ್ಯಕ್ಷವನ್ನು ಭ್ರಾಂತಿ ಎಂದು ಹೇಳುವುದಾದರೆ ಅಧಿಷ್ಠಾನಗತಸತ್ತ್ವಪ್ರತ್ಯಕ್ಷವನ್ನೂ ಭ್ರಾಂತಿ ಎಂದೇ ಹೇಳಬೇಕು. ಅಧಿಷ್ಠಾನಗತಸತ್ತ್ವವು ಭ್ರಾಂತಿ ವಿಷಯ ಎಂದಾದರೆ ನಿರಧಿಷ್ಠಾನಕಭ್ರಮವು ಹೇಗೆ ಉಂಟಾಗುತ್ತದೆ ಎಂದು ಪ್ರಶ್ನೆ ಮಾಡಿದರೆ ನಿಷ್ಪ್ರಧಾನಕವಾದ ಭ್ರಮವು ನಿನಗೆ ಹೇಗೆ ಉಂಟಾಗುತ್ತದೆಯೋ, ನಿರಧಿಷ್ಠಾನಕ ಭ್ರಮವು ಹಾಗೆಯೇ ಉಂಟಾಗುತ್ತದೆ ಎಂಬ ಉತ್ತರವನ್ನು ನಾವು ಹಿಂದೆಯೇ ಹೇಳಿದ್ದೇವೆ. ಘಟಪಟಾದಿನಿಷ್ಠವಾಗಿ ತೋರುವ ಮತ್ತು ಅಬಾಧಿತವಾದ ಸತ್ತ್ವವನ್ನು ಬಲಾತ್ಕಾರದಿಂದ ಅಧಿಷ್ಠಾನಗತವನ್ನಾಗಿ ಮಾಡಿ ಸತ್ತ್ವವು ಇರುವುದರಿಂದ ಅದಕ್ಕೆ ಅಧಿಷ್ಠಾನತ್ವವನ್ನು ಸಂಪಾದನೆ ಮಾಡಿ ಯಾರ ಅನುಭವಕ್ಕೂ ಬರದಿದ್ದ ಯಾವುದೋ ಒಂದು ದೋಷವನ್ನು ಕಲ್ಪನೆ ಮಾಡಿ ಅಬಾಧಿತವಾದ ಸರ್ವಾನುಭವಕ್ಕೆ ಭ್ರಮತ್ವವನ್ನು ಸಂಪಾದನೆ ಮಾಡಿ ನಿನಗೆ ಇಷ್ಟವಾದ ಅರ್ಥಕ್ರಿಯಾಕಾರಿಗಳಾದ ಧನವನಿತಾದಿಗಳಿಗೆ ಮಿಥ್ಯಾತ್ವವನ್ನು ಕಲ್ಪನೆ ಮಾಡುವುದಕ್ಕಿಂತಲೂ ಅನುಭವಕ್ಕೆ ಅನುಸಾರವಾಗಿ ಘಟಪಟಾದಿ ಅರ್ಥಗಳಿಗೆ ಸತ್ತ್ವವನ್ನು ಅಂಗೀಕಾರ ಮಾಡುವುದೇ ಲಘುಭೂತವಾದುದು. ಇಲ್ಲದಿದ್ದರೆ ಇದು ಜಡವಾಗಿದೆ, ಇದು ಅನಿತ್ಯವಾಗಿದೆ ಎಂಬ ಅನುಭವದಲ್ಲಿ ಸಿದ್ಧವಾದ ಜಡತ್ವ ಅನಿತ್ಯತ್ವಗಳೂ ಸಹ ಅಧಿಷ್ಠಾನ ಬ್ರಹ್ಮಗತವೇ ಆಗಬೇಕಾದೀತು. ಸಮಾನವಾದ ನ್ಯಾಯವಿರುವುದರಿಂದ ಸನ್ ಘಟಃ ಎಂಬಲ್ಲಿ ಮಾತ್ರ ಅಂಗೀಕರಿಸಿ ಜಡ ಏವಾಯಂ

ಎಂಬಲ್ಲಿ ಬ್ರಹ್ಮಗತ ಜಡತ್ವವನ್ನು ಅಂಗೀಕರಿಸದಿರುವುದು ಅರ್ಧಜರತೀಯ ನ್ಯಾಯವಾಗುತ್ತದೆ. ಬ್ರಹ್ಮನಲ್ಲಿ ಜಡತ್ವ, ಅನಿತ್ಯತ್ವಾದಿಗಳು ಶ್ರುತಿಯುಕ್ತಿ ಬಾಧಿತವೆಂದು ಹೇಳುವುದಾದರೆ, ಅರ್ಥಕ್ರಿಯಾಕಾರಿತ್ವವಿದ್ದಲ್ಲಿಯೂ ಮಿಥ್ಯಾತ್ವವನ್ನು ಹೇಳುವುದು ಶ್ರುತಿಯುಕ್ತಿಗಳಿಂದಲೂ ಮತ್ತು ಸರ್ವಾನುಭವದಿಂದಲೂ ಬಾಧಿತವಾದ್ದರಿಂದ ಅದನ್ನು ಹೇಗೆ ಅಂಗೀಕರಿಸುತ್ತೀಯೆ? ಪ್ರಮಾಣತ್ರಯ ಸಿದ್ಧವಾದ ಸತ್ತ್ವವನ್ನೂ ಸಹ ಹೇಗೆ ಅಧಿಷ್ಠಾನಕ್ಕೆ ತೆಗೆದುಕೊಂಡು ಹೋಗುತ್ತೀಯೆ? ವಿಶ್ವಂ ಸತ್ಯಂ ಇತ್ಯಾದಿ ಆಗಮಗಳಿಗೆ ಪ್ರತ್ಯಕ್ಷ ಸಿದ್ಧ ಸತ್ತ್ವಾನುವಾದಕತ್ವವನ್ನು ಹೇಳಿ ಹೇಗೆ ಅಪ್ರಾಮಾಣ್ಯವನ್ನು ಹೇಳುತ್ತೀಯೆ ಎಂದು ಅಭಿಪ್ರಾಯ.

**ಲೋಕಾನುಭವಬಾಧಾಯ ನಾಲಂ ತ್ವತ್ಪ್ರಕ್ರಿಯಾತಟಿತ್ ॥ ೮೭೦ ॥**

**ಅಚಾಕ್ಷುಷಬ್ರಹ್ಮಸತ್ತಾ ಚಕ್ಷುಷಾ ಕಥಮೀಕ್ಷ್ಯತೇ ।**
**ಬ್ರಹ್ಮಣೋಽಚಾಕ್ಷುಷತ್ವಂ ಚ ಸಿದ್ಧಮುಕ್ತಪ್ರಕಾರತಃ ॥ ೮೭೧ ॥**

**ಅರ್ಥ**-ತ್ವತ್ಪ್ರಕ್ರಿಯಾತಟಿತ್= ನಿನ್ನ ಪ್ರಕ್ರಿಯೆ ಎಂಬ ಮಿಂಚು, ಲೋಕಾನುಭವ ಬಾಧಾಯ= ಲೋಕಾನುಭವವನ್ನು ಬಾಧಿಸುವುದಕ್ಕೆ, ನಾಲಂ= ಸಮರ್ಥವಾಗುವುದಿಲ್ಲ, ಅಚಾಕ್ಷುಷ ಬ್ರಹ್ಮಸತ್ತಾ= ಚಕ್ಷುಸ್ಸಿಗೆ ಯೋಗ್ಯನಲ್ಲದ ಬ್ರಹ್ಮನ ಸತ್ತ್ವವು, ಚಕ್ಷುಷಾ= ಚಕ್ಷುಸ್ಸಿನಿಂದ, ಕಥಂ ಈಕ್ಷ್ಯತೇ= ಹೇಗೆ ಗ್ರಹಿಸಲ್ಪಡುತ್ತದೆ, ಬ್ರಹ್ಮಣಃ= ಬ್ರಹ್ಮನಿಗೆ, ಅಚಾಕ್ಷುಷತ್ವಂ ಚ= ಚಕ್ಷುರಯೋಗ್ಯತ್ವವೂ ಕೂಡ, ಉಕ್ತಪ್ರಕಾರತಃ= ಹಿಂದೆ ಹೇಳಿದ ಪ್ರಕಾರದಿಂದ, ಸಿದ್ಧಂ= ಸಿದ್ಧವಾಗಿದೆಯಷ್ಟೇ.

**ಅನುವಾದ**- ನಿನ್ನ ಪ್ರಕ್ರಿಯೆಯೆಂಬ ಮಿಂಚು ಲೋಕಾನುಭವವನ್ನು ಬಾಧಿಸಲು ಸಮರ್ಥವಾಗುವುದಿಲ್ಲ. ಚಕ್ಷುಸ್ಸಿಗೆ ಯೋಗ್ಯನಲ್ಲದ ಬ್ರಹ್ಮನ ಸತ್ತ್ವವು ಚಕ್ಷುಸ್ಸಿನಿಂದ ಹೇಗೆ ಗೃಹೀತವಾಗುತ್ತದೆ? ಬ್ರಹ್ಮನ ಅಚಾಕ್ಷುಷತ್ವವೂ ಸಹ ಹಿಂದೆ ಹೇಳಿದ ರೀತಿಯಿಂದ ಸಿದ್ಧವಾಗಿದೆ.

**ಭಾವವಿಲಾಸಿನೀ**– ನನು ಸ್ವಪೂರ್ವಾಚಾರ್ಯಪ್ರಕ್ರಿಯಾಸಂರಕ್ಷಣಾಯ ಸರ್ವಮಿದಂ ಕಲ್ಪ್ಯತ ಇತಿ ಚೇತ್ತತ್ರಾಹ – **ಲೋಕೇತಿ** ॥ ಲೋಕಾನುಭವೇತ್ಯುಪಲಕ್ಷಣಮ್ । ವಿಶ್ವಂ ಸತ್ಯಂ ಯಚ್ಚಿಕೇತ ಸತ್ಯಮಿತ್ಯಾದಿ ವೇದದ್ರಷ್ಟೄಣಾಂ ಮಹರ್ಷೀಣಾಂ ಸತ್ಯಂ ಮೇ ವ್ಯಾಹೃತಂ ಸತೀತಿ ಸ್ವವಾಕ್ಯಸ್ಯ ಸತ್ಯತ್ವಂ ವದತಃ ಸರ್ವಜ್ಞಸ್ಯ ಹರೇಃ । ಏತೇನ ಸತ್ಯವಾಕ್ಯೇನೇತ್ಯಾದಿ ಪುರಾಣಪ್ರವರ್ತಕಾನಾಂ ಮಹರ್ಷೀಣಾಂ ಚಾನುಭವೋಽಪಿ ಗ್ರಾಹ್ಯಃ । ಲೋಕೃ ದರ್ಶನ ಇತಿ ಧಾತೋರ್ಲೋಕಪದೇನ ವಾ ತೇಷಾಂ ಗ್ರಹಣಮ್। ತಟಿದಿತ್ಯನೇನ ಪರೋದೀರಿತವಾಕ್ಯಾನಾಂ ಪರೇಷ್ವೈವ ಮಿಥ್ಯಾತ್ವಾಂಗೀಕಾರಾದಸ್ಥಿರತ್ವಂ ಸೂಚಯತಿ ॥ ೮೭೦-೮೭೧ ॥

**ವಿವರಣೆ-** ನಮ್ಮ ಪೂರ್ವಾಚಾರ್ಯರ ಪ್ರಕ್ರಿಯೆಯನ್ನು ಸಂರಕ್ಷಣೆ ಮಾಡಲು ಈ ಎಲ್ಲವನ್ನೂ ಕಲ್ಪನೆ ಮಾಡುತ್ತೇವೆ. ಎಂದು ಹೇಳಿದರೆ, ಲೋಕಾನುಭವ ವಿರುದ್ಧವಾದ ಪ್ರಕ್ರಿಯೆಯನ್ನು ಸಂಗೆಕ್ಷಣೆ ಮಾಡಬಾರದು ಎಂದು ಇಲ್ಲಿ ಹೇಳುತ್ತಾರೆ. ಲೋಕಾನುಭವ ವಿರುದ್ಧವಾದುದು ಎಂಬುದು ಉಪಲಕ್ಷಣ. ಇಂತಹ ಕಲ್ಪನೆಯು ವಿಶ್ವಂ ಸತ್ಯಂ, ತತ್ಸತ್ಯಂ ಎಂಬ ವೇದ ದ್ರಷ್ಟಾರರಾದ ಮಹರ್ಷಿಗಳ ವಚನದಿಂದಲೂ 'ಸತ್ಯಂ ಮೇ ವ್ಯಾಹೃತಂ ಸತಿ' ಎಂದು ತನ್ನ ವಾಕ್ಯಕ್ಕೆ ಸತ್ಯತ್ವವನ್ನು ಹೇಳುವ ಸರ್ವಜ್ಞನಾದ ಹರಿಯ ವಚನದಿಂದಲೂ, 'ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ' ಎಂಬ ಪುರಾಣ ಪ್ರವರ್ತಕರಾದ ಮಹರ್ಷಿಗಳ ವಚನದಿಂದಲೂ ಎಂದರೆ ಆ ವಚನಗಳಿಗೆ ಮೂಲವಾದ ಋಷಿಗಳ, ಹರಿಯ ಮತ್ತು ಪುರಾಣಪ್ರವರ್ತಕರ ಅನುಭವದಿಂದಲೂ ಇಂತಹ ಪ್ರಕ್ರಿಯೆಯು ಬಾಧಿತವಾದುದು ಎಂದು ಅಭಿಪ್ರಾಯ. ಅಥವಾ ಲೋಕ ದರ್ಶನೇ ಎಂಬ ಧಾತುವಿನಿಂದ ಲೋಕಪದದಿಂದಲೇ ಇವೆಲ್ಲವನ್ನೂ ಸಂಗ್ರಹಿಸಬಹುದು. ನಿನ್ನ ಪ್ರಕ್ರಿಯೆಯು ಮಿಂಚು ಎಂದು ಹೇಳಿರುವುದರಿಂದ ಅದು ಅಸ್ಥಿರವಾದುದು, ಅನುಭವವನ್ನು ಬಾಧಿಸಲು ಸಮರ್ಥವಲ್ಲ ಎಂದು ಸೂಚಿಸುತ್ತಾರೆ. ಸಿಡಿಲಾದರೆ ಇನ್ನೊಂದನ್ನು ಬಾಧಿಸಬಹುದು, ಆದರೆ ಮಿಂಚು ಬಾಧಿಸುವುದಿಲ್ಲ ಎಂದು ಅಭಿಪ್ರಾಯ.

ನ ಹಿ ಕೋಪಿ ಪಿಶಾಚಸ್ಯ ಸತ್ತ್ವಂ ಪಶ್ಯನ್ ಪ್ರದೃಶ್ಯತೇ ।
ವೇದೈಕಗಮ್ಯಾದೃಶ್ಯಾರ್ಥಸತ್ತಾಂ ಸರ್ವಃ ಕಿಲೇಕ್ಷತೇ ॥ ೮೭೨ ॥

**ಅರ್ಥ**-ಪಿಶಾಚಸ್ಯ= ಪಿಶಾಚದ, ಸತ್ತ್ವಂ= ಸತ್ತ್ವವನ್ನು, ಪಶ್ಯನ್= ನೋಡುವಂತಹ, ಕೋಪಿ= ಯಾವನೂ ಸಹ, ನ ಹಿ ಪ್ರದೃಶ್ಯತೇ= ಕಂಡುಬರುವುದಿಲ್ಲ, ವೇದೈಕಗಮ್ಯ ಅದೃಶ್ಯಾರ್ಥ ಸತ್ತಾಂ= ವೇದಮಾತ್ರ ಗಮ್ಯನಾದ ಅದೃಶ್ಯನಾದ ಬ್ರಹ್ಮರೂಪನಾದ ಅರ್ಥದಲ್ಲಿ ಇರುವ ಸತ್ತ್ವವನ್ನು, ಸರ್ವಃ= ಎಲ್ಲರೂ, ಈಕ್ಷತೇ ಕಿಲ= ನೋಡುತ್ತಾರಷ್ಟೇ!

**ಅನುವಾದ-** ಪಿಶಾಚವನ್ನು ನೋಡುವವನು ಪ್ರಪಂಚಲ್ಲಿ ಯಾವನೂ ಕಂಡುಬರುವುದಿಲ್ಲ. ಹೀಗಿರುವಾಗ ವೇದೈಕಗಮ್ಯನಾದ ಅದೃಶ್ಯನಾದ ಬ್ರಹ್ಮನ ಸತ್ತ್ವವನ್ನು ಎಲ್ಲರೂ ನೋಡುತ್ತಾರಷ್ಟೇ!

**ಭಾವವಿಲಾಸಿನೀ-** ಬ್ರಹ್ಮಸತ್ಯತ್ವಸ್ಯಾಪ್ರತ್ಯಕ್ಷತ್ವೇ ಕೈಮುತ್ಯಮಾಹ – ನ ಹೀತಿ ॥ ೮೭೨ ॥

**ವಿವರಣೆ-** ಕೈಮುತ್ಯನ್ಯಾಯದಿಂದ ಬ್ರಹ್ಮಸತ್ತ್ವವು ಅಪ್ರತ್ಯಕ್ಷವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಪಿಶಾಚಿಯ ಸತ್ತ್ವವೂ ಯಾರಿಗೂ ಪ್ರತ್ಯಕ್ಷವಲ್ಲ. ಹೀಗಿರುವಾಗ ಬ್ರಹ್ಮನ ಸತ್ತ್ವವು ಹೇಗೆ ಪ್ರತ್ಯಕ್ಷವಾಗುತ್ತದೆ ಎಂದು ಅಭಿಪ್ರಾಯ.

ಘಟಃ ಸನ್ ಭೂತಲೇ ವ್ಯೋಮ್ನಿ ನ ಸನ್ ರೂಪಂ ಚ ಸದ್ ಘಟೇ ।
ನ ವ್ಯೋಮ್ನೀತಿ ಚ ವಿಜ್ಞಾತೇ ಕೇ ತೇ ಸದಸತೀ ವದ ॥ ೮೭೩॥

ನ ಹ್ಯಧಿಷ್ಠಾನಮಾಧೇಯಂ ಸಚ್ಚ ತತ್ ಸದಸನ್ನ ಹಿ ॥ ೮೭೪ ॥

**ಅರ್ಥ**-ಘಟಃ= ಘಟವು, ಭೂತಲೇ= ಭೂತಲದಲ್ಲಿ, ಸನ್= ಸತ್ಯವಾಗಿದೆ, ವ್ಯೋಮ್ನಿ= ಆಕಾಶದಲ್ಲಿ, ನ ಸನ್= ಸತ್ಯವಲ್ಲ, ರೂಪಂ ಚ= ರೂಪವಾದರೂ, ಘಟೇ= ಘಟದಲ್ಲಿ, ಸತ್= ಸತ್ಯವಾಗಿದೆ, ವ್ಯೋಮ್ನಿ= ಆಕಾಶದಲ್ಲಿ, ನ= ಸತ್ಯವಾಗಿಲ್ಲ, ಇತಿ= ಈ ರೀತಿಯಾಗಿ, ವಿಜ್ಞಾತೇ= ಗ್ರಹಿಸಲ್ಪಡುವ, ತೇ ಸದಸತೀ= ಆ ಸದಸತ್ ಪದಾರ್ಥಗಳು, ಕೇ= ಯಾವುವು ಎಂದು, ವದ= ಹೇಳು?

**ಅನುವಾದ**- ಪ್ರಕಾರಾಂತರದಿಂದಲೂ ಸತ್ತ್ವಕ್ಕೆ ಘಟನಿಷ್ಠತ್ವವನ್ನು ಉಪಪಾದನೆ ಮಾಡುತ್ತಾರೆ. ಮೊದಲನೆಯ ಪ್ರತೀತಿಯಲ್ಲಿ ಭೂತಲಾಧಿಕರಣಕವಾಗಿ, ಎರಡನೇ ಪ್ರತೀತಿಯಲ್ಲಿ ಘಟಾಧಿಕರಣಕವಾಗಿ ತೋರುವ ಸತ್ ಪದಾರ್ಥವು ಬ್ರಹ್ಮನಲ್ಲ. ಏಕೆಂದರೆ ಬ್ರಹ್ಮನು ಅವೃತ್ತಿ ಪದಾರ್ಥ. ಇಲ್ಲಿ ಸತ್ಪದಾರ್ಥವು ಅಧಿಕರಣವೃತ್ತಿಯಾಗಿ ತೋರುತ್ತದೆ. ಆದ್ದರಿಂದ ಇಲ್ಲಿ ತೋರುವ ಸತ್ಪದದ ಅರ್ಥವಾದ ಸತ್ಯತ್ವವು ಘಟ ಮತ್ತು ರೂಪಗತವಾದುದೆಂದೇ ಅಂಗೀಕರಿಸಬೇಕು. ಆದ್ದರಿಂದ ಘಟದಲ್ಲಿಯೇ ಸತ್ತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ಸತ್ತಾಂ ಘಟಗತಾಂ ಕರೋತಿ ॥ಘಟ ಇತಿ॥ ಭೂತಲಾಧಿಕರಣಕತಯಾ ಘಟಾದಿಕರಣಕತಯಾ ಚ ಪ್ರತೀಯಮಾನಸ್ಸಂಪರಮತೇನ ಬ್ರಹ್ಮ । ಅವೃತ್ತಿ-ಪದಾರ್ಥತ್ವಾತ್ । ಅಧಿಷ್ಠಾನಾಧ್ಯಸ್ತಯೋರ್ದ್ವಯೋರಪಿ ತವಮತೇ ಸತ್ತ್ವಾಸಂಭವೇನ ಆಧೇಯಬ್ರಹ್ಮಣ ಏವ ತತ್ರಾರೋಪಿತತ್ವ ಪ್ರಸಂಗಾಚ್ಚ । ಕಿಂತ್ವೇಕತ್ರ ಘಟಃ ಅಪರತ್ರ ರೂಪಮೇವಂ ಯಯೋರಸತ್ತ್ವಮುಚ್ಯತೇ ತಯೋರೇವ ಸತ್ತ್ವಂ ವಕ್ತವ್ಯಮ್ । ಏಕಕರ್ತೃಕವಾಕ್ಯತ್ವಾತ್ । ಅಸತ್ತ್ವಂ ಚ ನ ಬ್ರಹ್ಮಣಃ । ಕಿಂತು ಘಟರೂಪಯೋರೇವ । ಅತಸ್ಸತ್ತ್ವಮಪಿ ತಯೋರೇವ ವಕ್ತವ್ಯಮ್। ಘಟಭೂತಲಯೋರಾಧಾರತಯಾ ಸ್ಪಷ್ಟಂ ಪ್ರತೀಯಮಾನತ್ವೇನ ತ್ವದಭಿಮತಾಧಿಷ್ಠಾನಗೋಷ್ಠ್ಯಾ ಅಪ್ಯಯೋಗಾಚ್ಚ ॥ ಏತದೇವ ದರ್ಶಯತಿ॥ ನ ಹೀತಿ॥ ಸತ್ ಸದೇಕಸ್ವಭಾವಂ ತದ್ಬ್ರಹ್ಮ ॥೮೭೩-೮೭೪ ॥

ಯದಧ್ಯಸ್ತಂ ಘಟೇ ಸತ್ತ್ವಂ ಭಾತಿ ತದ್ಗಂ ಹಿ ತದ್ ಭವೇತ್ ।
ನ ತ್ವನ್ಯಗಾಮಿ ನ ಹ್ಯಾವಾಮನ್ಯಥಾಖ್ಯಾತಿವಾದಿನೌ ।
ಸತ್ತ್ವಪ್ರತ್ಯಕ್ಷಮೇತಸ್ಮಾದಬಾಧಿತಮಭೂದಿದಂ ॥ ೮೭೫ ॥

**ಅರ್ಥ**-ಘಟೇ= ಘಟದಲ್ಲಿ, ಯತ್= ಯಾವ, ಅಧ್ಯಸ್ತಂ ಸತ್ತ್ವಂ= ಅಧ್ಯಸ್ತವಾದ ಸತ್ತ್ವವು, ಭಾತಿ= ತೋರುತ್ತದೆಯೋ, ತತ್= ಅದು, ತದ್ಗಂ ಭವೇತ್ ಹಿ= ಘಟಗತವೇ ಆಗಿರಬೇಕಷ್ಟೆ ನ ತು ಅನ್ಯಗಾಮಿ= ಅನ್ಯನಿಷ್ಠವಾದುದಲ್ಲ, ಆವಾಂ= ನಾವಿಬ್ಬರೂ, ಅನ್ಯಥಾಖ್ಯಾತಿವಾದಿನೌ

ನಹಿ= ಅನ್ಯಥಾಖ್ಯಾತಿಯನ್ನು ಅಂಗೀಕರಿಸುವುದಿಲ್ಲವಷ್ಟೇ, ಏತಸ್ಮಾತ್= ಈ ಕಾರಣದಿಂದ, ಇದಂ ಸತ್ತ್ವಪ್ರತ್ಯಕ್ಷಂ= ಈ ಸತ್ತ್ವಪ್ರತ್ಯಕ್ಷವು, ಅಬಾಧಿತಮಭೂತ್= ಅಬಾಧಿತವೇ ಆಗಿದೆ.

**ಅನುವಾದ- ಘಟದಲ್ಲಿಯಾವ ಅಧ್ಯಸ್ತವಾದ ಸತ್ತ್ವವು ತೋರುತ್ತದೆ ಎಂದು ಹೇಳುತ್ತೀಯೋ ಆ ಸತ್ತ್ವವು ಘಟಗತವೇ ಆಗಿರಬೇಕು. ಅನ್ಯಗತವಾಗಿರುವುದಿಲ್ಲ. ನಾವಿಬ್ಬರೂ ತಾರ್ಕಿಕರ ಅನ್ಯಥಾಖ್ಯಾತಿಯನ್ನು ಅಂಗೀಕರಿಸುವುದಿಲ್ಲವಷ್ಟೇ ? ಈ ಕಾರಣದಿಂದ ಈ ಸತ್ತ್ವಪ್ರತ್ಯಕ್ಷವು ಅಬಾಧಿತವೆಂದೇ ಸಿದ್ಧವಾಯಿತು.**

**ಭಾವವಿಲಾಸಿನೀ-** ಏಕತ್ರಾರೋಪ್ಯಮಾಣಸ್ಯಾನ್ಯತ್ರ ಸತ್ತ್ವಂ ತಾರ್ಕಿಕಸ್ಯೈವ ಶೋಭತೇ । ನ ತು ತವ । ಅಪಸಿದ್ಧಾಂತಾದಿತ್ಯಾಹ – **ಯದಧ್ಯಸ್ತಮಿತಿ॥** ಏತಸ್ಮಾತ್ ಅನ್ಯಗತಸ್ಯಾನ್ಯತ್ರ ಭ್ರಾಂತ್ಯಯೋಗಾತ್ ॥ ೮೭೫ ॥

**ವಿವರಣೆ-** ತಾರ್ಕಿಕರು ಆಪಣಸ್ಥರೂಪ್ಯವೇ ಶುಕ್ತಿದೇಶದಲ್ಲಿ ತೋರುತ್ತದೆ ಎಂದು ಅಂಗೀಕಾರ ಮಾಡಿ ಅನ್ಯತ್ರ ಇದ್ದ ಸತ್ಯ ವಸ್ತುವಿಗೆ ಅನ್ಯತ್ರ ಪ್ರತೀತಿಯನ್ನು ಅಂಗೀಕಾರ ಮಾಡುತ್ತಾರೆ. ನಾವಿಬ್ಬರೂ ಹಾಗೆ ಅಂಗೀಕಾರ ಮಾಡುವುದಿಲ್ಲ. ಬ್ರಹ್ಮನಲ್ಲಿರುವ ಸತ್ತ್ವವು ಘಟದಲ್ಲಿ ತೋರುತ್ತದೆ ಎಂದು ಅಂಗೀಕರಿಸಿದರೆ ತಾರ್ಕಿಕರ ಅನ್ಯಥಾಖ್ಯಾತಿಯನ್ನು ಅಂಗೀಕರಿಸಿದಂತಾಗುತ್ತದೆ. ಆದ್ದರಿಂದ ಘಟದಲ್ಲಿ ತೋರುವ ಸತ್ತ್ವವು ಘಟದಲ್ಲೇ ಇರುವುದರಿಂದ ಈ ಸತ್ತ್ವ ಪ್ರತ್ಯಕ್ಷವು ಅಬಾಧಿತವಾಯಿತು ಎಂದು ಅಭಿಪ್ರಾಯ.

**ಕಿಂಚಾಧಿಷ್ಠಾನಗಾ ಸತ್ತಾ ಘಟಾದ್ಯನುಗತೇತಿ ಸಾ ।**
**ಘಟೇಽಪಿ ದೃಶ್ಯತೇ ಕಿಂವಾ ತನ್ನಿಷ್ಠಾಽಽರೋಪ್ಯತೇ ಘಟೇ ॥ ೮೭೬ ॥**

**ಉತ ತತ್ರೈವ ಸಾ ದೃಷ್ಟಾ ಘಟೋ ಘಟತಯೇಕ್ಷ್ಯತೇ ।**
**ಕಿಂವಾ ಘಟೇ ಪೃಥಕ್ಸತ್ತ್ವಂ ತತ್ಸ್ಥಮೇವ ನಿರೀಕ್ಷ್ಯತೇ ॥ ೮೭೭ ॥**

**ಆದ್ಯೇ ಚೈತನ್ಯವತ್ ಸತ್ತಾಸಿದ್ಧೇಃ ಸಿದ್ಧಂ ಸಮೀಹಿತಂ ।**
**ದ್ವಿತೀಯೇ ತು ಚಿದೈಕ್ಯಸ್ಯಾರೋಪೇ ಸ ಸ್ಯಾನ್ನ ಚಾನ್ಯಥಾ ॥ ೮೭೮ ॥**

**ಅರ್ಥ-**ಕಿಂಚ= ಮತ್ತು, ಅಧಿಷ್ಠಾನಗಾ ಸತ್ತಾ= ಅಧಿಷ್ಠಾನಗತವಾದ ಸತ್ತ್ವವು, ಘಟಾದ್ಯನುಗತೇತಿ= ಘಟಾದಿಗಳಲ್ಲಿ ಅನುಗತವಾಗಿದೆ ಎಂಬ ನಿಮಿತ್ತದಿಂದ, ಸಾ= ಆ ಸತ್ತ್ವವು, ಘಟೇಽಪಿ ದೃಶ್ಯತೇ= ಘಟದಲ್ಲಿಯೂ ತೋರುತ್ತದೆಯೋ, ಕಿಂವಾ= ಅಥವಾ, ತನ್ನಿಷ್ಠಾ= ಅಧಿಷ್ಠಾನ ಗತವಾದ ಸತ್ತ್ವವು, ಘಟೇ= ಘಟದಲ್ಲಿ, ಆರೋಪ್ಯತೇ= ಆರೋಪಿಸಲ್ಪಡುತ್ತದೆಯೋ, ಉತ= ಅಥವಾ, ತತ್ರೈವ= ಅಧಿಷ್ಠಾನದಲ್ಲಿಯೇ, ಸಾ= ಆ ಸತ್ತ್ವವು, ದೃಷ್ಟಾ= ದೃಷ್ಟವಾಗಿ, ಘಟಃ= ಘಟವು, ಘಟತಯಾ= ಘಟತ್ವೇನ ಮಾತ್ರ,

ಈಕ್ಷ್ಯತೇ= ಗ್ರಹಿಸಲ್ಪಡುತ್ತದೆಯೋ, ಕಿಂವಾ= ಅಥವಾ, ಘಟೇ= ಘಟದಲ್ಲಿ, ತತ್ಸ್ಥಮೇವ= ಘಟದಲ್ಲಿಯೇ ಇರುವ, ಪೃಥಕ್ಸತ್ವಂ= ಇನ್ನೊಂದು ಸತ್ತ್ವವು, ನಿರೀಕ್ಷ್ಯತೇ= ನಿರೀಕ್ಷಿಸಲ್ಪಡುತ್ತದೆಯೋ (ಎಂದು ಹೇಳು), ಆದ್ಯೇ= ಮೊದಲನೆಯ ಕಲ್ಪದಲ್ಲಿ, ಚೈತನ್ಯವತ್= ಚೈತನ್ಯದಲ್ಲಿ ಹೇಗೆ ಸತ್ತ್ವವು ಸಿದ್ಧವಾಗುತ್ತದೆಯೋ ಅದರಂತೆ, ಸತ್ತಾ ಸಿದ್ಧೇಃ= ಘಟದಲ್ಲಿಯೂ ಸತ್ತ್ವವು ಸಿದ್ಧವಾಗುವುದರಿಂದ, ಸಮೀಹಿತಂ= ನಮ್ಮ ಅಭೀಷ್ಟವು, ಸಿದ್ಧಂ= ಸಿದ್ಧವಾಯಿತು, ದ್ವಿತೀಯೇ ತು= ಎರಡನೆಯ ಪಕ್ಷದಲ್ಲಾದರೆ, ಚಿದೈಕ್ಯಸ್ಯಾರೋಪೇ= ಚಿದೈಕ್ಯವನ್ನು ಆರೋಪ ಮಾಡಿದರೆ ಮಾತ್ರ, ತಸ್ಯ= ಸತ್ತ್ವದ ಆರೋಪವು ಕೂಡುತ್ತದೆ, ಅನ್ಯಥಾ ಚ ನ= ಇಲ್ಲದಿದ್ದರೆ ಕೂಡುವುದಿಲ್ಲ.

**ಅನುವಾದ- ಮತ್ತು ಅಧಿಷ್ಠಾನಗತವಾದ ಸತ್ತ್ವವೇ ಘಟಾದಿಗಳಲ್ಲಿ ಅನುಗತವಾಗಿ ಘಟದಲ್ಲಿಯೂ ತೋರುತ್ತದೆಯೋ ಅಥವಾ ಅಧಿಷ್ಠಾನಗತವಾದ ಸತ್ತ್ವವು ಘಟದಲ್ಲಿ ಆರೋಪಿಸಲ್ಪಡುತ್ತದೆಯೋ, ಅಥವಾ ಅಧಿಷ್ಠಾನದಲ್ಲಿಯೇ ಸತ್ತ್ವವು ದೃಷ್ಟವಾಗಿ ಘಟವು ಕೇವಲ ಘಟತ್ವರೂಪದಿಂದಲೇ ತೋರುತ್ತದೆಯೋ, ಅಥವಾ ಘಟದಲ್ಲಿ ಅದರಲ್ಲೇ ಇರುವ ಭಿನ್ನ ಸತ್ತ್ವವು ತೋರುತ್ತದೆಯೋ? ಮೊದಲನೆಯ ಕಲ್ಪದಲ್ಲಿ ಚೈತನ್ಯದಲ್ಲಿ ಸತ್ತ್ವವು ಸಿದ್ಧವಾಗುವಂತೆ ಘಟದಲ್ಲಿಯೂ ಸಿದ್ಧವಾಗುವುದರಿಂದ ನಮ್ಮ ಅಭೀಷ್ಟವು ಸಿದ್ಧವಾಗುತ್ತದೆ. ಎರಡನೆಯ ಕಲ್ಪದಲ್ಲಿ ಚಿತ್ತಾದಾತ್ಮ್ಯಾರೋಪವಿದ್ದರೆ ಮಾತ್ರ ಆ ಸತ್ತಾರೋಪವು ಕೂಡುತ್ತದೆ ಇಲ್ಲದಿದ್ದರೆ ಕೂಡುವುದಿಲ್ಲ.**

**ಭಾವವಿಲಾಸಿನೀ-** ಇದಾನೀಂ ಘಟಾದಿಪ್ರಪಂಚೇ ಸತ್ತ್ವಸ್ಯೈವಾಪ್ರತೀತೌ ವ್ಯಾವಹಾರಿಕ-ಸತ್ತ್ವಸ್ಯಾಪ್ಯಭಾವಪ್ರಸಂಗೇನ ಬ್ರಹ್ಮಗತಸತ್ತ್ವಸ್ಯಾತ್ರ ಪ್ರತೀತಾವನ್ಯಥಾಖ್ಯಾತ್ಯಾಪತ್ತ್ಯಾ ತೇಷು ತೇಷ್ವೇವ ತತ್ತತ್ಸತ್ವಸ್ಯ ಪ್ರತ್ಯೇತವ್ಯತ್ವೇ ಸಿದ್ಧೇಽವಿದ್ಯಾನಿವೃತ್ತ್ಯುತ್ತರಕಾಲೀನ ತತ್ತದಧಿಷ್ಠಾನಚೈತನ್ಯಸ್ಯ ತತ್ತಜ್‌ಜ್ಞಾನತ್ವಂ ವದತಃ ಪರಸ್ಯೈವ ರೀತ್ಯಾಽವಿದ್ಯಾಖ್ಯದೋಷಾಯೋಗೇನ ಕಾಚಾದಿ ದೋಷಾಣಾಂ ಸರ್ವಸಂಮತ್ಯಾಪ್ಯಭಾವೇನ ನಿರ್ದೋಷಕರಣಜನ್ಯಮತ ಏವ ಬಾಧಾ-ಯೋಗ್ಯಂ ಘಟಾದಿಪ್ರತ್ಯಕ್ಷಂ ಸರ್ವೈರಪ್ಯನುಲ್ಲಂಘ್ಯಮಿತಿ ಭಾವೇನ ಸವಿಸ್ತರಂ ಪರಪಕ್ಷಂ ವಿಕಲ್ಪ್ಯ ದೂಷಯತಿ ॥ **ಕಿಂಚೇತಿ** ॥ ಸಾ ಸತ್ತೇತಿ ಸಂಬಂಧಃ । ತನ್ನಿಷ್ಠಾ ಬ್ರಹ್ಮನಿಷ್ಠಾ ।।ತತ್ರೈವ ಬ್ರಹ್ಮಣ್ಯೇವ । ಘಟೇ ಸತ್ತ್ವಪ್ರತೀತಿರೇವ ನಾಸ್ತೀತ್ಯೇವಕಾರಾರ್ಥಃ । ತತ್ಸ್ಥಂ ಘಟಸ್ಥಮ್ । ಸತ್ತಾಸಿದ್ಧೇಃ ಘಟೇಽಪಿ ಸತ್ತಾಸಿದ್ಧೇಃ । ಸಮೀಹಿತಂ ಬ್ರಹ್ಮವಜ್ಜಗತ್ಸತ್ಯತ್ವವಾದಿನಾಂ ಸಮೀಹಿತಮ್ । ಸಃ ಬ್ರಹ್ಮಗತ-ಸತ್ತಾರೋಪಃ ॥ ೮೭೬-೮೭೮ ॥

**ವಿವರಣೆ-** ಇನ್ನು ಘಟಾದಿ ಪ್ರಪಂಚದಲ್ಲಿ ಸತ್ತ್ವವೇ ತೋರದಿದ್ದರೆ ವ್ಯಾವಹಾರಿಕ ಸತ್ತ್ವವೇ ಸಿದ್ಧವಾಗುವುದಿಲ್ಲ. ಬ್ರಹ್ಮಗತ ಸತ್ತ್ವವೇ ಘಟದಲ್ಲಿ ತೋರುತ್ತದೆ ಎಂದು ಹೇಳಿದರೆ ಅನ್ಯಥಾಖ್ಯಾತಿಯನ್ನು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಆದ್ದರಿಂದ ಘಟಾದಿಗಳಲ್ಲಿಯೂ ಸತ್ತ್ವವನ್ನು ಅಂಗೀಕರಿಸಬೇಕು ಎಂದು ಸಿದ್ಧವಾಗುತ್ತದೆ. ಪರ

ರೀತಿಯಲ್ಲಿಯೇ ಅವಿದ್ಯಾನಿವೃತ್ತ್ಯುತ್ತರಕಾಲೀನವಾದ ಘಟಾಧಿಷ್ಠಾನಚೈತನ್ಯವು ಘಟಜ್ಞಾನವಾಗುವುದರಿಂದ ಆಗ ಅವಿದ್ಯಾರೂಪದೋಷವು ನಿವೃತ್ತವಾಗುವುದರಿಂದ ಕಾಚಾದಿ ದೋಷಗಳು ಸರ್ವಸಮ್ಮತಿಯಿಂದಲೂ ಇಲ್ಲದಿರುವುದರಿಂದ ನಿರ್ದೋಷಕರಣ ಜನ್ಯವಾದ ಆದ್ದರಿಂದಲೇ ಅಬಾಧ್ಯವಾದ ಸತ್ತ್ವಗ್ರಾಹಿಯಾದ ಘಟಾದಿ ಪ್ರತ್ಯಕ್ಷವನ್ನು ಯಾರೂ ಉಲ್ಲಂಘನೆ ಮಾಡಲು ಸಾಧ್ಯವಿಲ್ಲ ಎಂಬ ಭಾವದಿಂದ ಪರಪಕ್ಷವನ್ನು ನಾಲ್ಕು ರೀತಿಯಲ್ಲಿ ವಿಕಲ್ಪವನ್ನು ಮಾಡಿ ದೂಷಿಸುತ್ತಾರೆ.

**ಉಕ್ತರೀತ್ಯಾ ಚಿದೈಕ್ಯಸ್ಯಾರೋಪಃ ಸ್ಯಾತ್ ಪ್ರಾತಿಭಾಸಿಕಃ ।**
**ನ ಚೇತನೋ ಘಟ ಇತಿ ಬಾಧಸ್ಯಾದ್ಯೈವ ದರ್ಶನಾತ್ ॥ ೮೭೯ ॥**

**ಅರ್ಥ**-ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಲ್ಲಿ, ಘಟಃ ನ ಚೇತನಃ= ಘಟವು ಚೇತನವಲ್ಲ, ಇತಿ ಬಾಧಸ್ಯ= ಎಂಬ ಬಾಧವು, ಅದ್ಯೈವ ದರ್ಶನಾತ್= ಈಗಲೇ ಇರುವುದರಿಂದ, ಚಿದೈಕ್ಯಸ್ಯ ಆರೋಪಃ= ಚಿತ್ತಾದಾತ್ಮ್ಯಾರೋಪವು, ಪ್ರಾತಿಭಾಸಿಕಃ ಸ್ಯಾತ್= ಪ್ರಾತಿಭಾಸಿಕವಾಗುತ್ತದೆ.

**ಅನುವಾದ-** ಘಟವು ಚೇತನವಲ್ಲ ಎಂಬ ಬಾಧವು ಈಗಲೇ ಎಂದರೆ ಬ್ರಹ್ಮಜ್ಞಾನಕ್ಕಿಂತ ಮೊದಲೇ ಇರುವುದರಿಂದ ಹಿಂದೆ ಹೇಳಿದ ರೀತಿಯಲ್ಲಿ ಚಿತ್ತಾದಾತ್ಮ್ಯಾರೋಪವು ಪ್ರಾತಿಭಾಸಿಕವಾಗುತ್ತದೆ.

**ಭಾವವಿಲಾಸಿನೀ**- ಉಕ್ತಾಂ ರೀತಿಮೇವ ಸ್ಮಾರಯತಿ ॥ **ನೇತಿ** ॥ ಅದ್ಯೈವ ಬ್ರಹ್ಮಜ್ಞಾನಾ-ತ್ಪೂರ್ವಮೇವ ॥ ೮೭೯ ॥

**ವಿವರಣೆ**- ಚಿತ್ತಾದಾತ್ಮ್ಯಾರೋಪವು ಪ್ರಾತಿಭಾಸಿಕವಾದರೆ ಸತ್ತ್ವಾರೋಪವು ಪ್ರಾತಿಭಾಸಿಕವೇ ಆಗುವುದರಿಂದ ಘಟಾದಿಗಳಲ್ಲಿ ವ್ಯಾವಹಾರಿಕ ಸತ್ತ್ವವೇ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಪ್ರಾತಿಭಾಸಿಕಸತ್ತಾಭೂದ್ ಘಟಸತ್ತಾಪಿ ತೇ ಮತೇ ।**
**ಅರ್ಥಕ್ರಿಯಾಯಾ ಘಟಕಂ ಸತ್ತ್ವಂ ನೇತ್ಯಫಲೋ ಘಟಃ ॥ ೮೮೦ ॥**

**ಅರ್ಥ**-ತೇ ಮತೇ= ನಿನ್ನ ಮತದಲ್ಲಿ, ಘಟಸತ್ತಾಪಿ= ಘಟಸತ್ತ್ವವೂ ಕೂಡ, ಪ್ರಾತಿಭಾಸಿಕ ಸತ್ತಾ ಅಭೂತ್= ಪ್ರಾತಿಭಾಸಿಕ ಸತ್ತ್ವವೇ ಆಯಿತು, ಅರ್ಥಕ್ರಿಯಾಯಾಃ= ಅರ್ಥಕ್ರಿಯೆಯನ್ನು ಕುರಿತು, ಘಟಕಂ= ಪ್ರಯೋಜಕವಾದ, ಸತ್ತ್ವಂ= ಸತ್ತ್ವವು (ನಿನ್ನ ರೀತಿಯಲ್ಲಿ ವ್ಯಾವಹಾರಿಕ ಸತ್ತ್ವವು), ನೇತಿ= ಇಲ್ಲ ಎಂಬ ಕಾರಣದಿಂದ, ಘಟಃ= ಘಟವು, ಅಫಲಃ= ನಿಷ್ಪ್ರಯೋಜನ ವಾಗುತ್ತದೆ.

**ಅನುವಾದ-** ನಿನ್ನ ಮತದಲ್ಲಿ (ಈ ಎರಡನೆಯ ಕಲ್ಪದಲ್ಲಿ) ಘಟಸತ್ತ್ವವೂ ಕೂಡ ಪ್ರಾತಿಭಾಸಿಕ ಸತ್ತ್ವವೇ ಆಯಿತು. ನಿನ್ನ ಮತದಂತೆ ಅರ್ಥಕ್ರಿಯಾಪ್ರಯೋಜಕವಾದ ವ್ಯಾವಹಾರಿಕ ಸತ್ತ್ವವು ಘಟದಲ್ಲಿ ಸಿದ್ಧವಾಗುವುದಿಲ್ಲ ಎಂಬ ಕಾರಣದಿಂದ ಘಟವು ನಿಷ್ಪ್ರಯೋಜನವಾಗುತ್ತದೆ.

**ಭಾವವಿಲಾಸಿನೀ–** ಅರ್ಥಕ್ರಿಯಾಯಾ ಘಟಕಂ ಸತ್ತ್ವಂ ಪ್ರಾತಿಭಾಸಿಕತ್ವಾದಧಿಕಂ ಸತ್ತ್ವಮಿತ್ಯರ್ಥಃ। ದೂಷಣಾಂತರಮಿದಮ್ । ಪ್ರಾಗುಕ್ತಾಪಸಿದ್ಧಾಂತಾದಿಕಂ ಚ ದ್ರಷ್ಟವ್ಯಮ್ ॥ ೮೮೦ ॥

**ವಿವರಣೆ-** ಹಿಂದೆ ಈ ಕಲ್ಪದಲ್ಲಿ ಅಪಸಿದ್ಧಾಂತ ದೋಷವನ್ನು ಹೇಳಿದ್ದರು. ಈಗ ಅರ್ಥಕ್ರಿಯಾಕಾರಿತ್ವದ ಅನುಪಪತ್ತಿರೂಪವಾದ ದೋಷವನ್ನು ಹೇಳುತ್ತಿದ್ದಾರೆ.

ಘಟೇ ಚೇದುಲ್ಲಿಖೇತ್ ಸಾ ಧೀಃ ಪಾರಮಾರ್ಥಿಕಸತ್ಯತಾಂ ।
ಕ್ಷಿಪೇದಸತ್ಯತಾಂ ತಸ್ಯ ಭಾವಿಬಾಧಶ್ಚ ಬಾಧ್ಯತೇ ॥ ೮೮೧ ॥

**ಅರ್ಥ-**ಸಾ ಧೀಃ= ಘಟಃ ಸನ್ ಇತ್ಯಾದಿ ಪ್ರತ್ಯಕ್ಷವು, ಘಟೇ= ಘಟದಲ್ಲಿಯೇ, ಪಾರಮಾರ್ಥಿಕ ಸತ್ಯತಾಂ= ಪಾರಮಾರ್ಥಿಕ ಸತ್ತ್ವವನ್ನು, ಉಲ್ಲಿಖೇತ್ ಚೇತ್= ಉಲ್ಲೇಖಿಸುವುದಾದರೆ, ತಸ್ಯ= ಆ ಘಟಕ್ಕೆ, ಅಸತ್ಯತಾಂ= ಮಿಥ್ಯಾತ್ವವನ್ನು, ಕ್ಷಿಪೇತ್= ನಿರಾಕರಿಸುತ್ತದೆ, ಭಾವಿಬಾಧಶ್ಚ= ಭಾವಿಬಾಧವೂ ಕೂಡ, ಬಾಧ್ಯತೇ= ಬಾಧಿಸಲ್ಪಡುತ್ತದೆ.

**ಅನುವಾದ-** ಸನ್ ಘಟಃ ಎಂಬ ಪ್ರತೀತಿಯು ಘಟದಲ್ಲಿ ಪಾರಮಾರ್ಥಿಕ ಸತ್ತ್ವವನ್ನೇ ಉಲ್ಲೇಖಿಸಿದರೆ ಅದು ಮಿಥ್ಯಾತ್ವವನ್ನು ನಿರಾಕರಿಸುತ್ತದೆ ಮತ್ತು ಭಾವಿಬಾಧವೂ ಸಹ ಅದರಿಂದ ಬಾಧಿಸಲ್ಪಡುತ್ತದೆ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ಘಟ ಇತಿ**॥ ಸಾ ಸನ್‌ಘಟ ಇತ್ಯಾದಿರೂಪಾ । ತಸ್ಯ ಘಟಾದಿಪ್ರಪಂಚಸ್ಯ । ಅಬಾಧಿತಪಾರಮಾರ್ಥಿಕಸತ್ಯತ್ವಗ್ರಾಹಿಪ್ರತ್ಯಕ್ಷವಿರೋಧೇ ಅನುಮಾನಾದಿಶತಕೇನಾಪಿ ಮಿಥ್ಯಾತ್ವಂ ವಕ್ತುಂ ನ ಶಕ್ಯತ ಇತಿ ಭಾವಃ । ನನು ಬ್ರಹ್ಮಗತಸತ್ತ್ವಸ್ಯೈವ ಜಗತಿ ಭ್ರಾಂತ್ಯಾ ಭಾನಾತ್ಕಥಂ ತೇನ ಜಗನ್ಮಿಥ್ಯಾತ್ವಪ್ರತಿಕ್ಷೇಪ ಇತಿ ಚೇತ್ಸತ್ಯಮ್ । ಪ್ರತೀಯತೇ ತಾವಜ್ಜಗತಿ ಪಾರಮಾರ್ಥಿಕಂ ಸತ್ತ್ವಮ್ । ತಸ್ಯ ಚ ಭ್ರಾಂತಿಸಿದ್ಧತ್ವಮ್ । ಅತ್ರಾಸತ್ತ್ವೇ ಬ್ರಹ್ಮಣ್ಯೇವ ಚ ಸತ್ತ್ವೇ ಸತಿ ಸ್ಯಾತ್ । ತತ್ರ ಚ ನ ತಾವತ್ಪ್ರತ್ಯಕ್ಷಂ ಪ್ರಮಾಣಮ್ । ತೇನ ತ್ವದ್ರೀತ್ಯಾ ಮದ್ರೀತ್ಯಾ ಚಾತ್ಯೈವ ಸತ್ತ್ವಸ್ಯೋಲ್ಲಿಖ್ಯಮಾನತ್ವಾತ್ । ವಸ್ತುಸ್ಥಿತ್ಯಾ ತನ್ನಿಷ್ಠಸ್ಯಾತ್ರೋಲ್ಲೇಖೇಽಪಿ ಬ್ರಹ್ಮಗತತಯಾಽನುಲ್ಲೇಖಾಚ್ಚ । ನಾಪ್ಯನುಮಾನಮ್ । ಅನುಮಾನಬಾಧಯಾವತೀರ್ಣಪ್ರತ್ಯಕ್ಷಸ್ಯಾಗ್ರೇ ಪುನರುಚ್ಯಮಾನಾನುಮಾಶತಕಸ್ಯಾಪಿ ಕಾಲತ್ಯಯಾಪದಿಷ್ಟತಾಯಾ ಅಪರಿಹಾರಾತ್ । ನಾಪ್ಯಾಗಮಃ। ಘಟೇ ಪ್ರತೀಯಮಾನಂ ಸತ್ತ್ವಂ ನ ಘಟಗತಂ ಕಿಂತು ಬ್ರಹ್ಮನಿಷ್ಠಮಿತ್ಯಾಕಾರಕವಾಕ್ಯಸ್ಯ ಕ್ವಾಪ್ಯದರ್ಶನಾತ್। ಪ್ರತ್ಯಕ್ಷಸಿದ್ಧಘೋಷಾನಾಧಾರತ್ವಸ್ಯ ವಾಕ್ಯಶತಕೇನಾಪಿ ಬಾಧಾದರ್ಶನಾಚ್ಚ । ತಸ್ಮಾದಬಾಧಿಸತ್ತ್ವಗ್ರಾಹಿಪ್ರತ್ಯಕ್ಷೇಣ ಸ್ಯಾದೇವಮಿಥ್ಯಾತ್ವ-

ಪ್ರತಿಕ್ಷೇಪಃ । ಭಾವಿಬಾಧಕವತಶ್ಶುಕ್ತಿರಜತಾದೇಃ ಕಾಚಾದಿದುಷ್ಟಕರಣಜನ್ಯಜ್ಞಾನವಿಷಯತ್ವ ನಿಯಮೇನ ಪ್ರಕೃತೇ ಚ ತದಭಾವಸ್ಯೋಭಯವಾದಿಸಂಪ್ರತಿಪತ್ತ್ಯಾತ್ವದ್ರೀತ್ಯೈವಾವಿದ್ಯಾ-ನಿವೃತ್ತ್ಯುತ್ತರಕಾಲೀನಪ್ರತೀತೇರವಿದ್ಯಾಖ್ಯದೋಷಮೂಲತ್ವಸ್ಯಾಪ್ಯಸಂಭವೇನಾದುಷ್ಟಸಾರ್ವ-ಜನೀನಕರಣಜನ್ಯಜ್ಞಾನವಿಷಯಸ್ಯಾರ್ಥಕ್ರಿಯಾಕಾರಿಣಶ್ಚ ಘಟಾದೇಸ್ತ್ವದಭಿಲಷಿತಚರಮ-ಸಾಕ್ಷಾತ್ಕಾರಾತ್ಪ್ರಾಗೇವ ವಿನಷ್ಟಸ್ಯ ನಿಷ್ಪ್ರಕಾರಕೇ ತಸ್ಮಿನ್ನಾಸ್ತೀತ್ಯನುಲ್ಲಿಖ್ಯಮಾನಸ್ಯ ಚ ಭಾವಿ-ಬಾಧೋಽಪಿ ಬಾಧಿತ ಏವೇತಿ ಭಾವಃ ॥ ೮೮೧ ॥

**ವಿವರಣೆ-** ಬ್ರಹ್ಮಗತ ಸತ್ತ್ವವೇ ಭ್ರಾಂತಿಯಿಂದ ಜಗತ್ತಿನಲ್ಲಿ ತೋರುವುದರಿಂದ ಹೇಗೆ ಮಿಥ್ಯಾತ್ವವನ್ನು ಪ್ರತಿಕ್ಷೇಪ ಮಾಡುತ್ತದೆ ಎಂದು ಹೇಳಿದರೆ ಇದಕ್ಕೆ ನಮ್ಮ ಉತ್ತರವು ಹೀಗಿದೆ. ಸತ್ತ್ವವು ಘಟದಲ್ಲಿ ಇಲ್ಲ ಬ್ರಹ್ಮನಲ್ಲಿ ಮಾತ್ರ ಇದೆ ಎಂದು ಸಿದ್ಧವಾದರೆ ನೀನು ಹೇಳಿದ ಆಕ್ಷೇಪವು ಕೂಡುತ್ತದೆ. ಆದರೆ ಈ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಲ್ಲ. ಏಕೆಂದರೆ ನಿನ್ನ ರೀತಿಯಿಂದಲೂ ಮತ್ತು ನನ್ನ ರೀತಿಯಿಂದಲೂ ಪ್ರತ್ಯಕ್ಷವು ಘಟದಲ್ಲಿ ಸತ್ತ್ವವನ್ನೇ ಉಲ್ಲೇಖ ಮಾಡುತ್ತಿದೆ. ಅದು ಬ್ರಹ್ಮನಿಷ್ಠವಾದ ಸತ್ತ್ವ ಎಂದು ನೀನು ಹೇಳಿದರೂ ಪ್ರತ್ಯಕ್ಷವು ಅದನ್ನು ಬ್ರಹ್ಮನಿಷ್ಠತಯಾ ವಿಷಯೀಕರಿಸುವುದಿಲ್ಲ. ಈ ವಿಷಯದಲ್ಲಿ ಅನುಮಾನವು ಇಲ್ಲ. ಏಕೆಂದರೆ ನಿನ್ನ ಅನುಮಾನವನ್ನು ಬಾಧಿಸಲು ನಾವು ಪ್ರತ್ಯಕ್ಷವನ್ನು ಉಪನ್ಯಾಸ ಮಾಡಿರುವಾಗ ಇನ್ನು ನೂರು ಅನುಮಾನಗಳನ್ನು ಪ್ರಯೋಗ ಮಾಡಿದರೂ ಎಲ್ಲದಕ್ಕೂ ಬಾಧದೋಷವು ಬಂದೇ ಬರುತ್ತದೆ. ಅಥವಾ ಈ ವಿಷಯದಲ್ಲಿ ಆಗಮರೂಪವಾದ ಪ್ರಮಾಣವೂ ಇಲ್ಲ. ಘಟದಲ್ಲಿ ಪ್ರತೀತವಾಗುವ ಸತ್ತ್ವವು ಘಟದಲ್ಲಿ ಇಲ್ಲ, ಬ್ರಹ್ಮನಲ್ಲಿಯೇ ಇದೆ ಎಂಬ ಅರ್ಥವನ್ನು ಹೇಳುವ ಯಾವ ಆಗಮವೂ ಕಂಡುಬರುವುದಿಲ್ಲ. ಅಥವಾ ಅಂತಹ ಒಂದು ವಾಕ್ಯವಿದ್ದರೂ ಅದು ಪ್ರತೀತವಾದ ಅಂತಹ ಅರ್ಥದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ ಪ್ರವಾಹದಲ್ಲಿ ಘೋಷಾನಾಧಾರತ್ವವು ಪ್ರತ್ಯಕ್ಷಸಿದ್ಧವಾಗಿರುವುದರಿಂದ ನೂರು ವಾಕ್ಯಗಳಿಂದ ಪ್ರವಾಹದಲ್ಲಿ ಘೋಷಾಧಾರತ್ವವನ್ನು ಹೇಳಿದರೂ ಆ ವಾಕ್ಯಗಳಿಂದ ಪ್ರತ್ಯಕ್ಷಕ್ಕೆ ಬಾಧವು ಬರುವುದಿಲ್ಲವಷ್ಟೇ ? ಆದ್ದರಿಂದ ಅಬಾಧಿತವಾದ ಸತ್ತ್ವಗ್ರಾಹಿ ಪ್ರತ್ಯಕ್ಷದಿಂದ ಮಿಥ್ಯಾತ್ವ ಪ್ರತಿಕ್ಷೇಪವು ಆಗಿಯೇ ತೀರುತ್ತದೆ. ಭಾವಿಬಾಧಕವಿರುವ ಶುಕ್ತಿರಜತಾದಿಗಳಿಗೆ ಕಾಚಾದಿ ದೋಷದುಷ್ಟವಾದಕರಣಜನ್ಯಜ್ಞಾನವಿಷಯತ್ವವು ನಿಯಮೇನ ಇರುವುದರಿಂದ ಪ್ರಕೃತದಲ್ಲಾದರೂ ಅಂತಹ ದೋಷಾಭಾವವು ಉಭಯವಾದಿ ಸಿದ್ಧವಾಗಿರುವುದರಿಂದ ಮತ್ತು ನಿನ್ನ ರೀತಿಯಿಂದಲೇ ಅವಿದ್ಯಾನಿವೃತ್ತ್ಯುತ್ತರ ಕಾಲೀನವಾದ ಪ್ರತೀತಿಗೆ ಅವಿದ್ಯಾರೂಪ ದೋಷಮೂಲತ್ವವು ಕೂಡದಿರುವುದರಿಂದ ದೋಷರಹಿತವಾದ ಸರ್ವಜನ ಜ್ಞಾನವಿಷಯವಾದ ಮತ್ತು ಅರ್ಥಕ್ರಿಯಾಕಾರಿಯಾದ ಘಟಾದಿ ಪ್ರಪಂಚಕ್ಕೆ ಭಾವಿಬಾಧಕವು ಉಂಟಾಗುವುದಿಲ್ಲ ಎಂದು ಅಭಿಪ್ರಾಯ. ಘಟಾದಿಗಳು ನಿನಗೆ ಅಭಿಮತವಾದ ಚರಮಸಾಕ್ಷಾತ್ಕಾರಕ್ಕಿಂತ ಮೊದಲೇ ವಿನಷ್ಟವಾಗಿರುವುದರಿಂದ ಮತ್ತು ನಿಷ್ಪ್ರಕಾರಕವಾದ

ಚರಮಸಾಕ್ಷಾತ್ಕಾರದಲ್ಲಿ ಘಟಾದ್ಯಭಾವವು ಉಲ್ಲೇಖಿಸಲ್ಪಡದೇ ಇರುವುದರಿಂದ ನಿನ್ನ ಭಾವಿಬಾಧವೇ ಬಾಧಿತವಾಗುತ್ತದೆ ಎಂದು ಅಭಿಪ್ರಾಯ.

**ಆರೋಪಿತತ್ವವಾರ್ತಾ ತು ಬಾಧಾದೃಷ್ಟೇರ್ನ ಶೋಭತೇ ॥ ೮೮೨ ॥**

**ಅರ್ಥ**-ಬಾಧ ಅದೃಷ್ಟೇಃ= ಬಾಧವೇ ಕಂಡುಬರುವುದಿಲ್ಲವಾದ್ದರಿಂದ, ಆರೋಪಿತತ್ವ-ವಾರ್ತಾ ತು= ಆರೋಪಿತತ್ವವಾರ್ತೆಯಾದರೂ, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ**- ಬಾಧವೇ ಇಲ್ಲದಿರುವುದರಿಂದ ಆರೋಪಿತತ್ವವಾರ್ತೆಯು ಶೋಭಿಸುವುದಿಲ್ಲ.

**ಭಾವವಿಲಾಸಿನೀ**- ಏತದೇವ ದರ್ಶಯತಿ ॥ಆರೋಪಿತತ್ವೇತಿ॥ ಆರೋಪಿತತ್ವವಾರ್ತಾ ಸತ್ತ್ವಸ್ಯಾರೋಪಿತತ್ವವಾರ್ತಾ ॥ ೮೮೨ ॥

**ವಿವರಣೆ**- ಎರಡನೆಯ ಕಲ್ಪದಲ್ಲಿ ಘಟದಲ್ಲಿ ಸತ್ತ್ವಾರೋಪವನ್ನು ಹೇಳುವ ಮಾಯಾವಾದಿಗಳ ಪಕ್ಷವು ಬಾಧವೇ ಇಲ್ಲದಿರುವುದರಿಂದ ಉಪಪನ್ನವಾಗುವುದಿಲ್ಲ ಎಂದು ಇಲ್ಲಿ ಅಭಿಪ್ರಾಯ.

**ಚಿದ್ಭಿನ್ನತ್ವೇನೈವ ದೃಷ್ಟಘಟಾದೌ ಜಡವಸ್ತುನಿ ।**
**ಯತ್ ಸತ್ತ್ವಂ ದೃಶ್ಯತೇ ತಚ್ಚ ತದ್ಗಂ ಸ್ಯಾನ್ನತು ಚಿದ್ಗತಂ ॥ ೮೮೩ ॥**

**ಅರ್ಥ**-ಚಿದ್ಭಿನ್ನತ್ವೇನೈವ= ಚೈತನ್ಯಭಿನ್ನತ್ವ ಪ್ರಕಾರದಿಂದಲೇ, ದೃಷ್ಟಘಟಾದೌ= ದೃಷ್ಟವಾದ ಘಟಾದಿ ಜಡವಸ್ತುವಿನಲ್ಲಿ, ಯತ್ಸತ್ತ್ವಂ ದೃಶ್ಯತೇ= ಯಾವ ಸತ್ತ್ವವು ತೋರುತ್ತದೆಯೋ, ತಚ್ಚ= ಆ ಸತ್ತ್ವವೂ ಕೂಡ, ತದ್ಗಂ ಸ್ಯಾತ್= ಘಟಾದಿಗತವೇ ಆಗಬೇಕು, ಚಿದ್ಗತಂ ತು ನ ಸ್ಯಾತ್= ಚೈತನ್ಯಗತವಾದುದು ಆಗಿರಲು ಸಾಧ್ಯವಿಲ್ಲ.

**ಅನುವಾದ**- ಚಿದ್ಭಿನ್ನತ್ವಪ್ರಕಾರದಿಂದಲೇ ದೃಷ್ಟವಾದ ಘಟಾದಿ ಜಡವಸ್ತುಗಳಲ್ಲಿ ಯಾವ ಸತ್ತ್ವವು ತೋರುತ್ತದೆಯೋ ಅದು ಘಟಗತವೇ ಆಗಿರಬೇಕೇ ಹೊರತು ಬ್ರಹ್ಮಗತವಾಗಿರಲು ಸಾಧ್ಯವಿಲ್ಲ.

**ಭಾವವಿಲಾಸಿನೀ**- ಯುಕ್ತ್ಯಂತರಂ ಚಾಹ – **ಚಿದ್ಭಿನ್ನತ್ವೇನೇತಿ॥** ತದ್ಗಂ ಜಡವಸ್ತುಗತಮ್ । ಭೇದೇನ ದೃಷ್ಟಪದಾರ್ಥಧರ್ಮಸ್ಯ ಭಿನ್ನತಯಾ ದೃಷ್ಟೇಽನ್ಯಸ್ಮಿನ್ನಾರೋಪಾಯೋಗಾದಿತಿ ಭಾವಃ ॥೮೮೩॥

**ವಿವರಣೆ**- ಘಟವು ಚೇತನಭಿನ್ನತ್ವೇನ ತೋರುವಾಗ ಹೇಗೆ ಚೇತನತ್ವವನ್ನು ಆರೋಪ ಮಾಡಲು ಸಾಧ್ಯವಿಲ್ಲವೋ ಅದರಂತೆ ಚೇತನದ ಅಸಾಧಾರಣ ಧರ್ಮವಾದ ಸತ್ತ್ವವನ್ನು ಆರೋಪ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ. ಈ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

**ಚಿದಸಾಧಾರಣೋ ಧರ್ಮಃ ಸತ್ತಾ ಕಿಲ ಭವನ್ಮತೇ ।**
**ಚಿದನ್ಯತ್ವಗ್ರಾಹಿಣೀ ಚಿತ್ ಕಿಂ ತಾಂ ತತ್ರ ನ ಬಾಧತೇ ॥ ೮೮೪ ॥**

**ನ ಚೇತ್ ಸ್ವಗತಚಿತ್ತ್ವಂ ಚ ಕುತೋ ನಾರೋಪಯೇದ್ ಘಟೇ ।**
**ಜಾತಿಕ್ಷಯೋ ವಾ ಗರ್ಭಸ್ಯ ಸ್ರಾವೋ ವಾ ತದ್ಭವೇದ್ ಧ್ರುವಮ್ ॥೮೮೫॥**

**ಅರ್ಥ**-ಭವನ್ಮತೇ= ನಿನ್ನ ಮತದಲ್ಲಿ, ಸತ್ತಾ= ಸತ್ತ್ವವು, ಚಿದಸಾಧಾರಣ ಧರ್ಮಃ ಕಿಲ= ಚೈತನ್ಯದ ಅಸಾಧಾರಣ ಧರ್ಮವಷ್ಟೇ, ಚಿದನ್ಯತ್ವಗ್ರಾಹಿಣೀ= ಚೇತನಭೇದವನ್ನು ವಿಷಯೀಕರಿಸುವ, ಚಿತ್= ಘಟಜ್ಞಾನವು, ತಾಂ= ಆ ಸತ್ತ್ವವನ್ನು, ತತ್ರ= ಘಟಾದಿಗಳಲ್ಲಿ, ಕಿಂ ನ ಬಾಧತೇ= ಬಾಧಿಸುವುದಿಲ್ಲವೇ?

ನ ಚೇತ್= ಸತ್ತ್ವವನ್ನು ಬಾಧಿಸದೆ ಸತ್ತ್ವದ ಆರೋಪಕ್ಕೆ ಅವಕಾಶವನ್ನು ಕೊಡುವುದಾದರೆ, ಸ್ವಗತ ಚಿತ್ತ್ವಂ ಚ= ಚೈತನ್ಯಗತವಾದ ಚಿತ್ತ್ವವನ್ನೂ ಸಹ, ಘಟೇ= ಘಟದಲ್ಲಿ, ಕುತಃ= ಏಕೆ, ನ ಆರೋಪಯೇತ್= ಆರೋಪ ಮಾಡುವುದಿಲ್ಲ, ಜಾತಿಕ್ಷಯಃ ವಾ= ಚೈತನ್ಯ ರೂಪ ಜಾತಿಕ್ಷಯವಾಗಲೀ ಅಥವಾ, ಗರ್ಭಸ್ಯ ಸ್ರಾವಃ= ಶಂಕೆಗೆ ಗರ್ಭಸ್ರಾವವಾಗಲೀ, ಧ್ರುವಂ= ನಿಶ್ಚಯವಾಗಿ, ಭವೇತ್= ಉಂಟಾಗುತ್ತದೆ.

**ಅನುವಾದ**- ನಿನ್ನ ಮತದಲ್ಲಿ ಸತ್ತ್ವವು ಚೈತನ್ಯದ ಅಸಾಧಾರಣ ಧರ್ಮವಷ್ಟೇ? ಚೇತನ ಭೇದಗ್ರಾಹಿಯಾದ ಘಟಪ್ರತ್ಯಕ್ಷವು ಘಟದಲ್ಲಿ ಸತ್ತ್ವವನ್ನು ಆರೋಪ ಮಾಡಲು ಹೇಗೆ ಅವಕಾಶವನ್ನು ಕೊಡುತ್ತದೆ? ಹಾಗಲ್ಲದೆ ಸತ್ತಾ ರೋಪಕ್ಕೆ ಅವಕಾಶವನ್ನು ಕೊಡುತ್ತದೆ ಎಂದಾದರೆ ಚೈತನ್ಯದಲ್ಲಿರುವ ಚಿತ್ತ್ವದ ಆರೋಪಕ್ಕೂ ಏಕೆ ಅವಕಾಶವನ್ನು ಮಾಡಿಕೊಡುವುದಿಲ್ಲ? ಚಿತ್ತ್ವದ ಆರೋಪವನ್ನು ಅಂಗೀಕರಿಸಿದರೆ ಜಾತಿಕ್ಷಯವಾಗಲೀ ಅಥವಾ ಶಂಕೆಗೆ ಗರ್ಭಸ್ರಾವವಾಗಲೀ ನಿಶ್ಚಯವಾಗಿ ಉಂಟಾಗುತ್ತದೆ.

**ಭಾವವಿಲಾಸಿನೀ**– ತಾಂ ಸತ್ತಾಮ್ । ತತ್ರ ಘಟಾದೌ । ಬಾಧತೇ ನ ಪ್ರತ್ಯೇತುಂ ಮುಂಚತಿ ॥ ನ ಚೇತ್ ಸ್ವನಿಷ್ಠಸತ್ತಾಂ ನ ಬಾಧತೇ ಚೇತ್ । ಜಾತಿಕ್ಷಯಃ ಚಿತ್ತ್ವಸ್ಯಾನ್ಯತ್ರಾರೋಪೇ ಸ್ವಾಸಾಧಾರಣ-ಚಿತ್ತ್ವಜಾತಿಪಕ್ಷಯಃ । ಪ್ರಾತಿಭಾಸಿಕಾರೋಪೇ ಜಾತ್ಯಪಸರಣಾಭಾವೇಽಪಿ ವ್ಯಾವಹಾರಿ-ಕಾರೋಪೇ ಬ್ರಹ್ಮಣೀವ ಘಟೇಽಪಿ ಚಿತ್ತ್ವಾಪರಿಹಾರಾತ್ ಘಟಗತಜಡತ್ವಜಾತಿಕ್ಷಯೋ ವಾ । ಗರ್ಭಸ್ಯ ಸ್ರಾವಃ ಚಿತ್ತ್ವಾನಾರೋಪೇ ಸತ್ತ್ವಸ್ಯಾಪ್ಯಾರೋಪಾಸಂಭವೇನ ಶಂಕಾಯಾ ಗರ್ಭಸ್ರಾವಃ। ತತ್ ತಸ್ಮಾತ್ ಸತ್ತ್ವಾರೋಪವಚ್ಚಿತ್ತ್ವಾರೋಪಸ್ಯ ನ್ಯಾಯಪ್ರಾಪ್ತತ್ವಾತ್ । ವ್ಯಾವಹಾರಿ-ಕಾರೋಪಸ್ಯ ತತ್ತಜ್ಜಾತಿವ್ಯವಸ್ಥಾಪಕತ್ವಾಚ್ಚಿತ್ತ್ವಾರೋಪೇ ಘಟಸ್ಯಾಪಿ ಚಿತ್ತ್ವಮೇವ ಸ್ಯಾತ್ । ಜಡತ್ವಂ ಚ ಗಚ್ಛೇತ್ । ಚಿತ್ತ್ವಾನಾರೋಪೇ ಚ ಸತ್ತ್ವಸ್ಯಾಪ್ಯನಾರೋಪಾವಶ್ಯಂಭಾವೇನ ಘಟಸತ್ತ್ವಸ್ಯಾನ್ಯ-ಗತತ್ವಶಂಕಾ ನ ಘಟತ ಇತಿ ಭಾವಃ ॥ ೮೮೪-೮೮೫ ॥

**ವಿವರಣೆ-** ಘಟದಲ್ಲಿ ಚಿತ್ತ್ವದ ಆರೋಪವನ್ನು ಮಾಡಿದರೆ ಚೈತನ್ಯದ ಅಸಾಧಾರಣರೂಪವಾದ ಚಿತ್ತ್ವಜಾತಿಯ ಕ್ಷಯವೇ ಉಂಟಾಗುತ್ತದೆ. ಅಥವಾ ಘಟದಲ್ಲಿಯೂ ಚಿತ್ತ್ವವು ಬರುವುದರಿಂದ ಜಡತ್ವರೂಪವಾದ ಜಾತಿಕ್ಷಯವೇ ಉಂಟಾಗುತ್ತದೆ. ಚಿತ್ತ್ವಾರೋಪವು ಪ್ರಾತಿಭಾಸಿಕ ಎಂದು ಹೇಳಿದರೆ ಜಾತಿಯ ಕ್ಷಯವಿಲ್ಲದಿದ್ದರೂ ವ್ಯಾವಹಾರಿಕಾರೋಪವನ್ನು ಅಂಗೀಕರಿಸಿದರೆ ಬ್ರಹ್ಮನಂತೆ ಘಟದಲ್ಲಿಯೂ ಚಿತ್ತ್ವವು ಸಿದ್ಧವಾಗುವುದರಿಂದ ಜಡತ್ವಜಾತಿಕ್ಷಯವು ಉಂಟಾಗುತ್ತದೆ. ಚಿತ್ತ್ವವನ್ನು ಆರೋಪ ಮಾಡದಿದ್ದರೆ ಸಮಾನ ನ್ಯಾಯದಿಂದ ಸತ್ತ್ವದ ಆರೋಪವು ಉಂಟಾಗದಿದ್ದ ಕಾರಣ ಬ್ರಹ್ಮಗತವಾದ ಸತ್ತ್ವವೇ ಘಟದಲ್ಲಿ ಆರೋಪಿತವಾಗುತ್ತದೆ ಎಂಬ ಶಂಕೆಯು ಗರ್ಭಸ್ರಾವದಿಂದಲೇ ಹೊರಟು ಹೋಗುತ್ತದೆ.

ಘಟಸ್ಥಾಂ ಕುರು ತತ್ಸತ್ತಾಮನ್ಯಥಾಖ್ಯಾತಿರನ್ಯಥಾ ॥ ೮೮೬ ॥

**ಅರ್ಥ-**ತತ್ಸತ್ತಾಂ= ಘಟದಲ್ಲಿ ತೋರುವ ಸತ್ತ್ವವನ್ನು, ಘಟಸ್ಥಾಂ= ಘಟನಿಷ್ಠವೆಂದು, ಕುರು= ಅಂಗೀಕರಿಸು, ಅನ್ಯಥಾ= ಇಲ್ಲದಿದ್ದರೆ, ಅನ್ಯಥಾಖ್ಯಾತಿಃ= ಅನ್ಯಥಾಖ್ಯಾತಿಯ ಪ್ರಸಂಗವು ಬರುತ್ತದೆ.

**ಅನುವಾದ-** ಘಟದಲ್ಲಿ ತೋರುವ ಸತ್ತ್ವವನ್ನು ಘಟನಿಷ್ಠವೆಂದೇ ಅಂಗೀಕರಿಸು. ಇಲ್ಲದಿದ್ದರೆ ತಾರ್ಕಿಕರ ಅನ್ಯಥಾಖ್ಯಾತಿಯನ್ನು ಸ್ವೀಕಾರ ಮಾಡಬೇಕಾದ ಪ್ರಸಂಗವು ಬರುತ್ತದೆ.

**ಭಾವವಿಲಾಸಿನೀ–** ತತ್ಸತ್ತಾಂ ಘಟಸತ್ತಾಮ್ ॥ ೮೮೬ ॥

ಸನ್ನಿಕರ್ಷಾಯ ತತ್ಸತ್ತಾಂ ಚಿತಿಃ ಸಾಕ್ಷಾತ್ಕೃತಿಶ್ಚ ತೇ ।
ಪ್ರಾಕ್‌ಸತೀಮೇವ ಗರ್ಭೇ ಸ್ವೇ ಕಥಮಾರೋಪಯೇದ್ ವದ ।
ಅತಶ್ಚತುರ್ಥಪಕ್ಷೋಽಪಿ ಪ್ರಥಮಂ ಪಕ್ಷಮನ್ವಗಾತ್ ॥ ೮೮೭ ॥

**ಅರ್ಥ-**ತೇ= ನಿನ್ನ, ಚಿತಿಃ= ಬ್ರಹ್ಮಸ್ವರೂಪಭೂತಜ್ಞಾನವೂ, ಸಾಕ್ಷಾತ್ಕೃತಿಶ್ಚ= ಮತ್ತು ಮಾನಸ ಅಪರೋಕ್ಷ ವೃತ್ತಿಯೂ, ಸನ್ನಿಕರ್ಷಾಯ= ಅಜ್ಞಾನ ನಿವರ್ತಕ ಜ್ಞಾನಜನಕ ಸನ್ನಿಕರ್ಷಕ್ಕೋಸ್ಕರವಾಗಿ, ಪ್ರಾಕ್ ಸತೀಮೇವ= ಮೊದಲೇ ವಿದ್ಯಮಾನವಾದ, ತತ್ಸತ್ತಾಂ= ಘಟಾದಿ ಸತ್ತ್ವವನ್ನು, ಸ್ವೇ ಗರ್ಭೇ= ತನ್ನ ಉಲ್ಲೇಖರೂಪವಾದ ಉದರದಲ್ಲಿ, ಕಥಮಾರೋಪಯೇತ್= ಅವಿದ್ಯಮಾನವಾದುದನ್ನಾಗಿ ಹೇಗೆ ಪ್ರದರ್ಶಿಸುತ್ತದೆ, ವದ= ಹೇಳು, ಅತಃ= ಆದ್ದರಿಂದ, ಚತುರ್ಥಪಕ್ಷೋಽಪಿ= ನಾಲ್ಕನೆಯ ಪಕ್ಷವೂ ಸಹ, ಪ್ರಥಮ ಪಕ್ಷಂ= ಮೊದಲ ಪಕ್ಷವನ್ನೇ, ಅನ್ವಗಾತ್= ಅನುಸರಿಸಿತು.

**ಅನುವಾದ-** ಅಧಿಷ್ಠಾನಜ್ಞಾನವಾದ ಬ್ರಹ್ಮಸ್ವರೂಪಭೂತವಾದ ಜ್ಞಾನವು ಮತ್ತು ಮಾನಸ ಅಪರೋಕ್ಷ ವೃತ್ತಿರೂಪವಾದ ಸಾಕ್ಷಾತ್ಕಾರವು ನಿನ್ನ ಮತದಲ್ಲಿ ಅವಿದ್ಯಾನಿವರ್ತಕ

ಜ್ಞಾನಜನಕ ಸನ್ನಿಕರ್ಷಕ್ಕೆ ಉಪಪಾದಕವಾದ ಮೊದಲೇ ಇರುವ ಘಟಾದಿ ಸತ್ತ್ವವನ್ನು ಹೇಗೆ ಪುನಃ ತನ್ನ ಉದರದಲ್ಲಿ ಆರೋಪಿಸಿಕೊಂಡು ಪ್ರದರ್ಶಿಸುತ್ತದೆ? ಆದ್ದರಿಂದ ನಾಲ್ಕನೆಯ ಪಕ್ಷವೂ ಸಹ ಮೊದಲನೆಯ ಪಕ್ಷದ ಮಾರ್ಗವನ್ನೇ ಅನುಸರಿಸಿತು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಘಟಾದೌ ಪ್ರತೀತಸತ್ತಾ ಘಟಾದಿಗತೈವ ಸ್ಯಾತ್ । ನ ಬ್ರಹ್ಮಗತಸತ್ತಾಯಾಸ್ತತ್ರಾರೋಪ ಇತ್ಯಾಹ – ಸನ್ನಿಕರ್ಷಾಯೇತಿ॥ ಸನ್ನಿಕರ್ಷಾಯ ಅಜ್ಞಾನನಿವರ್ತಕಜ್ಞಾನಜನಕಸನ್ನಿಕರ್ಷಾಯ । ತತ್ಸತ್ತಾಂ ಘಟಾದಿಸತ್ತಾಮ್ । ಚಿತಿಃ ಅಪರೋಕ್ಷವೃತ್ತ್ಯಾऽಜ್ಞಾನನಿವೃತ್ತೌ ಸತ್ಯಾಂ ಬ್ರಹ್ಮಸ್ವರೂಪಭೂತಜ್ಞಾನಮ್ । ಸಾಕ್ಷಾತ್ಕೃತಿಃ ಮಾನಸಾಪರೋಕ್ಷವೃತ್ತಿಃ । ಪ್ರಾಕ್ಸತೀಂ ಪೂರ್ವಂ ವಿದ್ಯಮಾನಾಮ್ । ಸ್ವೇ ಗರ್ಭೇ ಸ್ವೋಲ್ಲೇಖಿದಶಾಖ್ಯೋದರೇ ಆರೋಪಯೇತ್ ಅವಿದ್ಯಮಾನಾಮೇವ ಪ್ರದರ್ಶಯೇತ್ । ವೃತ್ತೇಶ್ಚಿತಶ್ಚ ಪೂರ್ವಮೇವೇಂದ್ರಿಯಸನ್ನಿಕರ್ಷಘಟನಾಯ ವಿದ್ಯಮಾನಘಟಸತ್ತಾ ಕಥಂ ಪುನರ್ವೃತ್ತ್ಯಾ ಚಿತ್ತಾ ವಾऽऽರೋಪ್ಯಮಾಣಾ ಭವೇದಿತಿ ಭಾವಃ । ಪ್ರಾಗ್ವಿದ್ಯಮಾನಶಿಶೋರ್ಮಾತುರ್ಗರ್ಭೇ ಪುನರಾರೋಹಾಸಂಭವಂ ನಿದರ್ಶನತಯಾ ಧ್ವನಯಿತುಂ ಗರ್ಭೇ ಸ್ವೇ ಕಥಮಾರೋಪಯೇದಿತ್ಯುಕ್ತಮ್ । ಅತಃ ಘಟಾದಿಗತಸತ್ತ್ವಸ್ಯ ದ್ವೇಧಾಪ್ಯರೋಪಿತತ್ವಾಸಂಭವಾತ್ । ಚತುರ್ಥಪಕ್ಷಃ ಘಟಾದಿನಿಷ್ಠಸತ್ತ್ವಸ್ಯ ಪಾರ್ಥಕ್ಯಪಕ್ಷಃ । ಪ್ರಥಮಂ ಪಕ್ಷಂ ಘಟಾದೇರ್ಬ್ರಹ್ಮಣಶ್ಚ ಸಮಾನಸತ್ತಾಜಾತ್ಯಾಶ್ರಯತ್ವಪಕ್ಷಮನ್ವಗಾತ್ ಅನುಸೃತ್ಯಾಗಾತ್ । ಸತ್ತ್ವದ್ವಯಾವಲಂಬಿತ್ವೈಕಸತ್ತಾವಲಂಬಿತ್ವರೂಪಭೇದಸದ್ಭಾವಾತ್ ಬ್ರಹ್ಮಸತ್ತ್ವಭಿನ್ನಸ್ಯಾಪಿ ಘಟಾದಿಗತಸತ್ತ್ವಸ್ಯೋಕ್ತವಿಧಯಾಜ್ಞಾನದ್ವಯಾತ್ಪೂರ್ವಮೇವ ವರ್ತಮಾನತ್ವೇನಾನಾರೋಪಿತತ್ವೇನ ಬ್ರಹ್ಮಸತ್ತ್ವಸಮಾನತ್ವಾಚ್ಚಾನ್ವಗಾದಿತ್ಯುಕ್ತಮ್ । ಅನ್ಯಥಾ ಸ ಏವ ಸ ಇತ್ಯವಕ್ಷ್ಯತ್ । ಚತುರ್ಥಪಕ್ಷೇऽಪಿ ಪಾರಮಾರ್ಥಿಕತ್ವಸ್ಯಾಪರಿಹಾರಾತ್ಪ್ರಥಮಪಕ್ಷ ಇವಾಸ್ಮದಭೀಷ್ಟಸಿದ್ಧಿರೇವೇತಿ ಭಾವಃ ॥ ೮೮೮ ॥

**ವಿವರಣೆ-** ಘಟಾದಿಗಳಲ್ಲಿ ಪ್ರತೀತವಾದ ಸತ್ತ್ವವು ಘಟಗತವಾದುದೇ ಹೊರತು ಬ್ರಹ್ಮಗತವಾದುದಲ್ಲ ಎಂದು ಬೇರೆ ರೀತಿಯಿಂದ ಇಲ್ಲಿ ಉಪಪಾದನೆ ಮಾಡುತ್ತಾರೆ. ಸನ್ನಿಕರ್ಷವುಂಟಾದರೆ ಅದರಿಂದ ಮಾನಸ ಅಪರೋಕ್ಷವೃತ್ತಿಯೂ ಅನಂತರ ಚೈತನ್ಯಾತ್ಮಕವಾದ ಜ್ಞಾನವೂ ಉಂಟಾಗುತ್ತದೆ. ಆದರೆ ಸನ್ನಿಕರ್ಷವುಂಟಾಗಬೇಕಾದರೆ ಮೊದಲು ಸತ್ತ್ವವಿರಬೇಕಷ್ಟೇ? ಆದ್ದರಿಂದ ಮೊದಲೇ ಇರುವ ಸತ್ತ್ವವನ್ನು ಜ್ಞಾನವಾಗಲೀ ಅಥವಾ ಅಪರೋಕ್ಷವೃತ್ತಿಯಾಗಲೀ ಹೇಗೆ ತನ್ನ ಉದರದಲ್ಲಿ ಇಟ್ಟುಕೊಂಡು ಆ ರೀತಿ ಆರೋಪಿಸುತ್ತದೆ? ಎಂದರೆ ಹೇಗೆ ಅವಿದ್ಯಮಾನವಾದುದನ್ನೇ ಉಲ್ಲೇಖಿಸುತ್ತದೆ?

ವೃತ್ತಿಗಿಂತಲೂ ಮೊದಲು ಮತ್ತು ಚೈತನ್ಯಕ್ಕಿಂತಲೂ ಮೊದಲೇ ಇರುವ ಘಟ ಸತ್ತ್ವವನ್ನು ವೃತ್ತಿಯಾಗಲೀ ಅಥವಾ ಚೈತನ್ಯವಾಗಲೀ ಹೇಗೆ ಆರೋಪಿಸುತ್ತದೆ ಎಂದು ಅಭಿಪ್ರಾಯ. ಮೊದಲೇ ಇರುವ ಮಗುವು ಹೇಗೆ ಪುನಃ ತಾಯಿಯ ಗರ್ಭವನ್ನು ಸೇರುವುದಿಲ್ಲವೋ ಅದರಂತೆ ಎಂಬ ಧ್ವನಿ ಇದರಲ್ಲಿದೆ. ಆದ್ದರಿಂದ ಘಟಾದಿ ಸತ್ತ್ವಕ್ಕೆ ಎರಡು ರೀತಿಯಲ್ಲೂ

ಆರೋಪವು ಕೂಡದೇ ಇರುವುದರಿಂದ ಘಟಾದಿಗಳಲ್ಲಿ ಭಿನ್ನವಾದ ಸತ್ತ್ವವೇ ಇದೆ ಎಂಬ ಚತುರ್ಥಪಕ್ಷವು ಪ್ರಥಮ ಪಕ್ಷವಾದ ಅನುಗತ ಸತ್ತ್ವದ ಮಾರ್ಗವನ್ನೇ ಹಿಡಿಯಿತು. ಯದ್ಯಪಿ ನಾಲ್ಕನೆಯ ಪಕ್ಷದಲ್ಲಿ ಘಟಗತ ಸತ್ತ್ವವು ಮತ್ತು ಬ್ರಹ್ಮಗತ ಸತ್ತ್ವವು ಭಿನ್ನವಾದುದು. ಮೊದಲನೆಯ ಪಕ್ಷದಲ್ಲಿ ಅದು ಒಂದೇ. ಆದರೂ ಜ್ಞಾನಕ್ಕಿಂತ ಮೊದಲೇ ವಿದ್ಯಮಾನತ್ವರೂಪದಿಂದ ಮತ್ತು ಅನಾರೋಪಿತತ್ವ ರೂಪದಿಂದ ಮೊದಲನೆಯ ಪಕ್ಷಕ್ಕೆ ಸಮಾನವಾಗುವುದರಿಂದ ಮೊದಲನೆಯ ಪಕ್ಷದ ಮಾರ್ಗವನ್ನೇ ಅನುಸರಿಸಿತು ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಮೊದಲನೆಯ ಪಕ್ಷವೇ ಆಗುತ್ತದೆ ಎಂದು ಹೇಳುತ್ತಿದ್ದರು. ಪ್ರಥಮ ಪಕ್ಷವಾಗಲೀ ಅಥವಾ ಚತುರ್ಥ ಪಕ್ಷವಾಗಲೀ ಸ್ವೀಕರಿಸಲ್ಪಟ್ಟರೆ ಘಟಾದಿಗಳಲ್ಲಿ ನಮಗೆ ಅಭಿಮತವಾದ ಪಾರಮಾರ್ಥಿಕ ಸತ್ತ್ವವೇ ಸಿದ್ಧವಾಗುವುದರಿಂದ ನಮ್ಮ ಇಷ್ಟಸಿದ್ಧಿಯಾಗುತ್ತದೆ ಎಂದು ಅಭಿಪ್ರಾಯ.

**ತೃತೀಯೇ ತು ಘಟಾದ್ಯರ್ಥೇ ಸತ್ತ್ವಸ್ಯಾದರ್ಶನೇ ಜನಃ ।**
**ತಮಾದತ್ತೇ ಶುಕ್ತಿರೂಪ್ಯಂ ನಾದತ್ತೇ ಕೇನ ಹೇತುನಾ ।**
**ಅಪ್ರಸಕ್ತನಿಷೇಧಶ್ಚ ಕಥಮಂತೇ ಭವೇತ್ ತವ ॥ ೮೮೮ ॥**

**ಅರ್ಥ**-ತೃತೀಯೇ ತು= ತೃತೀಯ ಪಕ್ಷದಲ್ಲಾದರೆ, ಘಟಾದ್ಯರ್ಥೇ= ಘಟಾದಿ ಪದಾರ್ಥಗಳಲ್ಲಿ, ಸತ್ತ್ವಸ್ಯಾದರ್ಶನೇ= ಸತ್ತ್ವವು ತೋರದಿದ್ದರೆ, ಜನಃ= ಜನರು, ತಮಾದತ್ತೇ= ಘಟವನ್ನು ಕೈಯಿಂದ ತೆಗೆದುಕೊಳ್ಳುತ್ತಾರೆ, ಶುಕ್ತಿರೂಪ್ಯಂ= ಶುಕ್ತಿರಜತವನ್ನು, ನಾದತ್ತೇ= ಕೈಯಿಂದ ತೆಗೆದುಕೊಳ್ಳುವುದಿಲ್ಲ ಎಂಬುದು, ಕೇನ ಹೇತುನಾ= ಯಾವ ನಿಮಿತ್ತದಿಂದ ಉಪಪನ್ನವಾಗುತ್ತದೆ, ಅಂತೇ= ಕೊನೆಯಲ್ಲಿ, ತವ= ನಿನಗೆ, ಅಪ್ರಸಕ್ತನಿಷೇಧಶ್ಚ= ಅಪ್ರಸಕ್ತ ಪ್ರತಿಷೇಧವಾದರೂ, ಕಥಂ ಭವೇತ್= ಹೇಗೆ ಆಗುತ್ತದೆ?

**ಅನುವಾದ**- ತೃತೀಯ ಪಕ್ಷದಲ್ಲಾದರೂ ಘಟಾದಿ ಪದಾರ್ಥಗಳಿಗೆ ಸತ್ತ್ವವು ತೋರದಿದ್ದರೆ ಜನರು ಘಟಾದಿಗಳನ್ನು ಸ್ವೀಕರಿಸುತ್ತಾರೆ, ಶುಕ್ತಿರೂಪ್ಯವನ್ನು ಸ್ವೀಕರಿಸುವುದಿಲ್ಲ ಎನ್ನುವುದು ಯಾವ ಕಾರಣದಿಂದ? ಮತ್ತು ನಿನ್ನ ಚರಮ ನಿಷೇಧವೂ ಸಹ ಅಪ್ರಸಕ್ತಪ್ರತಿಷೇಧವಾಗುತ್ತದೆ.

**ಭಾವವಿಲಾಸಿನೀ**– ತಂ ಘಟಪಟಾದಿಕಮ್ । ಸತ್ತ್ವಾಭಾವಸ್ಯೋಭಯತ್ರ ಸಾಮ್ಯಾದಿತಿ ಭಾವಃ । ಅಂತೇ ಬ್ರಹ್ಮಜ್ಞಾನದಶಾಯಾಮ್ । ಘಟಾದೌ ಸತ್ತ್ವಸ್ಯೈವಾಭಾವೇ ಸತ್ತ್ವನಿಷೇಧಾಖ್ಯೋಂತಿಮಬಾಧೋಽಪ್ರಸಕ್ತನಿಷೇಧಃ ಸ್ಯಾದಿತಿ ಭಾವಃ ॥ ೮೮೮ ॥

**ವಿವರಣೆ**- ಘಟಾದಿಗಳಲ್ಲಿ ಸತ್ತ್ವವು ತೋರುವುದಿಲ್ಲ, ಕೇವಲ ಘಟತ್ವಾದಿಗಳು ಮಾತ್ರ ತೋರುತ್ತದೆ ಎಂಬುದು ಮೂರನೆಯ ಪಕ್ಷ. ಆಗ ಶುಕ್ತಿರಜತದಲ್ಲಿಯೂ ಮತ್ತು ಘಟದಲ್ಲಿಯೂ ಸತ್ತ್ವದ ಅಗ್ರಹಣವು ಸಮಾನವಾದುದು. ಹೀಗಿರುವಾಗ ಘಟವನ್ನು ಸ್ವೀಕರಿಸಿ

ಶುಕ್ತಿರಜತವನ್ನು ಸ್ವೀಕರಿಸದಿರುವುದು ನಿರ್ನಿಮಿತ್ತವಾದುದು. ಘಟಾದಿಗಳಲ್ಲಿ ಸತ್ತ್ವವೇ ಇಲ್ಲದಿದ್ದರೆ ಚರಮಸಾಕ್ಷಾತ್ಕಾರದಿಂದ ಮಾಡುವ ಸತ್ತ್ವಪ್ರತಿಷೇಧವು ಅಪ್ರಸಕ್ತ ಪ್ರತಿಷೇಧವಾಗುತ್ತದೆ 'ಎಂಬುದು ಇನ್ನೊಂದು ದೋಷ.

**ಚತುರ್ಥೇ ನ ತೃತೀಯಂ ತತ್ಸತ್ತ್ವಂ ನಾಪಿ ದ್ವಿತೀಯಕಂ ।**
**ಬಾಧಸ್ಯ ಬೋಧೇ ಯಲ್ಲೋಕೋ ನಿಶ್ಶಂಕಂ ನ ಪ್ರವರ್ತತೇ ॥ ೮೮ ॥**

**ಅರ್ಥ**-ಚತುರ್ಥೇ= ನಾಲ್ಕನೆಯ ಪಕ್ಷದಲ್ಲಿ, ತತ್ಸತ್ತ್ವಂ= ಘಟಾದಿ ಗತಸತ್ತ್ವವು, ನ ತೃತೀಯಂ= ಮೂರನೆಯದಾದ ಪ್ರಾತಿಭಾಸಿಕ ಸತ್ತ್ವವಲ್ಲ, ನಾಪಿ ದ್ವಿತೀಯಕಂ= ಎರಡನೆಯದಾದ ವ್ಯಾವಹಾರಿಕ ಸತ್ತ್ವವೂ ಅಲ್ಲ, ಯತ್= ಏಕೆಂದರೆ, ಬಾಧಸ್ಯ ಬೋಧೇ= ಬಾಧ ಜ್ಞಾನವು ಉಂಟಾದರೆ, ಲೋಕಃ= ಜನರು, ನಿಶ್ಶಂಕಂ= ನಿಶ್ಶಂಕವಾಗಿ, ನ ಪ್ರವರ್ತತೇ= ಪ್ರವೃತ್ತರಾಗುವುದಿಲ್ಲ.

**ಅನುವಾದ**- ನಾಲ್ಕನೆಯ ಪಕ್ಷದಲ್ಲಿ ಘಟದಲ್ಲಿ ತೋರುವ ಸತ್ತ್ವವು ತೃತೀಯವಾದ ಪ್ರಾತಿಭಾಸಿಕ ಸತ್ತ್ವವೂ ಅಲ್ಲ, ದ್ವಿತೀಯವಾದ ವ್ಯಾವಹಾರಿಕ ಸತ್ತ್ವವೂ ಅಲ್ಲ. ಏಕೆಂದರೆ ಬಾಧ ಜ್ಞಾನವು ಉಂಟಾದರೆ ಲೋಕವು ನಿಶ್ಶಂಕವಾಗಿ ಪ್ರವೃತ್ತವಾಗುವುದಿಲ್ಲ.

**ಭಾವವಿಲಾಸಿನೀ**- ಪ್ರಾಗತಿದೇಶಮಾತ್ರೇಣ ದೂಷಿತಂ ಚತುರ್ಥಪಕ್ಷಮಿದಾನೀಂ ವಿಸ್ತರೇಣ ದೂಷಯತಿ॥ **ಚತುರ್ಥ ಇತಿ॥** ತೃತೀಯಂ ಸತ್ತಾತ್ರೈವಿಧ್ಯವಿಭಾಗೇ ತೃತೀಯಂ ಪ್ರಾತಿಭಾಸಿಕಸತ್ತ್ವಮ್। ತತ್ ಜಗತಿ ಪ್ರತೀಯಮಾನಂ ಸತ್ತ್ವಮ್ । ದ್ವಿತೀಯಂ ವ್ಯಾವಹಾರಿಕಮ್ । ಪ್ರಾತಿಭಾಸಿಕತ್ವಪಕ್ಷೇ ವ್ಯಾವಹಾರಿಕತ್ವಪಕ್ಷೇ ಚ ಪರಮತೇ ಬಾಧಸದ್ಭಾವಾತ್ ಬಾಧಸ್ಯ ಬೋಧ ಇತ್ಯುಕ್ತಮ್। ಯತ್ ಯಸ್ಮಾತ್। ತಸ್ಮಾನ್ನೇತಿ ಪೂರ್ವೇಣ ಸಂಬಂಧಃ ॥ ೮೮ ॥

**ವಿವರಣೆ**- ಘಟಾದಿಗಳಲ್ಲಿ ಇರುವ ಸತ್ತ್ವವೇ ಘಟಪ್ರತ್ಯಕ್ಷದಲ್ಲಿ ತೋರುತ್ತದೆ. ಘಟದಲ್ಲಿರುವ ಸತ್ತ್ವವು ಬೇರೆ, ಬ್ರಹ್ಮನಲ್ಲಿರುವ ಸತ್ತ್ವವು ಬೇರೆ ಎಂಬುದು ನಾಲ್ಕನೆಯ ಪಕ್ಷ. ಈ ಪಕ್ಷದಲ್ಲಿ ಘಟದಲ್ಲಿ ತೋರುವ ಸತ್ತ್ವವು ಪ್ರಾತಿಭಾಸಿಕವಾದರೂ, ವ್ಯಾವಹಾರಿಕವಾದರೂ ಸಹ ಅವು ಬಾಧ್ಯವೇ ಸರಿ. ತೋರುವ ಸತ್ತ್ವದಲ್ಲಿ ಬಾಧ್ಯತ್ವ ಜ್ಞಾನವುಂಟಾದರೆ ಲೋಕವು ನಿಶ್ಶಂಕವಾಗಿ ಪ್ರವೃತ್ತವಾಗುವುದಿಲ್ಲ ಎಂದು ಅಭಿಪ್ರಾಯ.

**ಕಥಂ ಚ ತನ್ನಿಷೇಧೋಽಂತೇ ಬಾಧ್ಯಸತ್ತ್ವೋರರೀಕೃತೇಃ ॥ ೮೯ ॥**

**ಅರ್ಥ**- ಬಾಧ್ಯಸತ್ತ್ವೋರರೀಕೃತೇಃ= ಬಾಧ್ಯಸತ್ತ್ವವನ್ನು ಅಂಗೀಕರಿಸುವುದರಿಂದ, ಅಂತೇ ಚ= ಕೊನೆಯಲ್ಲಾದರೂ, ತನ್ನಿಷೇಧಃ= ಅದರ ನಿಷೇಧವು, ಕಥಂ= ಹೇಗೆ ಉಂಟಾಗುತ್ತದೆ?

**ಅನುವಾದ**- ಬಾಧ್ಯವಾದ ವ್ಯಾವಹಾರಿಕ ಸತ್ತ್ವವನ್ನು ಅಂಗೀಕರಿಸುವುದರಿಂದ ಕೊನೆಯಲ್ಲಾದರೂ ಅದರ ನಿಷೇಧವು ಹೇಗೆ ಉಪಪನ್ನವಾಗುತ್ತದೆ?

**ಭಾವವಿಲಾಸಿನೀ–** ತನ್ನಿಷೇಧಃ ವ್ಯಾವಹಾರಿಕಸತ್ತ್ವಸ್ಯ ನಿಷೇಧಃ । ಬಾಧ್ಯಸತ್ತ್ವೋರರೀಕೃತೇಃ ವ್ಯಾವಹಾರಿಕಸತ್ತ್ವಸ್ಯ ಪರೇಣಾಂಗೀಕಾರಾದಿತ್ಯರ್ಥಃ । ವ್ಯಾವಹಾರಿಕತಯಾಽಂಗೀಕೃತೇ ಜಗತಿ ನ ತನ್ನಿಷೇಧೋ ಯುಕ್ತಃ । ತಸ್ಯಾಪಿ ನಿಷೇಧೇ ಜಗತೋಽತ್ಯಂತಾಸತ್ತ್ವಪ್ರಸಂಗಃ । ಏವಂ ಚ ಪ್ರತೀತಮಿದಮೇವ ಸತ್ತ್ವಮಬಾಧಿತಮರ್ಥಕ್ರಿಯೋಪಯೋಗಿ ಚೇತಿ ಬ್ರಹ್ಮಸತ್ತಾ-ಸಮಾನತ್ವಾದಿದಮೇವ ಪಾರಮಾರ್ಥಿಕಂ ಸ್ಯಾತ್ । ತಥಾ ಸತ್ಯಬಾಧಿತಂ ಪ್ರಾತಿಭಾಸಿಕಸತ್ತ್ವಮಪಿ ಪಾರಮಾರ್ಥಿಕ ಸತ್ತ್ವಂ ಸ್ಯಾದಿತಿ ಚೇತ್ । ನ । ಸತ್ತಾಯಾಸ್ಸತ್ತ್ವೇ ತಸ್ಯಾ ಅಪಿ ತಾದೃಶ-ತ್ವಾಪರಿಹಾರಾತ್। ಸೈವ ನಾಂಗೀಕಾರ್ಯಾ । ಪ್ರಾತಿಭಾಸಿಕೇ ವ್ಯಾವಹಾರಿಕಸತ್ತ್ವಸ್ಯೈವ, ವ್ಯಾವಹಾರಿಕೇ ಚ ಪಾರಮಾರ್ಥಿಕ ಸತ್ತ್ವಸ್ಯೈವ ಬಾಧೇಽಬಾಧಿತಯೋಶ್ಚ ತಯೋಸ್ಸತ್ತಯೋ-ರ್ಬ್ರಹ್ಮಸತ್ತಾಸಮಾನಯೋಗಕ್ಷೇಮತ್ವಾಪರಿಹಾರಾತ್ । ಸತ್ತಾತ್ರೈವಿಧ್ಯಾಂಗೀಕಾರಸ್ತವೈವ ಬಾಧಕಸ್ಸ್ಯಾತ್ । ಅತಸ್ತ್ವಯಾಽಪ್ಯೇಕೈವ ಸತ್ತಾಽಂಗೀಕಾರ್ಯಾ । ಸದಿಧಾತೋಸ್ಸತ್ತಾತ್ರೈವಿಧ್ಯೇಽ-ನನುಶಾಸನಾತ್ । ಸತ್ಯ ಆತ್ಮಾ ಸತ್ಯೋ ಜೀವಸ್ಸತ್ಯಂ ಭಿದೇತಿ ಶ್ರುತೌ, ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮಿತಿ ನ್ಯಾಯೇನೈಕವಾಕ್ಯತ್ವಸ್ಯ ಸರ್ವೈರ್ವಾಕ್ತವ್ಯತ್ವಾಚ್ಚ । ಸಾ ಚ ಸತ್ತಾ ಅಸದೇವೇದಂ ರಜತಮಿತಿ ಬಾಧಕಪ್ರತ್ಯಯೇ ಶುಕ್ತಿರಜತಾದೌ ಸನ್ನೈವೇತಿ ಸಾಕ್ಷಾತ್ತಸ್ಯೈವ ಪ್ರತಿಷೇಧಾತ್ ಬಾಧಿತಾಽಸ್ತು ಜಗತಿ ತು ದ್ವಿತೀಯಂ ಸನ್ನೇತಿ ನಿಷೇಧಸ್ಯ ಕ್ವಾಪ್ಯದರ್ಶನಾದಬಾಧಿತೈವಾಸ್ತು ಕಿಮನಯಾ ದುರಂತಚಿಂತಯೇತಿ ಭಾವಃ ॥ ೮೯೦ ॥

**ವಿವರಣೆ–** ಚತುರ್ಥ ಪಕ್ಷದಲ್ಲಿ ಜಗತ್ತಿನಲ್ಲಿ ಇರುವ ಸತ್ತ್ವವು ವ್ಯಾವಹಾರಿಕ ಸತ್ತ್ವವೆಂದು ಅಂಗೀಕರಿಸಿದರೆ ಆಗ ಅದನ್ನೇ ನಿಷೇಧ ಮಾಡಲು ಬರುವುದಿಲ್ಲ. ಹಾಗೆ ನಿಷೇಧ ಮಾಡಿದರೆ ಘಟಾದಿಗಳಿಗೆ ಅತ್ಯಂತ ಅಸತ್ತ್ವವೇ ಪ್ರಾಪ್ತವಾಗುತ್ತದೆ. ಆದ್ದರಿಂದ ಘಟಾದಿಗಳಲ್ಲಿ ಪ್ರತೀತವಾದ ಈ ಸತ್ತ್ವವೇ ಅಬಾಧಿತವಾದುದು ಮತ್ತು ಅರ್ಥಕ್ರಿಯಾಕಾರಿಯಾದುದು ಎಂಬ ಕಾರಣದಿಂದ ಬ್ರಹ್ಮಸತ್ತ್ವಕ್ಕೆ ಸಮಾನವಾಗುವುದರಿಂದ ಪಾರಮಾರ್ಥಿಕವೇ ಆಗಬೇಕು. ಹಾಗಾದರೆ ಅಬಾಧಿತ ಪ್ರಾತಿಭಾಸಿಕ ಸತ್ತ್ವವು ಪಾರಮಾರ್ಥಿಕ ಸತ್ತ್ವವೇ ಆಗಬೇಕಾಗುತ್ತದೆ ಎಂದು ಹೇಳಿದರೆ ಹೌದು ಅಬಾಧಿತವಾದರೆ ಪಾರಮಾರ್ಥಿಕವೇ ಆಗುತ್ತದೆ ಎಂಬುದೇ ನಮ್ಮ ಉತ್ತರ. ಆದ್ದರಿಂದ ಅಂತಹ ಸತ್ತ್ವವನ್ನೇ ಅಂಗೀಕರಿಸಬಾರದು ಎಂದು ನಮ್ಮ ಅಭಿಪ್ರಾಯ. ಪ್ರಾತಿಭಾಸಿಕ ಶುಕ್ತಿರಜತದಲ್ಲಿ ವ್ಯಾವಹಾರಿಕ ಸತ್ತ್ವವನ್ನು ನಿಷೇಧ ಮಾಡಿದರೆ ವ್ಯಾವಹಾರಿಕವಾದ ಘಟಾದಿಗಳಲ್ಲಿ ಪಾರಮಾರ್ಥಿಕ ಸತ್ತ್ವವನ್ನು ನಿಷೇಧ ಮಾಡಿದರೆ, ಶುಕ್ತಿರಜತದಲ್ಲಿರುವ ಪ್ರಾತಿಭಾಸಿಕ ಸತ್ತ್ವಕ್ಕೂ, ಘಟಾದಿಗಳಲ್ಲಿರುವ ವ್ಯಾವಹಾರಿಕ ಸತ್ತ್ವಕ್ಕೂ ನಿಷೇಧವಿಲ್ಲದಿರುವುದರಿಂದ ಆ ಎರಡು ಸತ್ತ್ವಗಳು ಬ್ರಹ್ಮಸತ್ತಾಸಮಯೋಗಕ್ಷೇಮ ಉಳ್ಳವುಗಳಾಗುತ್ತದೆ. ಆದ್ದರಿಂದ ಸತ್ತಾತ್ರೈವಿಧ್ಯವನ್ನು ಅಂಗೀಕಾರ ಮಾಡುವುದು ನಿನಗೇ ಬಾಧಕವಾಗುತ್ತವೆ. ಆದ್ದರಿಂದ ನೀನೂ ಸಹ ಒಂದೇ ರೀತಿಯಾದ ಸತ್ತ್ವವನ್ನು ಅಂಗೀಕರಿಸಬೇಕು. ಸದ್ ಧಾತುವಿಗೆ ಸತ್ತ್ವದಲ್ಲಿ ಅನುಶಾಸನವಿದೆಯೇ ಹೊರತು ಸತ್ತಾತ್ರೈವಿಧ್ಯದಲ್ಲಿ ಅನುಶಾಸನವಿಲ್ಲ. ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಎನ್ನುವ

ಶ್ರುತಿಯಲ್ಲಿ ಮೂರು ಬಾರಿ ಶ್ರುತವಾದ ಸತ್ಯಶಬ್ದಕ್ಕೆ ಏಕಾರ್ಥತ್ವವನ್ನು ಹೇಳಲು ಬರುವಾಗ ಅನೇಕ ವಿಧವಾದ ಸತ್ತ್ವಗಳನ್ನು ಕಲ್ಪನೆ ಮಾಡಿ ವಾಕ್ಯಭೇದಾಂಗೀಕಾರವು ಯಾವ ವಾದಿಗಳಿಗೂ ಯೋಗ್ಯವಾದುದಲ್ಲ. ಆ ಏಕವಿಧವಾದ ಸತ್ತ್ವವು ರಜತವು ಸತ್ತ್ವೇನ ಪ್ರತೀತವಾದರೂ ಅಸದೇವೇದಂ ರಜತಂ ಎಂಬ ಬಾಧಕ ಪ್ರತ್ಯಯವು ಉಂಟಾದ ಮೇಲೆ ಶುಕ್ತಿರಜತದಲ್ಲಿ ಸತ್ ನೈವ ಎಂದು ಸಾಕ್ಷಾತ್ತಾಗಿ ಅದೇ ಸತ್ತ್ವವೇ ಪ್ರತಿಷೇಧ ಮಾಡಲ್ಪಡುವುದರಿಂದ ಶುಕ್ತಿರಜತದಲ್ಲಿ ಅದು ಬಾಧಿತವಾಗಲಿ. ಜಗತ್ತಿನಲ್ಲಿ ದ್ವಿತೀಯ ಸತ್ತ್ವವಿಲ್ಲ ಎಂಬ ನಿಷೇಧವು ಎಲ್ಲಿಯೂ ಇಲ್ಲವಾದ್ದರಿಂದ ಜಗತ್ತಿನಲ್ಲಿ ತೋರುವ ವ್ಯಾವಹಾರಿಕ ಸತ್ತ್ವವೆಂದು ನೀನು ಹೇಳುವ ಸತ್ತ್ವವು ಅಬಾಧಿತವೇ ಆಗಲಿ. ನಿನಗೇಕೆ ಈ ಬಾಧದ ದುರಂತಚಿಂತೆಯು ಕಾಡುತ್ತದೆ?

ಬಾಧ್ಯಸತ್ತ್ವನಿಷೇಧಶ್ಚಾಬಾಧ್ಯಸತ್ತ್ವಸಮರ್ಥಕಃ ।
ತಾದೃಕ್ಸತ್ತ್ವನಿಷೇಧೇಽಪಿ ನ ಸತ್ ಕಿಂ ಬ್ರಹ್ಮ ತೇ ಮತೇ ॥ ೮೯೧ ॥

**ಅರ್ಥ**-ಬಾಧ್ಯಸತ್ತ್ವನಿಷೇಧಶ್ಚ= ಬಾಧ್ಯವಾದ ಸತ್ತ್ವದ ನಿಷೇಧವಾದರೂ, ಅಬಾಧ್ಯಸತ್ತ್ವ ಸಮರ್ಥಕಃ= ಅಬಾಧ್ಯವಾದ ಸತ್ತ್ವವನ್ನು ಸಮರ್ಥಿಸುವುದಷ್ಟೇ, ತಾದೃಕ್ಸತ್ತ್ವನಿಷೇಧೇಽಪಿ= ಬಾಧ್ಯಸತ್ತ್ವವನ್ನು ನಿಷೇಧ ಮಾಡಿದರೂ, ತೇ ಮತೇ= ನಿನ್ನ ಮತದಲ್ಲಿ, ಬ್ರಹ್ಮ= ಬ್ರಹ್ಮ, ಸತ್ ಕಿಂ ನ= ಸತ್ಯವಲ್ಲವೇನು?

**ಅನುವಾದ-** ಬಾಧ್ಯವಾದ ಸತ್ತ್ವವನ್ನು ನಿಷೇಧ ಮಾಡಿದರೆ ಅಬಾಧ್ಯವಾದ ಸತ್ತ್ವವೇ ಸಮರ್ಥಿಸಲ್ಪಡುತ್ತದೆ. ನಿನ್ನ ಮತದಲ್ಲಿ ಬ್ರಹ್ಮನಲ್ಲಿ ಬಾಧ್ಯವಾದ ಸತ್ತ್ವವನ್ನು ನಿಷೇಧ ಮಾಡಿದರೂ ಬ್ರಹ್ಮನು ಸತ್ಯನಲ್ಲವೇನು?

**ಭಾವವಿಲಾಸಿನೀ**– ದೂಷಣಾಂತರಂ ಚಾಹ – **ಬಾಧ್ಯೇತಿ** ॥ ಬಾಧ್ಯಂ ನೇತ್ಯುಕ್ತೇಽಬಾಧ್ಯತ್ವಸ್ಯೈವ ಲಾಭಾದಿತಿ ಭಾವಃ । ತದೃಕ್ಸತ್ತ್ವನಿಷೇಧೇ ವ್ಯಾವಹಾರಿಕಸತ್ತ್ವನಿಷೇಧೇ ॥ ೮೯೧ ॥

**ವಿವರಣೆ-** ಜಗತ್ತಿನಲ್ಲಿ ಚರಮಸಾಕ್ಷಾತ್ಕಾರವು ಬಾಧ್ಯವಾದ ವ್ಯಾವಹಾರಿಕ ಸತ್ತ್ವವನ್ನು ನಿಷೇಧ ಮಾಡಿದರೂ ಬ್ರಹ್ಮನಂತೆ ಪಾರಮಾರ್ಥಿಕ ಸತ್ತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಅರ್ಥೇಂದ್ರಿಯಾಭಿಯೋಗಾರ್ಥಮಾರೋಪದ್ವಿತಯೇ ಮತೇ ।
ಯಾ ಸತ್ತಾಽಽವಶ್ಯಕೀ ಪೂರ್ವಂ ಸಾ ಸರ್ವಾ ಪಾರಮಾರ್ಥಿಕೀ ॥ ೮೯೨ ॥

**ಅರ್ಥ**-ಆರೋಪದ್ವಿತಯೇ= ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಆರೋಪ ಸ್ಥಳಗಳಲ್ಲಿ, ಅರ್ಥೇಂದ್ರಿಯಾಭಿಯೋಗಾರ್ಥಂ= ಅರ್ಥೇಂದ್ರಿಯ ಸನ್ನಿಕರ್ಷಕ್ಕೋಸ್ಕರವಾಗಿ, ಮತೇ= ನಿನ್ನ ಮತದಲ್ಲಿಯೂ, ಯಾ ಸತ್ತಾ= ಯಾವ ಸತ್ತ್ವವು, ಪೂರ್ವಂ ಆವಶ್ಯಕೀ= ಮೊದಲೇ

ಆವಶ್ಯಕವಾಗಿದೆಯೋ, ಸಾ ಸರ್ವಾ= ಅದೆಲ್ಲವೂ, ಪಾರಮಾರ್ಥಿಕೀ= ಪಾರಮಾರ್ಥಿಕ ಸತ್ತ್ವವೇ ಆಗಿದೆ.

**ಅನುವಾದ-** ವ್ಯಾವಹಾರಿಕ ಆರೋಪ ಮತ್ತು ಪ್ರಾತಿಭಾಸಿಕ ಆರೋಪ ಸ್ಥಳದಲ್ಲಿ ನಿನ್ನ ಮತದಲ್ಲಿ ಅರ್ಥೇಂದ್ರಿಯ ಸನ್ನಿಕರ್ಷಕ್ಕೋಸ್ಕರವಾಗಿ ಯಾವ ಸತ್ತ್ವವು ಮೊದಲೇ ಅವಶ್ಯವಾಗಿ ಸಿದ್ಧವಾಗಿದೆಯೋ ಆ ಸತ್ತ್ವವು ಪಾರಮಾರ್ಥಿಕವೇ ಸರಿ.

**ಭಾವವಿಲಾಸಿನೀ–** ಅತಃ ಪ್ರಥಮಂ ಪಕ್ಷಮನ್ವಾದಿತ್ಯುಕ್ತಮೇವ ವಿಶದಯತಿ ಅರ್ಥೇತಿ ॥ ಪೂರ್ವಂ ಆರೋಪದ್ವಿತಯಾತ್ಪೂರ್ವಮ್ ॥ ೮೯೨ ॥

**ವಿವರಣೆ-** ವ್ಯಾವಹಾರಿಕ ಸ್ಥಳದಲ್ಲಿ ಘಟಾದಿಗಳಿಗೂ ಮತ್ತು ಚಕ್ಷುರಾದಿಗಳಿಗೂ ಸನ್ನಿಕರ್ಷ ಉಂಟಾಗಲು ಘಟಾದಿ ಸತ್ತ್ವವು ಅವಶ್ಯಕವಾಗಿದೆ. ಪ್ರಾತಿಭಾಸಿಕ ಸ್ಥಳದಲ್ಲಿಯೂ ಶುಕ್ತಿರಜತ ಜ್ಞಾನವು ಉಂಟಾಗಲು ಚಕ್ಷುರಾದಿಗಳಿಗೂ ಮತ್ತು ಶುಕ್ತ್ಯಾದಿಗಳಿಗೂ ಸನ್ನಿಕರ್ಷವು ಅಪೇಕ್ಷಿತವಾದುದರಿಂದ ಅಲ್ಲಿಯೂ ಶುಕ್ತ್ಯಾದಿಗಳ ಸತ್ತ್ವವು ಅಪೇಕ್ಷಿತವೇ ಆಗಿದೆ. ಆದ್ದರಿಂದ ಆರೋಪಕ್ಕಿಂತ ಮೊದಲೇ ಇರುವ ಸತ್ತ್ವವು ಅವಶ್ಯವಾಗಿ ಅನಾರೋಪಿತವಾದುದರಿಂದ ಪಾರಮಾರ್ಥಿಕ ಸತ್ತ್ವವೇ ಆಗುತ್ತದೆ ಎಂದು ಅಭಿಪ್ರಾಯ.

ಸದಿತ್ಯೇವ ಪ್ರತೀತೇಶ್ಚ ವ್ಯಾವಹಾರಿಕತಾ ಕುತಃ ।
ಬಾಧಾದ್ ಬೋಧ್ಯೋ ಹಿ ತದ್ಭಾವೋ ಬಾಧಶ್ಚಾಕ್ಷೇಣ ಬಾಧಿತಃ ॥೮೯೩॥

ಪ್ರತ್ಯಕ್ಷಬಾಧೇ ವಾಕ್ಯಸ್ಯೈವಾನ್ಯಾರ್ಥಃ ಸರ್ವಸಂಮತಃ ।
ಆಗಮಾದಕ್ಷಬಾಧೇ ಸ್ಯಾಲ್ಲಕ್ಷಣಾಯಾ ಬಹಿಷ್ಕೃತಿಃ ।
ಅಕ್ಷಾದಾಗಮಬಾಧೇ ತು ಮಿಥ್ಯಾತ್ವೋಕ್ತಿರ್ವನಂ ಗತಾ ॥ ೮೯೪ ॥

**ಅರ್ಥ-**ಸದಿತ್ಯೇವ= ಸತ್ಯ ಎಂದು ಮಾತ್ರ, ಪ್ರತೀತೇಶ್ಚ= ಪ್ರತೀತವಾಗುವುದರಿಂದ, ವ್ಯಾವಹಾರಿಕತಾ= ವ್ಯಾವಹಾರಿಕತ್ವವು, ಕುತಃ= ಹೇಗೆ ಸಿದ್ಧವಾಗುತ್ತದೆ, ತದ್ಭಾವಃ= ವ್ಯಾವಹಾರಿಕತ್ವವಾದರೂ, ಬಾಧಾತ್= ಬಾಧದಿಂದ, ಬೋಧ್ಯೋ ಹಿ= ಬೋಧ್ಯವಾದುದಷ್ಟೇ, ಬಾಧಶ್ಚ= ಬಾಧವಾದರೂ, ಅಕ್ಷೇಣ= ಪ್ರತ್ಯಕ್ಷದಿಂದ, ಬಾಧಿತಃ= ಬಾಧಿತವಾಗಿದೆ.

ಪ್ರತ್ಯಕ್ಷಬಾಧೇ= ಪ್ರತ್ಯಕ್ಷ ವಿರೋಧವು ಉಂಟಾದರೆ, ವಾಕ್ಯಸ್ಯೈವ= ವಾಕ್ಯಕ್ಕೇ, ಅನ್ಯಾರ್ಥಃ= ಬೇರೆ ಅರ್ಥವು, ಸರ್ವಸಂಮತಃ= ಎಲ್ಲ ವಾದಿಗಳಿಗೂ ಸಮ್ಮತವಾದುದು, ಆಗಮಾತ್= ಆಗಮದಿಂದಲೇ, ಅಕ್ಷಬಾಧೇ= ಪ್ರತ್ಯಕ್ಷವು ಬಾಧಿತವಾಗುವುದಾದರೆ, ಲಕ್ಷಣಾಯಾಃ= ಲಕ್ಷಣಾವೃತ್ತಿಗೆ, ಬಹಿಷ್ಕೃತಿಃ ಸ್ಯಾತ್= ಬಹಿಷ್ಕಾರವು ಉಂಟಾದೀತು, ಅಕ್ಷಾತ್= ಪ್ರತ್ಯಕ್ಷದಿಂದ, ಆಗಮಬಾಧೇ ತು= ಆಗಮಬಾಧವನ್ನು ಅಂಗೀಕರಿಸಿದರೆ,

ಮಿಥ್ಯಾತ್ವೋಕ್ತಿಃ= ಮಿಥ್ಯಾತ್ವ ಪ್ರತಿಪಾದಕ ವಚನಗಳು, ವನಂ ಗತಾ= ಕಾಡಿಗೆ ಹೋಗುತ್ತವೆ.

**ಅನುವಾದ-** ಪ್ರತ್ಯಕ್ಷದಿಂದ ಸತ್ತ್ವಮಾತ್ರವೇ ಪ್ರತೀತವಾಗುವುದರಿಂದ ಅದರಲ್ಲಿ ವ್ಯಾವಹಾರಿಕತ್ವವು ಹೇಗೆ ಸಿದ್ಧವಾಗುತ್ತದೆ? ವ್ಯಾವಹಾರಿಕತ್ವವು ಬಾಧದಿಂದ ಮಾತ್ರ ಬೋಧ್ಯವಷ್ಟೇ?. ಅಂತಹ ಬಾಧವಾದರೂ ಪ್ರತ್ಯಕ್ಷದಿಂದಲೇ ಬಾಧಿತವಾಗುತ್ತದೆ. ವಾಕ್ಯಕ್ಕೆ ಪ್ರತ್ಯಕ್ಷ ವಿರೋಧವು ಬಂದರೆ ಅರ್ಥಾಂತರವನ್ನು ಮಾಡುವುದು ಸರ್ವವಾದಿಸಮ್ಮತವಾಗಿದೆ. ಆಗಮದಿಂದಲೇ ಪ್ರತ್ಯಕ್ಷಬಾಧವು ಉಂಟಾಗುವುದಾದರೆ ಲಕ್ಷಣಾವೃತ್ತಿಗೇ ಬಹಿಷ್ಕಾರವುಂಟಾಗುತ್ತದೆ. ಪ್ರತ್ಯಕ್ಷದಿಂದ ಆಗಮಬಾಧವು ಉಂಟಾದರೆ ಮಾತ್ರ ಮಿಥ್ಯಾತ್ವವಚನಗಳು ಕಾಡಿಗೆ ಹೋಗುತ್ತವೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ವ್ಯಾವಹಾರಿಕತಾಂ ನಿವಾರಯತಿ ॥ ಸದಿತಿ ॥ ತದ್ಭಾವಃ ವ್ಯಾವಹಾರಿತ್ವಮ್ ॥ ೮೯೩-೮೯೪ ॥

**ವಿವರಣೆ-** ಗಂಗಾಯಾಂ ಘೋಷಃ ಎಂಬಲ್ಲಿಯೂ ತತ್ತ್ವಮಸಿ ಯಜಮಾನಃ ಪ್ರಸ್ತರಃ ಎಂಬಲ್ಲಿಯೂ ಪ್ರತ್ಯಕ್ಷ ವಿರೋಧವು ಬರುವುದರಿಂದ ಎಲ್ಲ ಕಡೆಗಳಲ್ಲಿಯೂ ಲಕ್ಷಣಾವೃತ್ತಿಯೇ ಸ್ವೀಕರಿಸಲ್ಪಡುತ್ತದೆ. ವಾಕ್ಯವೇ ಪ್ರತ್ಯಕ್ಷವನ್ನು ಬಾಧಿಸುವುದಾದರೆ ಯಾವ ಕಡೆಯಲ್ಲಿಯೂ ಲಕ್ಷಣಾವೃತ್ತಿಯನ್ನು ಸ್ವೀಕಾರಮಾಡಬೇಕಾದ ಅವಶ್ಯಕತೆ ಇಲ್ಲ. ಪ್ರತ್ಯಕ್ಷವಿರೋಧವು ಅಕಿಂಚಿತ್ಕರ. ಏಕೆಂದರೆ ಪ್ರತ್ಯಕ್ಷವು ಬಾಧಿತವಾಗುವುದರಿಂದ ಅದರ ವಿರೋಧವೇ ಇಲ್ಲ ಎಂದಾಗುತ್ತದೆ. ಪ್ರತ್ಯಕ್ಷದಿಂದ ವಾಕ್ಯವು ಬಾಧಿತವಾದರೆ ಮಾತ್ರ ಪ್ರತ್ಯಕ್ಷವು ಸತ್ಯತ್ವವನ್ನೇ ಗ್ರಹಿಸುವುದರಿಂದ ಮಿಥ್ಯಾತ್ವವನ್ನು ಹೇಳುವ ವಾಕ್ಯಗಳು ನಿಷ್ಪ್ರಯೋಜಕವಾಗುತ್ತವೆ ಎಂದು ಅಭಿಪ್ರಾಯ.

ಪರೇಣ ಬಾಧ್ಯಂ ಪೂರ್ವಂ ಚೇತ್ ಸ್ಮೃತ್ಯಾ ಬಾಧ್ಯಾಶ್ರುತಿರ್ಭವೇತ್ ।
ವಿಧಿರ್ನಿಷೇಧಬಾಧ್ಯಶ್ಚೇದಹಿಂಸೋಕ್ತ್ಯಾ ಹತಃ ಕ್ರತುಃ ।
ವೈಯಾಕರಣಶಾಸ್ತ್ರಾದೌ ಮರ್ಯಾದಾ ತತ್ಕೃತಾ ತಥಾ ॥ ೮೯೫ ॥

**ಅರ್ಥ-**ಪರೇಣ= ಅನಂತರದಲ್ಲಿ ಉಂಟಾದ ಪ್ರಮಾಣದಿಂದ, ಪೂರ್ವಂ= ಮೊದಲನೆಯ ಪ್ರಮಾಣವು, ಬಾಧ್ಯಂ ಚೇತ್= ಬಾಧ್ಯವಾಗುವುದಾದರೆ, ಶ್ರುತಿಃ= ಶ್ರುತಿಯು, ಸ್ಮೃತ್ಯಾ= ಸ್ಮೃತಿಯಿಂದ, ಬಾಧ್ಯಾಭವೇತ್= ಬಾಧಿತವಾಗಬೇಕಾಗುತ್ತದೆ, ವಿಧಿಃ= ವಿಧಿಯು, ನಿಷೇಧಬಾಧ್ಯಶ್ಚೇತ್= ನಿಷೇಧದಿಂದ ಬಾಧ್ಯವಾಗುವುದಾದರೆ, ಅಹಿಂಸೋಕ್ತ್ಯಾ= ಮಾಹಿಂಸ್ಯಾತ್ ಸರ್ವಾಭೂತಾನಿ ಎಂಬ ವಾಕ್ಯದಿಂದ, ಕ್ರತುಃ= ಅಗ್ನೀಷೋಮೀಯಾದಿ ಕ್ರತುವು, ಹತಃ= ನಾಶವಾಗುತ್ತದೆ, ವೈಯಾಕರಣಶಾಸ್ತ್ರಾದೌ= ವ್ಯಾಕರಣ ಶಾಸ್ತ್ರ ಮೊದಲಾದವುಗಳಲ್ಲಿ, ತಥಾ ಮರ್ಯಾದಾ= ಅಂತಹ ಮರ್ಯಾದೆಯು, ತತ್ಕೃತಾ= ಅವರಿಂದ ಮಾಡಲ್ಪಟ್ಟಿದೆ.

**ಅನುವಾದ-** ಅನಂತರದ ಪ್ರಮಾಣದಿಂದ ಮೊದಲಿನ ಪ್ರಮಾಣವು ಬಾಧ್ಯವಾಗುವುದಾದರೆ ಸ್ಮೃತಿಯಿಂದ ಶ್ರುತಿಯು ಬಾಧ್ಯವಾಗಲಿ. ವಿಧಿಯು ನಿಷೇಧದಿಂದ ಬಾಧ್ಯವಾಗುವುದಾದರೆ ಹಿಂಸೆಯನ್ನು ನಿಷೇಧಮಾಡುವ ಅಹಿಂಸಾ ವಚನದಿಂದ ಅಗ್ನೀಷೋಮೀಯ ಯಾಗವು ಬಾಧಿತವಾಗಲಿ. ವ್ಯಾಕರಣ ಮತ್ತು ಮೀಮಾಂಸಾ ಶಾಸ್ತ್ರಗಳಲ್ಲಿ ಅಂತಹ ನಿಯಮಗಳನ್ನು ಅವರು ಅಂಗೀಕರಿಸಿದ್ದಾರೆ.

**ಭಾವವಿಲಾಸಿನೀ-** ವೈಯಾಕರಣಶಾಸ್ತ್ರಾದೌ । ಆದಿಪದೇನ ಮೀಮಾಂಸಾಶಾಸ್ತ್ರಮ್ । ತತ್ಕೃತಾ ಪಾಣಿನ್ಯಾದಿಕೃತಾ । ತಥಾ ಪರೇಣ ಪೂರ್ವಂ ಬಾಧ್ಯಂ ನಿಷೇಧೇನ ವಿಧಿರ್ಬಾಧ್ಯ ಇತ್ಯಾದಿ ಪ್ರಕಾರೇಣ ॥ ೪೯೫ ॥

**ವಿವರಣೆ-** ವ್ಯಾಕರಣಶಾಸ್ತ್ರದಲ್ಲಿ ಮತ್ತು ಮೀಮಾಂಸಾ ಶಾಸ್ತ್ರದಲ್ಲಿ ಅಂತಹ ನಿಯಮವು ಉಪಪನ್ನವಾಗಬಹುದು, ವೇದಾಂತ ಶಾಸ್ತ್ರದಲ್ಲಿ ಅಂತಹ ನಿಯಮವು ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

**ಅತಃ ಪ್ರಾಬಲ್ಯದೌರ್ಬಲ್ಯೇ ಬಾಧ್ಯತಾಬಾಧ್ಯತಾರ್ಪಕೇ ।**
**ಸರ್ವೋಪಜೀವ್ಯಂ ಪ್ರತ್ಯಕ್ಷಂ ಸರ್ವತಃ ಪ್ರಬಲಂ ಮಹತ್ ।**
**ತದ್ಬಾಧಾದನುಮಾ ಬಾಧ್ಯಾ ಶಬ್ದೋಽಪ್ಯನ್ಯಾರ್ಥತಾಂ ವ್ರಜೇತ್ ॥ ೪೯೬ ॥**

**ಅರ್ಥ-**ಅತಃ= ಆ ಕಾರಣದಿಂದ, ಪ್ರಾಬಲ್ಯದೌರ್ಬಲ್ಯೇ= ಪ್ರಾಬಲ್ಯ ಮತ್ತು ದೌರ್ಬಲ್ಯಗಳು, ಬಾಧ್ಯತಾಬಾಧ್ಯತಾರ್ಪಕೇ= ಬಾಧಕತ್ವ ಮತ್ತು ಬಾಧ್ಯತ್ವವನ್ನು ಉಪಪಾದನೆ ಮಾಡುತ್ತವೆ, ಸರ್ವೋಪಜೀವ್ಯಂ= ಸರ್ವಪ್ರಮಾಣಗಳಿಂದ ಉಪಜೀವ್ಯವಾದ, ಪ್ರತ್ಯಕ್ಷಂ= ಪ್ರತ್ಯಕ್ಷವು, ಸರ್ವತಃ= ಎಲ್ಲ ಪ್ರಮಾಣಗಳಿಗಿಂತಲೂ, ಮಹತ್ ಪ್ರಬಲಂ= ಬಹಳ ಪ್ರಬಲವಾದುದು, ತದ್ಬಾಧಾತ್= ಅಂತಹ ಪ್ರತ್ಯಕ್ಷವಿರೋಧದಿಂದ, ಅನುಮಾ= ಅನುಮಾನವು, ಬಾಧ್ಯಾ= ಬಾಧ್ಯವಾಗುತ್ತದೆ, ಶಬ್ದೋಽಪಿ= ಆಗಮವೂ ಕೂಡ, ಅನ್ಯಾರ್ಥತಾಂ= ಅರ್ಥಾಂತರವನ್ನು, ವ್ರಜೇತ್= ಸ್ವೀಕರಿಸುತ್ತದೆ.

**ಅನುವಾದ-** ಆಯಾ ವಾದಿಗಳು ಮಾಡಿಕೊಂಡಿರುವ ಸಂಕೇತವು ವೇದಾಂತಶಾಸ್ತ್ರದಲ್ಲಿ ಅನಾದರಣೀಯವಾದ್ದರಿಂದ ಪ್ರಾಬಲ್ಯವೇ ಬಾಧಕತ್ವಕ್ಕೆ ವ್ಯವಸ್ಥಾಪಕ ಮತ್ತು ದೌರ್ಬಲ್ಯವೇ ಬಾಧ್ಯತ್ವಕ್ಕೆ ವ್ಯವಸ್ಥಾಪಕವಾಗಿದೆ. ಸರ್ವಪ್ರಮಾಣಗಳಿಂದ ಉಪಜೀವ್ಯವಾದ ಪ್ರತ್ಯಕ್ಷವು ಸರ್ವಪ್ರಮಾಣಗಳಿಗಿಂತಲೂ ಬಹಳ ಪ್ರಬಲವಾಗಿದೆ. ಅಂತಹ ವಿರೋಧಿ ಪ್ರತ್ಯಕ್ಷವು ಉಂಟಾದರೆ ಅನುಮಾನವು ಬಾಧ್ಯವಾಗುತ್ತದೆ ಮತ್ತು ಆಗಮವು ಅರ್ಥಾಂತರವನ್ನು ಹೊಂದುತ್ತದೆ.

**ಭಾವವಿಲಾಸಿನೀ-** ಅತಸ್ತತ್ತದ್ವಾದಿಕೃತಸಂಕೇತಸ್ಯಾನಾದರಣೀಯತ್ವಾತ್ ॥ ೪೯೬ ॥

**ಕಿಂಚ ಶ್ರುತಿರನಾದಿತ್ವಾತ್ ಪೂರ್ವಾSಕ್ಷಂ ತು ಪರಂ ನೃಣಾಮ್ ।**
**ಅತಸ್ತ್ವನ್ನ್ಯಾಯತೋಽಪ್ಯಕ್ಷಮಾಗಮಸ್ಯೈವ ಬಾಧಕಮ್ ॥ ೮೯೭ ॥**

**ಅರ್ಥ**-ಕಿಂಚ= ಮತ್ತು, ಅನಾದಿತ್ವಾತ್= ಅನಾದಿಯಾದುದರಿಂದ, ಶ್ರುತಿಃ= ವೇದವೇ, ಪೂರ್ವಾ= ಪೂರ್ವಪ್ರಮಾಣ, ನೃಣಾಂ ಅಕ್ಷಂ ತು= ಮನುಷ್ಯರ ಇಂದ್ರಿಯವಾದರೂ, ಪರಂ= ಅನಂತರದ ಪ್ರಮಾಣ, ಅತಃ= ಆದ್ದರಿಂದ, ತ್ವನ್ಯಾಯತೋಽಪಿ= ನಿನ್ನ ನ್ಯಾಯದಿಂದಲೂ ಕೂಡ, ಅಕ್ಷಂ= ಅನಂತರ ಭಾವಿ ಪ್ರಮಾಣವಾದ ಪ್ರತ್ಯಕ್ಷವೇ, ಆಗಮಸ್ಯೈವ= ಆಗಮಕ್ಕೇ, ಬಾಧಕಂ= ಬಾಧಕವಾಗುತ್ತದೆ.

**ಅನುವಾದ**- ಮತ್ತು ಅನಾದಿಯಾದುದರಿಂದ ಶ್ರುತಿಯು ಪೂರ್ವಪ್ರಮಾಣ. ಮನುಷ್ಯರ ಚಕ್ಷುರಾದಿ ಇಂದ್ರಿಯವು ಅನಂತರದ ಪ್ರಮಾಣ. ಆದ್ದರಿಂದ ನಿನ್ನ ನ್ಯಾಯದಿಂದಲೇ ಪರಪ್ರಮಾಣವಾದ ಪ್ರತ್ಯಕ್ಷವು ಪೂರ್ವಪ್ರಮಾಣವಾದ ಆಗಮವನ್ನು ಬಾಧಿಸುತ್ತದೆ.

**ಭಾವವಿಲಾಸಿನೀ**– ತ್ವನ್ನ್ಯಾಯತಃ ಪರೇಣ ಪೂರ್ವಂ ಬಾಧ್ಯತ ಇತಿ ನ್ಯಾಯತಃ ॥ ೮೯೭ ॥

**ತತ್ತ್ವಮಸ್ಯಾದಿವಾಕ್ಯಂ ಚ ವಿಧಿರೂಪಂ ಕಥಂ ಮಹತ್ ।**
**ಸತ್ತ್ವಪ್ರತ್ಯಕ್ಷತಃ ಸತ್ತ್ವಂ ಯನ್ನಿಷೇಧನಿಷೇಧನಂ ॥ ೮೯೮ ॥**

**ಅರ್ಥ**-ತತ್ತ್ವಮಸ್ಯಾದಿವಾಕ್ಯಂ ಚ= ತತ್ತ್ವಮಸ್ಯಾದಿ ವಾಕ್ಯವೂ ಕೂಡ, ವಿಧಿರೂಪಂ= ವಿಧಿ ರೂಪವಾಗಿರುವುದರಿಂದ, ಕಥಂ= ಹೇಗೆ, ಸತ್ತ್ವಪ್ರತ್ಯಕ್ಷತಃ ಮಹತ್= ಸತ್ತ್ವಪ್ರತ್ಯಕ್ಷಕ್ಕಿಂತಲೂ ಪ್ರಬಲವಾಗುತ್ತದೆ? ಯತ್= ಏಕೆಂದರೆ, ಸತ್ತ್ವಂ= ಸತ್ತ್ವವು, ನಿಷೇಧನಿಷೇಧನಂ= ನಿಷೇಧದ ನಿಷೇಧರೂಪವಾಗಿದೆಯಷ್ಟೇ ?

**ಅನುವಾದ**- ತತ್ತ್ವಮಸ್ಯಾದಿ ವಾಕ್ಯವು ವಿಧಿರೂಪವಾಗಿರುವುದರಿಂದ ಹೇಗೆ ಸತ್ತ್ವಪ್ರತ್ಯಕ್ಷಕ್ಕಿಂತಲೂ ಪ್ರಬಲವಾಗುತ್ತದೆ? ಏಕೆಂದರೆ ಸತ್ತ್ವವು ನಿಷೇಧದ ನಿಷೇಧರೂಪವಾಗಿದೆ.

**ಭಾವವಿಲಾಸಿನೀ**– ಸತ್ತ್ವಪ್ರತ್ಯಕ್ಷತಃ ಕಥಂ ಮಹದಿತಿ ಸಂಬಂಧಃ । ಸತ್ತ್ವಪ್ರತ್ಯಕ್ಷಸ್ಯ ನಿಷೇಧ-ರೂಪತ್ವಮುಪಪಾದಯತಿ ॥**ಸತ್ತ್ವಮಿತಿ** ॥ ಯತ್ ಯಸ್ಮಾತ್ ಸತ್ತ್ವಂ ನಿಷೇಧನಿಷೇಧನಂ ತ್ರೈಕಾಲಿಕನಿಷೇಧಸ್ಯ ನಿಷೇಧರೂಪಮ್ । ತಸ್ಮಾತ್ಕಥಂ ಮಹದಿತಿ ಪೂರ್ವೇಣಾನ್ವಯಃ ॥ ೮೯೮॥

**ವಿವರಣೆ**- ಸತ್ತ್ವವು ಮಿಥ್ಯಾತ್ವನಿಷೇಧರೂಪವಾದುದು. ಮಿಥ್ಯಾತ್ವವು ತ್ರೈಕಾಲಿಕ ನಿಷೇಧರೂಪವಾದುದು. ಆದ್ದರಿಂದ ಸತ್ತ್ವವು ನಿಷೇಧದ ನಿಷೇಧರೂಪವಾಗುತ್ತದೆ. ವಿಧಿಗಿಂತಲೂ ನಿಷೇಧವು ಪ್ರಬಲ ಎಂದು ನೀನು ಹೇಳುವುದರಿಂದ, ವಿಧಿರೂಪವಾದ ಅರ್ಥವನ್ನು ಹೇಳುವ ತತ್ತ್ವಮಸಿ ವಾಕ್ಯಕ್ಕಿಂತಲೂ ಸತ್ತ್ವಗ್ರಾಹಿಯಾದ ಪ್ರತ್ಯಕ್ಷವೇ ಪ್ರಬಲವೆಂದು ಸಿದ್ಧವಾಗುತ್ತದೆ.

ನಿಷೇಧಾಪ್ರತಿಯೋಗಿತ್ವಂ ಯತಃ ಸತ್ತ್ವಂ ವಿದೋ ವಿದುಃ ।
ತತ್ಸತ್ತ್ವಶ್ರುತಿತೋ ಮಿಥ್ಯಾಶ್ರುತಿರಾಸೀದ್ಧಿ ದುರ್ಬಲಾ ॥ ೮೯೯ ॥

ತ್ರೈಕಾಲಿಕನಿಷೇಧೋ ಹಿ ಮಿಥ್ಯಾತ್ವಮಿತಿ ತೇ ಮತಂ ।
ತದಭಾವಶ್ಚ ಸತ್ಯತ್ವಂ ಪ್ರಾಬಲ್ಯಂ ಕಸ್ಯ ಕಥ್ಯತಾಂ ॥ ೯೦೦ ॥

ನಿಷೇಧತ್ವಂ ಪರತ್ವಂ ಚ ದ್ವಯಂ ಸತ್ಯತ್ವ ಏವ ಹಿ ।
ಪ್ರತಿಯೋಗಿಪ್ರಸಕ್ತೌ ಪ್ರಾಕ್ ಯತಃ ಪಶ್ಚಾನ್ನಿಷೇಧನಂ ।
ತಸ್ಮಾತ್ ತ್ವತ್ಪ್ರಕ್ರಿಯಾವ್ಯಾಘ್ರೀ ಸ್ವತಂತೂನೇವ ಕೃಂತತಿ ॥ ೯೦೧ ॥

ಅತಃ ಪ್ರಾಬಲ್ಯಮೇವೈಕಂ ಬಾಧಕತ್ವೇ ಪ್ರಯೋಜಕಂ ।
ತಚ್ಚೋಕ್ತರೀತ್ಯಾ ಪ್ರತ್ಯಕ್ಷೇ ಜಿತಂ ಸತ್ಯತ್ವವಾದಿಭಿಃ ॥ ೯೦೨ ॥

**ಅರ್ಥ**-ಯತಃ= ಏಕೆಂದರೆ, ವಿದಃ= ಜ್ಞಾನಿಗಳು, ಸತ್ತ್ವಂ= ಸತ್ತ್ವವನ್ನು, ನಿಷೇಧಾಪ್ರತಿಯೋಗಿತ್ವಂ= ನಿಷೇಧಪ್ರತಿಯೋಗಿತ್ವಾಭಾವರೂಪವಾದುದು ಎಂದು, ವಿದುಃ= ತಿಳಿಯುತ್ತಾರೆ, ತತ್= ಆ ಕಾರಣದಿಂದ, ಸತ್ತ್ವಶ್ರುತಿತಃ= ಸತ್ತ್ವಶ್ರುತಿಗಿಂತಲೂ, ಮಿಥ್ಯಾಶ್ರುತಿಃ= ಮಿಥ್ಯಾತ್ವವನ್ನು ಹೇಳುವ ಶ್ರುತಿಯು, ದುರ್ಬಲಾ ಆಸೀದ್ಧಿ= ದುರ್ಬಲವಾಯಿತಷ್ಟೇ.

ಮಿಥ್ಯಾತ್ವಂ= ಮಿಥ್ಯಾತ್ವವು, ತ್ರೈಕಾಲಿಕನಿಷೇಧಃ= ತ್ರೈಕಾಲಿಕ ನಿಷೇಧರೂಪವಾದುದು, ಇತಿ= ಎಂದು, ತೇ ಮತಂ ಹಿ= ನಿನ್ನ ಮತವಷ್ಟೇ, ಸತ್ಯತ್ವಂ= ಸತ್ಯತ್ವವಾದರೂ, ತದಭಾವಶ್ಚ= ಅಂತಹ ಮಿಥ್ಯಾತ್ವಾಭಾವರೂಪವಾದುದು, ಕಸ್ಯಪ್ರಾಬಲ್ಯಂ= ಯಾವುದಕ್ಕೆ ಪ್ರಾಬಲ್ಯವೆಂದು, ಕಥ್ಯತಾಂ= ನೀನೇ ಹೇಳು.

ನಿಷೇಧತ್ವಂ ಪರತ್ವಂ ಚ ದ್ವಯಂ= ನಿಷೇಧತ್ವ ಮತ್ತು ಪರತ್ವ ಎಂಬ ಈ ಎರಡು ವಸ್ತುಗಳು, ಸತ್ಯತ್ವ ಏವ ಹಿ= ಸತ್ಯತ್ವದಲ್ಲಿಯೇ ಸಿದ್ಧವಾಗುತ್ತವೆ, ಯತಃ= ಏಕೆಂದರೆ, ಪ್ರಾಕ್= ಮೊದಲು, ಪ್ರತಿಯೋಗಿಪ್ರಸಕ್ತೌ= ಪ್ರತಿಯೋಗಿಯ ಪ್ರಸಕ್ತಿ ಇದ್ದರೆ ಮಾತ್ರ, ಪಶ್ಚಾತ್= ಅನಂತರ, ನಿಷೇಧನಂ= ನಿಷೇಧವು ಉಪಪನ್ನವಾಗುತ್ತದೆ, ತಸ್ಮಾತ್= ಆ ಕಾರಣದಿಂದ, ತ್ವತ್ಪ್ರಕ್ರಿಯಾವ್ಯಾಘ್ರೀ= ನಿನ್ನ ಪ್ರಕ್ರಿಯೆ ಎಂಬ ಹೆಣ್ಣು ಹುಲಿಯು, ಸ್ವತಂತೂನೇವ= ತನ್ನ ಮರಿಗಳನ್ನೇ, ಕೃಂತತಿ= ನಾಶಮಾಡುತ್ತದೆ.

ಅತಃ= ಆ ಕಾರಣದಿಂದ, ಏಕಂ ಪ್ರಾಬಲ್ಯಮೇವ= ಕೇವಲ ಪ್ರಾಬಲ್ಯವೊಂದೇ, ಬಾಧಕತ್ವೇ= ಬಾಧಕತ್ವವನ್ನು ಕುರಿತು, ಪ್ರಯೋಜಕಂ= ಪ್ರಯೋಜಕವಾದುದು, ತಚ್ಚ= ಅಂತಹ ಬಾಧಕತ್ವವಾದರೂ, ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಲ್ಲಿ, ಪ್ರತ್ಯಕ್ಷೇ=

**ಕಿಂಚ ಶ್ರುತಿರನಾದಿತ್ವಾತ್ ಪೂರ್ವಾಽಕ್ಷಂ ತು ಪರಂ ನೃಣಾಮ್ ।**
**ಅತಸ್ತ್ವನ್ನ್ಯಾಯತೋಽಪ್ಯಕ್ಷಮಾಗಮಸ್ಯೈವ ಬಾಧಕಮ್ ॥ ೮೯೭ ॥**

**ಅರ್ಥ**-ಕಿಂಚ= ಮತ್ತು, ಅನಾದಿತ್ವಾತ್= ಅನಾದಿಯಾದುದರಿಂದ, ಶ್ರುತಿಃ= ವೇದವೇ, ಪೂರ್ವಾ= ಪೂರ್ವಪ್ರಮಾಣ, ನೃಣಾಂ ಅಕ್ಷಂ ತು= ಮನುಷ್ಯರ ಇಂದ್ರಿಯವಾದರೂ, ಪರಂ= ಅನಂತರದ ಪ್ರಮಾಣ, ಅತಃ= ಆದ್ದರಿಂದ, ತ್ವನ್ನ್ಯಾಯತೋಽಪಿ= ನಿನ್ನ ನ್ಯಾಯದಿಂದಲೂ ಕೂಡ, ಅಕ್ಷಂ= ಅನಂತರ ಭಾವಿ ಪ್ರಮಾಣವಾದ ಪ್ರತ್ಯಕ್ಷವೇ, ಆಗಮಸ್ಯೈವ= ಆಗಮಕ್ಕೇ, ಬಾಧಕಂ= ಬಾಧಕವಾಗುತ್ತದೆ.

**ಅನುವಾದ**- ಮತ್ತು ಅನಾದಿಯಾದುದರಿಂದ ಶ್ರುತಿಯು ಪೂರ್ವಪ್ರಮಾಣ. ಮನುಷ್ಯರ ಚಕ್ಷುರಾದಿ ಇಂದ್ರಿಯವು ಅನಂತರದ ಪ್ರಮಾಣ. ಆದ್ದರಿಂದ ನಿನ್ನ ನ್ಯಾಯದಿಂದಲೇ ಪರಪ್ರಮಾಣವಾದ ಪ್ರತ್ಯಕ್ಷವು ಪೂರ್ವಪ್ರಮಾಣವಾದ ಆಗಮವನ್ನು ಬಾಧಿಸುತ್ತದೆ.

**ಭಾವವಿಲಾಸಿನೀ**– ತ್ವನ್ನ್ಯಾಯತಃ ಪರೇಣ ಪೂರ್ವಂ ಬಾಧ್ಯತ ಇತಿ ನ್ಯಾಯತಃ ॥ ೮೯೭ ॥

**ತತ್ತ್ವಮಸ್ಯಾದಿವಾಕ್ಯಂ ಚ ವಿಧಿರೂಪಂ ಕಥಂ ಮಹತ್ ।**
**ಸತ್ತ್ವಪ್ರತ್ಯಕ್ಷತಃ ಸತ್ತ್ವಂ ಯನ್ನಿಷೇಧನಿಷೇಧನಂ ॥ ೮೯೮ ॥**

**ಅರ್ಥ**-ತತ್ತ್ವಮಸ್ಯಾದಿವಾಕ್ಯಂ ಚ= ತತ್ತ್ವಮಸ್ಯಾದಿ ವಾಕ್ಯವೂ ಕೂಡ, ವಿಧಿರೂಪಂ= ವಿಧಿ ರೂಪವಾಗಿರುವುದರಿಂದ, ಕಥಂ= ಹೇಗೆ, ಸತ್ತ್ವಪ್ರತ್ಯಕ್ಷತಃ ಮಹತ್= ಸತ್ತ್ವಪ್ರತ್ಯಕ್ಷಕ್ಕಿಂತಲೂ ಪ್ರಬಲವಾಗುತ್ತದೆ? ಯತ್= ಏಕೆಂದರೆ, ಸತ್ತ್ವಂ= ಸತ್ತ್ವವು, ನಿಷೇಧನಿಷೇಧನಂ= ನಿಷೇಧದ ನಿಷೇಧರೂಪವಾಗಿದೆಯಷ್ಟೇ?

**ಅನುವಾದ**- ತತ್ತ್ವಮಸ್ಯಾದಿ ವಾಕ್ಯವು ವಿಧಿರೂಪವಾಗಿರುವುದರಿಂದ ಹೇಗೆ ಸತ್ತ್ವಪ್ರತ್ಯಕ್ಷಕ್ಕಿಂತಲೂ ಪ್ರಬಲವಾಗುತ್ತದೆ? ಏಕೆಂದರೆ ಸತ್ತ್ವವು ನಿಷೇಧದ ನಿಷೇಧರೂಪವಾಗಿದೆ.

**ಭಾವವಿಲಾಸಿನೀ**– ಸತ್ತ್ವಪ್ರತ್ಯಕ್ಷತಃ ಕಥಂ ಮಹದಿತಿ ಸಂಬಂಧಃ । ಸತ್ತ್ವಪ್ರತ್ಯಕ್ಷಸ್ಯ ನಿಷೇಧ-ರೂಪತ್ವಮುಪಪಾದಯತಿ ॥**ಸತ್ತ್ವಮಿತಿ** ॥ ಯತ್ ಯಸ್ಮಾತ್ ಸತ್ತ್ವಂ ನಿಷೇಧನಿಷೇಧನಂ ತ್ರೈಕಾಲಿಕನಿಷೇಧಸ್ಯ ನಿಷೇಧರೂಪಮ್ । ತಸ್ಮಾತ್ಕಥಂ ಮಹದಿತಿ ಪೂರ್ವೇಣಾನ್ವಯಃ ॥ ೮೯೮॥

**ವಿವರಣೆ**- ಸತ್ತ್ವವು ಮಿಥ್ಯಾತ್ವನಿಷೇಧರೂಪವಾದುದು. ಮಿಥ್ಯಾತ್ವವು ತ್ರೈಕಾಲಿಕ ನಿಷೇಧರೂಪವಾದುದು. ಆದ್ದರಿಂದ ಸತ್ತ್ವವು ನಿಷೇಧದ ನಿಷೇಧರೂಪವಾಗುತ್ತದೆ. ವಿಧಿಗಿಂತಲೂ ನಿಷೇಧವು ಪ್ರಬಲ ಎಂದು ನೀನು ಹೇಳುವುದರಿಂದ, ವಿಧಿರೂಪವಾದ ಅರ್ಥವನ್ನು ಹೇಳುವ ತತ್ತ್ವಮಸಿ ವಾಕ್ಯಕ್ಕಿಂತಲೂ ಸತ್ತ್ವಗ್ರಾಹಿಯಾದ ಪ್ರತ್ಯಕ್ಷವೇ ಪ್ರಬಲವೆಂದು ಸಿದ್ಧವಾಗುತ್ತದೆ.

ನಿಷೇಧಾಪ್ರತಿಯೋಗಿತ್ವಂ ಯತಃ ಸತ್ತ್ವಂ ವಿದೋ ವಿದುಃ ।
ತತಸ್ತತ್ತ್ವಶ್ರುತಿತೋ ಮಿಥ್ಯಾಶ್ರುತಿರಾಸೀದ್ಧಿ ದುರ್ಬಲಾ ॥ ೮೯೯ ॥

ತ್ರೈಕಾಲಿಕನಿಷೇಧೋ ಹಿ ಮಿಥ್ಯಾತ್ವಮಿತಿ ತೇ ಮತಂ ।
ತದಭಾವಶ್ಚ ಸತ್ಯತ್ವಂ ಪ್ರಾಬಲ್ಯಂ ಕಸ್ಯ ಕಥ್ಯತಾಂ ॥ ೯೦೦ ॥

ನಿಷೇಧತ್ವಂ ಪರತ್ವಂ ಚ ದ್ವಯಂ ಸತ್ಯತ್ವ ಏವ ಹಿ ।
ಪ್ರತಿಯೋಗಿಪ್ರಸಕ್ತೌ ಪ್ರಾಕ್ ಯತಃ ಪಶ್ಚಾನ್ನಿಷೇಧನಂ ।
ತಸ್ಮಾತ್ ತ್ವತ್ಪ್ರಕ್ರಿಯಾವ್ಯಾಘ್ರೀ ಸ್ವತಂತೂನೇವ ಕೃಂತತಿ ॥ ೯೦೧ ॥

ಅತಃ ಪ್ರಾಬಲ್ಯಮೇವೈಕಂ ಬಾಧಕತ್ವೇ ಪ್ರಯೋಜಕಂ ।
ತಚ್ಚೋಕ್ತರೀತ್ಯಾ ಪ್ರತ್ಯಕ್ಷೇ ಜಿತಂ ಸತ್ಯತ್ವವಾದಿಭಿಃ ॥ ೯೦೨ ॥

**ಅರ್ಥ**-ಯತಃ= ಏಕೆಂದರೆ, ವಿದಃ= ಜ್ಞಾನಿಗಳು, ಸತ್ತ್ವಂ= ಸತ್ತ್ವವನ್ನು, ನಿಷೇಧಾಪ್ರತಿಯೋಗಿತ್ವಂ= ನಿಷೇಧಪ್ರತಿಯೋಗಿತ್ವಾಭಾವರೂಪವಾದುದು ಎಂದು, ವಿದುಃ= ತಿಳಿಯುತ್ತಾರೆ, ತತ್= ಆ ಕಾರಣದಿಂದ, ಸತ್ತ್ವಶ್ರುತಿತಃ= ಸತ್ತ್ವಶ್ರುತಿಗಿಂತಲೂ, ಮಿಥ್ಯಾಶ್ರುತಿಃ= ಮಿಥ್ಯಾತ್ವವನ್ನು ಹೇಳುವ ಶ್ರುತಿಯು, ದುರ್ಬಲಾ ಆಸೀದ್ಧಿ= ದುರ್ಬಲವಾಯಿತಷ್ಟೇ.

ಮಿಥ್ಯಾತ್ವಂ= ಮಿಥ್ಯಾತ್ವವು, ತ್ರೈಕಾಲಿಕನಿಷೇಧಃ= ತ್ರೈಕಾಲಿಕ ನಿಷೇಧರೂಪವಾದುದು, ಇತಿ= ಎಂದು, ತೇ ಮತಂ ಹಿ= ನಿನ್ನ ಮತವಷ್ಟೇ, ಸತ್ಯತ್ವಂ= ಸತ್ಯತ್ವವಾದರೂ, ತದಭಾವಶ್ಚ= ಅಂತಹ ಮಿಥ್ಯಾತ್ವಾಭಾವರೂಪವಾದುದು, ಕಸ್ಯಪ್ರಾಬಲ್ಯಂ= ಯಾವುದಕ್ಕೆ ಪ್ರಾಬಲ್ಯವೆಂದು, ಕಥ್ಯತಾಂ= ನೀನೇ ಹೇಳು.

ನಿಷೇಧತ್ವಂ ಪರತ್ವಂ ಚ ದ್ವಯಂ= ನಿಷೇಧತ್ವ ಮತ್ತು ಪರತ್ವ ಎಂಬ ಈ ಎರಡು ವಸ್ತುಗಳು, ಸತ್ಯತ್ವ ಏವ ಹಿ= ಸತ್ಯತ್ವದಲ್ಲಿಯೇ ಸಿದ್ಧವಾಗುತ್ತವೆ, ಯತಃ= ಏಕೆಂದರೆ, ಪ್ರಾಕ್= ಮೊದಲು, ಪ್ರತಿಯೋಗಿಪ್ರಸಕ್ತೌ= ಪ್ರತಿಯೋಗಿಯ ಪ್ರಸಕ್ತಿ ಇದ್ದರೆ ಮಾತ್ರ, ಪಶ್ಚಾತ್= ಅನಂತರ, ನಿಷೇಧನಂ= ನಿಷೇಧವು ಉಪಪನ್ನವಾಗುತ್ತದೆ, ತಸ್ಮಾತ್= ಆ ಕಾರಣದಿಂದ, ತ್ವತ್ಪ್ರಕ್ರಿಯಾವ್ಯಾಘ್ರೀ= ನಿನ್ನ ಪ್ರಕ್ರಿಯೆ ಎಂಬ ಹೆಣ್ಣು ಹುಲಿಯು, ಸ್ವತಂತೂನೇವ= ತನ್ನ ಮರಿಗಳನ್ನೇ, ಕೃಂತತಿ= ನಾಶಮಾಡುತ್ತದೆ.

ಅತಃ= ಆ ಕಾರಣದಿಂದ, ಏಕಂ ಪ್ರಾಬಲ್ಯಮೇವ= ಕೇವಲ ಪ್ರಾಬಲ್ಯವೊಂದೇ, ಬಾಧಕತ್ವೇ= ಬಾಧಕತ್ವವನ್ನು ಕುರಿತು, ಪ್ರಯೋಜಕಂ= ಪ್ರಯೋಜಕವಾದುದು, ತಚ್ಚ= ಅಂತಹ ಬಾಧಕತ್ವವಾದರೂ, ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಲ್ಲಿ, ಪ್ರತ್ಯಕ್ಷೇ=

ಪ್ರತ್ಯಕ್ಷದಲ್ಲೇ ಇದೆ, ಆದ್ದರಿಂದ, ಸತ್ಯತ್ವವಾದಿಭಿಃ= ಸತ್ಯತ್ವವಾದಿಗಳಿಂದ, ಜಿತಂ= ನೀನು ಜಯಿಸಲ್ಪಟ್ಟಿದ್ದೀಯೆ.

**ಅನುವಾದ-** ಏಕೆಂದರೆ ಜ್ಞಾನಿಗಳಾದವರು ಸತ್ತ್ವವನ್ನು ನಿಷೇಧಾಪ್ರತಿಯೋಗಿತ್ವ ಎಂದರೆ ನಿಷೇಧ ಪ್ರತಿಯೋಗಿತ್ವಾಭಾವರೂಪವಾದುದು ಎಂದು ಹೇಳುತ್ತಾರೆ (ತಿಳಿಯುತ್ತಾರೆ). ಆದ್ದರಿಂದ ಸತ್ತ್ವಶ್ರುತಿಗಿಂತಲೂ ಮಿಥ್ಯಾತ್ವಶ್ರುತಿಯು ದುರ್ಬಲವಾಯಿತಷ್ಟೇ?

ಮಿಥ್ಯಾತ್ವವು ತ್ರೈಕಾಲಿಕ ನಿಷೇಧರೂಪವಾದುದು ಎಂದು ನಿನ್ನ ಮತವಷ್ಟೇ? ಸತ್ಯತ್ವವಾದರೂ ಮಿಥ್ಯಾತ್ವಾಭಾವರೂಪವಾದುದು. ಯಾವುದಕ್ಕೆ ಪ್ರಾಬಲ್ಯವೆಂದು ನೀನೇ ಹೇಳು.

ನಿಷೇಧತ್ವ ಮತ್ತು ಪರತ್ವ ಈ ಎರಡು ವಸ್ತುಗಳು ಸತ್ಯತ್ವವು ಇದ್ದರೆ ಮಾತ್ರ ಉಂಟಾಗುತ್ತದೆ. ಮೊದಲು ಪ್ರತಿಯೋಗಿಯ ಪ್ರಸಕ್ತಿ ಇದ್ದರೆ ಮಾತ್ರ, ಅನಂತರ ನಿಷೇಧವು ಉಪಪನ್ನವಾಗುವುದಷ್ಟೇ? ಆದ್ದರಿಂದ ನಿನ್ನ ಪ್ರಕ್ರಿಯೆ ಎಂಬ ಹೆಣ್ಣು ಹುಲಿಯು ತನ್ನ ಮರಿಗಳನ್ನೇ ಕೊಲ್ಲುತ್ತದೆ. ಆದ್ದರಿಂದ ಕೇವಲ ಪ್ರಾಬಲ್ಯವೇ ಬಾಧಕತ್ವವನ್ನು ಕುರಿತು ಪ್ರಯೋಜಕವಾದುದು. ಅಂತಹ ಪ್ರಾಬಲ್ಯವಾದರೂ ಹಿಂದೆ ಹೇಳಿದ ರೀತಿಯಲ್ಲಿ ಪ್ರತ್ಯಕ್ಷಕ್ಕೇ ಇದೆ. ಆದ್ದರಿಂದ ನೀನು ಸತ್ಯತ್ವವಾದಿಗಳಿಂದ ಜಯಿಸಲ್ಪಡುತ್ತೀಯೆ.

**ಭಾವವಿಲಾಸಿನೀ–** ನಿಷೇಧಾಪ್ರತಿಯೋಗಿತ್ವಂ ನಿಷೇಧಪ್ರತಿಯೋಗಿತ್ವಾಭಾವಃ । ನಿಷೇಧನಿಷೇಧನಮಿತಿ ಯಾವತ್ । ಅತಸ್ಸತ್ತ್ವಪ್ರಮಾಣಂ ನಿಷೇಧನಿಷೇಧರೂಪತ್ವಾತ್ತದ್ದ್ರೀತ್ಯೈವ ಸರ್ವತೋಽಪಿ ಮಹತ್ ಸತ್ತ್ವಪ್ರತ್ಯಕ್ಷಂ ತು ಸುತರಾಂ ಮಹದಿತಿ ಭಾವಃ । ತತ್ ತಸ್ಮಾತ್ ॥ ೮೯-೯೦೨ ॥

**ವಿವರಣೆ-** ಪ್ರತಿಯೋಗಿಯ ಪ್ರಸಕ್ತಿ ಎಂದರೆ ಪ್ರತಿಯೋಗಿಯ ಸತ್ತ್ವಪ್ರತೀತಿ. ಅಂತಹ ಸತ್ತ್ವಪ್ರತೀತಿಯು ಪ್ರತಿಯೋಗಿಯ ಸತ್ತ್ವದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ ಎಂದು ಹಿಂದೆ ತಿಳಿಸಿದ್ದಾರೆ. ಆದ್ದರಿಂದ ನಿಷೇಧದಿಂದ ವಿಧಿಯು ಬಾಧಿತವಾಗುತ್ತದೆ ಎಂಬ ನಿನ್ನ ಪ್ರಕ್ರಿಯೆಯು ಜಗತ್ತಿನ ಸತ್ಯತ್ವವನ್ನೇ ಸಾಧಿಸಿಕೊಡುತ್ತದೆ. ಅದರಿಂದ ಮಿಥ್ಯಾತ್ವವು ನಾಶವನ್ನು ಹೊಂದುತ್ತದೆ. ಪರರಿಂದ ಪೂರ್ವವು ಬಾಧಿತವಾಗುತ್ತದೆ ಎಂಬ ನಿನ್ನ ಪ್ರಕ್ರಿಯೆಯು ನಿನ್ನ ಮಿಥ್ಯಾತ್ವ ವಚನಗಳಿಗೇ ಬಾಧವನ್ನು ತಂದುಕೊಡುತ್ತದೆ. ಆದ್ದರಿಂದ ನಿನ್ನ ಪ್ರಕ್ರಿಯೆ ಎಂಬ ಹೆಣ್ಣು ಹುಲಿಯು ನಿನಗೆ ಇಷ್ಟವಾದ ಆ ಪ್ರಕ್ರಿಯೆಯ ಫಲವೆಂದು ನೀನು ಭಾವಿಸುವ ಪ್ರಮೇಯಗಳನ್ನೇ ನಾಶಮಾಡುತ್ತದೆ ಎಂದು ಅಭಿಪ್ರಾಯ.

ಅತೋ ಘಟಾದಿರರ್ಥೋಽಯಂ ಪ್ರತ್ಯಕ್ಷೇಣ ಪ್ರದೃಶ್ಯತೇ ।
ತದ್ದೃಷ್ಟಂ ಪಾರಮಾರ್ಥ್ಯಂ ಚ ತಸ್ಯೈಮೇವೇತಿ ಸುಸ್ಥಿತಮ್ ॥ ೯೦೩ ॥

**ಅರ್ಥ**-ಅತಃ = ಆದ್ದರಿಂದ, ಅಯಂ ಘಟಾದಿರರ್ಥಃ = ಈ ಘಟಾದಿ ರೂಪವಾದ ಅರ್ಥವು, ಪ್ರತ್ಯಕ್ಷೇಣ = ಪ್ರತ್ಯಕ್ಷದಿಂದ, ಪ್ರದೃಶ್ಯತೇ = ಗೃಹೀತವಾಗುತ್ತದೆ, ತದ್ದೃಷ್ಟಂ = ಆ ಪ್ರತ್ಯಕ್ಷದಿಂದ ಗೃಹೀತವಾದ, ಪಾರಮಾರ್ಥ್ಯಂ ಚ = ಪಾರಮಾರ್ಥಿಕ ಸತ್ತ್ವವೂ ಸಹ, ತಸ್ತ್ಥಮೇವ = ಘಟಗತವಾದುದ್ದೇ, ಇತಿ = ಎಂದು, ಸುಸ್ಥಿತಮ್ = ದೃಢವಾಯಿತು.

**ಅನುವಾದ**- ಆದ್ದರಿಂದ ಈ ಘಟಾದಿ ಪದಾರ್ಥವು ಪ್ರತ್ಯಕ್ಷದಿಂದ ಗೃಹೀತವಾಗುತ್ತದೆ. ಪ್ರತ್ಯಕ್ಷದಿಂದ ದೃಷ್ಟವಾದ ಪಾರಮಾರ್ಥಿಕ ಸತ್ವವೂ ಸಹ ಘಟಗತವಾದುದು ಎಂಬುದೇ ದೃಢವಾಯಿತು.

**ಭಾವವಿಲಾಸಿನೀ**- ತತ್ಸ್ಥಂ ಘಟಾದಿಪದಾರ್ಥಸ್ಥಮ್ ॥ ೯೦೩ ॥

ಜಡೇ ನಾಜ್ಞಾನದೋಷೋಽಸ್ತಿ ನ ಚ ಕಾಚಾದಿ ದೃಶ್ಯತೇ ।
ಅಜ್ಞಾನೋನ್ಮೂಲನಂ ಸತ್ತ್ವಪ್ರತ್ಯಕ್ಷಂ ಪ್ರಬಲಂ ಹಿ ತತ್ ॥ ೯೦೪ ॥

ಅಪ್ರಾಮಾಣ್ಯಸ್ವತಸ್ತ್ವಂ ತು ತವಾಪಿ ನ ಮಮಾಪಿ ನ ।
ದೋಷಾಭಾವೇ ಪ್ರಮಾಣಸ್ಯ ಪ್ರಾಮಾಣ್ಯಂ ಸುಸ್ಥಮೇವ ತತ್ ॥ ೯೦೫ ॥

**ಅರ್ಥ**-ಜಡೇ = ಜಡದಲ್ಲಿ ಅಜ್ಞಾನದೋಷಃ ನಾಸ್ತಿ = ಅಜ್ಞಾನದೋಷವು ಇಲ್ಲ, ಕಾಚಾದಿ ಚ = ಇಂದ್ರಿಯದಲ್ಲಿ ಕಾಚಾದಿ ದೋಷಗಳು, ನ ದೃಶ್ಯತೇ = ಕಾಣುವುದಿಲ್ಲ. (ಇಲ್ಲ)

ಅಜ್ಞಾನೋನ್ಮೂಲನಂ = ಅಜ್ಞಾನನಾಶಕವಾದ, ತತ್ ಸತ್ತ್ವಪ್ರತ್ಯಕ್ಷಂ = ಆ ಸತ್ತ್ವಪ್ರತ್ಯಕ್ಷವು, ಪ್ರಬಲಂ ಹಿ = ಪ್ರಬಲವಾದುದಷ್ಟೆ.

ಅಪ್ರಾಮಾಣ್ಯಸ್ವತಸ್ತ್ವಂ ತು = ಅಪ್ರಾಮಾಣ್ಯಸ್ತತಸ್ತ್ವವಾದರೋ, ತವಾಪಿ ನ = ನಿನಗೂ ಇಲ್ಲ, ಮಮಾಪಿ ನ = ಮತ್ತು ನನಗೂ ಇಲ್ಲ. ದೋಷಾಭಾವೇ= ದೋಷವು ಇಲ್ಲದಿರುವಾಗ, ಪ್ರಮಾಣಸ್ಯ = ಪ್ರಮಾಣದ, ತತ್ ಪ್ರಾಮಾಣ್ಯಂ = ಆ ಪ್ರಾಮಾಣ್ಯವು, ಸುಸ್ಥಮೇವ = ದೃಢವಾದುದೇ ಆಗುತ್ತದೆ.

**ಅನುವಾದ**- ಜಡದಲ್ಲಿ ಅಜ್ಞಾನದೋಷವು ಇಲ್ಲ. ಇಂದ್ರಿಯದಲ್ಲಿ ಕಾಚಾದಿ ದೋಷವೂ ಇಲ್ಲ. ಅಜ್ಞಾನನಾಶಕವಾದ ಆ ಸತ್ತ್ವಪ್ರತ್ಯಕ್ಷವು ಪ್ರಬಲವಾಗಿದೆಯಷ್ಟೆ? ಅಪ್ರಾಮಾಣ್ಯಸ್ತತಸ್ತ್ವವಾದರೋ ನಿನಗೂ ಇಲ್ಲ ಮತ್ತು ನನಗೂ ಇಲ್ಲ. ದೋಷವು ಇಲ್ಲದಿರುವಾಗ ಪ್ರಮಾಣದ ಆ ಪ್ರಾಮಾಣ್ಯವು ದೃಢವಾಗಿಯೇ ಸಿದ್ಧಿಸುತ್ತದೆ.

**ಭಾವವಿಲಾಸಿನೀ**- ಘಟಾದಿವಿಷಯಕಪ್ರತ್ಯಕ್ಷಸ್ಯ ದೋಷಾಮೂಲತ್ವಂ ಪರರೀತ್ಯೈವ ಸಮರ್ಥಯತೇ॥ ಜಡ ಇತಿ ॥ ಅರ್ಥದೋಷೋ ಹಿ ಪರಮತೇ ಘಟಾದಾವತಿ- ದೂರತ್ವಾದಿದೋಷಾಭಾವಾತ್ ಅಜ್ಞಾನಾವೃತತ್ವಮೇವ ವಕ್ತವ್ಯಮ್ । ತಚ್ಚ ಪರೇಣ ಜಡೇ ನಾಂಗೀಕ್ರಿಯತೇ । ಅತೋ

ನಾರ್ಥದೋಷೋಽಸ್ತಿ। ಕಾಚಾದೀಂದ್ರಿಯದೋಷೋಽಪಿ ನಾಸ್ತಿ। ಅಜ್ಞಾನನಿವರ್ತಕಾಪರೋಕ್ಷವೃತ್ತೇಶ್ಚ ಪ್ರಕಾಶಸ್ಯ ತಮ ಇವ ನಾಜ್ಞಾನಂ ದೋಷತಯಾ ವಕ್ತುಂ ಶಕ್ಯತ ಇತಿ ಭಾವಃ । ತತ್ ತಸ್ಮಾತ್ ದೋಷಾಮೂಲತ್ವಾತ್ ।। ತತ್ ತಸ್ಮಾತ್ ಸ್ವತಃ ಪ್ರಾಮಾಣ್ಯಮತೇ ದೋಷಾಭಾವದಶಾಯಾಂ ಪ್ರಾಮಾಣ್ಯಸ್ಯ ನಿಯತತ್ವಾತ್ ।।೯೦೪- ೯೦೫।।

**ವಿವರಣೆ-** ಘಟಾದಿ ಪ್ರತ್ಯಕ್ಷಕ್ಕೆ ದೋಷಮೂಲತ್ವವಿಲ್ಲವೆಂದು ಪರರೀತಿಯಿಂದಲೇ ಇಲ್ಲಿ ಸಮರ್ಥಿಸುತ್ತಾರೆ. ಪರಮತರೀತ್ಯಾ ಘಟಾದಿಗಳಲ್ಲಿ ಅತಿದೂರತ್ವಾದಿ ದೋಷಗಳಿಲ್ಲವಾದ್ದರಿಂದ ಅಜ್ಞಾನಾವೃತತತ್ವವನ್ನೇ ದೋಷವೆಂದು ಹೇಳಬೇಕು. ಆದರೆ ಪರರು ಜಡದಲ್ಲಿ ಅಜ್ಞಾನಾವರಣರೂಪವಾದ ದೋಷವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಘಟಾದಿ ಪ್ರತ್ಯಕ್ಷಸ್ಥಳದಲ್ಲಿ ಅರ್ಥದೋಷವಿಲ್ಲ. ಕಾಚಾದಿ ಇಂದ್ರಿಯದೋಷವು ಇಲ್ಲವೆಂದು ಇಬ್ಬರಿಗೂ ಸಮ್ಮತವಾದುದು. ಅಜ್ಞಾನ ನಿವರ್ತಕವಾದ ಅಪರೋಕ್ಷ ವೃತ್ತಿಗಾದರೂ ಅಜ್ಞಾನವು ಪ್ರತಿಬಂಧಕವಾಗಿ ದೋಷವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಮತ್ತು ಪ್ರಾಮಾಣ್ಯಸ್ವತಸ್ತ್ವವನ್ನು ನೀನು ಅಂಗೀಕರಿಸುತ್ತೀಯೆ, ದೋಷಾಭಾವವು ಇಲ್ಲದೇ ಇರುವಾಗ ಪ್ರಮಾಣ್ಯವು ನಿಯತವಾಗಿದೆ ಎಂದು ಅಭಿಪ್ರಾಯ.

ಅಜ್ಞಾನೇನಾವೃತಬ್ರಹ್ಮಗೋಚರಾತ್ ಸ್ವೈರಿಣೀಸುತಾತ್ ।
ತೇಽಂತ್ಯಪ್ರತ್ಯಕ್ಷತೋ ವಿಶ್ವಪ್ರತ್ಯಕ್ಷಂ ಪ್ರಬಲಂ ಹಿ ನಃ ।। ೯೦೬ ।।

**ಅರ್ಥ**-ಅಜ್ಞಾನೇನಾವೃತಬ್ರಹ್ಮಗೋಚರಾತ್ = ಅಜ್ಞಾನದಿಂದ ಆವೃತವಾದ ಬ್ರಹ್ಮ-ವಿಷಯಕವಾದ, ಸ್ವೈರಿಣೀಸುತಾತ್ = ವೇಶ್ಯಾಪುತ್ರನಾದ, ತೇ = ನಿನ್ನ, ಅಂತ್ಯಪ್ರತ್ಯಕ್ಷತಃ = ಚರಮ ಸಾಕ್ಷಾತ್ಕಾರಕ್ಕಿಂತಲೂ, ನಃ = ನಮ್ಮ, ವಿಶ್ವಪ್ರತ್ಯಕ್ಷಂ = ವಿಶ್ವಪ್ರತ್ಯಕ್ಷವು, ಪ್ರಬಲಂ ಹಿ = ಪ್ರಬಲವಾಗುತ್ತದೆ.

**ಅನುವಾದ-** ಅಜ್ಞಾನದಿಂದ ಆವೃತವಾದ ಬ್ರಹ್ಮವಿಷಯಕವಾದ ಸ್ವೈರಿಣೀಪುತ್ರನಾದ ನಿನ್ನ ಚರಮಸಾಕ್ಷಾತ್ಕಾರಕ್ಕಿಂತಲೂ ನಮ್ಮ ವಿಶ್ವಪ್ರತ್ಯಕ್ಷವು ಪ್ರಬಲವಾದುದಷ್ಟೇ ?

**ಭಾವವಿಲಾಸಿನೀ–** ಪರಾಭಿಮತಬಾಧಕಪ್ರತ್ಯಕ್ಷಾದಪಿ ವಿಶ್ವಪ್ರತ್ಯಕ್ಷಸ್ಯೈವ ಪ್ರಾಬಲ್ಯಮುಪ-ಪಾದಯತಿ।। **ಅಜ್ಞಾನೇನೇತಿ** ।। ಅಜ್ಞಾನೇನಾವೃತಬ್ರಹ್ಮಗೋಚರಾದಿತ್ಯನೇನಾರ್ಥದೋಷ ಉಪಪಾದಿತೋ ಭವತಿ। ಸ್ವೈರಿಣೀಸುತಾತ್ ಪ್ರತ್ಯಕ್ಷಸಾಮಗ್ರೀ ಹಿ ಪ್ರಾತ್ಯಕ್ಷಿಕಜ್ಞಾನಸ್ಯ ಸ್ವಭಾವಮಾತಾ । ಬಾಧಕಪ್ರತ್ಯಕ್ಷಂ ತು ಶಬ್ದಸಾಮಗ್ರೀಜನ್ಯಮಿತಿ ಪರೇಣಾಂಗೀಕ್ರಿಯತೇ । ಅತಸ್ಸ್ವೈರಿಣೀಸುತಾದಿತ್ಯುಕ್ತಮ್ । ಅನೇನ ಕರಣಸ್ಯ ಶಬ್ದತಯಾ ಪ್ರತ್ಯಕ್ಷಾದಪಿ ದೌರ್ಬಲ್ಯಾಖ್ಯ-ದೋಷ ಉಕ್ತೋ ಭವತಿ ।। ೯೦೬ ।।

**ವಿವರಣೆ-** ಚರಮಸಾಕ್ಷಾತ್ಕಾರಕ್ಕೆ ಅಜ್ಞಾನಾವೃತನಾದ ಬ್ರಹ್ಮನು ವಿಷಯ ಎಂದು ಹೇಳಿರುವುದರಿಂದ, ಅರ್ಥದೋಷವನ್ನು ಹೇಳಿದಂತಾಗುತ್ತದೆ. ಪ್ರತ್ಯಕ್ಷ ಸಾಮಗ್ರಿಯು, ಪ್ರತ್ಯಕ್ಷಕ್ಕೆ ಸ್ವಾಭಾವಿಕವಾದ ತಾಯಿ. ಆದರೆ ನಿನ್ನ ಚರಮಸಾಕ್ಷಾತ್ಕಾರವು ಪ್ರತ್ಯಕ್ಷಸಾಮಗ್ರಿಯಿಂದ ಉಂಟಾಗುವುದಿಲ್ಲ. ಶಬ್ದಸಾಮಗ್ರಿಯಿಂದ ಉಂಟಾಗುತ್ತದೆ. ಆದ್ದರಿಂದ ಚರಮಸಾಕ್ಷಾತ್ಕಾರವು ಸ್ವೈರಿಣೀಪುತ್ರ ರೂಪವಾದುದು ಎಂದು ಹೇಳಿದ್ದಾರೆ. ಇದರಿಂದ ಚರಮಸಾಕ್ಷಾತ್ಕಾರಕ್ಕೆ ಶಬ್ದವು ಕರಣವಾದುದರಿಂದ ಶಬ್ದವು ಪ್ರತ್ಯಕ್ಷಕ್ಕಿಂತ ದುರ್ಬಲವಾದುದರಿಂದ ಕರಣಕ್ಕೆ ದೌರ್ಬಲ್ಯರೂಪದೋಷವು ಹೇಳಲ್ಪಡುತ್ತದೆ. ಹೀಗೆ ಅರ್ಥದೋಷ ಮತ್ತು ಕರಣದೋಷಗಳಿರುವುದರಿಂದ ಚರಮಸಾಕ್ಷಾತ್ಕಾರಕ್ಕಿಂತಲೂ ಈಗಿನ ವಿಶ್ವಪ್ರತ್ಯಕ್ಷವೇ ಪ್ರಬಲ ಎಂದು ಅಭಿಪ್ರಾಯ.

ಅಜ್ಞಾನನಾಶಿನೀ ಸಾಕ್ಷಾತ್ಕಾರವೃತ್ತಿಸ್ತವೈವ ಹಿ ।
ಸೈವ ಪ್ರಮಾ ಮಮ ಮತೇ ದೋಷೋಽಸ್ಯಾಸ್ತೇನ ತಚ್ಚ ನ ।
ನ ಹ್ಯಂಧಕಾರೋ ದೋಷಃ ಸ್ಯಾತ್ಕ್ರೂರಭಾಸ್ಕರತೇಜಸಃ ॥ ೯೦೭ ॥

**ಅರ್ಥ**-ಸಾಕ್ಷಾತ್ಕಾರವೃತ್ತಿಃ = ಅಪರೋಕ್ಷವೃತ್ತಿಯು, ತವೈವ = ನಿನ್ನ ಮತದಂತೆಯೇ, ಅಜ್ಞಾನನಾಶಿನೀಃ = ಅಜ್ಞಾನನಾಶಕವಷ್ಟೆ. ಮಮ ಮತೇ = ನನ್ನ ಮತದಲ್ಲಿ, ಸೈವ = ಆ ಅಪರೋಕ್ಷವೃತ್ತಿಯೇ, ಪ್ರಮಾ = ಪ್ರಮೆಯು. ತೇನ = ಆ ಕಾರಣದಿಂದ, ಅಸ್ಯಾಃ= ಅಪರೋಕ್ಷವೃತ್ತಿಗೆ, ತಚ್ಚ = ಅಜ್ಞಾನವಾದರೂ, ದೋಷೋ ನ = ದೋಷವಾಗುವುದಿಲ್ಲ. ಕ್ರೂರಭಾಸ್ಕರತೇಜಸಃ = ತೀಕ್ಷ್ಣವಾದ ಸೂರ್ಯನ ತೇಜಸ್ಸಿಗೆ, ಅಂಧಕಾರಃ = ಅಂಧಕಾರವು, ದೋಷಃ = ದೋಷವಾಗಿ, ನ ಸ್ಯಾತ್ ಹಿ = ಆಗುವುದಿಲ್ಲವಷ್ಟೆ?

**ಅನುವಾದ-** ನಿನ್ನ ಮತದಂತೆಯೇ ಘಟ ಸಾಕ್ಷಾತ್ಕಾರವೃತ್ತಿಯು ಅಜ್ಞಾನನಾಶಕವಷ್ಟೆ? ನನ್ನ ಮತದಲ್ಲಿ ಆ ಅಪರೋಕ್ಷವೃತ್ತಿಯೇ ಪ್ರಮಾರೂಪವಾದುದು. ಆದ್ದರಿಂದ ಅಪರೋಕ್ಷವೃತ್ತಿಗೆ ಅಜ್ಞಾನವು ದೋಷವಾಗುವುದಿಲ್ಲ. ತೀಕ್ಷ್ಣವಾದ ಸೂರ್ಯನ ತೇಜಸ್ಸಿಗೆ ಅಂಧಕಾರವು ದೋಷವಾಗುವುದಿಲ್ಲವಷ್ಟೆ. ಅಪರೋಕ್ಷವೃತ್ತಿಯು ಅಜ್ಞಾನನಾಶಕವಾದ್ದರಿಂದ ಮತ್ತು ಅಜ್ಞಾನಾವೃತವಲ್ಲವಾದ್ದರಿಂದ ಪ್ರಬಲವಾದುದು. ಆದ್ದರಿಂದ ಅದಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸಬೇಕೆಂದು ಅಭಿಪ್ರಾಯ.

**ಭಾವವಿಲಾಸಿನೀ**– ಸಾಕ್ಷಾತ್ಕಾರವೃತ್ತಿಃ ಘಟಾದಿಸಾಕ್ಷಾತ್ಕಾರವೃತ್ತಿಃ । ಹೀತ್ಯನೇನ ಪ್ರತಿಕರ್ಮವ್ಯವಸ್ಥಾಪ್ರಸಿದ್ಧಿಂ ಸೂಚಯತಿ । ಸೈವ ಘಟಾದಿವೃತ್ತಿರೇವ । ತೇನ ಅಜ್ಞಾನಾನಾವೃತವಿಷಯತ್ವೇನಾಜ್ಞಾನನಾಶಕತ್ವೇನ ಚ । ತದಜ್ಞಾನಮ್ । ತತ್ರ ದೃಷ್ಟಾಂತಮಾಹ – ನ ಹೀತಿ ॥ ೯೦೭ ॥

ತ್ವಯಾಽಪ್ಯಜ್ಞಾನನಾಶೇ ಹಿ ದೃಶೋ ಭ್ರಾಂತಿತ್ವಮುಚ್ಯತೇ ।
ತಸ್ಮಾದಜ್ಞಾನತೋ ದೋಷೋ ನ ವೃತ್ತೌ ನಾಪಿ ತೇ ದೃಶಿ ॥ ೯೦೮ ॥

ಕಾಚಾದಿರ್ನಾಕ್ಷದೋಷೋಽಸ್ತಿ ದೂರತ್ವಾಣುತ್ವಪೂರ್ವಕಃ ।
ನಾರ್ಥದೋಷೋಽಪಿ ವೃತ್ತೌ ಮೇ ಸನ್ನಿಕೃಷ್ಟಾರ್ಥದರ್ಶನೇ ॥ ೯೦೯ ॥

**ಅರ್ಥ-**ತ್ವಯಾಽಪಿ= ನಿನ್ನಿಂದಲೂ ಸಹ, ಅಜ್ಞಾನನಾಶೇ = ಅಜ್ಞಾನವು ನಾಶಹೊಂದಿದ ಮೇಲೆ, ದೃಶಃ = ಉಂಟಾಗುವ ಘಟಚೈತನ್ಯಕ್ಕೆ, ಭ್ರಾಂತಿತ್ವಮ್ = ಭ್ರಮತ್ವವು, ಉಚ್ಯತೇ = ಹೇಳಲ್ಪಡುತ್ತದೆ. ತಸ್ಮಾತ್ = ಆ ಕಾರಣದಿಂದ, ವೃತ್ತೌ = ವೃತ್ತಿಯಲ್ಲಿ, ಅಜ್ಞಾನತಃ = ಅಜ್ಞಾನದಿಂದ, ದೋಷಃ = ದೋಷವು, ನ = ಉಂಟಾಗುವುದಿಲ್ಲ ಅಪಿ = ಮತ್ತು, ತೇ ದೃಶಿ = ನಿನ್ನ ಚೈತನ್ಯದಲ್ಲಿಯೂ ಸಹ, ನ ದೋಷಃ = ದೋಷವಾಗುವುದಿಲ್ಲ. ಮೇ = ನನ್ನ ರೀತಿಯಲ್ಲಿ, ವೃತ್ತೌ = ವೃತ್ತಿಯಲ್ಲಿ, ಸನ್ನಿಕೃಷ್ಟಾರ್ಥದರ್ಶನೇ = ಸನ್ನಿಕೃಷ್ಟಾರ್ಥದ ಗ್ರಹಣವು ಉಂಟಾಗುವಾಗ, ಕಾಚಾದಿಃ = ಕಾಚಾದಿರೂಪವಾದ, ಅಕ್ಷದೋಷಃ = ಇಂದ್ರಿಯದೋಷವು, ನಾಸ್ತಿ = ಇಲ್ಲ. ದೂರತ್ವಾಣುತ್ವಪೂರ್ವಕಃ = ದೂರತ್ವ ಅಣುತ್ವ ಮೊದಲಾದ, ಅರ್ಥದೋಷೋಪಿ = ಅರ್ಥದೋಷಗಳೂ ಸಹ, ನ = ಇಲ್ಲ.

**ಅನುವಾದ-** ನೀನಾದರೋ ಅಜ್ಞಾನವು ನಾಶವಾದ ಮೇಲೆ ಅಭಿವ್ಯಕ್ತವಾಗುವ ಅಧಿಷ್ಠಾನಚೈತನ್ಯಕ್ಕೆ ಭ್ರಮತ್ವವನ್ನು ಹೇಳುತ್ತೀಯೆ. ಆದ್ದರಿಂದ ನಿನ್ನ ರೀತಿಯಲ್ಲಿ ವೃತ್ತಿಯ ವಿಷಯದಲ್ಲಾಗಲೀ ಅಥವಾ ಚೈತನ್ಯದ ವಿಷಯದಲ್ಲಾಗಲೀ ಅಜ್ಞಾನವು ದೋಷವಾಗುವುದಿಲ್ಲ. ನನ್ನ ಮತದಂತೆ ಸನ್ನಿಕೃಷ್ಟಾರ್ಥದ ಜ್ಞಾನವಾದ ವೃತ್ತಿಯಲ್ಲಿ ಕಾಚಾದಿರೂಪವಾದ ಇಂದ್ರಿಯದೋಷವಿಲ್ಲ. ದೂರತ್ವ ಮೊದಲಾದ ಅರ್ಥದೋಷಗಳೂ ಇಲ್ಲ

**ಭಾವವಿಲಾಸಿನೀ–** ಮಮ ಮತೇಽಜ್ಞಾನಾವೃತಚೈತನ್ಯಸ್ಯೈವ ಘಟಜ್ಞಾನತ್ವಾತ್ ಸದೋಷತ್ವಂ ಭವಿಷ್ಯತೀತ್ಯತ ಆಹ – **ತ್ವಯೇತಿ** ॥ ದೃಶಃ ಅಧಿಷ್ಠಾನಚೈತನ್ಯಸ್ಯ । ಘಟಾದ್ಯುಲ್ಲೇಖದಶಾಯಾಮಜ್ಞಾನಾವೃತತ್ವಾಭಾವಾತ್ ತ್ವದಭಿಮತಂ ಘಟಾದಿಜ್ಞಾನಮಪಿ ನಿರ್ದೋಷಮೇವೇತಿ ಭಾವಃ । ತಸ್ಮಾದೇಕಸ್ಯಾಜ್ಞಾನನಾಶಕತ್ವಾತ್ ಅಪರಸ್ಯಾಜ್ಞಾನನಾಶೋತ್ತರಕಾಲೀನತ್ವಾತ್ ॥ ॥ ೯೦೮-೯೦೯॥

**ವಿವರಣೆ-** ಅದ್ವೈತಿಗಳ ಮತದಲ್ಲಿ ವೃತ್ತಿಯು ಅಜ್ಞಾನಕ್ಕೆ ನಾಶಕ. ಆದ್ದರಿಂದ ವೃತ್ತಿಗೆ ಅಜ್ಞಾನವು ಪ್ರತಿಬಂಧಕವಾಗುವುದಿಲ್ಲ. ಪ್ರತಿಬಂಧಕವಾಗಿದ್ದರೆ, ವೃತ್ತಿಯೇ ಉಂಟಾಗಬಾರದಾಗಿದ್ದಿತು. ಅಧಿಷ್ಠಾನ ಚೈತನ್ಯವಾದರೋ ಅಜ್ಞಾನನಾಶೋತ್ತರ ಭಾವಿಯಾದುದು. ಅಜ್ಞಾನ ನಾಶವಾಗಿರುವುದರಿಂದ ಆ ಸಮಯದಲ್ಲಿ ಅಜ್ಞಾನವೇ ಇಲ್ಲ. ಆದ್ದರಿಂದ ಚೈತನ್ಯಕ್ಕೂ ಅಜ್ಞಾನವು ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

ವೃತ್ತಿನಾಶ್ಯಂ ಚ ತೇಽಜ್ಞಾನಂ ತ್ವದ್ರೀತ್ಯೈವ ನ ದೂಷಣಮ್ ।
ನಾವೃಣೀತೇ ಜಡಂ ವಿಶ್ವಂ ತದ್ವ್ಯಾತ್ತಿರಕುತೋಭಯಾ ॥ ೯೧೦ ॥

**ಅರ್ಥ**-ವೃತ್ತಿನಾಶ್ಯಂ = ವೃತ್ತಿನಾಶ್ಯವಾದ, ತೇ ಅಜ್ಞಾನಂ ಚ = ನಿನ್ನ ಅಜ್ಞಾನವಾದರೊ, ತ್ವದ್ರೀತ್ಯೈವ = ನಿನ್ನ ರೀತಿಯಿಂದಲೇ, ದೂಷಣಮ್ ನ = ದೋಷವಾಗುವುದಿಲ್ಲ. ಏಕೆಂದರೆ, ಅಜ್ಞಾನವು, ಜಡಂ ವಿಶ್ವಂ = ಜಡವಾದ ಪ್ರಪಂಚವನ್ನು, ನಾವೃಣೀತೇ = ಆವರಿಸಿಕೊಂಡಿರುವುದಿಲ್ಲ, ತತ್ = ದೋಷಮೂಲವಲ್ಲವಾದ್ದರಿಂದ, ವೃತ್ತಿಃ = ಘಟಾದಿ ವಿಷಯಕ ಅಪರೋಕ್ಷವೃತ್ತಿಯು, ಅಕುತೋಭಯಾ = ನಿರ್ಭಯವಾದುದು.

**ಅನುವಾದ**- ವೃತ್ತಿನಾಶ್ಯವಾದ ಅಜ್ಞಾನವು ನಿನ್ನ ರೀತಿಯಿಂದಲೇ ದೋಷವಾಗುವುದಿಲ್ಲ. ಅಜ್ಞಾನವು ಜಡವಾದ ವಿಶ್ವವನ್ನು ಆವರಿಸುವುದಿಲ್ಲ. ಆದ್ದರಿಂದ ವೃತ್ತಿಯಲ್ಲಿ ದೋಷವಮೂಲತ್ವವಿಲ್ಲ ಆದ್ದರಿಂದ, ಅಪರೋಕ್ಷವೃತ್ತಿಯು ನಿರ್ಭಯವಾಗಿದೆ (ಪ್ರಮಾಣವಾಗಿದೆ).

**ಭಾವವಿಲಾಸಿನೀ**– ತತ್ ತಸ್ಮಾತ್ ವೃತ್ತೇರ್ದೋಷಾಮೂಲತ್ವಾತ್ ॥ ೯೧೦ ॥

**ದೋಷಾದಾರೋಪವಾದೇ ತು ಹತಾ ತ್ವತ್ಪ್ರಕ್ರಿಯಾತಟಿತ್ ।**
**ದೋಷಂ ವಿನಾಪಿ ಚಾರೋಪೇ ಹತಾ ತ್ವತ್ಪ್ರಕ್ರಿಯಾತಟಿತ್ ॥ ೯೧೧ ॥**

**ಅರ್ಥ**-ದೋಷಾದಾರೋಪವಾದೇ = ದೋಷದಿಂದ ಆರೋಪವನ್ನು ಹೇಳುವುದಾದರೆ, ತ್ವತ್ಪ್ರಕ್ರಿಯಾತಟಿತ್ = ನಿನ್ನ ಪ್ರಕ್ರಿಯೆಯೆಂಬ ಮಿಂಚು, ಹತಾ = ಮರಣವನ್ನು ಹೊಂದುತ್ತದೆ. ದೋಷಂ ವಿನಾಪಿ = ದೋಷವಿಲ್ಲದಿದ್ದರೂ, ಆರೋಪೇ = ಆರೋಪವನ್ನು ಅಂಗೀಕರಿಸಿದರೆ, ತ್ವತ್ಪ್ರಕ್ರಿಯಾತಟಿತ್ = ಅಪ್ರಾಮಾಣ್ಯಂ ಪರತಃ ಎಂಬ ನಿನ್ನ ಪ್ರಕ್ರಿಯೆ ಎಂಬ ಮಿಂಚು, ಹತಾ = ನಾಶಹೊಂದುತ್ತದೆ.

**ಭಾವವಿಲಾಸಿನೀ**– ಏವಂ ಚಾತ್ರಾಪಿ ಪರಸ್ಯೋಭಯತಃ ಪಾಶಾರಜ್ಜುರಿತ್ಯಾಹ – **ದೋಷಾದಿತಿ॥** ಪ್ರಥಮಪಕ್ಷೇ ಘಟಾದ್ಯಪರೋಕ್ಷವೃತ್ತ್ಯಾ ಚೈತನ್ಯಾವರಕಾಜ್ಞಾನನಾಶೇ ಸತಿ ತದುತ್ತರಕಾಲಂ ನಿರ್ದೋಷಂ ತಚ್ಚೈತನ್ಯಂ ಘಟಮುಲ್ಲಿಖತೀತಿ ಪ್ರತಿಕರ್ಮವ್ಯವಸ್ಥಾಖ್ಯಾ ತ್ವತ್ಪ್ರಕ್ರಿಯಾ ತಟಿದ್ಧತೇತಿ ಯೋಜನಾ । ದ್ವಿತೀಯಪಕ್ಷೇತ್ವಪ್ರಾಮಾಣ್ಯಪರತಸ್ತ್ವಾಖ್ಯಾಹತೇತಿ ಯೋಜಯಿತ್ವಾ ಯೋಜನಾ ॥ ೯೧೧ ॥

**ವಿವರಣೆ**- ದೋಷದಿಂದ ಆರೋಪವನ್ನು ಅಂಗೀಕಾರ ಮಾಡಿದರೆ ಅಪರೋಕ್ಷವೃತ್ತಿಯಿಂದ ಚೈತನ್ಯಾವರಕವಾದ ಅಜ್ಞಾನವು ನಾಶ ಹೊಂದಿದ ಮೇಲೆ, ನಿರ್ದೋಷವಾದ ಆ ಚೈತನ್ಯವು ಘಟವನ್ನು ಗ್ರಹಿಸುತ್ತದೆ ಎಂಬ ಪ್ರತಿಕರ್ಮವ್ಯವಸ್ಥಾ ಎಂಬ ನಿನ್ನ ಪ್ರಕ್ರಿಯೆ ಎಂಬ ಮಿಂಚು ನಾಶವನ್ನು ಹೊಂದುತ್ತದೆ. ದ್ವಿತೀಯ ಪಕ್ಷದಲ್ಲಿ ಅಪ್ರಾಮಾಣ್ಯಪರತಸ್ತ್ವದ ಭಂಗವು ಬರುತ್ತದೆ ಎಂದು ಅಭಿಪ್ರಾಯ.

**ಉಪಜೀವ್ಯಂ ತು ಸರ್ವಸ್ಯ ವಿಶ್ವಪ್ರತ್ಯಕ್ಷಮೇವ ತೇ ।**
**ಸರ್ವೋಪಕಾರಿ ತದ್ಬಾಧಂ ಕಃ ಸುಧೀರಭಿಧಿತ್ಸತಿ ॥ ೯೧೨ ॥**

**ಅರ್ಥ**-ಸರ್ವಸ್ಯ = ಎಲ್ಲ ಪ್ರಮಾಣಗಳಿಗೂ, ವಿಶ್ವಪ್ರತ್ಯಕ್ಷಮೇವ = ವಿಶ್ವಪ್ರತ್ಯಕ್ಷವೇ, ತೇ = ನಿನ್ನ ರೀತಿಯಿಂದಲೇ, ಉಪಜೀವ್ಯಂ= ಉಪಜೀವ್ಯವಾದುದು. ಸರ್ವೋಪಕಾರಿ = ವಿಶ್ವಪ್ರತ್ಯಕ್ಷವು ಸರ್ವೋಪಕಾರಿಯಾದುದು, ಕಃ ಸುಧೀಃ = ಯಾವ ವಿವೇಕಿಯಾದವನು, ತದ್ಬಾಧಂ = ವಿಶ್ವಪ್ರತ್ಯಕ್ಷದ ಬಾಧವನ್ನು, ಅಭಿಧಿತ್ಸತಿ = ಹೇಳಲು ಬಯಸುತ್ತಾನೆ.

**ಅನುವಾದ**- ನಿನ್ನ ರೀತಿಯಿಂದಲೂ ವಿಶ್ವಪ್ರತ್ಯಕ್ಷವು ಸರ್ವಪ್ರಮಾಣಗಳಿಗೆ ಉಪಜೀವ್ಯವಾದುದು. ಅದು ವಿಶ್ವೋಪಕಾರಿಯೂ ಆಗಿದೆ. ಅಂತಹ ವಿಶ್ವಪ್ರತ್ಯಕ್ಷದ ಬಾಧವನ್ನು ಯಾವ ವಿವೇಕಿಯಾದವನು ಹೇಳಲು ಬಯಸುತ್ತಾನೆ ?

**ಭಾವವಿಲಾಸಿನೀ**– ಸರ್ವಸ್ಯ ವ್ಯಾಪ್ತಿಧರ್ಮಿಲಿಂಗಾದಿಗ್ರಾಹಕತಯಾಽನುಮಾನಸ್ಯ ಶಬ್ದಸ್ವರೂಪ-ತತ್ಪ್ರಾಮಾಣ್ಯಗ್ರಾಹಕತಯಾಽಽಗಮಸ್ಯ ಚೋಪಜೀವ್ಯಮಿತಿ ಸಂಬಂಧಃ । ಅಥವಾ ಸರ್ವಸ್ಯ ಸುರನರತಿರ್ಯಗಾದಿಜೀವಜಾತಸ್ಯಾಪೇಕ್ಷಿತರೂಪರಸಾದಿ ವಿಷಯಗ್ರಾಹಕತಯೋಪಜೀವ್ಯ-ಮಿತ್ಯರ್ಥಃ । ತದ್ಬಾಧಂ ತಸ್ಯ ಪ್ರತ್ಯಕ್ಷಸ್ಯ ಬಾಧಮ್ । ಅನುಮಾನಶಬ್ದಾದಿಪ್ರಮಾಣಾಸಂಭವೇನ ಪಾರಲೌಕಿಕಫಲಸ್ಯ ರಸಾದ್ಯಾಸ್ವಾದನೋಪಾಯಾ ಭಾವೇನೈಹಿಕಫಲಸ್ಯ ಚ ವಿನಾಶಾದಿತಿ ಭಾವಃ ॥ ೯೧೨ ॥

**ವಿವರಣೆ**- ವ್ಯಾಪ್ತಿ, ಪಕ್ಷ, ಲಿಂಗ, ಇವೆಲ್ಲವನ್ನೂ ಗ್ರಹಣ ಮಾಡುವುದರಿಂದ ಪ್ರತ್ಯಕ್ಷವು ಅನುಮಾನಕ್ಕೆ ಉಪಜೀವ್ಯವಾಗಿದೆ. ಶಬ್ದಸ್ವರೂಪವನ್ನೂ , ತತ್ಪ್ರಾಮಾಣ್ಯವನ್ನೂ ಗ್ರಹಣ ಮಾಡುವುದರಿಂದ ಶಬ್ದಕ್ಕೂ ಉಪಜೀವ್ಯವಾಗಿದೆ. ಅಥವಾ, ಸುರನರಾದಿ ಜೀವಸಮೂಹಕ್ಕೆ ಅಪೇಕ್ಷಿತವಾದ ರೂಪರಸಾದಿಗಳನ್ನು ಗ್ರಹಣ ಮಾಡುವುದರಿಂದ ಎಲ್ಲರಿಂದಲೂ ಉಪಜೀವ್ಯವಾಗಿದೆ. ಅಂತಹ ಪ್ರತ್ಯಕ್ಷಕ್ಕೆ ಬಾಧವನ್ನು ಹೇಳಿದರೆ ಐಹಿಕ ಫಲವಾಗಲೀ, ಪಾರತ್ರಿಕ ಫಲವಾಗಲೀ ನಾಶವನ್ನು ಹೊಂದುತ್ತದೆ ಎಂದು ಅಭಿಪ್ರಾಯ.

ನಿಷ್ಪ್ರಕಾರಂ ತವಾಧ್ಯಕ್ಷಮಖಂಡಾರ್ಥಾ ಚ ತೇ ಶ್ರುತಿಃ ।
ಕಸ್ಯ ವಾ ಬಾಧಕೇ ಸ್ಯಾತಾಂ ಸಾಧಕೇ ವಾ ವಿಚಾರಯ ॥ ೯೧೩ ॥

ಸತ್ತ್ವಸ್ಯಾಪ್ರತಿಷೇಧೇನ ತ್ರಿಕಾಲಾಸ್ಪರ್ಶನಾದಪಿ ।
ಅಖಂಡಾರ್ಥಪರತ್ವಾಚ್ಚ ತ್ರೇಧಾ ವಾಕ್ಯಂ ನ ಬಾಧಕಮ್ ।
ನಿಷ್ಪ್ರಕಾರಕರೂಪಂ ತೇ ಪ್ರತ್ಯಕ್ಷಂ ಚ ನ ಬಾಧಕಮ್ ॥ ೯೧೪ ॥

**ಅರ್ಥ**-ತವ ಅಧ್ಯಕ್ಷಂ = ನಿನಗೆ ಅಭಿಮತವಾದ ಪ್ರತ್ಯಕ್ಷವು, ನಿಷ್ಪ್ರಕಾರಂ = ನಿಷ್ಪ್ರಕಾರಕವಾದುದು, ತೇ ಶ್ರುತಿಃ ಚ = ನಿನಗೆ ಅಭಿಮತವಾದ ಶ್ರುತಿಯೂ ಸಹ, ಅಖಂಡಾರ್ಥಾ = ಅಖಂಡಾರ್ಥನಿಷ್ಠವಾದುದು. ಅಂತಹ ಪ್ರತ್ಯಕ್ಷ ಮತ್ತು ಶ್ರುತಿಗಳು, ಕಸ್ಯ ವಾ = ಯಾವುದಕ್ಕೆ, ಬಾಧಕೇ ಸ್ಯಾತಾಂ = ಬಾಧಕವಾಗುತ್ತವೆ, ವಾ = ಅಥವಾ, ಸಾಧಕೇ ಸ್ಯಾತಾಂ = ಸಾಧಕವಾಗುತ್ತವೆ ಎಂದು, ವಿಚಾರಯ = ವಿಚಾರ ಮಾಡು.

ಸತ್ತ್ವಸ್ಯಾಪ್ರತಿಷೇಧೇನ = ಸತ್ವವನ್ನು ಪ್ರತಿಷೇಧ ಮಾಡದೆ ಇರುವುದರಿಂದಲೂ, ತ್ರಿಕಾಲಾಸ್ಪರ್ಶನಾದಪಿ = ಕಾಲತ್ರಯವನ್ನು ಸ್ಪರ್ಶಮಾಡದೆ ಇರುವುದರಿಂದಲೂ, ಅಖಂಡಾರ್ಥಪರತ್ವಾಚ್ಚ = ಅಖಂಡಾರ್ಥ- ನಿಷ್ಠವಾದುದರಿಂದಲೂ, ತ್ರೇಧಾ= ಮೂರು ರೀತಿಯಲ್ಲಿ, ವಾಕ್ಯಂ = ಮಿಥ್ಯಾತ್ವಪ್ರತಿಪಾದಕವಾದ ವಾಕ್ಯವು, ನ ಬಾಧಕಮ್ = ಬಾಧಕವಾಗುವುದಿಲ್ಲ. ನಿಷ್ಪ್ರಕಾರಕರೂಪಂ = ನಿಷ್ಪ್ರಕಾರಕರೂಪವಾದ, ತೇ ಪ್ರತ್ಯಕ್ಷಂ ಚ = ನಿನ್ನ ಚರಮಸಾಕ್ಷಾತ್ಕಾರವೂ ಕೂಡ, ನ ಬಾಧಕಮ್ = ಯಾವುದಕ್ಕೂ ಬಾಧಕವಾಗುವುದಿಲ್ಲ.

**ಅನುವಾದ-** ನಿಷ್ಪ್ರಕಾರಕರೂಪವಾದ ನಿನ್ನ ಚರಮಸಾಕ್ಷಾತ್ಕಾರವೂ ಅಖಂಡಾರ್ಥನಿಷ್ಠವಾದ ನಿನ್ನ ಶ್ರುತಿಯೂ ಯಾವುದಕ್ಕೆ ಸಾಧಕವಾಗುತ್ತವೆ ಅಥವಾ ಯಾವುದಕ್ಕೆ ಬಾಧಕವಾಗುತ್ತದೆ ಎಂದು ವಿಚಾರ ಮಾಡು. ಸತ್ವವನ್ನು ಪ್ರತಿಷೇಧ ಮಾಡದೆ ಇರುವುದರಿಂದ, ಕಾಲತ್ರಯವನ್ನು ಸ್ಪರ್ಶಮಾಡದೆ ಇರುವುದರಿಂದ, ಮತ್ತು ಅಖಂಡಾರ್ಥಪರವಾಗಿರುವುದರಿಂದ ಮೂರು ರೀತಿಯಿಂದಲೂ ನಿನ್ನ ವಾಕ್ಯವು ಬಾಧಕವಾಗುವುದಿಲ್ಲ. ನಿನ್ನ ಚರಮಸಾಕ್ಷಾತ್ಕಾರವೂ ಕೂಡ ನಿಷ್ಪ್ರಕಾರಕವಾದುದರಿಂದ ಯಾವುದಕ್ಕೂ ಬಾಧಕವಾಗುವುದಿಲ್ಲ.

**ಭಾವವಿಲಾಸಿನೀ–** ಬಾಧಕತ್ವೇನ ಪರಾಭಿಮತಪ್ರತ್ಯಕ್ಷಾಗಮಯೋಃ ಪ್ರಾಕಾರಾಂತರೇಣಾಪಿ ದೌರ್ಬಲ್ಯಮಾಹ – **ನಿಷ್ಪ್ರಕಾರಕಮಿತಿ** ॥ ಏವಂ ಚ ವಿಶ್ವಪ್ರತ್ಯಕ್ಷಾಗ್ರೇ ತ್ವದೀಯಪ್ರತ್ಯಕ್ಷಾಗಮಯೋ-ರ್ಮುಖಮುದ್ರಣಮೇವೇತಿ ಭಾವಃ ॥ ಪರಾಗಮಸ್ಯ ಪುನಃ ಪ್ರಕಾರದ್ವಯೇನ ದೌರ್ಬಲ್ಯಂ ವದನ್ಪೂರ್ವಂ ಚ ಸಂಗೃಹ್ಣಾತಿ ॥ **ಸತ್ತ್ವಸ್ಯೇತಿ** ॥ ೯೧೩-೯೧೪ ॥

ಭಗ್ನದಂತಾಽಭವತ್ಪೂರ್ವಂ ದ್ವಿಧಾ ತೇ ಶ್ರುತಿಪನ್ನಗೀ ।
ಅಂತೇ ದಂತೋನ್ಮೂಲನೇನ ಸಾ ಭೂದಪ್ರತಿವಾದಿನೀ ॥ ೯೧೫ ॥

**ಅರ್ಥ**-ತೇ ಶ್ರುತಿಪನ್ನಗೀ = ನಿನ್ನ ಮಿಥ್ಯಾತ್ವಸಾಧಕ ಶ್ರುತಿರೂಪವಾದ ಸರ್ಪಿಣಿಯು ಮೊದಲು, ದ್ವಿಧಾ = ಎರಡು ರೀತಿಯಲ್ಲಿಯೂ, ಭಗ್ನದಂತಾ ಅಭವತ್ = ದಂತಭಂಗವನ್ನು ಹೊಂದಿತು. ಅಂತೇ = ಕೊನೆಯಲ್ಲಿ, ದಂತೋನ್ಮೂಲನೇನ = ದಂತವನ್ನೇ ಕಿತ್ತು ಹಾಕುವುದರಿಂದ, ಸಾ = ಆ ಮಿಥ್ಯಾತ್ವಶ್ರುತಿಯು, ಅಪ್ರತಿವಾದಿನೀ = ನಮಗೆ ಪ್ರತ್ಯುತ್ತರವನ್ನು ಹೇಳಲು ಅಸಮರ್ಥವಾಗಿ, ಅಭೂತ್ = ಆಯಿತು.

**ಅನುವಾದ-** ಮಿಥ್ಯಾತ್ವಸಾಧಕವಾದ ನಿನ್ನ ಶ್ರುತಿರೂಪವಾದ ಹೆಣ್ಣುಸರ್ಪವು ಸತ್ವವನ್ನಾಗಲೀ ಅಥವಾ ಕಾಲತ್ರಯವನ್ನಾಗಲೀ ಸ್ಪರ್ಶಮಾಡುವುದಿಲ್ಲವಾದ್ದರಿಂದ ಮೊದಲು ಎರಡು ದಂತಗಳನ್ನು ಮುರಿದುಕೊಂಡಿತು, ಈಗ ಅಖಂಡಾರ್ಥಪರವಾದ್ದರಿಂದ ನಾಸ್ತಿತ್ವಬೋಧವನ್ನು ಉಂಟುಮಾಡುವುದಿಲ್ಲ ಎಂದು ಹೇಳಿ ನಿಷೇಧರೂಪವಾದ ದಂತವನ್ನೇ ಕಿತ್ತುಹಾಕುವುದರಿಂದ ಸತ್ಯತ್ವವಾದಿಗಳಾದ ನಮಗೆ ಪ್ರತ್ಯುತ್ತರವನ್ನು ಹೇಳಲು ಅಸಮರ್ಥವಾಯಿತು.

**ಭಾವವಿಲಾಸಿನೀ–** ಸಾಹಿತ್ಯಮುದ್ರಯಾ ಶ್ರುತೇರ್ದೌರ್ಬಲ್ಯಂ ವರ್ಣಯತಿ ॥ **ಭಗ್ನೇತಿ ॥** ನಿಷೇಧಾಖ್ಯದಂತಮೂಲಸ್ಯೋನ್ಮೂಲನೇನ ಸತ್ತ್ವಕಾಲತ್ರಯಸ್ಪರ್ಶಾಕ್ಯಕೋಟೇರ್ಮೋಡನೇನ ಚ ಭಗ್ನದಂತೇತ್ಯುಕ್ತವಬ್‌ । ದಂತೋನ್ಮೂಲನೇನ ದಂತಸ್ಯ ನೇತಿ ನಿಷೇಧಸ್ಯ ಉನ್ಮೂಲನೇನಾಖಂಡಾರ್ಥವಾದಾಖ್ಯಪಾದರಸಸತ್ತ್ವಾತ್ ಸರ್ವಥಾಽಭಾವಸಂಪಾದನೇನ । ಸಾ ಶ್ರುತಿಪನ್ನಗೀ ಅಪ್ರತಿವಾದಿನೀ ಅಭೂತ್ । ಜಗನ್ನಿಷೇಧಕಸ್ಯೈಕಸ್ಯಾಪ್ಯಸಂಭವೇನ ಸತ್ಯತ್ವವಾದಿನಾಂ ಪ್ರತಿವಾದಿನೀ ನಾಭೂದಿತಿ ಭಾವಃ । ಲಜ್ಜಯೇತಿ ಧ್ವನಿಃ ॥ ೯೧೫ ॥

**ವಿವರಣೆ-** ಸಾಹಿತ್ಯಮುದ್ರೆಯಿಂದ ಇಲ್ಲಿ ಶ್ರುತಿಯ ದೌರ್ಬಲ್ಯವನ್ನು ವರ್ಣಿಸುತ್ತಾರೆ. ದಂತವನ್ನು ಮುರಿದುಕೊಂಡ ವನಿತೆಯು ನಾಚಿಕೆಯಿಂದ ಮಾತನಾಡದೇ ಇರುವಂತೆ ಮಿಥ್ಯಾತ್ವಶ್ರುತಿಯು ಪ್ರತ್ಯತ್ವವಾದಿಗಳ ಎದುರಿಗೆ ನಿರುತ್ತರವಾಗಿರುತ್ತದೆ ಎಂದು ಅಭಿಪ್ರಾಯ.

ಸಂದಿಗ್ಧಮೂಲಾ ಸಂದಿಗ್ಧರೂಪಾ ತೇಽಧ್ಯಕ್ಷಪನ್ನಗೀ ।
ದಂತಾತ್ಯಂತಾಭಾವಚಿಂತಾಕ್ರಾಂತಸ್ವಾಂತಾ ಬಿಲೇಽಪತತ್ ॥ ೯೧೬ ॥

**ಅರ್ಥ**-ಸಂದಿಗ್ಧಮೂಲಾ = ಬ್ರಹ್ಮಸ್ವರೂಪಮಾತ್ರ ಪರವಾದುದರಿಂದ ಮೂಲವಿಲ್ಲದ, ಸಂದಿಗ್ಧರೂಪಾ = ಮಿಥ್ಯಾತ್ವವಿಷಯದಲ್ಲಿ ಸಂದಿಗ್ಧರೂಪವಾದ, ತೇ = ನಿನ್ನ, ಅಧ್ಯಕ್ಷಪನ್ನಗೀ = ಚರಮಸಾಕ್ಷಾತ್ಕಾರವೆಂಬ ಹೆಣ್ಣು ಸರ್ಪವು, ದಂತಾತ್ಯಂತಾಭಾವಚಿಂತಾಕ್ರಾಂತಸ್ವಾಂತಾ = ದಂತವೇ ಇಲ್ಲ ಎಂಬ ಚಿಂತೆಗೆ ಒಳಗಾದ ಮನಸ್ಸುಳ್ಳದ್ದಾಗಿ, ಬಿಲೇ = ನಿನ್ನ ಹೃದಯ ಗುಹೆಯಲ್ಲಿ, ಅಪತತ್ = ಅಡಗಿಕೊಂಡಿತು.

**ಅನುವಾದ-** ಆರೋಪವು ಕೂಡುವುದಿಲ್ಲವಾದ್ದರಿಂದ ಸಂದಿಗ್ಧವಮೂಲವಾದ, ಬ್ರಹ್ಮಸ್ವರೂಪಮಾತ್ರ ವಿಷಯಕವಾದ್ದರಿಂದ ಮಿಥ್ಯಾತ್ವವಿಷಯದಲ್ಲಿ ಸಂದಿಗ್ಧರೂಪವಾದ ನಿನ್ನ ಅಧ್ಯಕ್ಷರೂಪವಾದ ಹೆಣ್ಣು ಸರ್ಪವು ನಿಷೇಧಪ್ರಕಾರತ್ವರೂಪ ದಂತಾಭಾವದ ಚಿಂತೆಗೊಳಗಾಗಿ ನಿನ್ನ ಹೃದಯ ಗುಹೆಯಲ್ಲಿ ಅಡಗಿಕೊಂಡಿತು.

**ಭಾವವಿಲಾಸಿನೀ–** ಶ್ರುತಿಂ ದೂಷಯಿತ್ವಾ ಪ್ರತ್ಯಕ್ಷಮಪಿ ಪೃಥಕ್ ದೂಷಯತಿ ॥ **ಸಂದಿಗ್ಧೇತಿ ॥** ಆರೋಪಾಸಂಭವಾತ್ಸಂದಿಗ್ಧಮೂಲಾ । ಬ್ರಹ್ಮಸ್ವರೂಪಮಾತ್ರಪರತ್ವಾತ್ಸಂದಿಗ್ಧರೂಪಾ । ದಂತಾತ್ಯಂತಾಭಾವಃ ನಾಸ್ತಿತ್ವಪ್ರಕಾರಾಖ್ಯದಂತಾತ್ಯಂತಾಭಾವಃ । ಬಿಲೇಽಪತತ್ । ಪ್ರತಿವಾದಿಹೃದಯಗುಹಾಯಾಮೇವ ನಿಲೀನೇತ್ಯರ್ಥಃ ॥ ೯೧೬ ॥

**ವಿವರಣೆ-** ಮಿಥ್ಯಾತ್ವಶ್ರುತಿಯನ್ನು ದೂಷಿಸಿ ಇಲ್ಲಿ ಚರಮಸಾಕ್ಷಾತ್ಕಾರವನ್ನು ದೂಷಿಸುತ್ತಾರೆ. 'ಮಾ ದರ್ಪಂ ಮಾಯಿ ಸರ್ಪಾಃ ಭಜತ ಭಜತ ತಾಸ್ತಾ ಗುಹಾ ದ್ರಾಗ್ ದ್ವಿಜಿಹ್ವಾಃ' ಎಂಬ ಮಧ್ವವಿಜಯದ ವಚನವನ್ನು ಇಲ್ಲಿ ಸ್ಮರಿಸಬಹುದು.

ವಿಶ್ವಪ್ರತ್ಯಕ್ಷನಾಗೇಂದ್ರೋ ದ್ವಿಜಿಹ್ವಮುಖಕೋಟಿಭಿಃ ।
ಅರ್ಥಾನನಂತಾಂಸ್ತತ್ತಾಮಪ್ಯಾಸ್ವಾದ್ಯ ದಿನೇ ದಿನೇ ॥ ೯೧೭ ॥

ಅಚ್ಛೇದ್ಯಕ್ರೂರದಂಷ್ಟ್ರೋಗ್ರೋ ರಿಪುಪಕ್ಷಭಯಂಕರಃ ।
ದಾಧರ್ತಿ ಜಗತೀಮೇತಾಂ ಯೋಽಧಸ್ತಾತ್ ಫಣಿಶಾಯಿನಃ ॥ ೯೧೮ ॥

**ಅರ್ಥ**-ವಿಶ್ವಪ್ರತ್ಯಕ್ಷನಾಗೇಂದ್ರಃ = ವಿಶ್ವಪ್ರತ್ಯಕ್ಷರೂಪವಾದ ಅದ್ಭುತ ಶೇಷನು, ದ್ವಿಜಿಹ್ವಮುಖಕೋಟಿಭಿಃ = ಪದಾರ್ಥವನ್ನು ಮತ್ತು ಅದರ ಸತ್ತ್ವವನ್ನು ವಿಷಯೀಕರಿಸುವ ಎರಡು ಜಿಹ್ವೆಗಳನ್ನುಳ್ಳ ಅನಂತ ಮುಖಗಳಿಂದ, ಅನಂತಾನ್ ಅರ್ಥಾನ್ = ಅನಂತವಾದ ಅರ್ಥಗಳನ್ನೂ, ತತ್ಸತ್ತಾಮಪಿ = ಅವುಗಳ ಸತ್ತ್ವವನ್ನೂ, ದಿನೇ ದಿನೇ = ಪ್ರತಿದಿನವೂ, ಆಸ್ವಾದ್ಯ = ಆಸ್ವಾದಿಸಿ,

ಅಚ್ಛೇದ್ಯಕ್ರೂರದಂಷ್ಟ್ರೋಗ್ರಃ = ಅಚ್ಛೇದ್ಯವಾದ ಮತ್ತು ಕ್ರೂರವಾದ ದಂಷ್ಟ್ರಗಳಿಂದ ಉಗ್ರನಾಗಿ, ರಿಪುಪಕ್ಷಭಯಂಕರಃ = ಶತ್ರುಪಕ್ಷಕ್ಕೆ ಭಯವನ್ನು ಉಂಟುಮಾಡುತ್ತಾ, ಏತಾಂ ಜಗತೀಂ = ಈ ಜಗತ್ತನ್ನು, ದಾಧರ್ತಿ = ಎತ್ತಿಹಿಡಿಯುತ್ತಾನೆ. ಯಃ = ಯಾವ ಅಂತಹ ಪ್ರತ್ಯಕ್ಷನಾಗೇಂದ್ರನು, ಫಣಿಶಾಯಿನಃ = ಫಣಿಶಾಯಿಯಾದ ಹರಿಗಿಂತ, ಅಧಸ್ತಾತ್ = ಕೆಳಗೇ ಇರುತ್ತಾನೆ.

**ಅನುವಾದ**- ವಿಶ್ವಪ್ರತ್ಯಕ್ಷರೂಪನಾದ ಶೇಷನು ಪದಾರ್ಥ ಮತ್ತು ತತ್ಸತ್ತ್ವವನ್ನು ವಿಷಯೀಕರಿಸುವ ಎರಡು ಜಿಹ್ವೆಗಳುಳ್ಳ ತನ್ನ ಅನಂತ ಮುಖಗಳಿಂದ ಅನಂತ ಪದಾರ್ಥಗಳನ್ನು ಮತ್ತು ತತ್ಸತ್ತ್ವಗಳನ್ನು ಪ್ರತಿದಿನವೂ ಆಸ್ವಾದಿಸಿ ಅಚ್ಛೇದ್ಯವಾದ ಮತ್ತು ಕ್ರೂರವಾದ ದಂಷ್ಟ್ರವುಳ್ಳವನಾಗಿ ರಿಪುಪಕ್ಷ ಭಯಂಕರನಾಗಿ ಈ ಜಗತ್ತನ್ನು ಎತ್ತಿ ಹಿಡಿದಿದ್ದಾನೆ. ಅಂತಹ ಪ್ರತ್ಯಕ್ಷಶೇಷನು ಫಣಿಶಾಯಿಯಾದ ಹರಿಗಿಂತ ಕೆಳಗೆ ಇದ್ದಾನೆ.

**ಭಾವವಿಲಾಸಿನೀ**- ಅಧುನಾ ವಿಶ್ವಪ್ರತ್ಯಕ್ಷಂ ಸಾಹಿತ್ಯಮುದ್ರಯಾ ಸ್ತೌತಿ ॥ **ವಿಶ್ವೇತಿ** ॥ ವಿಶ್ವಪ್ರತ್ಯಕ್ಷಮೇವನಾಗೇಂದ್ರಃ ಅದ್ಭುತಶೇಷಃ । ತದೇವದರ್ಶಯತಿ ॥ **ದ್ವಿಜಿಹ್ವಮುಖ-ಕೋಟಿಭಿರಿತಿ** ॥ ಕೋಟಿಪದಂ ಚಾನಂತ್ಯಸ್ಯೋಪಲಕ್ಷಣಮ್ । ಅನಂತಪದಾರ್ಥಾನಂತಾತ್ತತ್ತ್ವಸ್ಯ ಚ ವಿಷಯೀಕರಣಾತ್ ದ್ವಿಜಿಹ್ವತ್ವಮ್ । ಅನಂತಜೀವೇಷ್ವನಂತಾಕಾರತಯಾನಂತಪದಾರ್ಥಾನ್ ಪ್ರತ್ಯಭಿಮುಖತ್ವಾನ್ಮುಖಕೋಟಿಭಿರಿತ್ಯುಕ್ತಮ್ । ಜಿಹ್ವಾದ್ವಯಸ್ಯ ಕೃತ್ಯಮಾಹ – **ಅರ್ಥಾನಿತಿ** ॥ ಅರ್ಥೋಲ್ಲೇಖಃ ತತ್ಸತ್ತ್ವೋಲ್ಲೇಖಶ್ಚ ಘಟಸ್ಸನ್ಪಟಸ್ಸನ್ನಿತ್ಯಾದ್ಯನಂತಾಕಾರ ಜ್ಞಾನಮುಖಸ್ಥಿತಧರ್ಮ್ಯಂಶ ಧರ್ಮಾಂಶಾಖ್ಯಜಿಹ್ವಾದ್ವಯಕೃತ್ಯಮಿತ್ಯರ್ಥಃ । ದೋಷಾಮೂಲತ್ವೇನ ಪರೈರಚ್ಛೇದ್ಯಾಭಿಃ ಪರಾನಿಷ್ಟದಾತೃತ್ವೇನ ಕ್ರೂರಾಭಿಃ ತತ್ತಜ್ಞಾನಪ್ರಾಮಾಣ್ಯಾಖ್ಯದಂಷ್ಟ್ರಾಭಿರುಗ್ರಃ ದಾಧರ್ತಿ ಶೇಷ ಇವ ಮಿಥ್ಯಾತ್ವಾಖ್ಯಾಧಃ ಪಾತೇ ಪರಿಹೃತ್ಯ ರಕ್ಷತಿ । ಯಃ ಪ್ರತ್ಯಕ್ಷಾಖ್ಯನಾಗೇಂದ್ರಶ್ಶೇಷ ಇವ ಫಣಿಶಾಯಿನೋ ಹರೇರಧಸ್ತಾದೇವ । ಔಪನಿಷದತ್ವಾದಧೋಕ್ಷಜತ್ವಾಚ್ಚ ತಮೇಕಂ ನ ವಿಷಯೀಕರೋತಿ । ತಸ್ಮಾದಧೋ ವಿದ್ಯಮಾನಂ ಜಗತ್ಸರ್ವಂ ವಿಷಯೀಕರೋತೀತಿ ಭಾವಃ । ಶೇಷವಿಷಯೇತು ಸ್ಪಷ್ಟಮ್ ॥ ೯೧೭-೯೧೮ ॥

**ವಿವರಣೆ-** ಈಗ ಸಾಹಿತ್ಯಮುದ್ರೆಯಿಂದ ವಿಶ್ವಪ್ರತ್ಯಕ್ಷವನ್ನು ಪ್ರಶಂಸಿಸಿರುತ್ತಾರೆ. ವಿಶ್ವಪ್ರತ್ಯಕ್ಷವೇ ನಾಗೇಂದ್ರ ಎಂದರೆ ಅದ್ಭುತನಾದ ಶೇಷ. 'ಮುಖಕೋಟಿಭಿಃ' ಎಂಬಲ್ಲಿ ಕೋಟಿಪದವು ಅನಂತಕ್ಕೆ ಉಪಲಕ್ಷಕವಾಗಿದೆ. ಅನಂತ ಪದಾರ್ಥಗಳನ್ನೂ, ಅವುಗಳ ಸತ್ತ್ವವನ್ನೂ, ವಿಷಯೀಕರಿಸುವುದೇ ಎರಡು ನಾಲಿಗೆಗಳು. ಅನಂತ ಜೀವರಲ್ಲಿ ಅನಂತಾಕಾರವನ್ನು ಹೊಂದಿ ಅನಂತ ಪದಾರ್ಥಗಳನ್ನು ಕುರಿತು ಅಭಿಮುಖವಾಗಿರುವುದರಿಂದ ಮುಖಕೋಟಿಗಳು ಎಂದು ಹೇಳಲ್ಪಟ್ಟಿದೆ. ಎರಡು ನಾಲಿಗೆಗಳ ಪ್ರಯೋಜನವೆಂದರೆ ಅರ್ಥವನ್ನೂ ಮತ್ತು ಅರ್ಥಸತ್ವವನ್ನೂ ಉಲ್ಲೇಖಿಸುವುದು. ಎಂದರೆ, ಘಟಃ ಸನ್ ಪಟಃ ಸನ್ನಿತ್ಯಾದಿ ಅನಂತಾಕಾರವುಳ್ಳ ಜ್ಞಾನಮುಖದಲ್ಲಿರುವ ಧರ್ಮ್ಯಂಶ ಮತ್ತು ಧರ್ಮದ ಅಂಶವನ್ನು ವಿಷಯೀಕರಿಸುವುದು ಎಂದು ಅಭಿಪ್ರಾಯ. ಈ ವಿಶ್ವಪ್ರತ್ಯಕ್ಷವು ದೋಷಮೂಲ ವಲ್ಲವಾದ್ದರಿಂದ ಶತ್ರುಗಳಿಂದ ಅಚ್ಛೇದ್ಯವಾಗಿದೆ. ಪರರಿಗೆ ಅನಿಷ್ಟವನ್ನು ಉಂಟು ಮಾಡುವುದರಿಂದ ಕ್ರೂರವಾಗಿದೆ. ಅಂತಹ ದಂಷ್ಟ್ರಗಳು ಎಂದರೆ ತತ್ತಜ್ಞಾನಪ್ರಾಮಾಣ್ಯಗಳು ಎಂದು ಅರ್ಥ. ಅಂತಹ ದಂಷ್ಟ್ರಗಳನ್ನು ಹೊಂದಿ ಉಗ್ರನಾಗಿ ಜಗತ್ತನ್ನು ಎತ್ತಿ ಹಿಡಿದಿದ್ದಾನೆ ಎಂದರೆ, ಮಿಥ್ಯಾತ್ವರೂಪವಾದ ಅಧಃಪತನವನ್ನು ಪರಿಹರಿಸಿ ರಕ್ಷಿಸುತ್ತಾನೆ ಎಂದು ಅರ್ಥ. ಪ್ರತ್ಯಕ್ಷರೂಪನಾದ ನಾಗೇಂದ್ರನು ಹರಿಯ ಕೆಳಗೆ ಇದ್ದಾನೆ ಎಂದು ಹೇಳಿದರೆ ಜಗತ್ತು ಮಾತ್ರ ಪ್ರತ್ಯಕ್ಷಕ್ಕೆ ವಿಷಯವಾಗುತ್ತದೆ ಹರಿಯು ಪ್ರತ್ಯಕ್ಷಕ್ಕೆ ದೂರನಾದವನು, ಆದ್ದರಿಂದ ಅವನು ಅಧೋಕ್ಷಜನೆಂದು ಕರೆಸಿಕೊಳ್ಳಲ್ಪಡುತ್ತಾನೆ ಎಂದು ಅಭಿಪ್ರಾಯ. ಹೀಗೆ ಶೇಷನ ದೃಷ್ಟಾಂತದಿಂದ ವಿಶ್ವಪ್ರತ್ಯಕ್ಷವನ್ನು ಇಲ್ಲಿ ಪ್ರಶಂಸೆ ಮಾಡಿದ್ದಾರೆ.

ಭಕ್ತಾನುಕಂಪಯಾ ಸ್ವಾಂತಸ್ಸೂಪವಿಷ್ಟಂ ನಿಶಾತ್ಯಯೇ ।
ಛತ್ರೀಭೂತಫಣಾರತ್ನಶೋಭೋದ್ಭೂತದೃಶೇಕ್ಷತೇ ॥ ೯೧ ॥

**ಅರ್ಥ**-ನಿಶಾತ್ಯಯೇ = ದೈನಂದಿನ ಪ್ರಳಯದ ರಾತ್ರಿಯು ಕಳೆಯುತ್ತಿರಲು, ಸ್ವಾಂತಸ್ಸು= ತನ್ನ ಮನಸ್ಸುಗಳಲ್ಲಿ, ಭಕ್ತಾನುಕಂಪಯಾ = ಭಕ್ತರ ಮೇಲಿನ ಅನುಕಂಪದಿಂದ, ಸೂಪವಿಷ್ಟಂ= ಚೆನ್ನಾಗಿ ಕುಳಿತಿರುವ ಹರಿಯನ್ನು, ಛತ್ರೀಭೂತಫಣಾರತ್ನ-ಶೋಭೋದ್ಭೂತದೃಶಾ= ಛತ್ರದಂತಿರುವ ತನ್ನ ಪಣಗಳ ರತ್ನಗಳ ಕಾಂತಿಯಿಂದ ಉಂಟಾದ ಚಕ್ಷುಸ್ಸಿನಿಂದ, ಈಕ್ಷತೇ= ನೋಡುತ್ತಾನೆ.

**ಅನುವಾದ-** ದೈನಂದಿನ ಪ್ರಳಯವು ಕಳೆದ ಮೇಲೆ ತನ್ನ ಮನಸ್ಸಿನಲ್ಲಿ ಭಕ್ತಾನುಕಂಪದಿಂದ ಚೆನ್ನಾಗಿ ಉಪವಿಷ್ಟನಾದ ಹರಿಯನ್ನು ಛತ್ರದಂತಿರುವ ತನ್ನ ಫಣಗಳ ರತ್ನಗಳ ಶೋಭೆಯಿಂದ ಅಲಂಕೃತವಾದ ದೃಷ್ಟಿಯಿಂದ ನೋಡುತ್ತಾನೆ.

**ಭಾವವಿಲಾಸಿನೀ-** ನಿಶಾತ್ಯಯೇ ಶ್ರವಣಮನನಾದಿನಾಽಽವರಕಾಜ್ಞಾನಾಪಗಮೇ । ದೈನಂದಿನ-ರಾತ್ರ್ಯಪಗಮ ಇತಿ ಧ್ವನಿಃ । ಸ್ವಾಂತಸ್ಸ್ವೇನ ದೃಶ್ಯಮಾನಧ್ಯೇಯಪ್ರತಿಮಾಂತಃ । ಮಂಡಲೀಭೂತ-

ಸ್ವಾಂಗಮಧ್ಯ ಇತಿ ಧ್ವನಿಃ । ಸೂಪವಿಷ್ಟಂ ಸಮ್ಯಕ್ಸನ್ನಿಹಿತಮ್ । ಶಯನಂ ವಿಹಾಯ ಸೃಷ್ಟ್ಯರ್ಥಮುಪವಿಷ್ಟಮಿತಿ ಧ್ವನಿಃ । ಛತ್ರೀಭೂತಾಃ ಛತ್ರವದುದ್ಬುದ್ಧಾಃ ಫಣಾಃ ನಾನಾಶಾಖೋಕ್ತಸ್ವಧ್ಯಾತಗುಣದರ್ಶನಾಯ ವಿಸ್ತೃತನಾನಾಶಾಖೋಕ್ತಗುಣಧ್ಯಾನಾಖ್ಯಾ-ವಸ್ಥಾವಿಶೇಷಾಃ । ತಾಸುವಿದ್ಯಮಾನಾನಿ ರತ್ನಾನಿ ವೈರಾಗ್ಯಭಕ್ತಿಪರಿಚರ್ಯಾದೀನಿ । ತೇಷಾಂ ಶೋಭಯಾ ಫಲಾನಪೇಕ್ಷತ್ವ ದೃಢತ್ವಾದಿಕಾಂತ್ಯಾ ಉದ್ಭೂತದೃಶಾ ಉದ್ಭೂತಯಾ ದೃಶಾ ವಿಷಯೀಕರಣಶಕ್ತ್ಯಾ । ಈಕ್ಷತೇ ಅಧೋಕ್ಷಜಮಪಿ ತಂ ಸಾಕ್ಷಾತ್ಕರೋತಿ । ಶೇಷವಿಷಯೇತು ಸ್ಪಷ್ಟಮೇವ । ಪ್ರತ್ಯಕ್ಷಸ್ಯ ವಿಶ್ವವಿಷಯಿತ್ವಂ ಸರ್ವದಾಽಸ್ತಿ ಭಗವದ್ವಿಷಯಿತ್ವಂ ತು ಸಾಧನ- ಸಾಮಗ್ರೀಸಂಪತ್ತಾವೇವ ಸ್ಯಾತ್ । ನ ತು ಸರ್ವದಾ । ತಸ್ಮಾದ್ವಿಶ್ವಸತ್ಯತ್ವೇ ಸರ್ವೇಷಾಂ ಪ್ರತ್ಯಕ್ಷಂ ಪ್ರಮಾಣಂ ಭಗವತಸ್ಸಗುಣತ್ವೇ ಸಾಕಾರತ್ವೇ ಸರ್ವೋತ್ತಮತ್ವೇ ಚ ಜ್ಞಾನಿಪ್ರತ್ಯಕ್ಷಮೇವ ಪ್ರಮಾಣಮಿತಿ ಭಾವಃ ॥ ೯೧೯ ॥

**ವಿವರಣೆ-** ಈಗ ಅಜ್ಞಪ್ರತ್ಯಕ್ಷಕ್ಕೆ ಹರಿಯು ವಿಷಯನಾಗದಿದ್ದರೂ ಜ್ಞಾನಿಪ್ರತ್ಯಕ್ಷಕ್ಕೆ ಹರಿಯು ವಿಷಯನಾಗುತ್ತಾನೆಂದು ಹೇಳಿ ಜ್ಞಾನಿಪ್ರತ್ಯಕ್ಷವನ್ನು ಸ್ತೋತ್ರ ಮಾಡುತ್ತಾರೆ. 'ನಿಶಾತ್ಯಯೇ' ಎಂದರೆ ಶ್ರವಣ ಮನನಾದಿಗಳಿಂದ ಆವರಕವಾದ ಅಜ್ಞಾನವು ನಾಶವನ್ನು ಹೊಂದುತ್ತಿರಲು ಎಂದು ಧ್ವನಿ. ದೈನಂದಿನ ಪ್ರಳಯದ ರಾತ್ರಿಯು ಕಳೆದ ಮೇಲೆ ಎಂದು ಅರ್ಥ. 'ಸ್ವಾಂತಃ' ಎಂದರೆ ತಾನು ನೋಡುತ್ತಿರುವ ಪ್ರತಿಮೆಯ ಒಳಗೆ ಎಂದು ಅರ್ಥ. ಮಂಡಲಾಕಾರವಾದ ತನ್ನ ಶಯ್ಯದ ಮಧ್ಯದಲ್ಲಿ ಎಂದು ಧ್ವನಿ. 'ಸೂಪವಿಷ್ಟಂ' ಎಂದರೆ ಚೆನ್ನಾಗಿ ಸನ್ನಿಹಿತನಾದ ಎಂದು ಅರ್ಥ. ಯೋಗನಿದ್ರೆಯಿಂದ ಎದ್ದು ಸೃಷ್ಟಿಗೋಸ್ಕರವಾಗಿ ಉಪವಿಷ್ಟನಾದಂತಹ ಎಂದು ಧ್ವನಿ. 'ಛತ್ರೀಭೂತ' ಎಂದರೆ ಛತ್ರದಂತೆ ವಿಸ್ತಾರವಾದ ಎಂದು ಅರ್ಥ. 'ಫಣ' ಎಂದರೆ ನಾನಾ ಶಾಖೆಗಳಲ್ಲಿ ಹೇಳಲ್ಪಟ್ಟ ಮತ್ತು ತನ್ನಿಂದ ಧ್ಯಾನಮಾಡಲ್ಪಟ್ಟ ಗುಣಗಳ ದರ್ಶನಕ್ಕೋಸ್ಕರವಾಗಿ ತನ್ನಿಂದ (ಜ್ಞಾನಿಯಿಂದ) ಮಾಡಲ್ಪಟ್ಟ ನಾನಾ ಧ್ಯಾನಾವಸ್ಥಾವಿಶೇಷಗಳು ಎಂದು ಧ್ವನಿ. ಅವುಗಳಲ್ಲಿರುವ ರತ್ನಗಳೆಂದರೆ ವೈರಾಗ್ಯ, ಭಕ್ತಿ ಮತ್ತು ಸೇವಾದಿಗಳು. ಅವುಗಳ ಶೋಭೆಯೆಂದರೆ ಫಲಾಪೇಕ್ಷಾರಾಹಿತ್ಯ, ದೃಢತ್ವ ನಿರಂತರತ್ವ ಮೊದಲಾದವುಗಳು. ಅವುಗಳಿಂದ ಉದ್ಭೂತವಾದ ದರ್ಶನ ಎಂದರೆ ವಿಷಯೀಕರಣ ಶಕ್ತಿ. ಆ ಶಕ್ತಿಯಿಂದ ಈಕ್ಷತೇ ಎಂದರೆ ಅಧೋಕ್ಷಜನನ್ನು ಸಾಕ್ಷಾತ್ಕರಿಸಿಕೊಳ್ಳುತ್ತದೆ ಅಥವಾ ವಿಷಯೀಕರಿಸುತ್ತದೆ ಎಂದು ಅರ್ಥ. ಶೇಷನ ವಿಷಯದಲ್ಲಿ ಈ ಶಬ್ದಗಳು ಸ್ಪಷ್ಟವಾದ ಅರ್ಥವನ್ನೇ ಕೊಡುತ್ತದೆ. ಪ್ರತ್ಯಕ್ಷಕ್ಕೆ ಸರ್ವದಾ ವಿಶ್ವವಿಷಯತ್ವವು ಇದೆ. ಭಗವದ್ವಿಷಯತ್ವವು ಮಾತ್ರ ಸಾಧನಸಂಪತ್ತಿಯು ಪೂರ್ಣವಾದ ಮೇಲೆಯೇ ಉಂಟಾಗುತ್ತದೆ. ಯಾವಾಗಲೂ ಇರುವುದಿಲ್ಲ. ಆದ್ದರಿಂದ ವಿಶ್ವಸತ್ಯತ್ವವಿಷಯದಲ್ಲಿ ಎಲ್ಲರ ಪ್ರತ್ಯಕ್ಷವೂ ಪ್ರಮಾಣ. ಹರಿಯ ಸಗುಣತ್ವ, ಸಾಕಾರತ್ವ ಮತ್ತು ಸರ್ವೋತ್ತಮತ್ವದ ವಿಷಯದಲ್ಲಿ ಜ್ಞಾನಿಪ್ರತ್ಯಕ್ಷವೇ ಪ್ರಮಾಣ ಎಂದು ಅಭಿಪ್ರಾಯ.

**ಕಿಂಚ ತೇ ಬ್ರಹ್ಮದೃಕ್ ಚೈಕವಿಜ್ಞಾನೇನಾಖಿಲಸ್ಯ ಚ ।**
**ವಿಜ್ಞಾನಂ ಕಿಲ ತದ್‌ಬ್ರಹ್ಮವಿಜ್ಞಾನಂ ಸರ್ವಸಾಧಕಮ್ ।**
**ಅತೋಽಪ್ಯಬಾಧಿತಂ ವಿಶ್ವಮಿದಮಾಸೀದನಾಕುಲಮ್ ॥ ೯೨೦ ॥**

**ಅರ್ಥ**-ಕಿಂಚ = ಮತ್ತು, ತೇ ಬ್ರಹ್ಮದೃಕ್ = ನಿನ್ನ ಬ್ರಹ್ಮಜ್ಞಾನವು, ಏಕವಿಜ್ಞಾನೇನ = ಏಕಜ್ಞಾನದಿಂದ, ಅಖಿಲಸ್ಯ ವಿಜ್ಞಾನಂ ಕಿಲ = ಸರ್ವವಿಜ್ಞಾನವಷ್ಟೆ. ತತ್= ಆದ್ದರಿಂದ, ಬ್ರಹ್ಮ ವಿಜ್ಞಾನಂ= ಆ ಬ್ರಹ್ಮಜ್ಞಾನವು, ಸರ್ವಸಾಧಕಮ್= ಎಲ್ಲ ಪದಾರ್ಥಗಳ ಸತ್ತ್ವಕ್ಕೂ ಸಾಧಕವೇ ಆಗಿದೆ. ಅತೋಽಪಿ= ಆದ್ದರಿಂದಲೂ, ಇದಮ್ ವಿಶ್ವಂ= ಈ ವಿಶ್ವವು, ಅಬಾಧಿತಂ= ಬಾಧಿತವಲ್ಲವಾದ್ದರಿಂದ, ಅನಾಕುಲಮ್= ನಿರಾತಂಕವಾಗಿ, ಆಸೀತ್= ಆಯಿತು.

**ಅನುವಾದ- ಮತ್ತು ನಿನ್ನ ಬ್ರಹ್ಮಜ್ಞಾನವೆಂದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವಷ್ಟೆ? ಆದ್ದರಿಂದ ಆ ಬ್ರಹ್ಮಜ್ಞಾನವು ಸರ್ವಕ್ಕೂ ಸಾಧಕವೇ ಆಗುತ್ತದೆ. ಆದ್ದರಿಂದ ಅಬಾಧಿತವಾದ ಈ ವಿಶ್ವವು ನಿರಾತಂಕವಾಯಿತು.**

**ಭಾವವಿಲಾಸಿನೀ- ಯತ್ ಯಸ್ಮಾತ್ । ತತ್ರ ದೃಷ್ಟಾಂತಮಾಹ –ಮಹಾದಂಡೇತಿ ॥ ೯೨೦ ॥**

**ವಿವರಣೆ**- ಪ್ರಕಾರಾಂತರದಿಂದ ವಿಶ್ವಕ್ಕೆ ಅಬಾಧ್ಯತ್ವವನ್ನು ಸಾಧಿಸುತ್ತಾರೆ. ಅದ್ವೈತಿಗಳಿಗೆ ಬ್ರಹ್ಮಜ್ಞಾನವೆಂದರೆ ಏಕವಿಜ್ಞಾನದಿಂದ ಸರ್ವವಿಜ್ಞಾನ. ಬ್ರಹ್ಮಜ್ಞಾನವು ಸರ್ವಜ್ಞಾನ ರೂಪವಾದ್ದರಿಂದ ಬ್ರಹ್ಮನನ್ನು ಸಾಧಿಸಿಕೊಡುವಂತೆ ಸರ್ವವನ್ನೂ ಸಾಧಿಸಿಕೊಡುತ್ತದೆ. ಆದ್ದರಿಂದ ಜಗತ್ತು ಅಬಾಧ್ಯವಾದುದು ಎಂದು ಅಭಿಪ್ರಾಯ.

**ಅಂತ್ಯಪ್ರಮಾಯಾಂ ತದ್‌ಬ್ರಹ್ಮಸಮಬೋಧ್ಯತ್ವತೋ ಜಗತ್ ।**
**ತಸ್ಯಾಮಬಾಧ್ಯತ್ವತೋ ವಾ ನಿಷ್ಪ್ರಕಾರಕತಾಮತೇ ।**
**ಬ್ರಹ್ಮವತ್‌ಪರಮಾರ್ಥಂ ಸ್ಯಾದಿತಿ ಸರ್ವಂ ಮನೋರಮಮ್ ॥ ೯೨೧ ॥**

**ಅರ್ಥ**-ತತ್ = ಆದ್ದರಿಂದ, ಅಂತ್ಯಪ್ರಮಾಯಾಂ = ಚರಮಸಾಕ್ಷಾತ್ಕಾರದಲ್ಲಿ, ಬ್ರಹ್ಮಸಮಬೋಧ್ಯತ್ವತಃ = ಬ್ರಹ್ಮನಿಗೆ ಸಮಾನವಾಗಿ ಬೋಧ್ಯವಾಗುವುದರಿಂದ, ವಾ = ಅಥವಾ, ನಿಷ್ಪ್ರಕಾರಕತಾಮತೇ = ಚರಮಸಾಕ್ಷಾತ್ಕಾರವು ನಿಷ್ಪ್ರಕಾರಕ ಎಂಬ ಮತದಲ್ಲಿ, ತಸ್ಯಾಂ = ಚರಮವೃತ್ತಿರೂಪವಾದ ಸಾಕ್ಷಾತ್ಕಾರದಲ್ಲಿ, ಅಬಾಧ್ಯತ್ವತಃ = ಬಾಧ್ಯವಾಗದೇ ಇರುವುದರಿಂದ, ಬ್ರಹ್ಮವತ್ = ಬ್ರಹ್ಮನಂತೆ, ಪರಮಾರ್ಥಂ ಸ್ಯಾತ್ = ಪಾರಮಾರ್ಥಿಕವೇ ಆಗುತ್ತದೆ, ಇತಿ = ಎಂದು, ಸರ್ವಂ = ಎಲ್ಲವೂ, ಮನೋರಮಮ್ = ಮನೋಹರವಾಯಿತು.

**ವಿವರಣೆ**- 'ಜಗತ್ ಪರಮಾರ್ಥಂ ಅಂತ್ಯಪ್ರಮಾಯಾಂ ಬ್ರಹ್ಮಸಮಬೋಧ್ಯತ್ವಾತ್' ಅಥವಾ ' ಜಗತ್ ಪರಮಾರ್ಥಂ ಅಂತ್ಯಪ್ರಮಾಯಾಂ ಅಬಾಧ್ಯತ್ವಾತ್ ಬ್ರಹ್ಮವತ್' ಎಂಬ

ಎರಡು ಅನುಮಾನಗಳಿಂದ ಜಗತ್ತಿಗೆ ಪಾರಮಾರ್ಥಿಕ ಸತ್ತ್ವವೇ ಸಿದ್ಧವಾಗುವುದರಿಂದ ಎಲ್ಲವೂ ಮನೋಹರವಾಯಿತು. ಹಿಂದಿನ ಶ್ಲೋಕದಲ್ಲಿ 'ಅತಃ ಅಬಾಧಿತಮ್' ಎಂಬಲ್ಲಿ 'ಅತಃ' ಶಬ್ದದಿಂದ ಹೇಳಿದ ಎರಡು ಹೇತುಗಳನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳುತ್ತಾರೆ. ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಒಪ್ಪುವುದರಿಂದ ಪ್ರಥಮಹೇತುವಾದ ಬ್ರಹ್ಮಸಮಬೋಧ್ಯತ್ವವು ಉಪಪನ್ನವಾಗುತ್ತದೆ. ಚರಮಪ್ರಮೆಯಲ್ಲಿ ಚರಮಸಾಕ್ಷಾತ್ಕಾರಕ್ಕೆ ನಿಷ್ಪ್ರಕಾರಕತ್ವವನ್ನು ಒಪ್ಪುವುದರಿಂದ ಅದರಲ್ಲಿ ನಾಸ್ತಿತ್ವಪ್ರಕಾರಕತ್ವವು ಇಲ್ಲದಿರುವುದರಿಂದ ಎರಡನೆಯ ಹೇತುವು ಉಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಪ್ರತ್ಯಕ್ಷಸಾಧಿತಾರ್ಥಸ್ಯ ನಾನುಮಾ ಬಾಧಿಕಾ ಭವೇತ್ ।**
**ಕಾಲತ್ಯಯಾಪದಿಷ್ಟತ್ವಂ ದೋಷೋ ಯತ್ ಸರ್ವವಾದಿನಾಮ್ ।**
**ಮಹಾದಂಡಪ್ರಹಾರಾಗ್ರೇ ಕಿಂ ಮೃದ್ಭಾಂಡಶತೇನ ತೇ ॥ ೯೨೨ ॥**

**ಅರ್ಥ**-ಪ್ರತ್ಯಕ್ಷಸಾಧಿತಾರ್ಥಸ್ಯ = ಪ್ರತ್ಯಕ್ಷದಿಂದ ಸಾಧಿತವಾದ ಅರ್ಥಕ್ಕೆ, ಅನುಮಾ = ಅನುಮಾನವು, ಬಾಧಿಕಾ ನಭವೇತ್ = ಬಾಧಕವಾಗುವುದಿಲ್ಲ. ಯತ್ = ಏಕೆಂದರೆ, ಸರ್ವವಾದಿನಾಮ್ = ಎಲ್ಲವಾದಿಗಳಿಗೂ, ಕಾಲತ್ಯಯಾಪದಿಷ್ಟತ್ವಂ = ಬಾಧವು, ದೋಷಃ = ದೋಷವಾಗಿದೆಯಷ್ಟೆ, ಮಹಾದಂಡಪ್ರಹಾರಾಗ್ರೇ = ದೊಡ್ಡದಂಡದ ಏಟಿನ ಎದುರಿಗೆ, ತೇ= ನಿನ್ನ, ಮೃದ್ಭಾಂಡಶತೇನ = ನೂರು ಮಣ್ಣಿನ ಮಡಕೆಗಳಿಂದ, ಕಿಂ = ಏನಾಗುತ್ತದೆ.

**ವಿವರಣೆ-** ಅನುಮಾನವು ಪ್ರತ್ಯಕ್ಷಕ್ಕಿಂತ ದುರ್ಬಲ. ಇಲ್ಲದಿದ್ದರೆ 'ವಹ್ನಿಃ ಅನುಷ್ಣಃ ಕೃತಕತ್ವಾತ್' ಎಂಬಲ್ಲಿ ಅನುಮಾನಕ್ಕೆ ಎಲ್ಲವಾದಿಗಳೂ ಒಪ್ಪಿರುವ ಪ್ರತ್ಯಕ್ಷಬಾಧರೂಪವಾದ ಕಾಲತ್ಯಯಾಪದಿಷ್ಟತ್ವ ದೋಷವೇ ಉಚ್ಛೇದವನ್ನು ಹೊಂದಬೇಕಾದೀತು. ಆದ್ದರಿಂದ ವಿಶ್ವಪ್ರತ್ಯಕ್ಷವು ಗಟ್ಟಿಯಾದ ದಂಡದ ಪ್ರಹಾರವಿದ್ದಂತೆ. ಅದರ ಎದುರಿಗೆ ಮಿಥ್ಯಾತ್ವಸಾಧಕವಾಗಿ ನೂರು ಅನುಮಾನಗಳನ್ನು ಪ್ರಯೋಗಿಸಿದರೂ ಎಲ್ಲವೂ ನಾಶವನ್ನು ಹೊಂದುತ್ತವೆ ಎಂದು ಅಭಿಪ್ರಾಯ.

**ಧರ್ಮಿಗ್ರಾಹಿ ಮಮಾಧ್ಯಕ್ಷಮುಪಜೀವ್ಯತಯಾ ಮಹತ್ ।**
**ತದ್ವಿರೋಧೇಽನುಮಾನಾನಾಂ ಕೋಟಿಃ ಕೀಟಾಯತೇ ತವ ।**
**ನ ಚೇತ್‌ಕಾಲಾಂತರೇ ವಹ್ನಿಃ ಶೀತಃ ಸ್ಯಾದನುಮಾನತಃ ॥ ೯೨೩ ॥**

**ಅರ್ಥ**-ಧರ್ಮಿಗ್ರಾಹಿ = ಧರ್ಮಿಗ್ರಾಹಕವಾದ, ಮಮಾಧ್ಯಕ್ಷಮ್ = ನನ್ನ ಪ್ರತ್ಯಕ್ಷವು, ಉಪಜೀವ್ಯತಯಾ = ಉಪಜೀವ್ಯವಾದುದರಿಂದ, ಮಹತ್ = ಪ್ರಬಲವಾಗಿದೆ. ತದ್ವಿರೋಧೇ = ಅಂತಹ ಪ್ರತ್ಯಕ್ಷದ ವಿರೋಧವು ಬಂದರೆ, ತವ = ನಿನ್ನ, ಅನುಮಾನಾನಾಂ ಕೋಟಿಃ = ಕೋಟಿ ಅನುಮಾನಗಳು, ಕೀಟಾಯತೇ = ಕೀಟದಂತೆ ಆಗುತ್ತದೆ, ನಚೇತ್ =

ಹಾಗಿಲ್ಲದಿದ್ದರೆ, ಕಾಲಾಂತರೇ = ಕಾಲಾಂತರದಲ್ಲಿ, ಅನುಮಾನತಃ = ವಹ್ನಿಃ ಅನುಷ್ಣಃ ಕೃತಕತ್ವಾತ್ ಎಂಬ ಅನುಮಾನದಿಂದ, ವಹ್ನಿ = ವಹ್ನಿಯು, ಶೀತಃ ಸ್ಯಾತ್ = ಶೀತವಾಗಲಿ.

**ಅನುವಾದ-** ಧರ್ಮಿಗ್ರಾಹಕವಾದ ನನ್ನ ಪ್ರತ್ಯಕ್ಷವು ಉಪಜೀವ್ಯವಾದುದರಿಂದ ಪ್ರಬಲವಾಗಿದೆ. ಅದರ ವಿರೋಧವು ಬಂದರೆ ನಿನ್ನ ಕೋಟಿ ಅನುಮಾನಗಳೂ ಕೀಟದಂತೆ ಆಗುತ್ತವೆ. ಧರ್ಮಿಗ್ರಾಹಕಪ್ರಮಾಣವಿರೋಧವು ಬಂದರೂ ಅನುಮಾನದಿಂದ ಅರ್ಥವು ಸಿದ್ಧವಾಗುವುದಾದರೆ 'ವಹ್ನಿಃ ಅನುಷ್ಣಃ ಕೃತಕತ್ವಾತ್' ಎಂಬ ಅನುಮಾನದಿಂದ ಕಾಲಾಂತರದಲ್ಲಿ ವಹ್ನಿಯಲ್ಲಿ ಶೈತ್ಯವು ಸಿದ್ಧವಾಗಲಿ.

**ಭಾವವಿಲಾಸಿನೀ–** ತವಾನುಮಾನಾನಾಂ ಕೋಟಿರಿತಿ ಸಂಬಂಧಃ । ನ ಚೇತ್ ಪ್ರತ್ಯಕ್ಷಸ್ಯಾನುಮಾನ-ಬಾಧಕತ್ವಂ ನ ಚೇತ್ । ಅನುಮಾನತಃ ವಹ್ನಿರನುಷ್ಣಃ ಕೃತಕತ್ವಾದಿತ್ಯನುಮಾನತಃ ॥ ೯೨೪ ॥

ದೃಢಪ್ರತ್ಯಕ್ಷಸಿದ್ಧಾರ್ಥಮಾಗಮೋ ನ ತು ಬಾಧತೇ ।
ತಥಾ ಸತಿ ವೃಥೈವ ಸ್ಯಾದ್ ವೃತ್ತ್ಯಂತರಕಥಾऽऽಗಮೇ ॥ ೯೨೫ ॥

**ಅರ್ಥ**-ದೃಢಪ್ರತ್ಯಕ್ಷಸಿದ್ಧಾರ್ಥಮ್ = ಪ್ರಬಲಪ್ರತ್ಯಕ್ಷದಿಂದ ಸಿದ್ಧವಾದ ಅರ್ಥವನ್ನು, ಆಗಮಃ = ಆಗಮವು, ನತು ಬಾಧತೇ = ಬಾಧಿಸುವುದೇ ಇಲ್ಲ. ತಥಾ ಸತಿ = ಹಾಗೆ ಬಾಧಿಸುವುದಾದರೆ, ಆಗಮೇ = ವೇದಗಳಲ್ಲಿ, ವೃತ್ತ್ಯಂತರಕಥಾ = ಲಕ್ಷಣಾದಿವೃತ್ತಿಸ್ವೀಕಾರವು, ವೃಥೈವ ಸ್ಯಾತ್ = ವ್ಯರ್ಥವೇ ಆಗುತ್ತದೆ.

**ಭಾವವಿಲಾಸಿನೀ–** ವೃತ್ತ್ಯಂತರಕಥಾ ಅಮುಖ್ಯವೃತ್ತಿಕಥಾ ॥ ೯೨೫ ॥

ಆದಿತ್ಯಸ್ಯೈವ ಯೂಪತ್ವೇ ದ್ಯುಮಣಿರ್ಭೂಮಣಿರ್ಭವೇತ್ ।
ಅನುಮಾನಮಮಾನಂ ತೇ ವಾಕ್ಯಮನ್ಯಾರ್ಥಗಾಮಿ ತತ್ ॥ ೯೨೬ ॥

**ಅರ್ಥ**-ಆದಿತ್ಯಸ್ಯೈವ ಯೂಪತ್ವೇ = ಆದಿತ್ಯನೇ ಯೂಪವಾದರೆ, ದ್ಯುಮಣಿಃ = ಆಕಾಶರತ್ನವಾದ ಸೂರ್ಯನು, ಭೂಮಣಿರ್ಭವೇತ್ = ಮಣ್ಣಿನ ಉಂಡೆಯಾಗ ಬೇಕಾದೀತು, ತತ್ = ಆದ್ದರಿಂದ ಪ್ರತ್ಯಕ್ಷವಿರೋಧವು ಬರುವುದರಿಂದ, ತೇ = ನಿನ್ನ, ಅನುಮಾನಮ್= ಅನುಮಾನವು ಅಪ್ರಮಾಣವಾದುದು, ವಾಕ್ಯಮ್ = ವಾಕ್ಯವು, ಅನ್ಯಾರ್ಥಗಾಮಿ = ಅರ್ಥಾಂತರವನ್ನು ಹೊಂದುತ್ತದೆ.

**ಅನುವಾದ-** 'ಆದಿತ್ಯೋ ವೈ ಯೂಪಃ' ಎಂಬ ವಾಕ್ಯದಿಂದ ಆದಿತ್ಯನಿಗೆ ಯೂಪತ್ವವನ್ನು ಅಂಗೀಕರಿಸಿದರೆ 'ದ್ಯುಮಣಿ' ಯಾದ, ಎಂದರೆ ಆಕಾಶರತ್ನವಾದ ಆದಿತ್ಯನು ಪ್ರಕಾಶಹೀನವಾದ ಭೂಮಣಿಯಾಗಬೇಕಾದೀತು. ಆದ್ದರಿಂದ, ಎಂದರೆ ಪ್ರತ್ಯಕ್ಷವಿರೋಧವು ಬರುವುದರಿಂದ ನಿನ್ನ ಅನುಮಾನವು ಅಪ್ರಮಾಣವಾಗುತ್ತದೆ ಮತ್ತು ಆಗಮವು ಅರ್ಥಾಂತರವನ್ನು ಹೊಂದುತ್ತದೆ.

**ಭಾವವಿಲಾಸಿನೀ**– ಆದಿತ್ಯೋ ವೈ ಯೂಪ ಇತಿ ವಾಕ್ಯಾದಾದಿತ್ಯಸ್ಯೈವ ಯೂಪತ್ವೇ । ತತ್ ತಸ್ಮಾತ್ ಪ್ರತ್ಯಕ್ಷಬಾಧೇ ವೇದವಾಕ್ಯಸ್ಯಾಪ್ಯನ್ಯಾರ್ಥತ್ವದರ್ಶನಾತ್ಪರೇಣಾಂಗೀಕಾರಾಚ್ಚ ॥ ೯೨೬ ॥

ನಿರ್ದೋಷಾಕ್ಷೋದ್ಭವಂ ಜ್ಞಾನಂ ತತ್ತ್ವವೇದನಮೇವ ಹಿ ।
ಕಾಚಾದಿದೋಷಾಭಾವಸ್ತು ತವಾಪಿ ಚ ಮಮಾಪಿ ಚ ।
ಜಡಮಾತ್ರೇಽಪಿ ನಾಜ್ಞಾನಂ ಚಕ್ಷುಶ್ಚಾಜ್ಞಾನವೈರಿ ತೇ ॥ ೯೨೭ ॥

**ಅರ್ಥ**-ನಿರ್ದೋಷಾಕ್ಷೋದ್ಭವಂ ಜ್ಞಾನಂ = ನಿರ್ದುಷ್ಟೇಂದ್ರಿಯದಿಂದಲೇ ಜನ್ಯವಾದ ಜ್ಞಾನವು, ತತ್ತ್ವವೇದನಮೇವಹಿ = ತತ್ತ್ವಾವೇದಕವೇ ಆಗುತ್ತದೆ ಅಷ್ಟೆ, ಕಾಚಾದಿದೋಷಾಭಾವಸ್ತು = ಕಾಚಾದಿದೋಷಾಭಾವವು, ತವಾಪಿ ಚ ಮಮಾಪಿ ಚ = ನಿನಗೂ ಮತ್ತು ನನಗೂ ಸಮ್ಮತವಾಗಿದೆ.ಜಡಮಾತ್ರೇಽಪಿ ನಾಜ್ಞಾನಂ = ಜಡಸಾಮಾನ್ಯದಲ್ಲಿ ಅಜ್ಞಾನವಿಲ್ಲ, ಚಕ್ಷುಃಶ್ಚ = ಅಪರೋಕ್ಷವೃತ್ತಿಯಾದರೋ, ತೇ = ನಿನಗೆ, ಅಜ್ಞಾನವೈರಿ= ಅಜ್ಞಾನನಾಶಕವಾಗಿದೆ.

**ಅನುವಾದ**- ನಿರ್ದುಷ್ಟೇಂದ್ರಿಯದಿಂದ ಜನ್ಯವಾದ ಜ್ಞಾನವು ತತ್ತ್ವಾವೇದಕವೇ ಆಗಿದೆ. ಕಾಚಾದಿದೋಷಾಭಾವವು ನಿನಗೂ ಮತ್ತು ನನಗೂ ಸಮ್ಮತವಾಗಿದೆ. ಜಡಮಾತ್ರದಲ್ಲಿ ಅಜ್ಞಾನರೂಪವಾದ ದೋಷವಿಲ್ಲ ಮತ್ತು ಅಪರೋಕ್ಷವೃತ್ತಿಯು ನಿನ್ನ ರೀತಿಯಿಂದಲೇ ಅಜ್ಞಾನನಾಶಕವಾಗಿದೆ.

**ಭಾವವಿಲಾಸಿನೀ**– ನನು ಪ್ರತ್ಯಕ್ಷಾದಿಪ್ರಮಾಣಾನಾಮತತ್ತ್ವಾವೇದಕತ್ವಂ ಪರೋ ವಕ್ತಿ । ಅತಃ ಕಥಂ ತಸ್ಯ ಪ್ರಾಬಲ್ಯಮಿತ್ಯತಸ್ತತ್ಪರಿಹಾರಾಯಾಪ್ಯುಕ್ತನ್ಯಾಯಮತಿದಿಶತಿ ॥ **ನಿರ್ದೋಷೇತಿ** ॥ ತತ್ತ್ವವೇದನಂ ತತ್ತ್ವಜ್ಞಾನಮ್ ॥ ೯೨೭ ॥

**ವಿವರಣೆ**- ಕಾಚಾದಿ ದೋಷಗಳು ಇಲ್ಲದಿರುವುದರಿಂದ ಇಂದ್ರಿಯ ದೋಷವಿಲ್ಲ. ಜಡದಲ್ಲಿ ಅಜ್ಞಾನವಿಲ್ಲದಿರುವುದರಿಂದ ಅಜ್ಞಾನಾವರಣರೂಪವಾದ ಅರ್ಥದೋಷವಿಲ್ಲ. ಅಜ್ಞಾನವನ್ನು ಅಂಗೀಕರಿಸಿದರೂ ವೃತ್ತಿಯು ಅದಕ್ಕೆ ನಾಶಕವಾಗುವುದರಿಂದ ವೃತ್ತಿಯು ಉಂಟಾಗಲು ಅಜ್ಞಾನವು ದೋಷವಾಗುವುದಿಲ್ಲ. ಆದ್ದರಿಂದ ನಿರ್ದುಷ್ಟವಾದ ಇಂದ್ರಿಯಜನ್ಯವಾದ ಜ್ಞಾನವು ಸತ್ತ್ವವನ್ನೇ ತಿಳಿಸಿಕೊಡುತ್ತದೆ ಎಂದು ಅಭಿಪ್ರಾಯ.

ಅತತ್ತ್ವಾವೇದಕತ್ವೋಕ್ತಿಃ ಪ್ರತ್ಯಕ್ಷಾದೌ ತತಸ್ತವ ।
ಸತ್ತ್ವಗ್ರಾಹಿತ್ವವೈರೇಣ ಕೇವಲಂ ನಿರ್ನಿಮಿತ್ತತಃ ॥ ೯೨೮ ॥

**ಅರ್ಥ**-ತತಃ = ಆದ್ದರಿಂದ, ಪ್ರತ್ಯಕ್ಷಾದೌ = ಪ್ರತ್ಯಕ್ಷ ಮೊದಲಾದವುಗಳಲ್ಲಿ, ತವ = ನಿನ್ನ, ಅತತ್ತ್ವಾವೇದಕತ್ವೋಕ್ತಿಃ = ಅತತ್ತ್ವಾವೇದಕತ್ವ ವಚನವು, ನಿರ್ನಿಮಿತ್ತತಃ =

ನಿರ್ನಿಬಂಧನವಾದ್ದರಿಂದ, ಕೇವಲಂ = ಕೇವಲ, ಸತ್ತ್ವಗ್ರಾಹಿತ್ವವೈರೇಣ = ಸತ್ತ್ವಗ್ರಾಹಿತ್ವದ ಮೇಲಿನ ನಿನ್ನ ದ್ವೇಷದಿಂದಲೇ, (ಎಂದು ತಿಳಿಯುತ್ತದೆ).

**ಅನುವಾದ-** ಆದ್ದರಿಂದ ಪ್ರತ್ಯಕ್ಷಾದಿಗಳಲ್ಲಿ ನೀನು ಹೇಳುವ ಅತತ್ತ್ವಾವೇದಕತ್ವವು ನಿರ್ನಿಬಂಧನವಾದುದು. ಕೇವಲ ಜಗತ್ಸತ್ಯತ್ವದ್ವೇಷದಿಂದ ನೀನು ಹಾಗೆ ಹೇಳುತ್ತೀಯೆ.

**ಭಾವವಿಲಾಸಿನೀ–** ತತಃ ಪೂರ್ವೋಕ್ತರೀತ್ಯಾ ನಿರ್ದೋಷತ್ವಾತ್ । ತರ್ಹ್ಯತತ್ತ್ವಾವೇದಕತ್ವೋಕ್ತಿಃ ಕಿಂನಿಮಿತ್ತೇತ್ಯತ ಆಹ – **ಸತ್ತ್ವೇತಿ** ॥ ಸತ್ತ್ವಂ ಜಗತ್ಸತ್ತ್ವಮ್ । ಸ್ವಾನಭಿಮತಜಗತ್ಸತ್ತಾಸಾಧಕತ್ವ-ವೈರನಿಮಿತ್ತೈವೇತಿ ಭಾವಃ ॥ ೯೨೮ ॥

ಘಟೇಽಪ್ಯಜ್ಞಾನನಾಶಾಯ ಸಾಕ್ಷಾತ್ಕಾರಮಪೇಕ್ಷಸೇ ।
ಪರೋಕ್ಷಜ್ಞಾನಮಸ್ಪಷ್ಟಮಯಂ ಸ್ಪಷ್ಟತರಃ ಕಿಲ ॥ ೯೨೯ ॥

**ಅರ್ಥ-**ಘಟೇಽಪಿ = ಘಟದ ವಿಷಯದಲ್ಲಿಯೂ ಕೂಡ, ಅಜ್ಞಾನನಾಶಾಯ = ಅಜ್ಞಾನದನಾಶಕ್ಕಾಗಿ, ಸಾಕ್ಷಾತ್ಕಾರಮ್ = ಪ್ರತ್ಯಕ್ಷವನ್ನು, ಅಪೇಕ್ಷಸೇ = ಅಪೇಕ್ಷಿಸುತ್ತೀಯೆ. ಪರೋಕ್ಷಜ್ಞಾನಮ್ = ಪರೋಕ್ಷಜ್ಞಾನವು, ಅಸ್ಪಷ್ಟಮ್ = ಅಸ್ಪಷ್ಟವಾದುದು. ಅಯಂ = ಈ ಸಾಕ್ಷಾತ್ಕಾರವು, ಸ್ಪಷ್ಟತರಃಕಿಲ = ಬಹಳ ಸ್ಪಷ್ಟವಾದುದಷ್ಟೆ?

**ಅನುವಾದ-** ಘಟದ ವಿಷಯದಲ್ಲಿಯೂ ಸಹ ನೀನು ಅಜ್ಞಾನನಾಶಕ್ಕಾಗಿ ಸಾಕ್ಷಾತ್ಕಾರವನ್ನು ಅಪೇಕ್ಷಿಸುತ್ತೀಯೆ. ಪರೋಕ್ಷಜ್ಞಾನವು ಅಸ್ಪಷ್ಟವಾದುದು. ಈ ಸಾಕ್ಷಾತ್ಕಾರವಾದರೋ ಬಹಳ ಸ್ಪಷ್ಟವಾದುದಷ್ಟೆ.

**ಭಾವವಿಲಾಸಿನೀ–** ಅನುಮಾನಾದಿನಾ ಪ್ರತ್ಯಕ್ಷಬಾಧಂ ವದತಃ ಪರಸ್ಯ ಸ್ವವ್ಯಾಹತಿಮಾಹ – **ಘಟ ಇತಿ** ॥ ಅಯಂ ಸಾಕ್ಷಾತ್ಕಾರಃ ॥ ೯೨೯ ॥

**ವಿವರಣೆ-** ಪ್ರತ್ಯಕ್ಷಕ್ಕೆ ಅತತ್ತ್ವಾವೇದಕತ್ವವನ್ನು ಹೇಳಬಾರದು, ಏಕೆಂದರೆ ಪ್ರತ್ಯಕ್ಷಪ್ರಾಬಲ್ಯವು ನಿನಗೂ ಸಮ್ಮತವಾದುದು ಎಂದು ಅಭಿಪ್ರಾಯ.

ಅನುಮಾನಸ್ಯಾಗಮಸ್ಯ ತತ್ರ ದೌರ್ಬಲ್ಯಮಬ್ರವೀಃ ।
ಇದಾನೀಂ ಕಥಮಾಶಾಸ್ಸೇ ದುರ್ಬಲಾತ್ ಪ್ರಬಲಕ್ಷಯಮ್ ॥ ೯೨೯ ॥

**ಅರ್ಥ-**ತತ್ರ = ಪ್ರತಿಕರ್ಮವ್ಯವಸ್ಥೆಯಲ್ಲಿ, ಅನುಮಾನಸ್ಯ= ಅನುಮಾನಕ್ಕೂ, ಆಗಮಸ್ಯ = ಆಗಮಕ್ಕೂ, ದೌರ್ಬಲ್ಯಮ್ = ದುರ್ಬಲತ್ವವನ್ನು, ಅಬ್ರವೀಃ = ಹೇಳಿದ್ದೀಯೆ. ಇದಾನೀಂ = ಈಗ, ದುರ್ಬಲಾತ್ = ದುರ್ಬಲವಾದ ಅನುಮಾನಾಗಮಗಳಿಂದ, ಪ್ರಬಲಕ್ಷಯಮ್ = ಪ್ರಬಲವಾದ ಪ್ರತ್ಯಕ್ಷಕ್ಕೆ ಬಾಧವನ್ನು, ಕಥಂ = ಹೇಗೆ, ಆಶಾಸ್ಸೇ = ಆಶಿಸುತ್ತೀಯೆ?

**ಅನುವಾದ-** ಪ್ರತಿಕರ್ಮವ್ಯವಸ್ಥೆಯನ್ನು ಮಾಡುವಾಗ ಅನುಮಾನಾಗಮಗಳಿಗೆ ಪ್ರತ್ಯಕ್ಷಕ್ಕಿಂತ ದೌರ್ಬಲ್ಯವನ್ನು ಹೇಳಿದ್ದೀಯೆ. ಈಗ, ಮಿಥ್ಯಾರ್ಥವನ್ನು ಸಾಧನೆ ಮಾಡುವ ಸಂದರ್ಭದಲ್ಲಿ ಮಾತ್ರ ದುರ್ಬಲವಾದ ಅನುಮಾನಾಗಮಗಳಿಂದಲೇ ಪ್ರಬಲವಾದ ಪ್ರತ್ಯಕ್ಷಕ್ಕೆ ಹೇಗೆ ಬಾಧವನ್ನು ಬಯಸುತ್ತಿದ್ದೀಯೆ?

**ಭಾವವಿಲಾಸಿನೀ–** ತತ್ರ ಪ್ರತಿಕರ್ಮವ್ಯವಸ್ಥಾಯಾಮ್ । ಅಸ್ಪಷ್ಟಜ್ಞಾನಜನಕತ್ವೇನ ಪ್ರತ್ಯಕ್ಷಾದಪಿ ದೌರ್ಬಲತ್ವಮ್ । ದುರ್ಬಲಾತ್ ಅನುಮಾನಾದೇಃ । ಪ್ರಬಲಕ್ಷಯಂ ಪ್ರಬಲಸ್ಯ ಪ್ರತ್ಯಕ್ಷಸ್ಯ ಬಾಧಮ್। ಸ್ವಗೃಹಕೃತ್ಯವೇಲಾಯಾಂ ರಂಡಾ ಪರೋದ್ವಹನಸಮಯೇ ಕಥಂ ಕನ್ಯಾ ಸ್ಯಾದಿತಿ ಭಾವಃ । ನನು ಯದಾ ಶಬ್ದಾದಪ್ಯಪರೋಕ್ಷಜ್ಞಾನಮಂಗೀಕ್ರಿಯೇತ ತದಾ ಕಥಂ ದೌರ್ಬಲ್ಯಮಿತಿ ಚೇನ್ನ । ದುರ್ಬಲಕಾರಣಾತ್ ಪ್ರಬಲವಿಜಾತೀಯ ಫಲೋತ್ಪತ್ತೇರದರ್ಶನಾತ್ । ನಹಿ ಶುನೀ ಶ್ವೇತಾಶ್ವಂ ಸೂತೇ ॥ ೯೨೯ ॥

**ವಿವರಣೆ-** ತನ್ನ ಮನೆಯ ಕೆಲಸವನ್ನು ಮಾಡುವ ವೇಳೆಯಲ್ಲಿ ವಿಧವೆಯಾದವಳು ಇನ್ನೊಬ್ಬರ ಮನೆಯ ಮದುವೆಯ ಸಮಯದಲ್ಲಿ ಸುಮಂಗಲಿಯಾಗುವುದಿಲ್ಲವಷ್ಟೆ? ನಾವು ಶಬ್ದದಿಂದಲೂ ಅಪರೋಕ್ಷಜ್ಞಾನವನ್ನು ಒಪ್ಪುವುದರಿಂದ ಈ ಸಂದರ್ಭದಲ್ಲಿ ದೌರ್ಬಲ್ಯವಿಲ್ಲ ಎಂದು ಹೇಳಿದರೆ ದುರ್ಬಲವಾದ ಕಾರಣದಿಂದ ಪ್ರಬಲವಾದ ವಿಜಾತೀಯವಾದ ಕಾರ್ಯವು ಉತ್ಪತ್ತಿಯಾಗುವುದಿಲ್ಲ ಎಂದು ನಮ್ಮ ಉತ್ತರ. ಹೆಣ್ಣು ನಾಯಿಯು ಬಿಳಿಯ ಕುದುರೆಯನ್ನು ಪ್ರಸವಿಸುವುದಿಲ್ಲವಷ್ಟೆ ಎಂದು ಅಭಿಪ್ರಾಯ.

ನಿರ್ವಿಕಲ್ಪಕರೂಪಂ ತು ಜ್ಞಾನಮತ್ಯಂತದುರ್ಬಲಮ್ ।
ಪ್ರವೃತ್ತೇಶ್ಚ ನಿವೃತ್ತೇಶ್ಚ ನಿಮಿತ್ತಂ ನೈವ ತತ್ ಕಿಲ ॥ ೯೩೦ ॥

**ಅರ್ಥ-**ನಿರ್ವಿಕಲ್ಪಕರೂಪಂ ತು ಜ್ಞಾನಂ = ನಿರ್ವಿಕಲ್ಪಕರೂಪವಾದ ಜ್ಞಾನವಾದರೊ, ಅತ್ಯಂತದುರ್ಬಲಂ = ಅತ್ಯಂತ ದುರ್ಬಲವಾಗಿದೆ, ತತ್ = ಆ ಜ್ಞಾನವು, ಪ್ರವೃತ್ತೇಶ್ಚ = ಪ್ರವೃತ್ತಿಗಾಗಲೀ, ನಿವೃತ್ತೇಶ್ಚ = ನಿವೃತ್ತಿಗಾಗಲೀ, ನೈವ ನಿಮಿತ್ತಂ ಕಿಲ = ಕಾರಣವಲ್ಲವಷ್ಟೆ.

**ಅನುವಾದ-** ನಿರ್ವಿಕಲ್ಪಕರೂಪವಾದ ಜ್ಞಾನವಾದರೊ ಅತ್ಯಂತ ದುರ್ಬಲವಾದುದು. ಅದು ಪ್ರವೃತ್ತಿಗಾಗಲೀ, ನಿವೃತ್ತಿಗಾಗಲೀ ಕಾರಣವಲ್ಲವಷ್ಟೆ?

**ಭಾವವಿಲಾಸಿನೀ–** ದೋಷಾಂತರಂ ಚಾಹ – ನಿರ್ವಿಕಲ್ಪಕೇತಿ ॥ ಶಬ್ದಜನ್ಯತಯಾ ತ್ವಯಾ ಽಂಗೀಕೃತಮಪಿ ಪ್ರತ್ಯಕ್ಷಂ ನಿರ್ವಿಕಲ್ಪಕಮೇವ । ತಚ್ಚ ಸಾಧನಬಾಧನಾಕ್ಷಮತ್ವಾತ್ಸಂದಿಗ್ಧ-ಸ್ವರೂಪತ್ವಾಚ್ಚ ಪರೋಕ್ಷಜ್ಞಾನಾದತಿ-ದುರ್ಬಲಮಿತಿ ಭಾವಃ ॥ ೯೩೦ ॥

**ವಿವರಣೆ-** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ನೀನು ಶಬ್ದದಿಂದ ಪ್ರತ್ಯಕ್ಷವು ಉಂಟಾಗುತ್ತದೆ ಎಂದು ಒಪ್ಪಿದರೂ ಆ ಪ್ರತ್ಯಕ್ಷವು ನಿರ್ವಿಕಲ್ಪಕರೂಪವಾದುದು. ಆದ್ದರಿಂದ ಸಾಧನಬಾಧನ

ಕ್ಷಮವಲ್ಲಮತ್ತು ನಿರ್ವಿಕಲ್ಪಕಜ್ಞಾನಸ್ವರೂಪವೇ ವಿವಾದಗ್ರಸ್ತವಾಗಿದೆ. ಆದ್ದರಿಂದ ಅದು ಶಬ್ದಕ್ಕಿಂತಲೂ ಅತಿ ದುರ್ಬಲವಾದುದು. ಆದ್ದರಿಂದ ಅಂತಹ ಜ್ಞಾನಜನಕತ್ವವಿರುವುದರಿಂದ ಶಬ್ದವು ಪ್ರಬಲವಾಗಿ ಅದರಿಂದ ಪ್ರತ್ಯಕ್ಷವು ಬಾಧಿತವಾಗುತ್ತದೆ ಎಂದು ಹೇಳಬಾರದು ಎಂದು ಅಭಿಪ್ರಾಯ.

ವಿವದಂತೇ ಯತ್ಸ್ವರೂಪೇ ವಾದಿನಸ್ತತ್ತ್ವವಾದಿನಃ ।
ವಿಶಿಷ್ಟಜ್ಞಾನಗಮ್ಯೋಽಸೌ ತದಭಾವೇಽಷ್ಟಮೋ ರಸಃ ॥ ೯೩೧ ॥

**ಅರ್ಥ**-ಯತ್ಸ್ವರೂಪೇ = ಯಾವ ನಿರ್ವಿಕಲ್ಪಕಜ್ಞಾನಸ್ವರೂಪದಲ್ಲಿ, ತತ್ತ್ವವಾದಿನಃ = ತತ್ತ್ವವಾದಿಗಳಾದ, ವಾದಿನಃ = ವಾದಿಗಳು, ವಿವದಂತೇ= ವಿವಾದ ಮಾಡುತ್ತಾರೆಯೋ ಅಂತಹ, ವಿಶಿಷ್ಟಜ್ಞಾನಗಮ್ಯಃ = ವಿಶಿಷ್ಟಜ್ಞಾನದಿಂದ ತಿಳಿಯಲ್ಪಡುವ, ಅಸೌ = ಈ ನಿರ್ವಿಕಲ್ಪದ ಜ್ಞಾನವು, ತದಭಾವೇ = ನಿರ್ವಿಕಲ್ಪಕಜ್ಞಾನಜನ್ಯವಾದ ವಿಶಿಷ್ಟಜ್ಞಾನವೇ ಇಲ್ಲದಿರುವಾಗ, ಅಷ್ಟಮೋ ರಸಃ = ಎಂಟನೆಯ ರಸದಂತೆ ಆಗುತ್ತದೆ.

**ಅನುವಾದ**- ಯಾವ ನಿರ್ವಿಕಲ್ಪಕಜ್ಞಾನಸ್ವರೂಪದಲ್ಲಿ ತತ್ತ್ವವಾದಿಗಳಾದ ವಾದಿಗಳು ವಿವಾದವನ್ನು ಮಾಡುತ್ತಾರೆಯೋ ಅಂತಹ ವಿಶಿಷ್ಟಜ್ಞಾನಗಮ್ಯವಾದ ಈ ನಿರ್ವಿಕಲ್ಪಕಜ್ಞಾನವು ನಿರ್ವಿಕಲ್ಪಕಜ್ಞಾನಸಾಧಕವಾದ ವಿಶಿಷ್ಟಜ್ಞಾನವೇ ಇಲ್ಲದಿದ್ದರೆ ಎಂಟನೆಯ ರಸದಂತೆ ಆಗುತ್ತದೆ.

**ಭಾವವಿಲಾಸಿನೀ**- ಅಸೌ ನಿರ್ವಿಕಲ್ಪಕಪ್ರತ್ಯಯಃ । ತದಭಾವೇ ತಜ್ಜನ್ಯವಿಶಿಷ್ಟಜ್ಞಾನಾಭಾವೇ । ಚರಮಂ ತವ ನಿರ್ವಿಕಲ್ಪಕಮಪ್ಯತೀಂದ್ರಿಯತ್ವಾದನುಮೇಯಮೇವ ಅನುಮಾಪಕಂಚ ತಜ್ಜನ್ಯಂ ವಿಶಿಷ್ಟಜ್ಞಾನಮೇವ । ತಚ್ಚ ತಸ್ಯೈವ ಚರಮತ್ವಂ ವದತಸ್ತವ ಮತೇ ನಾಸ್ತಿ । ಅತಸ್ಸೋಽಪ್ಯಷ್ಟಮರಸಾಯಿತ ಇತಿ ಭಾವಃ ॥ ೯೩೧ ॥

**ವಿವರಣೆ**- ತತ್ತ್ವವಾದಿಗಳಾದ ನಾವು ನಿರ್ವಿಕಲ್ಪಕಜ್ಞಾನವನ್ನು ಅಂಗೀಕರಿಸುವುದಿಲ್ಲ. ನೈಯಾಯಿಕರನ್ನು ಅನುಸರಿಸಿ ನೀನು ನಿರ್ವಿಕಲ್ಪಕಜ್ಞಾನವನ್ನು ಅಂಗೀಕರಿಸಿದರೂ ನೈಯಾಯಿಕರ ಮತದಂತೆ ಅದು ಅತೀಂದ್ರಿಯವಾಗುತ್ತದೆ. ಅನಂತರ ನಿರ್ವಿಕಲ್ಪಕಜ್ಞಾನಜನ್ಯವಾದ ವಿಶಿಷ್ಟಜ್ಞಾನದಿಂದ ಅನುಮಾನದಿಂದ ನಿರ್ವಿಕಲ್ಪಕಜ್ಞಾನವನ್ನು ಸಾಧಿಸಬೇಕು. ನಿನ್ನ ನಿರ್ವಿಕಲ್ಪಕವಾದ ಚರಮಸಾಕ್ಷಾತ್ಕಾರವೂ ಸಹ ಅನುಮಾನರೂಪವಾದ ವಿಶಿಷ್ಟಜ್ಞಾನದಿಂದ ಸಾಧಿಸಲ್ಪಡಬೇಕು. ಆದರೆ ಚರಮಸಾಕ್ಷಾತ್ಕಾರದ ನಂತರ ಯಾವ ವಿಶಿಷ್ಟಜ್ಞಾನವೂ ಉಂಟಾಗುವುದಿಲ್ಲವಾದ್ದರಿಂದ ನಿರ್ವಿಕಲ್ಪಕಜ್ಞಾನವನ್ನು ಅನುಮಾನ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಅದು ಎಂಟನೆಯ ರಸವಾಗುತ್ತದೆ ಎಂದು ಅಭಿಪ್ರಾಯ.

ದಶಮಸ್ತ್ವಮಸೀತ್ಯಸ್ಮಿನ್ ದಶಮತ್ವವಿಶಿಷ್ಟಧೀಃ ।
ದೃಷ್ಟಾ ದೃಷ್ಟಾಂತವಾಕ್ಯೇ ತೇ ತನ್ಮಹೋದರಮಾತರಿ ॥ ೯೩೨ ॥

ಗರ್ಭಮಾಶಂಕಸೇಽಂಧ ತ್ವಂ ನಾತ್ರ ಪುತ್ರೋ ವಿಚಾರಣೇ ।
ಪರೋಕ್ಷಜ್ಞಾನಕರಣಾನ್ನ ಪ್ರಾಹುರ್ನಿರ್ವಿಕಲ್ಪಕಮ್ ॥ ೯೩೩ ॥

**ಅರ್ಥ**-ದಶಮಸ್ತ್ವಮಸಿ ಇತಿ = ದಶಮಸ್ತ್ವಮಸಿ ಎಂಬ, ಅಸ್ಮಿನ್ = ಈ ವಾಕ್ಯದಲ್ಲಿ, ದಶಮತ್ವವಿಶಿಷ್ಟಧೀಃ = ದಶಮತ್ವವಿಶಿಷ್ಟಜ್ಞಾನವೇ, ದೃಷ್ಟಾ = ದೃಷ್ಟವಾಗಿದೆ. ಅಂಧ = ಎಲೈ ಕುರುಡನೇ, ಮಹೋದರಮಾತರಿ = ರೋಗದಿಂದ ಸ್ಥೂಲ ಉದರವುಳ್ಳ ಮಾತೃವಿನಲ್ಲಿ ಗರ್ಭವನ್ನು ಶಂಕಿಸಿದಂತೆ ವಿಶಿಷ್ಟಜ್ಞಾನಜನಕವಾದ, ತೇ = ನಿನ್ನ, ದೃಷ್ಟಾಂತವಾಕ್ಯೇ = ದಶಮಸ್ತ್ವಮಸಿ ಎಂಬ ದೃಷ್ಟಾಂತವಾಕ್ಯದಲ್ಲಿ, ಗರ್ಭಂ = ನಿರ್ವಿಕಲ್ಪಕಜ್ಞಾನ-ಜನಕತ್ವರೂಪವಾದ ಗರ್ಭವನ್ನು, ಆಶಂಕಸೇ = ಶಂಕಿಸುತ್ತಿದ್ದೀಯೆ. ವಿಚಾರಣೇ = ವಿಮರ್ಶೆಮಾಡಿದರೆ, ಅತ್ರ = ಇಲ್ಲಿ, ಪುತ್ರಃ ನ = ನಿರ್ವಿಕಲ್ಪಕಜ್ಞಾನರೂಪವಾದ ಪುತ್ರನಿಲ್ಲ, ಪರೋಕ್ಷಜ್ಞಾನಕರಣಾತ್ = ಪರೋಕ್ಷಜ್ಞಾನಕರಣವಾದ ಶಬ್ದ ಮತ್ತು ಅನುಮಾನಗಳಿಂದ, ನಿರ್ವಿಕಲ್ಪಕಮ್ = ನಿರ್ವಿಕಲ್ಪಕಜ್ಞಾನವನ್ನು, ನ ಪ್ರಾಹುಃ = ಯಾರೂ ಹೇಳುವುದಿಲ್ಲ (ಅಂಗೀಕರಿಸುವುದಿಲ್ಲ)

**ಅನುವಾದ**- ದಶಮಸ್ತ್ವಮಸಿ ಎಂಬ ದೃಷ್ಟಾಂತವಾಕ್ಯದಲ್ಲಿಯೂ ದಶಮತ್ವವಿಶಿಷ್ಟಜ್ಞಾನವೇ ಉಂಟಾಗುವುದು ದೃಷ್ಟವಾಗಿದೆ. ಸ್ಥೂಲವಾದ ಉದರವುಳ್ಳ ಮಾತೃಸ್ಥಾನಾಪನ್ನವಾದ ನಿನ್ನ ದೃಷ್ಟಾಂತವಾಕ್ಯದಲ್ಲಿ ನೀನು ನಿರ್ವಿಕಲ್ಪಕಜ್ಞಾನವೆಂಬ ಗರ್ಭವನ್ನು ಆಶಂಕಿಸುತ್ತಿದ್ದೀಯೆ. ಎಲೈ ಅಂಧನೇ, ವಿಮರ್ಶೆಮಾಡಿದರೆ ಇಲ್ಲಿ ಅಂತಹ ಪುತ್ರನಿಲ್ಲ. ಏಕೆಂದರೆ, ಪರೋಕ್ಷಜ್ಞಾನಕರಣವಾದ ಅನುಮಾನ ಮತ್ತು ಶಬ್ದಗಳಿಂದ ಯಾರೂ ನಿರ್ವಿಕಲ್ಪಕಜ್ಞಾನವನ್ನು ಅಂಗೀಕರಿಸುವುದಿಲ್ಲ.

**ಭಾವವಿಲಾಸಿನೀ**– ಕಿಂಚ ದಶಮಸ್ತ್ವಮಸೀತಿ ವಾಕ್ಯಾದಪರೋಕ್ಷಜ್ಞಾನದರ್ಶನಾತ್ ಇಹಾಪಿ ಮಹಾವಾಕ್ಯಮಪರೋಕ್ಷಜ್ಞಾನಜನಕಮಿತಿ ತವ ಮತಮ್ । ಮಹಾವಾಕ್ಯಸ್ಯ ನಿರ್ವಿಕಲ್ಪಕಜ್ಞಾನಜನಕತ್ವೇ ಸೋಽಪಿ ನ ದೃಷ್ಟಾಂತಃ । ಅತಸ್ತನ್ನಿರ್ವಿಕಲ್ಪಕಸ್ಯ ನ ಕಿಂಚಿತ್ಕಲ್ಪಕಮಿತ್ಯಾಹ – ದಶಮ ಇತಿ ॥ ತೇ ದೃಷ್ಟಾಂತವಾಕ್ಯೇ ದೃಷ್ಟೇತಿ ಸಂಬಂಧಃ । ತತ್ ತಸ್ಮಾತ್ । ಮಹದುದರಂ ಯಸ್ಯಾಸ್ಸಾ ತಸ್ಯಾಂ ಮಾತರಿ । ಯಥಾ ವ್ಯಾಧಿವಶಾತ್ಸ್ಥೂಲೋದರ್ಯಾಂ ಸ್ವಮಾತರಿ ಗರ್ಭಮಾಶಂಕಸೇ ಏವಂ ಮಹಾವಾಕ್ಯೇಽಸ್ಮಿನ್ನಿರ್ವಿಕಲ್ಪಕಮಾಶಂಕಸೇ । ತತ್ತು ಪರೋಕ್ಷಜ್ಞಾನಜನಕೇ ಸವಿಕಲ್ಪಕಜನಕೇ ಚ ವಾಕ್ಯೇನ್ನೈವ ಘಟತ ಇತಿ ಭಾವಃ । ತದೇವ ದರ್ಶಯತಿ ॥ ಪರೋಕ್ಷೇತಿ ॥ ೯೩೩-೯೩೪ ॥

**ವಿವರಣೆ-** ದಶಮಸ್ತ್ವಮಸಿ ಎಂಬುದು ಶಬ್ದಜನ್ಯಪ್ರತ್ಯಕ್ಷವನ್ನು ಹೇಳಲು ಪರರು ದೃಷ್ಟಾಂತವಾಗಿ ಕೊಡುವ ವಾಕ್ಯ. ಆದರೆ ಈ ವಾಕ್ಯದಿಂದ ಪ್ರತ್ಯಕ್ಷವು ಉಂಟಾಗುತ್ತದೆ ಎಂದು ಅಂಗೀಕರಿಸಿದರೂ, ಅದು ಸವಿಕಲ್ಪಕವಾದುದು. ನೀನು ಅಂಗೀಕರಿಸುವ ಪ್ರತ್ಯಕ್ಷವು ನಿರ್ವಿಕಲ್ಪಕರೂಪವಾದುದು. ಪರೋಕ್ಷಜ್ಞಾನಕರಣದಿಂದ ನಿರ್ವಿಕಲ್ಪಕಜ್ಞಾನವು ಉಂಟಾಗುವುದಿಲ್ಲವೆಂದು ಎಲ್ಲ ವಾದಿಗಳೂ ಅಂಗೀಕರಿಸುವುದರಿಂದ ನೀನು ನಿರ್ವಿಕಲ್ಪಕಜ್ಞಾನವನ್ನು ಪ್ರಸವಿಸುವಳೆಂದು ಶಂಕಿಸಿದ ದೃಷ್ಟಾಂತವಾಕ್ಯವೆಂಬ ಮಾತೆಯ ಸ್ಥೂಲ ಉದರದಲ್ಲಿ ನಿರ್ವಿಕಲ್ಪಕಜ್ಞಾನವೆಂಬ ಪುತ್ರಗರ್ಭವೇ ಇಲ್ಲ. ಆದ್ದರಿಂದ ನಿನ್ನ ದೃಷ್ಟಾಂತವಾಕ್ಯವು ಅಸಂಗತವಾದುದು ಎಂದು ಅಭಿಪ್ರಾಯ.

**ವಂಧ್ಯಾಸುತಾದೇಡಮೂಕಾತ್ ಕಾ ಭೀತಿಃ ಪ್ರತಿವಾದಿನಾಮ್ ।**
**ಅತಸ್ತ್ವತ್ಪ್ರಕ್ರಿಯಾ ಸರ್ವಾ ವ್ಯಾಹತೇತಿ ಮತಿರ್ಮಮ ॥ ೯೩೪ ॥**

**ಅರ್ಥ-**ವಂಧ್ಯಾಸುತಾತ್ = ವಂಧ್ಯಾಸುತನಾದ, ಏಡಮೂಕಾತ್ = ಜನ್ಮತಃ ಮೂಕನಿಂದ, ಪ್ರತಿವಾದಿನಾಮ್ = ಪ್ರತಿವಾದಿಗಳಿಗೆ, ಕಾ ಭೀತಿಃ = ಯಾವ ಭೀತಿಯು ಉಂಟಾಗುತ್ತದೆ? ಅತಃ = ಆದ್ದರಿಂದ, ಸರ್ವಾ ತ್ವತ್ಪ್ರಕ್ರಿಯಾ = ನಿನ್ನ ಎಲ್ಲಾ ಪ್ರಕ್ರಿಯೆಯೂ, ವ್ಯಾಹತೇತಿ = ವ್ಯಾಹತವೆಂದು, ಮಮ ಮತಿಃ = ನನ್ನ ಅಭಿಪ್ರಾಯ.

**ಅನುವಾದ-** ವಂಧ್ಯಾಪುತ್ರನಾದ ಏಡಮೂಕನಿಂದ ಪ್ರತಿವಾದಿಗಳಿಗೆ ಯಾವ ಭೀತಿ ಉಂಟಾಗುತ್ತದೆ? ಆದ್ದರಿಂದ ನಿನ್ನ ಪ್ರಕ್ರಿಯೆ ಎಲ್ಲವೂ ವ್ಯಾಹತವಾದುದೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಶಬ್ದಜನ್ಯಾಪರೋಕ್ಷಜ್ಞಾನಸ್ಯೇವ ವಂಧ್ಯಾಸುತಪ್ರಾಯತ್ವಾತ್ ತವಾಪಿ ನಿರ್ವಿಕಲ್ಪಕಸ್ಯ ಸಾಧನಬಾಧನಾಕ್ಷಮತ್ವೇನ ಏಡಮೂಕಪ್ರಾಯತ್ವಾತ್ ಕಾ ಭೀತಿಃ ಪ್ರತಿವಾದಿನಾಮಿತ್ಯಾಹ– **ವಂಧ್ಯಾಸುತಾದಿತಿ ॥ ೯೩೪ ॥**

**ವಿವರಣೆ-** ಶಬ್ದಜನ್ಯಾಪರೋಕ್ಷಜ್ಞಾನವು ವಂಧ್ಯಾಸುತಪ್ರಾಯವಾದುದು. ನಿರ್ವಿಕಲ್ಪಕಜ್ಞಾನವಾದರೂ ಸಹ ಸಾಧನಬಾಧನ ಕ್ಷಮವಲ್ಲವಾದ್ದರಿಂದ ಏಡಮೂಕ ಪ್ರಾಯವಾದುದು. ಆದರಿಂದ ಪ್ರತಿವಾದಿಗಳಾದ ನಮಗೆ ಯಾವು ಭೀತಿಯೂ ಇಲ್ಲ ಎಂದು ಅಭಿಪ್ರಾಯ.

**ಸತ್ತ್ವಪ್ರತ್ಯಕ್ಷಪಾರ್ಥಸ್ತದಪಾರ್ಥೀಕುರುತೇ ರಿಪುಮ್ ।**
**ಅಖಂಡಾರ್ಥಮತೇ ನಿರ್ವಿಕಲ್ಪಕತ್ವಮತೇನ ಚ ।**
**ಮಿಥ್ಯಾತ್ವೋಲ್ಲೇಖಿಮಾನಸ್ಯ ಶ್ರೋತಾ ಕರ್ಣೋ ನ ಯದ್ ಭುವಿ ॥೯೩೫॥**

**ಅರ್ಥ-**ತತ್= ಆ ಕಾರಣದಿಂದ, ಸತ್ತ್ವಪ್ರತ್ಯಕ್ಷಪಾರ್ಥಃ = ಸತ್ತ್ವಪ್ರತ್ಯಕ್ಷನೆಂಬ ಅರ್ಜುನನು, ರಿಪುಮ್ = ತನ್ನ ಶತ್ರುವನ್ನು, ಅಪಾರ್ಥೀಕುರುತೇ = ತನಗೆ

ಅಸಮಾನನನ್ನಾಗಿ ಮಾಡುತ್ತಾನೆ. ಯತ್ = ಏಕೆಂದರೆ, ಅಖಂಡಾರ್ಥಮತೇ = ಅಖಂಡಾರ್ಥವಾದದಲ್ಲಿಯೂ, ಚ = ಮತ್ತು, ನಿರ್ವಿಕಲ್ಪಕತ್ವಮತೇನ= ನಿರ್ವಿಕಲ್ಪಕವಾದಕ್ಕೆ ಅನುಸಾರವಾಗಿಯೂ, ಮಿಥ್ಯಾತ್ವೋಲ್ಲೇಖಿಮಾನಸ್ಯ = ಮಿಥ್ಯಾತ್ವವನ್ನು ಉಲ್ಲೇಖಿಸುವ ಪ್ರಮಾಣವನ್ನು, ಶ್ರೋತಾ = ಕೇಳುವ, ಕರ್ಣಃ = ಒಬ್ಬ ಕರ್ಣನು (ವಿದ್ವಾಂಸರ ಕರ್ಣವು), ಭುವಿ ನ = ಭೂಮಿಯಲ್ಲಿ ಇಲ್ಲ.

**ಅನುವಾದ-** ಆದ್ದರಿಂದ ಸತ್ತ್ವಪ್ರತ್ಯಕ್ಷನೆಂಬ ಪಾರ್ಥನು ತನ್ನ ಶತ್ರುಗಳನ್ನು ತನಗೆ ಅಸಮಾನರಾಗಿ ಎಂದರೆ ತನಗಿಂತ ದುರ್ಬಲರನ್ನಾಗಿ ಮಾಡುತ್ತಾನೆ. ಏಕೆಂದರೆ, ಅಖಂಡಾರ್ಥಮತದಲ್ಲಿಯೂ, ಹಾಗೆಯೇ ನಿರ್ವಿಕಲ್ಪಕತ್ವಮತದಲ್ಲಿಯೂ, ಮಿಥ್ಯಾತ್ವವನ್ನು ಉಲ್ಲೇಖಿಸುವ ಪ್ರಮಾಣವನ್ನು ಕೇಳುವ ಒಬ್ಬ ಕರ್ಣನೂ (ಒಬ್ಬ ವಿದ್ವಾಂಸನ ಶ್ರೋತ್ರವೂ) ಭೂಮಿಯಲ್ಲಿ ಇಲ್ಲ.

**ಭಾವವಿಲಾಸಿನೀ–** ತತ್‌ತಸ್ಮಾತ್ ಸ್ವಬಾಧಕತ್ವೇನಾಭಿಮತಚರಮಪ್ರತ್ಯಕ್ಷಸ್ಯ ನಿರ್ವಿಕಲ್ಪಕರೂಪತ್ವಾತ್। ಅಪಾರ್ಥೀಕುರುತೇ ವ್ಯರ್ಥೀಕುರುತೇ । ನನು ಕರ್ಣೋಽಸ್ತಿ ಚೇತ್ ಕಥಂ ಪಾರ್ಥರಿಪೋರ್ವ್ಯೆಯರ್ಥ್ಯಮಿತ್ಯತಃ ಸ ಏವ ನಾಸ್ತೀತ್ಯಪಿ ಸಾಹಿತ್ಯಮುದ್ರಯೈವಾಹ – **ಅಖಂಡಾರ್ಥೇತಿ॥** ಕರ್ಣಃ ವಿದುಷಾಂ ಕರ್ಣಃ । ಅಖಂಡಾರ್ಥವಾದಿನಾ ನಿರ್ವಿಕಲ್ಪಕವಾದಿನಾ ಚ ತ್ವಯಾ ಮಿಥ್ಯಾತ್ವೋಲ್ಲೇಖಿಮಾನಮಸ್ತೀತ್ಯುಕ್ತೇ ವ್ಯಾಹತವಾಕ್ಯಮಿದಂ ವಿದ್ವತ್‌ಕರ್ಣೋ ನ ಶ್ರೋಷ್ಯತಿ। ಅತೋಽಸ್ಮತ್ ಪಾರ್ಥಸ್ಯ ನ ಕ್ವಾಪಿ ವಿರೋಧೀತಿ ಭಾವಃ । ಕರ್ಣೋಽಸ್ತಿ ಚೇತ್ಸೋಽಪಿ ಪೃಥಾಸುತತ್ವಾದಸ್ಮತ್ ಪಾರ್ಥಸ್ಯ ಸಮಾನವೈರೀ ಸ್ಯಾತ್ । ತದಭಾವೇ ತ್ವಯಾ ಪರಿಕಲ್ಪಿತಾನ್ ಸರ್ವಾನಪಿ ಶತ್ರೂನಪಾರ್ಥಾನ್ ಪಾರ್ಥವ್ಯತಿರಿಕ್ತಾನತ ಏವ ಸ್ವಾಸಮಾನಾನ್ ಕರೋತೀತಿ ವಾಽಪಾರ್ಥೀಕುರುತ ಇತ್ಯಸ್ಯಾರ್ಥಃ ॥ ೯೩ ॥

**ವಿವರಣೆ-** ಸತ್ತ್ವಪ್ರತ್ಯಕ್ಷವು ಅರ್ಜುನಸ್ಥಾನದಲ್ಲಿದೆ. ಅವನ ಶತ್ರುವೆಂದರೆ ಚರಮಸಾಕ್ಷಾತ್ಕಾರ. ಅದು ದುರ್ಬಲವಾದುದರಿಂದ ಅರ್ಜುನನಿಂದಲೇ ಬಾಧಿತವಾಗುತ್ತದೆ. ಪ್ರತಿಭಟನಾದ ಕರ್ಣನು ಇರುವಾಗ ಅರ್ಜುನನು ಹೇಗೆ ಬಾಧಿಸುತ್ತಾನೆ ಎಂದು ಶಂಕಿಸಿದರೆ, ಅಖಂಡಾರ್ಥವನ್ನು ಅಂಗೀಕರಿಸುವುದರಿಂದ, ನಿರ್ವಿಕಲ್ಪಕತ್ವವಾದವನ್ನು ಅಂಗೀಕರಿಸುವುದರಿಂದ, ಚರಮಸಾಕ್ಷಾತ್ಕಾರವು ಮಿಥ್ಯಾತ್ವವನ್ನೇ ಉಲ್ಲೇಖಮಾಡುವುದಿಲ್ಲ. ಆದ್ದರಿಂದ ಮಿಥ್ಯಾತ್ವವನ್ನು ಉಲ್ಲೇಖಮಾಡುವ ಕರ್ಣಸ್ಥಾನದಲ್ಲಿರುವ ಒಬ್ಬ ಪ್ರತಿಭಟನೇ ಇಲ್ಲವಾದ್ದರಿಂದ ಸತ್ತ್ವಪ್ರತ್ಯಕ್ಷಪಾರ್ಥನು ತನ್ನ ಶತ್ರುವನ್ನು ವ್ಯರ್ಥಗೊಳಿಸುತ್ತಾನೆ. ನಿರ್ವಿಕಲ್ಪಕವಾದದಲ್ಲಿ ಮತ್ತು ಅಖಂಡಾರ್ಥವಾದದಲ್ಲಿ ಚರಮಸಾಕ್ಷಾತ್ಕಾರವು ಮಿಥ್ಯಾತ್ವವನ್ನು ಉಲ್ಲೇಖಮಾಡುತ್ತದೆ ಎಂದು ಹೇಳಿದರೆ, ವ್ಯಾಹತವಾಗುವುದರಿಂದ ಅದನ್ನು ಒಬ್ಬ ವಿದ್ವಾಂಸನೂ ತನ್ನ ಕಿವಿಯಿಂದ ಕೇಳುವುದಿಲ್ಲ. ಆದ್ದರಿಂದ ಸತ್ತ್ವಪ್ರತ್ಯಕ್ಷದ ಎದುರಿನಲ್ಲಿ ಯಾವ ವಿರೋಧಿಪ್ರಮಾಣವೂ ಇಲ್ಲ ಎಂದು ಅಭಿಪ್ರಾಯ.

**ಅತಿದೂರತ್ವಾದಿದೋಷಗ್ರಾಹಿಣಾ ಸಾಕ್ಷಿಣೈವ ವಾ ।**
**ಪರೀಕ್ಷಾಯುಕ್ತಸುದೃಢಪ್ರತ್ಯಕ್ಷಾಂತರತೋಽಪಿ ವಾ ।**
**ಬಾಧೇ ತು ಲಬ್ಧಾವಸರಸ್ತತ್ರಾಽನ್ಯೋಽಪ್ಯವತಿಷ್ಠತೇ ॥ ೯೩೬ ॥**

**ಅರ್ಥ**-ಅತಿದೂರತ್ವಾದಿದೋಷಗ್ರಾಹಿಣಾ = ಅತಿದೂರತ್ವಾದಿದೋಷಗ್ರಾಹಕವಾದ, ಸಾಕ್ಷಿಣೈವ = ಸಾಕ್ಷಿಯಿಂದಲೇ, ವಾ = ಅಥವಾ, ಪರೀಕ್ಷಾಯುಕ್ತಸುದೃಢ-ಪ್ರತ್ಯಕ್ಷಾಂತರತೋಽಪಿ = ಪರೀಕ್ಷಣ ಸಹಕೃತವಾದ ಪ್ರಬಲಪ್ರತ್ಯಕ್ಷದಿಂದಲಾಗಲಿ, ಬಾಧೇ ತು = ಬಾಧವು ಉಂಟಾದರೆ ಮಾತ್ರ, ಲಬ್ಧಾವಸರಃ = ಅವಕಾಶವನ್ನು ಹೊಂದಿದ್ದಾಗಿ, ತತ್ರ = ಅಂತಹ ಪ್ರತ್ಯಕ್ಷಕ್ಕೆ ಎದುರಾಗಿ, ಅನ್ಯೋಽಪಿ = ಆಗಮ ಮತ್ತು ಅನುಮಾನಗಳು, ಅವತಿಷ್ಠತೇ = ನಿಲ್ಲುತ್ತವೆ.

**ಅನುವಾದ**- ಅತಿದೂರತ್ವಾದಿ ದೋಷ ಗ್ರಾಹಕವಾದ ಸಾಕ್ಷಿಯಿಂದಲಾಗಲೀ ಅಥವಾ ಪರೀಕ್ಷಾ ಸಹಕೃತವಾದ ಪ್ರಬಲಪ್ರತ್ಯಕ್ಷದಿಂದಲಾಗಲೀ ಬಾಧವು ಉಂಟಾದರೆ ಮಾತ್ರ ಅನುಮಾನ ಮತ್ತು ಆಗಮಗಳು ಒಂದು ಅವಕಾಶವನ್ನು ಹೊಂದಿ ಪ್ರತ್ಯಕ್ಷಕ್ಕೆ ವಿರೋಧಿಯಾಗಿ ನಿಲ್ಲುತ್ತವೆ.

**ಭಾವವಿಲಾಸಿನೀ**– ನನ್ವತಿದೂರಸ್ಥಚಂದ್ರಾದಿವಿಷಯೇ ಪ್ರಾದೇಶಪರಿಮಿತತ್ವಾದಿಪ್ರತ್ಯಕ್ಷಮ್ ಆಗಮಬಾಧ್ಯಂ ದೃಷ್ಟಮಿತಿ ಶಂಕಾಂ ಪರಿಹರ್ತುಂ ತತ್ರಾಪಿ ಪ್ರಬಲಪ್ರತ್ಯಕ್ಷಾದೇವ ದುರ್ಬಲ-ಪ್ರತ್ಯಕ್ಷಸ್ಯಾಸ್ಯ ಬಾಧೋನ ತ್ವಾಗಮಮಾತ್ರಾದಿತಿ ಸಯುಕ್ತಿಕಮುಪಪದಾಯತಿ ॥ **ಅತಿದೂರತ್ವೇ-ತ್ಯಾದಿನಾ ವಿಸ್ತರೋಽಸ್ಯ ಪ್ರಮೇಯಸ್ಯೇತ್ಯಂತೇನ ಗ್ರಂಥೇನ** ॥ ಚಂದ್ರದಾವಸ್ಮದೀಯ ಪ್ರತ್ಯಕ್ಷಾ-ಸಂಭವಾತ್ ಅತಿದೂರತ್ವಾದಿದೋಷಗ್ರಾಹಿಣಾ ಸಾಕ್ಷಿಣೇತ್ಯುಕ್ತಮ್ । ಶುಕ್ತಿರಜತಾದಿಪ್ರತ್ಯಕ್ಷೇ ದೂರಸ್ಥಪರ್ವತೇ ವೃಕ್ಷಾದೇರ್ಹ್ರಸ್ವತ್ವಪ್ರತ್ಯಕ್ಷೇ ಚ ಸಮೀಪಗಮನೇ ಸತ್ಯಸ್ಮದೀಯ ಪ್ರಬಲಪ್ರತ್ಯಕ್ಷೇಣೈವ ಬಾಧಸಂಭವಾತ್ ಪರೀಕ್ಷಾಯುಕ್ತಸುದೃಢಪ್ರತ್ಯಕ್ಷಾಂತರತ ಇತ್ಯುಕ್ತಮ್ । ತತ್ರಾಪಿ ಶುಕನಾರದಾದಿಪ್ರತ್ಯಕ್ಷಸಂಭವಾದ್ವಾ ಉಭಯೋರಪಿ ಬಾಧಕತ್ವಸ್ಫೋರಣಾಯ ಉಭಯತ್ರಾಪಿ ವಿಶೇಷಣಮ್ । ಅನ್ಯಃ ಆಗಮಾದಿಃ । ಮೃತಮಾರಕವದವತಿಷ್ಠತೇ ॥ ೯೩೬ ॥

**ವಿವರಣೆ**- ಚಂದ್ರಪ್ರಾದೇಶತ್ವವಿಷಯದಲ್ಲಿ ಪ್ರತ್ಯಕ್ಷವು ಆಗಮಬಾಧ್ಯವಾಗಿದೆ. ಆದುದರಿಂದ ಪ್ರತ್ಯಕ್ಷವು ಆಗಮಕ್ಕಿಂತ ದುರ್ಬಲ ಎಂದು ಹೇಳಿದರೆ, ಪ್ರತ್ಯಕ್ಷಪ್ರಾಬಲ್ಯವನ್ನು ಇಲ್ಲಿ ಉಪಪಾದನೆ ಮಾಡುತ್ತಾರೆ. ಅತಿದೂರತ್ವಾದಿದೋಷವಿರುವಾಗ ಪ್ರತ್ಯಕ್ಷವು ದುರ್ಬಲವೆಂದು ಮೊದಲೇ ಸಾಕ್ಷಿಯು ತಿಳಿದಿದೆ. ಆದ್ದರಿಂದ ಅಂತಹ ಸಂದರ್ಭದಲ್ಲಿ ಹುಟ್ಟುವ ಜ್ಞಾನವು ಬಾಧಿತಪ್ರಾಯವಾಗಿ ದುರ್ಬಲವಾಗಿಯೇ ಹುಟ್ಟುತ್ತದೆ. ಅನಂತರ ಪ್ರವೃತ್ತವಾಗುವ ಅನುಮಾನಾದಿಗಳು ಆ ಪ್ರತ್ಯಕ್ಷಕ್ಕೆ ಬಾಧಕಗಳೆಂದು ಹೇಳಲ್ಪಡುತ್ತವೆ, ಹೊರತು ನಿರ್ದುಷ್ಟಪ್ರತ್ಯಕ್ಷವಿಷಯವಾದುದು ಎಂದೂ ಅನುಮಾನಾಗಮಬಾಧಿತವಾಗುವುದಿಲ್ಲ ಎಂದು ಅಭಿಪ್ರಾಯ.

ದೃಢಪ್ರತ್ಯಕ್ಷಬಾಧಾಯ ನಾಲಂ ಮಾನಸಹಸ್ರಕಮ್ ।
ಪ್ರತ್ಯಕ್ಷಸ್ಯ ಪೃಥಙ್ಮಾನಂ ಕಿಮಿತ್ಯಾಭಾಣಕಂ ಸ್ಮರ ॥ ೯೩೭ ॥

**ಅರ್ಥ**-ದೃಢಪ್ರತ್ಯಕ್ಷಬಾಧಾಯ = ಪ್ರಬಲವಾದ ಪ್ರತ್ಯಕ್ಷವನ್ನು ಬಾಧಿಸಲು, ಮಾನಸಹಸ್ರಕಮ್ = ಸಹಸ್ರ ಪ್ರಮಾಣಗಳೂ, ನಾಲಂ = ಸಮರ್ಥವಾಗುವುದಿಲ್ಲ. ಪ್ರತ್ಯಕ್ಷಸ್ಯ = ಪ್ರತ್ಯಕ್ಷಕ್ಕಿಂತಲೂ, ಪೃಥಙ್ಮಾನಂ = ದೊಡ್ಡದಾದ ಬೇರೆ ಪ್ರಮಾಣವು, ಕಿಂ = ಯಾವುದು, ಇತಿ = ಎಂಬ, ಆಭಾಣಕಂ = ಗಾದೆಯನ್ನು, ಸ್ಮರ = ಸ್ಮರಿಸಿಕೋ.

**ಅನುವಾದ**- ಪ್ರಬಲಪ್ರತ್ಯಕ್ಷವನ್ನು ಬಾಧಿಸಲು ಸಹಸ್ರ ಪ್ರಮಾಣಗಳೂ ಸಮರ್ಥವಾಗುವುದಿಲ್ಲ. ಪ್ರತ್ಯಕ್ಷಕ್ಕಿಂತ (ದೊಡ್ಡದಾದ) ಪ್ರಮಾಣ ಯಾವುದು ಎಂಬ ಗಾದೆಯನ್ನು ಸ್ಮರಿಸು.

**ಭಾವವಿಲಾಸಿನೀ**– ದೃಢಪ್ರತ್ಯಕ್ಷಬಾಧಾಯ ಅತಿದೂರತ್ವಾದಿದೋಷರಹಿತ ಪ್ರತ್ಯಕ್ಷಬಾಧಾಯ ಉಕ್ತರೀತ್ಯಾ ದುಷ್ಟಪ್ರತ್ಯಕ್ಷಬಾಧನಾಯಾಪ್ಯಸಮರ್ಥಃ ಪ್ರಬಲಪ್ರತ್ಯಕ್ಷಂ ಕಥಂ ಬಾಧಯೇದಿತಿ ಭಾವಃ ॥ ೯೩೭ ॥

ಸರ್ವಾಪಲಾಪೀ ಚಾರ್ವಾಕೋಽಪ್ಯಾಹ ಪ್ರತ್ಯಕ್ಷಮಾನತಾಮ್ ।
ತಸ್ಯಾಪ್ಯಮಾನತಾಂ ಯಸ್ತು ಬ್ರೂತೇ ಸೋಽತ್ಯಂತಗರ್ಹಿತಃ ॥ ೯೩೮ ॥

ದೂರಸ್ಥದೀರ್ಘವೃಕ್ಷಸ್ಯ ಹ್ರಸ್ವತಾ ದೃಶ್ಯತೇಽಖಿಲೈಃ ।
ಅತಃ ಪ್ರಮಾಣಗ್ರಹಣೇ ಸಿದ್ಧೋ ದೋಷೋಽತಿದೂರತಾ ॥ ೯೩೯ ॥

ದೇಶಸ್ಯ ವಿಪ್ರಕರ್ಷಶ್ಚ ದೂರತಾ ನಾಮ ನಾಪರಾ ।
ದೇಶಸ್ಯ ಸಾಕ್ಷಿವೇದ್ಯತ್ವಾದ್ ದೋಷೋಽಸೌ ಸಾಕ್ಷಿಗೋಚರಃ ॥ ೯೪೦ ॥

ಅತಿದೂರತ್ವದೋಷಸ್ಯ ಗ್ರಾಹಿಣಾ ಸಾಕ್ಷಿಣೈವ ತತ್ ।
ದತ್ತೇಽವಕಾಶೇ ಚಂದ್ರಸ್ಯ ಪ್ರಾದೇಶತ್ವಾದಿ ಬಾಧ್ಯತೇ ॥ ೯೪೧ ॥

**ಅರ್ಥ**-ಸರ್ವಾಪಲಾಪೀ = ಎಲ್ಲವನ್ನೂ ಅಪಲಾಪ ಮಾಡುವ, ಚಾರ್ವಾಕೋಽಪಿ = ಚಾರ್ವಾಕನೂ ಸಹ, ಪ್ರತ್ಯಕ್ಷಮಾನತಾಮ್ = ಪ್ರತ್ಯಕ್ಷಪ್ರಾಮಾಣ್ಯವನ್ನು, ಆಹ = ಹೇಳುತ್ತಾನೆ. ಯಸ್ತು = ಯಾವನು, ತಸ್ಯಾಪಿ = ಅಂತಹ ಪ್ರತ್ಯಕ್ಷಕ್ಕೂ, ಅಮಾನತಾಂ ಬ್ರೂತೇ = ಅಪ್ರಾಮಾಣ್ಯವನ್ನು ಹೇಳುತ್ತಾನೆಯೋ, ಸಃ = ಅವನು, ಅತ್ಯಂತಗರ್ಹಿತಃ = ಅತ್ಯಂತಗರ್ಹಿತನಾದವನು.

ದೂರಸ್ಥದೀರ್ಘವೃಕ್ಷಸ್ಯ = ದೂರದಲ್ಲಿರುವ ಎತ್ತರವಾದ ಮರಕ್ಕೆ, ಅಖಿಲೈಃ = ಎಲ್ಲರಿಂದಲೂ ಹ್ರಸ್ವತಾ = ಹ್ರಸ್ವತ್ವವೇ, ದೃಶ್ಯತೇ = ಕಾಣಲ್ಪಡುತ್ತದೆ.ಅತಃ = ಆದ್ದರಿಂದ,

ಪ್ರಮಾಣಗ್ರಹಣೇ = ಪರಿಮಾಣವನ್ನು ಗ್ರಹಣಮಾಡುವ ವಿಷಯದಲ್ಲಿ, ಅತಿದೂರತಾ = ಅತಿದೂರತ್ವವೆಂಬುದು, ದೋಷಃ = ದೋಷವೆಂದು, ಸಿದ್ಧಾ = ಸಿದ್ಧವಾಗಿದೆ.

ದೂರತಾ ನಾಮ = ದೂರತ್ವವೆಂದರೆ, ದೇಶಸ್ಯ ವಿಪ್ರಕರ್ಷಶ್ಚ = ದೇಶದ ವಿಪ್ರಕರ್ಷವೇ, ಅಪರಾ ನ = ಬೇರೆಯಲ್ಲ, ದೇಶಸ್ಯ ಸಾಕ್ಷಿವೇದ್ಯತ್ವಾತ್ = ದೇಶವು ಸಾಕ್ಷಿವೇದ್ಯವಾಗಿರುವುದರಿಂದ, ಅಸೌ ದೋಷಃ = ಈ ಅತಿದೂರತ್ವದೋಷವು, ಸಾಕ್ಷಿಗೋಚರಃ= ಸಾಕ್ಷಿಗೆ ವಿಷಯವಾಗುತ್ತದೆ. ಅತಿದೂರತ್ವದೋಷಸ್ಯ= ಅತಿದೂರತ್ವದೋಷವನ್ನು, ಗ್ರಾಹಿಣಾ = ಗ್ರಹಿಸುವ, ಸಾಕ್ಷಿಣೈವ = ಸಾಕ್ಷಿಯಿಂದಲೇ, ಅವಕಾಶೇ ದತ್ತೇ = ಅವಕಾಶವು ಕೊಡಲ್ಪಡುತ್ತಿರಲು, ಚಂದ್ರಸ್ಯ = ಚಂದ್ರನ, ತತ್ ಪ್ರಾದೇಶತ್ವಾದಿ = ಆ ಹ್ರಸ್ವಪರಿಮಾಣವು, ಬಾಧ್ಯತೇ = ಬಾಧಿಸಲ್ಪಡುತ್ತದೆ.

**ಅನುವಾದ-** ಸರ್ವವನ್ನೂ ಅಪಲಾಪವಮಾಡುವ ಚಾರ್ವಾಕನೂ ಸಹ ಪ್ರತ್ಯಕ್ಷಪ್ರಾಮಾಣ್ಯವನ್ನು ಅಂಗೀಕರಿಸುತ್ತಾನೆ. ಯಾವ ವಾದಿಯಾದರೋ ಅಂತಹ ಪ್ರತ್ಯಕ್ಷಕ್ಕೂ ಅಪ್ರಾಮಾಣ್ಯವನ್ನು ಹೇಳುತ್ತಾನೆಯೋ ಅವನು ಪರಮನಾಸ್ತಿಕನಾದವನು. ದೂರದಲ್ಲಿರುವ ಎತ್ತರವಾದ ಮರದ ಹ್ರಸ್ವತ್ವವು ಎಲ್ಲರಿಂದಲೂ ನೋಡಲ್ಪಡುತ್ತದೆ. ಆದ್ದರಿಂದ ಪರಿಮಾಣದ ವಿಷಯದಲ್ಲಿ ಅತಿದೂರತ್ವವು ದೋಷವೆಂದು ಸಿದ್ಧವಾಗಿದೆ.

ದೂರತ್ವವೆಂದರೆ ದೇಶದ ವಿಪ್ರಕರ್ಷವೇ ಹೊರತು ಬೇರೆಯಲ್ಲ. ದೇಶವು ಸಾಕ್ಷಿವೇದ್ಯವಾದುದರಿಂದ, ದೇಶದ ವಿಪ್ರಕರ್ಷರೂಪವಾದ ಅತಿದೂರತ್ವದೋಷವೂ ಸಾಕ್ಷಿಗೇ ವಿಷಯವಾಗುತ್ತದೆ.

ಅತಿದೂರತ್ವದೋಷವನ್ನು ಗ್ರಹಿಸುವ ಸಾಕ್ಷಿಯು ಅವಕಾಶವನ್ನು ಕೊಟ್ಟಮೇಲೆ ಚಂದ್ರಪ್ರಾದೇಶತ್ವಾದಿಗಳು ಬಾಧಿಸಲ್ಪಡುತ್ತವೆ.

**ಭಾವವಿಲಾಸಿನೀ–** ವಾದಿವಿವಾದಾಭಾವಾದಪಿ ಪ್ರತ್ಯಕ್ಷಮೇವ ಪ್ರಬಲಂ ಪ್ರಮಾಣಮಿತಿ ಭಾವೇನೋಕ್ತಮ್ ॥ **ಸರ್ವಾಪಲಾಪೀತಿ** ॥ ೯೩೮-೯೪೧ ॥

**ವಿವರಣೆ-** ದೋಷಗ್ರಾಹಿಯಾದ ಸಾಕ್ಷಿಯು ಜಾಗೃತವಾಗಿರುವಾಗ ಉಂಟಾಗುವ ಜ್ಞಾನವು ದುರ್ಬಲವಾಗಿ ಬಾಧಿತಪ್ರಾಯವಾಗಿಯೇ ಜನಿಸುತ್ತದೆ. ಅನಂತರ ಪ್ರವೃತ್ತವಾಗುವ ಪ್ರಮಾಣಾದಿಗಳು ಬಾಧಕಗಳೆಂದು ಉಪಚಾರದಿಂದ ಹೇಳಲ್ಪಡುತ್ತವೆ ಎಂದು ಅಭಿಪ್ರಾಯ.

ತತ್ರಾಪಿ ವಾಕ್ಯಮಾತ್ರೇಣ ಪ್ರತ್ಯಕ್ಷಸ್ಯ ನ ಬಾಧನಮ್ ।
ಬಲಿನಾ ಸಾಕ್ಷಿಣಾಽಧ್ಯಕ್ಷಮುತ್ಪತ್ತಾವೇವ ಶಿಕ್ಷ್ಯತೇ ॥ ೯೪೨ ॥

**ಅರ್ಥ-**ತತ್ರಾಪಿ = ಚಂದ್ರಪ್ರಾದೇಶತ್ವಪ್ರತ್ಯಕ್ಷದಲ್ಲಿಯೂ ಸಹ, ವಾಕ್ಯಮಾತ್ರೇಣ = ಕೇವಲ ವಾಕ್ಯದಿಂದ, ಪ್ರತ್ಯಕ್ಷಸ್ಯ = ಪ್ರತ್ಯಕ್ಷಕ್ಕೆ, ನ ಬಾಧನಮ್ = ಬಾಧವು ಉಂಟಾಗುವುದಿಲ್ಲ. ಬಲಿನಾ

= ಪ್ರಬಲವಾದ, ಸಾಕ್ಷಿಣಾ = ಸಾಕ್ಷಿಯಿಂದ, ಅಧ್ಯಕ್ಷಂ= ಚಂದ್ರಪ್ರಾದೇಶತ್ವಪ್ರತ್ಯಕ್ಷವು, ಉತ್ಪತ್ತಾವೇವ = ಹುಟ್ಟುವಾಗಲೇ, ಶಿಕ್ಷ್ಯತೇ = ಶಿಕ್ಷಿಸಲ್ಪಡುತ್ತದೆ.

**ಅನುವಾದ-** ಚಂದ್ರಪ್ರಾದೇಶತ್ವಗ್ರಹಣಸ್ಥಳದಲ್ಲಿಯೂ ಕೂಡ ಕೇವಲ ವಾಕ್ಯದಿಂದ ಪ್ರತ್ಯಕ್ಷಕ್ಕೆ ಬಾಧವಿಲ್ಲ. ಪ್ರಬಲವಾದ ಸಾಕ್ಷಿಯಿಂದಲೇ ಪ್ರಾದೇಶತ್ವಪ್ರತ್ಯಕ್ಷವು ಉತ್ಪತ್ತಿಯಾಗುವಾಗಲೇ ಶಿಕ್ಷಿಸಲ್ಪಡುತ್ತದೆ (ಬಾಧಿಸಲ್ಪಡುತ್ತದೆ).

**ಭಾವವಿಲಾಸಿನೀ-** ತತ್ರಾಪಿ ಚಂದ್ರಪ್ರಾದೇಶತ್ವಗ್ರಹಣಸ್ಥಲೇಽಪಿ । ಅಧ್ಯಕ್ಷಂ ಪ್ರಾದೇಶ-ಪರಿಮಿತತ್ವಪ್ರತ್ಯಕ್ಷಮ್ ॥ ೯೪೨ ॥

ದೃಢಪ್ರತ್ಯಕ್ಷಬಾಧಾಯ ವಾಕ್ಯಂ ಕ್ವಾಪಿ ನ ಶಕ್ನುತೇ ।
ನ ಚೇತ್ ಸಿಂಹೋ ದೇವದತ್ತೋ ಯಜ್ವಾ ಸ್ಯಾತ್ ಪ್ರಸ್ತರೋಽಪಿ ಚ ॥೯೪೩॥

**ಅರ್ಥ-**ವಾಕ್ಯಂ = ವಾಕ್ಯವು, ದೃಢಪ್ರತ್ಯಕ್ಷಬಾಧಾಯ = ದೃಢವಾದ ಪ್ರತ್ಯಕ್ಷವನ್ನು ಬಾಧಿಸಲು, ಕ್ವಾಪಿ = ಎಲ್ಲಿಯೂ, ನ ಶಕ್ನುತೇ = ಸಮರ್ಥವಾಗುವುದಿಲ್ಲ. ನಚೇತ್ = ಇಲ್ಲದಿದ್ದರೆ, ಸಿಂಹಃ = ಸಿಂಹವು, ದೇವದತ್ತಃ ಸ್ಯಾತ್ = ದೇವದತ್ತನಾಗಲಿ, ಪ್ರಸ್ತರೋಽಪಿ= ಪ್ರಸ್ತರವೂ ಕೂಡ, ಯಜ್ವಾ ಸ್ಯಾತ್ = ಯಜಮಾನನಾಗಲಿ.

**ಅನುವಾದ-** ವಾಕ್ಯವು ಎಲ್ಲಿಯೂ ದೃಢವಾದ ಪ್ರತ್ಯಕ್ಷವನ್ನು ಬಾಧಿಸಲು ಶಕ್ತವಾಗುವುದಿಲ್ಲ. ವಾಕ್ಯವು ದೃಢವಾದ ಪ್ರತ್ಯಕ್ಷವನ್ನು ಬಾಧಿಸುವುದಾದರೆ ಸಿಂಹವು ದೇವದತ್ತನಾಗಲಿ ಮತ್ತು ಪ್ರಸ್ತರವು ಯಜಮಾನನಾಗಲಿ.

**ಭಾವವಿಲಾಸಿನೀ-** ನಚೇತ್ ಆಗಮಸ್ಯ ದೃಢಪ್ರತ್ಯಕ್ಷಾಬಾಧಕತ್ವಂ ನ ಚೇತ್ ॥ ೯೪೩ ॥

ಲಕ್ಷಣಾವೃತ್ತಿಭಂಗಾತ್ ತದ್ ವಾಕ್ಯಂ ನಾಕ್ಷಸ್ಯ ಬಾಧಕಮ್ ।
ನಾನುಮಾಽಪ್ಯಸ್ಯ ಕಾಲಾತ್ಯಯಾಪದಿಷ್ಟಸ್ಯ ನಷ್ಟಿತಃ ॥ ೯೪೪ ॥

ವಿಸ್ತರೋಽಸ್ಯ ಪ್ರಮೇಯಸ್ಯ ಮೂಲಗ್ರಂಥಾಮೃತಾರ್ಣವೇ ।
ಬುದ್ಧಾವಾರೋಹಸಿದ್ಧ್ಯರ್ಥಂ ಸಂಗ್ರಹೋಽಯಂ ತತಸ್ತತಃ ॥ ೯೪೫ ॥

**ಅರ್ಥ-**ತತ್ = ಆದ್ದರಿಂದ, ಲಕ್ಷಣಾವೃತ್ತಿಭಂಗಾತ್ = ಲಕ್ಷಣಾವೃತ್ತಿಯ ಉಚ್ಛೇದ ಉಂಟಾಗುವುದರಿಂದ, ವಾಕ್ಯಂ = ವಾಕ್ಯವು, ಅಕ್ಷಸ್ಯ = ಪ್ರತ್ಯಕ್ಷಕ್ಕೆ, ನ ಬಾಧಕಮ್ = ಬಾಧಕವಲ್ಲ. ಅನುಮಾಪಿ = ಅನುಮಾನವೂ ಕೂಡ, ಅಸ್ಯ = ಈ ಪ್ರತ್ಯಕ್ಷಕ್ಕೆ, ಕಾಲಾತ್ಯಯಾಪದಿಷ್ಟಸ್ಯ = ಬಾಧರೂಪವಾದ ದೋಷದ, ನಷ್ಟಿತಃ = ಉಚ್ಛೇದವು ಬರುವ ಪ್ರಸಂಗದಿಂದ, ನ = ಬಾಧಕವಲ್ಲ.

ಅಸ್ಯ ಪ್ರಮೇಯಸ್ಯ = ಈ ಪ್ರಮೇಯದ, ವಿಸ್ತರಃ = ವಿಸ್ತಾರವಾದ ನಿರೂಪಣೆಯು, ಮೂಲಗ್ರಂಥಾಮೃತಾರ್ಣವೇ = ಮೂಲಗ್ರಂಥವೆಂಬ ಅಮೃತಸಮುದ್ರದಲ್ಲಿದೆ. ಬುದ್ಧಾವಾರೋಹಸಿದ್ಧ್ಯರ್ಥಂ = ಬುದ್ಧ್ಯಾರೋಹ ಸಲುವಾಗಿ, ಅಯಂ = ಇದು, ತತಸ್ತತಃ = ಅಲ್ಲಲ್ಲಿಂದ, ಸಂಗ್ರಹಃ = ಸಂಗ್ರಹರೂಪವಾದುದು.

**ಅನುವಾದ-** ಆದ್ದರಿಂದ ಲಕ್ಷಣಾವೃತ್ತಿಯ ಉಚ್ಛೇದಪ್ರಸಂಗವು ಬರುವುದರಿಂದ ವಾಕ್ಯವು ಪ್ರತ್ಯಕ್ಷಕ್ಕೆ ಬಾಧಕವಲ್ಲ. ಬಾಧರೂಪವಾದ ದೋಷಕ್ಕೆ ಉಚ್ಛೇದಪ್ರಸಂಗವು ಬರುವುದರಿಂದ ಅನುಮಾನವೂ ಪ್ರತ್ಯಕ್ಷಕ್ಕೆ ಬಾಧಕವಲ್ಲ. ಈ ಎಲ್ಲಾ ಪ್ರಮೇಯಗಳ ವಿಸ್ತಾರವು ಆಚಾರ್ಯರ ಮೂಲಗ್ರಂಥಗಳೆಂಬ ಅಮೃತಸಮುದ್ರದಲ್ಲಿದೆ. ಬುದ್ಧ್ಯಾರೋಹದ ಸಲುವಾಗಿ ಇದು ಅಲ್ಲಲ್ಲಿಂದ ಮಾಡಿರುವ ಒಂದು ಸಂಗ್ರಹ ಮಾತ್ರ.

**ಭಾವವಿಲಾಸಿನೀ-** ತತ್ ತಸ್ಮಾತ್ ಲೋಕೇ ವೇದೇಚ ವಾಕ್ಯತೋ ದೃಢಪ್ರತ್ಯಕ್ಷ-ಬಾಧಾದರ್ಶನಾತ್। ಅಸ್ಯ ದೃಢಪ್ರತ್ಯಕ್ಷಸ್ಯ ॥ ೯೪೪-೯೪೫ ॥

ಸತ್ತ್ವಪ್ರತ್ಯಕ್ಷಬಾಧೇ ಹಿ ಮಿಥ್ಯಾತ್ವಾರ್ಥಾ ಶ್ರುತಿರ್ಭವೇತ್ ।
ಬಾಧಿತೋಽರ್ಥಸ್ತು ವಾಕ್ಯಸ್ಯ ತವಾಪಿ ನ ಮಮಾಪಿ ನ ॥ ೯೪೬ ॥

ಮಿಥ್ಯಾತ್ವಾರ್ಥಶ್ರುತಿಬಲಾದೇವಾಕ್ಷಸ್ಯಾಸ್ಯ ಬಾಧನಮ್ ।
ನ ಹಿ ಸಾರ್ವಜನೀನೇಽಸ್ಮಿನ್ ಪ್ರತ್ಯಕ್ಷೇ ಬಾಧಕಾಂತರಮ್ ।
ಏವಂ ಚಾನ್ಯೋನ್ಯಾಶ್ರಯಾಖ್ಯದೋಷೋ ನ ಸ್ಯಾತ್ ಕಥಂ ವದ ॥೯೪೭॥

**ಅರ್ಥ-**ಸತ್ತ್ವಪ್ರತ್ಯಕ್ಷಬಾಧೇ ಹಿ = ಸತ್ತ್ವಪ್ರತ್ಯಕ್ಷವು ಬಾಧಿತವಾದರೆ ಮಾತ್ರ, ಶ್ರುತಿಃ = ಶ್ರುತಿಯು, ಮಿಥ್ಯಾತ್ವಾರ್ಥಾ = ಮಿಥ್ಯಾತ್ವವನ್ನು ಹೇಳುವುದಾಗಿ, ಭವೇತ್ = ಆಗುತ್ತದೆ. ಬಾಧಿತಃ = ಬಾಧಿತವಾದದ್ದು, ವಾಕ್ಯಸ್ಯ ಅರ್ಥಸ್ತು = ವ್ಯಾಕ್ಯಾರ್ಥವೆಂದು, ತವಾಪಿ ನ ಮಮಾಪಿ ನ = ನಿನಗೂ ಸಮ್ಮತವಲ್ಲ ಮತ್ತು ನನಗೂ ಸಮ್ಮತವಲ್ಲ.

ಮಿಥ್ಯಾತ್ವಾರ್ಥಶ್ರುತಿಬಲಾದೇವ = ಮಿಥ್ಯಾತ್ವವನ್ನು ಹೇಳುವ ಶ್ರುತಿಯ ಬಲದಿಂದಲೇ, ಅಸ್ಯ ಅಕ್ಷಸ್ಯ = ಘಟಾದಿಸತ್ವಗ್ರಾಹಿಯಾದ ಈ ಪ್ರತ್ಯಕ್ಷಕ್ಕೆ, ಬಾಧನಮ್ = ಬಾಧವು ಉಂಟಾಗಬೇಕು. ಸಾರ್ವಜನೀನೇ = ಸರ್ವಜನಾನುಭವಸಿದ್ಧವಾದ, ಅಸ್ಮಿನ್‌ಪ್ರತ್ಯಕ್ಷೇ = ಈ ಪ್ರತ್ಯಕ್ಷದಲ್ಲಿ, ಬಾಧಕಾಂತರಮ್ = ಬೇರೆ ಬಾಧಕವು, ನಹಿ = ಇಲ್ಲವಷ್ಟೇ? ಏವಂಚ = ಹೀಗಾದ್ದರಿಂದ, ಅನ್ಯೋನ್ಯಾಶ್ರಯಾಖ್ಯದೋಷಃ = ಅನ್ಯೋನ್ಯಾಶ್ರಯ- ರೂಪವಾದ ದೋಷವು, ಕಥಂ ನಸ್ಯಾತ್ = ಹೇಗೆ ಉಂಟಾಗುವುದಿಲ್ಲ ಎಂದು ವದ = ಹೇಳು.

**ಅನುವಾದ-** ಸತ್ತ್ವಪ್ರತ್ಯಕ್ಷವು ಬಾಧಿತವಾದರೆ ಮಾತ್ರ ಶ್ರುತಿಗೆ ಮಿಥ್ಯಾತ್ವರೂಪವಾದ ಅರ್ಥವು ಕೂಡುತ್ತದೆ. ಬಾಧಿತವಾದದ್ದು ವ್ಯಾಕ್ಯಾರ್ಥವಾಗುವುದೆಂದು ನಿನಗೂ

ಸಮ್ಮತವಲ್ಲ ಮತ್ತು ನನಗೂ ಸಮ್ಮತವಲ್ಲ. ಮಿಥ್ಯಾತ್ವವನ್ನು ಹೇಳುವ ಶ್ರುತಿಯ ಬಲದಿಂದಲೇ ಘಟಾದಿಸತ್ವಗ್ರಾಹಿಯಾದ ಈ ಪ್ರತ್ಯಕ್ಷಕ್ಕೆ ಬಾಧವನ್ನು ಹೇಳಬೇಕು. ಏಕೆಂದರೆ, ಸರ್ವಾನುಭವಸಿದ್ಧವಾದ ಈ ಪ್ರತ್ಯಕ್ಷಕ್ಕೆ ಬೇರೆ ಬಾಧಕವಿಲ್ಲ. ಹೀಗಾಗಿ, ಅನ್ಯೋನ್ಯಾಶ್ರಯರೂಪವಾದ ದೋಷವು ಹೇಗೆ ಉಂಟಾಗುವುದಿಲ್ಲ ಎಂದು ಹೇಳು.

**ಭಾವವಿಲಾಸಿನೀ**– ಮಿಥ್ಯಾತ್ವಶ್ರುತ್ಯೈವ ಪ್ರತ್ಯಕ್ಷಬಾಧೋಽನ್ಯೋನ್ಯಾಶ್ರಯೋಽಪಿ ಸ್ಯಾದಿತ್ಯಾಹ – ಸತ್ತ್ವೇತಿ ॥ ೯೪೬-೯೪೭ ॥

**ವಿವರಣೆ**– ಸತ್ತ್ವಪ್ರತ್ಯಕ್ಷವು ಬಾಧಿತವಾದರೆ ಮಿಥ್ಯಾತ್ವಶ್ರುತಿಯು ಮಿಥ್ಯಾತ್ವವನ್ನು ಹೇಳುತ್ತದೆ. ಮಿಥ್ಯಾತ್ವಶ್ರುತಿಯು ಮಿಥ್ಯಾತ್ವವನ್ನು ಹೇಳಿದರೆ, ಅದರ ವಿರೋಧದಿಂದ ಸತ್ತ್ವಪ್ರತ್ಯಕ್ಷವು ಬಾಧಿತವಾಗುತ್ತದೆ ಎಂಬ ಅನ್ಯೋನ್ಯಾಶ್ರಯದೋಷವು ಸ್ಪಷ್ಟವಾಗಿದೆ.

ನ ಚೇನ್ಮಾಣವಕಾದೇವ ಗೃಹದಾಹೋ ಭವೇತ್ ತವ ।
ಅಗ್ನಿರ್ಮಾಣವಕಶ್ಚೇತಿ ಯತೋ ವಾಗಸ್ತಿ ವೈದಿಕೀ ॥ ೯೪೮ ॥

**ಅರ್ಥ**-ನಚೇತ್ = ಇಲ್ಲದಿದ್ದರೆ, ಮಾಣವಕಾದೇವ = ಮಾಣವಕನಿಂದಲೇ, ತವ = ನಿನಗೆ, ಗೃಹದಾಹಃ = ಗೃಹದಾಹವು, ಭವೇತ್ = ಉಂಟಾಗಲಿ, ಯತಃ = ಏಕೆಂದರೆ, ಅಗ್ನಿರ್ಮಾಣವಕಃ = ಮಾಣವಕನು ಅಗ್ನಿಯಾಗಿದ್ದಾನೆ, ಇತಿ = ಎಂಬ, ವೈದಿಕೀ ವಾಕ್ ಚ = ವೇದವಾಕ್ಯವೂ, ಅಸ್ತಿ = ಇದೆ.

**ಅನುವಾದ**- ವಾಕ್ಯಾರ್ಥಕ್ಕೆ ಪ್ರತ್ಯಕ್ಷಬಾಧಾಭಾವವು ಅನಪೇಕ್ಷಿತವಾದರೆ, ಮಾಣವಕನಿಂದಲೇ ನಿನ್ನ ಗೃಹದಾಹವು ಉಂಟಾಗಲಿ. ಏಕೆಂದರೆ, ಅಗ್ನಿರ್ಮಾಣವಕಃ ಎಂದ ವೇದವಾಕ್ಯವು ಇದೆಯಷ್ಟೇ?

**ಭಾವವಿಲಾಸಿನೀ**– ನೇ ಚೇದ್ವಾಕ್ಯಾರ್ಥಸ್ಯ ಪ್ರತ್ಯಕ್ಷಾಬಾಧೋ ನಾಪೇಕ್ಷಿತಶ್ಚೇತ್ ॥ ೯೪೮ ॥

ಸರ್ವಮಾನನಿಷೇದ್ಧಾಽಪಿ ನ ಪ್ರತ್ಯಕ್ಷಂ ನಿಷೇಧತಿ ।
ಸತ್ತ್ವಪ್ರತ್ಯಕ್ಷಮೇತಸ್ಮಾತ್ ತತ್ತ್ವಪ್ರತ್ಯಕ್ಷಮೇವ ಹಿ ॥ ೯೪೯ ॥

**ಅರ್ಥ**-ಸರ್ವಮಾನನಿಷೇದ್ಧಾಽಪಿ = ಸರ್ವಪ್ರಮಾಣಗಳನ್ನು ನಿಷೇಧಿಸುವ ಚಾರ್ವಾಕನೂ ಕೂಡ, ಪ್ರತ್ಯಕ್ಷಂ = ಪ್ರತ್ಯಕ್ಷವನ್ನು, ನ ನಿಷೇಧತಿ = ನಿಷೇಧಿಸುವುದಿಲ್ಲ. ಏತಸ್ಮಾತ್ = ಈ ಕಾರಣದಿಂದ, ಸತ್ತ್ವಪ್ರತ್ಯಕ್ಷಂ = ಸತ್ತ್ವಪ್ರತ್ಯಕ್ಷವು, ತತ್ತ್ವಪ್ರತ್ಯಕ್ಷಮೇವ ಹಿ = ತಾತ್ತ್ವಿಕಪ್ರತ್ಯಕ್ಷವೇ ಆಗಿದೆಯಷ್ಟೇ?

**ಅನುವಾದ**- ಆಗಮ ಮತ್ತು ಅನುಮಾನರೂಪ ಪ್ರಮಾಣಗಳನ್ನು ನಿರಾಕರಿಸುವ ಚಾರ್ವಾಕನೂ ಕೂಡ ಪ್ರತ್ಯಕ್ಷವನ್ನು ನಿರಾಕರಿಸುವುದಿಲ್ಲ. ಈ ಕಾರಣದಿಂದ ಸತ್ತ್ವಪ್ರತ್ಯಕ್ಷವು, ತತ್ತ್ವಪ್ರತ್ಯಕ್ಷವೇ ಆಗಿದೆಯಷ್ಟೇ?

**ಭಾವವಿಲಾಸಿನೀ–** ಸರ್ವಮಾನನಿಷೇದ್ಧಾ ಪ್ರತ್ಯಕ್ಷೇತರಸರ್ವಮಾನನಿಷೇಧೀ ಚಾರ್ವಾಕಃ । ಏತಸ್ಮಾತ್ ಉಕ್ತಯುಕ್ತಿಜಾಲಾತ್ ॥ ೯೪೯ ॥

ತಸ್ಮಾದ್ ದೃಷ್ಟವ್ಯವಸ್ಥಾಯಾ ವಾಕ್ಯಮಾತ್ರೇಣ ವಾರಣಮ್ ।
ನಿವಾರಣಂ ಸ್ವಕೀಯಸ್ಯ ಪಾಂಡಿತ್ಯಸ್ಯೈವ ಕೇವಲಮ್ ।
ಅನ್ಯೋನ್ಯಾಶ್ರಯದೋಷಾಜ್ಞೇ ಕಥಂ ದೋಷಜ್ಞತಾ ಭವೇತ್ ॥ ೯೫೦ ॥

**ಅರ್ಥ**-ತಸ್ಮಾತ್ = ಆದ್ದರಿಂದ, ದೃಷ್ಟವ್ಯವಸ್ಥಾಯಾಃ = ಪ್ರತ್ಯಕ್ಷಕ್ಕೆ ಪ್ರಾಬಲ್ಯರೂಪವಾದ ಸರ್ವಾನುಭವಸಿದ್ಧವಾದ ವ್ಯವಸ್ಥೆಯನ್ನು, ವಾಕ್ಯಮಾತ್ರೇಣ = ಕೇವಲ ವಾಕ್ಯದಿಂದ, ವಾರಣಮ್= ನಿರಾಕರಿಸುವುದು, ಕೇವಲಮ್ = ಕೇವಲ, ಸ್ವಕೀಯಸ್ಯ = ತನ್ನ, ಪಾಂಡಿತ್ಯಸ್ಯೈವ = ಪಾಂಡಿತ್ಯವನ್ನೇ, ನಿವಾರಣಂ = ನಿರಾಕರಿಸುವುದಾಗಿದೆ. ಅನ್ಯೋನ್ಯಾಶ್ರಯದೋಷಾಜ್ಞೇ= ಇಂತಹ ಅನ್ಯೋನ್ಯಾಶ್ರಯದೋಷವನ್ನು ತಿಳಿಯದಿರುವವನಲ್ಲಿ, ಕಥಂ = ಹೇಗೆ, ದೋಷಜ್ಞತಾ= ವಿದ್ವತ್ತೆಯು, ಭವೇತ್ = ಉಂಟಾಗುತ್ತದೆ.

**ಅನುವಾದ-** ಆದ್ದರಿಂದ, ಪ್ರತ್ಯಕ್ಷವು ವಾಕ್ಯಕ್ಕಿಂತ ಪ್ರಬಲ ಎಂಬ ದೃಷ್ಟವಾದ ವ್ಯವಸ್ಥೆಯನ್ನು ನೀನು ಕೇವಲ ವಾಕ್ಯದಿಂದ ನಿರಾಕರಣೆಮಾಡುವುದಾದರೆ ಅದು ನಿನ್ನ ಪಾಂಡಿತ್ಯದ ನಿರಾಕರಣೆಯೇ ಆಗುತ್ತದೆ. ಸ್ಪಷ್ಟವಾದ ಅನ್ಯೋನ್ಯಾಶ್ರಯದೋಷವನ್ನು ತಿಳಿಯದಿದ್ದವನು ಹೇಗೆ ದೋಷಜ್ಞನಾಗುತ್ತಾನೆ?

**ಭಾವವಿಲಾಸಿನೀ–** ದೋಷಜ್ಞತಾ ವಿದ್ವತ್ತಾ ॥ ೯೫೦ ॥

**ವಿವರಣೆ-** 'ವಿದ್ವಾನ್ ವಿಪಶ್ಚಿದ್ ದೋಷಜ್ಞಃ' ಎಂದು ಕೋಶ. ದೋಷಜ್ಞ ಎಂದರೆ ವಿದ್ವಾನ್ ಎಂದು ಅರ್ಥ. ಅನ್ಯೋನ್ಯಾಶ್ರಯದೋಷವನ್ನು ತಿಳಿಯದಿದ್ದವನು ಹೇಗೆ ವಿದ್ವಾಂಸನಾಗುತ್ತಾನೆ ಎಂದು ತಾತ್ಪರ್ಯ.

ಯದಿ ದೃಷ್ಟಂ ಸಮಸ್ತಂ ಚ ವಾಕ್ಯಂ ಶಕ್ನೋತಿ ಬಾಧಿತುಮ್ ।
ಮಹಾವಾಕ್ಯಶತೈಸ್ತರ್ಹಿ ವಿಶಿಷ್ಟೈಕ್ಯಂ ಕುತೋ ನ ತೇ ।
ಮುಖ್ಯಂ ಜಡಾಜಡೈಕ್ಯಂ ಚ ವಾಕ್ಯೈಸ್ತೈಃ ಕಿಂ ನ ಸಾಧ್ಯತೇ ॥ ೯೫೧ ॥

**ಅರ್ಥ**-ಯದಿ = ಒಂದುಪಕ್ಷ, ದೃಷ್ಟಂ ಸಮಸ್ತಂ ಚ = ದೃಷ್ಟವಾದ ಎಲ್ಲವನ್ನೂ, ವಾಕ್ಯಂ = ವಾಕ್ಯವು, ಬಾಧಿತುಂ ಶಕ್ನೋತಿ = ಬಾಧಿಸಲು ಶಕ್ತವಾಗುವುದಾದರೆ, ತರ್ಹಿ = ಆಗ, ತೇ= ನಿನಗೆ, ಮಹಾವಾಕ್ಯಶತೈಃ = ನೂರು ಮಹಾವಾಕ್ಯಗಳಿಂದ, ವಿಶಿಷ್ಟೈಕ್ಯಂ = ವಿಶಿಷ್ಟೈಕ್ಯವು, ಕುತೋ ನ = ಏಕೆ ಇಲ್ಲ? ತೈಃ ವಾಕ್ಯೈಃ = ಆ ವಾಕ್ಯಗಳಿಂದ, ಮುಖ್ಯಂ = ಮುಖ್ಯವಾದ, ಜಡಾಜಡೈಕ್ಯಂ = ಜಡ ಮತ್ತು ಅಜಡಗಳ ಐಕ್ಯವೇ, ಕಿಂ ನ ಸಾಧ್ಯತೇ = ಏಕೆ ಸಾಧಿಸಲ್ಪಡುವುದಿಲ್ಲ?

**ಅನುವಾದ-** ಒಂದುಪಕ್ಷ ಪ್ರತ್ಯಕ್ಷದೃಷ್ಟವಾದ ಎಲ್ಲವನ್ನೂ ವಾಕ್ಯವು ಬಾಧಿಸಲು ಸಮರ್ಥವಾಗುವುದಾದರೆ, ಆಗ ನೂರುಮಹಾವಾಕ್ಯಗಳಿಂದಲಾದರೂ ನೀನು ವಿಶಿಷ್ಟೈಕ್ಯವನ್ನು ಏಕೆ ಅಂಗೀಕರಿಸುವುದಿಲ್ಲ? ಮತ್ತು ಆ ವಾಕ್ಯಗಳಿಂದ ಮುಖ್ಯವಾದ ಜಡಾಜಡೈಕ್ಯವನ್ನೇ ಏಕೆ ಸಾಧಿಸುವುದಿಲ್ಲ?

**ಭಾವವಿಲಾಸಿನೀ–** ಪರರೀತ್ಯೈವ ಚ ಪ್ರತ್ಯಕ್ಷಸ್ಯ ಪ್ರಾಬಲ್ಯಮುಪಪಾದಯತಿ ॥ ಯದೀತಿ ॥ ವಿಶಿಷ್ಟೈಕ್ಯಂ ಸ್ವಸ್ವಧರ್ಮವಿಶಿಷ್ಟಯೋರ್ಜೀವಬ್ರಹ್ಮಣೋರೈಕ್ಯಮ್ । ಮುಖ್ಯಂ ತಾದಾತ್ಮ್ಯರೂಪಮ್ ॥ ೬೫೧ ॥

ಸರ್ವಂ ಬ್ರಹ್ಮೇತಿ ವಾಚೋ ಹಿ ಸರ್ವಸ್ಯ ಬ್ರಹ್ಮರೂಪತಾ ।
ಮುಖ್ಯಾರ್ಥಃ ಸ ತು ಜೀವೇಽಪಿ ನೈವಾಂಗೀಕ್ರಿಯತೇ ತ್ವಯಾ ।
ಪ್ರತ್ಯಕ್ಷಬಾಧನೇ ಶಕ್ತೇರಭಾವೋ ಹ್ಯತ್ರ ಕಾರಣಮ್ ॥ ೬೫೨ ॥

**ಅರ್ಥ**-ಸರ್ವಂ ಬ್ರಹ್ಮೇತಿ ವಾಚೋ ಹಿ = ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯಕ್ಕಾದರೂ, ಸರ್ವಸ್ಯ ಬ್ರಹ್ಮರೂಪತಾ = ಎಲ್ಲ ಪದಾರ್ಥಗಳಿಗೂ ಬ್ರಹ್ಮರೂಪತ್ವವು, ಮುಖ್ಯಾರ್ಥಃ ಹಿ = ಮುಖ್ಯಾರ್ಥವಷ್ಟೇ ? ತತ್ = ಆ ಮುಖ್ಯಾರ್ಥವಾದರೂ, ಜೀವೇಽಪಿ = ಜೀವನಲ್ಲಿಯೂ ಕೂಡ, ತ್ವಯಾ = ನಿನ್ನಿಂದ, ನೈವ ಅಂಗೀಕ್ರೀಯತೇ = ಅಂಗೀಕರಿಸಲ್ಪಡುವುದಿಲ್ಲ. ಅತ್ರ = ಇದಕ್ಕೆ (ಇಲ್ಲಿ), ಪ್ರತ್ಯಕ್ಷಬಾಧನೇ = ಪ್ರತ್ಯಕ್ಷವನ್ನು ಬಾಧಿಸುವುದಕ್ಕೆ, ಶಕ್ತೇರಭಾವಃ = ವಾಕ್ಯಕ್ಕೆ ಶಕ್ತಿಯಿಲ್ಲದಿರುವುದೇ, ಕಾರಣಂ ಹಿ = ಕಾರಣವಷ್ಟೇ ?

**ಅನುವಾದ-** 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯಕ್ಕೆ ಸರ್ವಕ್ಕೂ ಬ್ರಹ್ಮರೂಪತ್ವವೇ ಮುಖ್ಯಾರ್ಥವಷ್ಟೇ ? ಆ ಮುಖ್ಯಾರ್ಥವನ್ನು ನೀನು ಜೀವನಲ್ಲಿಯೂ ಅಂಗೀಕರಿಸುವುದಿಲ್ಲ. ಪ್ರತ್ಯಕ್ಷವನ್ನು ಬಾಧಿಸುವುದಕ್ಕೆ ವಾಕ್ಯಕ್ಕೆ ಶಕ್ತಿಯಿಲ್ಲದಿರುವುದೇ ಇದಕ್ಕೆ ಕಾರಣವಷ್ಟೇ ?

**ಭಾವವಿಲಾಸಿನೀ–** ಸಃ ಮುಖ್ಯಾರ್ಥಃ । ಜೀವೇಽಪಿ ಮುಖತಃ ಪ್ರತೀತವಿಶಿಷ್ಟೈಕ್ಯ ಪರಿತ್ಯಾಗಾದಿತಿ ಭಾವಃ । ಶಕ್ತೇರಭಾವಃ ಆಗಮಸ್ಯ ಶಕ್ತೇರಭಾವಃ । ಅತ್ರ ಪ್ರತ್ಯಕ್ಷವಿರುದ್ಧಯಥಾಶ್ರುತೈಕ್ಯ-ಪರಿತ್ಯಾಗೇ ॥ ೬೫೨ ॥

ಜಹತೀ ಸರ್ವಧರ್ಮಾಂಶ್ಚ ಪದಾರ್ಥದ್ವಿತಯೇಽಪಿ ಹಿ ।
ವಿಶೇಷ್ಯಮಾತ್ರಮಜಹತ್ಯಪ್ರಸಿದ್ಧೈವ ಲಕ್ಷಣಾ ।
ತತ್ರಾಂಗೀಕ್ರಿಯತೇ ಶ್ರುತ್ಯಾಃ ಪ್ರತ್ಯಕ್ಷಸ್ಯ ವಿರೋಧತಃ ॥ ೬೫೩ ॥

**ಅರ್ಥ**-ಸರ್ವಧರ್ಮಾಂಶ್ಚ = ಎಲ್ಲ ಧರ್ಮಗಳನ್ನೂ, ಜಹತೀ = ಪರಿತ್ಯಾಗ ಮಾಡುವಂತಹ, ವಿಶೇಷ್ಯಮಾತ್ರಂ = ವಿಶೇಷ್ಯಾಂಶವನ್ನು ಮಾತ್ರ, ಅಜಹತೀ =

ಪರಿತ್ಯಾಗಮಾಡದಿರುವ, ಅಪ್ರಸಿದ್ಧೈವ ಲಕ್ಷಣಾ = ಒಂದು ಅಪ್ರಸಿದ್ಧವಾದ ಲಕ್ಷಣಾವೃತ್ತಿಯೇ, ಪದಾರ್ಥದ್ವಿತಯೇಽಪಿ = ತತ್ ತ್ವಮ್ ಎಂಬ ಎರಡು ಪದಗಳಲ್ಲಿಯೂ, ತತ್ರ = ತತ್ತ್ವಮಸಿ ವಾಕ್ಯದಲ್ಲಿ, ಪ್ರತ್ಯಕ್ಷಸ್ಯ ವಿರೋಧತಃ = ಪ್ರತ್ಯಕ್ಷವಿರೋಧದಿಂದ, ಶ್ರುತ್ಯಾಃ = ಶ್ರುತಿಗೆ, ಅಂಗೀಕ್ರಿಯತೇ = ಅಂಗೀಕರಿಸಲ್ಪಡುತ್ತದೆ.

**ಅನುವಾದ-** ತತ್ತ್ವಮಸಿ ಇತ್ಯಾದಿ ವಾಕ್ಯಗಳಲ್ಲಿ ಪ್ರತ್ಯಕ್ಷವಿರೋಧವು ಬರುವುದರಿಂದ, ತತ್-ತ್ವಮ್ ಈ ಎರಡು ಪದಗಳ ಅರ್ಥಗಳ ಸರ್ವಧರ್ಮಗಳನ್ನೂ ಪರಿತ್ಯಾಗಮಾಡುವಂತಹ ವಿಶೇಷ್ಯಾಂಶವನ್ನು ಪರಿತ್ಯಾಗಮಾಡದಿರುವಂತಹ ಒಂದು ಅಪ್ರಸಿದ್ಧವಾದ ಲಕ್ಷಣಾವೃತ್ತಿಯೇ ಸ್ವೀಕರಿಸಲ್ಪಡುತ್ತದೆಯಷ್ಟೇ?

**ಭಾವವಿಲಾಸಿನೀ–** ಸರ್ವಧರ್ಮಾನ್ ಸಾರ್ವಜ್ಞಾಲ್ಪಜ್ಞತ್ವಾದಿಧರ್ಮಾನ್ । ಜಹತೀ ತ್ಯಜಂತೀ । ಪದಾರ್ಥದ್ವಿತಯೇ ತತ್ತ್ವಂಪದಾರ್ಥಭೂತಜೀವಬ್ರಹ್ಮಣೋರಿತ್ಯರ್ಥಃ । ವಿಶೇಷ್ಯಮಾತ್ರಂ ಜೀವಬ್ರಹ್ಮಚಿನ್ಮಾತ್ರಮ್ । ಅಪ್ರಸಿದ್ಧಾ ಗಂಗಾಯಾಂ ಘೋಷ ಇತ್ಯತ್ರ ಜಹತ್ಸ್ವಾರ್ಥಾಯಾಃ ಕಾಕೇಭ್ಯೋ ದಧಿರಕ್ಷ್ಯತಾಮಿತ್ಯತ್ರಾಜಹತ್ಸ್ವಾರ್ಥಾಯಾಶ್ಚೈಕೈಕಲಕ್ಷಣಾಯಾಃ ಪ್ರಸಿದ್ಧತ್ವೇಽಪಿ ಪದದ್ವಯಲಕ್ಷಣಾಯಾಃ ಪದದ್ವಯಾರ್ಥೇಽಪ್ಯರ್ಥಂ ಜಹತ್ಯಾ ಅರ್ಥಮಜಹತ್ಯಾಶ್ಚ ಕ್ವಾಪ್ಯದರ್ಶನಾತ್ ಅಪ್ರಸಿದ್ಧೇತ್ಯರ್ಥಃ ॥ ೯೫೪ ॥

**ವಿವರಣೆ-** 'ಗಂಗಾಯಾಂ ಘೋಷಃ' ಎಂಬಲ್ಲಿ ಸ್ವಾರ್ಥವಾದ ಪ್ರವಾಹವನ್ನು ಬಿಡುವುದರಿಂದ ಜಹಲ್ಲಕ್ಷಣಾ ಎಂಬುದು ಪ್ರಸಿದ್ಧವಾಗಿದೆ. 'ಕಾಕೇಭ್ಯೋ ದಧಿರಕ್ಷ್ಯತಾಮ್' ಎಂಬಲ್ಲಿ ಕಾಕ ಶಬ್ದಕ್ಕೆ ಕಾಕವನ್ನೂ ಸೇರಿಸಿಕೊಂಡು ಉಳಿದ ದಧಿವಿರೋಧಿಗಳನ್ನು ಅರ್ಥವಾಗಿ ತೆಗೆದುಕೊಳ್ಳುವುದರಿಂದ ಅಜಹಲ್ಲಕ್ಷಣಾ ಎಂದು ಪ್ರಸಿದ್ಧವಾಗಿದೆ. ಆದರೆ, ವಾಚ್ಯಾರ್ಥದಲ್ಲಿ ಒಂದು ಅಂಶವನ್ನು ತೆಗೆದುಕೊಂಡು, ಇನ್ನೊಂದು ಅಂಶವನ್ನು ಬಿಟ್ಟು ಲಕ್ಷಣಾವೃತ್ತಿಯನ್ನು ಮಾಡುವುದು ಎಲ್ಲಿಯೂ ಕಂಡುಬಂದಿಲ್ಲವಾದ್ದರಿಂದ ಇದು ಅಪ್ರಸಿದ್ಧವಾದ ಲಕ್ಷಣಾವೃತ್ತಿ ಎಂದು ಅಭಿಪ್ರಾಯ.

ದೃಢಪ್ರತ್ಯಕ್ಷಬಾಧಾಯಾಪ್ಯಲಂ ವಾದ್ ಯದಿ ವೈದಿಕೀ ।
ಕುತಃ ಸ್ವೋಕ್ತಾರ್ಥಸಂಕೋಚಂ ಮಹಾವಾಕ್ ಸಹತೇ ತವ ॥ ೯೫೪ ॥

**ಅರ್ಥ-**ವೈದಿಕೀ ವಾಕ್ = ವೇದವಾಕ್ಯವು, ಯದಿ = ಒಂದುಪಕ್ಷ, ದೃಢಪ್ರತ್ಯಕ್ಷ ಬಾಧಾಯಾಪಿ = ದೃಢವಾದ ಪ್ರತ್ಯಕ್ಷವನ್ನು ಬಾಧಿಸುವುದಕ್ಕೂ, ಅಲಂ = ಸಮರ್ಥವಾಗುವುದಾದರೆ, ತವ = ನಿನ್ನ, ಮಹಾವಾಕ್ = ಮಹಾವಾಕ್ಯವು, ಸ್ವೋಕ್ತಾರ್ಥಸಂಕೋಚಂ = ತನ್ನ ಅರ್ಥದ ಸಂಕೋಚವನ್ನು, ಕುತಃ = ಏಕೆ, ಸಹತೇ= ಸಹಿಸುತ್ತದೆ?

**ಅನುವಾದ-** ವೈದಿಕವಾಕ್ಯವು ದೃಢವಾದ ಪ್ರತ್ಯಕ್ಷವನ್ನೂ ಬಾಧಿಸಲು ಸಮರ್ಥವಾಗುವುದಾದರೆ, ನಿನ್ನ ಮಹಾವಾಕ್ಯವು ತನ್ನ ಅರ್ಥಸಂಕೋಚವನ್ನು ಏಕೆ ಸಹಿಸುತ್ತದೆ?

**ಭಾವವಿಲಾಸಿನೀ–** ಸಕಲಪ್ರಮಾಣಾನಾಮತತ್ತ್ವಾವೇದಕತ್ವಂ ವದತಾ ಪರೇಣ ಸ್ವಮಹಾವಾಕ್ಯಾನಾಂ ತತ್ತ್ವಾವೇದಕತ್ವಾಂಗೀಕಾರಾತ್ತದ್ರೀತ್ಯಾ ಪ್ರತ್ಯಕ್ಷಬಾಧಕತ್ವಸಂಭಾವನಾಪ್ರದರ್ಶನಾಯ ಮಹಾವಾಗಿತ್ಯುಕ್ತಮ್ । ತಸ್ಯಾ ಅಪಿ ಪ್ರತ್ಯಕ್ಷಬಾಧನಾಸಮರ್ಥತ್ವೇಽನ್ಯಾಸಾಂ ಕಿಮು ವಕ್ತವ್ಯಮ್ । ಅತಃ ಪ್ರತ್ಯಕ್ಷಸ್ಯಾತತ್ತ್ವಾವೇದಕತ್ವೋಕ್ತಿರಪಿ ನ ಶೋಭತ ಇತಿ ಧ್ವನಯಿತುಂ ಚ ಮಹಾವಾಗಿತ್ಯುಕ್ತಮ್ ॥ ೯೫೪ ॥

**ವಿವರಣೆ-** ಎಲ್ಲಾ ಪ್ರಮಾಣಗಳಿಗೂ ಅತತ್ತ್ವಾವೇದಕತ್ವವನ್ನು ಹೇಳುವ ಪರವಾದಿಯು ತನ್ನ ಮಹಾವಾಕ್ಯಗಳಿಗೆ ಮಾತ್ರ ತತ್ತ್ವಾವೇದಕತ್ವವನ್ನು ಅಂಗೀಕರಿಸುತ್ತಾನೆ. ಆದ್ದರಿಂದ ಅವುಗಳಿಗೆ ಪ್ರತ್ಯಕ್ಷಬಾಧಕತ್ವವು ಸಂಭಾವಿತವಾದುದು ಎಂದು ಸೂಚಿಸುವುದಕ್ಕಾಗಿ ಮಹಾವಾಕ್ ಎಂದು ಹೇಳಿದ್ದಾರೆ. ಮಹಾವಾಕ್ಯಕ್ಕೂ ಪ್ರತ್ಯಕ್ಷವನ್ನು ಬಾಧಿಸಲು ಶಕ್ತಿಯಿಲ್ಲದಿದ್ದರೆ, ಉಳಿದ ವಾಕ್ಯಗಳಿಗೆ ಶಕ್ತಿಯಿಲ್ಲವೆಂದು ಇನ್ನೊಮ್ಮೆ ಹೇಳಬೇಕಾದುದಿಲ್ಲ. ಆದ್ದರಿಂದ ಪ್ರತ್ಯಕ್ಷಕ್ಕೆ ಅತತ್ತ್ವಾವೇದಕತ್ವವನ್ನು ಹೇಳುವುದು ಎಂದೂ ಶೋಭಿಸುವುದಿಲ್ಲ ಎಂದು ಅಭಿಪ್ರಾಯ.

ಜಡಾಜಡೇ ತು ಪ್ರತ್ಯಕ್ಷಬಾಧಾತ್ ಸಾಪಿ ನ ಗೃಹ್ಯತೇ ।
ತತ್ರ ತದ್ವ್ಯತಿರೇಕೇಣಾಸತ್ತ್ವಮೇವ ನಿಗದ್ಯತೇ ।
ಭೀತಾ ವಿರೋಧಿಪ್ರತ್ಯಕ್ಷಾತ್ ತದ್ಬಾಧೇ ತ್ವಕ್ಷಮೈವ ಸಾ ॥ ೯೫೫ ॥

**ಅರ್ಥ**-ಜಡಾಜಡೇ ತು = ಜಡ ಮತ್ತು ಚೇತನಗಳಲ್ಲಿ, ಪ್ರತ್ಯಕ್ಷಬಾಧಾತ್ = ಪ್ರತ್ಯಕ್ಷಬಾಧವಿರುವ ಕಾರಣದಿಂದ, ಸಾಪಿ = ಜಹದಜಹಲ್ಲಕ್ಷಣಾವೃತ್ತಿಯೂ ಕೂಡ, ನ ಗೃಹ್ಯತೇ = ಸ್ವೀಕರಿಸಲ್ಪಡುವುದಿಲ್ಲ. ತತ್ರ = ಅಲ್ಲಿ, ತದ್ವ್ಯತಿರೇಕೇಣಾಸತ್ತ್ವಮೇವ = ಬ್ರಹ್ಮವ್ಯತಿರೇಕೇಣ ಅಸತ್ವರೂಪವಾದ ಅರ್ಥವೇ, ನಿಗದ್ಯತೇ = ಹೇಳಲ್ಪಡುತ್ತದೆ, ಸಾ = ಆ ನಿನ್ನ ಐಕ್ಯವಾಕ್ಯವು, ವಿರೋಧಿಪ್ರತ್ಯಕ್ಷಾತ್ = ವಿರೋಧಿಯಾದ ಪ್ರತ್ಯಕ್ಷದಿಂದ, ಭೀತಾ = ಹೆದರಿದ ಕಾರಣದಿಂದ, ತದ್ಬಾಧೇ = ಪ್ರತ್ಯಕ್ಷವನ್ನು ಬಾಧಿಸಲು, ಅಕ್ಷಮೈವ = ಅಸಮರ್ಥವೇ ಆಗುತ್ತದೆ.

**ಅನುವಾದ-** ಪ್ರತ್ಯಕ್ಷಬಾಧವು ಬರುವುದರಿಂದ ಜಡಾಜಡಗಳಲ್ಲಿ ಜಹದಜಹಲ್ಲಕ್ಷಣಾರೂಪವೃತ್ತಿಯೂ ಸ್ವೀಕರಿಸಲ್ಪಡುವುದಿಲ್ಲ. ಜಡದ ವಿಷಯದಲ್ಲಿ ತದ್ವ್ಯತಿರೇಕೇಣ ಅಸತ್ವರೂಪವಾದ ಅರ್ಥವೇ ಹೇಳಲ್ಪಡುತ್ತದೆ. ವಿರೋಧಿಪ್ರತ್ಯಕ್ಷದಿಂದ ಭಯಗೊಂಡ ನಿನ್ನ ಐಕ್ಯವಾಕ್ಯವು ಆ ಪ್ರತ್ಯಕ್ಷವನ್ನು ಬಾಧಿಸಲು ಎಂದೂ ಸಮರ್ಥವಲ್ಲ.

**ಭಾವವಿಲಾಸಿನೀ–** ಸಾ ಜಹದಜಹಲ್ಲಕ್ಷಣಾ । ತದ್ಬಾಧೇ ವಿರೋಧಿಪ್ರತ್ಯಕ್ಷಬಾಧೇ ॥ ೯೫೫ ॥

ಶ್ರುತಿಃ ಸಕೃಚ್ಛ್ರುತ್ರಾಽಪಿ ತ್ರೀನರ್ಥಾನ್ ಭೇಜೇ ತ್ವದಾಜ್ಞಯಾ ।
ವಿರಮ್ಯ ವ್ಯಾಪೃತಿಃ ಶಬ್ದೇ ದೋಷೋ ಭೂಷಾಯತೇ ತವ ॥ ೯೫೬ ॥

**ಅರ್ಥ**-ಸಕೃಚ್ಛ್ರುತ್ರಾಽಪಿ = ಒಂದೇ ಸಲ ಹೇಳಲ್ಪಟ್ಟ, ಶ್ರುತಿಃ = ಶ್ರುತಿಯು, ತ್ವದಾಜ್ಞಯಾ = ನಿನ್ನ ಅಪ್ಪಣೆಯಿಂದ, ತ್ರೀನರ್ಥಾನ್ = ಮೂರು ಅರ್ಥಗಳನ್ನು, ಭೇಜೇ = ಹೊಂದಿತು, ಶಬ್ದೇ = ಶಬ್ದದಲ್ಲಿ, ವಿರಮ್ಯ ವ್ಯಾಪೃತಿಃ = ವಿರಮ್ಯ ವ್ಯಾಪಾರವೆಂಬ, ದೋಷಃ = ದೋಷವು, ತವ = ನಿನಗೆ, ಭೂಷಾಯತೇ = ಅಲಂಕಾರವಾಗುತ್ತದೆ.

**ಅನುವಾದ**- ಒಂದೇ ಸಲ ಹೇಳಲ್ಪಟ್ಟ ಶ್ರುತಿಯು ನಿನ್ನ ಅಪ್ಪಣೆಯಿಂದ ಮೂರು ಅರ್ಥಗಳನ್ನು ಹೊಂದಿತು. ಶಬ್ದಕ್ಕೆ ಬರುವ ವಿರಮ್ಯವ್ಯಾಪಾರದೋಷವು ನಿನಗೆ ಅಲಂಕಾರವಾಗುತ್ತದೆ.

**ಭಾವವಿಲಾಸಿನೀ**- ತ್ರೀನ್ ಆಪಾತತಃ ಸರ್ವೈಕ್ಯಂ ಜೀವಬ್ರಹ್ಮಪಕ್ಷೇ ವಿಶೇಷ್ಯಮಾತ್ರೈಕ್ಯಂ ಜಡಪಕ್ಷೇ ತದ್ವ್ಯತಿರೇಕೇಣಾಸತ್ತ್ವಮಿತಿ ತ್ರೀನ್ । ಏಕಸ್ಯ ಶಬ್ದಸ್ಯೈಕಾರ್ಥಕಥನಮೇವ ನ್ಯಾಯ್ಯಮ್ । ಸಕೃದರ್ಥತ್ರಯಕಥನಂ ತ್ವತ್ಯಂತಾಸಂಭಾವಿತಮ್ । ತಸ್ಮಾತ್ ತತ್ತ್ವವಾದ್ಯುಕ್ತರೀತ್ಯಾ ತದಧೀನತ್ವರೂಪ ಏಕ ಏವಾರ್ಥೋ ವಕ್ತುಮುಚಿತ ಇತಿ ಭಾವಃ ॥ ೯೫೬ ॥

**ವಿವರಣೆ**- 'ಸರ್ವಂ ಖಲ್ವಿದಂ ಬ್ರಹ್ಮ' ಮುಂತಾದ ವಾಕ್ಯಗಳಲ್ಲಿ ಆಪಾತತಃ ಸರ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯ ಎಂದು ಒಂದು ಅರ್ಥ. ಜೀವಬ್ರಹ್ಮರನ್ನು ತೆಗೆದುಕೊಂಡರೆ, ವಿಶೇಷ್ಯಮಾತ್ರಕ್ಕೆ ಐಕ್ಯ ಎಂಬುದು ಎರಡನೇ ಅರ್ಥ. ಜಡವನ್ನು ತೆಗೆದುಕೊಂಡರೆ ಬ್ರಹ್ಮವ್ಯತಿರೇಕೇಣ ಅಸತ್ತ್ವ ಎಂಬುದು ಮೂರನೇ ಅರ್ಥ. ಹೀಗೆ ಒಂದು ಸಲ ಪ್ರಯುಕ್ತವಾದ ಶಬ್ದಕ್ಕೆ ಮೂರು ಅರ್ಥಗಳನ್ನು ಅಂಗೀಕರಿಸುವುದು ಶಾಸ್ತ್ರಜ್ಞರಿಗೆ ಸಮ್ಮತವಾದುದಲ್ಲ. ಆದ್ದರಿಂದ ತತ್ತ್ವವಾದಿಗಳು ಹೇಳುವಂತೆ ತದಧೀನತ್ವರೂಪವಾದ ಒಂದೇ ಅರ್ಥವನ್ನು ಸ್ವೀಕರಿಸುವುದು ಯೋಗ್ಯವಾದುದು ಎಂದು ಅಭಿಪ್ರಾಯ.

ಪ್ರತ್ಯಕ್ಷತೋ ಜಡೇ ಜಾಡ್ಯಮಜ್ಞತಾದ್ಯಂ ಚ ಚೇತನೇ ।
ಸಿದ್ಧಂ ಯಥಾಶ್ರುತೈಕ್ಯಸ್ಯ ತದ್ ವಿರೋಧ್ಯಕ್ಷಮೇವ ಹಿ ॥ ೯೫೭ ॥

ಅತೋಽಧ್ಯಕ್ಷಭಯಾನ್ಮುಖ್ಯಮೈಕ್ಯಂ ವಾಕ್ಯಾರ್ಥಮುತ್ಸೃಜನ್ ।
ಸತ್ತ್ವಾದ್ಧ್ಯಕ್ಷಭಯಾನ್ಮಿಥ್ಯಾತ್ವಾರ್ಥತ್ವಂ ಚ ತ್ಯಜೋದಿತಮ್ ॥ ೯೫೮ ॥

**ಅರ್ಥ**-ಜಡೇ = ಜಡದಲ್ಲಿ, ಜಾಡ್ಯಂ = ಜಡತ್ವವು, ಚೇತನೇ = ಚೇತನದಲ್ಲಿ, ಅಜ್ಞತಾದ್ಯಂ = ಅಜ್ಞಾನಾದಿಗಳು, ಪ್ರತ್ಯಕ್ಷತಃ ಸಿದ್ಧಂ = ಪ್ರತ್ಯಕ್ಷದಿಂದ ಸಿದ್ಧವಾಗಿದೆ. ತತ್ = ಆದ್ದರಿಂದ, ಯಥಾಶ್ರುತೈಕ್ಯಸ್ಯ = ಆಪಾತತಃ ಶ್ರುತವಾದ ಐಕ್ಯಕ್ಕೆ, ವಿರೋಧಿ = ವಿರೋಧಿಯಾದುದು, ಅಕ್ಷಮೇವ ಹಿ = ಪ್ರತ್ಯಕ್ಷವೇ ಆಗಿದೆಯಷ್ಟೇ?

ಅತಃ = ಆದ್ದರಿಂದ, ಅಧ್ಯಕ್ಷಭಯಾತ್ = ಪ್ರತ್ಯಕ್ಷವಿರೋಧಭಯದಿಂದ, ಮುಖ್ಯಂ ವಾಕ್ಯಾರ್ಥಂ = ಮುಖ್ಯವಾಕ್ಯಾರ್ಥವಾದ, ಐಕ್ಯಂ = ಐಕ್ಯವನ್ನು, ಉತ್ಸೃಜನ್ = ಪರಿತ್ಯಜಿಸುವ ನೀನು, ಸತ್ತ್ವಾಧ್ಯಕ್ಷಭಯಾತ್ = ಸತ್ತ್ವಗ್ರಾಹಿಯಾದ ಪ್ರತ್ಯಕ್ಷವಿರೋಧದ ಭಯದಿಂದ, ಉದಿತಂ = ಹೇಳಲ್ಪಟ್ಟ, ಮಿಥ್ಯಾತ್ವಾರ್ಥಂ ಚ = ಮಿಥ್ಯಾತ್ವರೂಪವಾದ ಅರ್ಥವನ್ನು, ತ್ಯಜ = ಪರಿತ್ಯಾಗಮಾಡು.

**ಅನುವಾದ-** ಜಡದಲ್ಲಿ ಜಡತ್ವವು, ಚೇತನದಲ್ಲಿ ಅಜ್ಞಾನಾದಿಗಳು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಜಡಾಜಡಗಳಿಗೆ ಯಥಾಶ್ರುತೈಕ್ಯವನ್ನು ಹೇಳುವುದಕ್ಕೆ ವಿರೋಧಿಯಾದುದು ಪ್ರತ್ಯಕ್ಷವೇ ಆಗಿದೆಯಷ್ಟೇ? ಆದ್ದರಿಂದ ಪ್ರತ್ಯಕ್ಷವಿರೋಧಭಯದಿಂದ ಮುಖ್ಯವಾದ ಐಕ್ಯವು ವಾಕ್ಯಾರ್ಥ ಎಂಬುದನ್ನು ಪರಿತ್ಯಾಗಮಾಡುವ ನೀನು ಸತ್ತ್ವಪ್ರತ್ಯಕ್ಷಭಯದಿಂದ ಶ್ರುತಿಯು ಆಪಾತತಃ ಹೇಳುವ ಮಿಥ್ಯಾತ್ವರೂಪವಾದ ಅರ್ಥವನ್ನು ಪರಿತ್ಯಾಗಮಾಡು.

**ಭಾವವಿಲಾಸಿನೀ-** ಚೇತನೇ ಜೀವೇ ಸಿದ್ಧಂ ಪ್ರತ್ಯಕ್ಷತಃ ಸಿದ್ಧಮ್ । ತತ್ ತಸ್ಮಾತ್ ಪ್ರತ್ಯಕ್ಷಸಿದ್ಧವಿರೋಧಯೋರರ್ಥಯೋರೈಕ್ಯಸ್ಯ ವಾಕ್ಯೇನಾಪಿ ಬೋಧಯಿತುಮಶಕ್ಯತ್ವಾತ್ । ವಿರೋಧಿ ಯಥಾಶ್ರುತಾರ್ಥವಿರೋಧಿ ॥ ೯೫೭-೯೫೮ ॥

ಏಕಂ ಸಂಧಿತ್ಸತೋಽನ್ಯತ್ ತೇ ಚ್ಯವತೇ ತನ್ನ ಸಂಶಯಃ ।
ತಸ್ಮಾತ್ ತ್ವಮುಷ್ಟ್ರಲಗುಡನ್ಯಾಯಾದ್ಧಂತ ಹತೋಽಸ್ಯಹೋ ॥ ೯೫೯ ॥

**ಅರ್ಥ-** ಏಕಂ ಸಂಧಿತ್ಸತ = ಒಂದು ತುದಿಯನ್ನು ಸೇರಿಸಲು ಹೋದರೆ, ಅನ್ಯತ್ = ಇನ್ನೊಂದು ತುದಿಯು, ಚ್ಯವತೇ = ಬಿಚ್ಚಿಹೋಗುತ್ತದೆ. ತನ್ನ ಸಂಶಯಃ = ಇದರಲ್ಲಿ ಸಂಶಯವಿಲ್ಲ. ತಸ್ಮಾತ್ = ಆದ್ದರಿಂದ, ತ್ವಮ್ = ನೀನು, ಉಷ್ಟ್ರಲಗುಡನ್ಯಾಯಾತ್ = ಉಷ್ಟ್ರಲಗುಡನ್ಯಾಯದಿಂದ, ಹತೋಽಸಿ = ಹತನಾಗುತ್ತೀಯೆ. ಅಹೋ ಹಂತ = ಆಶ್ಚರ್ಯವು (ಅಯ್ಯೋ ಪಾಪ).

**ಅನುವಾದ-** ಒಂದು ತುದಿಯನ್ನು ಸೇರಿಸಲು ಹೋದರೆ ನಿನಗೆ ಇನ್ನೊಂದು ತುದಿಯು ಬಿಚ್ಚಿಹೋಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ, ನೀನು ಉಷ್ಟ್ರಲಗುಡನ್ಯಾಯದಿಂದ ಹತನಾಗುತ್ತೀಯೆ ಎಂಬುದು ಆಶ್ಚರ್ಯದ ಸಂಗತಿ.

**ಭಾವವಿಲಾಸಿನೀ-** ತತ್ ತಸ್ಮಾತ್ ಪ್ರತ್ಯಕ್ಷಬಾಧೇನೈಕ್ಯ ಶ್ರುತೇರ್ಯಥಾಶ್ರುತಾರ್ಥ ಪರಿತ್ಯಾಗೇ ಸತ್ತ್ವಪ್ರತ್ಯಕ್ಷವಿರುದ್ಧಮಿಥ್ಯಾಶ್ರುತೇರ್ಯಥಾ ಶ್ರುತಾರ್ಥಕಥನಸ್ಯ ಚ್ಯುತತ್ವಾತ್। ಮಿಥ್ಯಾತ್ವಶ್ರುತೌ ಪ್ರತ್ಯಕ್ಷವಿರೋಧೇಽಪಿಯಥಾಶ್ರುತಾರ್ಥಕಥನೇಚ ಪ್ರತ್ಯಕ್ಷವಿರೋಧೇನೈಕ್ಯ ಶ್ರುತೇರ್ಯಥಾಶ್ರುತಾರ್ಥಪರಿತ್ಯಾಗಸ್ಯ ಚ್ಯುತತ್ವಾದಿತ್ಯರ್ಥಃ । ಉಷ್ಟ್ರಲಗುಡನ್ಯಾಯಾತ್ ಉಷ್ಟ್ರಪೃಷ್ಠೇ ಸ್ಥಿತ್ವಾ ಲಗುಡೇನ ತಾಡನೇ ಕೃತೇ ದೀರ್ಘಾಯಾ ಉಷ್ಟ್ರಗ್ರೀವಾಯಾ ಏವ ಯತ್ತಾಡನಂ ಸೋಯಮುಷ್ಟ್ರಲಗುಡಾನ್ಯಾಯಃ। ತಸ್ಮಾನ್ಮಿಥ್ಯಾಶ್ರುತೇರ್ಯಥಾಶ್ರುತಾರ್ಥ ಸ್ವೀಕಾರೇಣ

ಸತ್ತ್ವಪ್ರತ್ಯಕ್ಷಬಾಧನೋದ್ಯೋಗೇ ತ್ವಯಾಂಗೀಕೃತಸ್ಯೈಕ್ಯವಾಕ್ಯಸ್ಯ ಯಥಾಶ್ರುತಾರ್ಥಪರಿತ್ಯಾಗಸ್ಯೈವ ಬಾಧಿತತ್ವಾದಿತಿ ಭಾವಃ ।। ೯೫೯ ।।

**ವಿವರಣೆ-** ಪ್ರತ್ಯಕ್ಷಬಾಧದಿಂದ ಐಕ್ಯಶ್ರುತಿಗೆ ಯಥಾಶ್ರುತಾರ್ಥಪರಿತ್ಯಾಗವನ್ನು ಮಾಡಿದರೆ, ಸತ್ತ್ವಪ್ರತ್ಯಕ್ಷವಿರೋಧದಿಂದ ಮಿಥ್ಯಾತ್ವಶ್ರುತಿಗೆ ಯಥಾಶ್ರುತಾರ್ಥಕಥನವು ಹೊರಟುಹೋಗುತ್ತದೆ. ಮಿಥ್ಯಾತ್ವಶ್ರುತಿಗೆ ಪ್ರತ್ಯಕ್ಷವಿರೋಧವಿದ್ದರೂ ಯಥಾಶ್ರುತಾರ್ಥವನ್ನು ಸ್ವೀಕಾರಮಾಡುವುದಾದರೆ, ಪ್ರತ್ಯಕ್ಷವಿರೋಧದಿಂದ ಐಕ್ಯಶ್ರುತಿಗೆ ಯಥಾಶ್ರುತಾರ್ಥವನ್ನು ಪರಿತ್ಯಾಗಮಾಡಿ ಅರ್ಥಾಂತರವನ್ನು ಹೇಳುವುದು ಚ್ಯುತವಾಗುತ್ತದೆ ಎಂದು ಅರ್ಥ. ಒಂಟೆಯ ಬೆನ್ನಿನ ಮೇಲೆ ಕುಳಿತವನು ಒಂದು ಕೋಲಿನಿಂದ ಒಂಟೆಯನ್ನು ಹೊಡೆದರೆ, ಅದು ಉದ್ದವಾದ ಅದರ ಕತ್ತಿಗೆ ತಾಕುವುದೇ ಹೊರತು ಅದರ ಮುಖಕ್ಕೆ ತಾಕುವುದಿಲ್ಲ ಎನ್ನುವುದು ಉಷ್ಟ್ರಲಗುಡನ್ಯಾಯ.

ಏವಂ ಪ್ರತ್ಯಕ್ಷಹರ್ಯಕ್ಷಭಯೇನ ಶ್ರುತಿಭಿಃ ಸಹ ।
ಪಲಾಯಮಾನೋ ಹಿತ್ವಾರ್ಥಾನ್ ದೋಷಪಂಕಾವಿಲಸ್ಥಲೇ ।। ೯೬೦ ।।

ಪತಿತೋಽಸಿ ತಥಾಽಪ್ಯಕ್ಷಂ ಶ್ರುತ್ಯಾ ಬಾಧಿತುಮಿಚ್ಛಸಿ ।
ಪೂರ್ವೋತ್ತರವಿರೋಧಾಖ್ಯದೋಷೋಽಗಾಧಹ್ರದೋ ಹಿ ತೇ ।। ೯೬೧ ।।

ಅತಃ ಪ್ರತ್ಯಕ್ಷಬಾಧಾಶಾಂ ಮುಂಚ ಶಕ್ತಿಂ ವಿಚಾರಯ ।
ಶಕ್ತಪ್ರತ್ಯಕ್ಷಶರಣಃ ಶ್ರುತಿಮರ್ಥಾಂತರೇ ನಯ ।। ೯೬೨ ।।

**ಅರ್ಥ-**ಏವಂ = ಈ ರೀತಿಯಾಗಿ, ಪ್ರತ್ಯಕ್ಷಹರ್ಯಕ್ಷಭಯೇನ = ಪ್ರತ್ಯಕ್ಷವೆಂಬ ಸಿಂಹದ ಭಯದಿಂದ, ಶ್ರುತಿಭಿಸ್ಸಹ = ಶ್ರುತಿಗಳ ಜೊತೆಯಲ್ಲಿ,ಅರ್ಥಾನ್‌ಹಿತ್ವಾ = ಯಥಾಶ್ರುತಾರ್ಥವನ್ನು ಬಿಟ್ಟು, ಪಲಾಯಮಾನಃ = ಓಡಿಹೋಗುವ ನೀನು, ದೋಷಪಂಕಾವಿಲಸ್ಥಲೇ = ದೋಷವೆಂಬ ಕೆಸರಿನಿಂದ ಕೂಡಿದ ಸ್ಥಳದಲ್ಲಿ,

ಪತಿತೋಽಸಿ = ಬಿದ್ದಿದ್ದೀಯೆ. ತಥಾಽಪಿ = ಆದರೂ ಕೂಡ, ಶ್ರುತ್ಯಾ = ಶ್ರುತಿಯಿಂದಲೇ, ಅಕ್ಷಂ = ಪ್ರತ್ಯಕ್ಷವನ್ನು, ಬಾಧಿತುಂ = ಬಾಧಿಸಲು, ಇಚ್ಛಸಿ = ಇಚ್ಛಿಸುತ್ತೀಯೆ. ಪೂರ್ವೋತ್ತರವಿರೋಧಾಖ್ಯದೋಷಃ = ಪೂರ್ವೋತ್ತರವಿರೋಧವೆಂಬ ದೋಷವು, ತೇ = ನಿನಗೆ, ಅಗಾಧಹ್ರದೋ ಹಿ = ದಾಟಲು ಅಸಾಧ್ಯವಾದ ಮಡುವಾಗಿದೆಯಷ್ಟೇ ?

ಅತಃ = ಆದ್ದರಿಂದ, ಪ್ರತ್ಯಕ್ಷಬಾಧಾಶಾಂ = ಪ್ರತ್ಯಕ್ಷಕ್ಕೇ ಬಾಧವನ್ನು ಹೇಳುವ ನಿನ್ನ ಆಸೆಯನ್ನು, ಮುಂಚ = ಪರಿತ್ಯಜಿಸು, ಶಕ್ತಿಂ ವಿಚಾರಯ = ಪ್ರಾಬಲ್ಯವನ್ನು ವಿಚಾರಮಾಡು, ಶಕ್ತಪ್ರತ್ಯಕ್ಷಶರಣಃ = ಪ್ರಬಲವಾದ ಪ್ರತ್ಯಕ್ಷಕ್ಕೆ ಶರಣಾಗತನಾಗಿ, ಶ್ರುತಿಂ = ಶ್ರುತಿಯನ್ನು, ಅರ್ಥಾಂತರೇ = ಇನ್ನೊಂದು ಅರ್ಥದಲ್ಲಿ, ನಯ = ತೆಗೆದುಕೊಂಡು ಹೋಗು.

**ಅನುವಾದ-** ಹೀಗೆ ಪ್ರತ್ಯಕ್ಷವೆಂಬ ಸಿಂಹದ ಭಯದಿಂದ ಶ್ರುತಿಗಳ ಜೊತೆಯಲ್ಲಿ ನಿನ್ನ ಅರ್ಥಗಳನ್ನು ಬಿಟ್ಟು ಓಡಿಹೋಗುತ್ತಿರುವ ನೀನು, ದೋಷವೆಂಬ ಕೆಸರಿನಿಂದ ಆವೃತವಾದ ಸ್ಥಳದಲ್ಲಿ ಬಿದ್ದಿದ್ದೀಯೆ. ಆದರೂ ಶ್ರುತಿಯಿಂದಲೇ ಸತ್ತ್ವಪ್ರತ್ಯಕ್ಷವನ್ನು ಬಾಧಿಸಲು ಇಚ್ಛಿಸುತ್ತೀಯೆ. ಪೂರ್ವೋತ್ತರವಿರೋಧರೂಪವಾದ ದೋಷವು ನಿನಗೆ ದಾಟಲು ಅಸಾಧ್ಯವಾದ ದೊಡ್ಡ ಮಡುವಾಗಿದೆ. ಆದ್ದರಿಂದ, ಪ್ರತ್ಯಕ್ಷಕ್ಕೇ ಬಾಧ ಬರುವುದೆಂಬ ಆಸೆಯನ್ನು ಬಿಡು, ಪ್ರಾಬಲ್ಯವನ್ನು ವಿಚಾರಮಾಡು. ಪ್ರಬಲವಾದ ಪ್ರತ್ಯಕ್ಷಕ್ಕೆ ಶರಣಾಗತನಾಗಿ ಶ್ರುತಿಯನ್ನು ಅರ್ಥಾಂತರದಲ್ಲಿತೆಗೆದುಕೊಂಡು ಹೋಗು.

**ಭಾವವಿಲಾಸಿನೀ-** ಅರ್ಥಾನ್ ಯಥಾಶ್ರುತಾನ್ । ದೋಷಪಂಕಾವಿಲೇ ಐಕ್ಯಶ್ರುತಿನ್ಯಾಯಸ್ಯ ಮಿಥ್ಯಾಶ್ರುತೌ ಪರಿತ್ಯಾಗೇನ ಪೂರ್ವೋತ್ತರವಿರೋಧಾಖ್ಯದೋಷಪಂಕಾವಿಲೇ । ತಥಾಪ್ಯುಕ್ತ-ದೋಷೇ ಪತಿತೋಽಪಿ । ಅಕ್ಷಂ ಸತ್ತ್ವಪ್ರತ್ಯಕ್ಷಮ್ । ಶ್ರುತ್ಯಾ ಮಿಥ್ಯಾತ್ವಶ್ರುತ್ಯಾ । ಪಂಕೇ ಪತಿತಸ್ಯ ಅತ ಏವ ದುರ್ಬಲಸ್ಯ ತವ ಮಿಥ್ಯಾತ್ವಶ್ರುತಿಮೇವೈಕ್ಯಶ್ರುತಿಮಿವ ಸತ್ತ್ವಪ್ರತ್ಯಕ್ಷಮೇವ ಭೀಷಯೇದಿತಿ ಭಾವಃ॥ ೯೬- ೯೬೨ ॥

**ವಿವರಣೆ-** ಮೊದಲೇ ಪ್ರತ್ಯಕ್ಷಕ್ಕೆ ಹೆದರುವ ನೀನು ಮತ್ತು ಶ್ರುತಿಗಳು ದುರ್ಬಲವಾದ ಕಾರಣದಿಂದಲೇ ಹೆದರಿದ್ದೀಯೆ. ಈಗಂತೂ ಕೆಸರಿನ ಕೂಪದಲ್ಲಿ ಬಿದ್ದು ಇನ್ನೂ ದುರ್ಬಲನಾಗಿದ್ದೀಯೆ. ಆದ್ದರಿಂದ ಮೊದಲೇ ಸತ್ತ್ವಪ್ರತ್ಯಕ್ಷವನ್ನು ಬಾಧಿಸಲು ಅಸಮರ್ಥನಾದ ನೀನು ಈಗ ಇನ್ನೂ ಹೆಚ್ಚು ಅಸಮರ್ಥನಾಗಿರುವುದರಿಂದ ಪ್ರತ್ಯಕ್ಷಕ್ಕೇ ಶರಣಾಗತನಾಗಿ ಶ್ರುತಿಗೆ ಅರ್ಥಾಂತರವನ್ನು ಹೇಳು ಎಂದು ಅಭಿಪ್ರಾಯ.

ಪತಿಂ ತ್ಯಕ್ತ್ವಾ ಗತಾಯಾಸ್ತು ಜಾರೇಷು ನಿಯಮಃ ಕುತಃ ।
ಅಸ್ಮಾಕಂ ತ್ವನುಶಿಷ್ಟಾರ್ಥಪರಾ ನ ಸ್ವೈರಿಣೀ ಶ್ರುತಿಃ ॥ ೯೬೩ ॥

ಸಪ್ತಸು ಪ್ರಥಮಾ ಷಟ್ಸು ದ್ವಿತೀಯೇತ್ಯನುಶಾಸನಮ್ ।
ಸರ್ವಂ ಸಮಾಪ್ನೋಷಿ ತತಃ ಸರ್ವೋಽಸೀತ್ಯನುಶಾಸನಮ್ ।
ಮುಖ್ಯಾ ಗೌಣೀ ಲಕ್ಷಣೇತಿ ಲಕ್ಷಣಜ್ಞಾನುಶಾಸನಮ್ ॥ ೯೬೪ ॥

**ಅರ್ಥ-**ಪತಿಂ ತ್ಯಕ್ತ್ವಾ = ಪತಿಯನ್ನು ಬಿಟ್ಟು, ಗತಾಯಾಸ್ತು = ಹೋದವಳಿಗೆ, ಜಾರೇಷು = ಜಾರರಲ್ಲಿ, ಕುತಃ ನಿಯಮಃ = ನಿಯಮವು ಏಕೆ ಬೇಕು. ಅಸ್ಮಾಕಂ = ನಮಗಾದರೂ, ಶ್ರುತಿಃ = ಶ್ರುತಿಯು, ಅನುಶಿಷ್ಟಾರ್ಥಪರಾ = ಅನುಶಿಷ್ಟಾರ್ಥವನ್ನೇ ಹೇಳುವುದಾಗುತ್ತದೆ. ನ ಸ್ವೈರಿಣೀ = ಸ್ವೈರಿಣಿಯಲ್ಲ.

ಸಪ್ತಸು ಪ್ರಥಮಾ = ಏಳು ವಿಭಕ್ತಿಅರ್ಥಗಳಲ್ಲಿಯೂ ಪ್ರಥಮಾ ವಿಭಕ್ತಿ ಬರುತ್ತದೆ. ಷಟ್ಸು ದ್ವಿತೀಯಾ = ಆರು ವಿಭಕ್ತಿಗಳ ಅರ್ಥಗಳಲ್ಲಿ ದ್ವಿತೀಯಾ ವಿಭಕ್ತಿ ಬರುತ್ತದೆ. ಇತಿ =

ಎಂದು, ಅನುಶಾಸನಂ = ಅನುಶಾಸನವಿದೆ. ಸರ್ವಂ ಸಮಾಪ್ನೋಷಿ = ಎಲ್ಲವನ್ನೂ ವ್ಯಾಪಿಸಿದ್ದೀಯೆ. ತತಃ = ಆದ್ದರಿಂದ, ಸರ್ವೋऽಸಿ = ಸರ್ವನಾಗಿದ್ದೀಯೆ. ಇತಿ = ಎಂಬ, ಅನುಶಾಸನಂ = ಅನುಶಾಸನವಿದೆ. ಮುಖ್ಯಾ ಗೌಣೀ ಲಕ್ಷಣೇತಿ = ಮುಖ್ಯವೃತ್ತಿ, ಗೌಣೀವೃತ್ತಿ ಮತ್ತು ಲಕ್ಷಣಾವೃತ್ತಿ ಎಂಬ, ಲಕ್ಷಣಜ್ಞಾನುಶಾಸನಂ = ಶಬ್ದಲಕ್ಷಣವನ್ನು ತಿಳಿದವರ ಅನುಶಾಸನವಿದೆ.

**ಅನುವಾದ-** ಪತಿಯನ್ನು ಬಿಟ್ಟು ಹೋದವಳಿಗೆ ಜಾರರಲ್ಲಿ ನಿಯಮವು ಏಕೆ ಬೇಕು? ನಮಗಾದರೂ, ಶ್ರುತಿಯು ಅನುಶಿಷ್ಟಾರ್ಥವನ್ನೇ ಹೇಳುತ್ತದೆಯೇ ಹೊರತು ಮನಸ್ಸಿಗೆ ಬಂದಂತೆ ಅರ್ಥವನ್ನು ಹೇಳುವುದಿಲ್ಲ (ಸ್ವೈರಿಣಿಯಲ್ಲ). ಏಳು ವಿಭಕ್ತಿಗಳ ಅರ್ಥಗಳಲ್ಲಿ ಪ್ರಥಮಾ ವಿಭಕ್ತಿ ಬರುತ್ತದೆ ಎಂಬ ವ್ಯಾಕರಣಶಾಸ್ತ್ರದ ಅನುಶಾಸನವಿದೆ. ಆರು ವಿಭಕ್ತಿಗಳ ಅರ್ಥಗಳಲ್ಲಿ ದ್ವಿತೀಯಾ ವಿಭಕ್ತಿ ಬರುತ್ತದೆ ಎಂಬ ವ್ಯಾಕರಣಶಾಸ್ತ್ರದ ಅನುಶಾಸನವಿದೆ. ಎಲ್ಲವನ್ನೂ ವ್ಯಾಪಿಸಿರುವುದರಿಂದ ನೀನು ಸರ್ವನೆಂದು ಕರೆಸಿಕೊಳ್ಳಲ್ಪಡುತ್ತೀಯೆ ಎಂಬ ಗೀತೆಯ ಅನುಶಾಸನವಿದೆ. ಶಬ್ದವೃತ್ತಿಯು ಮುಖ್ಯವೃತ್ತಿ, ಗೌಣೀವೃತ್ತಿ ಮತ್ತು ಲಕ್ಷಣಾವೃತ್ತಿ ಎಂದು ಮೂರುವಿಧವಾದುದು ಎಂದು ಶಬ್ದಶಾಸ್ತ್ರಜ್ಞರ ಅನುಶಾಸನವಿದೆ.

**ಭಾವವಿಲಾಸಿನೀ–** ಪತಿಂ ಮುಖ್ಯಾರ್ಥಂ ತ್ಯಕ್ತ್ವಾ ಗತಾಯಾಸ್ತವ ಶ್ರುತೇರ್ಜಾರೇಷು ಜಾರಸ್ಥಾನೀಯೇಷು ತ್ವತ್ಕಪೋಲಕಲ್ಪಿತಪ್ರಕಾರೇಷು । ಮಿಥ್ಯಾತ್ವಶ್ರುತೇರರ್ಥಾಂತರಂ ವಾ ವದ । ಬೌದ್ಧಸಮಯಪ್ರಾಪ್ತಮಿಥ್ಯಾತ್ವಾನುವಾದಿತ್ವಂ ವಾ ವದ । ಭೇದಶ್ರುತೇರಿವಾತತ್ತ್ವಾವೇದಕತ್ವಂ ವಾ ವದೇತಿ ಭಾವಃ । ವಯಂತು ತವಶ್ರುತಿಮಪಿ ನಸ್ವೈರಿಣೀಂ ಕುರ್ಮಃ । ವೈಯ್ಯಾಕರಣ್ಯೈರನುಶಿಷ್ಟಾರ್ಥಸ್ಯೈವ ಕಥನೇನ ಸ್ವಕಪೋಲಕಲ್ಪಿತಾರ್ಥೇಷ್ವಪ್ರಾಪಣಾದಿತ್ಯಾಹ – **ಅಸ್ಮಾಕಮಿತಿ** ॥ ೯೬೩-೬೬೪ ॥

**ವಿವರಣೆ-** ಮುಖ್ಯಾರ್ಥವು ಪತಿಯ ಸ್ಥಾನದಲ್ಲಿರುವಂಥಾದ್ದು. ಅಂತಹ ಮುಖ್ಯಾರ್ಥವನ್ನು ಪರಿತ್ಯಾಗಮಾಡಿ ಹೊರಟ ಶ್ರುತಿಯು ಜಾರಿಣಿಯಿದ್ದಂತೆ. ನಿನ್ನ ಕಪೋಲಕಲ್ಪಿತವಾದ ಅರ್ಥಗಳು ಜಾರಸ್ಥಾನದಲ್ಲಿವೆ. ಆದ್ದರಿಂದ ಅಲ್ಲಿ ನಿಯಮವು ಏಕೆ ಬೇಕು. ಮಿಥ್ಯಾತ್ವಶ್ರುತಿಗೆ ಅರ್ಥಾಂತರವನ್ನು ಬೇಕಾದರೂ ಹೇಳು, ಬೌದ್ಧಸಮಯಪ್ರಾಪ್ತವಾದ ಮಿಥ್ಯಾತ್ವಾನುವಾದಿತ್ವವನ್ನು ಬೇಕಾದರೂ ಹೇಳು, ಭೇದಶ್ರುತಿಗೆ ಹೇಳುವಂತೆ ಅತತ್ತ್ವಾವೇದಕತ್ವವನ್ನಾದರೂ ಹೇಳು ಎಂದು ಅಭಿಪ್ರಾಯ. ನಾವಾದರೆ, ವ್ಯಾಕರಣಾದಿ- ಶಾಸ್ತ್ರಶಿಷ್ಟಾರ್ಥವನ್ನೇ ಹೇಳುತ್ತೇವೆ. ನಮ್ಮ ಮತದಲ್ಲಿ ಶ್ರುತಿಯು ಸ್ವೈರಿಣಿಯಲ್ಲ ಎಂದು ಅಭಿಪ್ರಾಯ.

ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವಾಪ್ಯಯಮ್ ।
ಸರ್ವಸ್ಯ ಚ ಪರಿಜ್ಞಾನಾತ್ ಸರ್ವಮೇನಂ ಪ್ರಚಕ್ಷತೇ ।
ಇತಿ ಭಾರತವಾಕ್ಯೋಕ್ತಮಸ್ತಿ ಶಿಷ್ಟಾನುಶಾಸನಮ್ ॥ ೯೬೫ ॥

**ಅರ್ಥ**-ಅಸತಶ್ಚ = ಅಮೂರ್ತಪದಾರ್ಥಗಳ, ಸತಶ್ಚೈವ = ಮತ್ತು ಮೂರ್ತವಾದ ಪದಾರ್ಥಗಳಾದ, ಸರ್ವಸ್ಯ = ಎಲ್ಲದಕ್ಕೂ, ಪ್ರಭವಾಪ್ಯಯಮ್ = ಉತ್ಪತ್ತಿಕಾರಣನೂ ಮತ್ತು ನಾಶಕಾರಣನೂ ಆದ್ದರಿಂದಲೂ, ಸರ್ವಸ್ಯ ಪರಿಜ್ಞಾನಾತ್ = ಎಲ್ಲವನ್ನೂ ತಿಳಿಯುವುದರಿಂದಲೂ, ಏನಂ = ಈ ಪರಮಾತ್ಮನನ್ನು, ಸರ್ವಂ = ಸರ್ವ ಎಂದು, ಪ್ರಚಕ್ಷತೇ = ಹೇಳುತ್ತಾರೆ. ಇತಿ = ಎಂಬ, ಭಾರತವಾಕ್ಯೋಕ್ತಂ = ಭಾರತವಾಕ್ಯೋಕ್ತವಾದ, ಶಿಷ್ಟಾನುಶಾಸನಮ್ = ಶಿಷ್ಟರ ಅನುಶಾಸನವು, ಅಸ್ತಿ = ಇದೆ.

**ಅನುವಾದ**- ಅಮೂರ್ತವಾದ ಮತ್ತು ಮೂರ್ತವಾದ ಪದಾರ್ಥಗಳ, ಉತ್ಪತ್ತಿಗೆ ಮತ್ತು ನಾಶಕ್ಕೆ ಕಾರಣವಾದುದರಿಂದಲೂ ಮತ್ತು ಸರ್ವವನ್ನು ತಿಳಿದಿರುವುದರಿಂದಲೂ, ಇವನನ್ನು ಸರ್ವನೆಂದು ಹೇಳುತ್ತಾರೆ ಎಂಬ ಭಾರತವಾಕ್ಯರೂಪವಾದ ಶಿಷ್ಟಾನುಶಾಸನವು ನಮಗೆ ಇದೆ.

**ಭಾವವಿಲಾಸಿನೀ**– ಅಸತಃ ಅಮೂರ್ತಸ್ಯ । ಸತಃ ಮೂರ್ತಸ್ಯ । ಪ್ರಭವತ್ಯಪ್ಯೇತಿ ಚಾಸ್ಮಾದಿತಿ ಪ್ರಭವಾಪ್ಯಯಃ ॥ ೯೬೫ ॥

ಮುಖ್ಯಾರ್ಥಬಾಧೇ ಶಿಷ್ಟಾರ್ಥಂ ಶಾಸ್ತಿ ಶಿಷ್ಟಪರಂಪರಾ ।
ಅತಃ ಶ್ರುತಿದ್ರೌಪದೀಯಮುಪಯೇಮೇ ಬಹೂನ್ ಪತೀನ್ ॥ ೯೬೬ ॥

**ಅರ್ಥ**-ಮುಖ್ಯಾರ್ಥಬಾಧೇ = ಮುಖ್ಯಾರ್ಥವು ಬಾಧಿತವಾದರೆ, ಶಿಷ್ಟಪರಂಪರಾ = ಶಿಷ್ಟರ ಪರಂಪರೆಯು, ಶಿಷ್ಟಾರ್ಥಂ = ಶಿಷ್ಟವಾದ ಅರ್ಥವನ್ನೇ, ಶಾಸ್ತಿ = ಬೋಧಿಸುತ್ತದೆ. ಅತಃ = ಆದ್ದರಿಂದ, ಇಯಂ ಶ್ರುತಿದ್ರೌಪದೀ = ಈ ಶ್ರುತಿದ್ರೌಪದಿಯು, ಬಹೂನ್ಪತೀನ್ = ಅನೇಕ ಪತಿಗಳನ್ನು, ಉಪಯೇಮೇ = ವರಿಸಿದಳು.

**ಅನುವಾದ**- ಮುಖ್ಯಾರ್ಥಕ್ಕೆ ಬಾಧವುಂಟಾದರೆ, ಶ್ರುತಿಗೆ ಶಿಷ್ಟಪರಂಪರೆಯು ಶಾಸ್ತ್ರದಲ್ಲಿ ಅನುಶಿಷ್ಟವಾದ ಅರ್ಥವನ್ನೇ ಹೇಳುತ್ತದೆ. ಆದ್ದರಿಂದ ಈ ಶ್ರುತಿದ್ರೌಪದಿಯು ಅನೇಕ ಪತಿಗಳನ್ನು ವರಿಸಿದಳು.

**ಭಾವವಿಲಾಸಿನೀ**– ಶಿಷ್ಟಾರ್ಥಮ್ । ಉಕ್ತರೀತ್ಯಾ ಅನುಶಿಷ್ಟಾರ್ಥಮ್ । ಶಿಷ್ಟಪರಂಪರಾ ಸಂಪ್ರದಾಯಪ್ರವರ್ತಕಭಾಷ್ಯಕಾರಟೀಕಾಕಾರಾದಿ ಪರಂಪರಾ । ಶಾಸ್ತಿ ಗ್ರಂಥಕರ್ತಾ ಗ್ರಂಥೇಷು ಲಿಖತಿ। ವ್ಯಾಖ್ಯಾತಾ ಶಿಷ್ಯಾನ್ ಪ್ರತ್ಯುಪದಿಶತಿ । ಅತಃ ಪೂರ್ಣಪ್ರಜ್ಞಮತಾನುವರ್ತಿನಾಂ ಸ್ವೇಚ್ಛಾನುಸಾರೇಣಾರ್ಥಕಥನಂ ನೈಕಸ್ಯಾಮಪಿ ಶ್ರುತೌ । ತೇನಾಸ್ಮನ್ಮತೇ ಸರ್ವಾಪಿ ಶ್ರುತಿಃ ಪತಿವ್ರತೈವೇತಿ ಭಾವಃ । ಪಂಚವಿಧಾನುಶಾಸನಾನುಸಾರೇಣಾರ್ಥಭಜನೇಽಪಿ ಪ್ರತಿವ್ರತಾತ್ವಂ ದೃಷ್ಟಾಂತಮುಖೇನೋಪಪಾದಯತಿ ॥ ಅತ ಇತಿ ॥ ೯೬೬ ॥

**ವಿವರಣೆ**- ಶಿಷ್ಟಪರಂಪರೆ ಎಂದರೆ ಸಂಪ್ರದಾಯ ಪ್ರವರ್ತಕರಾದ ಭಾಷ್ಯಕಾರ ಟೀಕಾಕಾರಾದಿ ಪರಂಪರೆ, ಶಾಸ್ತಿ ಎಂದರೆ ಗ್ರಂಥಕರ್ತೃಗಳು ಗ್ರಂಥಗಳಲ್ಲಿ ಬರೆಯುತ್ತಾರೆ

ಮತ್ತು ವ್ಯಾಖ್ಯಾನಮಾಡುವವರು ಶಿಷ್ಯರಿಗೆ ಉಪದೇಶಮಾಡುತ್ತರೆ ಎಂದು ಅರ್ಥ. ಆದ್ದರಿಂದ, ಪೂರ್ಣಪ್ರಜ್ಞಾಚಾರ್ಯರ ಮತವನ್ನು ಅನುಸರಿಸುವವರು ಶ್ರುತಿಗೆ ಎಲ್ಲಿಯೂ ಸ್ವೇಚ್ಛಾನುಸಾರವಾದ ಅರ್ಥವನ್ನು ಹೇಳುವುದಿಲ್ಲ. ಆದ್ದರಿಂದ ನಮ್ಮ ಮತದಲ್ಲಿ ಎಲ್ಲಾ ಶ್ರುತಿಯೂ ಪತಿವ್ರತೆಯೇ ಆಗಿದೆ. ಈ ಶ್ರುತಿದ್ರೌಪದಿಯಾದರೋ ಎರಡು ವ್ಯಾಕರಣದ ಅನುಶಾಸನಗಳನ್ನೂ, ಒಂದು ಗೀತೆಯ ಅನುಶಾಸನವನ್ನೂ, ಲಕ್ಷಣಜ್ಞರ ಒಂದು ಅನುಶಾಸನವನ್ನೂ, ಮಹಾಭಾರತದ ಅನುಶಾಸನವನ್ನೂ ಅನುಸರಿಸಿ ಐದುವಿಧವಾದ ಅರ್ಥಗಳನ್ನು ಹೇಳುತ್ತದೆ. ಐದು ಅರ್ಥಗಳೂ ಶಿಷ್ಟಸಮ್ಮತವಾದ ಅರ್ಥಗಳೇ ಆಗಿವೆ. ಆದ್ದರಿಂದ ನಮ್ಮ ಈ ಶ್ರುತಿದ್ರೌಪದಿಯು ಸ್ವೈರಿಣಿಯಲ್ಲ ಎಂದು ಮುಂದಿನ ಶ್ಲೋಕದಲ್ಲಿರುವ ಪದದಿಂದ ಅನ್ವಯಮಾಡಬೇಕು ಎಂದು ಅಭಿಪ್ರಾಯ.

**ನ ಸ್ವೈರಿಣೀ ಯತ್ರ ಯೋಗ್ಯೋ ಯೋಽರ್ಥಃ ಸ್ಯಾತ್ ತತ್ರ ತಂ ಭಜೇತ್ ।**
**ಸರ್ವಮಾನವಿರುದ್ಧಾರ್ಥಂ ದುಶ್ಶಾಸನಮಿವ ತ್ಯಜೇತ್ ॥ ೯೬೭ ॥**

**ಅರ್ಥ**-ನ ಸ್ವೈರಿಣೀ = ಶ್ರುತಿದ್ರೌಪದಿಯು ಸ್ವೈರಿಣಿಯಲ್ಲ, ಯತ್ರ = ಎಲ್ಲಿ, ಯೋಽರ್ಥಃ = ಯಾವ ಅರ್ಥವು, ಯೋಗ್ಯಃ ಸ್ಯಾತ್ = ಯೋಗ್ಯವಾಗುತ್ತದೆಯೋ, ತತ್ರ = ಅಲ್ಲಿ, ತಂ = ಆ ಅರ್ಥವನ್ನು, ಭಜೇತ್ = ಹೊಂದುತ್ತದೆ. ಸರ್ವಮಾನವಿರುದ್ಧಾರ್ಥಂ = ಸರ್ವಪ್ರಮಾಣವಿರುದ್ಧವಾದ ಅರ್ಥವನ್ನು ಮಾತ್ರ, ದುಶ್ಶಾಸನಮಿವ = ದುಶ್ಶಾಸನನನ್ನು ಪರಿತ್ಯಜಿಸಿದಂತೆ (ದುಷ್ಟಶಾಸನದಂತೆ), ತ್ಯಜೇತ್ = ಪರಿತ್ಯಜಿಸುತ್ತದೆ.

**ಅನುವಾದ** - ಶ್ರುತಿ ದ್ರೌಪದಿಯು ವೈರಿಣಿಯಲ್ಲ, ಎಲ್ಲಿ ಯಾವ ಅರ್ಥವು ಯೋಗ್ಯವೋ ಅಲ್ಲಿ ಆ ಅರ್ಥವನ್ನು ಹೇಳುತ್ತಾಳೆ. ಸರ್ವಪ್ರಮಾಣ ವಿರುದ್ಧವಾದ ಅರ್ಥವನ್ನು ಮಾತ್ರ ದುಶ್ಶಾಸನವನ್ನು ಪರಿತ್ಯಜಿಸಿದಂತೆ ಪರಿತ್ಯಜಿಸುತ್ತಾಳೆ.

**ಭಾವವಿಲಾಸಿನೀ**– ಸ್ವೈರಿಣೀ ಸ್ವೇಚ್ಛಾನುಸಾರೇಣೋಕ್ತಯೋಗ್ಯಾರ್ಥಪರಾ । ಸರ್ವಮಾನ-ವಿರುದ್ಧಾರ್ಥಂ ಸಕಲಪ್ರಮಾಣವಿರುದ್ಧಾರ್ಥಮ್ । ಅಭಿಮಾನವಿರೋಧಿನಮಿತಿ ಧ್ವನಿಃ ॥೯೬೭॥

**ಕಿಂಚ ಶ್ರುತಿಸ್ವರೂಪಸ್ಯ ಗ್ರಾಹಿ ಪ್ರತ್ಯಕ್ಷಮೇವ ಹಿ ।**
**ತತ್ಪ್ರಾಮಾಣ್ಯಸ್ಯ ನಿರ್ಣೇತೃ ಸಾಕ್ಷಿಪ್ರತ್ಯಕ್ಷಮಾವಯೋಃ ॥ ೯೬೮ ॥**

**ಅರ್ಥ**-ಕಿಂಚ = ಮತ್ತು, ಶ್ರುತಿಸ್ವರೂಪಸ್ಯ = ಶ್ರುತಿಸ್ವರೂಪವನ್ನು, ಗ್ರಾಹಿ = ಗ್ರಹಣ ಮಾಡುವುದು, ಪ್ರತ್ಯಕ್ಷಮೇವ ಹಿ = ಪ್ರತ್ಯಕ್ಷವೇ ಅಷ್ಟೇ? ಆವಯೋಃ = ನಮ್ಮಿಬ್ಬರ ಮತದಲ್ಲಿ, ತತ್ಪ್ರಾಮಾಣ್ಯಸ್ಯ = ಶ್ರುತಿಪ್ರತ್ಯಕ್ಷಪ್ರಾಮಾಣ್ಯಕ್ಕೆ, ನಿರ್ಣೇತೃ = ನಿರ್ಣಾಯಕವಾದುದು, ಸಾಕ್ಷಿಪ್ರತ್ಯಕ್ಷಂ = ಸಾಕ್ಷಿಪ್ರತ್ಯಕ್ಷವೇ ಆಗಿದೆ.

**ಅನುವಾದ**- ಮತ್ತು ಶ್ರುತಿಸ್ವರೂಪವನ್ನು ಗ್ರಹಿಸುವುದು ಪ್ರತ್ಯಕ್ಷವೇ ಆಗಿದೆ ಮತ್ತು ನಮ್ಮಿಬ್ಬರ ಮತದಲ್ಲಿ ಆ ಪ್ರತ್ಯಕ್ಷಪ್ರಾಮಾಣ್ಯವನ್ನು ಗ್ರಹಿಸುವುದು ಸಾಕ್ಷಿಪ್ರತ್ಯಕ್ಷವೇ ಆಗಿದೆ.

**ಭಾವವಿಲಾಸಿನೀ–** ಶ್ರುತಿಸ್ವರೂಪಗ್ರಾಹಿತ್ವೇನ ತತ್ಪ್ರಮಾಣ್ಯಗ್ರಾಹಿತಯಾ ಚ ಶ್ರುತಿತೋಽಪಿ ಪ್ರತ್ಯಕ್ಷಸ್ಯೈವ ಪ್ರಾಬಲ್ಯಮಿತ್ಯಾಹ – **ಕಿಂಚೇತಿ** ॥ ತತ್ಪ್ರಾಮಾಣ್ಯಸ್ಯ ಶ್ರುತಿಪ್ರಾಮಾಣ್ಯಸ್ಯ । ಆವಯೋರ್ಮತೇ ॥ ೯೬೮ ॥

**ವಿವರಣೆ-** ಪ್ರತ್ಯಕ್ಷವು ಶ್ರುತಿಯ ಸ್ವರೂಪವನ್ನೂ ಮತ್ತು ಅದರ ಪ್ರಾಮಾಣ್ಯವನ್ನೂ ಗ್ರಹಿಸುವುದರಿಂದ ಶ್ರುತಿಗಿಂತ ಪ್ರಬಲವಾದುದು ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ಪ್ರತ್ಯಕ್ಷಸ್ಯಾಪ್ರಮಾಣತ್ವೇ ತದ್ಗೃಹೀತಂ ಭವಚ್ಛ್ರುತೇಃ ।
ಪ್ರಾಮಾಣ್ಯಂ ಚ ಮೃಷೈವ ಸ್ಯಾದಪ್ರಾಮಾಣ್ಯಂ ಬಲಾದ್ಭವೇತ್ ॥ ೯೬೯ ॥

**ಅರ್ಥ-**ಪ್ರತ್ಯಕ್ಷಸ್ಯ = ಪ್ರತ್ಯಕ್ಷವು, ಅಪ್ರಮಾಣತ್ವೇ = ಅಪ್ರಮಾಣವಾದರೆ, ತದ್ಗೃಹೀತಂ = ಆ ಪ್ರತ್ಯಕ್ಷಗೃಹೀತವಾದ, ಭವಚ್ಛ್ರುತೇಃ = ನಿನ್ನ ಶ್ರುತಿಯ, ಪ್ರಾಮಾಣ್ಯಂ ಚ = ಪ್ರಾಮಾಣ್ಯವೂ ಸಹ, ಮೃಷೈವ ಸ್ಯಾತ್ = ಮಿಥ್ಯಾಭೂತವಾದುದೇ ಆಗುತ್ತದೆ. ಬಲಾತ್ = ಆಗ, ಮಿಥ್ಯಾಭೂತವಾದ ಪ್ರಾಮಾಣ್ಯದ ಸಾಮರ್ಥ್ಯದಿಂದ, ಅಪ್ರಾಮಾಣ್ಯಂ = ಅಪ್ರಾಮಾಣ್ಯವೇ, ಭವೇತ್ = ಉಂಟಾಗುತ್ತದೆ.

**ಅನುವಾದ-** ಪ್ರತ್ಯಕ್ಷವು ಅಪ್ರಮಾಣವಾದರೆ, ಅಂತಹ ಪ್ರತ್ಯಕ್ಷಗೃಹೀತವಾದ ನಿನ್ನ ಶ್ರುತಿಯ ಪ್ರಾಮಾಣ್ಯವೂ ಮಿಥ್ಯಾಭೂತವಾದುದೇ ಆಗುತ್ತದೆ. ಮಿಥ್ಯಾಭೂತವಾದ ಪ್ರಾಮಾಣ್ಯದ ಬಲದಿಂದ ಆಗ ಶ್ರುತಿಗೆ ಅಪ್ರಾಮಾಣ್ಯವೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಬಲಾತ್ ಪ್ರಮಾಽಪ್ರಮಾಬಹಿರ್ಭೂತಜ್ಞಾನಸ್ಯೈವಾಭಾವೇನ ಪ್ರಾಮಾಣ್ಯಾಭಾವೇಽಪ್ರಾಮಾಣ್ಯಸ್ಯ ನಿಯತತ್ವಾದಿತ್ಯರ್ಥಃ ॥ ೯೬೯ ॥

**ವಿವರಣೆ-** ಪ್ರಮಾ ಮತ್ತು ಅಪ್ರಮಾ ಬಹಿರ್ಭೂತವಾದ ಜ್ಞಾನವಿಲ್ಲದಿರುವುದರಿಂದ ಪ್ರಾಮಾಣ್ಯವಿಲ್ಲದಿದ್ದರೆ, ಅಪ್ರಾಮಾಣ್ಯವೇ ನಿಯತವಾಗಿ ಉಂಟಾಗುತ್ತದೆ ಎಂದು ಅಭಿಪ್ರಾಯ.

ಅತಸ್ತದರ್ಥಸ್ಯೈಕ್ಯಸ್ಯಾಪ್ಯಭಾವಃ ಸರ್ವಥಾ ಭವೇತ್ ।
ತದಭಾವವತಿ ಹ್ಯರ್ಥೇ ತತ್ಪ್ರಕಾರತ್ವಮೇವ ಹಿ ।
ಅಪ್ರಾಮಾಣ್ಯಂ ಯತಃ ಶಿಷ್ಟಾ ಲಕ್ಷಣಜ್ಞಾಃ ಪ್ರಚಕ್ಷತೇ ॥ ೯೭೦ ॥

**ಅರ್ಥ-**ಅತಃ = ಆದ್ದರಿಂದ, ಸರ್ವಥಾ = ಎಲ್ಲರೀತಿಯಿಂದಲೂ, ತದರ್ಥಸ್ಯ = ಶ್ರುತ್ಯರ್ಥವಾದ, ಐಕ್ಯಸ್ಯಾಪಿ = ಐಕ್ಯದ್ದೂ ಕೂಡ, ಅಭಾವಃ = ಅಭಾವವು, ಭವೇತ್ = ಉಂಟಾಗುತ್ತದೆ. ಯತಃ = ಏಕೆಂದರೆ, ತದಭಾವವತಿ ಹ್ಯರ್ಥೇ = ತದಭಾವವುಳ್ಳ ಪದಾರ್ಥದಲ್ಲಿ, ತತ್ಪ್ರಕಾರತ್ವಮೇವ = ತತ್ಪ್ರಕಾರತ್ವವನ್ನೇ, ಅಪ್ರಾಮಾಣ್ಯಂ =

ಅಪ್ರಾಮಾಣ್ಯವೆಂದು, ಶಿಷ್ಟಾ ಲಕ್ಷಣಾಜ್ಞಾಃ = ಲಕ್ಷಣದ ಜ್ಞಾನವುಳ್ಳ ಶಿಷ್ಟರು, ಪ್ರಚಕ್ಷತೇ ಹಿ = ಹೇಳುತ್ತಾರಷ್ಟೇ?

**ಅನುವಾದ-** ಆದ್ದರಿಂದ ಆ ಶ್ರುತಿಯ ಅರ್ಥವಾದ ಐಕ್ಯಕ್ಕೂ ಸರ್ವಥಾ ಅಭಾವವೇ ಉಂಟಾಗುತ್ತದೆ. ಏಕೆಂದರೆ 'ತದಭಾವವತಿ ತತ್ಪ್ರಕಾರಕತ್ವಂ' ಎಂಬುದೇ ಅಪ್ರಾಮಾಣ್ಯವೆಂಬುದಾಗಿ ಲಕ್ಷಣಜ್ಞರಾದ ಶಿಷ್ಟರು ಹೇಳುತ್ತಾರೆ.

**ಭಾವವಿಲಾಸಿನೀ-** ತದರ್ಥಸ್ಯ ಶ್ರುತ್ಯರ್ಥಭೂತಸ್ಯ ॥ ೯೭೦ ॥

**ವಿವರಣೆ-** ಶ್ರುತಿಯು ಅಪ್ರಮಾಣವೆಂದಾದರೆ, ಶ್ರುತಿಯು ಹೇಳಿದ ಅರ್ಥವು ಇಲ್ಲ ಎಂದು ಅರ್ಥ. ಶ್ರುತಿಯು ಹೇಳಿದ ಅರ್ಥವಾದ ಐಕ್ಯವು ಇಲ್ಲವೆಂದರೆ, ಐಕ್ಯವಿಲ್ಲದ ವಸ್ತುವಿನಲ್ಲಿ ಐಕ್ಯವನ್ನು ಹೇಳುವುದರಿಂದ ಶ್ರುತಿಗೆ ಅಪ್ರಾಮಾಣ್ಯವು ಬರುತ್ತದೆ ಎಂದೇ ಅರ್ಥ. ಆದ್ದರಿಂದ ಶ್ರುತಿಗೆ ಅಪ್ರಾಮಾಣ್ಯವು ಬಂದರೆ ಶ್ರುತ್ಯರ್ಥವಾದ ಐಕ್ಯವು ಬಾಧಿತವೇ ಆಗುತ್ತದೆ ಎಂದು ಅಭಿಪ್ರಾಯ.

ವ್ಯಾವಹಾರಿಕಸತ್ತ್ವಂ ಚ ಪ್ರಾಮಾಣ್ಯಸ್ಯ ಯದುಚ್ಯತೇ ।
ತಚ್ಚ ಬಾಧಸ್ಯ ಸತ್ತ್ವೇ ತು ಪ್ರಾಮಾಣ್ಯಸ್ಯ ತ್ರಿಕಾಲಗಾ ।
ನಾಸ್ತಿತೈವೇತಿ ಕಿಂ ತೇನ ಸರ್ವಥಾಽಭಾವ ಏವ ಸಃ ॥ ೯೭೧ ॥

**ಅರ್ಥ-** ಪ್ರಾಮಾಣ್ಯಸ್ಯ = ಪ್ರಾಮಾಣ್ಯಕ್ಕೆ, ಯತ್ = ಯಾವ, ವ್ಯಾವಹಾರಿಕಸತ್ತ್ವಂ = ವ್ಯಾವಹಾರಿಕಸತ್ತ್ವವು, ಉಚ್ಯತೇ = ಹೇಳಲ್ಪಡುತ್ತದೆಯೋ, ತಚ್ಚ = ಆ ವ್ಯಾವಹಾರಿಕಸತ್ತ್ವವೂ ಕೂಡ, ಪ್ರಾಮಾಣ್ಯಸ್ಯ = ಪ್ರಾಮಾಣ್ಯಕ್ಕೆ, ಬಾಧಸ್ಯ ಸತ್ತ್ವೇತು = ಬಾಧವು ಇರುವುದಾದರೆ, ತ್ರಿಕಾಲಗಾ = ಕಾಲತ್ರಯವೃತ್ತಿಯಾದ, ನಾಸ್ತಿತೈವ = ನಾಸ್ತಿತ್ವವೇ ಎಂಬ ಕಾರಣದಿಂದ, ತೇನ = ಆ ವ್ಯಾವಹಾರಿಕಸತ್ತ್ವದಿಂದ, ಕಿಂ = ಏನು ಪ್ರಯೋಜನ? ಸಃ = ಆ ಬಾಧವು, ಸರ್ವಥಾ ಅಭಾವ ಏವ = ಸರ್ವಥಾ ಪ್ರಾಮಾಣ್ಯದ ಅಭಾವರೂಪವಾದದ್ದೇ.

**ಅನುವಾದ-** ಪ್ರಾಮಾಣ್ಯಕ್ಕೆ ಯಾವ ವ್ಯಾವಹಾರಿಕಸತ್ತ್ವವು ಹೇಳಲ್ಪಡುತ್ತದೆಯೋ ಅಂತಹ ವ್ಯಾವಹಾರಿಕಸತ್ವವು ಬಾಧ್ಯವಾಗುತ್ತದೆ ಎಂದಾದರೆ, ಪ್ರಾಮಾಣ್ಯಕ್ಕೆ ಕಾಲತ್ರಯವೃತ್ತಿಯಾದ ನಾಸ್ತಿತ್ವವೇ ಉಂಟಾಯಿತು. ಆ ಕಾರಣದಿಂದ ಅಂತಹ ವ್ಯಾವಹಾರಿಕಪ್ರಾಮಾಣ್ಯದಿಂದ ಏನು ಪ್ರಯೋಜನ? ಬಾಧವು ಸರ್ವಥಾ ಅರ್ಥಾಭಾವರೂಪವಾದುದಷ್ಟೇ?

**ಭಾವವಿಲಾಸಿನೀ-** ಬಾಧಸ್ಯ ತ್ರೈಕಾಲಿಕನಾಸ್ತಿತ್ವಾಖ್ಯಬಾಧಸ್ಯ । ತೇನ ವ್ಯಾವಹಾರಿಕಸತ್ತ್ವೇನ । ಸಃ ಬಾಧಃ ॥ ೯೭೧ ॥

**ವಿವರಣೆ-** ವ್ಯಾವಹಾರಿಕ ಪ್ರಾಮಾಣ್ಯಕ್ಕೆ ಬಾಧವನ್ನು ಒಪ್ಪಿದರೆ, ಬಾಧವು ಅರ್ಥಾಭಾವರೂಪವಾದ್ದರಿಂದ ಪ್ರಾಮಾಣ್ಯವು ಇಲ್ಲವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಅಂತಹ ಪ್ರಾಮಾಣ್ಯದಿಂದ ಏನು ಪ್ರಯೋಜನ ಎಂದು ಅಭಿಪ್ರಾಯ.

ಬಾಧಾಭಾವೇ ತು ಸತ್ತ್ವಸ್ಯ ಪ್ರತ್ಯಕ್ಷಂ ನಸ್ತದೇವ ಹಿ ।
ಶ್ರುತಿಸ್ವರೂಪಸಿದ್ಧಿಶ್ಚ ನ ಸ್ಯಾತ್ಪ್ರತ್ಯಕ್ಷಬಾಧನೇ ॥ ೯೭೨ ॥

**ಅರ್ಥ-**ಬಾಧಾಭಾವೇ ತು = ಬಾಧವು ಇಲ್ಲದಿದ್ದರೆ, ತದೇವ ಪ್ರತ್ಯಕ್ಷಂ = ಪ್ರಾಮಾಣ್ಯಸತ್ವಪ್ರತ್ಯಕ್ಷವೇ, ನಃ = ನಮಗೆ, ಸತ್ತ್ವಸ್ಯ ಪ್ರತ್ಯಕ್ಷಂ ಹಿ = ಸತ್ವಪ್ರತ್ಯಕ್ಷವಷ್ಟೇ ? ಪ್ರತ್ಯಕ್ಷಬಾಧನೇ = ಪ್ರತ್ಯಕ್ಷವು ಬಾಧಿಸಲ್ಪಡುವುದಾದರೆ, ಶ್ರುತಿಸ್ವರೂಪಸಿದ್ಧಿಶ್ಚ = ಶ್ರುತಿಯ ಸ್ವರೂಪದ ಸಿದ್ಧಿಯೂ ಸಹ, ನ ಸ್ಯಾತ್ = ಆಗುವುದಿಲ್ಲ.

**ಅನುವಾದ-** ಬಾಧವು ಇಲ್ಲದಿದ್ದರೆ ಪ್ರಾಮಾಣ್ಯಸತ್ವಪ್ರತ್ಯಕ್ಷವೇ ನಮಗೆ ವಿಶ್ವಸತ್ವದ ಪ್ರತ್ಯಕ್ಷವಷ್ಟೇ ? ಪ್ರತ್ಯಕ್ಷವು ಬಾಧಿಸಲ್ಪಡುವುದಾದರೆ ಶ್ರುತಿಯ ಸ್ವರೂಪವೂ ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ-** ಸತ್ತ್ವಸ್ಯ ವಿಶ್ವಸಸ್ತ್ವಸ್ಯ । ತತ್ ಪ್ರಾಮಾಣ್ಯಸತ್ತ್ವಪ್ರತ್ಯಕ್ಷಮ್ । ತಸ್ಯಾಪಿ ವಿಶ್ವಾಂತಃಪಾತಿತ್ವಾದಿತಿ ಭಾವಃ ॥ ೯೭೩ ॥

**ವಿವರಣೆ-** ಪ್ರಾಮಾಣ್ಯವು ವಿಶ್ವಾಂತಃ ಪಾತಿಯಾದ್ದರಿಂದ ಪ್ರಾಮಾಣ್ಯಸತ್ವಗ್ರಾಹಿಪ್ರತ್ಯಕ್ಷವು ವಿಶ್ವಸತ್ವಗ್ರಾಹಿ ಪ್ರತ್ಯಕ್ಷವಾಗುತ್ತದೆ ಎಂದು ಅಭಿಪ್ರಾಯ.

ಅತಃ ಕೇನೈಕ್ಯಸಿದ್ಧಿಃ ಸ್ಯಾನ್ನ ಹ್ಯಸತ್ ಸಾಧನಂ ಭವೇತ್ ।
ಉಪಸರ್ಪತಿ ಸರ್ಪಂತಂ ರಜ್ಜುಸರ್ಪಃ ಕಿಮಧ್ವನಿ ॥ ೯೭೩ ॥

**ಅರ್ಥ-**ಅತಃ = ಆದ್ದರಿಂದ, ಕೇನ = ಯಾವ ಪ್ರಮಾಣದಿಂದ, ಐಕ್ಯಸಿದ್ಧಿಃ ಸ್ಯಾತ್ = ಐಕ್ಯಸಿದ್ಧಿಯು ಉಂಟಾಗುತ್ತದೆ? ಅಸತ್ = ಅಸತ್ತಾದ ಪದಾರ್ಥವು, ಸಾಧನಂ ನ ಭವೇತ್ ಹಿ = ಯಾವುದಕ್ಕೂ ಸಾಧನವಾಗುವುದಿಲ್ಲವಷ್ಟೇ ? ರಜ್ಜುಸರ್ಪಃ = ರಜ್ಜುಸರ್ಪವು, ಅಧ್ವನಿ ಸರ್ಪಂತಂ = ದಾರಿಯಲ್ಲಿ ಚಲಿಸುತ್ತಿರುವ ಪುರುಷನನ್ನು, ಉಪಸರ್ಪತಿ ಕಿಮ್ = ಸಮೀಪಿಸುತ್ತದೆಯೇ?

**ಅನುವಾದ-** ಆದ್ದರಿಂದ ಯಾವ ಪ್ರಮಾಣದಿಂದ ಐಕ್ಯಸಿದ್ಧಿಯಾಗುತ್ತದೆ? ಸ್ವರೂಪತಃ ಅಸತ್ತಾದುದು ಯಾವುದಕ್ಕೂ ಸಾಧಕವಾಗುವುದಿಲ್ಲವಷ್ಟೇ ? ರಜ್ಜುಸರ್ಪವು ದಾರಿಯಲ್ಲಿ ಚಲಿಸುವ ಪುರುಷನನ್ನು ಸಮೀಪಿಸುವುದಿಲ್ಲವಷ್ಟೇ ?

**ಭಾವವಿಲಾಸಿನೀ-** ಕೇನ ಪ್ರಮಾಣೇನ । ಅಸತ್ ಅವಿದ್ಯಮಾನಮ್ । ಅವಿದ್ಯಮಾನ ಸ್ಯಾಸಾಧಕತ್ವೇ ದೃಷ್ಟಾಂತಮಾಹ — **ಉಪಸರ್ಪತೀತಿ** ॥ ಸರ್ಪಂತಂ ಗಚ್ಛಂತಂ ಪುರುಷಮ್ ॥ ೯೭೩ ॥

**ವಿವರಣೆ-** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಶ್ರುತಿಯ ಸ್ವರೂಪವೇ ಸಿದ್ಧವಾಗದಿರುವುದರಿಂದ ಅಸತ್ತಾದ ಶ್ರುತಿಯಿಂದ ಐಕ್ಯವು ಹೇಗೆ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಾ ವಾಽಂತೇಽವೀವಿಶತ್ ಸೂರ್ಯಸುಷಾವೃಷಿಪರಂಪರಾ ।**
**ಕಸ್ತಪ್ತಶುಕ್ತಿರೂಪ್ಯೇಣ ಕೃತ್ವಾಽಽಸ್ತೇ ಕರಕಂಕಣಮ್ ॥ ೯೭೪ ॥**

**ಅರ್ಥ-**ಸೂರ್ಯಸುಷೌ= ಸವಿತೃ ಸುಷಿರದಲ್ಲಿ, ಕಾವಾಋಷಿಪರಂಪರಾ = ಯಾವ ಋಷಿಯ ಪರಂಪರೆಯು, ಅಂತೇ = ಒಳಗೆ, ಅವೀವಿಶತ್ = ಪ್ರವೇಶಿಸಿತು, ಕಃ = ಯಾವನು, ತಪ್ತಶುಕ್ತಿರೂಪ್ಯೇಣ = ಕರಗಿಸಿದ ಶುಕ್ತಿರೂಪ್ಯದಿಂದ, ಕರಕಂಕಣಮ್= ಹಸ್ತಾಭರಣವನ್ನು, ಕೃತ್ವಾಽಽಸ್ತೇ = ಮಾಡಿಕೊಂಡಿದ್ದಾನೆ?

**ಅನುವಾದ- ಯಾವ ಋಷಿಪರಂಪರೆಯು ಸವಿತೃಸುಷಿರದೊಳಗೆ ಪ್ರವೇಶಮಾಡಿತು? ಯಾವನು ಶುಕ್ತಿರೂಪ್ಯವನ್ನು ಕರಗಿಸಿ ಹಸ್ತಾಭರಣವನ್ನು ಮಾಡಿಕೊಂಡಿದ್ದಾನೆ?**

**ಭಾವವಿಲಾಸಿನೀ-** ಅವಿವಿಶತ್ ಪ್ರವೇಶಯಾಮಾಸ । ಅವಿದ್ಯಮಾನಾರ್ಥಸ್ಯಾಪಿ ಸಾಧಕತ್ವೇ ಸಾಕ್ಷಾದರ್ಥಕಾರ್ಯಮ್ ಉಪಸರ್ಪಣಂ ಪ್ರವೇಶಃ ಕುತೋ ನ ಸ್ಯಾದಿತಿ ಸೂಚನಾಯ ಸರ್ಪಣಾದ್ಯರ್ಥಕಾರ್ಯಸ್ಯೈವ ನಿದರ್ಶನತ್ರಯೇಽಪಿ ಗ್ರಹಣಮ್ ॥ ೯೭೪ ॥

**ವಿವರಣೆ-** ಅರ್ಥಕ್ರಿಯೆಯು ಸತ್ಯವಾದ ಪದಾರ್ಥದಿಂದಲೇ ಉಂಟಾಗುತ್ತದೆ. ಅಸತ್ಯವಾದ ಪದಾರ್ಥದಿಂದ ಎಂದೂ ಉಂಟಾಗುವುದಿಲ್ಲ ಎಂಬ ವಿಷಯದಲ್ಲಿ ಈ ಮೂರು ದೃಷ್ಟಾಂತಗಳನ್ನು ಕೊಟ್ಟಿದ್ದಾರೆ.

**ಅರ್ಥಾಸಾಧಾರಣಂ ಕಾರ್ಯಂ ಮಿಥ್ಯಾತ್ವಾದೇವ ನಾತ್ರ ತತ್ ।**
**ತದ್ವಾಗ್ ವಾಚಾ ಪ್ರತೀತಿರ್ವಾ ಸತ್ಯಾ ವಾಚ್ಯಾಽರ್ಥಕಾಮುಕೈಃ ॥ ೯೭೫ ॥**

**ಅರ್ಥ-**ಅರ್ಥಾಸಾಧಾರಣಂ = ಅರ್ಥಕ್ಕೆ ಅಸಾಧಾರಣವಾದುದು, ಕಾರ್ಯಂ = ಅದರ ಕಾರ್ಯ, ಅತ್ರ = ಈ ಮೂರುಸ್ಥಳದಲ್ಲಿ, ಮಿಥ್ಯಾತ್ವಾದೇವ = ಅರ್ಥವು ಅಸತ್ತಾಗಿರುವುದರಿಂದಲೇ, ತತ್ = ಆ ಕಾರ್ಯವು, ನ = ಇಲ್ಲ, ತತ್ = ಆ ಕಾರಣದಿಂದ, ಅರ್ಥಕಾಮುಕೈಃ = ಅರ್ಥಸಿದ್ಧಿಯನ್ನು ಅಪೇಕ್ಷಿಸುವವರಿಂದ, ತದ್ವಾಕ್ = ಆ ವಾಕ್ಯಕ್ಕಾಗಲೀ, ವಾಚಾ ಪ್ರತೀತಿರ್ವಾ = ವಾಕ್ಯಜನ್ಯಪ್ರತೀತಿಗಾಗಲೀ, ಸತ್ಯಾ ವಾಚ್ಯಾ = ಸತ್ಯತ್ವವು ಹೇಳಬೇಕು.

**ಅನುವಾದ- ಅರ್ಥಕ್ಕೆ ಅಸಾಧಾರಣವಾದುದು ಅದರ ಕಾರ್ಯ. ಈ ಮೂರುಸ್ಥಳಗಳಲ್ಲಿ ಅರ್ಥವು ಅಸತ್ಯವಾಗಿರುವುದರಿಂದಲೇ ಅದರ ಕಾರ್ಯವೂ ಇಲ್ಲ. ಆದ್ದರಿಂದ ಅರ್ಥವನ್ನು ಉಳಿಸಿಕೊಳ್ಳಲು ಬಯಸುವವರು ಅರ್ಥವಿಷಯಕವಾದ ವಾಕ್ಯಕ್ಕಾಗಲೀ, ಅಥವಾ ಆ ವಾಕ್ಯಜನ್ಯಪ್ರತೀತಿಗಾಗಲೀ ಸತ್ಯತ್ವವನ್ನು ಹೇಳಲೇಬೇಕು.**

**ಭಯಕಂಪಾದಿಕಂ ಸುಪ್ತೌ ಸರ್ಪಸತ್ತ್ವೇಽಪ್ಯಸತ್ತ್ವತಃ ।**
**ಸರ್ಪಾಸತ್ತ್ವೇಽಪ್ಯತ್ರ ಸತ್ತ್ವಾಜ್ಜ್ಞಪ್ತೇರೇವ ಫಲಂ ಕಿಲ ॥ ೯೭೬ ॥**

**ಅರ್ಥ**-ಭಯಕಂಪಾದಿಕಂ= ಭಯಕಂಪಾದಿಗಳು, ಸುಪ್ತೌ = ಸುಷುಪ್ತಿಯಲ್ಲಿ, ಸರ್ಪಸತ್ತ್ವೇಽಪಿ = ಸರ್ಪವು ಇದ್ದರೂ ಕೂಡ, ಅಸತ್ತ್ವತಃ = ಇಲ್ಲದಿರುವುದರಿಂದ, ಅತ್ರ= ರಜ್ಜುಸರ್ಪಸ್ಥಳದಲ್ಲಿ, ಸರ್ಪಾಸತ್ತ್ವೇಽಪಿ = ಸರ್ಪವು ಇಲ್ಲದಿದ್ದರೂ ಕೂಡ, ಸತ್ತ್ವಾತ್ = ಇರುವುದರಿಂದ, ಭಯಕಂಪಾದಿಕಂ = ಭಯಕಂಪಾದಿಗಳು, ಜ್ಞಪ್ತೇರೇವ ಫಲಂ ಕಿಲ = ಜ್ಞಾನದ್ದೇ ಕಾರ್ಯವಷ್ಟೇ ?

**ಅನುವಾದ-** ಸುಷುಪ್ತಿಯಲ್ಲಿ ತನ್ನ ಮೈಮೇಲೆ ಸರ್ಪವು ಇದ್ದರೂ ಭಯಕಂಪಾದಿಗಳು ಇಲ್ಲದಿರುವುದರಿಂದ ರಜ್ಜುಸರ್ಪಸ್ಥಳದಲ್ಲಿ ಸರ್ಪವು ಇಲ್ಲದಿದ್ದರೂ ಭಯಕಂಪಾದಿಗಳು ಇರುವುದರಿಂದ, ಭಯಕಂಪಾದಿಗಳು ಜ್ಞಾನದ್ದೇ ಫಲವಷ್ಟೇ ?

**ಭಾವವಿಲಾಸಿನೀ-** ಯತ್ ಯಸ್ಮಾತ್ । ಅನುಪ್ರಮಾಣಕೇವಲಪ್ರಮಾಣಯೋರ್ಗ್ರಹಣಾಯ ವಾಕ್ಯಪ್ರತೀತಿರ್ವೇತ್ಯುಕ್ತಮ್ । ವಾಚಾ ಶಬ್ದೇನ ಜಾತಾ ಪ್ರತೀತಿರಿತ್ಯರ್ಥಃ । ಅರ್ಥಕಾಮುಕೈಃ ತತ್ಸಾಧ್ಯಪ್ರಯೋಜನಕಾಮುಕೈಃ ॥ ನನು ರಜ್ಜುಸರ್ಪಸ್ಯ ಭಯಕಂಪಾದಿಜನಕತ್ವಮಸ್ತೀತ್ಯಾಶಂಕ್ಯ ಜ್ಞಾನಾನ್ವಯವ್ಯತಿರೇಕಾನುವಿಧಾಯಿತ್ವಾತ್ ಜ್ಞಾನಕಾರ್ಯಮೇವ ತತ್ । ನತ್ವರ್ಥ-ಕಾರ್ಯಮಿತ್ಯಾಹ – **ಭಯೇತಿ** ॥ ಸರ್ಪಸತ್ತ್ವೇ ಸರ್ಪಸ್ಯ ಸ್ವಾಂಗೋಪರಿಸತ್ತ್ವೇ । ಅಸತ್ತ್ವತಃ ಭಯ-ಕಂಪಾದೇರಸತ್ತ್ವತಃ। ಅತ್ರ ರಜ್ಜುಸರ್ಪಭ್ರಮಸ್ಥಲೇ ಸತ್ತ್ವಾತ್ ಭಯಕಂಪಾದೇಃ ಸತ್ತ್ವಾತ್ । ಭಯಕಂಪಾದಿಕಂ ಜ್ಞಪ್ತೇಃ ಫಲಂ ಕಿಲೇತಿ ಸಂಬಂಧಃ । ಅನೇನ ಭ್ರಮಸ್ಥಲೇಽನ್ವಯಃ । ಸುಪ್ತಿ-ದಶಾಯಾಂ ವ್ಯತಿರೇಕಶ್ಚ ಪ್ರದರ್ಶಿತ ಇತಿ ದ್ರಷ್ಟವ್ಯಮ್ ॥ ೯೭೫-೯೭೬ ॥

**ವಿವರಣೆ-** ಸರ್ಪವು ಭಯಕಂಪಾದಿಗಳಿಗೆ ಕಾರಣ ಎಂದು ಹೇಳಿದರೆ, ಸುಷುಪ್ತಿಯಲ್ಲಿ ಅನ್ವಯವ್ಯಭಿಚಾರವೂ, ರಜ್ಜುಸರ್ಪಸ್ಥಳದಲ್ಲಿ ವ್ಯತಿರೇಕವ್ಯಭಿಚಾರವೂ ಬರುವುದರಿಂದ ಭಯಕಂಪಾದಿಗಳನ್ನು ಕುರಿತು ಸರ್ಪವು ಕಾರಣವಲ್ಲ, ಸರ್ಪಜ್ಞಾನವೇ ಕಾರಣ ಎಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಜ್ಞಪ್ತಿಶ್ಚ ಸತ್ಯಾ ಸರ್ವತ್ರ ಮಿಥ್ಯಾರ್ಥಸ್ಯೈವ ಬಾಧನಾತ್ ।**
**ಇತ್ಥಂ ವಿವಿಕ್ತತಾ ನೋಚೇದರ್ಥಕಾರ್ಯಂ ಕುತೋ ನ ತತ್ ॥ ೯೭೭ ॥**

**ಅರ್ಥ**-ಸರ್ವತ್ರ = ಎಲ್ಲ ಸ್ಥಳದಲ್ಲಿಯೂ, ಮಿಥ್ಯಾರ್ಥಸ್ಯೈವ = ಮಿಥ್ಯಾಭೂತವಾದ ಅರ್ಥವೇ, ಬಾಧನಾತ್ = ಬಾಧಿಸಲ್ಪಡುವುದರಿಂದ, ಜ್ಞಪ್ತಿಶ್ಚ = ಜ್ಞಾನವಾದರೋ, ಸತ್ಯಾ = ಸತ್ಯವೇ ಆಗಿದೆ. ಇತ್ಥಂ = ಈ ರೀತಿಯಾಗಿ, ವಿವಿಕ್ತತಾ = ಅರ್ಥ ಮತ್ತು ಜ್ಞಾನಗಳಿಗೆ ವಿಭಾಗವು, ನೋಚೇತ್ = ಇಲ್ಲದಿದ್ದರೆ ಭ್ರಮಸ್ಥಳದಲ್ಲಿ, ಕುತಃ = ಏಕೆ, ತತ್ ಅರ್ಥಕಾರ್ಯಂ ನ= ಯೋಗ್ಯವಾದ ಅಂತಹ ಅರ್ಥಕಾರ್ಯವಾಗುವುದಿಲ್ಲ?

**ಅನುವಾದ-** ಎಲ್ಲ ಭ್ರಮಸ್ಥಳದಲ್ಲಿಯೂ ಮಿಥ್ಯಾಭೂತವಾದ ಅರ್ಥವೇ ಬಾಧಿತವಾಗುವುದರಿಂದ, ಜ್ಞಪ್ತಿಯು ಸತ್ಯವೇ ಆಗಿದೆ. ಹೀಗೆ ಅರ್ಥಕ್ಕೂ ಮತ್ತು ಜ್ಞಾನಕ್ಕೂ ವಿಭಾಗವನ್ನು ಒಪ್ಪದಿದ್ದರೆ, ಭ್ರಮಸ್ಥಳದಲ್ಲಿ ಅರ್ಥದಿಂದ ಏಕೆ ಅದಕ್ಕೆ ಯೋಗ್ಯವಾದ ಕಾರ್ಯವು ಉಂಟಾಗುವುದಿಲ್ಲ?

**ಭಾವವಿಲಾಸಿನೀ-** ಸರ್ವತ್ರ ಸಕಲಭ್ರಮೇಷು । ನೇದಂ ರಜತಂ ನಾಯಂ ಸರ್ಪ ಇತ್ಯರ್ಥಸ್ಯೈವ ಬಾಧನಾತ್ ಜ್ಞಪ್ತಿಃ ಸತ್ಯೇತಿ ಸಂಬಂಧಃ । ವಿವಿಕ್ತತಾ ಕಾರ್ಯದ್ವಯವಿಭಾಗಃ । ತತ್ಪೂರ್ವೋಕ್ತಂ ಸರ್ಪಣಾದಿಕಮ್ ॥ ೯೭೭ ॥

ಸ ಯದೀತ್ಯತ್ರ ಪಶ್ಯೇದಿತ್ಯುಕ್ತ್ಯಾ ಸ್ವಾಪ್ನಾರ್ಥದರ್ಶನಾತ್ ।
ಇಷ್ಟಾನಿಷ್ಟಫಲಪ್ರಾಪ್ತಿಃ ಶ್ರುತ್ಯಾ ಪ್ರೋಕ್ತಾ ಮಯೈವ ನ ॥ ೯೭೮ ॥

**ಅರ್ಥ-**ಸ ಯದಿ ಇತ್ಯತ್ರ = 'ಸ ಯದಿ ಏತೇಷಾಂ ಕಿಂಚಿತ್ ಪಶ್ಯೇತ್' ಎಂಬ ಐತರೇಯೋಪನಿಷದ್ ವಾಕ್ಯದಲ್ಲಿ, ಪಶ್ಯೇದಿತ್ಯುಕ್ತ್ಯಾ = 'ಪಶ್ಯೇತ್' ಎಂಬ ವಚನದಿಂದ, ಸ್ವಾಪ್ನಾರ್ಥದರ್ಶನಾತ್ = ಸ್ವಾಪ್ನಪದಾರ್ಥದರ್ಶನದಿಂದ, ಇಷ್ಟಾನಿಷ್ಟಫಲಪ್ರಾಪ್ತಿಃ = ಇಷ್ಟಾನಿಷ್ಟಫಲಪ್ರಾಪ್ತಿಯು, ಶ್ರುತ್ಯಾ ಪ್ರೋಕ್ತಾ = ಶ್ರುತಿಯಿಂದಲೇ ಹೇಳಲ್ಪಟ್ಟಿದೆ, ಮಯೈವ ನ = ನನ್ನಿಂದಲೇ ಅಲ್ಲ.

**ಅನುವಾದ-** 'ಸ ಯದಿ ಏತೇಷಾಂ ಕಿಂಚಿತ್ ಪಶ್ಯೇತ್' ಸ್ವಪ್ನವನ್ನು ನೋಡುವ ಜೀವನು ಇವುಗಳಲ್ಲಿ ಯಾವುದಾದರೂ ಒಂದನ್ನು ನೋಡಿದರೆ, ಎಂಬ ಐತರೇಯ ವಾಕ್ಯದಿಂದಲೇ ಸ್ವಪ್ನಾರ್ಥದರ್ಶನವೇ ಇಷ್ಟಾನಿಷ್ಟಫಲಜನಕವೆಂದು ಹೇಳಲ್ಪಡುತ್ತದೆ. ಕೇವಲ ನನ್ನಿಂದಲೇ ಅಲ್ಲ.

**ಭಾವವಿಲಾಸಿನೀ-** ಸ್ವಾಪ್ನಪದಾರ್ಥೇಷ್ವಪಿ ಜ್ಞಾನಸ್ಯೈವಾನಿಷ್ಟಹೇತುತ್ವಂ ಶ್ರುತ್ಯಾ ಸಾಧಯತಿ ॥ ಸ ಯದೀತಿ॥ ಅನೇನ ಸ ಯದ್ಯೇತೇಷಾಂ ಕಿಂಚಿತ್ ಪಶ್ಯೇದಿತಿ ವಾಕ್ಯಂ ಗೃಹ್ಣಾತಿ । ಶ್ರುತ್ಯಾ ಐತರೇಯೋಪನಿಷದಾ । ಪರೇಣ ಸ್ವಾಪ್ನಪದಾರ್ಥಾನಾಂ ಮಿಥ್ಯಾತ್ವಾಂಗೀಕಾರಾತ್ತಸ್ಯಾಪ್ಯುತ್ತರದಾನಾಯ ಜ್ಞಾನಪರ್ಯಂತಂ ಧಾವನಮ್ ॥ ೯೭೮ ॥

**ವಿವರಣೆ-** ಸ್ವಾಪ್ನಪದಾರ್ಥ ಸ್ಥಳಗಳಲ್ಲೂ ಕೂಡ ಸ್ವಾಪ್ನಪದಾರ್ಥಜ್ಞಾನಕ್ಕೇ ಇಷ್ಟಾನಿಷ್ಟಹೇತುತ್ವವನ್ನು ಇಲ್ಲಿ ಶ್ರುತಿಯಿಂದಲೇ ಸಾಧಿಸುತ್ತಾರೆ. ಪರರು ಸ್ವಾಪ್ನಪದಾರ್ಥಗಳ ಜ್ಞಾನಕ್ಕೂ ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ ಅದಕ್ಕೂ ಉತ್ತರವನ್ನು ನೀಡಲು ಇಲ್ಲಿ ಜ್ಞಾನಪರ್ಯಂತವಾಗಿ ಹೋಗಿದ್ದಾರೆ.

ಸ್ವಾಪ್ನೋಽರ್ಥೋಽಪಿ ಯಥಾರ್ಥೋ ಹಿ ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ ॥೯೭೯॥

**ಅರ್ಥ**-ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ = ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಬ್ರಹ್ಮಸೂತ್ರವಿರುವುದರಿಂದ, ಸ್ವಾಪ್ನೋಽರ್ಥೋಽಪಿ = ಸ್ವಾಪ್ನಪದಾರ್ಥವೂ ಸಹ, ಯಥಾರ್ಥೋ ಹಿ = ಸತ್ಯವಾಗಿಯೇ ಇದೆಯಷ್ಟೇ?

**ಭಾವವಿಲಾಸಿನೀ**– ವಸ್ತುಸ್ಥಿತ್ಯಾ ಸ್ವಾಪ್ನಪದಾರ್ಥೋಽಪಿ ಸತ್ಯ ಏವೇತಿ ಸಾಧಯತಿ ॥ **ಸ್ವಾಪ್ನಾರ್ಥ ಇತಿ** ॥ ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ ಸಂಧ್ಯೇ ಸೃಷ್ಟಿರಾಹಹೀತಿ ಸೂತ್ರಾದಿತ್ಯರ್ಥಃ । ನನು ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಾಭಿವ್ಯಕ್ತಸ್ವರೂಪತ್ವಾದಿತ್ಯುತ್ತರಸೂತ್ರೇ ಸ್ವಾಪ್ನಪದಾರ್ಥಸ್ಯ ಮಾಯಾಮಾತ್ರತ್ವೋಕ್ತೇರ್ಮಿಥ್ಯಾತ್ವಮಿತಿ ಚೇತ್ ನ । ನ ತತ್ರ ರಥಾ ನ ರಥಯೋಗಾ ನಪಂಥಾನೋ ಭವಂತ್ಯಥ ರಥಾನ್ರಥಯೋಗಾನ್ ಪಥಃ ಸೃಜತ ಇತಿ ಶ್ರುತೇರಾಹಹೀತಿ ಪೂರ್ವಸೂತ್ರಶೇಷೇ ಸೂತ್ರಕೃತೈವ ಗೃಹೀತತ್ವೇನ ಶ್ರುತಿಮೂಲಪೂರ್ವಸೂತ್ರಸ್ಯೈವ ಪ್ರಧಾನತಯಾ ಕೇವಲಯುಕ್ತಿಮಾತ್ರಮೂಲೋತ್ತರಸೂತ್ರಸ್ಯಾಪ್ರಧಾನತಯಾ ಚ ಮುಖ್ಯಾನುಸಾರೇಣೈವಾಮುಖ್ಯಸ್ಯ ಯೋಜನೀಯತ್ವಾತ್ ॥ ೯೭೯ ॥

**ವಿವರಣೆ**- ವಸ್ತುಸ್ಥಿತಿಯಲ್ಲಿ ಸ್ವಾಪ್ನಪದಾರ್ಥಗಳೂ ಸತ್ಯವಾಗಿವೆ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ. 'ಮಾಯಾಮಾತ್ರಂ ತು' ಎಂಬ ಮುಂದಿನ ಸೂತ್ರದಲ್ಲಿ ಸ್ವಾಪ್ನಪದಾರ್ಥಗಳಿಗೆ ಮಿಥ್ಯಾತ್ವವನ್ನು ಹೇಳಲಾಗಿದೆ ಎಂದು ಶಂಕಿಸಿದರೆ ಅದು ಸರಿಯಲ್ಲ. ಏಕೆಂದರೆ, 'ಸಂಧ್ಯೇ ಸೃಷ್ಟಿರಾಹಹಿ' ಎಂಬಲ್ಲಿ 'ಆಹಹಿ'ಎಂಬ ಸೂತ್ರಭಾಗದಿಂದ ಸೂತ್ರಕಾರರೇ 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬ ವಾಕ್ಯವನ್ನು ತೆಗೆದುಕೊಂಡಿರುವುದರಿಂದ ಶ್ರುತಿಮೂಲಪೂರ್ವಸೂತ್ರವೇ ಪ್ರಧಾನವಾದುದು. 'ಮಾಯಾಮಾತ್ರಂ ತು' ಎಂಬ ಸೂತ್ರವು ಕೇವಲ ಯುಕ್ತಿರೂಪವಾಗಿರುವುದರಿಂದ ಮೊದಲನೆಯ ಸೂತ್ರಕ್ಕಿಂತಲೂ ಅಪ್ರಧಾನವಾಗುತ್ತದೆ. ಆದ್ದರಿಂದ ಮೊದಲನೆಯ ಸೂತ್ರದಿಂದ ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಯತ್ ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಮಸೂತ್ರಯತ್ ।**
**ಸತ್ಯತಾಂ ಸೂಕ್ಷ್ಮತಾಂ ಚಾಸೌ ವಕ್ತಿ ನಾನೃತತಾಂ ಪ್ರಭುಃ ॥ ೯೮೦ ॥**

**ಅರ್ಥ**-ಯತ್= ಯಾವ ಕಾರಣದಿಂದ, ಪ್ರಭುಃ = ಸಮರ್ಥವಾದ ವೇದವಾಕ್ಯವು, ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಮ್ = ಸ್ಪಷ್ಟವಾಗಿ ಅಭಿವ್ಯಕ್ತವಲ್ಲದ ಸ್ವರೂಪವನ್ನು, ಅಸೂತ್ರಯತ್ = ಸೂತ್ರದಲ್ಲಿ ಹೇಳಿದರೋ ಆ ಕಾರಣದಿಂದ, ಅಸೌ = ಸೂತ್ರಕಾರರು, ಸತ್ಯತಾಂ = ಸತ್ಯತ್ವವನ್ನು, ಸೂಕ್ಷ್ಮತಾಂ ಚ = ಮತ್ತು ಸೂಕ್ಷ್ಮತ್ವವನ್ನೂ, ವಕ್ತಿ = ಹೇಳುತ್ತಾರೆ, ಅನೃತತಾಂ = ಮಿಥ್ಯಾತ್ವವನ್ನು, ನ ವಕ್ತಿ = ಹೇಳುವುದಿಲ್ಲ.

**ಅನುವಾದ**- ಪ್ರಭುಗಳಾದ ಸೂತ್ರಕಾರರು ಯಾವ ಕಾರಣದಿಂದ ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವವನ್ನು ಹೇತುವಾಗಿ ಹೇಳಿದರೋ ಆ ಕಾರಣದಿಂದ ಅವರು

**ಅನುವಾದ-** ಎಲ್ಲ ಭ್ರಮಸ್ಥಳದಲ್ಲಿಯೂ ಮಿಥ್ಯಾಭೂತವಾದ ಅರ್ಥವೇ ಬಾಧಿತವಾಗುವುದರಿಂದ, ಜ್ಞಪ್ತಿಯು ಸತ್ಯವೇ ಆಗಿದೆ. ಹೀಗೆ ಅರ್ಥಕ್ಕೂ ಮತ್ತು ಜ್ಞಾನಕ್ಕೂ ವಿಭಾಗವನ್ನು ಒಪ್ಪದಿದ್ದರೆ, ಭ್ರಮಸ್ಥಳದಲ್ಲಿ ಅರ್ಥದಿಂದ ಏಕೆ ಅದಕ್ಕೆ ಯೋಗ್ಯವಾದ ಕಾರ್ಯವು ಉಂಟಾಗುವುದಿಲ್ಲ?

**ಭಾವವಿಲಾಸಿನೀ-** ಸರ್ವತ್ರ ಸಕಲಭ್ರಮೇಷು । ನೇದಂ ರಜತಂ ನಾಯಂ ಸರ್ಪ ಇತ್ಯರ್ಥಸ್ಯೈವ ಬಾಧನಾತ್ ಜ್ಞಪ್ತಿಃ ಸತ್ಯೇತಿ ಸಂಬಂಧಃ । ವಿವಿಕ್ತತಾ ಕಾರ್ಯದ್ವಯವಿಭಾಗಃ । ತತ್ಪೂರ್ವೋಕ್ತಂ ಸರ್ಪಣಾದಿಕಮ್ ॥ ೯೭೭ ॥

ಸ ಯದೀತ್ಯತ್ರ ಪಶ್ಯೇದಿತ್ಯುಕ್ತ್ಯಾ ಸ್ವಾಪ್ನಾರ್ಥದರ್ಶನಾತ್ ।
ಇಷ್ಟಾನಿಷ್ಟಫಲಪ್ರಾಪ್ತಿಃ ಶ್ರುತ್ಯಾ ಪ್ರೋಕ್ತಾ ಮಯ್ಯೈವ ನ ॥ ೯೭೮ ॥

**ಅರ್ಥ-**ಸ ಯದಿ ಇತ್ಯತ್ರ = 'ಸ ಯದಿ ಏತೇಷಾಂ ಕಿಂಚಿತ್ ಪಶ್ಯೇತ್' ಎಂಬ ಐತರೇಯೋಪನಿಷದ್ ವಾಕ್ಯದಲ್ಲಿ, ಪಶ್ಯೇದಿತ್ಯುಕ್ತ್ಯಾ = 'ಪಶ್ಯೇತ್' ಎಂಬ ವಚನದಿಂದ, ಸ್ವಾಪ್ನಾರ್ಥದರ್ಶನಾತ್ = ಸ್ವಾಪ್ನಪದಾರ್ಥದರ್ಶನದಿಂದ, ಇಷ್ಟಾನಿಷ್ಟಫಲಪ್ರಾಪ್ತಿಃ = ಇಷ್ಟಾನಿಷ್ಟಫಲಪ್ರಾಪ್ತಿಯು, ಶ್ರುತ್ಯಾ ಪ್ರೋಕ್ತಾ = ಶ್ರುತಿಯಿಂದಲೇ ಹೇಳಲ್ಪಟ್ಟಿದೆ, ಮಯ್ಯೈವ ನ = ನನ್ನಿಂದಲೇ ಅಲ್ಲ.

**ಅನುವಾದ-** 'ಸ ಯದಿ ಏತೇಷಾಂ ಕಿಂಚಿತ್ ಪಶ್ಯೇತ್' ಸ್ವಪ್ನವನ್ನು ನೋಡುವ ಜೀವನು ಇವುಗಳಲ್ಲಿ ಯಾವುದಾದರೂ ಒಂದನ್ನು ನೋಡಿದರೆ, ಎಂಬ ಐತರೇಯ ವಾಕ್ಯದಿಂದಲೇ ಸ್ವಪ್ನಾರ್ಥದರ್ಶನವೇ ಇಷ್ಟಾನಿಷ್ಟಫಲಜನಕವೆಂದು ಹೇಳಲ್ಪಡುತ್ತದೆ. ಕೇವಲ ನನ್ನಿಂದಲೇ ಅಲ್ಲ.

**ಭಾವವಿಲಾಸಿನೀ-** ಸ್ವಾಪ್ನಪದಾರ್ಥೇಷ್ವಪಿ ಜ್ಞಾನಸ್ಯೈವಾನಿಷ್ಟಹೇತುತ್ವಂ ಶ್ರುತ್ಯಾ ಸಾಧಯತಿ ॥ **ಸ ಯದೀತಿ॥** ಅನೇನ ಸ ಯದ್ಯೇತೇಷಾಂ ಕಿಂಚಿತ್ ಪಶ್ಯೇದಿತಿ ವಾಕ್ಯಂ ಗೃಹ್ಣಾತಿ । ಶ್ರುತ್ಯಾ ಐತರೇಯೋಪನಿಷದಾ । ಪರೇಣ ಸ್ವಾಪ್ನಪದಾರ್ಥಾನಾಂ ಮಿಥ್ಯಾತ್ವಾಂಗೀಕಾರಾತ್ತಸ್ಯಾಪ್ಯುತ್ತರದಾನಾಯ ಜ್ಞಾನಪರ್ಯಂತಂ ಧಾವನಮ್ ॥ ೯೭೮ ॥

**ವಿವರಣೆ-** ಸ್ವಾಪ್ನಪದಾರ್ಥ ಸ್ಥಳಗಳಲ್ಲೂ ಕೂಡ ಸ್ವಾಪ್ನಪದಾರ್ಥಜ್ಞಾನಕ್ಕೇ ಇಷ್ಟಾನಿಷ್ಟಹೇತುತ್ವವನ್ನು ಇಲ್ಲಿ ಶ್ರುತಿಯಿಂದಲೇ ಸಾಧಿಸುತ್ತಾರೆ. ಪರರು ಸ್ವಾಪ್ನಪದಾರ್ಥಗಳ ಜ್ಞಾನಕ್ಕೂ ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ ಅದಕ್ಕೂ ಉತ್ತರವನ್ನು ನೀಡಲು ಇಲ್ಲಿ ಜ್ಞಾನಪರ್ಯಂತವಾಗಿ ಹೋಗಿದ್ದಾರೆ.

ಸ್ವಾಪ್ನೋಽರ್ಥೋಽಪಿ ಯಥಾರ್ಥೋ ಹಿ ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ ॥೯೭೯॥

**ಅರ್ಥ**-ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ = ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಬ್ರಹ್ಮಸೂತ್ರವಿರುವುದರಿಂದ, ಸ್ವಾಪ್ನೋಥೋ೯ಽಪಿ = ಸ್ವಾಪ್ನಪದಾರ್ಥವೂ ಸಹ, ಯಥಾರ್ಥೋ ಹಿ = ಸತ್ಯವಾಗಿಯೇ ಇದೆಯಷ್ಟೇ ?

**ಭಾವವಿಲಾಸಿನೀ**- ವಸ್ತುಸ್ಥಿತ್ಯಾ ಸ್ವಾಪ್ನಪದಾರ್ಥೋಽಪಿ ಸತ್ಯ ಏವೇತಿ ಸಾಧಯತಿ ॥ **ಸ್ವಾಪ್ನಾರ್ಥ ಇತಿ** ॥ ಸಂಧ್ಯೇ ಸೃಷ್ಟಿರಿತಿ ಸ್ಮೃತೇಃ ಸಂಧ್ಯೇ ಸೃಷ್ಟಿರಾಹಹೀತಿ ಸೂತ್ರಾದಿತ್ಯರ್ಥಃ । ನನು ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಾಭಿವ್ಯಕ್ತಸ್ವರೂಪತ್ವಾದಿತ್ಯುತ್ತರಸೂತ್ರೇ ಸ್ವಾಪ್ನಪದಾರ್ಥಸ್ಯ ಮಾಯಾ-ಮಾತ್ರತ್ವೋಕ್ತೇರ್ಮಿಥ್ಯಾತ್ವಮಿತಿ ಚೇತ್ ನ । ನ ತತ್ರ ರಥಾ ನ ರಥಯೋಗಾ ನಪಂಥಾನೋ ಭವಂತ್ಯಥ ರಥಾನ್ರಥಯೋಗಾನ್ ಪಥಃ ಸೃಜತ ಇತಿ ಶ್ರುತೇರಾಹಹೀತಿ ಪೂರ್ವಸೂತ್ರಶೇಷೇ ಸೂತ್ರಕೃತೈವ ಗೃಹೀತತ್ವೇನ ಶ್ರುತಿಮೂಲಪೂರ್ವಸೂತ್ರಸ್ಯೈವ ಪ್ರಧಾನತಯಾ ಕೇವಲಯುಕ್ತಿ-ಮಾತ್ರಮೂಲೋತ್ತರಸೂತ್ರಸ್ಯಾಪ್ರಧಾನತಯಾ ಚ ಮುಖ್ಯಾನುಸಾರೇಣೈವಾಮುಖ್ಯಸ್ಯ ಯೋಜನೀಯತ್ವಾತ್ ॥ ೯೭೯ ॥

**ವಿವರಣೆ**- ವಸ್ತುಸ್ಥಿತಿಯಲ್ಲಿ ಸ್ವಾಪ್ನಪದಾರ್ಥಗಳೂ ಸತ್ಯವಾಗಿವೆ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ. 'ಮಾಯಾಮಾತ್ರಂ ತು' ಎಂಬ ಮುಂದಿನ ಸೂತ್ರದಲ್ಲಿ ಸ್ವಾಪ್ನಪದಾರ್ಥಗಳಿಗೆ ಮಿಥ್ಯಾತ್ವವನ್ನು ಹೇಳಲಾಗಿದೆ ಎಂದು ಶಂಕಿಸಿದರೆ ಅದು ಸರಿಯಲ್ಲ. ಏಕೆಂದರೆ, 'ಸಂಧ್ಯೇ ಸೃಷ್ಟಿರಾಹಹಿ' ಎಂಬಲ್ಲಿ 'ಆಹಹಿ'ಎಂಬ ಸೂತ್ರಭಾಗದಿಂದ ಸೂತ್ರಕಾರರೇ 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬ ವಾಕ್ಯವನ್ನು ತೆಗೆದುಕೊಂಡಿರುವುದರಿಂದ ಶ್ರುತಿಮೂಲಪೂರ್ವಸೂತ್ರವೇ ಪ್ರಧಾನವಾದುದು. 'ಮಾಯಾಮಾತ್ರಂ ತು' ಎಂಬ ಸೂತ್ರವು ಕೇವಲ ಯುಕ್ತಿರೂಪವಾಗಿರುವುದರಿಂದ ಮೊದಲನೆಯ ಸೂತ್ರಕ್ಕಿಂತಲೂ ಅಪ್ರಧಾನವಾಗುತ್ತದೆ. ಆದ್ದರಿಂದ ಮೊದಲನೆಯ ಸೂತ್ರದಿಂದ ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಯತ್ ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಮಸೂತ್ರಯತ್ ।
ಸತ್ಯತಾಂ ಸೂಕ್ಷ್ಮತಾಂ ಚಾಸೌ ವಕ್ತಿ ನಾನೃತತಾಂ ಪ್ರಭುಃ ॥ ೯೮೦ ॥

**ಅರ್ಥ**-ಯತ್= ಯಾವ ಕಾರಣದಿಂದ, ಪ್ರಭುಃ = ಸಮರ್ಥವಾದ ವೇದವಾಕ್ಯವು, ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಮ್ = ಸ್ಪಷ್ಟವಾಗಿ ಅಭಿವ್ಯಕ್ತವಲ್ಲದ ಸ್ವರೂಪವನ್ನು, ಅಸೂತ್ರಯತ್ = ಸೂತ್ರದಲ್ಲಿ ಹೇಳಿದರೋ ಆ ಕಾರಣದಿಂದ, ಅಸೌ = ಸೂತ್ರಕಾರರು, ಸತ್ಯತಾಂ = ಸತ್ಯತ್ವವನ್ನು, ಸೂಕ್ಷ್ಮತಾಂ ಚ = ಮತ್ತು ಸೂಕ್ಷ್ಮತ್ವವನ್ನೂ, ವಕ್ತಿ = ಹೇಳುತ್ತಾರೆ, ಅನೃತತಾಂ = ಮಿಥ್ಯಾತ್ವವನ್ನು, ನ ವಕ್ತಿ = ಹೇಳುವುದಿಲ್ಲ.

**ಅನುವಾದ**- ಪ್ರಭುಗಳಾದ ಸೂತ್ರಕಾರರು ಯಾವ ಕಾರಣದಿಂದ ಕಾರ್ತ್ಸ್ನ್ಯೇನಾನಭಿವ್ಯಕ್ತ-ಸ್ವರೂಪತ್ವವನ್ನು ಹೇತುವಾಗಿ ಹೇಳಿದರೋ ಆ ಕಾರಣದಿಂದ ಅವರು

**ಸ್ವಾಪ್ನಪದಾರ್ಥಗಳಿಗೆ ಸತ್ಯತ್ವವನ್ನೂ ಮತ್ತು ಸೂಕ್ಷ್ಮತ್ವವನ್ನೂ ಅಭಿಪ್ರಾಯಪಡುತ್ತಾರೆ, ಮಿಥ್ಯಾತ್ವವನ್ನು ಅಂಗೀಕರಿಸುವುದಿಲ್ಲ.**

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ – ಯದಿತಿ ।। ಯತ್ ಯಸ್ಮಾತ್ । ಅಸೌ ಸೂತ್ರಕಾರಃ। ಸ್ವರೂಪಪದೇನ ಸತ್ಯತಾಂ ಕಾರ್ತ್ಸ್ನ್ಯೇನಾನಭಿವ್ಯಕ್ತಪದೇನ ಸೂಕ್ಷ್ಮತಾಂ ಚ ವಕ್ತಿ । ಸಸ್ವರೂಪತ್ವ-ಕಥನಾತ್ ಅನೃತತಾಂ ನ ವಕ್ತೀತಿ ಯೋಜನಾ ।। ೯೮೦ ।।**

**ವಿವರಣೆ-** ಸ್ವಾಪ್ನಪದಾರ್ಥಸತ್ಯತ್ವಕ್ಕೆ ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳಿದ್ದಾರೆ. 'ಮಾಯಾಮಾತ್ರಂ ತು' ಎಂಬ ಸೂತ್ರವು ಸ್ವಾಪ್ನಪದಾರ್ಥಕ್ಕೆ ಮಿಥ್ಯಾತ್ವವನ್ನು ಹೇಳುವುದಿಲ್ಲ, ಸತ್ಯತ್ವವನ್ನು ಹೇಳುತ್ತದೆ, ಏಕೆಂದರೆ ಸಮಗ್ರವಾಗಿ ಅಭಿವ್ಯಕ್ತವಲ್ಲದಸ್ವರೂಪವುಳ್ಳದ್ದರಿಂದ ಎಂದು ಅಲ್ಲಿ ಹೇತುವಿದೆಯಷ್ಟೇ ? ಸಮಗ್ರವಾಗಿ ಅಭಿವ್ಯಕ್ತವಲ್ಲ ಎಂದು ಹೇಳಿದರೆ, ಸ್ವಲ್ಪ ಅಭಿವ್ಯಕ್ತಿ ಇದೆ, ಪೂರ್ಣ ಅಭಿವ್ಯಕ್ತಿ ಇಲ್ಲ ಎಂದು ಅರ್ಥ. ಅಸತ್ಯವಾದ ಶುಕ್ತಿರಜತಾದಿಗಳಿಗೆ ಇಂತಹ ವಿಭಾಗವು ಕೂಡುವುದಿಲ್ಲವಾದ್ದರಿಂದ, 'ಕಾರ್ತ್ಸ್ನ್ಯೇನ' ಎಂಬ ಪದವು ಸ್ವಾಪ್ನಪದಾರ್ಥಕ್ಕೆ ಸತ್ಯತ್ವವನ್ನೇ ಸೂಚಿಸುತ್ತದೆ. ಅದರಂತೆ 'ಅನಭಿವ್ಯಕ್ತ' ಪದವು ಸೂಕ್ಷ್ಮತ್ವವನ್ನೇ ಸೂಚಿಸುತ್ತದೆ, ಮಿಥ್ಯಾತ್ವವನ್ನಲ್ಲ. ಆದ್ದರಿಂದ 'ಮಾಯಾಮಾತ್ರಂ ತು' ಎಂಬ ಸೂತ್ರವೂ ಸಹ ಕೇವಲ ಯುಕ್ತಿರೂಪವೆಂದು ಅಂಗೀಕರಿಸಿದರೂ, ಅದು ಸ್ವಾಪ್ನಪದಾರ್ಥಮಿಥ್ಯಾತ್ವವನ್ನು ಹೇಳುವುದಿಲ್ಲ ಎಂಬ ಅಭಿಪ್ರಾಯ.

**ಅತೋ ಮಾಯಾಮಾತ್ರತೋಕ್ತ್ಯಾ ವಾಸನಾಮಯತೋಚ್ಯತೇ ।**
**ನ ಚೇದ್ವಿರುದ್ಧೋ ಹೇತುಃ ಸ್ಯಾಚ್ಛ್ರುತಿಶ್ಚ ಕುಪಿತಾ ಭವೇತ್ ।**
**ಪರಸ್ಪರವಿರುದ್ಧೇ ಚ ಸೂತ್ರೇ ಸ್ಯಾತಾಂ ತತೋಽಪಿ ನ ।। ೯೮೧ ।।**

**ಅರ್ಥ-**ಅತಃ = ಆದ್ದರಿಂದ, ಮಾಯಾಮಾತ್ರತೋಕ್ತ್ಯಾ = 'ಮಾಯಾಮಾತ್ರ' ಎಂಬ ವಚನದಿಂದ, ವಾಸನಾಮಯತಾ ಉಚ್ಯತೇ = ವಾಸನಾಮಯತ್ವವೇ ಹೇಳಲ್ಪಡುತ್ತದೆ. ನಚೇತ್ = ಹಾಗಿಲ್ಲದಿದ್ದರೆ, ಹೇತುಃ = ಹೇತುವು, ವಿರುದ್ಧಃ ಸ್ಯಾತ್ = ವಿರುದ್ಧವಾಗುತ್ತದೆ. ಶ್ರುತಿಶ್ಚ = 'ಆಹಹಿ' ಎಂದು ಸೂಚಿತವಾದ ಶ್ರುತಿಯು, ಕುಪಿತಾ ಭವೇತ್ = ಕೋಪಗೊಳ್ಳುತ್ತದೆ, ಸೂತ್ರೇ = 'ಸಂಧ್ಯೇ ಸೃಷ್ಟಿರಾಹಹಿ' ಎಂಬ ಸೂತ್ರವೂ ಮತ್ತು 'ಮಾಯಾಮಾತ್ರಂ ತು' ಎಂಬ ಸೂತ್ರವೂ, ಪರಸ್ಪರವಿರುದ್ಧೇ ಚ ಸ್ಯಾತಾಂ = ಪರಸ್ಪರ ವಿರುದ್ಧವೂ ಆಗುತ್ತದೆ, ತತೋಽಪಿ = ಆ ಕಾರಣದಿಂದಲೂ, ನ = ಮಿಥ್ಯಾತ್ವವು ಮಾಯಾಮಾತ್ರಶಬ್ದಾರ್ಥವಲ್ಲ.

**ಅನುವಾದ- ಆದ್ದರಿಂದ ಮಾಯಾಮಾತ್ರ ಶಬ್ದದಿಂದ ವಾಸನಾಮಯತ್ವವೇ ಹೇಳಲ್ಪಡುತ್ತದೆ. ಹಾಗಿಲ್ಲದಿದ್ದರೆ, ಹೇತುವು ವಿರುದ್ಧವಾಗುತ್ತದೆ ಮತ್ತು 'ಶ್ರೂಯತೇ' ಎಂಬ ಶ್ರುತಿಯು ಕೋಪಗೊಳ್ಳುತ್ತದೆ ಮತ್ತು 'ಸಂಧ್ಯೇ ಸೃಷ್ಟಿರಾಹಹಿ' ಎಂಬ ಸೂತ್ರವೂ ಮತ್ತು**

'ಮಾಯಾಮಾತ್ರಂ ತು' ಎಂಬ ಸೂತ್ರವೂ ಪರಸ್ಪರ ವಿರುದ್ಧವಾಗುತ್ತವೆ. ಆ ಕಾರಣದಿಂದಲೂ ಮಿಥ್ಯಾತ್ವವು ಮಾಯಾಮಾತ್ರ ಶಬ್ದಾರ್ಥವಲ್ಲ.

**ಭಾವವಿಲಾಸಿನೀ–** ಅತಃ ಸೂಕ್ಷ್ಮಸ್ವರೂಪತ್ವಸ್ಯೈವ ಹೇತುತ್ವಕಥನಾತ್ । ಮಾಯಾಮಾತ್ರತೋಕ್ತ್ಯಾ ಮಾಯಾಮಾತ್ರಮಿತಿ ಸಾಧ್ಯೋಕ್ತ್ಯಾ । ಪ್ರಾಕ್‌ಪ್ರಸ್ತಾವಿತಸೃಷ್ಟೌ ಕರ್ತುರೀಶ್ವರಸ್ಯ ನಿಮಿತ್ತಸ್ಯ ಕಾಲಾದೇಶ್ಚ ಸ್ಪಷ್ಟತ್ವಾತ್ ಅಪ್ರಸಿದ್ಧಂ ವಾಸನಾಖ್ಯಮುಪಾಪಾದನಂ ಸೂಚಯಿತುಂ ಸ್ವಪ್ನಸ್ಯಮಾಯಾಮಾತ್ರತ್ವ ಪ್ರತಿಪಾದಕ ಶ್ರುತಿಪುರಾಣಾದಿ ವಚನಾನಾಂ ಗತಿಂ ಚ ಸೂಚಯಿತುಂ ತವೋಯೋಗ್ಯಾನ್‌ಭ್ರಾಮಯಿತುಂ ಚ ಸ್ವಪದೇನಾನುಕ್ತ್ವಾ ಮಾಯಾಮಾತ್ರಪದೇನೈವ ವಾಸನಾಮಯತ್ವಮಭಿಧಾಯ ಭ್ರಾಂತಂ ಚ ತಂ ವಿದುಷಾಂ ಪರಿಷದಿ ಭ್ರಾಂತಮೇವ ಕರ್ತುಂ ಸ್ವಸೇವಕಯೌಕ್ತಿಕಜನಮನೋಭ್ರಮುಮುಪಹರ್ತುಂ ಚ ಪರಾಭಿಲಷಿತಮಿಥ್ಯಾತ್ವಬಾಧಕಂ ಸ್ವಾಭಿಲಷಿತಸತ್ಯತ್ವಸಾಧಕಂ ಚ ಸಾಧನಮಾಹ । ಅತ ಏವ ಲೌಕಿಮಾಯಾಮಾತ್ರಾತ್ ಸ್ವಸಾಧ್ಯಮಾಯಾಮಾತ್ರಂ ತುಶಬ್ದೇನ ವಿಶಿನಷ್ಟಿ । ನಹಿ ಕೋऽಪಿ ಸರ್ವಥಾऽವಿದ್ಯ-ಮಾನಮನಭಿವ್ಯಕ್ತಂ ಸಸ್ವರೂಪಂ ಚ ವಕ್ತಿ । ಸ್ವಪ್ನದ್ರಷ್ಟುರೇವ ಕಿಂಚಿದಭಿವ್ಯಕ್ತಿಸದ್ಭಾವಾತ್ ಕಾರ್ತ್ಸ್ನ್ಯೇನೇತ್ಯುಕ್ತಮ್ । ಅತಃ ಸೂಕ್ಷ್ಮತ್ವಮೇವ ಸೂತ್ರಕೃತೋऽಭಿಪ್ರೇತಮ್ । ಇದಮ್ ಚ ಸ್ವಾಪ್ನಗಜತುರಗಾದೇಃ ಸತ್ಯತ್ವೇ ದ್ರಷ್ಟುಃಹೃದಯವಿದಾರಣಂ ಸ್ಯಾದಿತಿ ಪರಕೀಯ ಕುಚೋದ್ಯ ಪರಿಹಾರಾರ್ಥಂ । ಅತ ಏವ ಪೂರ್ವಸೂತ್ರೇऽಪಿ ಜಾಗ್ರತ್ ಸೃಷ್ಟಗಜಾದಿತೋ ವೈಲಕ್ಷಣ್ಯಪ್ರದರ್ಶನಾಯ ಸಂಧ್ಯೇ ಸೃಷ್ಟಿರಿತ್ಯಾಹ । ಅನ್ಯಥಾ ತಯೈವ ಸೃಷ್ಟಾಪೂರ್ಣತ್ವಾತ್ ಪುನಃ ಸೃಷ್ಟಿಕಥನಂ ವ್ಯರ್ಥಂ ಸ್ಯಾತ್ । ನ ತತ್ರ ರಥಾ ಇತ್ಯಾದಿನಾ ಜಾಗ್ರದ್ರಥಾದೀನ್ನಿಷಿಧ್ಯ ತತ್ರ ಕಂಠಪ್ರದೇಶ ಇತಿ ತದಭಾವೇ ಹೇತುಂ ಚ ಸೂಚಯಿತ್ವಾ ಕಂಠಾಂತರ್ವರ್ತಿಸೂಕ್ಷ್ಮತರನಾಡೀ-ಸ್ಥಜೀವದರ್ಶನ ಯೋಗ್ಯಸೂಕ್ಷ್ಮದೃಷ್ಟೇರೇವೋಕ್ತಿಶ್ಚ ನ ಸ್ಯಾತ್ । ಮಿಥ್ಯಾತ್ವಂ ತು ಸೂತ್ರಶ್ರುತ್ಯೋಃ ಸೃಷ್ಟಿ ಕಥನಾತ್ ಸೃಷ್ಟೇಃ ಪ್ರಾಗೇವ ನೇತಿ ಪ್ರಾಗಭಾವಮಾತ್ರಕಥನೇನ ತ್ರೈಕಾಲಿಕನಿಷೇಧಾದರ್ಶನಾತ್ ಪ್ರತ್ಯುತ ಪಥಃ ಸೃಜತ ಇತಿ ವರ್ತಮಾನಕಾಲೇ ವಿಧೇಶ್ಚ ಶ್ರವಣಾತ್ ಉತ್ತರಸೂತ್ರೇ ಮಿಥ್ಯಾತ್ವಪ್ರತಿಜ್ಞಾಯಾಂ ಸಾಧ್ಯಸಾಧನಯೋಃ ಪರಸ್ಪರವಿರೋಧಪ್ರಸಂಗಾತ್ ಸೂಚಕಶ್ಚ ಹೀತಿ ಸೂತ್ರೇ ಸ್ವಾಪ್ನಪದಾರ್ಥಾನಾಮೇವಾನಿಷ್ಟಸಾಧನತ್ವೋಕ್ತೇಶ್ಚ ವಿರುದ್ಧಮ್ ॥ ೯೮೧ ॥

**ವಿವರಣೆ–** ಸ್ವಪ್ನಕಾಲದಲ್ಲಿ ಪ್ರಸ್ತಾವಿತವಾದ ಸೃಷ್ಟಿಯಲ್ಲಿ ಈಶ್ವರನು ಕರ್ತೃವೆಂದೂ, ಕಾಲಾದಿಗಳು ನಿಮಿತ್ತವೆಂದೂ ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಸಂಸ್ಕಾರರೂಪವಾದ ಉಪಾದಾನವು ಅಪ್ರಸಿದ್ಧವಾದುದರಿಂದ ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದನ್ನು ಸೂಚಿಸಲು 'ಮಾಯಾಮಾತ್ರ' ಶಬ್ದವನ್ನು ಸೂತ್ರಕಾರರು ಪ್ರಯೋಗಿಸಿದ್ದಾರೆ. ಯದ್ಯಪಿ, 'ವಾಸನಾಮಾತ್ರಂತು' ಎಂದಾಗಲೀ, 'ವಾಸನಾಮಯತ್ವಂ' ಎಂದಾಗಲೀ ಸ್ಪಷ್ಟವಾಗಿಯೇ ಹೇಳಬಹುದಾಗಿದ್ದಿತು. ಆದರೂ ಹಾಗೆ ಹೇಳದೆ ಇರುವ ಸೂತ್ರಕಾರರಿಗೆ ಉದ್ದೇಶವಿಶೇಷವಿದೆ.

ಸಂಸ್ಕಾರರೂಪವಾದ ಉಪಾದಾನವನ್ನು ಸೂಚಿಸುವುದಲ್ಲದೆ, ಮಾಯಾಮಾತ್ರತ್ವವನ್ನು ಹೇಳುವ ಶ್ರುತಿಪುರಾಣವಾಕ್ಯಗಳಿಗೂ ಗತಿಯನ್ನು ಕಲ್ಪನೆ ಮಾಡುವುದೂ, ತತ್ತ್ವಜ್ಞಾನ ಅಯೋಗ್ಯರಾದ ತಮೋಯೋಗ್ಯರಿಗೆ ಭ್ರಾಂತಿಯನ್ನು ಉಂಟುಮಾಡುವುದೂ ಮತ್ತು ವಿದ್ವತ್ ಪರಿಷತ್ತಿನಲ್ಲಿ ಮೊದಲೇ ಭ್ರಾಂತರಾದವರಿಗೆ ಭ್ರಾಂತಿಯನ್ನು ಸ್ಥಿರೀಕರಿಸುವುದೂ ಮತ್ತು ತನ್ನ ಭಕ್ತರಿಗೆ ಸುಯುಕ್ತಿಯಿಂದ ಭ್ರಾಂತಿಯನ್ನು ನಿರಾಕರಿಸುವುದೂ ಅವರ ಉದ್ದೇಶವಾಗಿದೆ. ಆದ್ದರಿಂದಲೇ ಅದಕ್ಕೆ ಅನುಗುಣವಾದ ಕಾರ್ತ್ಸ್ನ್ಯೇನ ಅನಭಿವ್ಯಕ್ತ- ಸ್ವರೂಪತ್ವಾತ್ ಎಂಬ ಹೇತುವನ್ನು ಹೇಳಿದ್ದಾರೆ. ಈ ಮಾಯೆಯು ಲೌಕಿಕಮಾಯೆಯ ಸಮಾನವಾದುದಲ್ಲ ಎಂದು ತಿಳಿಸುವುದಕ್ಕಾಗಿಯೇ 'ಮಾಯಾಮಾತ್ರಂ ತು' ಎಂದು ವಿಶೇಷವಾಚಕವಾದ ತು ಶಬ್ದವನ್ನು ಇಟ್ಟಿದ್ದಾರೆ. ಸರ್ವಥಾ ಅವಿದ್ಯಮಾನವಾದುದಾಗಲೀ ಅಥವಾ ಸರ್ವಥಾ ಅನಭಿವ್ಯಕ್ತವಾದುದಾಗಲೀ, ಸ್ವರೂಪವುಳ್ಳದ್ದೆಂದೂ ಯಾರೂ ಹೇಳುವುದಿಲ್ಲವಷ್ಟೇ ? ಸ್ವಪ್ನಪದಾರ್ಥಗಳಿಗಾದರೂ, ಸ್ವಪ್ನದ್ರಷ್ಟೃಪುರುಷನಿಗೇ ಸ್ವಲ್ಪ ಅಭಿವ್ಯಕ್ತಿ ಇರುವುದರಿಂದ ಕಾರ್ತ್ಸ್ನ್ಯೇನ ಎಂದು ಹೇಳಿದ್ದಾರೆ. ಆದ್ದರಿಂದಲೇ ಹಿಂದಿನ ಸೂತ್ರದಲ್ಲಿಯೂ ಜಾಗ್ರದ್‌ದೆಶೆಯಲ್ಲಿ ಸ್ಪಷ್ಟವಾದ, ಗಜಾದಿಗಳಿಗಿಂತಲೂ ವೈಲಕ್ಷಣ್ಯವನ್ನು ಸೂಚಿಸುವುದಕ್ಕೋಸ್ಕರ 'ಸೃಷ್ಟಿರಾಹಹಿ' ಎಂದು ಸೃಷ್ಟಿಯನ್ನು ಹೇಳಿದ್ದಾರೆ. ಇಲ್ಲದಿದ್ದರೆ, ಜಾಗ್ರತ್‌ಸೃಷ್ಟಿಯಿಂದಲೇ ಸ್ವಾಪ್ನಸೃಷ್ಟಿಯು ಗತಾರ್ಥವಾಗುವುದರಿಂದ ಪ್ರತ್ಯೇಕವಾಗಿ ಸ್ವಪ್ನದಲ್ಲಿ ಇನ್ನೊಂದು ಸೃಷ್ಟಿಯನ್ನು ಹೇಳಬೇಕಾದ ಅವಶ್ಯಕತೆಯು ಇರಲಿಲ್ಲ. 'ನ ತತ್ರ ರಥಾಃ' ಎಂಬ ವಾಕ್ಯಶೇಷದಿಂದ ಅಥವಾ ವಾಕ್ಯಖಂಡದಿಂದ 'ತತ್ರ' ಎಂದರೆ ಕಂಠಪ್ರದೇಶದಲ್ಲಿ ರಥಾದಿಗಳು ಇಲ್ಲ ಎಂದು ಸೂಚಿಸಿ ಕಂಠಪ್ರದೇಶದಲ್ಲಿರುವ ಸೂಕ್ಷ್ಮವಾದ ನಾಡಿಯಲ್ಲಿರುವ ಜೀವನ ದರ್ಶನಕ್ಕೆ ಯೋಗ್ಯವಾದ ಸೂಕ್ಷ್ಮಸೃಷ್ಟಿಯನ್ನೇ ಹೇಳಿದ್ದಾರೆ. ಇಲ್ಲದಿದ್ದರೆ, ಇದೂ ವ್ಯರ್ಥವಾಗುತ್ತಿತ್ತು. 'ನ ತತ್ರ ರಥಾಃ' ಎಂದು ಹೇಳಿದ್ದರಿಂದ ಸೃಷ್ಟಿಗಿಂತ ಮೊದಲು ರಥವಿರಲಿಲ್ಲ ಎಂದು ರಥಾದಿಪ್ರಾಗಭಾವವನ್ನು ಹೇಳಿದುದರಿಂದ, ಪ್ರಾಗಭಾವವು ಏಕಕಾಲದಲ್ಲಿ ನಿಷೇಧವೇ ಹೊರತು ತ್ರಿಕಾಲದಲ್ಲಿ ನಿಷೇಧವಲ್ಲವಾದ್ದರಿಂದ, ಜೊತೆಗೆ 'ಸೃಜತೇ' ಎಂದು ವರ್ತಮಾನಕಾಲದಲ್ಲಿ ವಿಧಿಯನ್ನೇ ಹೇಳಿರುವುದರಿಂದ ಮಿಥ್ಯಾತ್ವವು ಎಂದೂ ಸೂತ್ರಕಾರರಿಗೆ ಅಭಿಪ್ರೇತವಾದುದಲ್ಲ. ಹಿಂದಿನ ಸೂತ್ರದಲ್ಲಿ ಸೃಷ್ಟಿ ಮತ್ತು ಪ್ರಾಗಭಾವವನ್ನು ಹೇಳಿ ಉತ್ತರಸೂತ್ರದಲ್ಲಿ ಮಿಥ್ಯಾತ್ವವನ್ನು ಪ್ರತಿಜ್ಞೆಮಾಡಿದರೆ, ಸಾಧ್ಯಸಾಧನಗಳಿಗೆ ಪರಸ್ಪರ ವಿರೋಧವು ಬರುವುದರಿಂದಲೂ, 'ಸೂಚಕಶ್ಚ' ಎಂಬ ಸೂತ್ರದಲ್ಲಿ ಸ್ವಾಪ್ನಪದಾರ್ಥಗಳಿಗೆ ಇಷ್ಟಾನಿಷ್ಟಸಾಧನತ್ವವನ್ನು ಹೇಳಿರುವುದರಿಂದಲೂ ಮಿಥ್ಯಾತ್ವವು ಸೂತ್ರಕಾರರಿಗೆ ಅನಭಿಪ್ರೇತವಾದುದು ಎಂದು ತಿಳಿಯುತ್ತದೆ.

ನೇದಾನೀಂ ಸ್ವಪ್ನ ಇತ್ಯೇವ ಯತೋಽನಿತ್ಯತ್ವಧೀರ್ನೃಣಾಮ್ ।
ನಾಸೌ ಸ್ವಪ್ನ ಇತಿ ಕ್ವಾಪಿ ಬಾಧಬೋಧೋ ನ ದೃಶ್ಯತೇ ।
ಅತೋಽಪಿ ಸತ್ಯತೈವೈಷಾಂ ಯುಕ್ತಾ ನಾನ್ಯೇತಿ ಮೇ ಮತಿಃ ॥ ೯೮೨ ॥

**ಮಿಥ್ಯಾಭೂತೋಽರ್ಥಕಾರೀ ಚೇತ್ಯುಕ್ತಿಸ್ಯಾದ್ ವ್ಯಾಹತೈವ ತೇ ।**
**ಸೂತ್ರಂ ಚ ನಾಸತೋಽದೃಷ್ಟತ್ವಾದಿತ್ಯಾಹ ಶ್ರುತಿಶ್ಚ ನಃ ।**
**ಅಸತಃ ಸತ್ ಕಥಂ ಜಾಯೇತೇತ್ಯೇವಾಹ ತತೋಽಪಿ ನ ॥ ೯೮೩ ॥**

**ಅರ್ಥ**-ಯತಃ = ಯಾವ ಕಾರಣದಿಂದ, ನೃಣಾಮ್ = ಮನುಷ್ಯರಿಗೆ, ಇದಾನೀಂ ಸ್ವಪ್ನಃ ನ = ಈಗ ಸ್ವಪ್ನವಿಲ್ಲ, ಇತ್ಯೇವ = ಎಂಬಂತಹ, ಅನಿತ್ಯತ್ವಧೀಃ = ಅನಿತ್ಯತ್ವಜ್ಞಾನವೇ ಬರುತ್ತದೆಯೋ, ನಾಸೌ ಸ್ವಪ್ನಃ = ಇದು ಸ್ವಪ್ನವಲ್ಲ, ಇತಿ = ಎಂಬ, ಬಾಧಬೋಧಃ = ಬಾಧಾತ್ಮಕ ಜ್ಞಾನವು, ಕ್ವಾಪಿ = ಎಂದೂ, ನ ದೃಶ್ಯತೇ = ಉಂಟಾಗುವುದಿಲ್ಲವೋ, ಅತೋಽಪಿ = ಆ ಕಾರಣದಿಂದಲೂ, ಏಷಾಂ = ಈ ಸ್ವಪ್ನಗಳಿಗೆ, ಸತ್ಯತೈವ = ಸತ್ಯತ್ವವೇ, ಯುಕ್ತಾ = ಯುಕ್ತವಾಗುತ್ತದೆ, ಅನ್ಯಾ = ಮಿಥ್ಯಾತ್ವವು, ನ ಇತಿ = ಯುಕ್ತವಾಗುವುದಿಲ್ಲ ಎಂದು, ಮೇ ಮತಿಃ = ಎಂದು ನನ್ನ ಅಭಿಪ್ರಾಯ,

ಮಿಥ್ಯಾಭೂತಃ ಅರ್ಥಕಾರೀ ಚ = ಮಿಥ್ಯಾಭೂತವಾದುದು ಮತ್ತು ಅರ್ಥಕ್ರಿಯಾಕಾರಿ, ಇತ್ಯುಕ್ತಿಃ = ಎಂಬ ವಚನವು, ತೇ = ನಿನಗೆ, ವ್ಯಾಹತೈವ ಸ್ಯಾತ್ = ವ್ಯಾಹತವೇ ಆಗುತ್ತದೆ, ನಾಸತಃ ಅದೃಷ್ಟತ್ವಾತ್ = ಅಸತ್ತಿನಿಂದ ಯಾವ ಕಾರ್ಯವೂ ಉಂಟಾಗುವುದಿಲ್ಲ. ಇತಿ ಸೂತ್ರಂ ಚ = ಎಂಬ ಬ್ರಹ್ಮಸೂತ್ರವು, ಇತ್ಯಾಹ = ಹೀಗೆಯೇ ಹೇಳುತ್ತದೆ, ನಃ = ನಮ್ಮ ಅರ್ಥವನ್ನು, ಶ್ರುತಿಶ್ಚ = ಶ್ರುತಿಯೂ ಸಹ, ಅಸತಃ = ಅಸತ್ತಿನಿಂದ, ಸತ್ = ಸತ್ಯವಾದ ಪದಾರ್ಥವು, ಕಥಂ ಜಾಯೇತ = ಹೇಗೆ ಹುಟ್ಟುತ್ತದೆ? ಇತ್ಯೇವ = ಎಂದೇ, ಆಹ = ಹೇಳುತ್ತದೆ. ತತೋಽಪಿ = ಆ ಕಾರಣದಿಂದಲೂ ಕೂಡ, ನ = ಮಿಥ್ಯಾಭೂತವಾದುದಕ್ಕೆ ಅರ್ಥಕ್ರಿಯಾಕಾರಿತ್ವವು ಇಲ್ಲ.

**ಅನುವಾದ**- ಎಲ್ಲರಿಗೂ ಈಗ ಸ್ವಪ್ನವಿಲ್ಲ ಎಂಬ ಅನಿತ್ಯತ್ವದ ಜ್ಞಾನವೇ ಬರುತ್ತದೆಯೇ ಹೊರತು, ಇದು ಸ್ವಪ್ನವೇ ಅಲ್ಲ ಎಂಬ ಬಾಧವು ಯಾರಿಗೂ ಬರುವುದಿಲ್ಲ. ಆ ಕಾರಣದಿಂದಲೂ ಸ್ವಪ್ನಗಳಿಗೆ ಸತ್ಯತ್ವವೇ ಯುಕ್ತವಾಗುತ್ತದೆ, ಮಿಥ್ಯಾತ್ವವು ಯುಕ್ತವಾಗುವುದಿಲ್ಲ ಎಂದು ನನ್ನ ಅಭಿಪ್ರಾಯ. ಮಿಥ್ಯಾಭೂತವಾದುದು ಮತ್ತು ಅರ್ಥಕ್ರಿಯಾಕಾರಿಯಾದುದು ಎಂಬ ನಿನ್ನ ವಚನವು ವ್ಯಾಹತವಾಗುತ್ತದೆ. 'ನಾಸತಃ ಅದೃಷ್ಟತ್ವಾತ್' ಎಂಬ ಬ್ರಹ್ಮಸೂತ್ರವೂ, 'ಕಥಮಸತಃ ಸಜ್ಜಾಯೇತ' ಎಂಬ ಶ್ರುತಿಯೂ ನಮ್ಮ ಅರ್ಥವನ್ನು ಹೇಳುತ್ತದೆ. ಆ ಕಾರಣದಿಂದಲೂ ಮಿಥ್ಯಾಭೂತವಾದ ವಸ್ತುವಿಗೆ ಅರ್ಥಕ್ರಿಯಾಕಾರಿತ್ವವೇ ಇಲ್ಲ.

**ಭಾವವಿಲಾಸಿನೀ**– ನೇದಂ ರಜತಮಿತಿವನ್ನಾಯಂ ಸ್ವಪ್ನ ಇತಿ ಬಾಧಾಭಾವಾಚ್ಚ ಸತ್ಯತೈವೇತ್ಯಾಹ – **ನೇತಿ** ॥ ಏಷಾಂ ಸ್ವಾಪ್ನಪದಾರ್ಥನಾಮ್ । ಅನ್ಯಾ ಅಸತ್ಯತಾ ॥

ಮಿಥ್ಯಾಭೂತಸ್ಯಾರ್ಥಕ್ರಿಯಾಕಾರಿತ್ವೇ ಯುಕ್ತಿಸೂತ್ರಶ್ರುತಿವಿರೋಧಮಾಹ – **ಮಿಥ್ಯೇತಿ** ॥ ತತ್ ತಸ್ಮಾತ್ ಅಭಾವಪ್ರತಿಯೋಗಿತ್ವಸ್ಯ ಮಿಥ್ಯಾತ್ವಾತ್ ಪೂರ್ವಭಾವಿತ್ವಸ್ಯಕಾರಣತ್ವಾತ್ । ನ

ಸಂಸ್ಕಾರರೂಪವಾದ ಉಪಾದಾನವನ್ನು ಸೂಚಿಸುವುದಲ್ಲದೆ, ಮಾಯಾಮಾತ್ರತ್ವವನ್ನು ಹೇಳುವ ಶ್ರುತಿಪುರಾಣವಾಕ್ಯಗಳಿಗೂ ಗತಿಯನ್ನು ಕಲ್ಪನೆ ಮಾಡುವುದೂ, ತತ್ತ್ವಜ್ಞಾನ ಅಯೋಗ್ಯರಾದ ತಮೋಯೋಗ್ಯರಿಗೆ ಭ್ರಾಂತಿಯನ್ನು ಉಂಟುಮಾಡುವುದೂ ಮತ್ತು ವಿದ್ವತ್ ಪರಿಷತ್ತಿನಲ್ಲಿ ಮೊದಲೇ ಭ್ರಾಂತರಾದವರಿಗೆ ಭ್ರಾಂತಿಯನ್ನು ಸ್ಥಿರೀಕರಿಸುವುದೂ ಮತ್ತು ತನ್ನ ಭಕ್ತರಿಗೆ ಸುಯುಕ್ತಿಯಿಂದ ಭ್ರಾಂತಿಯನ್ನು ನಿರಾಕರಿಸುವುದೂ ಅವರ ಉದ್ದೇಶವಾಗಿದೆ. ಆದ್ದರಿಂದಲೇ ಅದಕ್ಕೆ ಅನುಗುಣವಾದ ಕಾರ್ತ್ಸ್ನ್ಯೇನ ಅನಭಿವ್ಯಕ್ತ- ಸ್ವರೂಪತ್ವಾತ್ ಎಂಬ ಹೇತುವನ್ನು ಹೇಳಿದ್ದಾರೆ. ಈ ಮಾಯೆಯು ಲೌಕಿಕಮಾಯೆಯ ಸಮಾನವಾದುದಲ್ಲ ಎಂದು ತಿಳಿಸುವುದಕ್ಕಾಗಿಯೇ 'ಮಾಯಾಮಾತ್ರಂ ತು' ಎಂದು ವಿಶೇಷವಾಚಕವಾದ ತು ಶಬ್ದವನ್ನು ಇಟ್ಟಿದ್ದಾರೆ. ಸರ್ವಥಾ ಅವಿದ್ಯಮಾನವಾದುದಾಗಲೀ ಅಥವಾ ಸರ್ವಥಾ ಅನಭಿವ್ಯಕ್ತವಾದುದಾಗಲೀ, ಸ್ವರೂಪವುಳ್ಳದ್ದೆಂದೂ ಯಾರೂ ಹೇಳುವುದಿಲ್ಲವಷ್ಟೇ ? ಸ್ವಪ್ನಪದಾರ್ಥಗಳಿಗಾದರೂ, ಸ್ವಪ್ನದ್ರಷ್ಟೃಪುರುಷನಿಗೇ ಸ್ವಲ್ಪ ಅಭಿವ್ಯಕ್ತಿ ಇರುವುದರಿಂದ ಕಾರ್ತ್ಸ್ನ್ಯೇನ ಎಂದು ಹೇಳಿದ್ದಾರೆ. ಆದ್ದರಿಂದಲೇ ಹಿಂದಿನ ಸೂತ್ರದಲ್ಲಿಯೂ ಜಾಗ್ರದ್‌ದೆಶೆಯಲ್ಲಿ ಸೃಷ್ಟವಾದ, ಗಜಾದಿಗಳಿಗಿಂತಲೂ ವೈಲಕ್ಷಣ್ಯವನ್ನು ಸೂಚಿಸುವುದಕ್ಕೋಸ್ಕರ 'ಸೃಷ್ಟಿರಾಹಹಿ' ಎಂದು ಸೃಷ್ಟಿಯನ್ನು ಹೇಳಿದ್ದಾರೆ. ಇಲ್ಲದಿದ್ದರೆ, ಜಾಗ್ರತ್‌ಸೃಷ್ಟಿಯಿಂದಲೇ ಸ್ವಾಪ್ನಸೃಷ್ಟಿಯು ಗತಾರ್ಥವಾಗುವುದರಿಂದ ಪ್ರತ್ಯೇಕವಾಗಿ ಸ್ವಪ್ನದಲ್ಲಿ ಇನ್ನೊಂದು ಸೃಷ್ಟಿಯನ್ನು ಹೇಳಬೇಕಾದ ಅವಶ್ಯಕತೆಯು ಇರಲಿಲ್ಲ. 'ನ ತತ್ರ ರಥಾಃ' ಎಂಬ ವಾಕ್ಯಶೇಷದಿಂದ ಅಥವಾ ವಾಕ್ಯಖಂಡದಿಂದ 'ತತ್ರ' ಎಂದರೆ ಕಂಠಪ್ರದೇಶದಲ್ಲಿ ರಥಾದಿಗಳು ಇಲ್ಲ ಎಂದು ಸೂಚಿಸಿ ಕಂಠಪ್ರದೇಶದಲ್ಲಿರುವ ಸೂಕ್ಷ್ಮವಾದ ನಾಡಿಯಲ್ಲಿರುವ ಜೀವನ ದರ್ಶನಕ್ಕೆ ಯೋಗ್ಯವಾದ ಸೂಕ್ಷ್ಮಸೃಷ್ಟಿಯನ್ನೇ ಹೇಳಿದ್ದಾರೆ. ಇಲ್ಲದಿದ್ದರೆ, ಇದೂ ವ್ಯರ್ಥವಾಗುತ್ತಿತ್ತು. 'ನ ತತ್ರ ರಥಾಃ' ಎಂದು ಹೇಳಿದ್ದರಿಂದ ಸೃಷ್ಟಿಗಿಂತ ಮೊದಲು ರಥವಿರಲಿಲ್ಲ ಎಂದು ರಥಾದಿಪ್ರಾಗಭಾವವನ್ನು ಹೇಳಿದುದರಿಂದ, ಪ್ರಾಗಭಾವವು ಏಕಕಾಲದಲ್ಲಿ ನಿಷೇಧವೇ ಹೊರತು ತ್ರಿಕಾಲದಲ್ಲಿ ನಿಷೇಧವಲ್ಲವಾದ್ದರಿಂದ, ಜೊತೆಗೆ 'ಸೃಜತೇ' ಎಂದು ವರ್ತಮಾನಕಾಲದಲ್ಲಿ ವಿಧಿಯನ್ನೇ ಹೇಳಿರುವುದರಿಂದ ಮಿಥ್ಯಾತ್ವವು ಎಂದೂ ಸೂತ್ರಕಾರರಿಗೆ ಅಭಿಪ್ರೇತವಾದುದಲ್ಲ. ಹಿಂದಿನ ಸೂತ್ರದಲ್ಲಿ ಸೃಷ್ಟಿ ಮತ್ತು ಪ್ರಾಗಭಾವವನ್ನು ಹೇಳಿ ಉತ್ತರಸೂತ್ರದಲ್ಲಿ ಮಿಥ್ಯಾತ್ವವನ್ನು ಪ್ರತಿಜ್ಞೆಮಾಡಿದರೆ, ಸಾಧ್ಯಸಾಧನಗಳಿಗೆ ಪರಸ್ಪರ ವಿರೋಧವು ಬರುವುದರಿಂದಲೂ, 'ಸೂಚಕಶ್ಚ' ಎಂಬ ಸೂತ್ರದಲ್ಲಿ ಸ್ವಾಪ್ನಪದಾರ್ಥಗಳಿಗೆ ಇಷ್ಟಾನಿಷ್ಟಸಾಧನತ್ವವನ್ನು ಹೇಳಿರುವುದರಿಂದಲೂ ಮಿಥ್ಯಾತ್ವವು ಸೂತ್ರಕಾರರಿಗೆ ಅನಭಿಪ್ರೇತವಾದುದು ಎಂದು ತಿಳಿಯುತ್ತದೆ.

ನೇದಾನೀಂ ಸ್ವಪ್ನ ಇತ್ಯೇವ ಯತೋಽನಿತ್ಯತ್ವಧೀರ್ನೃಣಾಮ್ ।
ನಾಸೌ ಸ್ವಪ್ನ ಇತಿ ಕ್ವಾಪಿ ಬಾಧಬೋಧೋ ನ ದೃಶ್ಯತೇ ।
ಅತೋಽಪಿ ಸತ್ಯತೈವೈಷಾಂ ಯುಕ್ತಾ ನಾನ್ಯೇತಿ ಮೇ ಮತಿಃ ॥ ೯೮೨ ॥

**ಮಿಥ್ಯಾಭೂತೋऽರ್ಥಕಾರೀ ಚೇತ್ಯುಕ್ತಿಸ್ಯಾದ್ ವ್ಯಾಹತೈವ ತೇ ।**
**ಸೂತ್ರಂ ಚ ನಾಸತೋऽದೃಷ್ಟತ್ವಾದಿತ್ಯಾಹ ಶ್ರುತಿಶ್ಚ ನಃ ।**
**ಅಸತಃ ಸತ್ ಕಥಂ ಜಾಯೇತೇತ್ಯೇವಾಹ ತತೋऽಪಿ ನ ॥ ೯೮೩ ॥**

**ಅರ್ಥ-**ಯತಃ = ಯಾವ ಕಾರಣದಿಂದ, ನೃಣಾಮ್ = ಮನುಷ್ಯರಿಗೆ, ಇದಾನೀಂ ಸ್ವಪ್ನಃ ನ = ಈಗ ಸ್ವಪ್ನವಿಲ್ಲ, ಇತ್ಯೇವ = ಎಂಬಂತಹ, ಅನಿತ್ಯತ್ವಧೀಃ = ಅನಿತ್ಯತ್ವಜ್ಞಾನವೇ ಬರುತ್ತದೆಯೋ, ನಾಸೌ ಸ್ವಪ್ನಃ = ಇದು ಸ್ವಪ್ನವಲ್ಲ, ಇತಿ = ಎಂಬ, ಬಾಧಬೋಧಃ = ಬಾಧಾತ್ಮಕ ಜ್ಞಾನವು, ಕ್ವಾಪಿ = ಎಂದೂ, ನ ದೃಶ್ಯತೇ = ಉಂಟಾಗುವುದಿಲ್ಲವೋ, ಅತೋऽಪಿ = ಆ ಕಾರಣದಿಂದಲೂ, ಏಷಾಂ = ಈ ಸ್ವಪ್ನಗಳಿಗೆ, ಸತ್ಯತೈವ = ಸತ್ಯತ್ವವೇ, ಯುಕ್ತಾ = ಯುಕ್ತವಾಗುತ್ತದೆ, ಅನ್ಯಾ = ಮಿಥ್ಯಾತ್ವವು, ನ ಇತಿ = ಯುಕ್ತವಾಗುವುದಿಲ್ಲ ಎಂದು, ಮೇ ಮತಿಃ = ಎಂದು ನನ್ನ ಅಭಿಪ್ರಾಯ,

ಮಿಥ್ಯಾಭೂತಃ ಅರ್ಥಕಾರೀ ಚ = ಮಿಥ್ಯಾಭೂತವಾದುದು ಮತ್ತು ಅರ್ಥಕ್ರಿಯಾಕಾರಿ, ಇತ್ಯುಕ್ತಿಃ = ಎಂಬ ವಚನವು, ತೇ = ನಿನಗೆ, ವ್ಯಾಹತೈವ ಸ್ಯಾತ್ = ವ್ಯಾಹತವೇ ಆಗುತ್ತದೆ, ನಾಸತಃ ಅದೃಷ್ಟತ್ವಾತ್ = ಅಸತ್ತಿನಿಂದ ಯಾವ ಕಾರ್ಯವೂ ಉಂಟಾಗುವುದಿಲ್ಲ. ಇತಿ ಸೂತ್ರಂ ಚ = ಎಂಬ ಬ್ರಹ್ಮಸೂತ್ರವು, ಇತ್ಯಾಹ = ಹೀಗೆಯೇ ಹೇಳುತ್ತದೆ, ನಃ = ನಮ್ಮ ಅರ್ಥವನ್ನು, ಶ್ರುತಿಶ್ಚ = ಶ್ರುತಿಯೂ ಸಹ, ಅಸತಃ = ಅಸತ್ತಿನಿಂದ, ಸತ್ = ಸತ್ಯವಾದ ಪದಾರ್ಥವು, ಕಥಂ ಜಾಯೇತ = ಹೇಗೆ ಹುಟ್ಟುತ್ತದೆ? ಇತ್ಯೇವ = ಎಂದೇ, ಆಹ = ಹೇಳುತ್ತದೆ. ತತೋऽಪಿ = ಆ ಕಾರಣದಿಂದಲೂ ಕೂಡ, ನ = ಮಿಥ್ಯಾಭೂತವಾದುದಕ್ಕೆ ಅರ್ಥಕ್ರಿಯಾಕಾರಿತ್ವವು ಇಲ್ಲ.

**ಅನುವಾದ-** ಎಲ್ಲರಿಗೂ ಈಗ ಸ್ವಪ್ನವಿಲ್ಲ ಎಂಬ ಅನಿತ್ಯತ್ವದ ಜ್ಞಾನವೇ ಬರುತ್ತದೆಯೇ ಹೊರತು, ಇದು ಸ್ವಪ್ನವೇ ಅಲ್ಲ ಎಂಬ ಬಾಧವು ಯಾರಿಗೂ ಬರುವುದಿಲ್ಲ. ಆ ಕಾರಣದಿಂದಲೂ ಸ್ವಪ್ನಗಳಿಗೆ ಸತ್ಯತ್ವವೇ ಯುಕ್ತವಾಗುತ್ತದೆ, ಮಿಥ್ಯಾತ್ವವು ಯುಕ್ತವಾಗುವುದಿಲ್ಲ ಎಂದು ನನ್ನ ಅಭಿಪ್ರಾಯ. ಮಿಥ್ಯಾಭೂತವಾದುದು ಮತ್ತು ಅರ್ಥಕ್ರಿಯಾಕಾರಿಯಾದುದು ಎಂಬ ನಿನ್ನ ವಚನವು ವ್ಯಾಹತವಾಗುತ್ತದೆ. 'ನಾಸತಃ ಅದೃಷ್ಟತ್ವಾತ್' ಎಂಬ ಬ್ರಹ್ಮಸೂತ್ರವೂ, 'ಕಥಮಸತಃ ಸಜ್ಜಾಯೇತ' ಎಂಬ ಶ್ರುತಿಯೂ ನಮ್ಮ ಅರ್ಥವನ್ನು ಹೇಳುತ್ತದೆ. ಆ ಕಾರಣದಿಂದಲೂ ಮಿಥ್ಯಾಭೂತವಾದ ವಸ್ತುವಿಗೆ ಅರ್ಥಕ್ರಿಯಾಕಾರಿತ್ವವೇ ಇಲ್ಲ.

**ಭಾವವಿಲಾಸಿನೀ–** ನೇದಂ ರಜತಮಿತಿವನ್ನಾಯಂ ಸ್ವಪ್ನ ಇತಿ ಬಾಧಾಭಾವಾಚ್ಚ ಸತ್ಯತೈವೇತ್ಯಾಹ – **ನೇತಿ** ॥ ಏಷಾಂ ಸ್ವಾಪ್ನಪದಾರ್ಥನಾಮ್ । ಅನ್ಯಾ ಅಸತ್ಯತಾ ॥

ಮಿಥ್ಯಾಭೂತಸ್ಯಾರ್ಥಕ್ರಿಯಾಕಾರಿತ್ವೇ ಯುಕ್ತಿಸೂತ್ರಶ್ರುತಿವಿರೋಧಮಾಹ – **ಮಿಥ್ಯೇತಿ** ॥ ತತ್ ತಸ್ಮಾತ್ ಅಭಾವಪ್ರತಿಯೋಗಿತ್ವಸ್ಯ ಮಿಥ್ಯಾತ್ವಾತ್ ಪೂರ್ವಭಾವಿತ್ವಸ್ಯಕಾರಣತ್ವಾತ್ । ನ

ಅವಿದ್ಯಮಾನಸ್ಯಾರ್ಥಕ್ರಿಯಾಕಾರಿತ್ವಂ ನ । ಮಿಥ್ಯಾಭೂತಸ್ಯಾರ್ಥಕ್ರಿಯಾಕಾರಿತ್ವಂ ನ ಚೇತ್ ಸತ್ಯಸ್ಯಾಪಿ ತನ್ನ ಸ್ಯಾದಿತಿ ಚೇತ್ ನ । ಪೂರ್ವಭಾವಿತ್ವಸ್ಯೈವ ಕಾರಣತ್ವೇನ ಸತ್ಯತ್ವಸ್ಯ ಚ ವಿದ್ಯಮಾನತ್ವೇನ ವ್ಯಾಹತೇರಭಾವಾತ್ । ಜನ್ಮಾದಸ್ಯ ಯತ ಇತಿ ಸೂತ್ರೇ ತತ್ತೇಜೋಽಸೃಜತೇತ್ಯಾದಿ ಶ್ರುತೌ ಚ ಸತ್ಯಸ್ಯೈವ ಕಾರಣತ್ವಕಥನೇನ ಸೂತ್ರಶ್ರುತಿವಿರೋಧಾಭಾವಾಚ್ಚ ॥ ೯೮೨-೯೮೩ ॥

**ವಿವರಣೆ-** ಮಿಥ್ಯಾಭೂತವಾದುದು ಎಂದರೆ ಅಥವಾ ಮಿಥ್ಯಾತ್ವವೆಂದರೆ ಅಭಾವಪ್ರತಿಯೋಗಿತಾರೂಪವಾದುದು ಎಂದರೆ ಆ ವಸ್ತುವು ಅವಿದ್ಯಮಾನ ಎಂದು ಅರ್ಥ. ಅವಿದ್ಯಮಾನವಸ್ತುವಿಗೆ ಅರ್ಥಕ್ರಿಯಾಕಾರಿತ್ವವನ್ನು ಅಂಗೀಕರಿಸಿದರೆ, ವ್ಯಾಹತಿಯು ಬರುತ್ತದೆ. ಮಿಥ್ಯಾಭೂತವಾದುದಕ್ಕೆ ಅರ್ಥಕ್ರಿಯಾಕಾರಿತ್ವವು ಇಲ್ಲದಿದ್ದರೆ, ಸತ್ಯವಾದ ವಸ್ತುವಿಗೂ ಅರ್ಥಕ್ರಿಯಾಕಾರಿತ್ವವನ್ನು ಅಂಗೀಕರಿಸುವುದು ಬೇಡ ಎಂಬ ಆಕ್ಷೇಪವೂ ಸರಿಯಲ್ಲ. ಕಾರಣತ್ವವು ಪೂರ್ವಭಾವಿತ್ವರೂಪವಾದ್ದರಿಂದ, ಭಾವಿತ್ವ ಎಂದರೆ ಸತ್ಯತ್ವರೂಪವಾದುದರಿಂದ ಸತ್ಯತ್ವವು ವಿದ್ಯಮಾನತ್ವದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ವಿದ್ಯಮಾನವಾದುದು ಅರ್ಥಕ್ರಿಯಾಕಾರಿ ಎಂದು ಹೇಳಿದರೆ ವ್ಯಾಹತಿ ಇಲ್ಲ. ಆದ್ದರಿಂದ ಸತ್ಯವಸ್ತುವಿಗೆ ಅರ್ಥಕ್ರಿಯಾಕಾರಿತ್ವವನ್ನು ಒಪ್ಪಿದರೆ ಯಾವ ಅನಿಷ್ಟಪ್ರಸಂಗವೂ ಇಲ್ಲ ಮತ್ತು ಶ್ರುತಿಸೂತ್ರಗಳಿಂದಲೂ ಈ ವಿಷಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಚಿಚ್ಚಾಪರೋಕ್ಷವ್ಯವಹಾರಾರ್ಹಾ ಮುಕ್ತೌ ಚ ಯತ್ ತವ ।**
**ಸತ್ಯಸ್ಯೈವಾರ್ಥಕೃತ್ತ್ವಂ ತತ್ ಸಿದ್ಧಮಜ್ಞಾನಸಾಕ್ಷಿಣಃ ॥ ೯೮೪ ॥**

**ಅರ್ಥ-**ಯತ್ = ಯಾವ ಕಾರಣದಿಂದ, ತವಚಿತ್ = ನಿನ್ನ ಚೈತನ್ಯವು, ಮುಕ್ತೌಚ = ಮುಕ್ತಿಯಲ್ಲಿಯೂ ಕೂಡ, ಅಪರೋಕ್ಷವ್ಯವಹಾರಾರ್ಹಾ = ಅಪರೋಕ್ಷವ್ಯವಹಾರವನ್ನು ಕುರಿತು ಯೋಗ್ಯವಾಗಿದೆಯೋ, ತತ್ = ಆ ಕಾರಣದಿಂದ, ಅಜ್ಞಾನಸಾಕ್ಷಿಣಃ = ಅಜ್ಞಾನದ ಸಾಕ್ಷಿಯಾದ, ಸತ್ಯಸ್ಯೈವ = ಸತ್ಯವಾದ ವಸ್ತುವಿಗೇ, ಅರ್ಥಕೃತ್ತ್ವಂ = ಅರ್ಥಕ್ರಿಯಾಕಾರಿತ್ವವು, ಸಿದ್ಧಮ್ = ಸಿದ್ಧವಾಯಿತು.

**ಅನುವಾದ-** ಯಾವ ಕಾರಣದಿಂದ ಮುಕ್ತಿಯಲ್ಲಿಯೂ ನಿನ್ನ ಶುದ್ಧಚೈತನ್ಯಕ್ಕೆ ಅಪರೋಕ್ಷವ್ಯವಹಾರಯೋಗ್ಯತ್ವವು ಇದೆಯೋ ಮತ್ತು ಸಂಸಾರದಲ್ಲಿ ಅಜ್ಞಾನಸಾಕ್ಷಾತ್ಕಾರರೂಪವಾದ ಶುದ್ಧಚೈತನ್ಯಕ್ಕೆ ಅಜ್ಞಾನೋಲ್ಲೇಖರೂಪವಾದ ಅರ್ಥಕ್ರಿಯಾಕಾರಿತ್ವವು ಇದೆಯೋ ಆ ಕಾರಣದಿಂದ ಸತ್ಯವಾದ ವಸ್ತುವಿಗೆ ಅರ್ಥಕ್ರಿಯಾಕಾರಿತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ-** ಪರಿರೀತ್ಯಾಽಪಿ ಸತ್ಯಸ್ಯಾರ್ಥಕ್ರಿಯಾಕಾರಿತ್ವಂ ಸಾಧಯತಿ ॥ **ಚಿಚ್ಚೇತಿ** ॥ ಚಿತ್ ಸ್ವರೂಪಭೂತಚೈತನ್ಯಮ್ । ಅವೇದ್ಯತ್ವೇ ಸತ್ಯಪರೋಕ್ಷವ್ಯವಹಾರಯೋಗ್ಯತ್ವಸ್ಯ ಸ್ವಪ್ರಕಾಶತ್ವಾಂಗೀಕಾರಾತ್ ಮುಕ್ತಿಕಾಲೇಽಪಿ ಸ್ವಪ್ರಕಾಶತತ್ವಸ್ಯಾವಶ್ಯಕತ್ವಾತ್ ವ್ಯವಹಾರಸ್ಯ

ಜ್ಞಾನೈಕಕಾರ್ಯತಯಾ ಮುಕ್ತೌ ಚ ಜ್ಞಾನಾಂತರಾಭಾವೇನ ಸ್ವರೂಪಚಿತ್ಯೇವ ತದ್ಧೇತುತ್ವಸ್ಯ ವಕ್ತವ್ಯತ್ವಾಚ್ಚ । ತತ್ ತಸ್ಮಾತ್ । ಅಜ್ಞಾನಸಾಕ್ಷಿಣಃ ಅಜ್ಞಾನಸಾಕ್ಷಾತ್ಕಾರರೂಪಸ್ಯಾಜ್ಞಾನೋಲ್ಲೇಖಾಖ್ಯಕಾರ್ಯಕಾರಿತ್ವಾತ್ ಅಜ್ಞಾನವ್ಯವಹಾರಹೇತುತ್ವಾಚ್ಚ ಸತ್ಯಸ್ಯೈವಾರ್ಥಕ್ರಿಯಾಕಾರಿತ್ವಮಿತಿ ಭಾವಃ । ವಿಷಯವ್ಯವಹಾರಸ್ಯ ಸರ್ವತ್ರ ಜ್ಞಾನೈಕಕಾರ್ಯತ್ವದರ್ಶನೇನ ವಿಷಯಸ್ಯಾಪಿ ಪ್ರವೇಶೇ ಕಲ್ಪನಾಗೌರವಾಚ್ಚ । ಅಪರೋಕ್ಷಜ್ಞಾನೇಽಪಿ ವಿಷಯಸ್ಯ ಜ್ಞಾನಜನಕಸನ್ನಿಕರ್ಷಘಟಕತಯೈವೋಪಯೋಗಿತ್ವೇನ ಜನಕೇಽಪಿ ಜ್ಞಾನೇ ವಿಷಯಸ್ಯೋಪಯೋಗಾದರ್ಶನೇನ ಜ್ಞಾನಜನ್ಯವ್ಯವಹಾರೇ ಸುತರಾಮನುಪಯೋಗಾಚ್ಚ ॥ ೯೮೪ ॥

**ವಿವರಣೆ-** ಪರರೀತಿಯಿಂದಲೂ ಸತ್ಯವಾದ ವಸ್ತುವಿಗೆ ಅರ್ಥಕ್ರಿಯಾಕಾರಿತ್ವವನ್ನು ಇಲ್ಲಿ ಸಮರ್ಥನೆ ಮಾಡುತ್ತಾರೆ. 'ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಸ್ವಪ್ರಕಾಶತ್ವಂ' ಎಂದು ಅವರು ಸ್ವಪ್ರಕಾಶತ್ವವನ್ನು ನಿರ್ವಚನಮಾಡುತ್ತಾರೆ. ಮೋಕ್ಷಕಾಲದಲ್ಲಿಯೂ ಚೈತನ್ಯಕ್ಕೆ ಸ್ವಪ್ರಕಾಶತ್ವವು ಇದೆ. ವ್ಯವಹಾರವು ಜ್ಞಾನಮಾತ್ರಸಾಧ್ಯ. ಮೋಕ್ಷಕಾಲದಲ್ಲಿ ಶುದ್ಧಚೈತನ್ಯಾತಿರಿಕ್ತವಾದ ಜ್ಞಾನವು ಇಲ್ಲ. ಆದ್ದರಿಂದ ಶುದ್ಧಚೈತನ್ಯಕ್ಕೆ ಅಪರೋಕ್ಷವ್ಯವಹಾರ ಯೋಗ್ಯತ್ವರೂಪವಾದ ಅರ್ಥಕ್ರಿಯಾಕಾರಿತ್ವವನ್ನು ಅಂಗೀಕರಿಸಬೇಕು. ಅದರಂತೆ ಅಜ್ಞಾನಸಾಕ್ಷಾತ್ಕಾರವು ಶುದ್ಧಚೈತನ್ಯರೂಪವಾಗಿದೆ. ಅದು ಅಜ್ಞಾನವನ್ನು ಉಲ್ಲೇಖಮಾಡುತ್ತದೆ. ಆದ್ದರಿಂದ ಅಜ್ಞಾನೋಲ್ಲೇಖರೂಪವಾದ ಅರ್ಥಕ್ರಿಯಾಕಾರಿತ್ವವನ್ನು ಚೈತನ್ಯಕ್ಕೆ ಒಪ್ಪಬೇಕು. ವಿಷಯವ್ಯವಹಾರವು ಸರ್ವತ್ರ ಜ್ಞಾನಮಾತ್ರಕಾರ್ಯವೆಂದು ಅನುಭವವಿರುವುದರಿಂದ ವಿಷಯವನ್ನೂ ಕಾರಣವೆಂದು ಅಂಗೀಕರಿಸಿದರೆ ಗೌರವದೋಷ ಉಂಟಾಗುತ್ತದೆ. ಅಪರೋಕ್ಷಜ್ಞಾನದಲ್ಲಿಯೂ ಕೂಡ ವಿಷಯವು ಸನ್ನಿಕರ್ಷಜನಕವಾಗಿ ಅನ್ಯಥಾ ಸಿದ್ಧವಾಗುವುದರಿಂದ ಜ್ಞಾನವನ್ನು ಕುರಿತು ವಿಷಯವು ಕಾರಣವಾಗುವುದಿಲ್ಲ. ಆದ್ದರಿಂದ ಜ್ಞಾನಜನ್ಯವ್ಯವಹಾರವನ್ನು ಕುರಿತು ವಿಷಯವು ಸುತರಾಂ ಕಾರಣವಾಗುವುದಿಲ್ಲ, ಜ್ಞಾನವೇ ಕಾರಣವಾಗುತ್ತದೆ. ಆದ್ದರಿಂದ ಸತ್ಯವಾದ ಚೈತನ್ಯಕ್ಕೆ ಅರ್ಥಕ್ರಿಯಾಕಾರಿತ್ವವನ್ನು ಅಂಗೀಕರಿಸಬೇಕೆಂದು ಅಭಿಪ್ರಾಯ.

**ಕಿಂಚಾಜ್ಞಾನಾರೋಪಮೂಲಮಧಿಷ್ಠಾನಚಿದೇವ ತೇ ।**
**ತದಾಧಾರಾ ಚ ಸತ್ಯಸ್ಯೈವಾರ್ಥಕೃತ್ತ್ವಂ ಕಥಂ ನ ತತ್ ॥ ೯೮೫ ॥**

**ಅರ್ಥ-** ಕಿಂಚ = ಮತ್ತು, ತೇ = ನಿನಗೆ, ಅಜ್ಞಾನಾರೋಪಮೂಲಮ್ = ಅಜ್ಞಾನಾರೋಪಕ್ಕೆ ಕಾರಣವಾದುದು, ಅಧಿಷ್ಠಾನಚಿದೇವ = ಅಧಿಷ್ಠಾನಚೈತನ್ಯವು ಮಾತ್ರ. ಆ ಅಧಿಷ್ಠಾನಚೈತನ್ಯವು, ತದಾಧಾರಾ ಚ = ಅಜ್ಞಾನಕ್ಕೆ ಆಶ್ರಯವೂ ಆಗಿದೆ, ತತ್ = ಆ ಕಾರಣದಿಂದ, ಸತ್ಯಸ್ಯೈವ = ಸತ್ಯವಾದುದಕ್ಕೇ, ಅರ್ಥಕೃತ್ತ್ವಂ = ಅರ್ಥಕ್ರಿಯಾಕಾರಿತ್ವವು, ಕಥಂ ನ = ಹೇಗೆ ಇಲ್ಲ?

**ಅನುವಾದ-** ಮತ್ತು ನಿನ್ನ ಮತದಲ್ಲಿ ಶುದ್ಧಚೈತನ್ಯವೇ ಅಜ್ಞಾನಾರೋಪಕ್ಕೆ ಕಾರಣವಾದುದು ಮತ್ತು ಅಜ್ಞಾನಾಶ್ರಯವಾದುದು. ಆದ್ದರಿಂದ ಸತ್ಯವಾದ ವಸ್ತುವಿಗೆ ಅರ್ಥ-ಕ್ರಿಯಾಕಾರಿತ್ವವು ಹೇಗೆ ಇಲ್ಲ?

**ಭಾವವಿಲಾಸಿನೀ-** ಪ್ರಕಾರಾಂತರೇಣಾಪಿ ಪರಮತೇ ಸತ್ಯಸ್ಯೈವಾರ್ಥಕ್ರಿಯಾಕಾರಿತ್ವಂ ಸಾಧಯತಿ॥ **ಕಿಂಚೇತಿ** ॥ ತೇ ಮತೇ । ತದಾಧಾರಾ ಅಜ್ಞಾನಾಧಾರಾ । ತತ್ ತಸ್ಮಾತ್ ಅಧಿಷ್ಠಾನಸ್ಯಾಧಾರಸ್ಯ ಚಾರೋಪೇ ಧಾರಣೇಚ ಕಾರಣತ್ವಾವಶ್ಯಂಭಾವಾತ್ । ಅಜ್ಞಾನವಿಶಿಷ್ಟಸ್ಯೈವಾಧಿಷ್ಠಾನತ್ವೇ ಆಧಾರತ್ವೇ ಚಾತ್ಮಾಶ್ರಯಪ್ರಸಂಗೇನ ಚಿನ್ಮಾತ್ರ ಏವೋಭಯವಿಧಿಕಾರಣತ್ವಸ್ಯಾಪಿ ವಕ್ತವ್ಯತ್ವಾದಿತಿ ಭಾವಃ ॥ ೯೮೫ ॥

**ವಿವರಣೆ-** ಅಜ್ಞಾನವಿಶಿಷ್ಟಚೈತನ್ಯವು ಅಜ್ಞಾನಾರೋಪವನ್ನು ಕುರಿತು ಕಾರಣ ಎಂದು ಹೇಳಿದರೆ ಮತ್ತು ಅಜ್ಞಾನಾಶ್ರಯ ಎಂದು ಹೇಳಿದರೆ, ಆತ್ಮಾಶ್ರಯದೋಷವು ಬರುವುದರಿಂದ ಶುದ್ಧಚೈತನ್ಯವೇ ಅಂತಹ ಆರೋಪವನ್ನೂ, ಅಂತಹ ಧಾರಣೆಯನ್ನೂ ಕುರಿತು ಕಾರಣ ಎಂದು ಹೇಳಬೇಕು. ಆಗ ಶುದ್ಧಚೈತನ್ಯಕ್ಕೇ ಅರ್ಥಕ್ರಿಯಾಕಾರಿತ್ವವು ಬರುತ್ತದೆ ಎಂದು ಅಭಿಪ್ರಾಯ.

**ರಜ್ಜುಃ ಕರೋತಿ ಸ್ವಂ ಕಾರ್ಯಂ ಸರ್ಪಸ್ತು ನ ಕರೋತ್ಯಸೌ ।**
**ಶುಕ್ತಿಃ ಕರೋತಿ ಸ್ವಂ ಕಾರ್ಯಂ ರೂಪ್ಯಂ ತತ್ರ ಕರೋತಿ ನ ।**
**ಅತೋ ಯತ್ರಾಧಿಕಾ ಸತ್ತಾ ಕಾರ್ಯಾಧಿಕ್ಯಂ ನ ತತ್ರ ಕಿಮ್ ॥ ೯೮೬ ॥**

**ಅರ್ಥ-**ರಜ್ಜುಃ = ರಜ್ಜುವು, ಸ್ವಂ ಕಾರ್ಯಂ = ತನ್ನ ಕಾರ್ಯವನ್ನು, ಕರೋತಿ = ಮಾಡುತ್ತದೆ, ಅಸೌ ಸರ್ಪಸ್ತು = ಈ ರಜ್ಜುಸರ್ಪವಾದರೋ, ನ ಕರೋತಿ = ಮಾಡುವುದಿಲ್ಲ. ಶುಕ್ತಿಃ = ಶುಕ್ತಿಯು, ಸ್ವಂ ಕಾರ್ಯಂ = ತನ್ನ ಕಾರ್ಯವನ್ನು, ಕರೋತಿ = ಮಾಡುತ್ತದೆ, ತತ್ರ ರೂಪ್ಯಂ = ಶುಕ್ತಿಯಲ್ಲಿ ಪ್ರತೀತವಾದ ರೂಪ್ಯವು, ನ ಕರೋತಿ = ಮಾಡುವುದಿಲ್ಲ, ಅತಃ = ಆದ್ದರಿಂದ, ಯತ್ರಾಧಿಕಾ ಸತ್ತಾ = ಎಲ್ಲಿ ಅಧಿಕವಾದ ಸತ್ವವಿದೆಯೋ, ತತ್ರ = ಅಲ್ಲಿ, ಕಾರ್ಯಾಧಿಕ್ಯಂ = ಅರ್ಥಕ್ರಿಯಾಕಾರಿತ್ವದ ಆಧಿಕ್ಯವು, ನ ಕಿಮ್ = ಇಲ್ಲವೇನು?

**ಅನುವಾದ-** ರಜ್ಜುವು ತನ್ನ ಕಾರ್ಯವನ್ನು ಮಾಡುತ್ತದೆ. ಈ ರಜ್ಜುಸರ್ಪವು ತನ್ನ ಕಾರ್ಯವನ್ನು ಮಾಡುವುದಿಲ್ಲ. ಶುಕ್ತಿಯು ತನ್ನ ಕಾರ್ಯವನ್ನು ಮಾಡುತ್ತದೆ. ಶುಕ್ತಿಯಲ್ಲಿ ಆರೋಪಿತವಾದ ರಜತವು ತನ್ನ ಕಾರ್ಯವನ್ನು ಮಾಡುವುದಿಲ್ಲ. ಆದ್ದರಿಂದ ಎಲ್ಲಿ ಅಧಿಕ ಸತ್ವವು ಇದೆಯೋ, ಅಲ್ಲಿ ಅಧಿಕವಾದ ಅರ್ಥಕ್ರಿಯಾಕಾರಿತ್ವವು ಇಲ್ಲವೇನು?

**ಭಾವವಿಲಾಸಿನೀ-** ಪುನರಪಿ ಯುಕ್ತ್ಯಾ ಸತ್ಯಸ್ಯೈವ ಕಾರಣತ್ವಂ ಸಾಧಯತಿ ॥ **ರಜ್ಜುರಿತಿ** ॥ ತತ್ರ ಶುಕ್ತೌ । ರೂಪ್ಯವಮ್ ಆರೋಪಿತಂ ರೂಪ್ಯವಮ್ । ಏವಂ ವ್ಯವಹಾರಿಕಾದಧಿಕಸ್ಯ ಬ್ರಹ್ಮಣಃ ತತೋಽಪ್ಯತ್ಯಪೃಷ್ಟಕಾರ್ಯಕಾರಿತ್ವಮೇವ ನ್ಯಾಯ್ಯಮಿತಿ ಭಾವಃ ॥ ೯೮೬ ॥

**ವಿವರಣೆ-** ರಜ್ಜುವಿನಲ್ಲಿಯೂ ಮತ್ತು ಶುಕ್ತಿಯಲ್ಲಿಯೂ ವ್ಯಾವಹಾರಿಕ ಸತ್ವವಿದೆ. ರಜ್ಜುಸರ್ಪದಲ್ಲಿ ಮತ್ತು ಶುಕ್ತಿರಜತದಲ್ಲಿ ಪ್ರಾತಿಭಾಸಿಕಸತ್ವವಿದೆ. ಆದ್ದರಿಂದ ಎಲ್ಲಿ ಅಧಿಕಸತ್ವವಿದೆಯೋ ಅಲ್ಲಿ ಅರ್ಥಕ್ರಿಯಾಕಾರಿತ್ವವು ಅಧಿಕವಾಗಿದೆ ಎಂದು ಸಿದ್ಧವಾಗುತ್ತದೆ. ಶುದ್ಧಚೈತನ್ಯದಲ್ಲಿ ಪಾರಮಾರ್ಥಿಕಸತ್ವವೇ ಇರುವುದರಿಂದ ಅದು ಉಳಿದ ಎರಡು ಸತ್ವಗಳಿಗಿಂತಲೂ ಅಧಿಕವಾಗಿರುವುದರಿಂದ ಶುದ್ಧಚೈತನ್ಯಕ್ಕೆ ಅಧಿಕವಾದ ಅರ್ಥಕ್ರಿಯಾಕಾರಿತ್ವವನ್ನೇ ಒಪ್ಪಬೇಕೆಂದು ಸಿದ್ಧವಾಗುತ್ತದೆ.

ಕಾರಣಂ ಪೂರ್ವಭಾವ್ಯೇವ ಸರ್ವೇಽಪ್ಯಾಹುರ್ಮನೀಷಿಣಃ ।
ಭೂತಿಶ್ಚ ಸತ್ತಾ ತತ್ ಕಸ್ಯ ಕಾರಣತ್ವಮಭೂದ್ ವದ ॥ ೯೮೭ ॥

ಅತಃ ಶ್ರುತ್ಯಾ ಚ ಯುಕ್ತ್ಯಾ ಚ ಲೋಕಾನುಭವತೋಽಪಿ ಚ ।
ಸದೇವ ಕಾರಣಂ ಮನ್ಯೇ ಮಿಥ್ಯಾಭೂತಮಕಾರಣಮ್ ॥ ೯೮೮ ॥

**ಅರ್ಥ-**ಸರ್ವೇ ಮನೀಷಿಣಃ ಅಪಿ = ಎಲ್ಲಾ ವಿದ್ವಾಂಸರೂ ಕೂಡ, ಪೂರ್ವಭಾವಿ ಏವ = ಪೂರ್ವಭಾವಿಯಾದುದೇ, ಕಾರಣಂ = ಕಾರಣವೆಂದು, ಆಹುಃ = ಹೇಳುತ್ತಾರೆ, ಭೂತಿಶ್ಚ = ಪೂರ್ವಭಾವಿತ್ವ ಎಂಬಲ್ಲಿ ಇರುವ ಭವನವಾದರೋ, ಸತ್ತಾ = ಸತ್ತಾರೂಪವಾದುದು, ತತ್ = ಆ ಕಾರಣದಿಂದ, ಕಸ್ಯ = ಯಾವುದಕ್ಕೆ, ಕಾರಣತ್ವಮ್ = ಕಾರಣತ್ವವು, ಅಭೂತ್ = ಉಂಟಾಯಿತು ಎಂದು, ವದ = ಹೇಳು.

ಅತಃ = ಆದ್ದರಿಂದ, ಶ್ರುತ್ಯಾ ಚ = ಶ್ರುತಿಯಿಂದಲೂ, ಯುಕ್ತ್ಯಾ ಚ = ಮತ್ತು ಯುಕ್ತಿಯಿಂದಲೂ, ಲೋಕಾನುಭವತೋಽಪಿ ಚ = ಮತ್ತು ಲೋಕಾನುಭವದಿಂದಲೂ, ಸದೇವ ಕಾರಣಂ = ಸತ್ಯವಾದುದೇ ಕಾರಣ, ಮಿಥ್ಯಾಭೂತಮ್ = ಮಿಥ್ಯಾಭೂತವಾದುದು, ಅಕಾರಣಮ್ = ಕಾರಣವಲ್ಲ ಎಂದು, ಮನ್ಯೇ = ತಿಳಿಯುತ್ತೇನೆ.

**ಅನುವಾದ-** ಕಾರಣವು ಪೂರ್ವಭಾವಿತ್ವರೂಪವಾದುದು. ಪೂರ್ವಭಾವಿತ್ವ ಎಂಬಲ್ಲಿ ಇರುವ 'ಭೂ' ಧಾತುವಿಗೆ ಸತ್ತಾ ಎಂದೇ ಎಲ್ಲರೂ ಒಪ್ಪಿರುವ ಅರ್ಥ. ಆದ್ದರಿಂದ ಸತ್ಯವಾದುದಕ್ಕೇ ಕಾರಣತ್ವವು ಸಿದ್ಧವಾಗುತ್ತದೆ. ಮಿಥ್ಯಾಭೂತವಾದುದು ಕಾರಣವಾಗುವುದಿಲ್ಲ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ತತ್ ತಸ್ಮಾತ್ ಕಾರಣಸ್ಯ ಪೂರ್ವಭಾವಿತ್ವಾತ್ । ಭೂಧಾತ್ವರ್ಥಸ್ಯ ಚ ಸತ್ತಾರೂಪತ್ವಾತ್ ॥ ೯೮೭- ೯೮೮ ॥

ಸದಾ ಸರ್ವತ್ರ ಸದ್‌ಬ್ರಹ್ಮ ಸದಾ ಸರ್ವತ್ರ ಚಾರ್ಥಕೃತ್ ।
ಆಕಾಶವತ್ ಕಾಲವಚ್ಚ ತ್ರಿಕಾಲಾಸತ್ ಕದಾಪಿ ನ ॥ ೯೮೯ ॥

**ಅರ್ಥ-** ಬ್ರಹ್ಮ = ಬ್ರಹ್ಮನು, ಸದಾ = ಯಾವಾಗಲೂ, ಸರ್ವತ್ರ = ಎಲ್ಲ ಕಡೆಯಲ್ಲಿಯೂ, ಸತ್ = ಸತ್ಯನೇ ಆಗಿದ್ದಾನೆ. ಆದ್ದರಿಂದ, ಆಕಾಶವತ್ = ಆಕಾಶದಂತೆ, ಕಾಲವಚ್ಚ = ಮತ್ತು ಕಾಲದಂತೆ, ಸದಾ = ಯಾವಾಗಲೂ, ಸರ್ವತ್ರ = ಎಲ್ಲ ಕಡೆಗಳಲ್ಲಿಯೂ, ಅರ್ಥಕೃತ್ ಚ = ಅರ್ಥಕ್ರಿಯಾಕಾರಿಯೂ ಆಗಿದ್ದಾನೆ, ತ್ರಿಕಾಲಾಸತ್ = ಕಾಲತ್ರಯದಲ್ಲಿ ಅಸತ್ಯವಾದುದು, ಕದಾಪಿ = ಎಂದೂ, ನ = ಅರ್ಥಕ್ರಿಯಾಕಾರಿಯಾಗುವುದಿಲ್ಲ.

**ಅನುವಾದ-** ಬ್ರಹ್ಮನು ಸದಾ, ಸರ್ವತ್ರ, ಸತ್ಯನೇ ಆಗಿದ್ದಾನೆ. ಆದ್ದರಿಂದ ಆಕಾಶದಂತೆ ಮತ್ತು ಕಾಲದಂತೆ, ಸದಾ, ಸರ್ವತ್ರ, ಅರ್ಥಕ್ರಿಯಾಕಾರಿಯೇ ಆಗಿದ್ದಾನೆ. ತ್ರಿಕಾಲಾಸತ್ಯವಾದುದು ಎಂದೂ ಕಾರಣವಾಗುವುದಿಲ್ಲ.

**ಭಾವವಿಲಾಸಿನೀ-** ಅಧಿಕಸತ್ತಾಕಸ್ಯಾಧಿಕಕಾರ್ಯಕಾರಿತ್ವಂ ದೃಷ್ಟಾಂತೇನೋಪಪಾದಯತಿ ॥ ಸದೇತಿ॥ ಯಥಾ ಸರ್ವತ್ರ ಸದಾ ವಿದ್ಯಾಮಾನ ಆಕಾಶಃ ಸರ್ವತ್ರ ಸದಾಽವಕಾಶಪ್ರದಾನಾಖ್ಯ-ಕಾರ್ಯಕೃತ್ । ಯಥಾಚ ಸರ್ವತ್ರ ಸದಾ ವಿದ್ಯಮಾನಃ ಕಾಲಃ ಸರ್ವತ್ರಾಪಿ ತತ್ತತ್ಕಾರ್ಯಾಣಾಂ ನಿಮಿತ್ತಕಾರಣಮ್। ಏವಂ ಬ್ರಹ್ಮಾಪಿ ಸದಾ ಸರ್ವತ್ರ ವಿದ್ಯಮಾನಂ ಸರ್ವಮಪಿ ಕಾರ್ಯಂ ಕುರ್ಯಾದಿತಿ ಭಾವಃ । ತ್ರಿಕಾಲಾಸತ್ ಶಶಶೃಂಗಮ್ ॥ ೯೮ ॥

**ವಿವರಣೆ-** ಅಧಿಕಸತ್ವವನ್ನು ಹೊಂದಿರುವುದಕ್ಕೆ ಅಧಿಕಕಾರ್ಯಕಾರಿತ್ವವು ಇದೆ ಎಂಬುದನ್ನು ದೃಷ್ಟಾಂತ ಮೂಲಕವಾಗಿ ಇಲ್ಲಿ ಉಪಪಾದನೆಮಾಡುತ್ತಾರೆ. ಘಟಾದಿಸತ್ವಗಳಿಗಿಂತ ಆಕಾಶಕಾಲಸತ್ವವು ಅಧಿಕವಾದುದು. ಏಕೆಂದರೆ, ಘಟವು ಯಾವುದೋ ಒಂದು ಕಾಲದಲ್ಲಿ, ಯಾವುದೋ ಒಂದು ದೇಶದಲ್ಲಿ ಇರುತ್ತದೆ. ಆಕಾಶಕಾಲಗಳು ಸದಾ, ಸರ್ವತ್ರ ಇರುತ್ತವೆ. ಘಟವು ಜಲಾಹರಣಾದಿಗಳನ್ನು ಕುರಿತು ಮಾತ್ರ ಕಾರಣವಾಗುತ್ತದೆ. ಆಕಾಶಕಾಲಗಳು ಎಲ್ಲಾ ಕಾರ್ಯವನ್ನೂ ಕುರಿತು ಕಾರಣವಾಗುತ್ತವೆ. ಬ್ರಹ್ಮನ ಸತ್ವವು ಸದಾ, ಸರ್ವತ್ರ ಇರುವುದರಿಂದ, ಈ ರೀತಿಯ ಆಧಿಕ್ಯದಿಂದಲೂ ಬ್ರಹ್ಮನು ಸದಾ, ಸರ್ವತ್ರ ಅರ್ಥಕ್ರಿಯಾಕಾರಿಯೆಂದು ಒಪ್ಪಬೇಕು ಎಂದು ಅಭಿಪ್ರಾಯ.

**ಭ್ರಾಂತಸ್ಯ ವಾಗ್ ಭ್ರಾಂತಮೇವ ಸ್ವಾರ್ಥಂ ವಕ್ತಿ ನ ಚಾಪರಮ್ ।**
**ಮಣಿಪ್ರಭಾಯಾಂ ಮಣಿಧೀಃ ಪ್ರಭಾಽಧ್ಯಸ್ತಮಣೇರ್ಹಿ ಧೀಃ ॥ ೯೯೦ ॥**

**ಅಸನ್ಮಣೇರ್ಹಿ ತಜ್ ಜ್ಞಾನಂ ಮಣಿಪ್ರಾಪ್ತಿರ್ಯದೃಚ್ಛಯಾ ॥ ೯೯೧ ॥**

**ಅರ್ಥ-**ಭ್ರಾಂತಸ್ಯ ವಾಕ್ = ಭ್ರಾಂತಪುರುಷನ ವಚನವು, ಭ್ರಾಂತಂ ಸ್ವಾರ್ಥಮೇವ = ಭ್ರಾಂತಿಗೆ ವಿಷಯವಾದ ಅರ್ಥವನ್ನೇ, ವಕ್ತಿ = ಹೇಳುತ್ತದೆ, ಅಪರಮ್ = ಸತ್ಯವಾದ ವಸ್ತುವನ್ನು, ನ ವಕ್ತಿ = ಹೇಳುವುದಿಲ್ಲ. ಮಣಿಪ್ರಭಾಯಾಂ = ಮಣಿಪ್ರಭೆಯಲ್ಲಿ, ಮಣಿಧೀಃ = ಇದು ಮಣಿ ಎಂಬ ಜ್ಞಾನವು, ಪ್ರಭಾಽಧ್ಯಸ್ತಮಣೇರ್ಹಿ = ಮಣಿಪ್ರಭೆಯಲ್ಲಿ ಆರೋಪಿತವಾದ ಮಣಿಯ, ಧೀಃ = ಜ್ಞಾನವಷ್ಟೇ ?

ತಜ್ ಜ್ಞಾನಂ = ಆ ಜ್ಞಾನವು, ಅಸನ್ಮಣೇರ್ಹಿ = ಅವಿದ್ಯಮಾನವಾದ ಮಣಿಯದ್ದೇ ಆಗಿದೆ. ಮಣಿಪ್ರಾಪ್ತಿಃ = ಅಲ್ಲಿ ಮಣಿಪ್ರಾಪ್ತಿಯಾದರೂ, ಯದೃಚ್ಛಯಾ = ಆಕಸ್ಮಿಕವಾಗಿಯೇ ಅಥವಾ ಭಗವದಿಚ್ಛೆಯಿಂದಲೇ ಆಗುತ್ತದೆ.

**ಅನುವಾದ-** ಭ್ರಾಂತ ಮನುಷ್ಯನ ವಚನವು ಭ್ರಾಂತಿಗೆ ವಿಷಯವಾದ ಅರ್ಥವನ್ನೇ ಹೇಳುತ್ತದೆಯೇ ಹೊರತು ಸತ್ಯವಾದ ಅರ್ಥವನ್ನು ಹೇಳುವುದಿಲ್ಲ. ಮಣಿಪ್ರಭೆಯಲ್ಲಿ ಇದು ಮಣಿ ಎಂಬ ಜ್ಞಾನವು ಅಲ್ಲಿ ಆರೋಪಿತವಾದ ಮಣಿಯ ಜ್ಞಾನವೇ ಆಗಿದೆ. ಅದು ಅವಿದ್ಯಮಾನವಾದ ಮಣಿಯ ಜ್ಞಾನ. ಅಲ್ಲಿ ಉಂಟಾಗುವ ಮಣಿಪ್ರಾಪ್ತಿಯು ಯದೃಚ್ಛೆಯಿಂದಲೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಲೋಕೇ ಪದಕದಂಬಕತ್ವಾರ್ಥಪ್ರಕಾಶಕತ್ವಾಖ್ಯ ಸ್ವರೂಪೇಣ ಸತ್ಯಮಪಿ ವಾಕ್ಯಂ ಜ್ಞಾನಂ ಚ ಸ್ವಸ್ವರೂಪಾಘಾತಕೇನಾ (ಅಯೋಗ್ಯೇತರಾನ್ವಿತೇಶಕ್ಯಭಾವಾದಿಕರಣದೋಷೇಣ ದುಷ್ಟಕರಣಾಖ್ಯ ಜ್ಞಾನದೋಷೇಣ) ಯೋಗ್ಯಾರ್ಥೇ ಪ್ರಯುಕ್ತವಾಕ್ಯತ್ವದುಷ್ಟಕರಣಜನ್ಯತ್ವರೂಪದೋಷಮಾತ್ರೇಣ ಘಟಿತಂ ಚೇತ್ ಮಿಥ್ಯಾಭೂತಮೇವಾರ್ಥಂ ಬೋಧಯೇನ್ನತು ಸತ್ಯಮ್। ಸ್ವಸ್ವರೂಪಸ್ಯೈವ ಘಾತಕೇನ ಮಿಥ್ಯಾತ್ವಾಖ್ಯಮಹಾದೋಷೇಣ ದೂಷಿತಂ ವಾಕ್ಯಂ ಜ್ಞಾನಂ ಚ ಶಶಶೃಂಗಮಿವ ನ ಕಮಪ್ಯರ್ಥಂ ಸಾಧಯಿತುಮಲಂ ಸತ್ಯಾರ್ಥಂ ತು ಸುತರಾಂ ನ ಸಾಧಯೇದಿತ್ಯಾಹ – **ಭ್ರಾಂತಸ್ಯೇತಿ** ॥ ಭ್ರಾಂತಸ್ಯ ಶುಕ್ತಿರಜತಾದಿಭ್ರಮಯುಕ್ತಸ್ಯ । ವಾಕ್ ತತ್ರ ರಜತಮಸ್ತೀತ್ಯಾದಿ ವಾಕ್ । ಭ್ರಾಂತಂ ಭ್ರಾಂತಿಪರಿಕಲ್ಪಿತಮ್। ಅವಿದ್ಯಮಾನಮಿತ್ಯರ್ಥಃ ॥

ಮಣಿಪ್ರಭಾಯಾಂ ಮಣಿಧೀರಪಿ ಅವಿದ್ಯಮಾನಮೇವ ಸ್ವಾರ್ಥಮುಲ್ಲಿಖತಿ । ನತು ವಿದ್ಯಮಾನಮ್ । ದೋಷಮೂಲಜ್ಞಾನತ್ವಾಖ್ಯದೋಷಾತ್ । ಮಣಿಪ್ರಾಪ್ತಿಸ್ತು ಯಾದೃಚ್ಛಿಕೀತ್ಯಾಹ – **ಮಣಿಪ್ರಭಾಯಾಮಿತಿ**॥ ತತ್ ಮಣಿಪ್ರಭಾಯಾಂ ಮಣಿಜ್ಞಾನಮ್ ॥ ೯೯೦-೯೯೧ ॥

**ವಿವರಣೆ-** ಲೋಕದಲ್ಲಿ ಪದಸಮೂಹರೂಪವಾದ ವಾಕ್ಯವೂ, ಅರ್ಥಪ್ರಕಾಶಕತ್ವ ಸ್ವರೂಪವನ್ನುಳ್ಳ ಜ್ಞಾನವೂ, ತಮ್ಮ ತಮ್ಮ ಸ್ವರೂಪಕ್ಕೆ ಘಾತಕಗಳಲ್ಲದ ಅಯೋಗ್ಯಾರ್ಥದಲ್ಲಿ ಪ್ರಯೋಗ, ಮತ್ತು ದುಷ್ಟಕರಣಜನ್ಯತ್ವ ರೂಪವಾದ ದೋಷದಿಂದ ಯುಕ್ತವಾದರೆ, ಮಿಥ್ಯಾಭೂತವಾದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತವೆಯೇ ಹೊರತು, ಸತ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡುವುದಿಲ್ಲ. ಇನ್ನು, ಮಿಥ್ಯಾತ್ವವಂತೂ ಸ್ವರೂಪಘಾತಕವಾದುದು. ಅಂತಹ ಸ್ವರೂಪಘಾತಕವಾದ ಮಿಥ್ಯಾತ್ವರೂಪವಾದ ಮಹಾದೋಷದಿಂದ ಯುಕ್ತವಾದರೆ, ಶಶಶೃಂಗದಂತೆ ಎಂದೂ, ಅದು ಯಾವ ಅರ್ಥವನ್ನೂ ಸಾಧನೆಮಾಡುವುದಿಲ್ಲ. ಮಣಿಪ್ರಭೆಯಲ್ಲಿ ಮಣಿಯ ಭ್ರಾಂತಿಯಿಂದ ಪ್ರವೃತ್ತನಾದವನಿಗೂ ಮಣಿಪ್ರಾಪ್ತಿಯು ಉಂಟಾಗುವುದರಿಂದ, ಮಿಥ್ಯಾಭೂತವಾದ ಅರ್ಥಕ್ಕೆ ಅರ್ಥಕ್ರಿಯಾಕಾರಿತ್ವವು ಇದೆ ಎಂದು ಹೇಳಬಾರದು. ಅಲ್ಲಿ ಮಣಿಯ ಭ್ರಾಂತಿಯಿಂದ ಮಣಿಯ ಪ್ರಾಪ್ತಿಯಾದುದಲ್ಲ, ಮಣಿಪ್ರಾಪ್ತಿಯು ಆಕಸ್ಮಿಕವಾಗಿ ಆದುದು ಎಂದು ಅಭಿಪ್ರಾಯ.

**ಪ್ರಭಾವ್ಯಾಪ್ತತ್ವತೋ ವಾ ಸ್ಯಾನ್ಮಣಿಪ್ರಾಪ್ತಿರ್ನ ಧೀಬಲಾತ್ ।**
**ಕಾಚೇ ನೀಲಮಣಿಭ್ರಾಂತ್ಯಾ ನೀಲಪ್ರಾಪ್ತಿಃ ಕುತೋ ನಚೇತ್ ॥ ೯೯೨ ॥**

**ಅರ್ಥ**-ಪ್ರಭಾವ್ಯಾಪ್ತತ್ವತಃ ವಾ = ಪ್ರಭೆಯಿಂದ ವ್ಯಾಪ್ತವಾದ ಕಾರಣದಿಂದಲೂ, ಮಣಿಪ್ರಾಪ್ತಿಃ ಸ್ಯಾತ್ = ಮಣಿಪ್ರಾಪ್ತಿಯು ಉಂಟಾಗುತ್ತದೆ, ಧೀಬಲಾತ್ ನ = ಮಣಿಯ ಜ್ಞಾನದಿಂದ ಅಲ್ಲ, ನಚೇತ್ = ಇಲ್ಲದಿದ್ದರೆ, ಕಾಚೇ = ಕಾಚದಲ್ಲಿ, ನೀಲಮಣಿಭ್ರಾಂತ್ಯಾ = ನೀಲಮಣಿ ಎಂಬ ಭ್ರಾಂತಿಯಿಂದ, ನೀಲಪ್ರಾಪ್ತಿಃ = ನೀಲಮಣಿಪ್ರಾಪ್ತಿಯು, ಕುತೋ ನ = ಏಕೆ ಉಂಟಾಗುವುದಿಲ್ಲ.

**ಅನುವಾದ- ಅಥವಾ ಮಣಿಯು ಪ್ರಭಾವ್ಯಾಪ್ತವಾದ ಕಾರಣದಿಂದಲೇ ಮಣಿಯು ದೊರೆಯುತ್ತದೆ, ಮಣಿಯ ಜ್ಞಾನದಿಂದಲ್ಲ, ಇಲ್ಲದಿದ್ದರೆ, ಕಾಚದಲ್ಲಿ ನೀಲಮಣಿಯ ಭ್ರಾಂತಿ ಉಂಟಾದಾಗ ನೀಲಮಣಿಯ ಪ್ರಾಪ್ತಿಯು ಏಕೆ ಉಂಟಾಗುವುದಿಲ್ಲ?**

**ಭಾವವಿಲಾಸಿನೀ**- ನಚೇತ್ ಮಣಿಭ್ರಮಾನ್ಮಣೇರಪ್ರಾಪ್ತಿರ್ನ ಚೇತ್ । ನೀಲಪ್ರಾಪ್ತಿಃ ನೀಲಮಣ್ಯಪ್ರಾಪ್ತಿಃ॥ ೯೯೨ ॥

**ವಿವರಣೆ**- ಎಲ್ಲಿ ಮಣಿಪ್ರಭೆಯು ಇರುತ್ತದೆಯೋ ಅಲ್ಲಿ ಮಣಿಯು ಇರುತ್ತದೆ ಎಂಬ ಸತ್ಯವಾದ ವ್ಯಾಪ್ತಿಜ್ಞಾನದಿಂದಲೇ ಮಣಿಯಪ್ರಾಪ್ತಿಯು ಉಂಟಾಗುತ್ತದೆ. ಆದ್ದರಿಂದ ಆಕಸ್ಮಿಕವೆಂದು ಹೇಳದಿದ್ದರೂ ತೊಂದರೆಯಿಲ್ಲ ಎಂದು ಅಭಿಪ್ರಾಯ.

**ಶಾಖಾಚಂದ್ರೋಕ್ತಿತಶ್ಚೈವ ಶಾಖಾಯಾಂ ಚಂದ್ರಧೀರ್ಭವೇತ್ ।**
**ಸ ಚ ನಾಸ್ತಿ ಯತೋ ವಾಕ್ಯಮಮಾನಂ ನಾಪಿ ಚಾರ್ಥವತ್ ॥ ೯೯೩ ॥**

**ಅರ್ಥ**-ಶಾಖಾಚಂದ್ರೋಕ್ತಿತಶ್ಚೈವ = ಶಾಖೆಯನ್ನು ಚಂದ್ರ ಎಂದು ಹೇಳುವ ವಚನದಿಂದಲೂ ಸಹ, ಶಾಖಾಯಾಂ = ಶಾಖೆಯಲ್ಲಿ, ಚಂದ್ರಧೀರ್ಭವೇತ್ = ಚಂದ್ರಜ್ಞಾನವು ಉಂಟಾಗಬೇಕಾದೀತು. ಯತಃ = ಯಾವ ಕಾರಣದಿಂದ, ಸ ಚ ನಾಸ್ತಿ = ಆ ಶಾಖಾರೋಪಿತ ಚಂದ್ರನು ಅವಿದ್ಯಮಾನವಾದುದೋ, ಆದ್ದರಿಂದ, ವಾಕ್ಯಮ್ = ಶಾಖಾಚಂದ್ರವಾಕ್ಯವು, ಅಪ್ರಮಾಣಂ = ಅಪ್ರಮಾಣವಾದುದು, ನಾಪಿ ಚಾರ್ಥವತ್ = ಮತ್ತು ಸತ್ಯವಾದ ಅರ್ಥವುಳ್ಳದಲ್ಲ.

**ಅನುವಾದ- ಶಾಖೆಯನ್ನು ಚಂದ್ರ ಎಂದು ಹೇಳಿದರೂ ಯಾರಿಗೂ ಶಾಖೆಯಲ್ಲಿ ಚಂದ್ರಜ್ಞಾನವು ಬರುವುದಿಲ್ಲ. ಶಾಖೆಯಲ್ಲಿ ಶಾಖಾರೋಪಿತಚಂದ್ರನು ಯಾವ ಕಾರಣದಿಂದ ಅವಿದ್ಯಮಾನವಾದ ವಸ್ತುವೋ, ಆದ್ದರಿಂದ ಆ ವಾಕ್ಯವು ಅಪ್ರಮಾಣ ಮತ್ತು ಸತ್ಯವಾದ ಅರ್ಥವನ್ನು ಉಳ್ಳದ್ದಲ್ಲ.**

**ಭಾವವಿಲಾಸಿನೀ**– ಸಃ ಶಾಖಾಯಾಮಾರೋಪಿತಚಂದ್ರಃ ಯತೋ ನಾಸ್ತಿ ತತೋ ವಾಕ್ಯಮಮಾನಂ ತದಭಾವವತಿ ತತ್ಪ್ರಕಾರಕಜ್ಞಾನಜನಕಮ್ । ಅತ ಏವಾರ್ಥವತ್ ಸತ್ಯಾರ್ಥವದಪಿ ನೇತಿ ಸಂಬಂಧಃ ॥ ೯೯೩ ॥

ಆಭಿಮುಖ್ಯಾಯ ತದ್ವಾಕ್ಯಂ ವದಂತ್ಯಜ್ಞೇಷು ಕೇವಲಮ್ ।
ಚಂದ್ರಪ್ರಾಪ್ತಿಃ ಸ್ವದೃಷ್ಟ್ಯೈವ ಭವೇತ್ತೇನಾಧ್ವನಾ ಶನೈಃ ॥ ೯೯೪ ॥

**ಅರ್ಥ**-ಕೇವಲಮ್ = ಕೇವಲ, ಆಭಿಮುಖ್ಯಾಯ = ಮುಖವನ್ನು ಚಂದ್ರನ ಕಡೆಗೆ ತಿರುಗಿಸುವುದಕ್ಕೋಸ್ಕರ, ಅಜ್ಞೇಷು = ಚಂದ್ರಜ್ಞಾನವಿಲ್ಲದವರಿಗೆ, ತದ್ವಾಕ್ಯಂ = ಆ ವಾಕ್ಯವನ್ನು, ವದಂತಿ = ಹೇಳುತ್ತಾರೆ. ಚಂದ್ರಪ್ರಾಪ್ತಿಃ = ಚಂದ್ರಪ್ರಾಪ್ತಿಯಾದರೋ, ತೇನಾಧ್ವನಾ = ಆ ಶಾಖೆಯ ದಿಕ್ಕಿನಲ್ಲಿ, ಶನೈಃ = ನಿಧಾನವಾಗಿ, ಸ್ವದೃಷ್ಟ್ಯೈವ = ತನ್ನ ಚಕ್ಷುಸ್ಸಿನಿಂದಲೇ, ಭವೇತ್ = ಉಂಟಾಗುತ್ತದೆ.

**ಅನುವಾದ**- ಕೇವಲ ಮುಖವನ್ನು ಚಂದ್ರನ ಕಡೆಗೆ ತಿರುಗಿಸುವುದಕ್ಕಾಗಿ, ಚಂದ್ರಜ್ಞಾನವಿಲ್ಲದವರನ್ನು ಕುರಿತು, ಆ ವಾಕ್ಯವನ್ನು ಪ್ರಯೋಗಿಸುತ್ತಾರೆ. ಚಂದ್ರಪ್ರಾಪ್ತಿಯಾದರೋ ಆ ದಿಕ್ಕಿನಲ್ಲಿ ಕಣ್ಣನ್ನು ಹಾಯಿಸುವುದರಿಂದ ನಿಧಾನವಾಗಿ ತನ್ನ ಕಣ್ಣುಗಳಿಂದಲೇ ಆಗುತ್ತದೆ.

**ಭಾವವಿಲಾಸಿನೀ**– ಅಭಾವೇ ಕುತಸ್ತದ್ವಾಕ್ಯಂ ಕಥ್ಯತ ಇತ್ಯತ ಆಹ – **ಅಭಿಮುಖ್ಯಾಯೇತಿ**॥ ತದ್ವಾಕ್ಯಂ ಶಾಖೈವ ಚಂದ್ರ ಇತಿ ವಾಕ್ಯಮ್ । ತೇನಾಧ್ವನಾ ಶಾಖಾಧ್ವನಾ ॥ ೯೯೪ ॥

**ವಿವರಣೆ**- ಶಾಖಾಚಂದ್ರ ವಾಕ್ಯವು ಅಂಗೀಕೃತವಾದರೂ ಅದಕ್ಕೆ ಬೇರೆಯೇ ಪ್ರಯೋಜನವಿದೆ ಹೊರತಾಗಿ ಚಂದ್ರಪ್ರಾಪ್ತಿಯು ಆ ವಾಕ್ಯದ ಪ್ರಯೋಜನವಲ್ಲವೆಂದು ಇಲ್ಲಿ ಸಾಧಿಸುತ್ತಾರೆ.

ಮಿಥ್ಯಾವಾಕ್ಯಸ್ಯ ಯೋ ಹ್ಯರ್ಥಃ ಸ ಸತ್ಯಃ ಕುತ್ರ ಭಣ್ಯತಾಮ್ ।
ಯಃ ಸ್ಥೂಲಾರುಂಧತೀನ್ಯಾಯಃ ಸೋಽಪ್ಯೇವಮಭಿಸಂಹಿತಃ ॥ ೯೯೫ ॥

**ಅರ್ಥ**-ಮಿಥ್ಯಾವಾಕ್ಯಸ್ಯ = ಮಿಥ್ಯಾಭೂತವಾದ ವಾಕ್ಯಕ್ಕೆ, ಯೋ ಅರ್ಥಃ = ಯಾವ ಅರ್ಥವಿದೆಯೋ, ಸಃ = ಅದು, ಕುತ್ರ = ಎಲ್ಲಿ, ಸತ್ಯಃ = ಸತ್ಯವಾಗಿದೆ ಎಂದು, ಭಣ್ಯತಾಮ್ = ಹೇಳಲ್ಪಡಲಿ, ಯಸ್ಥೂಲಾರುಂಧತೀನ್ಯಾಯಃ = ಸ್ಥೂಲತಾರೆಯನ್ನೇ ಅರುಂಧತಿ ಎಂದು ತೋರಿಸಿತ್ತಾರೆ ಎಂದು ನಿನ್ನ ಯಾವ ನ್ಯಾಯವಿದೆಯೋ, ಸೋಽಪಿ = ಅದೂ ಕೂಡ, ಏವಂ = ಶಾಖಾಚಂದ್ರನ್ಯಾಯದಂತೆಯೇ, ಅಭಿಸಂಹಿತಃ = ವ್ಯಾಖ್ಯಾನಮಾಡಲ್ಪಡುತ್ತದೆ.

**ಅನುವಾದ-** ಮಿಥ್ಯಾಭೂತವಾದ ವಾಕ್ಯದ ಅರ್ಥವು ಎಲ್ಲಿ ಸತ್ಯವಾಗಿದೆ ಎಂದು ಹೇಳು. ನೀನು ಹೇಳುವ ಸ್ಥೂಲಾರುಂಧತೀನ್ಯಾಯವು ಶಾಖಾಚಂದ್ರನ್ಯಾಯದಂತೆಯೇ ನಿರ್ವಾಹಮಾಡಲ್ಪಡುತ್ತದೆ.

**ಭಾವವಿಲಾಸಿನೀ–** ಮಿಥ್ಯಾವಾಕ್ಯಸ್ಯ ಮಿಥ್ಯಾಭೂತಾರ್ಥೇ ಪ್ರಯುಕ್ತಸ್ಯ ಶಾಖೈವ ಚಂದ್ರ ಇತ್ಯಾದಿವಾಕ್ಯಸ್ಯ । ಸಃ ಅರ್ಥಃ । ಮಿಥ್ಯಾಭೂತಸ್ಯ ವಾಕ್ಯಸ್ಯ ತು ಮೂಕಮುಖವಾಕ್ಯಸ್ಯೇವಾರ್ಥ ಏವ ನಾಸ್ತಿ । ಸತ್ಯಾರ್ಥಸ್ತು ದೂರಾಪಾಸ್ತಃ । ನಹ್ಯಾಂಧ್ಯೇಽಪಿ ಗಮನಾಸಮರ್ಥಃ ಸ್ವಮರಣೇ ಸತಿ ಗಚ್ಛನ್ಕ್ವಾಪಿ ದೃಷ್ಟ ಇತಿ ಭಾವಃ । ಏವಂ ಶಾಖಾಚಂದ್ರವಾಕ್ಯನ್ಯಾಯೇನ ॥ ೯೫ ॥

**ವಿವರಣೆ-** ಮಿಥ್ಯಾಭೂತವಾದ ಅರ್ಥದಲ್ಲಿ ಪ್ರಯುಕ್ತವಾದ ಶಾಖಾಚಂದ್ರವಾಕ್ಯದಲ್ಲಿಯೂ ಸಹ ಮಿಥ್ಯಾಭೂತವಾದ ಅರ್ಥವಿಲ್ಲ. ಶಾಖೆಯು ಚಂದ್ರನಲ್ಲ. ಇನ್ನು, ವಾಕ್ಯವೇ ಮಿಥ್ಯಾಭೂತವಾದರೆ, ಸತ್ಯಾರ್ಥವು ದೂರತೋಪಾಸ್ತವಾಗುತ್ತದೆ. ಮೂಕನ ವಚನದಿಂದ, ಮೂಕನ ವಚನದಂತಿರುವ ಮಿಥ್ಯಾವಾಕ್ಯದಿಂದ ಎಂದಾದರೂ, ಏನಾದರೂ ಸಿದ್ಧವಾಗುತ್ತದೆಯೇ? ಕುರುಡುತನವಿರುವಾಗಲೂ ನಡೆಯಲು ಅಸಮರ್ಥನಾದವನು ತನ್ನ ಮರಣವುಂಟಾದ ಮೇಲೆ ನಡೆಯಲು ಸಮರ್ಥನಾಗುತ್ತಾನೆಯೇ ಎಂದು ಅಭಿಪ್ರಾಯ.

**ಅತೋ ಭ್ರಾಂತೇನ ಬೋಧ್ಯೋಽರ್ಥೋ ನೈವಾಭ್ರಾಂತಃ ಕ್ವಚಿದ್ ಭವೇತ್ ।**
**ಅತೋ ಮಿಥ್ಯಾಶ್ರುತೇರರ್ಥಸ್ತವೈಕ್ಯಂ ಚ ಮೃಷಾ ಭವೇತ್ ॥ ೯೬ ॥**

**ಅರ್ಥ-**ಅತಃ = ಆದ್ದರಿಂದ, ಭ್ರಾಂತೇನ = ಭ್ರಾಂತಕಲ್ಪಿತ ವಾಕ್ಯದಿಂದ, ಬೋಧ್ಯೋ ಅರ್ಥಃ = ಬೋಧ್ಯವಾದ ಅರ್ಥವು, ಕ್ವಚಿತ್ = ಎಂದೂ, ಅಭ್ರಾಂತಃ = ಸತ್ಯವಾಗಿ, ನೈವಭವೇತ್ = ಆಗುವುದೇ ಇಲ್ಲ, ಅತಃ = ಆದ್ದರಿಂದ, ಮಿಥ್ಯಾಶ್ರುತೇಃ = ಮಿಥ್ಯಾಭೂತವಾದ ಶ್ರುತಿಯ, ಅರ್ಥಃ = ಅರ್ಥವಾದ, ತವೈಕ್ಯಂ ಚ = ನಿನ್ನ ಐಕ್ಯವೂ ಕೂಡ, ಮೃಷಾ ಭವೇತ್ = ಮಿಥ್ಯೆಯೇ ಆಗುತ್ತದೆ.

**ಅನುವಾದ-** ಆದ್ದರಿಂದ ಎಂದರೆ, ಸ್ವಲ್ಪದೋಷವಿದ್ದರೂ, ವಾಕ್ಯವು ಸತ್ಯಾರ್ಥ-ಪ್ರತಿಪಾದಕವಾಗುವುದಿಲ್ಲವಾದ್ದರಿಂದ, ವಾಕ್ಯವೇ ಮಿಥ್ಯಾಭೂತವಾದುದು ಎಂದು ಅಂಗೀಕರಿಸಿದರೆ, ಮಿಥ್ಯಾಭೂತವಾದ ಶ್ರುತಿಗೆ ಅರ್ಥವಾದ ನಿನ್ನ ಐಕ್ಯವೂ ಮಿಥ್ಯಾಭೂತವಾಗುತ್ತದೆ ಎಂದೇ ಅಭಿಪ್ರಾಯ.

**ಭಾವವಿಲಾಸಿನೀ–**ಅತಃ ಉಕ್ತರೀತ್ಯಾ ಈಷದಾಭಾಸವಾಕ್ಯಾನಾಮಪಿ ಸತ್ಯಾರ್ಥಾದರ್ಶನಾತ್ । ಭ್ರಾಂತೇನ ಭ್ರಾಂತಕಲ್ಪಿತವಾಕ್ಯೇನ । ಭ್ರಾಂತಿಕಲ್ಪಿತೋ ಅಭ್ರಾಂತಸ್ಯ ನ ಭವತೀತ್ಯಭ್ರಾಂತಃ ಸತ್ಯ ಇತ್ಯರ್ಥಃ । ಅತಃ ಮಿಥ್ಯಾಭೂತವಾಕ್ಯಸ್ಯ ಅರ್ಥಾದರ್ಶನಾತ್ ಸತ್ಯಾರ್ಥಸ್ಯ ಸುತರಾಮು-ದರ್ಶನಾಚ್ಚ । ಮಿಥ್ಯಾಶ್ರುತೇಃ ತವೈಕ್ಯಮ್ ಅರ್ಥ ಇತ್ಯೇವಮೃಷಾ । ಅರ್ಥತ್ವೇಽಪಿ ತವೈಕ್ಯಮೇವ ಮೃಷಾ ಮಿಥ್ಯಾಭೂತಮೇವೇತಿ ದ್ವೇಧಾಪಿ ಯೋಜನಾ ದ್ರಷ್ಟವ್ಯಾ ॥ ೯೬ ॥

ಉಪಜೀವ್ಯವಿರೋಧೇನ ಹ್ಯುಪಜೀವಕನಾಶನಮ್ ।
ವದಂತಿ ಶಿಷ್ಟಾಸ್ತಸ್ಯೇದಂ ಸ್ಪಷ್ಟಮಾಸೀನ್ನಿದರ್ಶನಮ್ ॥ ೯೯೭ ॥

ಯತೋ ಮಾನಸ್ಯ ಮಿಥ್ಯಾತ್ವೇ ಮೇಯಂ ಮಿಥ್ಯೇತಿ ನಿಶ್ಚಿತಮ್ ।
ತೇ ಬ್ರಹ್ಮಣಿ ತದದ್ವೈತೇ ತಸ್ಮಾದಾಶಾ ವೃಥಾ ತವ ॥ ೯೯೮ ॥

**ಅರ್ಥ-** ಉಪಜೀವ್ಯವಿರೋಧೇನ = ಉಪಜೀವ್ಯವಿರೋಧದಿಂದ, ಉಪಜೀವಕನಾಶನಮ್ = ಉಪಜೀವಕದ ನಾಶವನ್ನು, ಶಿಷ್ಟಾಃ = ಶಿಷ್ಟರು, ವದಂತಿ = ಹೇಳುತ್ತಾರೆ, ತಸ್ಯ = ಅದಕ್ಕೆ, ಇದಂ = ಮಿಥ್ಯಾಭೂತಶ್ರುತಿಯಿಂದ ಪ್ರತಿಪಾದ್ಯವಾದ ಐಕ್ಯವು, ಸ್ಪಷ್ಟಮ್ = ಸ್ಪಷ್ಟವಾಗಿ, ನಿದರ್ಶನಮಾಸೀತ್ = ನಿದರ್ಶನವಾಯಿತು.

ಯತಃ = ಏಕೆಂದರೆ, ಮಾನಸ್ಯ ಮಿಥ್ಯಾತ್ವೇ = ಪ್ರಮಾಣವು ಮಿಥ್ಯೆಯಾದರೆ, ಮೇಯಂ ಮಿಥ್ಯೇತಿ = ಮೇಯವೂ ಮಿಥ್ಯವಾದುದೇ ಎಂದು, ನಿಶ್ಚಿತಮ್ = ನಿಶ್ಚಿತವಾಗಿವೆ, ತಸ್ಮಾತ್ = ಆದ್ದರಿಂದ, ತೇ = ನಿನ್ನ, ಬ್ರಹ್ಮಣಿ = ಬ್ರಹ್ಮನಲ್ಲಿಯೂ, ತದದ್ವೈತೇ = ಆ ಬ್ರಹ್ಮನ ಐಕ್ಯದಲ್ಲಿಯೂ, ತವ ಆಶಾ = ನಿನ್ನ ಆಸೆಯು, ವೃಥಾ = ವ್ಯರ್ಥವಾದುದು.

**ಅನುವಾದ-** ಉಪಜೀವ್ಯವಿರೋಧವುಂಟಾದರೆ, ಉಪಜೀವಕವು ನಾಶವನ್ನು ಹೊಂದುತ್ತದೆ ಎಂದು ಶಿಷ್ಟರು ಹೇಳುತ್ತಾರಷ್ಟೇ ? ಅದಕ್ಕೆ ಮಿಥ್ಯಾಭೂತಶ್ರುತಿಯಿಂದ ಪ್ರತಿಪಾದ್ಯಮಾನವಾದ ಮಿಥ್ಯಾತ್ವವು ಸ್ಪಷ್ಟವಾದ ನಿದರ್ಶನವಾಯಿತು. ಯಾವ ಕಾರಣದಿಂದ ಪ್ರಮಾಣವು ಮಿಥ್ಯೆಯಾದರೆ, ಆ ಪ್ರಮಾಣಕ್ಕೆ ವಿಷಯವಾದ ಪ್ರಮೇಯವೂ ಮಿಥ್ಯೆ ಎಂದು ನಿಶ್ಚಿತವಾಗಿದೆಯೋ, ಆ ಕಾರಣದಿಂದ ನಿನ್ನ ನಿರ್ಗುಣಬ್ರಹ್ಮನಲ್ಲಿಯೂ ಮತ್ತು ನಿರ್ಗುಣಬ್ರಹ್ಮೈಕ್ಯದಲ್ಲಿಯೂ ನಿನ್ನ ಆಸೆಯು ವ್ಯರ್ಥವಾದುದು.

**ಭಾವವಿಲಾಸಿನೀ-** ಮಾನಸ್ಯ ಉಪಜೀವಸ್ಯ । ಮೇಯಮ್ ಉಪಜೀವಕಮ್ । ತಸ್ಮಾದುಪಜೀವ್ಯಪ್ರಮಾಣಮಿಥ್ಯಾತ್ವೇ ಉಪಜೀವಕಪ್ರಮೇಯಮಿಥ್ಯಾತ್ವಸ್ಯಾವರ್ಜನೀಯತ್ವಾತ್ । ತೇ ಬ್ರಹ್ಮಣಿ ತವ ನಿರ್ಗುಣಬ್ರಹ್ಮಣಿ । ತದದ್ವೈತೇ ತೇನ ಬ್ರಹ್ಮಣಾ ಜೀವಾದ್ವೈತೇ । ವೇದಸ್ಯ ಮಿಥ್ಯಾತ್ವೇ ವೇದಬೋಧ್ಯಯೋರನಯೋರಪಿ ಮಿಥ್ಯಾತ್ವಾಪರಿಹಾರಾದಿತಿ ಭಾವಃ ॥೯೯೭-, ೯೯೮ ॥

**ವಿವರಣೆ-** ವೇದವು ಉಪಜೀವ್ಯ. ಅದರಿಂದ ಪ್ರತಿಪಾದ್ಯಮಾನವಾದ ಅರ್ಥವು ಉಪಜೀವಕ. ವೇದವೇ ಅಪ್ರಮಾಣವಾಗಿರುವಾಗ, ಅದರಿಂದ ನಿರ್ಗುಣಬ್ರಹ್ಮಸಿದ್ಧಿಯಾಗಲೀ, ನಿರ್ಗುಣ ಬ್ರಹ್ಮೈಕ್ಯಸಿದ್ಧಿಯಾಗಲೀ ಆಗುವುದಿಲ್ಲ ಎಂದು ಅಭಿಪ್ರಾಯ.

ಸ್ವತಸ್ಸಿದ್ಧಿಸ್ತ್ವವೇದ್ಯತ್ವರೂಪತ್ವಾನ್ನಾರ್ಥಸಾಧಿಕಾ ।
ನ ವಿವಾದಿನಿ ಸಾ ವಕ್ತುಂ ಶಕ್ಯತೇ ಯಾ ತ್ವಯೋದಿತಾ ॥ ೯೯೯ ॥

**ಅರ್ಥ**-ಸ್ವತಸ್ಸಿದ್ಧಿಃ = ಸ್ವಪ್ರಕಾಶತ್ವವು, ಅವೇದ್ಯತ್ವರೂಪತ್ವಾತ್ = ಅವೇದ್ಯತ್ವ-ರೂಪವಾದುದರಿಂದ, ಅರ್ಥಸಾಧಿಕಾ ನ = ಅರ್ಥಸಾಧಕವಾಗುವುದಿಲ್ಲ. ತ್ವಯೋದಿತಾ = ನಿನ್ನಿಂದ ಹೇಳಲ್ಪಟ್ಟ. ಯಾ = ಯಾವ, ಸಾ = ಆ ಸ್ವಪ್ರಕಾಶತ್ವವು, ವಿವಾದಿನಿ = ಸ್ವಪ್ರಕಾಶತ್ವಸ್ವರೂಪದಲ್ಲಿ ವಿವಾದಮಾಡುವ ವಾದಿಯನ್ನು ಕುರಿತು, ವಕ್ತುಂ ನ ಶಕ್ಯತೇ = ಹೇಳಲು ಸಾಧ್ಯವಿಲ್ಲ.

**ಅನುವಾದ**- ಸ್ವಪ್ರಕಾಶತ್ವವು ಅವೇದ್ಯತ್ವರೂಪವಾಗಿರುವುದರಿಂದ ಅದು ಬ್ರಹ್ಮರೂಪವಾದ ಅರ್ಥವನ್ನು ಸಾಧಿಸಿಕೊಡುವುದಿಲ್ಲ. ನೀನು ಹೇಳಿದ ಆ ಸ್ವಪ್ರಕಾಶತ್ವವನ್ನು ಅದರ ಸ್ವರೂಪವನ್ನು ಕುರಿತೇ ವಿವಾದವನ್ನು ಮಾಡುವ ವ್ಯಕ್ತಿಗೆ ಹೇಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ**– ನನು ಮಾಸ್ತು ತರ್ಹಿ ವೇದಾದ್ಬ್ರಹ್ಮಣಃ ಸಿದ್ಧಿಃ । ಕಿಂತು ಸ್ವಪ್ರಕಾಶತ್ವಾದೇವೇತ್ಯತ ಆಹ – **ಸ್ವತಃ ಸಿದ್ಧಿರಿತಿ** ॥ ಭವನ್ಮತೇ ಸ್ವಪ್ರಕಾಶತ್ವಸ್ಯಾವೇದ್ಯತ್ವರೂಪತ್ವಾನ್ನ ತೇನಾಪಿ ಬ್ರಹ್ಮಸಿದ್ಧಿರಿತಿ ಭಾವಃ । ವಿವಾದಿನಿ ಸ್ವಪ್ರಕಾಶತ್ವ ಏವ ವಿವಾದಂ ಕುರ್ವತಿತಾರ್ಕಿಕಾದೌ ಬ್ರಹ್ಮಣ್ಯೇವ ವಿವಾದಂ ಕುರ್ವತಿ ಮೀಮಾಂಸಕಾದೌ । ಬ್ರಹ್ಮೈವ ನಾಸ್ತೀತಿ ವದಂತಂ ಪ್ರತಿ ಬ್ರಹ್ಮವಿಷಯಿಣೀ ಬ್ರಹ್ಮಕರ್ತೃಕೈವ ಪ್ರತೀತಿಃ ಕಥಮನ್ಯಾನ್‌ಪ್ರತಿ ಸಾಧಕತಯಾ ವಕ್ತುಂ ಶಕ್ಯೇತಿ ಭಾವಃ । ಯಾ ಸ್ವತಃ ಸಿದ್ಧಿ ॥ ೯೯೯ ॥

**ವಿವರಣೆ**- ವೇದದಿಂದ ಬ್ರಹ್ಮನ ಸಿದ್ಧಿಯಾಗದಿದ್ದರೆ ಬೇಡ. ಸ್ವಪ್ರಕಾಶನಾದುದರಿಂದಲೇ ಬ್ರಹ್ಮನು ಸಿದ್ಧನಾಗುತ್ತಾನೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ನಿನ್ನ ಮತದಲ್ಲಿ ಸ್ವಪ್ರಕಾಶತ್ವವು ಅವೇದ್ಯತ್ವರೂಪವಾಗಿರುವುದರಿಂದ ಅದರಿಂದ ಬ್ರಹ್ಮಸಿದ್ಧಿಯಾಗುವುದಿಲ್ಲ ಎಂದು ಅಭಿಪ್ರಾಯ. ನೈಯಾಯಿಕರು ಸ್ವಪ್ರಕಾಶತ್ವವೆಂಬ ಒಂದು ಪದಾರ್ಥವನ್ನೇ ಅಂಗೀಕರಿಸುವುದಿಲ್ಲ. ಮೀಮಾಂಸಕಾದಿಗಳು ಬ್ರಹ್ಮನನ್ನೇ ಅಂಗೀಕರಿಸುವುದಿಲ್ಲ. ಬ್ರಹ್ಮನೇ ಇಲ್ಲವೆಂದು ಹೇಳುವ ವಾದಿಯನ್ನು ಕುರಿತು ಬ್ರಹ್ಮನು ಸ್ವಪ್ರಕಾಶನಾದುದರಿಂದ ಸಿದ್ಧನಾಗುತ್ತಾನೆ ಎಂದು ಹೇಳುವುದು ಅಸಂಗತವಾಗುತ್ತದೆ ಎಂದು ಅಭಿಪ್ರಾಯ.

ಅನ್ಯಥಾ ಸ್ವಪ್ರಕಾಶತ್ವಾದ್ ಘಟಸಿದ್ಧಿರ್ಭವೇನ್ಮಮ ।
ಸ್ವಪರಾವಿಷಯಜ್ಞಾನಂ ಘಟೋಽಪಿ ನ ಕಥಂ ವದ ॥ ೧೦೦೦ ॥

**ಅರ್ಥ**-ಅನ್ಯಥಾ = ಅವೇದ್ಯತ್ವರೂಪವಾದ, ಸ್ವಪ್ರಕಾಶತ್ವಾದ್ = ಸ್ವಪ್ರಕಾಶತ್ವದಿಂದಲೂ ಬ್ರಹ್ಮನ ಸಿದ್ಧಿಯಾಗುವುದಾದರೆ, ಮಮ = ನನಗೆ, ಘಟಸಿದ್ಧಿಃ = ಘಟಸಿದ್ಧಿಯು, ಭವೇತ್ = ಸ್ವಪ್ರಕಾಶತ್ವದಿಂದ ಉಂಟಾಗಲಿ, ಘಟೋಽಪಿ = ಘಟವಾದರೂ ಕೂಡ, ಸ್ವಪರಾವಿಷಯಜ್ಞಾನಂ = ಸ್ವಪರವಿಷಯಕವಲ್ಲದ ಜ್ಞಾನವಾಗಿ, ಕಥಂ ನ = ಹೇಗೆ ಆಗುವುದಿಲ್ಲ ಎಂದು, ವದ = ಹೇಳು.

**ಅನುವಾದ-** ಅವೇದ್ಯತ್ವರೂಪವಾದ ಸ್ವಪ್ರಕಾಶತ್ವದಿಂದಲೂ ಬ್ರಹ್ಮಸಿದ್ಧಿಯಾಗುವುದಾದರೆ, ಅಂತಹ ಸ್ವಪ್ರಕಾಶತ್ವವು ಘಟಕ್ಕೂ ಉಂಟಾಗಿ, ಘಟವೂ ಸ್ವಪ್ರಕಾಶತ್ವದಿಂದಲೇ ಸಿದ್ಧವಾಗಲಿ. ಘಟವೂ ಕೂಡ ಸ್ವವಿಷಯವಲ್ಲದ ಮತ್ತು ಪರವಿಷಯವಲ್ಲದ ಜ್ಞಾನವು ಹೇಗೆ ಆಗುವುದಿಲ್ಲ ಎಂದು ಹೇಳು.

**ಭಾವವಿಲಾಸಿನೀ–** ಅನ್ಯಥಾ ಅವೇದ್ಯತ್ವರೂಪಸ್ವಪ್ರಕಾಶತ್ವಾದಪಿ ಬ್ರಹ್ಮಸಿದ್ಧ್ಯಂಗೀಕಾರೇ । ಏತಾದೃಶಸ್ವಪ್ರಕಾಶತ್ವಸ್ಯ ಘಟೇಪ್ಯಂಗೀಕರ್ತುಂ ಶಕ್ಯತ್ವಾತ್ । ನನ್ವಪರೋಕ್ಷ-ವ್ಯವಹಾರಯೋಗ್ಯತ್ವಮಪಿ ಸ್ವಪ್ರಕಾಶತ್ವಾಂತರ್ಗತಮ್ । ಅತಃ ಕಥಂ ಘಟಸ್ಯ ಸ್ವಪ್ರಕಾಶತ್ವಮಿತಿ ಚೇತ್ ನ । ಅವೇದ್ಯೇ ವೇದನಜನ್ಯವ್ಯವಹಾರಾಯೋಗೇನ ಲಕ್ಷಣಸ್ಯ ಪರಸ್ಪರವಿರುದ್ಧತಯಾಽ-ಸಂಭಾವಿತತ್ವಾತ್ । ಚಿದವೇದ್ಯತ್ವಮೇವಾವೇದ್ಯತ್ವಂ ನ ಸರ್ವಥಾಽವೇದ್ಯತ್ವಮಿತಿ ಚೇತ್ತರ್ಹಿ ಚಿದವೇದ್ಯೇ ಬ್ರಹ್ಮಣಿ ವ್ಯವಹಾರೋಽಪಿ ನ ಚಿಜ್ಜನ್ಯಃ । ಸ್ವಾವೇದ್ಯೇ ಚಿತಾ ವ್ಯವಹಾರಜನನಾ-ಯೋಗಾತ್ । ಕಿಂತು ವೃತ್ತಿಜನ್ಯ ಏವ ವಕ್ತವ್ಯಃ । ಏವಂಚ ಮುಕ್ತೌ ಸ್ವಪ್ರಕಾಶತ್ವಂ ನ ಸ್ಯಾತ್ । ಸ್ಯಾಚ್ಚ ಸ್ವಾವೇದ್ಯೇ ಕೇವಲವೃತ್ತಿವೇದ್ಯೇ ತಜ್ಜನ್ಯಾಪರೋಕ್ಷವ್ಯವಹಾರಯೋಗ್ಯೇ ಚ ಘಟಾದೌ ಸ್ವಪ್ರಕಾಶತ್ವಮ್ । ಯದಿ ಚ ಚಿದವೇದ್ಯತ್ವಮೇವ ಸ್ವಪ್ರಕಾಶತ್ವಮ್ । ತಚ್ಚ ಪರಂಪರಯಾ ಸಾಕ್ಷಿವೇದ್ಯತ್ವಾನ್ನ ಘಟಾದೇರೀತಿ ಮತಮ್ । ತರ್ಹಿ ಚಿದಚಿತ್ ಸಂವಲನಾತ್ಮಕ-ಮನೋವೇದ್ಯಾಯಾಮ್ ಅಹಮಜ್ಞ ಇತ್ಯಜ್ಞಾನದ್ವಾರಾ ಚ ಸ್ವವೇದ್ಯಾಯಾಂ ಚಿತ್ಯಪಿ ನ ಚಿದವೇದ್ಯತ್ವಮ್ । ಅತಃ ಸಾಕ್ಷಾತ್ ಚಿದವೇದ್ಯತ್ವಂ ಲಕ್ಷಣಾರ್ಥೋ ವಕ್ತವ್ಯಃ । ಸ ಚ ಘಟಾದಾವಪಿ ಸಮಃ । ನಚ ವಾಚ್ಯಂ ಮನ್ಮತೇ ಘಟಾದೇಃ ಸಾಕ್ಷಾದಧಿಷ್ಠಾನಚಿದ್ವೇದ್ಯತ್ವೇನ ನ ಚಿದವೇದ್ಯತ್ವ-ಮಿತಿ । ತಥಾ ಸತಿ ನಿರಧಿಷ್ಠಾನಭ್ರಮಾಯೋಗೇನ ತತ್ರೈವಾಧಿಷ್ಠಾನಚಿತೋಽಪ್ಯುಲ್ಲೇಖಾ-ವಶ್ಯಂಭಾವತ್ ಘಟಸ್ಯೇವ ಚಿತೋಽಪಿ ಚಿದ್ವೇದ್ಯತ್ವಮಪರಿಹಾರ್ಯಮೇವ । ಏತತ್ ಸರ್ವಮಭಿಪ್ರೇತ್ಯೋಕ್ತಂ ಸ್ವಪ್ರಕಾಶತ್ವಾದ್ಘಟಸಿದ್ಧಿರ್ಭವೇನ್ಮಮೇತಿ । ಸ್ವಪರಾವಿಷಯಜ್ಞಾನಂ ಸ್ವಾವಿಷಯಂ ಪರಾವಿಷಯಂ ಜ್ಞಾನಂ ವಸ್ತುಗತ್ಯಾ ಸವಿಷಯಕತ್ವಾಖ್ಯಜ್ಞಾನಲಕ್ಷಣರಹಿತಂ ಸಂಕೇತೇನ ಜ್ಞಾನಶಬ್ದವಾಚ್ಯಮಿತ್ಯರ್ಥಃ ॥ ೧೦೦೦ ॥

**ವಿವರಣೆ-** ಘಟದಲ್ಲಿ ಸ್ವಪ್ರಕಾಶತ್ವವನ್ನು ಒಪ್ಪಲು ಸಾಧ್ಯವಿಲ್ಲ. ಸ್ವಪ್ರಕಾಶತ್ವವೆಂದರೆ ಅಪರೋಕ್ಷವ್ಯವಹಾರಯೋಗ್ಯತ್ವ. ಅದು ಘಟದಲ್ಲಿ ಇಲ್ಲ ಎಂದು ಶಂಕೆಯನ್ನು ಮಾಡಿದರೆ, ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರ-ಯೋಗ್ಯತ್ವರೂಪವಾದ ಸ್ವಪ್ರಕಾಶತ್ವವು ವಿರುದ್ಧವಾದುದು. ಎಂದರೆ, ಅವೇದ್ಯತ್ವವಿದ್ದರೆ, ಅಪರೋಕ್ಷ- ವ್ಯವಹಾರಯೋಗ್ಯತ್ವವಿಲ್ಲ. ಅಪರೋಕ್ಷ ವ್ಯವಹಾರಯೋಗ್ಯತ್ವವಿದ್ದರೆ, ಅವೇದ್ಯತ್ವವಿಲ್ಲ. ಅವೇದ್ಯತ್ವವೆಂದರೆ ಚಿದವೇದ್ಯತ್ವ ಹೊರತು ಸರ್ವಥಾ ಅವೇದ್ಯತ್ವವಲ್ಲ ಎಂದು ಹೇಳಿದರೆ, ಚಿದವೇದ್ಯನಾದ ಬ್ರಹ್ಮನ ವ್ಯವಹಾರವು ಚೈತನ್ಯದಿಂದ ಉಂಟಾಗುವುದಿಲ್ಲ. ಏಕೆಂದರೆ, ವ್ಯವಹಾರಜನಕವಾದ ಚೈತನ್ಯವು ತನ್ನಿಂದ ಅವೇದ್ಯವಾದ ಚೇತನನಲ್ಲಿ ಯಾವ ವ್ಯವಹಾರವನ್ನೂ ಉಂಟುಮಾಡುವುದಿಲ್ಲ. ಆದ್ದರಿಂದ ಚಿದ್‌ವ್ಯವಹಾರವು ವೃತ್ತಿಜನ್ಯ ಎಂದು

ಅಂಗೀಕರಿಸಬೇಕು. ಹೀಗೆ ಹೇಳಿದರೆ ಮೋಕ್ಷದಲ್ಲಿ ಸ್ವಪ್ರಕಾಶತ್ವವು ಇರದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ. ಒಂದುಪಕ್ಷ ಚಿದವೇದ್ಯತ್ವವೇ ಸ್ವಪ್ರಕಾಶತ್ವವೆಂದು ಹೇಳಿ ಘಟಾದಿಗಳಿಗೆ ಪರಂಪರಯಾ ಸಾಕ್ಷಿರೂಪ ಚಿದ್ವೇದ್ಯತ್ವವೇ ಇರುವುದರಿಂದ ಅಲ್ಲಿ ಅವೇದ್ಯತ್ವರೂಪವಾದ ಸ್ವಪ್ರಕಾಶತ್ವವು ಇಲ್ಲ ಎಂದು ಹೇಳುವುದಾದರೆ ಚಿದಚಿತ್‌ಸಂವಲನರೂಪವಾದ, ಮನೋವೇದ್ಯವಾದ ಮತ್ತು ಅಹಮಜ್ಞಃ ಎಂದು ಅಜ್ಞಾನದ್ವಾರಾ ಸ್ವವೇದ್ಯವಾದ ಚೈತನ್ಯದಲ್ಲಿಯೂ, ಪರಂಪರಯಾ ಚಿದ್ವೇದ್ಯತ್ವವೇ ಬರುವುದರಿಂದ ಅಲ್ಲಿಯೂ ಚಿದವೇದ್ಯತ್ವರೂಪವಾದ ಸ್ವಪ್ರಕಾಶತ್ವವಿಲ್ಲ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಸಾಕ್ಷಾತ್ ಚಿದವೇದ್ಯತ್ವವೇ ಸ್ವಪ್ರಕಾಶತ್ವ ಎಂದು ಹೇಳಬೇಕು. ವೃತ್ತಿದ್ವಾರಾ ಚಿದ್ ವಿಷಯವಾದ ಘಟದಲ್ಲಿ ಅಂತಹ ಲಕ್ಷಣವು ಬರುತ್ತದೆ. ನನ್ನ ಮತದಲ್ಲಿ (ಅದ್ವೈತಮತದಲ್ಲಿ) ಘಟಾದಿಗಳಿಗೆ ಸಾಕ್ಷಾತ್ ಅಧಿಷ್ಠಾನಚಿದ್ವೇದ್ಯತ್ವವನ್ನು ಅಂಗೀಕರಿಸುತ್ತೇವೆ, ಆದ್ದರಿಂದ ಸ್ವಪ್ರಕಾಶತ್ವವಿಲ್ಲ ಎಂದು ಹೇಳಲು ಬರುವುದಿಲ್ಲ. ಹಾಗೆ ಹೇಳಿದರೆ ನಿರಧಿಷ್ಠಾನಕಭ್ರಮವು ಕೂಡುವುದಿಲ್ಲವಾದ್ದರಿಂದ, ಘಟಜ್ಞಾನದಲ್ಲಿಯೇ ಅಧಿಷ್ಠಾನಚೈತನ್ಯದ ಉಲ್ಲೇಖವು ಅವಶ್ಯವಾಗಿ ಇರಬೇಕಾಗುವುದರಿಂದ ಘಟದಂತೆ ಚೈತನ್ಯಕ್ಕೂ ಚೈತನ್ಯವೇದ್ಯತ್ವವು ಬಂದೇ ಬರುತ್ತದೆ. ಮೋಕ್ಷದಲ್ಲಿ ಬ್ರಹ್ಮನು ಜ್ಞಾನವೆಂದು ಒಪ್ಪಿದರೂ ಆ ಜ್ಞಾನಕ್ಕೆ ಬ್ರಹ್ಮನೂ ವಿಷಯವಲ್ಲ, ಇತರವೂ ವಿಷಯವಲ್ಲ. ಅಂತಹ ಒಂದು ಜ್ಞಾನವನ್ನು ಒಪ್ಪುವುದಾದರೆ, ತಾನೂ ವಿಷಯವಲ್ಲದ, ಇತರವೂ ವಿಷಯವಲ್ಲದ ಘಟಕ್ಕೆ ಜ್ಞಾನತ್ವವನ್ನು ಏಕೆ ಒಪ್ಪಬಾರದು ಎಂದು ಅಭಿಪ್ರಾಯ.

**ಮುಕ್ತೌ ತೇ ಯಾದೃಶಂ ಬ್ರಹ್ಮ ತಾದೃಶಂ ಮೇ ಜಡಂ ನ ಕಿಮ್ ।**
**ಸಂಕೇತಃ ಸರ್ವಶಬ್ದಾನಾಂ ಕುತ್ರ ಕುತ್ರ ನ ಶಕ್ಯತೇ ॥ ೧೦೦೧ ॥**

**ಅರ್ಥ**-ತೇ = ನಿನಗೆ, ಮುಕ್ತೌ = ಮುಕ್ತಿಯಲ್ಲಿ, ಬ್ರಹ್ಮ = ಬ್ರಹ್ಮನು, ಯಾದೃಶಂ = ಯಾವ ರೀತಿ ಇರುತ್ತಾನೋ, ಮೇ = ನನಗೆ, ಜಡಂ = ಜಡವು, ತಾದೃಶಂ = ಆ ರೀತಿಯನ್ನು ಹೊಂದಿರುವಾಗಿ, ಕಿಂ ನ = ಇಲ್ಲವೇನು? ಸರ್ವಶಬ್ದಾನಾಂ = ಎಲ್ಲ ಶಬ್ದಗಳಿಗೂ, ಸಂಕೇತಃ = ಸ್ವಕಪೋಲಕಲ್ಪಿತವಾದ ಪರಿಭಾಷೆಯು, ಕುತ್ರ ಕುತ್ರ = ಎಲ್ಲೆಲ್ಲಿ, ನ ಶಕ್ಯತೇ = ಮಾಡಲು ಸಾಧ್ಯವಾಗುವುದಿಲ್ಲ?

**ಅನುವಾದ**- ನಿನ್ನ ಬ್ರಹ್ಮನು ಮೋಕ್ಷದಲ್ಲಿ ಸ್ವಪರ ಅವಿಷಯವಾದ ಜ್ಞಾನರೂಪನಾದವನು. ನಾನು ಅಂಗೀಕರಿಸುವ ಜಡವು ಸ್ವಪರ ಅವಿಷಯವಾದ ಜ್ಞಾನರೂಪವಾದುದು. ಆದ್ದರಿಂದ ನಿನ್ನ ಬ್ರಹ್ಮನು ಯಾವ ರೀತಿಯಲ್ಲಿ ಇರುತ್ತಾನೆಯೋ ನನ್ನ ಜಡವೂ ಅದೇ ರೀತಿಯಲ್ಲಿ ಇರುತ್ತದೆ. ಬ್ರಹ್ಮನನ್ನು ಜ್ಞಾನ ಎಂದು ಹೇಳುವುದು ಕೇವಲ ಒಂದು ಪರಿಭಾಷೆ. ಅಂತಹ ಒಂದು ಪರಿಭಾಷೆಯನ್ನು ಎಲ್ಲ ಕಡೆಯಲ್ಲಿಯೂ ಮಾಡಬಹುದು.

**ಭಾವವಿಲಾಸಿನೀ**– ಯಾದೃಶಂ ಪರಸ್ಯಾಭಾವೇನ ಸ್ವವಿಷಯತ್ವಾನಂಗೀಕಾರೇಣ ಚ ಸ್ವಪರಾವಿಷಯಮ್। ನನು ಸಂಸಾರೇ ಪರವಿಷಯತ್ವಸದ್ಭಾವಾದ್ಘಟಸ್ಯ ಚ ತದಭಾವಾತ್ ಕಥಂ ಸಾಮ್ಯಮಿತಿ ಚೇತ್ । ನ ।

ಸಂಸಾರೇऽಪಿ ವಿಷಯವಿಷಯಿಭಾವಾನಂಗೀಕಾರೇಣ ಘಟವದ್ ಬ್ರಹ್ಮಣೋऽಪಿ ಪರಾವಿಷಯತ್ವಾತ್। ಪರಾಧ್ಯಾಸಾಧಿಷ್ಠಾನತ್ವಸ್ಯ ಚ ಶಿಲಾಧ್ಯಾಸಾಧಿಷ್ಠಾನೇ ಘಟೇऽಪಿ ಸಾಮ್ಯಾತ್ । ಅತ ಏವ ಯಾದೃಶಂ ತೇ ಬ್ರಹ್ಮ ತಾದೃಶಂ ಮೇ ಜಡಮಿತ್ಯುಕ್ತಮ್ । ವಸ್ತುತಸ್ತು ಸಂಸೃತಾವವಿದ್ಯಮಾನಾರ್ಥಗೋಚರಂ ತೇ ಬ್ರಹ್ಮಭ್ರಾಂತಿಮದಪಿ ಸ್ಯಾತ್ । ಜಡಂ ತು ತಾದೃಶಭ್ರಾಂತ್ಯಾಪಿ ರಹಿತ್ವಾತ್ತ ತ್ವತ್ ಬ್ರಹ್ಮಣೋऽಪ್ಯಧಿಕಂ ಸ್ಯಾದಿತ್ಯಪಿ ದ್ರಷ್ಟವ್ಯಮ್ ॥೧೦೦೧॥

**ವಿವರಣೆ-** ಸ್ವಪರ ಅವಿಷಯಕವಾದ ಬ್ರಹ್ಮನು ಜ್ಞಾನರೂಪನೆಂದು ಹೇಳುವುದಾದರೆ, ಸ್ವಪರ ಅವಿಷಯಕವಾದ ಘಟವನ್ನೂ ಜ್ಞಾನರೂಪವೆಂದು ಅಂಗೀಕರಿಸು. ಏಕೆಂದರೆ, ಜ್ಞಾನಶಬ್ದವು ವಿಷಯೀಕರಣವನ್ನು ಮಾಡದಿರುವ ಒಂದು ವಸ್ತುವನ್ನು ಹೇಳುವುದಾದರೆ, ಅದು ಕೇವಲ ನಿನ್ನ ಪರಿಭಾಷೆಯೆಂದಾಯಿತು. ಅದೇ ಪರಿಭಾಷೆಯನ್ನು ಘಟದ ವಿಷಯದಲ್ಲೂ ಅಂಗೀಕರಿಸು. ಬ್ರಹ್ಮನಿಗೆ ಮೋಕ್ಷದಲ್ಲಿ ಸ್ವಪರವಿಷಯತ್ವವು ಇಲ್ಲದಿದ್ದರೂ ಸಂಸಾರದಲ್ಲಿ ಪರವಿಷಯತ್ವವು ಇರುವುದರಿಂದ ಘಟದ ವೈಲಕ್ಷಣವಿದೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ಸಂಸಾರದಲ್ಲಿಯೂ ವಿಷಯವಿಷಯೀಭಾವ ಸಂಬಂಧವನ್ನು ಒಪ್ಪದೇ ಇರುವುದರಿಂದ ಘಟದಂತೆ ಬ್ರಹ್ಮನಿಗೂ ಸಹ ಪರವಿಷಯತ್ವವು ಬರುವುದಿಲ್ಲ. ಪರವಿಷಯತ್ವವೆಂದರೆ ಪರಾಧ್ಯಾಸಾಧಿಷ್ಠಾನತ್ವವೆಂದು ಹೇಳಿದರೆ, ಪರಾಧ್ಯಾಸಾಧಿಷ್ಠಾನತ್ವವು ಬ್ರಹ್ಮನಲ್ಲಿ ಬರುವಂತೆ ಘಟದಲ್ಲಿಯೂ ಶಿಲಾದಿ ಅಧ್ಯಾಸಾಧಿಷ್ಠಾನತ್ವವು ಬರುತ್ತದೆ. ಆದ್ದರಿಂದ ಬ್ರಹ್ಮನ ಸಾಮ್ಯವೇ ಬರುತ್ತದೆ. ಇಷ್ಟು ವಿಶೇಷ. ನಿನ್ನ ಬ್ರಹ್ಮನು ಸಂಸಾರಾವಸ್ಥೆಯಲ್ಲಿ ಅವಿದ್ಯಮಾನಾರ್ಥವಿಷಯಕತ್ವವನ್ನು ಹೊಂದಿ ಭ್ರಾಂತಿಯುಳ್ಳವನಾಗುತ್ತಾನೆ. ಜಡಕ್ಕೆ ಸಂಸಾರಾವಸ್ಥೆಯಲ್ಲಿ ಅಂತಹ ಭ್ರಾಂತಿಯಿಲ್ಲದಿರುವುದರಿಂದ ಘಟವೇ ನಿನ್ನ ಬ್ರಹ್ಮನಿಗಿಂತ ಶ್ರೇಷ್ಠವಾಗುತ್ತದೆ ಎಂದು ಅಭಿಪ್ರಾಯ.

ಅಶ್ರೌತಂ ಬ್ರಹ್ಮ ತತ್ ತೇऽಸ್ತು ಶ್ರುತ್ಯುಕ್ತಬ್ರಹ್ಮಣಾ ವಯಮ್ ।
ಕೃತಾರ್ಥಾಃ ಸ್ಯಾಮ ಭೂಮಾಸೌ ನಃ ಕ್ಲೇಶಾತ್ ತಾರಯಿಷ್ಯತಿ ॥ ೧೦೦೨ ॥

**ಅರ್ಥ**-ತತ್ = ಆದ್ದರಿಂದ, ಅಶ್ರೌತಂ = ಶ್ರುತ್ಯುಕ್ತನಲ್ಲದ, ಬ್ರಹ್ಮ = ನಿರ್ಗುಣಬ್ರಹ್ಮನು, ತೇ ಅಸ್ತು = ನಿನಗೇ ಇರಲಿ, ವಯಮ್ = ನಾವಾದರೋ, ಶ್ರುತ್ಯುಕ್ತಬ್ರಹ್ಮಣಾ = ಶ್ರುತಿಯು ಹೇಳಿದ ಬ್ರಹ್ಮನಿಂದ, ಕೃತಾರ್ಥಾಃ ಸ್ಯಾಮ = ಕೃತಾರ್ಥರಾಗುತ್ತೇವೆ. ಅಸೌ ಭೂಮಾ= ಈ ಪೂರ್ಣನಾದ ಬ್ರಹ್ಮನು, ನಃ= ನಮ್ಮನ್ನು, ಕ್ಲೇಶಾತ್= ಕ್ಲೇಶದಿಂದ, ತಾರಯಿಷ್ಯತಿ= ದಾಟಿಸುತ್ತಾನೆ.

**ಅನುವಾದ**-ಆದ್ದರಿಂದ ಎಂದರೆ, ಶ್ರುತಿಯು ಮಿಥ್ಯಾಭೂತವಾದುದರಿಂದ ಪ್ರತಿಪಾದನ ಸಾಮರ್ಥ್ಯವೇ ಇಲ್ಲದಿರುವುದರಿಂದ ಮತ್ತು ಬ್ರಹ್ಮನು ಅವೇದ್ಯನಾಗಿ ಪ್ರತಿಪಾದ್ಯತ್ವಯೋಗ್ಯತೆಯನ್ನೇ ಹೊಂದದಿರುವುದರಿಂದ, ನಿನ್ನ ಬ್ರಹ್ಮನು

ಶ್ರುತ್ಯುಕ್ತನಾದವನಲ್ಲ. ನೀನು ಅಂಗೀಕರಿಸುವ ಶ್ರುತ್ಯುಕ್ತನಲ್ಲದ ನಿರ್ಗುಣಬ್ರಹ್ಮನು ನಿನಗೇ ಇರಲಿ. ನಾವಾದರೋ ಶ್ರುತಿಯು ಹೇಳಿದ ಬ್ರಹ್ಮನಿಂದ ಕೃತಕೃತ್ಯರಾಗುತ್ತೇವೆ. ಪೂರ್ಣನಾದ ಅವನು ನಮ್ಮನ್ನು ಕ್ಲೇಶಗಳಿಂದ ದಾಟಿಸುತ್ತಾನೆ.

**ಭಾವವಿಲಾಸಿನೀ–** ತತ್ ತಸ್ಮಾತ್ ಶ್ರುತೇರ್ಮಿಥ್ಯಾತ್ವಾಂಗೀಕಾರೇಣ ಪ್ರತಿಪಾದನಸಾಮರ್ಥ್ಯಾಭಾವಾತ್ । ಅವೇದ್ಯತಯಾ ಬ್ರಹ್ಮಣಃ ಪ್ರತಿಪಾದ್ಯತ್ವಾಯೋಗಾಚ್ಚ ॥ ೧೦೦೨ ॥

ಅತಃ ಶ್ರೌತೇನ ಬಾಧೇನ ಸತ್ವಪ್ರತ್ಯಕ್ಷಬಾಧನಮ್ ।
ಜ್ವಲಜ್ಜ್ವಲನವೈರೇಣ ಪತಂಗಸ್ಯೇವ ನಾಶನಮ್ ॥ ೧೦೦೩ ॥

**ಅರ್ಥ**-ಅತಃ = ಆದ್ದರಿಂದ, ಶ್ರೌತೇನ ಬಾಧೇನ = ಶ್ರುತಿಯು ಹೇಳಿದ ಬಾಧದಿಂದ, ಸತ್ವಪ್ರತ್ಯಕ್ಷಬಾಧನಮ್ = ಸತ್ವಪ್ರತ್ಯಕ್ಷಬಾಧನವು, ಜ್ವಲಜ್ಜ್ವಲನವೈರೇಣ = ಜ್ವಲಿಸುವ ಅಗ್ನಿಯ ಮೇಲಿನ ದ್ವೇಷದಿಂದ, ಪತಂಗಸ್ಯೇವ = ಪತಂಗಕ್ಕೆ ನಾಶವುಂಟಾಗುವಂತೆ, ನಾಶನಮ್ = ನಿನ್ನ ಶ್ರುತಿಗೇ ನಾಶವನ್ನುಂಟು ಮಾಡುವುದಾಗುತ್ತದೆ.

**ಅನುವಾದ-** ಆದ್ದರಿಂದ, ಶ್ರೌತಬಾಧದಿಂದ ಸತ್ವಪ್ರತ್ಯಕ್ಷವನ್ನು ಬಾಧಿಸುವುದು ಉರಿಯುತ್ತಿರುವ ಅಗ್ನಿಯ ಮೇಲಿನ ದ್ವೇಷದಿಂದ ಉಂಟಾದ ಪತಂಗದ ನಾಶದಂತೆ ಆತ್ಮನಾಶಕವೇ ಆಗುತ್ತದೆ.

**ಭಾವವಿಲಾಸಿನೀ–** ಅತಃ ಪರಮತೇ ಶ್ರುತೇಃ ಶ್ರುತ್ಯುಕ್ತಬಾಧಸ್ಯ ಚ ಮಿಥ್ಯಾತ್ವಾತ್ । ನಾಶನಂ ಸ್ವಸ್ಯೈವ ನಾಶಕರಮ್ ॥ ೧೦೦೩ ॥

ತಸ್ಮಾನ್ನಿರ್ದೋಷಮಾನೇನ ವೇದ್ಯಸತ್ತಾಶ್ರಯತ್ವತಃ ।
ಅಬಾಧಿತಂ ಜಗದಿದಂ ಸರ್ವಂ ಬ್ರಹ್ಮವದೇವ ಹಿ ॥ ೧೦೦೪ ॥

**ಅರ್ಥ**-ತಸ್ಮಾತ್ = ಆದ್ದರಿಂದ, ನಿರ್ದೋಷಮಾನೇನ ವೇದ್ಯಸತ್ತಾಶ್ರಯತ್ವತಃ = ನಿರ್ದೋಷವಾದ ಪ್ರಮಾಣದಿಂದ ವೇದ್ಯವಾದ ಸತ್ವಕ್ಕೆ ಆಶ್ರಯವಾದ್ದರಿಂದ, ಸರ್ವಂ ಇದಂ ಜಗತ್ = ಈ ಜಗತ್ತೆಲ್ಲವೂ, ಬ್ರಹ್ಮವತ್ = ಬ್ರಹ್ಮನಂತೆ, ಅಬಾಧಿತಂ ಏವ ಹಿ = ಅಬಾಧಿತವಾದುದಷ್ಟೇ ?

**ಅನುವಾದ-** ಆದ್ದರಿಂದ ನಿರ್ದುಷ್ಟವಾದ ಪ್ರಮಾಣ ವೇದ್ಯವಾದ ಸತ್ತಾಶ್ರಯತ್ವವು ಇರುವ ಕಾರಣದಿಂದ ಎಲ್ಲ ಜಗತ್ತೂ ಬ್ರಹ್ಮನಂತೆ ಅಬಾಧಿತವೇ ಆಗುತ್ತದೆಯಷ್ಟೇ ?

**ಭಾವವಿಲಾಸಿನೀ–** ಅನುಮಾನಂ ರಚಯತಿ ॥ **ತಸ್ಮಾದಿತಿ** ॥ ಪರರೀತ್ಯಾ ಶುಕ್ತಿರಜತೇ ವ್ಯಭಿಚಾರವಾರಣಾಯ ವಿಶೇಷಣಮ್ ॥ ೧೦೦೪ ॥

**ಅರ್ಥಃ ಪರೋಕ್ತವಾಕ್ಯಾನಾಮುಕ್ತೋಽಸ್ಮಾಭಿಃ ಪುರೈವ ಹಿ ।**
**ಭಾವಿಬಾಧಾಪನೋದಾರ್ಥಮೇತಾವಚ್ಚರ್ಚಿತಂ ಪುನಃ ॥ ೧೦೦೫ ॥**

**ಅರ್ಥ**-ಪರೋಕ್ತವಾಕ್ಯಾನಾಂ = ಪರರು ಉದಾಹರಿಸಿದ ಏಕಮೇವಾದ್ವಿತೀಯಂ ಇತ್ಯಾದಿ ವಾಕ್ಯಗಳಿಗೆ, ಅಸ್ಮಾಭಿಃ = ನಮ್ಮಿಂದ, ಪುರೈವ = ಮೊದಲೇ, ಅರ್ಥಃ = ಅರ್ಥವು, ಉಕ್ತಃ ಹಿ = ಹೇಳಲ್ಪಟ್ಟಿದೆಯಷ್ಟೇ? ಭಾವಿಬಾಧಾಪನೋದಾರ್ಥಂ = ಭಾವಿಬಾಧಕ ಶಂಕೆಯನ್ನು ಪರಿಹಾರವನ್ನು ಮಾಡುವುದಕ್ಕೋಸ್ಕರವಾಗಿ, ಪುನಃ = ಮತ್ತೆ, ಏತಾವತ್ = ಇಷ್ಟು ವಿಷಯಗಳು, ಚರ್ಚಿತಂ = ಚರ್ಚೆಮಾಡಲ್ಪಟ್ಟಿವೆ.

**ಭಾವವಿಲಾಸಿನೀ**– ಪರೋಕ್ತವಾಕ್ಯಾನಾಮ್ ''ಏಕಮೇವಾದ್ವಿತೀಯಂ, ನೇಹ ನಾನಾಸ್ತಿ ಕಿಂಚನೇ'' ತ್ಯಾದಿವಾಕ್ಯಾನಾಮ್ । ಪುರಾ ಭೇದಸೌರಭೇ । ಏತಾವತ್ ತ್ರೈಕಾಲಿಕನಾಸ್ತಿತ್ವವಿಷಯತ್ವಂ ಶ್ರುತೇ-ಸ್ತ್ರೈಕಾಲಿಕನಿಷೇಧವಿಷಯತ್ವೇ ತಜ್ಜನ್ಯಜ್ಞಾನಾತ್ಕಾಲಾಂತರೇ ವಾ ಬಾಧಃ ಶಂಕಿತುಂ ಶಕ್ಯೇತಾಪಿ ಉಕ್ತರೀತ್ಯಾ ವಾಕ್ಯಸ್ಯ ವರ್ತಮಾನನಿಷೇಧಮಾತ್ರವಿಷಯತ್ವಸಿದ್ಧೌ ವಾಕ್ಯಜನ್ಯತ್ರೈಕಾಲಿಕನಿಷೇಧ-ಬೋಧಸ್ಯೋತ್ತರತ್ರಾಪ್ಯಸಂಭವೇನ ಭಾವಿಬಾಧಕಶಂಕಾಯಾ ಗರ್ಭಸ್ರಾವ ಏವೇತಿ ಸೂಚನಾಯ ತ್ರೈಕಾಲಿಕನಿಷೇಧವಿಷಯತ್ವಮಾತ್ರಮತ್ರಾಪಿ ಚರ್ಚಿತಮಿತಿ ಭಾವಃ ॥೧೦೦೫॥

**ವಿವರಣೆ**- ಪರೋಕ್ತವಾದ 'ಏಕಮೇವಾದ್ವಿತೀಯಂ' 'ನೇಹ ನಾನಾಸ್ತಿ ಕಿಂಚನ' ಮುಂತಾದ ವಾಕ್ಯಗಳಿಗೆ ನಾವು ಮೊದಲೇ ಅರ್ಥವನ್ನು ಹೇಳಿದ್ದೇವಷ್ಟೇ? ಈಗ ಭಾವಿಬಾಧಕ ಶಂಕೆಯನ್ನು ಪರಿಹಾರಮಾಡುವುದಕ್ಕಾಗಿ ಇಷ್ಟು ವಿಷಯಗಳು ಪುನಃ ಚರ್ಚಿಸಲ್ಪಟ್ಟಿವೆ. ಇಷ್ಟು ವಿಷಯಗಳು ಎಂದರೆ 'ತ್ರೈಕಾಲಿಕನಾಸ್ತಿತ್ವವಿಷಯ', ಶ್ರುತಿಯು ತ್ರೈಕಾಲಿಕನಿಷೇಧವನ್ನು ಬೋಧಿಸಿದರೆ, ಒಂದುಪಕ್ಷ ಕಾಲಾಂತರದಲ್ಲಿ ಬಾಧವನ್ನು ಶಂಕಿಸಬಹುದು, ಆದರೆ ಶ್ರುತಿಯು ವರ್ತಮಾನವಾದ ನಿಷೇಧವನ್ನು ಮಾತ್ರ ಹೇಳುವುದರಿಂದ ತ್ರೈಕಾಲಿಕನಿಷೇಧವಿಲ್ಲವೆಂಬುದು, ಭಾವಿಬಾಧಕಶಂಕೆಗೆ ಗರ್ಭಸ್ರಾವರೂಪವಾದುದು ಎಂದು ತಿಳಿಸಲು ತ್ರೈಕಾಲಿಕನಿಷೇಧ-ವಿಷಯತ್ವವನ್ನು ಮಾತ್ರ ಇಲ್ಲಿ ಚರ್ಚಿಸಿದ್ದೇವೆ ಎಂದು ಅಭಿಪ್ರಾಯ.

**ಕಿಂಚ ದೃಶ್ಯತ್ವ ಜಡತ್ವಪರಿಚ್ಛೇದಾದಯೋಽಖಿಲಾಃ ।**
**ಹೇತವಃ ಸಂತು ಜಗತಿ ಮಿಥ್ಯಾತ್ವಂ ಮಾಸ್ತು ಕಾ ಕ್ಷತಿಃ ॥ ೧೦೦೬ ॥**

**ಅರ್ಥ**-ಕಿಂಚ = ಅಲ್ಲದೆ, ದೃಶ್ಯತ್ವ ಜಡತ್ವ ಪರಿಚ್ಛೇದಾದಯಃ = ದೃಶ್ಯತ್ವ ಜಡತ್ವ ಪರಿಚ್ಛಿನ್ನತ್ವ ಮೊದಲಾದ, ಅಖಿಲಾಃ = ಎಲ್ಲಾ, ಹೇತವಃ = ಹೇತುಗಳು, ಜಗತಿ = ಪಕ್ಷಭೂತವಾದ ವಿಮತಪದವಾಚ್ಯವಾದ ಜಗತ್ತಿನಲ್ಲಿ, ಸಂತು = ಇರಲಿ, ಮಿಥ್ಯಾತ್ವಂ = ಮಿಥ್ಯಾತ್ವವು, ಮಾ ಅಸ್ತು = ಇರುವುದು ಬೇಡ, ಕಾ ಕ್ಷತಿಃ? = ತೊಂದರೆ ಏನು?

**ಅನುವಾದ-** ಅಲ್ಲದೇ ದೃಶ್ಯತ್ವ, ಜಡತ್ವ, ಪರಿಚ್ಛೇದವೇ ಮೊದಲಾದ ಮಿಥ್ಯಾತ್ವವನ್ನು ಸಾಧಿಸಲು ಹೇಳಿದ ಹೇತುಗಳು ಜಗತ್ತಿನಲ್ಲಿ ಇರಲಿ. ಆದರೆ ಮಿಥ್ಯಾತ್ವವು ಬೇಡ. ತೊಂದರೆ ಏನು?

**ಭಾವವಿಲಾಸಿನೀ–** ಅಧುನಾ ದೃಶ್ಯತ್ವಾದಿಹೇತೂನಾಂ ವ್ಯವಚ್ಛೇದ್ಯಾಂತರದರ್ಶಯನ್ ಸತ್ಯತ್ವ ವ್ಯವಚ್ಛೇದಾಖ್ಯಮಿಥ್ಯಾತ್ವೇ ತೇಷಾಂ ಪ್ರಯೋಜಕತ್ವೈವ ನಾಸ್ತೀತ್ಯಾಹ - **ಕಿಂಚೇತಿ** ॥ ೧೦೦೬ ॥

**ವಿವರಣೆ-** ಮೇಲೆ ರಾಜರು ಕಂಠತಃ ತೋರಿಸಿದ ಹೇತುಗಳು ಮಾತ್ರವಲ್ಲ, ಕಿಂತು ಆದಯಃ - ಅಂಶಿತ್ವವೇ ಮೊದಲಾದ ಹೇತುಗಳು, ಅಖಿಲಾಃ - ರಾಜರ ನಂತರದಲ್ಲಿ ಸಮಾನಕಾಲದಲ್ಲಿಯೂ ಬೇರೆ ಬೇರೆ ಆಧುನಿಕ ಅದ್ವೈತಪಂಡಿತರು ಉದಾಹರಿಸಿದ (ಅದ್ವೈತಸಿದ್ಧಿಕಾರರೇ ಮೊದಲಾದವರು)ಹೇತುಗಳೂ ಪಕ್ಷಭೂತವಾದ ಜಗತ್ತಿನಲ್ಲಿ ಇರಲಿ, ಆದರೆ ಮಿಥ್ಯಾತ್ವ ಮಾತ್ರ ಬೇಡ ಎಂಬುದಾಗಿ ಹೇತುರಸ್ತು ಮಾಸ್ತು ಸಾಧ್ಯಂ ಎಂಬ ಅಪ್ರಯೋಜಕತ್ವ ಶಂಕೆಯನ್ನು ಹೇಳಿದಂತಾಯಿತು. ಅಪ್ರಯೋಜಕತ್ವಶಂಕೆಯನ್ನು ಪರಿಹರಿಸಲು ಅನುಕೂಲತರ್ಕವನ್ನು ಹೇಳಬೇಕು. ಆದರೆ ಅನುಕೂಲತರ್ಕವು ಇಲ್ಲಿ ಇಲ್ಲ ಎಂಬುದನ್ನು ಕಾ ಕ್ಷತಿಃ ಎಂಬುದರಿಂದ ಸೂಚಿಸಿದ್ದಾರೆ.

ಉದಾಹರಣೆ- ಪರ್ವತಃ ವಹ್ನಿಮಾನ್ ಧೂಮಾತ್ ಎಂದು ವಹ್ನಿಸಾಧಕಅನುಮಾನವನ್ನು ಪ್ರಯೋಗಿಸಿದಾಗ ಅಲ್ಲಿ ಅಸ್ತು ಧೂಮಃ ವಹ್ನಿಃ ಮಾಸ್ತು ಎಂಬುದಾಗಿ ಅಪ್ರಯೋಜಕತ್ವಶಂಕೆಯನ್ನು ಮಾಡಿದರೆ ಅದಕ್ಕೆ ಉತ್ತರವಾಗಿ, ಯದಿ ವಹ್ನಿಃ ನ ಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾತ್ ಎಂಬುದಾಗಿ ಹೇಳಬಹುದು. ಇದನ್ನೇ ಅನುಕೂಲತರ್ಕವೆಂದು ಕರೆಯುತ್ತಾರೆ.

ಆದರೆ ಪ್ರಕೃತದಲ್ಲಿ ಅದ್ವೈತಿಗಳು ಪ್ರಯೋಗಿಸಿದ ಅನುಮಾನದಲ್ಲಿ ಇಂಥಹ ತರ್ಕವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮಿಥ್ಯಾತ್ವಸಾಧಕ ಅನುಮಾನವು ಅಪ್ರಯೋಜಕತ್ವಶಂಕಾರೂಪರಾಹುಗ್ರಸ್ತವಾದ ಕಾರಣ ದುಷ್ಟವು. ಇದನ್ನು ಈ ಶ್ಲೋಕದಲ್ಲಿ ಕಾ ಕ್ಷತಿಃ ಎಂಬುದರಿಂದ ಗ್ರಂಥಕಾರರು ಸೂಚಿಸಿದ್ದಾರೆ.

ಅಪ್ರಯೋಜಕತ್ವಶಂಕೆಯನ್ನು ಉಪಪಾದಿಸುತ್ತಾರೆ -

**ಯತೋ ದರ್ಶನಯೋಗ್ಯತ್ವಂ ದೃಶ್ಯತ್ವಂ ನಿರುಪಾಖ್ಯತಾಮ್ ।**
**ಕ್ಷಿಪೇತ್ ಜ್ಞಾನೇನ ಹೀನತ್ವಂ ಜಡತ್ವಂ ಜ್ಞಾತೃತಾಂ ಕ್ಷಿಪೇತ್ ॥ ೧೦೦೭ ॥**

**ಪರಿಚ್ಛೇದಶ್ಚ ಗುಣತೋ ದೇಶತಃ ಕಾಲತೋಽವಧಿಃ ।**
**ಅನಂತಗುಣತಾಂ ದೇಶವ್ಯಾಪ್ತತಾಂ ನಿತ್ಯತಾಂ ಕ್ಷಿಪೇತ್ ॥ ೧೦೦೮ ॥**

**ಅರ್ಥ-** ಯತಃ = ಏಕೆಂದರೆ, ದರ್ಶನಯೋಗ್ಯತ್ವಂ= ದರ್ಶನಯೋಗ್ಯತ್ವರೂಪವಾದ, ದೃಶ್ಯತ್ವಂ= ದೃಶ್ಯತ್ವವು, ನಿರುಪಾಖ್ಯತಾಂ= ಜ್ಞಾನವಿಷಯತ್ವಾಭಾವರೂಪವಾದ ನಿರುಪಾ-

ಖ್ಯತ್ವವನ್ನು, ಕ್ಷಿಪೇತ್= ನಿರಾಕರಿಸುತ್ತದೆ. ಜ್ಞಾನೇನ ಹೀನತ್ವಂ= ಜ್ಞಾನರಹಿತತ್ವ ರೂಪವಾದ, ಜಡತ್ವಂ= ಜಡತ್ವವು, ಜ್ಞಾತೃತಾ= ಜ್ಞಾತೃತ್ವವನ್ನು, ಕ್ಷಿಪೇತ್= ನಿರಾಕರಿಸುತ್ತದೆ. ಗುಣತಃ= ಗುಣಗಳಿಂದ, ದೇಶತಃ= ದೇಶದಿಂದ, ಕಾಲತಃ= ಕಾಲದಿಂದ, ಅವಧಿಃ= ಅವಧಿರೂಪವಾದ, ಪರಿಚ್ಛೇದಶ್ಚ= ಪರಿಚ್ಛೇದವಾದರೊ, ಅನಂತಗುಣತಾಂ= ಅನಂತಗುಣತ್ವವನ್ನು, ದೇಶವ್ಯಾಪ್ತತಾಂ= ದೇಶದಿಂದ ವ್ಯಾಪ್ತತೆಯನ್ನು, ನಿತ್ಯತಾಂ= ಮತ್ತು ನಿತ್ಯತ್ವವನ್ನು, ಕ್ಷಿಪೇತ್= ನಿರಾಕರಿಸುತ್ತದೆ.

**ಅನುವಾದ-** ಏಕೆಂದರೆ ದರ್ಶನಯೋಗ್ಯತ್ವರೂಪವಾದ ದೃಶ್ಯತ್ವವು ಜಗತ್ತಿನಲ್ಲಿ ಜ್ಞಾನಾವಿಷಯತ್ವರೂಪವಾದ ನಿರುಪಾಖ್ಯತ್ವವನ್ನು ನಿರಾಕರಿಸುತ್ತದೆ. ಜ್ಞಾನರಹಿತತ್ವರೂಪವಾದ ಜಡತ್ವವು ಜ್ಞಾತೃತ್ವವನ್ನು ನಿರಾಕರಿಸುತ್ತದೆ. ಗುಣಗಳಿಂದ, ದೇಶದಿಂದ ಮತ್ತು ಕಾಲದಿಂದ ಅವಧಿರೂಪವಾದ ಪರಿಚ್ಛೇದವು ಅನಂತಗುಣತ್ವವನ್ನು, ದೇಶತಃ ವ್ಯಾಪ್ತಿಯನ್ನು ಮತ್ತು ಕಾಲತಃ ನಿತ್ಯತ್ವವನ್ನು ನಿರಾಕರಿಸುತ್ತದೆ.

**ಭಾವವಿಲಾಸಿನೀ–** ಕ್ಷಿಪೇದಿತ್ಯತಃ ಪೂರ್ವಂ ಸರ್ವತ್ರ ಜಗತೀತಿ ಯೋಜನೀಯಮ್ ॥

**ವಿವರಣೆ-** ದೃಶ್ಯತ್ವ, ಜಡತ್ವ ಮತ್ತು ಪರಿಚ್ಛಿನ್ನತ್ವ ಹೇತುಗಳು ಮಿಥ್ಯಾತ್ವವನ್ನು ಸಾಧಿಸುವುದರಲ್ಲಿ ಅಪ್ರಯೋಜಕವಾಗುತ್ತವೆ. ಆ ಹೇತುಗಳು ಯಾವುದು ಇಲ್ಲದಿದ್ದರೆ ತಾವು ಉಪಪನ್ನವಾಗುವುದಿಲ್ಲವೋ ಅಂತಹ ಧರ್ಮವನ್ನು ಮಾತ್ರ ಸಾಧಿಸುತ್ತದೆ. ಜಗತ್ತಿಗೆ ಮಿಥ್ಯಾತ್ವವಿಲ್ಲದಿದ್ದರೆ ಈ ಹೇತುಗಳಿಗೆ ಯಾವ ಅನುಪಪತ್ತಿಯೂ ಇಲ್ಲವೆಂದು ಅಭಿಪ್ರಾಯ.

ಅಪ್ರಯೋಜಕತ್ವವನ್ನೇ ಉಪಪಾದಿಸುತ್ತಾರೆ -

ಸತ್ಯತ್ವೋಪಪ್ಲವೇ ನೈತೇ ಹೇತವೋ ಧೂಮಕೇತವಃ ।
ಅತೋಽಪ್ರಯೋಜಕಾಃ ಸರ್ವೇ ಮಿಥ್ಯಾತ್ವೇಹೇತವಸ್ತವ ।
ಪ್ರಯೋಜಕಸ್ತು ಬಾಧೋ ಯೋ ನ ದ್ವಯೋಃ ಸ ಮತೇಽಭವತ್
॥ ೧೦೦೯॥

**ಅರ್ಥ-**ಏತೇ = ಹಿಂದೆ ಹೇಳಿದ, ಹೇತವಃ = ದೃಶ್ಯತ್ವಾದಿ ಹೇತುಗಳು, ಸತ್ಯತ್ವೋಪಪ್ಲವೇ= ಸತ್ಯತ್ವವನ್ನು ಹಾನಿಮಾಡುವ ವಿಚಾರದಲ್ಲಿ, ಧೂಮಕೇತವಃ ನ = ಧೂಮಕೇತುಗಳಲ್ಲ, ಅತಃ = ಆದ್ದರಿಂದ, ತವ = ನಿನ್ನ, ಮಿಥ್ಯಾತ್ವೇ = ಮಿಥ್ಯಾತ್ವನ್ನು ಸಾಧಿಸಲು ಉಪನ್ಯಸ್ತವಾದ, ಸರ್ವೇ = ಎಲ್ಲ, ಹೇತವಃ = ಹೇತುಗಳು, ಅಪ್ರಯೋಜಕಾಃ = ಹಿಂದೆ ಹೇಳಿದಂತೆ ಅಪ್ರಯೋಜಕಗಳು. ಯಃ ಪ್ರಯೋಜಕಃ = ಮಿಥ್ಯಾತ್ವವನ್ನು ಸಾಧಿಸುವ, ಸಃ ಬಾಧಃ = ಆ ಬಾಧವಾದರೂ, ದ್ವಯೋಃ = ನಮ್ಮಿಬ್ಬರ, ಮತೇ = ಮತದಲ್ಲಿ, ನ ಅಭವತ್ = ಸಿದ್ಧವಾಗುವುದಿಲ್ಲ.

**ಅನುವಾದ-** ಈ ನಿನ್ನ ಹೇತುಗಳು ಸತ್ಯತ್ವವನ್ನು ನಿಷೇಧಿಸುವ ಧೂಮಕೇತುಗಳಲ್ಲ. ಆದ್ದರಿಂದ ನೀನು ಮಿಥ್ಯಾತ್ವವನ್ನು ಸಾಧಿಸಲು ಪ್ರಯೋಗಿಸಿದ ಹೇತುಗಳೆಲ್ಲವೂ ಅಪ್ರಯೋಜಕವಾದುವು. ಮಿಥ್ಯಾತ್ವ ಪ್ರಯೋಜಕವಾದುದು ಬಾಧ ಮಾತ್ರ. ಆ ಬಾಧವಾದರೂ ನಮ್ಮಿಬ್ಬರ ಮತದಂತೆಯೂ ಪ್ರಕೃತದಲ್ಲಿ ಇಲ್ಲ.

**ಭಾವವಿಲಾಸಿನೀ–** ಧೂಮಕೇತವೋ ನೇತಿ ಸಂಬಂಧಃ । ಸತ್ಯತ್ವವ್ಯವಚ್ಛೇದಾಯ ಹಿ ಪರೇಣ ಮಿಥ್ಯಾತ್ವಂ ಸಾಧ್ಯತೇ । ವಕ್ತೃತ್ವವ್ಯವಚ್ಛೇದಕಮೂಕತ್ವಾದತ್ರತ್ವವ್ಯವಚ್ಛೇದ ಇವ ನೈತೈರ್ಹೇತುಭಿಸ್ಸತ್ಯತ್ವವ್ಯವಚ್ಛೇದರೂಪ-ಮಿಥ್ಯಾತ್ವಸಿದ್ಧಿರ್ಭವತೀತಿ ಭಾವಃ । ಸಃ ಬಾಧಃ । ಅತಃ ಸ್ವರೂಪಾಸಿದ್ಧೋಽನ್ಯತರಾಸಿದ್ಧೋ ವಾ ಬಾಧ್ಯತ್ವಹೇತುರಿತಿ ಭಾವಃ ॥ ೧೦೦೯ ॥

**ವಿವರಣೆ-** ಧೂಮಕೇತುಗಳು ಅನಿಷ್ಟವನ್ನು ಮಾಡುವವವು. ಜಗತ್ತಿನಲ್ಲಿ ಸತ್ಯತ್ವವನ್ನು ನಿರಾಶೆ ಮಾಡಲು ಪರರು ಮಿಥ್ಯಾತ್ವವನ್ನು ಸಾಧಿಸುತ್ತಾರಷ್ಟೆ. ಆದರೆ ಮಿಥ್ಯಾತ್ವಕ್ಕೂ ಪರರು ಉಪನ್ಯಾಸ ಮಾಡಿದ ಹೇತುಗಳಿಗೂ ಯಾವ ಸಂಬಂಧವೂ ಇಲ್ಲ. ಮೂಕತ್ವವು ವಕ್ತೃತ್ವವನ್ನು ವಿವಚ್ಛೇದ ಮಾಡುತ್ತದೆ, ಆದರೆ ಭೌಕ್ತೃತ್ವವನ್ನು ಹೇಗೆ ವಿವಚ್ಛೇದ ಮಾಡುವುದಿಲ್ಲವೋ ಅದರಂತೆ ಈ ಹೇತುಗಳು ಸತ್ಯತ್ವವನ್ನು ವಿವಚ್ಛೇದ ಮಾಡುವುದಿಲ್ಲ. ಆದ್ದರಿಂದ ಮಿಥ್ಯಾತ್ವವು ಸಿದ್ಧವಾಗುದಿಲ್ಲ. ಮಿಥ್ಯಾತ್ವವನ್ನು ಬಾಧ್ಯತ್ವದಿಂದಲೇ ಸಾಧಿಸಬೇಕು. ಆ ಬಾಧವು ಇಲ್ಲದಿರುವುದರಿಂದ ಬಾಧ್ಯತ್ವರೂಪವು ಸ್ವರೂಪಸಿದ್ಧವಾಗುತ್ತದೆ. ಅಥವಾ ನಾವು ಬಾಧ್ಯತ್ವವನ್ನು ಅಂಗೀಕರಿಸುತ್ತೇವೆ ಎಂದು ಅದ್ವೈತಿಗಳು ಹೇಳಿದರೂ, ನಮ್ಮ ಸಿದ್ಧಾಂತರೀತ್ಯ ಬಾಧ್ಯತ್ವವಿಲ್ಲದಿರುವುದರಿಂದ ಅನ್ಯತರಾಸಿದ್ಧಿರೂಪ ದೋಷವು ಉಂಟಾಗುತ್ತದೆ ಎಂದು ಅಭಿಪ್ರಾಯ.

ದೃಶ್ಯತ್ವಾದಿಹೇತುಗಳು ವಿರುದ್ಧತ್ವವೆಂಬ ಹೇತ್ವಾಭಾಸಗ್ರಸ್ತವಾಗಿ ಸಾಧ್ಯದ ಅಭಾವವನ್ನು ಸಾಧನೆ ಮಾಡುತ್ತದೆ ಎಂದು ಹೇಳುತ್ತಾರೆ -

ಘಟೋಽಸ್ತಿ ನಾಸ್ತಿ ವೇತ್ಯುಕ್ತೇ ದೃಷ್ಟ್ವೋಚ್ಯತೇ ಇತಿ ಪ್ರಜಾಃ ।
ಪ್ರತಿಬ್ರುವಂತಿ ದೃಷ್ಟಶ್ಚೇದಸ್ತಿತ್ವಮನುಜಾನತೇ ।
ಯದಿ ದೃಷ್ಟೋ ನ ನಾಸ್ತಿತ್ವಂ ತಸ್ಯ ಲೋಕೋಽನುಮನ್ಯತೇ ॥ ೧೦೧೦ ॥

**ಅರ್ಥ-**ಘಟಃ = ಮಡಕೆಯು, ಅಸ್ತಿ ವಾ = ಇದೆಯೋ, ನಾಸ್ತಿ ವಾ = ಇಲ್ಲವೋ, ಇತಿ = ಈ ರೀತಿಯಾಗಿ, ಉಕ್ತೇ ಸತಿ = ಪ್ರಶ್ನಿಸಿದರೆ, ದೃಷ್ಟ್ವಾ = ನೋಡಿ, ಉಚ್ಯತೇ = ಹೇಳಲ್ಪಡುತ್ತದೆ, ಇತಿ = ಎಂಬುದಾಗಿ, ಪ್ರಜಾಃ = ಜನರು, ಪ್ರತಿಬ್ರುವಂತಿ = ಉತ್ತರವನ್ನು ಹೇಳುತ್ತಾರೆ. ದೃಷ್ಟಃ ಚೇತ್ = ನೋಡಲ್ಪಟ್ಟರೆ, ಅಸ್ತಿತ್ವಂ = ಅದರ ಇರುವಿಕೆಯನ್ನು, ಅನುಜಾನತೇ = ಅನುಮೋದಿಸುತ್ತಾರೆ. ಯದಿ ನ ದೃಷ್ಟಃ = ನೋಡಲ್ಪಡದೇ ಇದ್ದರೆ, ತಸ್ಯ = ಆ ಘಟಾದಿಪದಾರ್ಥಗಳ ನಾಸ್ತಿತ್ವಂ = ಇಲ್ಲದಿರುವಿಕೆಯನ್ನು, ಲೋಕಃ = ಜನರು, ಅನುಮನ್ಯತೇ = ಅನುಮೋದಿಸುತ್ತಾರೆ.

**ಅನುವಾದ-** ಘಟವು ಇದೆಯೋ ಇಲ್ಲವೋ ಎಂದು ಕೇಳಿದರೆ ನೋಡಿ ಹೇಳುತ್ತೇವೆ ಎಂದು ಜನರು ಉತ್ತರವನ್ನು ಹೇಳುತ್ತಾರೆ. ಘಟವನ್ನು ಅವರು ನೋಡಿದರೆ ಇದೆ ಎಂದು ಅನುಮೋದಿಸುತ್ತಾರೆ. ಘಟವು ಕಾಣದಿದ್ದರೆ ಅದರ ನಾಸ್ತಿತ್ವವನ್ನೇ ಅಂಗೀಕರಿಸುತ್ತಾರೆ (ಹೇಳುತ್ತಾರೆ).

**ಭಾವವಿಲಾಸಿನೀ–** ಇದಾನೀಂ ದೃಶ್ಯತ್ವಹೇತೋರ್ಮಿಥ್ಯಾತ್ವೇ ವಿರುದ್ಧತಾಂ ಪ್ರದರ್ಶ್ಯ ತೇನೈವ ಜಗತ್ಸತ್ಯತ್ವಂ ಸಾಧಯತಿ **॥ ಘಟ ಇತಿ ॥** ತಸ್ಯ ಅದೃಶ್ಯಮಾನಘಟಸ್ಯ ॥ ೧೦೧೦ ॥

**ವಿವರಣೆ-** ಇಲ್ಲಿ ಮಿಥ್ಯಾತ್ವವನ್ನು ಸಾಧನೆ ಮಾಡಲು ದೃಶ್ಯತ್ವವು ವಿರುದ್ಧವಾದ ಹೇತು ಎಂದು ತೋರಿಸಿ ಆ ದೃಶ್ಯತ್ವದಿಂದಲೇ ಸತ್ಯತ್ವವನ್ನು ಸಾಧನೆ ಮಾಡುತ್ತಾರೆ. ಘಟವನ್ನು ನೋಡಿದರೆ ಇದೆ ಎಂತಲೂ, ನೋಡದಿದ್ದರೆ ಇಲ್ಲವೆಂತಲೂ ಹೇಳುವುದರಿಂದ ದೃಶ್ಯತ್ವವು ಸತ್ಯತ್ವಕ್ಕೇ ಸಾಧಕವಾಗುತ್ತದೆ ಹೊರತು ಮಿಥ್ಯಾತ್ವಕ್ಕೆ ಸಾಧಕವಾಗುವುದಿಲ್ಲ ಎಂದು ಅಭಿಪ್ರಾಯ.

ಲೋಕಮರ್ಯಾದೆಯನ್ನು ಅಂಗೀಕರಿಸಿದಲ್ಲಿ ದೃಶ್ಯತ್ವವು ಸತ್ಯತ್ವಸಾಧಕವೆಂದು ತಿಳಿಸುತ್ತಾರೆ -

**ತಸ್ಮಾದ್ ಯೋ ಲೋಕಮರ್ಯಾದಾಮನುಸೃತ್ಯ ಪ್ರವರ್ತತೇ ।**
**ಸತ್ಯತ್ವ ಏವ ದೃಶ್ಯತ್ವಂ ಹೇತುಂ ಕುರ್ಯಾತ್ ಸ ಪಂಡಿತಃ ।**
**ಮಿಥ್ಯಾತ್ವೇ ತು ವಿರುದ್ಧಂ ತತ್ ಕೋ ಹೇತುಂ ಕುರುತೇ ಬುಧಃ ॥೧೦೧೧॥**

**ಅರ್ಥ-**ತಸ್ಮಾತ್ = ಈ ಹಿಂದೆ ಹೇಳಿದ ಕಾರಣಗಳಿಂದ, ಯಃ = ಯಾವನು, ಲೋಕಮರ್ಯಾದಾಂ = ಲೋಕದಲ್ಲಿರುವ ರೀತಿಯನ್ನು (ಯದ್ ದೃಶ್ಯಂ ತತ್ ಸತ್ಯಂ) ಅನುಸೃತ್ಯ = ಅನುಸರಿಸಿ, ಪ್ರವರ್ತತೇ = ಪ್ರವೃತ್ತನಾಗುತ್ತಾನೋ, ಸಃ = ಅವನು, ದೃಶ್ಯತ್ವಂ = ದೃಶ್ಯತ್ವವನ್ನು, ಸತ್ಯತ್ವ ಏವ = ಸತ್ಯತ್ವವನ್ನು ಸಾಧನೆಮಾಡುವಲ್ಲಿಯೇ, ಹೇತುಂ = ಹೇತುವನ್ನಾಗಿ (ಸಾಧನ) ಕುರ್ಯಾತ್ = ಮಾಡಿಯಾನು (ಮಾಡುತ್ತಾನೆ), ಚೇತ್ = ಹಾಗಾದಲ್ಲಿ, ಸಃ ಪಂಡಿತಃ = ಅವನೇ ಪಂಡಿತನು. ಮಿಥ್ಯಾತ್ವೇ = ಮಿಥ್ಯಾತ್ವದಲ್ಲಿ, ವಿರುದ್ಧಂ = ವಿರುದ್ಧವಾದ, ತು ತತ್ = ಆ ದೃಶ್ಯತ್ವವನ್ನು, ಕಃ ಬುಧಃ = ಯಾವ ಪಂಡಿತನು, ಹೇತುಂ ಕುರುತೇ = ಹೇತುವನ್ನಾಗಿ ಮಾಡುತ್ತಾನೆ?

**ಅನುವಾದ-** ಆದ್ದರಿಂದ ಯಾವನು ಲೋಕಮರ್ಯಾದೆಯನ್ನು ಅನುಸರಿಸುತ್ತಾನೆಯೋ ಅವನು ಸತ್ಯತ್ವವನ್ನು ಸಾಧಿಸುವುದಕ್ಕೇ ದೃಶ್ಯತ್ವಹೇತುವನ್ನು ಪ್ರಯೋಗಿಸಬೇಕು. ಅವನೇ ಪಂಡಿತನೆನಿಸುತ್ತಾನೆ. ಮಿಥ್ಯಾತ್ವವನ್ನು ಸಾಧಿಸಲು ವಿರುದ್ಧವಾದ ದೃಶ್ಯತ್ವವನ್ನು ಯಾವ ವಿವೇಕಿಯು ಹೇತುವಾಗಿ ಪ್ರಯೋಗಿಸುತ್ತಾನೆ?

**ಭಾವವಿಲಾಸಿನೀ–** ತಸ್ಮಾತ್ ದೃಶ್ಯಮಾನೇ ವಸ್ತುನಿ ಅಸ್ತಿತ್ವಸ್ಯೈವ ಲೋಕವ್ಯವಹಾರಸಿದ್ಧತ್ವಾತ್ । ತತ್ ದೃಶ್ಯತ್ವಮ್ ॥ ೧೦೧೧ ॥

ದೃಶ್ಯತ್ವಹೇತುವು ವ್ಯಭಿಚಾರಿ. ಇಂತಹ ಹೇತುವಿನಿಂದ ನೀವು ಸತ್ಯತ್ವವನ್ನು ಹೇಗೆ ಸಾಧಿಸುತ್ತೀರಿ ಎಂಬ ಪ್ರಶ್ನೆಗೆ ಉತ್ತರವನ್ನು ಮುಂದಿನ ಮೂರು ಪದ್ಯಗಳಿಂದ ಕೊಡುತ್ತಾರೆ -

**ಜ್ಞಾನೋಪನೀತೋ ಭಾತೋಽಪಿ ಗಂಧೋ ಯೋಗ್ಯೋ ನ ಚಕ್ಷುಷಃ ।**
**ಘ್ರಾಣಸ್ಯೈವ ಸ ಯೋಗ್ಯೋಽರ್ಥೋ ರೂಪಾದ್ಯಾಃ ಕಿಲ ಚಕ್ಷುಷಃ ॥೧೦೧೨॥**

**ಅರ್ಥ**-ಗಂಧಃ = ಪೃಥಿವಿಯಲ್ಲಿರುವ ಪರಿಮಳವು, ಜ್ಞಾನೋಪನೀತಃ ಭಾತಃ ಅಪಿ = ಜ್ಞಾನದಿಂದ ಉಪನೀತವಾಗಿ ಜ್ಞಾನಕ್ಕೆ ವಿಷಯವಾದರೂ, ಚಕ್ಷುಷಃ = ಕಣ್ಣಿಗೆ, ನ ಯೋಗ್ಯಃ = ಯೋಗ್ಯವಲ್ಲ(ವಿಷಯವಲ್ಲ). ಸಃ = ಆ ಗಂಧವು, ಘ್ರಾಣಸ್ಯ ಏವ = ಘ್ರಾಣೇಂದ್ರಿಯಕ್ಕೇ, ಯೋಗ್ಯಃ = ಯೋಗ್ಯವಾದ, ಅರ್ಥಃ = ವಿಷಯವು. ರೂಪಾದ್ಯಾಃ = ರೂಪವೇ ಮೊದಲಾದ ಗುಣಗಳು, ಚಕ್ಷುಷಃ = ಕಣ್ಣಿಗೆ ಯೋಗ್ಯಗಳು (ವಿಷಯಗಳು).

**ಅನುವಾದ**- ಘ್ರಾಣೇಂದ್ರಿಯದಿಂದ ಉಪನೀತವಾಗಿ ಚಾಕ್ಷುಷಜ್ಞಾನದಲ್ಲಿ ಗಂಧವು ತೋರಿದರೂ ಅದು ಚಕ್ಷುಸ್ಸಿಗೆ ವಿಷಯವಲ್ಲ. ಅದು ಘ್ರಾಣೇಂದ್ರಿಯಕ್ಕೆ ಮಾತ್ರ ಯೋಗ್ಯವಾದ ಅರ್ಥ. ರೂಪಾದಿಗಳು ಮಾತ್ರ ಚಕ್ಷುಸ್ಸಿಗೆ ಯೋಗ್ಯವಾದ ವಿಷಯಗಳಷ್ಟೆ?

**ಭಾವವಿಲಾಸಿನೀ**– ನನು ದೃಶೋ ಯೋಗ್ಯತ್ವಂ ಹಿ ದೃಶ್ಯತ್ವಂ ತಚ್ಚ ಶುಕ್ತಿರಜತೇಽಪ್ಯಸ್ತಿ। ಇದಂ ರಜತಮಿತಿ ತಸ್ಯಾಪಿ ಚಕ್ಷುಷಾ ದೃಶ್ಯಮಾನತ್ವಾತ್ । ಅತಃ ಕಥಂ ವ್ಯಭಿಚರಿತೇನ ಹೇತುನಾ ಸತ್ಯತ್ವಸಾಧನಮಿತಿ ಶಂಕಾಪರಿಹಾರಾಯ ಶುಕ್ತಿರಜತಾದೇರ್ದರ್ಶನಯೋಗ್ಯತ್ವಮೇವ ನಿವಾರಯತಿ ॥ **ಜ್ಞಾನೇತಿ** ॥ ಸಃ ಗಂಧಃ ॥ ೧೦೧೨ ॥

**ವಿವರಣೆ**- ದೃಶ್ಯತ್ವಂ ಎಂದರೆ ದರ್ಶನಯೋಗ್ಯತ್ವ ಎಂದು ಅರ್ಥ. ಶುಕ್ತಿರಜತವು ಕಣ್ಣಿಗೆ ಕಾಣುವುದರಿಂದ ಅದರಲ್ಲಿ ದರ್ಶನಯೋಗ್ಯತ್ವವಿದೆ. ಹೀಗಿರುವಾಗ ದೃಶ್ಯತ್ವವು ಮಿಥ್ಯಾತ್ವವನ್ನು ಸಾಧಿಸಲು ವ್ಯಭಿಚರಿತವಾಗುತ್ತದೆ ಎಂದು ದೋಷವನ್ನು ಹೇಳಿ ಸತ್ಯತ್ವವನ್ನು ಹೇಗೆ ಸಾಧಿಸುತ್ತೀರಿ ಎಂಬ ಪ್ರಶ್ನೆಗೆ ಇನ್ನು ಮೂರು ಶ್ಲೋಕಗಳಲ್ಲಿ ಉತ್ತರವನ್ನು ಹೇಳುತ್ತಾರೆ. ಶುಕ್ತಿರಜತವು ಜ್ಞಾನಕ್ಕೆ ಯೋಗ್ಯವಾದರೂ ಅದರಲ್ಲಿ ದೃಶ್ಯತ್ವವಿಲ್ಲ. ದೃಶ್ಯತ್ವ ಉಂಟಾಗಬೇಕಾದರೆ ಇಂದ್ರಿಯಕ್ಕೂ ಮತ್ತು ಅರ್ಥಕ್ಕೂ ಸನ್ನಿಕರ್ಷ ಉಂಟಾಗಬೇಕು. ಅಸತ್ತಾದ ಶುಕ್ತಿರಜತದಲ್ಲಿ ಸನ್ನಿಕರ್ಷವೇ ಇಲ್ಲದಿರುವುದರಿಂದ ಅದು ಯಾವ ಬಾಹ್ಯೇಂದ್ರಿಯಗಳಿಗೂ ವಿಷಯವಾಗುವುದಿಲ್ಲ. ಇನ್ನು ಸಾಕ್ಷಿಗೂ ವಿಷಯವಾಗುವುದಿಲ್ಲವೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ಆದ್ದರಿಂದ ಬಾಹ್ಯೇಂದ್ರಿಯಕ್ಕೂ ವಿಷಯವಲ್ಲದ ಸಾಕ್ಷಿಗೂ ವಿಷಯವಲ್ಲದ ಶುಕ್ತಿರಜತದಲ್ಲಿ ದೃಶ್ಯತ್ವವೇ ಇಲ್ಲ. ಆದ್ದರಿಂದ ದೃಶ್ಯತ್ವವು ಸತ್ಯತ್ವಕ್ಕೆ ಸಾಧಕವಾಗುತ್ತದೆ ಎಂದು ಅಭಿಪ್ರಾಯ.

ಸಾಕ್ಷಿಯ ಸ್ವರೂಪ ಮತ್ತು ಅದರ ಶಕ್ತಿಯೇ ಬೇರೆ ಎಂದು ವಿವರಿಸುತ್ತಾರೆ -

**ಅಂತರೇವ ಸ್ವತಂತ್ರಸ್ಯ ಬಾಹ್ಯೋಽರ್ಥೋ ಘಟಪೂರ್ವಕಃ ।**
**ಜ್ಞಾನೋಪನೀತೋ ಭಾತೋಽಪಿ ತದ್ವದ್ ಯೋಗ್ಯೋ ನ ಸಾಕ್ಷಿಣಃ ॥**

**ಅರ್ಥ-**ಘಟಪೂರ್ವಕಃ = ಘಟವೇ ಮೊದಲಾದ, ಬಾಹ್ಯಾರ್ಥಃ = ಬಾಹ್ಯೇಂದ್ರಿಯ (ಹೊರಗಿನ ಇಂದ್ರಿಯಗಳಾದ ಚಕ್ಷುಸ್ಸು ಮೊದಲಾದ) ವುಗಳಿಗೆ ವಿಷಯವಾದ ಪದಾರ್ಥಗಳು. ಜ್ಞಾನೋಪನೀತಃ ಭಾತಃ ಅಪಿ = ಜ್ಞಾನವಿಷಯವಾಗಿ ತಿಳಿಯಲ್ಪಟ್ಟರೂ, ಸಾಕ್ಷಿಣಃ = ಸಾಕ್ಷಿಗೆ, ತದ್ವತ್ = ಹೇಗೆ ಗಂಧವು ಚಕ್ಷುಸ್ಸಿಗೆ ವಿಷಯವಲ್ಲವೋ ಹಾಗೆ, ಯೋಗ್ಯಃ ನ = ವಿಷಯವಲ್ಲ, ಸ್ವತಂತ್ರಸ್ಯ = ಬೇರೆ ಇಂದ್ರಿಯಗಳ ಅಪೇಕ್ಷೆಯಿಲ್ಲದೆ ಸುಖಾದಿವಸ್ತುಗಳನ್ನು ಗ್ರಹಿಸುವ, ಸಾಕ್ಷಿಣಃ = ಸಾಕ್ಷಿಗೆ. ಅಂತರೇವ ಅರ್ಥಃ = ಆಂತರಿಕ ಪದಾರ್ಥವೇ, ಅರ್ಥಃ = ವಿಷಯವು.

**ಅನುವಾದ-** ಘಟವೇ ವೊದಲಾದ ಬಾಹ್ಯವಸ್ತುಗಳು ಚಕ್ಷುಸ್ಸೇ ವೊದಲಾದ ಇಂದ್ರಿಯಗಳಿಗೆ ವಿಷಯಗಳು. ಚಕ್ಷುರಿಂದ್ರಿಯಕ್ಕೆ ಗಂಧವು ಅಯೋಗ್ಯವಾಗಿದೆ. ಅಂತೆಯೇ ಘಟಪಟಾದಿಗಳು ನೇರವಾಗಿ ಸಾಕ್ಷಿಗೆ ವಿಷಯವಲ್ಲ. ಆದರೂ ಘಟಜ್ಞಾನವಾನಹಂ ಎಂಬುದಾಗಿ ಘಟವಿಷಯಕಜ್ಞಾನವನ್ನು ವಿಷಯೀಕರಿಸುವ ಸಾಕ್ಷಿಯಿಂದ ಜ್ಞಾನದ್ವಾರಾ (ಘಟಜ್ಞಾನವಿಶೇಷಣತಯಾ) ಘಟಾದಿಗಳು ತಿಳಿಯಲ್ಪಡುತ್ತವೆ. ಸಾಕ್ಷಿಗೆ ಸಾಕ್ಷಾತ್ ವಿಷಯವು ಆಂತರಿಕ ಪದಾರ್ಥಗಳು. ಎಂದರೆ ಸುಖ, ದುಃಖ, ಪ್ರಾಮಾಣ್ಯಾದಿಗಳು.

**ಭಾವವಿಲಾಸಿನೀ–** ತದ್ವತ್ ಚಕ್ಷುಷೋ ಗಂಧವತ್ ॥ ೧೦೧೩ ॥

**ವಿವರಣೆ-** ಚಕ್ಷುರಾದಿ ಇಂದ್ರಿಯಂದುಂಟಾದ ಜ್ಞಾನಕ್ಕೆ ವಿಷಯವಾದ ಘಟ-ಪಟಾದಿಗಳು ಸಾಕ್ಷಿಗೆ ಜ್ಞಾನದ್ವಾರಾ ಅಂದರೆ ಘಟಜ್ಞಾನವಾನಹಂ ಎಂಬ ಅನುವ್ಯವಸಾಯಕ್ಕೆ ಘಟಜ್ಞಾನದ್ವಾರಾ ವಿಷಯವಾಗಬಹುದು ಶುಕ್ತಿರಜತವು ಸಾಕ್ಷಿಗೆ ನೇರವಿಷಯವಲ್ಲ. ಏತಾವಂತಂ ಕಾಲಂ ಶುಕ್ತಿ ರಜತ ಭ್ರಮೋ ಮೇ ಆಸೀತ್ ಎಂದು ಭ್ರಮರೂಪ ಜ್ಞಾನಕ್ಕೆ ವಿಷಯವಾದ ಶುಕ್ತಿ ರಜತವನ್ನು ಭ್ರಮರೂಪ ಜ್ಞಾನದ ದ್ವಾರಾ ವಿಷಯೀಕರಿಸುತ್ತದೆಯೇ ಹೊರತು 'ಅಹಂ ಸುಖೀ', 'ಅಹಂ ದುಃಖೀ' ಎಂಬ ಜ್ಞಾನದಂತಲ್ಲ. ಸುಖದುಃಖಾದಿಗಳುಸಾಕ್ಷಾದೇವ ಸಾಕ್ಷಿ ರೂಪಜ್ಞಾನಕ್ಕೆ ವಿಷಯಗಳು.

**ಸುಖಾದ್ಯಾ ಏವ ತದ್ಯೋಗ್ಯಾಃ ಕ್ವಾಚಿತ್ಕಂ ಕಾರಣಂ ವಿನಾ ।**
**ಕ್ಲೃಪ್ತಯಾ ಸ್ವಸ್ವಸಾಮಗ್ರ್ಯಾ ಯದ್ದೃಷ್ಟಿಃ ಸ್ಯಾತ್ ಪದೇ ಪದೇ ।**
**ಸ ಏವ ತತ್ತದ್ಯೋಗ್ಯೋಽರ್ಥೋ ನಾನ್ಯಃ ಕೃತ್ರಿಮಪುತ್ರವತ್ ॥ ೧೦೧೪ ॥**

**ಅರ್ಥ-** ಸುಖಾದ್ಯಾ ಏವ = ಸುಖದುಃಖ ಮೊದಲಾದವುಗಳೇ, ತದ್ಯೋಗ್ಯಾಃ = ಆ ಸಾಕ್ಷಿಗೆ ಯೋಗ್ಯವಾದ ವಿಷಯಗಳು, ಕ್ವಾಚಿತ್ಕಂ = ಕ್ವಾಚಿತ್ಕವಾದ, ಕಾರಣಂ ವಿನಾ = ಕಾರಣವಿಲ್ಲದೆ, ಕ್ಲೃಪ್ತಯಾ = ಕ್ಲುಪ್ತವಾದ, ಸ್ವಸ್ವಸಾಮಗ್ರ್ಯಾ = ತನ್ನ ತನ್ನ ಸಾಮಗ್ರಿಯಿಂದ, ಪದೇ ಪದೇ = ಪುನಃ ಪುನಃ, ಯದ್ದೃಷ್ಟಿಃ = ಯಾವ ವಸ್ತುವಿನ ಜ್ಞಾನವುಂಟಾಗುತ್ತದೆಯೋ,

ಸ ಏವ = ಆ ಪದಾರ್ಥವೇ, ತತ್ತದ್ಯೋಗ್ಯಃ = ಆಯಾ ಇಂದ್ರಿಯಗಳಿಗೆ ಯೋಗ್ಯವಾದ, ಅರ್ಥಃ = ಅರ್ಥವಾಗುತ್ತದೆ, ಅನ್ಯಃ = ಭಿನ್ನವಾದುದು, ಕೃತ್ರಿಮಪುತ್ರವತ್ = ದತ್ತಪುತ್ರನಂತೆ, ನ = ಯೋಗ್ಯವಾಗುವುದಿಲ್ಲ.

**ಅನುವಾದ- ಸುಖಾದಿಗಳೇ ಆ ಸಾಕ್ಷಿಗೆ ಯೋಗ್ಯವಾದುವು. ಕ್ವಾಚಿತ್ಕವಾದ ಕಾರಣವಿಲ್ಲದೆ, ಕ್ಲುಪ್ತವಾದ ತನ್ನ ತನ್ನ ಸಾಮಗ್ರಿಗಳಿಂದ ಯಾವ ವಸ್ತುವಿನ ಜ್ಞಾನವು ಪುನಃ ಪುನಃ ಉಂಟಾಗುತ್ತದೆಯೋ, ಆ ವಸ್ತುವೇ ಆಯಾ ಇಂದ್ರಿಯಗಳಿಗೆ ಯೋಗ್ಯವಾದ ಪದಾರ್ಥಗಳು. ಅದಕ್ಕಿಂತ ಭಿನ್ನವಾದುದು ದತ್ತಪುತ್ರನಂತೆ ಆ ಇಂದ್ರಿಯಕ್ಕೆ ಯೋಗ್ಯವಾದ ಅರ್ಥವಲ್ಲ.**

**ಭಾವವಿಲಾಸಿನೀ–** ಕುತಸ್ಸುಖಾದ್ಯಾ ಏವ ಚ ಯೋಗ್ಯಾ ಇತ್ಯತ ಆಹ - **ಕ್ವಾಚಿತ್ಕಮಿತಿ** ॥ ಕ್ವಾಚಿತ್ಕಂ ಸರ್ವತ್ರ ತತ್ತದರ್ಥದರ್ಶನಹೇತುತ್ವೇನಾದೃಷ್ಟಂ ಕ್ವಚಿದೇವಚ ಹೇತುತಯಾ ದೃಷ್ಟಂ ಚ । ಯದೃಷ್ಟಿಃ ಯಸ್ಯಾರ್ಥಸ್ಯ ದೃಷ್ಟಿಃ । ಅನ್ಯಃ ಕ್ಲೃಪ್ತಸ್ವಸಾಮಗ್ರೀಂ ವಿನಾ ಕ್ವಾಚಿತ್ಕಕಾರಣೇನ ಕದಾಚಿತ್ಕೇನಚಿದ್ ವೇದ್ಯಃ । ಕೃತ್ರಿಮಪುತ್ರವತ್ ದತ್ತಪುತ್ರವತ್ । ಯಥಾ ಸ್ವಸ್ವೋದರಜಾತ ಏವ ಸ್ವಪುತ್ರಃ ಅನ್ಯಃ ಔರಸಪುತ್ರಾಭಾವಾದ್ಗೃಹೀತೋ ನ ಸ್ವಪುತ್ರವತ್ಪುತ್ರಃ । ಯಥಾ ಚಕ್ಷುರಾದಿನಾ ಸರ್ವತ್ರ ಕ್ಲೃಪ್ತಸಾಮಾನ್ಯಸಾಮಗ್ರೀತ ಏವ ಸಾಕ್ಷಾತ್ಕೃತೋ ಘಟಾದಿಶ್ಚ ಕ್ಷುರಾದೇರರ್ಥಃ । ಜ್ಞಾನಾಖ್ಯಕ್ವಾಚಿತ್ಕಕಾರಣಾಂತರಬಲೇನ ಗೃಹೀತಸ್ತು ಗಂಧಾದಿರ್ನ ಚಕ್ಷುಷೋಽರ್ಥಃ । ಏವಂ ಸಾಕ್ಷಿಣಾ ಸ್ವಶಕ್ತ್ಯೈವ ಗೃಹೀತಸ್ಸುಖಾದಿಸ್ಸಾಕ್ಷಿಣೋಽರ್ಥಃ । ವ್ಯವಸಾಯದ್ವಾರಾ ಗೃಹೀತೋ ಘಟಾದಿಶ್ಶುಕ್ತಿರಜತಾದಿರ್ವಾ ನ ಸಾಕ್ಷಿಣೋರ್ಥಃ । ತಥಾ ದೋಷವಶಾಚ್ಚಕ್ಷುಷಾ ಗೃಹೀತೋಽಪಿ ಶುಕ್ತಿರಜತಾದಿರ್ನ ಚಕ್ಷುಷೋಽರ್ಥ ಕಿಂತು ಘಟಾದಿರೇವೇತಿ ಸರ್ವತ್ರ ವಿಷಯವಿವೇಕೋ ದ್ರಷ್ಟವ್ಯಃ ॥ ೧೦೧೪ ॥

**ವಿವರಣೆ-** ಸುಖಾದಿಗಳೇ ಏಕೆ ಸಾಕ್ಷಿಗೆ ಯೋಗ್ಯವಾದ ವಿಷಯಗಳು ಎಂಬುದನ್ನು ಇಲ್ಲಿ ಹೇಳುತ್ತಾರೆ. ಕ್ವಾಚಿತ್ಕವಾದ ಕಾರಣ ಎಂದರೆ, ಸರ್ವತ್ರ ಇಲ್ಲದೆ ಎಲ್ಲೋ ಕೆಲವು ಕಡೆ ಇರುವ ಕಾರಣ ಎಂದು ಅರ್ಥ. ಕ್ಲುಪ್ತಸಾಮಗ್ರಿ ಇಲ್ಲದೆ ಕ್ವಾಚಿತ್ಕವಾದ ಕಾರಣದಿಂದ ಯಾವಾಗಲೋ ಒಮ್ಮೆ ಯಾವುದೋ ಒಂದು ಇಂದ್ರಿಯದಿಂದ ವೇದ್ಯವಾದುದು ದತ್ತಪುತ್ರನಂತೆ. ಔರಸಪುತ್ರನೇ ತನ್ನ ನಿಜವಾದ ಪುತ್ರ. ದತ್ತಪುತ್ರನು ಔರಸಪುತ್ರನು ಇಲ್ಲದ ಕಾರಣದಿಂದ ಬೇರೆ ಕಡೆಯಿಂದ ಸಂಗ್ರಹಿಸಿದ ತನ್ನ ಪುತ್ರನಂತಿರುವ ಪುತ್ರ ಮಾತ್ರ. ಚಕ್ಷುರಾದಿಗಳಿಂದ ಸರ್ವತ್ರಕ್ಲುಪ್ತ ಸಾಮಾನ್ಯಸಾಮಗ್ರಿಯಿಂದಲೇ ಗೃಹೀತವಾದ ಘಟಾದಿಗಳು ಚಕ್ಷುರಾದಿಗಳಿಗೆ ಅರ್ಥ. ಸುರಭಿಃ ಚಂದನ ಖಂಡಃ ಎಂಬಲ್ಲಿ ಜ್ಞಾನರೂಪವಾದ, ಕ್ವಾಚಿತ್ಕವಾದ ಕಾರಣಾಂತರಬಲದಿಂದ ಗೃಹೀತವಾದ ಗಂಧಾದಿಗಳು ಚಕ್ಷುಸ್ಸಿಗೆ ಯೋಗ್ಯವಾದ ಅರ್ಥವಲ್ಲ. ಅದರಂತೆ ಸಾಕ್ಷಿಯು ತನ್ನ ಶಕ್ತಿಯಿಂದಲೇ ಗ್ರಹಿಸುವ ಸುಖಾದಿಗಳು ಸಾಕ್ಷಿಗೆ ಯೋಗ್ಯವಾದ ಅರ್ಥ. ವ್ಯವಸಾಯದ್ವಾರಾ ಗೃಹೀತವಾದ ಘಟಾದಿಗಳಾಗಲೀ,

ಶುಕ್ತಿರಜತಾದಿಗಳಾಗಲೀ ಸಾಕ್ಷಿಗೆ ಯೋಗ್ಯವಾದ ಅರ್ಥವಲ್ಲ. ಅದರಂತೆ ದೋಷವಶದಿಂದ ಗೃಹೀತವಾದ ಶುಕ್ತಿರಜತವು ಚಕ್ಷುಸ್ಸಿಗೂ ಯೋಗ್ಯವಾದ ಅರ್ಥವಲ್ಲ. ಘಟಾದಿಗಳೇ ಚಕ್ಷುಸ್ಸಿಗೆ ಯೋಗ್ಯವಾದ ಅರ್ಥ ಎಂದು ವಿಷಯವಿವೇಕವನ್ನು ತಿಳಿಯಬೇಕು.

**ಸಹಕಾರ್ಯಂಕರಬಲಾತ್ ಪ್ರತೀತಿಃ ಸ್ಯಾತ್ ಕ್ವಚಿತ್ ಕ್ವಚಿತ್ ।**
**ಯೋಗ್ಯತಾ ತೂಕ್ತಮಾರ್ಗೇಣ ಸ್ವಾರಸ್ಯಾತ್ ಪ್ರತ್ಯಯೇ ಕಿಲ ॥ ೧೦೧೫ ॥**

**ಅರ್ಥ**-ಸಹಕಾರ್ಯಂತರಬಲಾತ್=ಬೇರೊಂದು ಸಹಕಾರಿ ಕಾರಣದ ಬಲದಿಂದ ಕ್ವಚಿತ್ ಕ್ವಚಿತ್=ಕೆಲವು ಕಡೆಯಲ್ಲಿ ಪ್ರತೀತಿಃ=ಜ್ಞಾನವು ಸ್ಯಾತ್=ಉಂಟಾಗಬಹುದು, ಕಿಂತು=ಆದರೆ ಯೋಗ್ಯತಾತು=ಯೋಗ್ಯತೆಯಾದರೂ, ಸ್ವಾರಸ್ಯಾತ್=ಸ್ವಾಭಾವಿಕವಾಗಿ, ಉಕ್ತಮಾರ್ಗೇಣ= ಹಿಂದೆ ತೋರಿಸಿದ ರೀತಿಯಂತೆ, ಪ್ರತ್ಯಯೇ ಕಿಲ=ತಮ್ಮಿಂದ ಜನ್ಯವಾದ ಜ್ಞಾನದಲ್ಲಿ ಮಾತ್ರ.

**ಅನುವಾದ**- ಇಂದ್ರಿಯಗಳು ಬೇರೊಂದು ಸಹಕಾರಿಯ ಸಹಾಯದಿಂದ ಕೆಲವು ಕಡೆ ತಮಗೆ ಯೋಗ್ಯವಲ್ಲದ ವಸ್ತುವಿನ ಜ್ಞಾನವನ್ನೂ ಪಡೆಯಬಹುದು. ಉದಾಹರಣೆ: ಸುರಭಿಶ್ಚಂದನಖಂಡಃ ಎಂಬಲ್ಲಿ. ಇದು ಅಲೌಕಿಪ್ರತ್ಯಕ್ಷ. ಇಲ್ಲಿ ಚಕ್ಷುರಿಂದ್ರಿಯವು. ಘ್ರಾಣಗ್ರಹಣ ಯೋಗ್ಯವಾದ ಗಂಧವನ್ನೂ ಉಪನಯ ಬಲದಿಂದ ಗ್ರಹಿಸುತ್ತದೆ. ಆದರೆ ಚಕ್ಷುರಿಂದ್ರಿಯದ ಯೋಗ್ಯತೆಯು ರೂಪಗ್ರಹಣದಲ್ಲಿ ಮಾತ್ರ ಎಂದು ಇದನ್ನು ಹಿಂದೆಯೇ ನಿರೂಪಿಸಿದ್ದೇವೆ.

**ಭಾವವಿಲಾಸಿನೀ**- ಸ್ವಾರಸ್ಯಾತ್ ಸ್ವಸ್ವಭಾವಾತ್ ॥ ೧೦೧೫ ॥

**ಇಮಾಂ ಹಿ ಶಾಸ್ತ್ರಮರ್ಯಾದಾಂ ಸರ್ವೇಽಂಗೀಕುರ್ವತೇ ಬುಧಾಃ ।**
**ಅತೋ ದೋಷಾತ್ ಪ್ರತೀತೇಪಿ ಮಿಥ್ಯಾರ್ಥೇ ನಾಸ್ತಿ ಯೋಗ್ಯತಾ ॥೧೦೧೬॥**

**ಅರ್ಥ**-ಸರ್ವೇ ಬುಧಾಃ=ಎಲ್ಲಾ ವಿದ್ವಜ್ಜನರೂ, ಇಮಾಂ ಶಾಸ್ತ್ರಮರ್ಯಾದಾಂ=ಈ ಶಾಸ್ತ್ರಮರ್ಯಾದೆಯನ್ನು ಅಂಗೀಕುರ್ವತೇ= ಅಂಗೀಕರಿಸುತ್ತಾರೆ. ಅತಃ=ಆದ್ದರಿಂದ ದೋಷವಶಾತ್= ಕಾಚ ಕಾಮಲ ಮೊದಲಾದ ದೋಷಗಳಿಂದ ಮಿಥ್ಯಾರ್ಥೇ= ಮಿಥ್ಯಾಭೂತವಾದ ಅರ್ಥವು. ಪ್ರತೀತೇಪಿ= ಪ್ರತೀತವಾದರೂ. ಯೋಗ್ಯತಾ=ಗ್ರಹಣ ಯೋಗ್ಯತೆಯು ಮಿಥ್ಯಾರ್ಥೇ= ಮಿಥ್ಯಾಭೂತವಾದ ಅರ್ಥದಲ್ಲಿ, ನಾಸ್ತಿಹಿ=ಇಲ್ಲವಷ್ಟೆ?

**ಅನುವಾದ**- ಈವರೆಗೆ ನಾವು ನಿರೂಪಿಸಿದ ಸಾಕ್ಷಿಯೋಗ್ಯತೆಯನ್ನು ಮತ್ತು ಇಂದ್ರಿಯಗಳ ಸಹಜಶಕ್ತಿಯನ್ನು ನಾಸ್ತಿಕಾಸ್ತಿಕ ಸರ್ವತೀರ್ಥಂಕರರೂ ಅಂಗಿಕರಿಸುತ್ತಾರೆ. ಕಾಚಕಾಮಲಾದಿ ದೋಷದಿಂದ ಪ್ರತೀತವಾದರೂ ಇಂದ್ರಿಯಗಳಿಗೆ ಅತ್ಯಂತ ಅಸತ್ತಾದ ವಸ್ತುವಿನಲ್ಲಿ ಯೋಗ್ಯತೆಯು ಇರುವುದಿಲ್ಲ.

**ಭಾವವಿಲಾಸಿನೀ**- ಮಿಥ್ಯಾರ್ಥೇ ಶುಕ್ತಿರಜತಾದೌ । ಯೋಗ್ಯತಾ ಚಕ್ಷುರ್ಜನ್ಯದರ್ಶನ-ಯೋಗ್ಯತಾ ॥ ೧೦೧೬ ॥

**ವಿವರಣೆ-** ಇದು ಆಯಾ ಇಂದ್ರಿಯಗಳ ಯೋಗ್ಯತೆಯು. ಇದನ್ನು ಎಲ್ಲರೂ ಅಂಗೀಕರಿಸಿದ್ದಾರೆ. ಈ ವಿಚಾರದಲ್ಲಿ ನಾಸ್ತಿಕರಾಗಲೀ ಆಸ್ತಿಕರಾಗಲೀ ವಿವಾದವನ್ನು ಮಾಡುವುದಿಲ್ಲ. ಆದ್ದರಿಂದ ಸನ್ನಿಕರ್ಷವಿಲ್ಲದೆ ದೋಷದ ಬಲದಿಂದ ಪ್ರತೀಕವಾದ ಶುಕ್ತಿರಜತದಲ್ಲಿ ಮಿಥ್ಯಾತ್ವವಿಲ್ಲ ಎಂದು ಅಭಿಪ್ರಾಯ.

**ಬೇರೊಂದು ರೀತಿಯಿಂದ ಶುಕ್ತಿ ರಜತಾದಿಗಳು ಚಕ್ಷುರಿಂದ್ರಿಯಕ್ಕೆ ಅಯೋಗ್ಯ ಎಂದು ಸಮರ್ಥಿಸುತ್ತಾರೆ-**

**ಕಿಂಚ ಪ್ರತ್ಯಕ್ಷಯೋಗ್ಯಂ ಸ್ಯಾದ್ ಬಹಿರ್ದ್ರವ್ಯಂ ತದೇವ ಹಿ ।**
**ಮಹತ್ತ್ವೇ ಸತಿ ಯದ್ರೂಪಮುದ್ಭೂತಂ ಚ ಭವೇತ್ ಸದಾ ॥**
**ತಸಾದ್ ದರ್ಶನಯೋಗ್ಯತ್ವಂ ಮಿಥ್ಯಾರ್ಥೇಷ್ವಸ್ತಿ ನ ಕ್ವಚಿತ್ ॥ ೧೦೧೭ ॥**

**ಅರ್ಥ-**ಕಿಂಚ= ಮತ್ತು, ಯದ್ರೂಪಮುದ್ಭೂತಂ= ಯಾವ ದ್ರವ್ಯವು ಉದ್ಭೂತರೂಪ-ವುಳ್ಳದ್ದಾಗಿರುತ್ತದೆಯೋ, ತದೇವ ಬಹಿರ್ದ್ರವ್ಯಂ= ಆ ಬಾಹ್ಯದ್ರವ್ಯವೇ, ಮಹತ್ತ್ವೇ ಚ ಸತಿ= ಮಹತ್ವವೂ ಇದ್ದರೆ, ಸದಾ= ಯಾವಾಗಲೂ, ಪ್ರತ್ಯಕ್ಷಯೋಗ್ಯಂ ಸ್ಯಾತ್= ಪ್ರತ್ಯಕ್ಷಕ್ಕೆ ಯೋಗ್ಯವಾಗುತ್ತದೆ, ತಸ್ಮಾತ್= ಆದ್ದರಿಂದ, ಮಿಥ್ಯಾರ್ಥೇ= ಮಿಥ್ಯಾಭೂತವಾದ ಅರ್ಥದಲ್ಲಿ, ದರ್ಶನಯೋಗ್ಯತ್ವಂ= ಪ್ರತ್ಯಕ್ಷಯೋಗ್ಯತ್ವವು, ನ ಕ್ವಚಿದಸ್ತಿ= ಎಂದೂ (ಎಲ್ಲಿಯೂ) ಇಲ್ಲ.

**ಅನುವಾದ-** ಮತ್ತು ಯಾವ ಬಾಹ್ಯದ್ರವ್ಯವು ಮಹತ್ತ್ವವಿಶಿಷ್ಟ ಉದ್ಭೂತರೂಪವನ್ನು ಹೊಂದಿರುತ್ತದೆಯೋ ಅದೇ ಯಾವಾಗಲೂ ಪ್ರತ್ಯಕ್ಷಯೋಗ್ಯವಾಗುತ್ತದೆ. ಮಿಥ್ಯಾಭೂತವಾದ ಶುಕ್ತಿರಜತಾದಿಗಳಲ್ಲಿ ಮಹತ್ತ್ವವಾಗಲೀ, ಉದ್ಭೂತರೂಪವಾಗಲೀ ಇಲ್ಲದಿರುವುದರಿಂದ ಅದು ಎಂದೂ ಚಕ್ಷುಸ್ಸಿಗೆ ಯೋಗ್ಯವೇ ಅಲ್ಲ. ಆದ್ದರಿಂದ ಮಿಥ್ಯಾರ್ಥದಲ್ಲಿ ಎಂದೂ ಪ್ರತ್ಯಕ್ಷಯೋಗ್ಯತೆಯು ಇಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಶುಕ್ತಿರಜತಾದೇಶ್ಚಕ್ಷುರಯೋಗ್ಯತಾಂ ಪ್ರದರ್ಶಯತಿ ॥ **ಕಿಂ ಚೇತಿ॥** ಯದ್ರೂಪಂ ಯಸ್ಯ ರೂಪಮ್ । ಅತಶ್ಚಾಕ್ಷುಷಬಾಧಪ್ರಮಾಯಾಂ ಬಾಧ್ಯರಜತೋಲ್ಲೇಖೇಽಪಿ ನ ತಸ್ಯ ಚಕ್ಷುರ್ವಿಷಯತ್ವಮ್ । ಉಪನೀತಸ್ಯೈವ ಭಾನಾಚ್ಚೇತಿ ಭಾವಃ ॥ ೧೦೧೭ ॥

ಸತ್ಯತ್ವ-ದೃಶ್ಯತ್ವಗಳು ಪರಸ್ಪರವ್ಯಾಪ್ತಗಳು-

**ಶಬ್ದಾಚ್ಚಾಯೋಗ್ಯತಾದೋಷೇ ಸತಿ ಮಿಥ್ಯಾರ್ಥಧೀರ್ನೃಣಾಮ್ ।**
**ಅಪ್ರಮಾ ಪರತೋ ಯಸ್ಯ ದೋಷಾಭಾವೇ ಸ ದೋಷಭಾಕ್ ॥ ೧೦೧೮ ॥**

**ತಸ್ಮಾದ್ ದೃಶ್ಯತ್ವಸತ್ಯತ್ವೇ ಸತ್ಯೇ ಬ್ರಹ್ಮಣಿ ವರ್ತನಾತ್ ।**
**ಮಿಥ್ಯಾರ್ಥತೋ ನಿವೃತ್ತೇಶ್ಚ ನಿತ್ಯಂ ವ್ಯಾಪ್ತೇ ಪರಸ್ಪರಮ್ ॥ ೧೦೧೯ ॥**

**ಅರ್ಥ-**ಅಯೋಗ್ಯತಾದೋಷೇ ಸತಿ= ಅಯೋಗ್ಯತ್ವರೂಪವಾದ ದೋಷವು ಇರಲು, ನೃಣಾಂ=ಮನುಷ್ಯರಿಗೆ, ಶಬ್ದಾತ್=ಶಬ್ದದಿಂದ, ಮಿಥ್ಯಾರ್ಥಧೀಃ=ಮಿಥ್ಯಾರ್ಥ ವಿಷಯಕವಾದ ಬುದ್ಧಿಯು, ಸ್ಯಾತ್= ಬರುತ್ತದೆ. ಯಸ್ಯ=ಯಾರ ಮತದ ಪ್ರಕಾರ, ಅಪ್ರಮಾ=ಅಪ್ರಮಾಣವು, ಪರತಃ=ಜ್ಞಾನಜನಕ ಸಾಮಗ್ರೀ ಮಾತ್ರ ಜನ್ಯವಲ್ಲವೋ, ದೋಷಾಭಾವೇ=ದೋಷವು ಇಲ್ಲದೇ ಹೋದಲ್ಲಿ ಸಃ= ಅಪ್ರಾಮಾಣ್ಯವನ್ನು ಹೇಳುವವನು ದೋಷಭಾಕ್=ದೋಷವನ್ನು ಹೊಂದುತ್ತಾನೆ. ತಸ್ಮಾತ್= ಆ ಕಾರಣದಿಂದ, ಸತ್ಯೇ= ಸತ್ಯನಾದ, ಬ್ರಹ್ಮಣಿ= ಬ್ರಹ್ಮನಲ್ಲಿ, ವರ್ತನಾತ್= ಇರುವುದರಿಂದ, ಚ= ಮತ್ತು, ಮಿಥ್ಯಾರ್ಥಃ= ಮಿಥ್ಯಾಭೂತವಾದ ಅರ್ಥದಲ್ಲಿ, ನಿವೃತ್ತೇಃ= ಇಲ್ಲದಿರುವುದರಿಂದ, ದೃಶ್ಯತ್ವಸತ್ಯತ್ವೇ= ದೃಶ್ಯತ್ವ ಮತ್ತು ಸತ್ಯತ್ವಗಳು, ನಿತ್ಯಂ= ಯಾವಾಗಲೂ, ಪರಸ್ಪರಂ= ಪರಸ್ಪರವಾಗಿ, ವ್ಯಾಪ್ತೇ= ವ್ಯಾಪಕಭಾವವುಳ್ಳವು.

**ಅನುವಾದ-** ಶಬ್ದದಲ್ಲಿ ಅಯೋಗ್ಯತಾ ದೋಷವು ಇದ್ದರೆ ಮಾತ್ರ ಮನುಷ್ಯರಿಗೆ ಮಿಥ್ಯಾರ್ಥಜ್ಞಾನವು ಉಂಟಾಗುತ್ತದೆ. ಯಾವ ವಾದಿಯು ಅಪ್ರಾಮಾಣ್ಯಂ ಪರತಃ ಎಂದು ಹೇಳುತ್ತಾನೆಯೋ ಅಂತಹವನು ದೋಷವಿಲ್ಲದ ಸ್ಥಳದಲ್ಲಿ ಮಿಥ್ಯಾರ್ಥವನ್ನು ಅಂಗೀಕರಿಸಿದರೆ ದೋಷಭಾಜನನಾಗುತ್ತಾನೆ. ಆದ್ದರಿಂದ ಎಂದರೆ ದೃಶ್ಯತ್ವ ಮತ್ತು ಸತ್ಯತ್ವಗಳು ಸತ್ಯವಾದ ಬ್ರಹ್ಮನಲ್ಲಿ ಇರುವುದರಿಂದ ಮತ್ತು ಮಿಥ್ಯಾಭೂತವಾದ ಶುಕ್ತಿರಜತಾದಿಗಳಲ್ಲಿ ಇಲ್ಲದಿರುವುದರಿಂದ ಅವು ಯಾವಾಗಲೂ ಪರಸ್ಪರವಾಗಿ ವ್ಯಾಪ್ತವಾದವು.

**ಭಾವವಿಲಾಸಿನೀ**– ಯಸ್ಯ ಮತೇ । ಅಪ್ರಮಾಯಾದೋಷಜನ್ಯತ್ವಂ ವದತಾ ಪ್ರಾತ್ಯಕ್ಷಿಕಭ್ರಮೇ ಆನುಮಾನಿಕಭ್ರಮೇ ಶಬ್ದಭ್ರಮೇ ಚ ಫಲಬಲಾದೇವ ದೋಷಃ ಕಲ್ಪನೀಯ ಇತಿ ಭಾವಃ ॥

**ವಿವರಣೆ**– 'ಅಪ್ರಾಮಾಣ್ಯಂ ಪರತಃ' ಎಂದರೆ ದೋಷವಿದ್ದರೆ ಮಾತ್ರ ಅಲ್ಲಿ ಉಂಟಾಗುವ ಜ್ಞಾನದಲ್ಲಿ ಅಪ್ರಾಮಣ್ಯವುಂಟಾಗುತ್ತದೆ, ಇಲ್ಲದಿದ್ದರೆ ಇಲ್ಲ ಎಂದು ಅರ್ಥ. ಯಾವ ವಾದಿಯು ಇಂತಹ ಪ್ರಮೇಯವನ್ನು ಅಂಗೀಕರಿಸಿ ದೋಷವಿಲ್ಲದ ಸ್ಥಳದಲ್ಲಿಯೂ ಭ್ರಾಂತಿಯನ್ನು ಅಂಗೀಕರಿಸುತ್ತಾನೆಯೋ ಅವನು ದೂಷಣೆಗೆ ಗುರಿಯಾಗುತ್ತಾನೆ. ಆದ್ದರಿಂದ ಅಪ್ರಾಮಾಣ್ಯಕ್ಕೆ ದೋಷಜನ್ಯತ್ವವನ್ನು ಹೇಳುವ ವಾದಿ ಪ್ರತ್ಯಕ್ಷ ಸ್ಥಳದಲ್ಲಾಗಲಿ, ಅನುಮಾನ ಸ್ಥಳದಲ್ಲಾಗಲಿ ಅಥವಾ ಶಬ್ದದ ಸ್ಥಳದಲ್ಲಾಗಲಿ ಫಲಬಲದಿಂದಲೇ ದೋಷವನ್ನು ಕಲ್ಪನೆ ಮಾಡಬೇಕು. ಆ ದೋಷವೇ ಅಪ್ರಾಮಾಣ್ಯಕ್ಕೆ ಪ್ರಯೋಜಕವಾಗುತ್ತದೆ. ದೋಷವಿಲ್ಲದ ಸ್ಥಳದಲ್ಲಿ ಅಪ್ರಾಮಾಣ್ಯವಿಲ್ಲ. ಅಲ್ಲಿ ಅರ್ಥಕ್ಕೆ ಮಿಥ್ಯಾತ್ವವು ಇಲ್ಲ ಎಂದು ಅಭಿಪ್ರಾಯ.

**ತತ್ತತ್ಕರಣಸಂಬಂಧೋ ಯತ್ ಸತ್ಯತ್ವೈಕಹೇತುಕಃ ।**
**ಅಪ್ರಯೋಜಕತಾಶಂಕಾ ತಸ್ಮಾನ್ನಾತ್ರ ವಿವೇಕಿನಾಮ್ ॥ ೧೦೨೦ ॥**

**ಅರ್ಥ**-ಯತ್=ಯಾವ ಕಾರಣದಿಂದ, ತತ್ತತ್‌ಕರಣಸಂಬಂಧಃ=ಆಯಾ ಇಂದ್ರಿಯ ಸನ್ನಿಕರ್ಷಗಳು, ಸತ್ಯತ್ವೈಕಹೇತುಕಃ=ಪದಾರ್ಥವು ಸತ್ಯವಾದರೆ ಮಾತ್ರ ಕೂಡುತ್ತವೆಯೋ. ತಸ್ಮಾತ್=ಆ ಕಾರಣದಿಂದ, ವಿವೇಕಿನಾಂ=ವಿವೇಕವುಳ್ಳವರಿಗೆ, ಅಪ್ರಯೋಜಕತಾಶಂಕಾ= ದೃಶ್ಯತ್ವ ಹೇತುವು ಸತ್ಯತ್ವವನ್ನು ಸಾಧಿಸುವ ವಿಷಯದಲ್ಲಿ ಅಪ್ರಯೋಜಕವು ಎಂಬ ಶಂಕೆಯು, ಅತ್ರ=ಇಲ್ಲಿ, ನ ಉದೇತಿ= ಉದಯಿಸುವುದಿಲ್ಲ.

**ಅನುವಾದ**- ವಸ್ತುಗಳು ಪ್ರತ್ಯಕ್ಷವಾಗಬೇಕಾದರೆ ಇಂದ್ರಿಯಕ್ಕೂ ಅರ್ಥಕ್ಕೂ ಸನ್ನಿಕರ್ಷ ಬೇಕು. ಸನ್ನಿಕರ್ಷವು ವಸ್ತುವು ಸತ್ತಾದರೆ (ಇದ್ದರೆ) ಮಾತ್ರ ಸಾಧ್ಯ. ಅತಃ ಏವ ಆತ್ಮಾಮನಸಾ ಸಂಯುಜ್ಯತೇ ಮನಃ ಇಂದ್ರಿಯೇಣ, ಇಂದ್ರಿಯ ಮರ್ಥೇನ, ತತಃ ಪ್ರತ್ಯಕ್ಷಮ್ ಎಂಬುದಾಗಿ ನೈಯಾಯಿಕ ಪ್ರಕ್ರಿಯೆಯು ಇದೆ. ಆದ್ದರಿಂದ ದೃಶ್ಯತ್ವವಿದ್ದರೂ ಸತ್ಯತ್ವವು ಬೇಡ ಎಂಬ ಅಪ್ರಯೋಜಕತ್ವ ಶಂಕೆಯನ್ನು ಇಲ್ಲಿಬುದ್ಧಿವಂತರು ಮಾಡುವುದಿಲ್ಲ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ದೃಶ್ಯತ್ವಸತ್ಯತ್ವಯೋರ್ವ್ಯಾಪ್ತಿಂ ದೃಢಯತಿ ॥ **ತತ್ತದಿತಿ** ॥ ತತ್ ತಸ್ಮಾತ್ । ಯೋಗ್ಯಾರ್ಥದರ್ಶನಾಯ ಕರಣಸಂಬಂಧೋಽವಶ್ಯಂ ವಕ್ತವ್ಯಃ । ಕರಣಸಂಬಂಧಾಭಾವೇಽಪಿ ಪ್ರತೀತಿಸ್ತ್ವಯೋಗ್ಯೇ ಏವ । ಸಂಬಂಧಶ್ಚ ಸತ್ಯಯೋರೇವ । ಅತೋಽಪಿ ದೃಶ್ಯತ್ವಸತ್ಯತ್ವೇ ಅವಿನಾಭೂತೇ ಇತಿ ಭಾವಃ ॥ ೧೦೨೧ ॥

**ವಿವರಣೆ**– ಹಿಂದಿನ ಶ್ಲೋಕದಲ್ಲಿ ದೃಶ್ಯತ್ವ ಮತ್ತು ಸತ್ಯತ್ವಗಳು ಪರಸ್ಪರ ವ್ಯಾಪ್ತ ಎಂದು ಹೇಳಿದರು. ಎಂದರೆ ಎಲ್ಲಿ ದೃಶ್ಯತ್ವವಿದೆಯೋ ಅಲ್ಲಿ ಸತ್ಯತ್ವವಿದೆ. ಎಲ್ಲಿ ಸತ್ಯತ್ವವಿದೆಯೋ ಅಲ್ಲಿ ದೃಶ್ಯತ್ವವಿದೆ ಎಂಬ ವ್ಯಾಪ್ತಿಯು ಇದೆ ಎಂದು ಅರ್ಥ. ಈ ಶ್ಲೋಕದಲ್ಲಿ ಇನ್ನೊಂದು ರೀತಿಯಿಂದ ಆ ವ್ಯಾಪ್ತಿಯನ್ನು ಬಲಪಡಿಸುತ್ತಾರೆ. ಇಂದ್ರಿಯಗಳಿಗೆ ಯೋಗ್ಯಾರ್ಥದರ್ಶನ ಉಂಟಾಗಬೇಕಾದರೆ ಕರಣಸಂನಿಕರ್ಷವು ಅವಶ್ಯಕವಾದುದು. ಕರಣಸಂಬಂಧವಿಲ್ಲದೇ ಪ್ರತೀತಿ ಉಂಟಾಗುವುದು ಅಯೋಗ್ಯಸ್ಥಳದಲ್ಲಿ ಮಾತ್ರ. ಆ ಕರಣಸಂಬಂಧವಾದರೂ ಸತ್ಯವಾದವಸ್ತುವಿನ ಜೊತೆಯಲ್ಲಿಯೇ ಉಂಟಾಗುತ್ತದೆಯೇ ಹೊರತು ಅಸತ್ಯವಾದ ವಸ್ತುವಿನ ಜೊತೆಯಲ್ಲಿ ಉಂಟಾಗುವುದಿಲ್ಲ. ಆದ್ದರಿಂದಲೂ ಸಹ ದೃಶ್ಯತ್ವ ಮತ್ತು ಸತ್ಯತ್ವಗಳು ಪರಸ್ಪರ ವ್ಯಾಪ್ತವಾದವು ಎಂದು ಅಭಿಪ್ರಾಯ.

ಪರರ ಯುಕ್ತಿಯಿಂದ ಪರರವಾದವನ್ನು ನಿರಾಕರಿಸುವ ಪ್ರಾಚೀನ ಆಚಾರ್ಯರ (ಆನಂದ ತೀರ್ಥರ) ಉಕ್ತಿ ಚಾತುರ್ಯವನ್ನು ಸ್ತುತಿಸುತ್ತಾರೆ-

ವಿವಾದವಿಷಯೋ ವಿಶ್ವಂ ದೃಶ್ಯತ್ವಾತ್ ಪರಮಾರ್ಥಸತ್ ।
ಬ್ರಹ್ಮವದ್ ವ್ಯತಿರೇಕೇಣ ಶುಕ್ತಿರೂಪ್ಯವದೇವ ವಾ ॥ ೧೦೨೧ ॥

ರಣಾಂಕಣಾದ್ ಗೃಹೀತೋಽಯಂ ಭಟೋ ವೀರಶಿರೋಮಣಿಃ ।
ಚಿತ್ರಂ ಯುಕ್ತಿಧನ್ಯೈಸ್ತುಷ್ಟೋ ಹಂತಿ ಶತ್ರೋರನೀಕಿನೀಮ್ ॥ ೧೦೨೨ ॥

**ಅರ್ಥ**-ವಿವಾದ ವಿಷಯಃ=ಪರಮಾರ್ಥಸತ್ ನವಾ ಎಂಬ ವಿವಾದಕ್ಕೆ ವಿಷಯವಾದ, ವಿಶ್ವಂ=ಬ್ರಹ್ಮವ್ಯತಿರಿಕ್ತವಾದ ಮತ್ತು ಅಸದ್ವ್ಯತಿರಿಕ್ತವಾದ ಮತ್ತು ಶುಕ್ತಿರೂಪ್ಯವ್ಯತಿರಿಕ್ತವಾದ ಜಗತ್ತೆಲ್ಲವೂ, ಪರಮಾರ್ಥ ಸತ್=ಪಾರಮಾರ್ಥಿಕ ಸತ್ವವುಳ್ಳದ್ದು. ಬ್ರಹ್ಮವತ್=ನೀನು ಅಂಗೀಕರಿಸಿದ ಬ್ರಹ್ಮನಂತೆ. ವಾ=ಅಥವಾ, ವ್ಯತಿರೇಕೇಣ=ವ್ಯತಿರೇಕ ವ್ಯಾಪ್ತಿಯಿಂದ ಶುಕ್ತಿರೂಪ್ಯವತ್=ಶುಕ್ತಿರಜತ ದಂತೆ. ಅಸ್ಮಾಭಿಃ=ನಮ್ಮಿಂದ (ಅಧ್ಯಾಹೃತವಾದ ಪದವಿದು) ರಣಾಂಕಣಾತ್= ರಣಾಂಗಣದಿಂದ, ಗೃಹೀತಃ=ಸೆರೆ ಹಿಡಿಯಲ್ಪಟ್ಟ ಅಯಂ=ಈ ದೃಶ್ಯತ್ವಹೇತುವು, ವೀರಶಿರೋಮಣಿಃ=ವೀರಾಗ್ರೇಸರನಾದ, ಭಟಃ=ಯೋದ್ಧ್ರುವು, ಅಸ್ಮಾಕಂ=ನಮ್ಮ (ಅಧ್ಯಾಹೃತಪದ) ಚಿತ್ರಯುಕ್ತಿಧನೈಃ=ಚಿತ್ರ ವಿಚಿತ್ರವಾದ ಯುಕ್ತಿಯೆಂಬ ಹಣದಿಂದ, ತುಷ್ಟ್ಯಃ=ಸಂತುಷ್ಟನಾಗಿ, ಶತ್ರೋಃ=ಶತ್ರುಗಳಾದ ಮಾಯಾವಾದಿಗಳ ಅನೀಕಿನೀಂ ಸೈನ್ಯಸದೃಶವಾದ, ಮಿಥ್ಯಾತ್ವಸಾಧಕಯುಕ್ತಿಗಳನ್ನು ಹಂತಿ=ಕೊಲ್ಲುತ್ತದೆ.

**ಅನುವಾದ-** ವಿವಾದ ವಿಷಯವಾದ ವಿಶ್ವವು ಪರಮಾರ್ಥಸತ್ಯವಾದುದು. ದೃಶ್ಯವಾದುದರಿಂದ. ಬ್ರಹ್ಮನಂತೆ. ಅಥವಾ ವ್ಯತಿರೇಕದೃಷ್ಟಾಂತವಾದ ಶುಕ್ತಿರೂಪ್ಯದಂತೆ ಎಂಬ ಈ ಯುಕ್ತಿಯು ರಣರಂಗದಿಂದ ಸೆರೆಹಿಡಿಯಲ್ಪಟ್ಟ ವೀರಶಿರೋಮಣಿಯಾದ ಭಟನಿದ್ದಂತೆ. ಅವನು ಯುಕ್ತಿ ಎಂಬ ಧನದಿಂದ ಸಂತೋಷಪಡಿಸಲ್ಪಟ್ಟವನಾಗಿ ನಮ್ಮ ಶತ್ರುವಾದ ಮತ್ತು ಅವನು ಮೊದಲಿದ್ದ ಸೈನ್ಯವನ್ನೇ ಕೊಲ್ಲುತ್ತಾನೆ. ಇದು ಆಶ್ಚರ್ಯಕರವಾದುದು!

**ಭಾವವಿಲಾಸಿನೀ-** ಪರೇಣ ಸ್ವಸಾಧ್ಯಸಿದ್ಧ್ಯರ್ಥಮುಕ್ತದೃಶ್ಯತ್ವಹೇತೋರೇವ ಯುಕ್ತಿಬಲಾದಸ್ಮಾಭಿರ್ಗೃಹೀತತ್ವಾತ್ ರಣಾಂಕಣಾದ್ಗೃಹೀತ ಇತ್ಯುಕ್ತಮ್ । ಬಹುಧನೇ ದತ್ತೇ ಮರ್ಮಜ್ಞಾತ್ವಾತ್ಸ ಏವ ಸ್ವಪೂರ್ವಸೇನಾಂ ಹಂತೀತ್ಯತೋ ಯುಕ್ತಿಧನೈಸ್ತುಷ್ಟ ಇತ್ಯಾದ್ಯುಕ್ತಮ್ ॥೧೦೨೧-೧೦೨೨॥

**ವಿವರಣೆ**- ಈ ದೃಶ್ಯತ್ವಹೇತುವು ಪರನು ಮಿಥ್ಯಾತ್ವ ಸಾಧನೆಯನ್ನು ಮಾಡಲು ಉಪನ್ಯಾಸ ಮಾಡಿದ ಹೇತು. ಆದ್ದರಿಂದ ಅವನು ಶತ್ರುಸೈನ್ಯದ ಭಟನಿದ್ದಂತೆ. ಆ ದೃಶ್ಯತ್ವವನ್ನು ನಾವೇ ಹೇತುವಾಗಿ ಉಪಯೋಗಿಸುವುದರಿಂದ ಅವನನ್ನು ಸೆರೆಹಿಡಿದಂತೆ ಆಗಿದೆ. ನಮ್ಮ ಸೈನ್ಯಕ್ಕೆ ಬಂದ ಅವನನ್ನು ಸನ್ನಿಕರ್ಷಾದಿ ಯುಕ್ತಿಗಳಿಂದ ತೃಪ್ತಿಪಡಿಸಿದ ಮೇಲೆ (ಬಲಪಡಿಸಿದ ಮೇಲೆ) ಅವನು ತಾನು ಮೊದಲಿದ್ದ ನಮ್ಮ ಶತ್ರುಸೈನ್ಯವನ್ನೇ ಕೊಲ್ಲುತ್ತಾನೆ. ಆದ್ದರಿಂದ ಮಿಥ್ಯಾತ್ವವನ್ನು ಸಾಧಿಸಲು ಉಪನ್ಯಾಸ ಮಾಡಿದ ದೃಶ್ಯತ್ವಹೇತುವು ಸತ್ಯತ್ವವನ್ನೇ ಸಾಧಿಸುತ್ತದೆ ಎಂಬುದು ಆಶ್ಚರ್ಯಕರವಾದುದು ಎಂದು ಅಭಿಪ್ರಾಯ.

**ಅಸ್ಯ ಪ್ರಕರಣೇ ಸಾಮ್ಯಂ ಯೇ ಪ್ರೋಚುಃ ಪೂರ್ವಸೂರಯಃ ।**
**ತೇಷಾಂ ತು ನ ರಣೇ ಸಾಮ್ಯಂ ಕೇನಾಪೀತಿ ಮತಿರ್ಮಮ ॥ ೧೦೨೩ ॥**

**ಅರ್ಥ**-ಅಸ್ಯ= ಈ ದೃಶ್ಯತ್ವ ಹೇತುವಿಗೆ, ಪ್ರಕರಣೇ ಸಾಮ್ಯಂ= ಪ್ರಕರಣ ಸಮತ್ವರೂಪವಾದ ದೋಷವನ್ನು, ಯೇ= ಯಾವ, ಪೂರ್ವಸೂರಯಃ=

ಪೂರ್ವಜ್ಞಾನಿಗಳಾದ ನಮ್ಮ ಮಧ್ವಾಚಾರ್ಯರು, ಪ್ರೋಚುಃ= ಹೇಳಿದರೋ, ತೇಷಾಂತು= ಅವರಿಗೆ, ರಣೇ= ವಾದಯುದ್ಧದಲ್ಲಿ, ಕೇನಾಪಿ= ಯಾರಿಂದಲೂ, ಸಾಮ್ಯಂ ನ ಇತಿ= ಸಾಮ್ಯವಿಲ್ಲವೆಂದು, ಮಮ ಮತಿಃ= ನನ್ನ ಅಭಿಪ್ರಾಯ.

**ಅನುವಾದ-** ಯಾವ ನಮ್ಮ ಪೂರ್ವಸೂರಿಗಳಾದ ಮಧ್ವಾಚಾರ್ಯರು ಈ ದೃಶ್ಯತ್ವ ಹೇತುವಿಗೆ ಪ್ರಕರಣ ಸಮರೂಪವಾದ ದೋಷವನ್ನು ಹೇಳಿದರೋ ಅವರಿಗೆ ವಾದಯುದ್ಧದಲ್ಲಿ ಯಾರು ಸಮಾನರಿಲ್ಲವೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಪರಾಯುಧೇನೈವ ಸ್ವಸಾಧ್ಯಸಾಧನಚಮತ್ಕಾರವಂತಂ ಸ್ವಾಚಾರ್ಯಂ ಸ್ತೌತಿ ॥ **ಅಸ್ಯೇತಿ॥** ಅಸ್ಯ ದೃಶ್ಯತ್ವಹೇತೋಃ । ಪ್ರಕರಣೇ ಸ್ವಸಾಧ್ಯೇ । ಸಾಮ್ಯಮ್ । ಪರೇಣ ಪರಸಾಧ್ಯೇ ಪ್ರಯೋಗವತ್ತ್ವಯೋಗವಮ್ । ಪ್ರಯೋಗವಮಾತ್ರೇ ಸಾಮ್ಯವಮ್ । ವಿಚಾರ್ಯಮಾಣೇ ತು ಪರಕೀಯಸಾಧ್ಯವಿರುದ್ಧತ್ವಾತ್ಸ್ವಕೀಯಸಾಧ್ಯೇ ಸರ್ವಜನಸಂಮತ್ಯಾಽನುಕೂಲತ್ವಾಚ್ಚಾ ಸಾಮ್ಯಮೇವೇತಿ ದ್ರಷ್ಟವ್ಯಮ್ । ಪೂರ್ವಸೂರಯಃ ಸರ್ವೇಷಾಮಾದಿಗುರವಃ ಶ್ರೀಮದಾಚಾರ್ಯಾಃ । ರಣೇ ವಾದರಣೇ। ಕೇನಾಪಿ ವಿದುಷಾ ಸಾಮ್ಯಂ ನ ॥ ೧೦೨೩ ॥

**ವಿವರಣೆ-** ಸರ್ವಪಕ್ಷಸಿದ್ಧಾವಪಿ ತ್ರಿರೂಪೋ ಹೇತುಃ ಪ್ರಕರಣಸಮಃ ಎಂದು ಪ್ರಕರಣಸಮದೋಷದ ಲಕ್ಷಣ. ಪಕ್ಷಸಪಕ್ಷಗಳಿದ್ದು ಪಕ್ಷಧರ್ಮತ್ವ, ಸಪಕ್ಷದಲ್ಲಿ ಸತ್ವ ಮತ್ತು ವಿಪಕ್ಷದಿಂದ ವ್ಯಾವೃತ್ತತ್ವ ಈ ಮೂರು ರೂಪಗಳೂ ಇರುವ ಹೇತುವು ಪ್ರಕರಣ ಸಮವೆಂದು ಕರೆಸಿಕೊಳ್ಳಲ್ಪಡುತ್ತದೆ. ಇದಕ್ಕೆ ಮುಖ್ಯವಾದ ಉದಾಹರಣೆ 'ವಿಶ್ವಂ ಮಿಥ್ಯಾದೃಶ್ಯತ್ವಾತ್' ಎಂಬಲ್ಲಿನ ದೃಶ್ಯತ್ವ ಹೇತು. ಏಕೆಂದರೆ ಅದೇ ಹೇತುವಿನಿಂದ ಸತ್ಯತ್ವವನ್ನು ಸಾಧನೆ ಮಾಡಬಹುದು. 'ವಿಶ್ವಂ ಸತ್ಯಂ ದೃಶ್ಯತ್ವಾತ್' ಎಂದು. ಸತ್ಪ್ರತಿಪಕ್ಷದಲ್ಲಿ ಹೇತ್ವಂತರದಿಂದ ಸಾಧ್ಯಾಭಾವಸಾಧನೆ. ಪ್ರಕರಣಸಮದಲ್ಲಿ ಅದೇ ಹೇತುವಿನಿಂದ ಸಾಧ್ಯಾಭಾವ ಸಾಧನೆ. ಪರರಿಗೆ ತಮಗೆ ಸಾಧಕವೆಂದು ಅಭಿಮತವಾದ ಹೇತುವಿನಿಂದಲೇ ಸಾಧ್ಯಾಭಾವವನ್ನು ಸಾಧನೆ ಮಾಡುವ ಕೌಶಲವು ಶ್ರೀ ಮಧ್ವಾಚಾರ್ಯರಿಗೆ ಮಾತ್ರ ಇದೆ. ಬೇರೆ ಯಾರಿಗೂ ಇಲ್ಲ. ಆದ್ದರಿಂದ ಆದಿಗುರುಗಳಾದ ಶ್ರೀಮದಾಚಾರ್ಯರಿಗೆ ವಾದದಲ್ಲಿ ಸಮನಾದವರೂ ಯಾರೂ ಇಲ್ಲ ಎಂದು ತಮ್ಮ ಮೂಲಗುರುಗಳನ್ನು ಇಲ್ಲಿ ಸ್ತೋತ್ರ ಮಾಡುತ್ತಾರೆ.

ಕಿಂಚ ದೃಶ್ಯಧ್ಯಸ್ತೈವ ದೃಶ್ಯತ್ವಂ ಭವತೋ ಮತೇ ।
ವಿಷಯತ್ವಪರಿತ್ಯಾಗಾದ್ ವೃತ್ತೌ ವೃತ್ತ್ಯಾಕೃತಿಸ್ತವ ।
ದೃಶ್ಯತ್ವಂ ಕಿಲ ತತ್ ಸರ್ವಂ ಪ್ರತಿವಾದೀ ನ ಮನ್ಯತೇ ॥ ೧೦೨೪ ॥

ತಸ್ಮಾದನ್ಯತರಾಸಿದ್ಧೋ ಹೇತುಃ ಸ್ಯಾದಪ್ರಬುದ್ಧ ತೇ ।
ಸರ್ವೇಷಾಮಪಿ ಸಿದ್ಧೋ ಮೇ ಹೇತುರ್ನಾರದಸಿದ್ಧವತ್ ॥ ೧೦೨೫ ॥

**ಅರ್ಥ-** ಕಿಂಚ = ಮತ್ತು, ಭವತೋ ಮತೇ = ನಿನ್ನ ಮತದಲ್ಲಿ, ವಿಷಯತ್ವಪರಿತ್ಯಾಗಾತ್= ವಿಷಯತ್ವವನ್ನು ಅಂಗೀಕರಿಸದೇ ಇರುವುದರಿಂದ, ದೃಶ್ಯತ್ವಂ = ದೃಶ್ಯತ್ವವು, ದೃಗ್ಅಧ್ಯಸ್ತತೈವ = ದೃಗ್ಅಧ್ಯಸ್ತತ್ವರೂಪವಾದುದು, ವೃತ್ತಿಯನ್ನು ಜ್ಞಾನ ಎಂದು ಅಂಗೀಕರಿಸಿದ ಪಕ್ಷದಲ್ಲಿ, ತವ = ನಿನಗೆ, ದೃಶ್ಯತ್ವಂ = ದೃಶ್ಯತ್ವವು, ವೃತ್ತ್ಯಾಕೃತಿಃ ಕಿಲ = ವೃತ್ತಿಸಮಾನಾಕಾರತ್ವ ರೂಪವಾದುದಷ್ಟೇ? ತತ್ಸರ್ವಂ = ಆ ಎಲ್ಲವನ್ನೂ, ಪ್ರತಿವಾದೀ = ಪ್ರತಿವಾದಿಯಾದ ತತ್ವವಾದಿಯು, ನ ಮನ್ಯತೇ = ಅಂಗೀಕರಿಸುವುದಿಲ್ಲ.

ತಸ್ಮಾತ್ = ಆ ಕಾರಣದಿಂದ, ಅಪ್ರಬುದ್ಧ = ಎಲೈ ಮೂಢನೇ, ತೇ ಹೇತುಃ = ನೀನು ಪ್ರಯೋಗಿಸಿದ ದೃಶ್ಯತ್ವಹೇತುವು, ಅನ್ಯತರಾಸಿದ್ಧಃ = ಅನ್ಯತರಾ ಸಿದ್ಧಿರೂಪವಾದ ದೋಷಯುಕ್ತವಾಗಿದೆ, ಮೇ ಹೇತುಃ = ನನ್ನ ಹೇತುವಾದ ದೃಶ್ಯತ್ವವಾದರೋ, ನಾರದಸಿದ್ಧವತ್ = ನಾರದಸಿದ್ಧರಂತೆ, ಸರ್ವೇಷಾಮಪಿ = ಎಲ್ಲರಿಗೂ, ಸಿದ್ಧಃ = ಸಮ್ಮತವಾಗಿದೆ.

**ಅನುವಾದ-** ಮತ್ತು ನಿನ್ನ ಮತದಲ್ಲಿ ವಿಷಯತ್ವವನ್ನು ಅಂಗೀಕರಿಸದೇ ಇರುವುದರಿಂದ ಚೈತನ್ಯವು ಜ್ಞಾನ ಎಂಬ ಪಕ್ಷದಲ್ಲಿ ದೃಶ್ಯತ್ವವು ದೃಗಧ್ಯಸ್ತತ್ವರೂಪವಾದುದು. ವೃತ್ತಿಯು ಜ್ಞಾನ ಎಂಬ ಪಕ್ಷದಲ್ಲಿ ದೃಶ್ಯತ್ವವು ವೃತ್ತಿಸಮಾನಾಕಾರತ್ವ- ರೂಪವಾದುದಷ್ಟೇ? ಅದೆಲ್ಲವನ್ನೂ ಪ್ರತಿವಾದಿಯಾದ ತತ್ವವಾದಿಯು ಅಂಗೀಕರಿಸುವುದಿಲ್ಲ. ಆದ್ದರಿಂದ ಎಲೈ ಮೂಢನೇ, ನಿನ್ನ ಹೇತುವು ಅನ್ಯತರಾಸಿದ್ಧವಾಗುತ್ತದೆ. ನನ್ನ ಹೇತುವಾದರೋ ನಾರದಸಿದ್ಧರಂತೆ ಎಲ್ಲರಿಗೂ ಸಮ್ಮತವಾಗಿದೆ.

**ಭಾವವಿಲಾಸಿನೀ–** ಪರಕೀಯದೃಶ್ಯತ್ವಹೇತೋರನ್ಯತರಾಸಿದ್ಧಿಂ ಚಾಹ - **ಕಿಂಚೇತಿ** ॥ ಅಧಿಷ್ಠಾನಚೈತನ್ಯಸ್ಯ ದೃಕ್ತ್ವೇ ದೃಶ್ಯಧ್ಯಸ್ತತ್ವಮೇವ ಪರಸ್ಯಹೇತುತಯಾಭಿಮತಮ್ । ವೃತ್ತೌವೃತ್ತಿರೂಪಜ್ಞಾನೇ ಚೇತ್ । ವೃತ್ತೇರಿವಾಕೃತಿರ್ವೃತ್ತ್ಯಾಕೃತಿಃ । ವಿಷಯಸ್ಯ ವೃತ್ತಿಸಮಾಕಾರವತ್ತ್ವಮಿತ್ಯರ್ಥಃ । ವಿಷಯವಿಷಯಿಭಾವಾನಂಗೀಕಾರಾತ್ ಇದಮೇವ ದೃಶ್ಯತ್ವಂ ಪರಸ್ಯಾಭಿಮತಮ್ । ತತ್ಸರ್ವಂ ದ್ವಿವಿಧಂ ದೃಶ್ಯತ್ವಮ್ । ಪ್ರತಿವಾದೀ ತತ್ತವಾದೀ । ಸಾಧ್ಯಾವಿಶಿಷ್ಟಹೇತೋಃ ಕರಣಾದಪ್ರಬುದ್ಧೇತ್ಯುಕ್ತಮ್ । ದೃಗ್ಜನ್ಯಫಲಾಶ್ರಯತ್ವಾದಿಕಮಪಿ ಪರಸ್ಯಾಸಿದ್ಧಮಿತಿ ಸೂಚನಾಯ ಸರ್ವಪದಮ್ । ಜ್ಞಾತತಾಯಾ ವೃತ್ತಿಪ್ರತಿಫಲಿತಚೈತನ್ಯಸ್ಯ ಚ ಪರೇಣಾನಂಗೀಕಾರಾತ್ । ವ್ಯವಹಾರಸ್ಯ ಪ್ರವೃತ್ತೇಶ್ಚ ಪುಂಗತತ್ವೇನ ವಿಷಯೇ ತದಾಶ್ರಯತ್ವಾಭಾವಾದನ್ಯತರಾಸಿದ್ಧಿಃ । ದೃಗ್ಜನ್ಯಫಲಾಶ್ರಯತ್ವಂ ದೃಶ್ಯತ್ವಂ ವದತಾ ಪರೇಣ ಫಲಂ ಪ್ರತ್ಯಪ್ಯಾಶ್ರಯತ್ವಸ್ಯೈವೋರರೀಕರಣಾತ್ ವಿಷಯತ್ವಾನಂಗೀಕಾರಾಚ್ಚ । ಅನ್ಯಥಾ ಜ್ಞಾತತಾಯಾಮಯೋಗಾತ್ । ಮೇ ಹೇತುಃ ದೃಗ್ವಿಷಯತ್ವಾಖ್ಯಹೇತುಃ । ವಿಷಯತ್ವಂ ಚ ಸ್ವರೂಪಸಂಬಂಧವಿಶೇಷ ಇತ್ಯಂಗೀಕಾರಾತ್ । ತಸ್ಯ ಚಾಭಾವಸಮವಾಯಾದಿಸ್ಥಲೇ ಸರ್ವಸಂಮತತ್ವಾತ್ ಸರ್ವೇಷಾಮಪಿ ಸಿದ್ಧ ಇತ್ಯುಕ್ತಮ್ । ನ ಚ ವಾಚ್ಯಂ ಮಯಾಪ್ಯೇತದೇವ ದೃಶ್ಯತ್ವಮುಚ್ಯತ ಇತಿ । ತಥಾ ಸತಿ ದೃಗ್ದೃಶ್ಯಯೋಃ ಸಂಬಂಧಾನುಪಪತ್ತೇರೇವಾಭಾವೇನೈತಾದೃಶಾದೃಶ್ಯೇ

ತ್ವದಭಿಲಷಿತದೃಗಧ್ಯಸ್ತತ್ವಸ್ಯೈವಾಸಿದ್ಧೇಃ । ದೃಶ್ಯತ್ವಸ್ಯ ವೃತ್ತಿವಿಷಯೇ ಆತ್ಮನಿ ಗತತ್ವೇನ ಹೇತೋರ್ವ್ಯಭಿಚಾರಪ್ರಸಂಗಾತ್ । ಚಿತ ಏವ ದೃಕ್ತ್ವೇ ಮದ್ರೀತ್ಯಾ ಘಟಾದಾವಭಾವೇನ ಪುನರ್ಭಾಗಾಸಿದ್ಧಿಸ್ಸ್ಯಾತ್ । ಅಸ್ಮಾಕಂ ತು ಯಥಾಯೋಗ್ಯಂ ವೃತ್ತಿರ್ವಾದೃಕ್ಚಿದ್ವಾ ದೃಕ್ । ಯಥಾ ನಾರದಾಖ್ಯಸಿದ್ಧಃ ದೇವಾನಾಂ ದೈತ್ಯಾನಾಂ ಚ ಪ್ರಿಯಸ್ತದ್ವತ್ ॥ ೧೦೨೪ - ೧೦೨೫ ॥

**ವಿವರಣೆ–** ಪರಕೀಯರ ದೃಶ್ಯತ್ವಹೇತುವಿಗೆ ಇಲ್ಲಿ ಅನ್ಯತರಾಸಿದ್ಧಿದೋಷವನ್ನು ಹೇಳುತ್ತಾರೆ. ಅದ್ವೈತಿಗಳು ಚೈತನ್ಯವೇ ಜ್ಞಾನವೆಂದು ಅಂಗೀಕರಿಸಿದರೆ, ಆಗ ದೃಶ್ಯತ್ವರೂಪವಾದ ಹೇತುವು ದೃಗಧ್ಯಸ್ತತ್ವದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ವೃತ್ತಿಯನ್ನು ಜ್ಞಾನ ಎಂದು ಅಂಗೀಕರಿಸಿದರೆ, ಆಗಲೂ ವಿಷಯತ್ವವನ್ನು ಅಂಗೀಕರಿಸದೇ ಇರುವುದರಿಂದ ವೃತ್ತಿವಿಷಯತ್ವಂ ಎಂದು ಹೇಳಲು ಬರುವುದಿಲ್ಲ. ವೃತ್ತಿಸಮಾನಾಕಾರತ್ವವೆಂದೇ ಹೇಳಬೇಕು. ಈ ಎರಡು ವಿಧವಾದ ದೃಶ್ಯತ್ವವನ್ನು ಪ್ರತಿವಾದಿಗಳಾದ ನಾವು ಒಪ್ಪುವುದಿಲ್ಲ. ಈ ಎರಡು ವಿಧವಾದ ದೃಶ್ಯತ್ವಗಳು ಸಾಧ್ಯಾವಿಶಿಷ್ಟಗಳು ಆಗುತ್ತವೆ. ಆದನ್ನು ಪರರು ಗಮನಿಸದೇ ಇರುವುದರಿಂದ ಅಪ್ರಬುದ್ಧ ಎಂದು ಹೇಳಿದ್ದಾರೆ. ಇವೆರಡು ದೃಶ್ಯತ್ವಗಳನ್ನು ಬಿಟ್ಟು ದೃಗ್ಜನ್ಯಫಲಾಶ್ರಯತ್ವಾದಿರೂಪವಾದ ದೃಶ್ಯತ್ವವನ್ನು ತೆಗೆದುಕೊಂಡರೂ ಅದು ತತ್ತ್ವವಾದಿಗಳಾದ ನಮಗೆ ಅಸಿದ್ಧವಾಗಿದೆ ಎಂಬುದನ್ನು ಸೂಚಿಸಲು ಗ್ರಂಥಕಾರರು ಸರ್ವ ಎಂಬ ಪದವನ್ನು ಇಟ್ಟಿದ್ದಾರೆ. ವೃತ್ತಿಜನ್ಯಫಲ ಎಂದರೆ, ಆ ಫಲವು ಜ್ಞಾತತೆಯೋ, ಅಥವಾ ವೃತ್ತಿಪ್ರತಿಫಲಿತ ಚೈತನ್ಯವೋ ಅಥವಾ ವ್ಯವಹಾರವೋ ಅಥವಾ ಪ್ರವೃತ್ತಿಯೋ ಎಂದು ನಮ್ಮ ವಿಕಲ್ಪ. ಜ್ಞಾತತೆಯನ್ನು ಮತ್ತು ವೃತ್ತಿಪ್ರತಿಫಲಿತ ಚೈತನ್ಯವನ್ನು ನಾವು ಅಂಗೀಕರಿಸುವುದಿಲ್ಲ. ಆದ್ದರಿಂದ ಅನ್ಯತರಾಸಿದ್ಧಿಯು ಬರುತ್ತದೆ. ವ್ಯವಹಾರ ಮತ್ತು ಪ್ರವೃತ್ತಿರೂಪವಾದ ಫಲಗಳು ಪುರುಷಗತವಾದ್ದರಿಂದ ವಿಷಯದಲ್ಲಿ ತದಾಶ್ರಯತ್ವವು ಇಲ್ಲದಿರುವುದರಿಂದ, ಆಗಲೂ ಅನ್ಯತರಾಸಿದ್ಧಿರೂಪವಾದ ದೋಷವಿದೆ. ಪರನು ವಿಷಯತ್ವವನ್ನು ಒಪ್ಪದಿರುವುದಿಂದ ದೃಗ್ಜನ್ಯಫಲಾಶ್ರಯತ್ವಂ ದೃಶ್ಯತ್ವಂ ಎಂದು ಹೇಳಬೇಕೇ ಹೊರತಾಗಿ ದೃಗ್ಜನ್ಯಫಲವಿಷಯತ್ವಂ ದೃಶ್ಯತ್ವಂ ಎಂದು ಹೇಳಲು ಸಾಧ್ಯವಿಲ್ಲ. ಫಲವಿಷಯತ್ವಂ ದೃಶ್ಯತ್ವಂ ಎಂದು ಹೇಳಿದರೆ, ಜ್ಞಾತತಾವಿಷಯತ್ವವು ಪಕ್ಷದಲ್ಲಿ ಇಲ್ಲದಿರುವುದರಿಂದ ಪುನಃ ಅನ್ಯತರಾಸಿದ್ಧಿಯು ಬರುತ್ತದೆ. ಆದರೆ ನನ್ನ ದೃಶ್ಯತ್ವರೂಪವಾದ ಹೇತುವು ಜ್ಞಾನವಿಷಯತ್ವರೂಪವಾದುದು. ವಿಷಯತ್ವವು ಸ್ವರೂಪಸಂಬಂಧವಿಶೇಷ ಎಂದು ಅಂಗೀಕರಿಸುತ್ತೇವೆ. ಅಂತಹ ಸ್ವರೂಪಸಂಬಂಧವಿಶೇಷವು ಅಭಾವ ಸಮವಾಯ ಮೊದಲಾದ ಸ್ಥಳಗಳಲ್ಲಿ ಎಲ್ಲಾ ವಾದಿಗಳಿಂದಲೂ ಅಂಗೀಕೃತವಾಗಿದೆ. ನಾನು ಅದನ್ನೇ ದೃಶ್ಯತ್ವವೆಂದು ಹೇಳುತ್ತೇನೆ ಎಂದು ನೀನು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ, ದೃಗ್‌ದೃಶ್ಯಗಳ ಸಂಬಂಧಾನುಪಪತ್ತಿಯೇ ಇಲ್ಲದಿರುವುದರಿಂದ ನಮಗೆ ಸಮ್ಮತವಾದ ದೃಶ್ಯದಲ್ಲಿ ನಿನಗೆ ಇಷ್ಟವಾದ ದೃಗಧ್ಯಸ್ತತ್ವವು ಬರುವುದಿಲ್ಲ ಮತ್ತು ಅಂತಹ ದೃಶ್ಯತ್ವವು ವೃತ್ತಿವಿಷಯನಾದ ಆತ್ಮನಲ್ಲಿ ಇರುವುದರಿಂದ, ಅಲ್ಲಿ ಮಿಥ್ಯಾತ್ವವಿಲ್ಲದಿರುವುದರಿಂದ ವ್ಯಭಿಚಾರವೂ ಬರುತ್ತದೆ. ಚೈತನ್ಯವನ್ನೇ ದೃಕ್ ಎಂದು ಅಂಗೀಕರಿಸಿದರೆ, ನಾನು ಅಂತಹ

ದೃಕ್ ಅನ್ನು ಘಟಾದಿಗಳಲ್ಲಿ ಅಂಗೀಕರಿಸದೇ ಇರುವುದರಿಂದ ಪುನಃ ಭಾಗಾಸಿದ್ಧಿದೋಷವು ಬರುತ್ತದೆ. ನಮಗಾದರೆ ಯಥಾಯೋಗ್ಯವಾಗಿ ವೃತ್ತಿಯಾಗಲೀ ಅಥವಾ ಚೈತನ್ಯವಾಗಲೀ ದೃಕ್ ಆಗುತ್ತದೆ. ಹೇಗೆ ನಾರದಸ್ವರೂಪರಾದ ಸಿದ್ಧರು ದೇವತೆಗಳಿಗೂ, ದೈತ್ಯರಿಗೂ ಸಮ್ಮತರಾಗುತ್ತಾರೆಯೋ ಹಾಗೆ ನಮ್ಮ ದೃಶ್ಯತ್ವವು ವೃತ್ತಿಗೂ ಮತ್ತು ಜ್ಞಾನಕ್ಕೂ ಎರಡಕ್ಕೂ ಉಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಯತೋ ದುಷ್ಟಂ ಚ ಕರಣಂ ಸ್ವಯಂ ಸದಪಿ ತಾತ್ತ್ವಿಕಮ್ ।**
**ಅರ್ಥಂ ನ ಸಾಧಯೇತ್ ತಸ್ಮಾನ್ಮಿಥ್ಯಾರ್ಥಃ ಕ್ವಾರ್ಥಸಾಧಕಃ ॥ ೧೦೨೬ ॥**

**ಅರ್ಥ-** ಯತಃ = ಯಾವ ಕಾರಣದಿಂದ, ದುಷ್ಟಂ ಕರಣಂ ಚ = ದುಷ್ಟವಾದ ಕರಣವೂ ಸಹ, ಸ್ವಯಂ = ತಾನು, ಸದಪಿ = ಸತ್ಯವಾದರೂ, ತಾತ್ತ್ವಿಕಮ್ ಅರ್ಥಂ= ಸತ್ಯವಾದ ಅರ್ಥವನ್ನು, ನ ಸಾಧಯೇತ್ = ಸಾಧಿಸುವುದಿಲ್ಲವೋ, ತಸ್ಮಾತ್ = ಆ ಕಾರಣದಿಂದ, ಮಿಥ್ಯಾರ್ಥಃ = ಮಿಥ್ಯಾಭೂತವಾದ ಲಿಂಗಾದಿಗಳು ಕ್ವ = ಎಲ್ಲಿ, ಅರ್ಥಸಾಧಕಃ = ಅರ್ಥಸಾಧಕವಾಗುತ್ತವೆ?

**ಅನುವಾದ-** ಯಾವ ಕಾರಣದಿಂದ ದುಷ್ಟ ಕರಣವು ತಾನು ಸ್ವತಃ ಸತ್ಯವಾಗಿದ್ದರೂ ಸತ್ಯವಾದ ಅರ್ಥವನ್ನು ಸಾಧಿಸುವುದಿಲ್ಲವೋ ಆದ್ದರಿಂದ ಮಿಥ್ಯಾಭೂತವಾದ ಲಿಂಗಾದಿಗಳು ಎಲ್ಲಿ ತಮ್ಮ ಅರ್ಥವನ್ನು ಸಾಧಿಸುತ್ತವೆ?

**ಭಾವವಿಲಾಸಿನೀ–** ಕಿಂಚ ಪರಮತೇ ಶಬ್ದವತ್ ಲಿಂಗಸ್ಯಾಪಿ ಮಿಥ್ಯಾತ್ವಾಂಗೀಕಾರಾನ್ನಕೋಽಪಿ ಹೇತುಸ್ತ್ವದಭಿಲಷಿತಸಾಧ್ಯಸಾಧಕ ಇತ್ಯಾಹ - ಯತ ಇತಿ ॥ ದುಷ್ಟಕರಣಂ ಕಾಚಾದಿದೋಷ-ಯುಕ್ತಕರಣಮ್ । ಸತ್ ಸತ್ಯಮ್ । ಅರ್ಥಂ ಸ್ವವಿಷಯೀಭೂತಶುಕ್ತಿರಜತಾದಿಕಮ್। ತಸ್ಮಾತ್ ದೋಷಗ್ರಸ್ತಸತ್ಯಾರ್ಥಸ್ಯಾಪಿ ಸದರ್ಥಸಾಧಕತ್ವಾಭಾವಾತ್ । ಮಿಥ್ಯಾರ್ಥಃ ಮಿಥ್ಯಾಭೂತ-ಲಿಂಗಾದ್ಯರ್ಥಃ । ಅರ್ಥಸಾಧಕಃ ಅರ್ಥಕ್ರಿಯಾಕಾರೀ । ಅತೋ ಹೇತುಶತಕೇನಾಪಿ ನ ಪರೇಣ ಮಿಥ್ಯಾತ್ವಂ ಸಾಧಯಿತುಂ ಶಕ್ಯಮಿತಿ ಭಾವಃ ॥ ೧೦೨೬ ॥

**ವಿವರಣೆ-** ಪರಮತದಲ್ಲಿ ಶಬ್ದದಂತೆ ಲಿಂಗಾದಿಗಳು ಮಿಥ್ಯಾಭೂತವಾದವು ಎಂದು ಅಂಗೀಕರಿಸುವುದರಿಂದ ಯಾವ ಹೇತುವೂ ಅವರಿಗೆ ಸಾಧ್ಯಸಾಧಕವಾಗುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ. ಕಾಚಾದಿದೋಷದುಷ್ಟವಾದ ಚಕ್ಷುಸ್ಸು ತಾನು ಸತ್ಯವಾದರೂ (ಇದ್ದರೂ) ತನಗೆ ವಿಷಯವಾದ ಶುಕ್ತಿರಜತಕ್ಕೆ ಸತ್ಯತ್ವವನ್ನು ಸಾಧಿಸಿಕೊಡುವುದಿಲ್ಲ. ಹೀಗಿರುವಾಗ ಕರಣವೇ ಇಲ್ಲದಿದ್ದರೆ, ಹೇಗೆ ಸತ್ಯತ್ವವನ್ನು ಸಾಧಿಸಿಕೊಡುತ್ತದೆ? ಅದರಂತೆ, ಲಿಂಗಾದಿಗಳಿಗೆ ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ ಅವು ಸ್ವತಃ ಇಲ್ಲ. ಹೀಗಿರುವಾಗ ಅಂತಹ ನೂರು ಹೇತುಗಳಿಂದಲೂ ಮಿಥ್ಯಾತ್ವವನ್ನು ಸಾಧಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಸಿದ್ಧಿರ್ಹಿ ವಿದ್ಯಮಾನತ್ವನಿರ್ಣಯಃ ಸಂಮತಾ ಸತಾಮ್ ।**
**ಸಾ ಪ್ರಮಾಣೇನ ಯಸ್ಯಾಸೀತ್ ತದ್ಧಿ ಪ್ರಾಮಾಣಿಕಂ ವಿದುಃ ॥ ೧೦೨೭ ॥**

**ನಿರ್ಣಯಸ್ತದಭಾವಸ್ಯ ವ್ಯಾವೃತ್ತ್ಯಾ ತಸ್ಯ ಸತ್ತ್ವಧೀಃ ।**
**ಉದ್ದಿಷ್ಟಾ ತತ್ ಕುಚೋದ್ಯಸ್ಯ ನಾವಕಾಶೋಽತ್ರ ವಿದ್ಯತೇ ।**
**ಘಟಸ್ಯ ನಾಸ್ತಿತಾಜ್ಞಾನಂ ಘಟಜ್ಞಾನಂ ಹಿ ಕೋ ವದೇತ್ ॥ ೧೦೨೮ ॥**

**ಅರ್ಥ-** ಸಿದ್ಧಿಃ = ಸಿದ್ಧಿ ಎಂದರೆ, ವಿದ್ಯಮಾನತ್ವನಿರ್ಣಯ = ವಿದ್ಯಮಾನತ್ವನಿರ್ಣಯ-ವೆಂದು, ಸತಾಮ್ = ಸಜ್ಜನರಿಗೆ, ಸಂಮತಾ ಹಿ = ಸಮ್ಮತವಾದುದಷ್ಟೇ? ಸಾ = ಆ ವಿದ್ಯಮಾನತ್ವನಿರ್ಣಯವು, ಯಸ್ಯ = ಯಾವ ವಸ್ತುವಿಗೆ, ಪ್ರಮಾಣೇನ = ಪ್ರಮಾಣದಿಂದ, ಆಸೀತ್ = ಉಂಟಾಗುತ್ತದೆಯೋ, ತತ್ = ಆ ವಸ್ತುವನ್ನೇ, ಪ್ರಾಮಾಣಿಕಂ = ಪ್ರಾಮಾಣಿಕವೆಂದು, ವಿದುಃ ಹಿ = ತಿಳಿಯುತ್ತಾರಷ್ಟೇ?

ನಿರ್ಣಯಃ = ನಿರ್ಣಯವೆಂದರೆ, ತದಭಾವಸ್ಯ ವ್ಯಾವೃತ್ತ್ಯಾ = ತದಭಾವ ವ್ಯಾವೃತ್ತಿ ಸಹಿತವಾದ, ತಸ್ಯ = ಆ ಪದಾರ್ಥದ, ಸತ್ತ್ವಧೀಃ = ಸತ್ವಜ್ಞಾನ ಎಂದು, ಉದ್ದಿಷ್ಟಾ = ಹೇಳಲ್ಪಟ್ಟಿದೆ, ತತ್ = ಆದ್ದರಿಂದ, ಕುಚೋದ್ಯಸ್ಯ = ಶುಕ್ತಿರಜತಕ್ಕೂ ಸತ್ಯತ್ವ ಉಂಟಾಗಲಿ ಎಂಬ ಕುಚೋದ್ಯಕ್ಕೆ, ಅತ್ರ = ಇಲ್ಲಿ, ಅವಕಾಶಃ = ಅವಕಾಶವು, ನ ವಿದ್ಯತೇ = ಇರುವುದಿಲ್ಲ, ಘಟಸ್ಯ ನಾಸ್ತಿತಾಜ್ಞಾನಂ = ಘಟಾಭಾವಜ್ಞಾನವನ್ನು, ಘಟಜ್ಞಾನಂ = ಘಟಜ್ಞಾನವೆಂದು, ಕೋ ಹಿ ವದೇತ್ = ಯಾವನು ಹೇಳುತ್ತಾನೆ?

**ಅನುವಾದ- ಸಿದ್ಧಿ ಎಂದರೆ ವಸ್ತುವಿನ ವಿದ್ಯಮಾನತ್ವನಿರ್ಣಯವೆಂದು ಸಜ್ಜನರಿಗೆ ಸಮ್ಮತವಾಗಿದೆ. ಯಾವ ವಸ್ತುವಿನ ನಿರ್ಣಯವು ಪ್ರಮಾಣದಿಂದ ಉಂಟಾಗುತ್ತದೆಯೋ, ಆ ವಸ್ತುವನ್ನು ಪ್ರಾಮಾಣಿಕವೆಂದು ಹೇಳುತ್ತಾರಷ್ಟೇ? ನಿರ್ಣಯವೆಂದರೆ, ತದಭಾವವ್ಯಾವೃತ್ತಿಪೂರ್ವಕವಾದ ಆ ವಸ್ತುವಿನ ಸತ್ವಜ್ಞಾನ ಎಂದೇ ಅಂಗೀಕೃತವಾಗಿದೆ. ಆದ್ದರಿಂದ ರಜತವೂ ಸತ್ಯವಾಗಲಿ ಎಂಬ ಕುಚೋದ್ಯಕ್ಕೆ ಇಲ್ಲಿ ಅವಕಾಶವಿಲ್ಲ. ಘಟಾಭಾವಜ್ಞಾನವನ್ನು ಘಟಜ್ಞಾನವೆಂದು ಯಾವನು ಹೇಳುತ್ತಾನೆ.**

**ಭಾವವಿಲಾಸಿನೀ–** ಇದಾನೀಂ ಪ್ರಾಮಾಣಿಕತ್ವಹೇತುನಾ ಜಗತ್ಸತ್ಯತ್ವಂ ಸಾಧಯಿತುಂ ಪ್ರಾಮಾಣಿಕ-ಶಬ್ದಾರ್ಥಂ ಲೋಕಸಂಮತ್ಯಾವ್ಯಾಕರಣಸಂಮತ್ಯಾ ಚ ದರ್ಶಯತಿ ॥ ಸಿದ್ಧಿರಿತಿ ॥ ನಹಿ ಕೋಽಪಿ ಘಟಾಭಾವಸಿದ್ಧಿಂ ಘಟಸಿದ್ಧಿಂ ಬ್ರೂತೇ । ನ ವಾ ಸ್ವಪ್ರಯೋಜನಾಲಾಭೇ ಸಿದ್ಧಂ ಮಮ ಪ್ರಯೋಜನಮಿತ್ಯಾಹ । ಂತು ಸ್ವಪ್ರಯೋಜನೇ ಸಮ್ಯಕ್ಸಂಪನ್ನೇ ಸತ್ಯೇವ । ಇಮಾಂ ಲೋಕವ್ಯಾಕರಣಪ್ರಸಿದ್ಧಿಂ ಹಿಶಬ್ದೇನ ಸೂಚಯತಿ । ಯಸ್ಯ ಘಟಾದೇರ್ವಸ್ತುನಃ ॥ ೧೦೨೮ ॥

ತದಭಾವಸ್ಯ ಘಟಾದ್ಯಭಾವಸ್ಯ । ತಸ್ಯ ಘಟಾದೇಃ । ನ ಹಿ ಕೋಽಪಿ ಘಟನಾಸ್ತಿತ್ವನಿರ್ಣಯಂ ಘಟನಿರ್ಣಯಂ ವಕ್ತಿ । ಕಿಂತು ಘಟೋಽಸ್ತ್ಯೇವೇತಿ ನಿರ್ಣಯ ಏವ ಘಟನಿರ್ಣಯಃ । ಅತೋ ನಿರ್ಣಯಶಬ್ದಾರ್ಥೋಽಪಿ ಲೋಕಸಂಮತ ಇತಿ ಭಾವಃ । ಏತದಪಿ ದ್ವಿತೀಯಹಿಶಬ್ದೇನ ಸೂಚಯತಿ। ಕುಚೋದ್ಯಸ್ಯ ''ಅಸದೇವ ರಜತಂ ಪ್ರತ್ಯಾಭಾದಿ''ತ್ಯನುವ್ಯವಸಾಯವಿಷಯತಯಾ ''ನೇದಂ ರಜತಮಿ''ತಿ ಬಾಧಪ್ರಮಾವಿಷಯತಯಾ ಚ ಶುಕ್ತಿರಜತಸ್ಯ ಪ್ರಾಮಾಣಿಕತ್ವಮಸ್ತೀತಿ ಚೋದ್ಯಸ್ಯ । ಅತ್ರ ಪ್ರಾಮಾಣಿಕತ್ವಹೇತೌ । ಪ್ರಮಾಣೇನ ನಾಸ್ತೀತಿ ಪ್ರತಿಪಾದಿತೇ ವಸ್ತುನಿ ಪ್ರಾಮಾಣಿಕತ್ವಸ್ಯ ಲೋಕೇ ವೇದೇ ಚಾವ್ಯವಹಾರಾತ್ । ಪ್ರತ್ಯುತಾಪ್ರಾಮಾಣಿಕತ್ವಸ್ಯೈವ ವ್ಯವಹಾರಾಚ್ಚೇತಿ ಭಾವಃ ॥ ೧೦೨೭-೧೦೨೮ ॥

**ವಿವರಣೆ-** ಇನ್ನು ಪ್ರಾಮಾಣಿಕತ್ವ ಹೇತುವಿನಿಂದ ಜಗತ್ ಸತ್ಯತ್ವವನ್ನು ಸಾಧಿಸಲು ಲೋಕಸಮ್ಮತಿಯಿಂದಲೂ ವ್ಯಾಕರಣದ ಸಮ್ಮತಿಯಿಂದಲೂ ಪ್ರಾಮಾಣಿಕ ಶಬ್ದಾರ್ಥವನ್ನು ತಿಳಿಸುತ್ತಾರೆ. ಯಾವನೂ ಘಟಾಭಾವಸಿದ್ಧಿಯನ್ನು ಘಟಸಿದ್ಧಿ ಎಂದು ಹೇಳುವುದಿಲ್ಲ. ಅಥವಾ ತನಗೆ ಉದ್ದಿಷ್ಟವಾದ ಪ್ರಯೋಜನವು ದೊರೆಯದಿದ್ದರೂ, ನನ್ನ ಪ್ರಯೋಜನವು ಸಿದ್ಧವಾಗಿದೆ ಎಂದು ಹೇಳುವುದಿಲ್ಲ. ಆದರೆ ತನ್ನ ಪ್ರಯೋಜನವು ತನಗೆ ಚೆನ್ನಾಗಿ ಉಂಟಾದರೆ ಮಾತ್ರ ಹಾಗೆ ಹೇಳುತ್ತಾನೆ. ಈ ಲೋಕವ್ಯವಹಾರಪ್ರಸಿದ್ಧಿಯನ್ನು 'ಹಿ' ಶಬ್ದದಿಂದ ಸೂಚಿಸಿದ್ದಾರೆ. ಅದರಂತೆ ಯಾವನೂ ಘಟನಾಸ್ತಿತ್ವನಿರ್ಣಯವನ್ನು ಘಟನಿರ್ಣಯವೆಂದು ಹೇಳುವುದಿಲ್ಲ. ಘಟದ ಅಸ್ತಿತ್ವನಿರ್ಣಯವನ್ನೇ ಘಟನಿರ್ಣಯವೆಂದು ಹೇಳುತ್ತಾರೆ. ಆದ್ದರಿಂದ ನಾವು ಹೇಳಿದ ನಿರ್ಣಯ ಶಬ್ದಾರ್ಥವು ಲೋಕಸಮ್ಮತವೇ ಆಗಿದೆ ಎಂದು ಎರಡನೆಯ 'ಹಿ' ಶಬ್ದದಿಂದ ಸೂಚಿಸುತ್ತಾರೆ. ''ಅಸದೇವ ರಜತಂ ಪ್ರತ್ಯಭಾತ್'' ಎನ್ನುವ ಅನುವ್ಯವಸಾಯಕ್ಕೆ ವಿಷಯವಾದುದರಿಂದ, ''ನೇದಂ ರಜತಮ್'' ಎನ್ನುವ ಬಾಧಕ್ಕೆ ವಿಷಯವಾದುದರಿಂದ ಶುಕ್ತಿರಜತಕ್ಕೂ ಪ್ರಾಮಾಣಿಕತ್ವವು ಸಿದ್ಧವಾಗಲಿ ಎಂಬ ಕುಚೋದ್ಯಕ್ಕೆ ಅವಕಾಶವಿಲ್ಲ. ಪ್ರಮಾಣವು ನಾಸ್ತಿತ್ವವನ್ನು ಪ್ರತಿಪಾದನೆ ಮಾಡುವಾಗ ಆ ವಸ್ತುವಿನಲ್ಲಿ ಪ್ರಾಮಾಣಿಕತ್ವವನ್ನು ಲೋಕದಲ್ಲಿಯೂ, ವೇದದಲ್ಲಿಯೂ ವ್ಯವಹಾರಮಾಡುವುದಿಲ್ಲ. ಈ ಅನುವ್ಯವಸಾಯವೂ ಮತ್ತು ಬಾಧವೂ ಶುಕ್ತಿರಜತದ ನಾಸ್ತಿಕ್ಯತ್ವವನ್ನೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಲೋಕದಲ್ಲಿ ಶುಕ್ತಿರಜತವು ಅಪ್ರಾಮಾಣಿಕವೆಂದೇ ವ್ಯವಹಾರಮಾಡುತ್ತಾರೆ ಎಂದು ಅಭಿಪ್ರಾಯ.

**ಯದ್ವಾ ಪ್ರಮಾಣಂ ಯತ್ಸತ್ತಾಮಂಗೀಕಾರಯತಿ ಸ್ಫುಟಮ್ ।**
**ಸೋಽರ್ಥಃ ಪ್ರಾಮಾಣಿಕೋಽನ್ಯೋಽರ್ಥಸ್ತ್ವಪ್ರಾಮಾಣಿಕ ಉಚ್ಯತೇ॥೧೦೨೯॥**

**ಅರ್ಥ-** ಯದ್ವಾ = ಅಥವಾ, ಪ್ರಮಾಣಂ = ಪ್ರಮಾಣವು, ಯತ್ಸತ್ತಾಮ್ = ಯಾವ ಪದಾರ್ಥದ ವಿದ್ಯಮಾನತ್ವವನ್ನು, ಸ್ಫುಟಮ್ = ಸ್ಪಷ್ಟವಾಗಿ, ಅಂಗೀಕಾರಯತಿ = ಅಂಗೀಕಾರ ಮಾಡಿಸುತ್ತದೆಯೋ, ಸೋಽರ್ಥಃ = ಅಂತಹ ಪದಾರ್ಥವು, ಪ್ರಾಮಾಣಿಕಃ =

ಪ್ರಾಮಾಣಿಕವಾದುದು, ಅನ್ಯೋऽರ್ಥಃ = ಅದಕ್ಕಿಂತ ಭಿನ್ನವಾದ ಅರ್ಥವು, ಅಪ್ರಾಮಾಣಿಕಃ= ಅಪ್ರಮಾಣಿಕವೆಂದು, ಉಚ್ಯತೇ = ಹೇಳಲ್ಪಡುತ್ತದೆ.

**ಅನುವಾದ-** ಅಥವಾ ಪ್ರಮಾಣವು ಯಾವ ಪದಾರ್ಥದ ವಿದ್ಯಮಾನತ್ವವನ್ನು ಅಂಗೀಕಾರ ಮಾಡಿಸುತ್ತದೆಯೋ (ಸಾಧಿಸಿಕೊಡುತ್ತದೆಯೋ) ಆ ಪದಾರ್ಥವು ಪ್ರಾಮಾಣಿಕವೆಂದೂ ಅದಕ್ಕಿಂತ ಭಿನ್ನವಾದ ಪದಾರ್ಥವು ಅಪ್ರಾಮಾಣಿಕವೆಂದೂ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಪ್ರಾಕಾರಾಂತರೇಣಾಪಿ ಪ್ರಾಮಾಣಿಕ ಶಬ್ದಸ್ಯೋಕ್ತಮೇವಾರ್ಥಮಾನಯತಿ ॥ ಯದ್ವೇತಿ ॥ ಯತ್ವಾಂ ಯಸ್ಯ ಪದಾರ್ಥಸ್ಯ ವಿದ್ಯಮಾನತಾಮ್ । ಘಟೋ ನಾಸ್ತೀತಿ ವದತಾಪಿ ಭೂತಲೇ ಘಟ ಇತಿ ಪ್ರಮಾಣೇ ಸತಿ ಘಟಾಸ್ತಿತ್ವಸ್ಯೈವಾಂಗೀಕಾರಾದಿತಿ ಭಾವಃ ॥

**ವಿವರಣೆ-** ರೀತ್ಯಂತರದಿಂದಲೂ ಪ್ರಾಮಾಣಿಕ ಎಂಬ ಶಬ್ದಕ್ಕೆ ಹಿಂದೆ ಹೇಳಿದ ಅರ್ಥವನ್ನೇ ಪ್ರತಿಪಾದಿಸುತ್ತಾರೆ. 'ಘಟೋನಾಸ್ತಿ' ಎಂದು ಹೇಳುವವನೂ ಕೂಡ 'ಭೂತಲೇ ಘಟಃ' ಎಂಬ ಪ್ರಮಾಣವು ಇದ್ದರೆ, ಘಟಕ್ಕೆ ಅಸ್ತಿತ್ವವನ್ನೇ ಅಂಗೀಕಾರಮಾಡುತ್ತಾನೆ. ಆದ್ದರಿಂದ 'ಭೂತಲೇ ಘಟಃ' ಎಂಬುದು ಪ್ರಮಾಣವಾಗುತ್ತದೆ. ಆಗ 'ಘಟೋನಾಸ್ತಿ' ಎಂಬುದು ಅಪ್ರಮಾಣವಾಗುತ್ತದೆ. ಘಟವು ಪ್ರಮಾಣಕ್ಕೆ ವಿಷಯವಾದುದರಿಂದ ಪ್ರಾಮಾಣಿಕವಾಗುತ್ತದೆ ಎಂದು ಅಭಿಪ್ರಾಯ.

**ಪ್ರಮಾಣತಾ ಚ ಕರಣೇ ಪ್ರಮಾಕರಣತಾ ಮತಾ ।**
**ಪ್ರಮಾ ಯಥಾರ್ಥಧೀಸ್ತತ್ತ್ವಂ ಲೋಕೋಕ್ತ್ಯಾ ನ ದುರಾಗ್ರಹಾತ್ ॥೧೦೩೦॥**

**ಅರ್ಥ-** ಕರಣೇ = ಕರಣದಲ್ಲಿ, ಪ್ರಮಾಣತಾ = ಪ್ರಾಮಾಣ್ಯವೆಂದರೆ, ಪ್ರಮಾಕರಣತಾ= ಪ್ರಮಾಜನಕತ್ವರೂಪವಾದುದು ಎಂದೇ, ಮತಾ = ಸಮ್ಮತವಾಗಿದೆ, ಪ್ರಮಾ = ಪ್ರಮಾ ಎಂದರೆ, ಯಥಾರ್ಥಧೀಃ = ಯಥಾರ್ಥಜ್ಞಾನ. ತತ್ತ್ವಂ = ಪ್ರಮಾಣತ್ವವನ್ನು, ಲೋಕೋಕ್ತ್ಯಾ = ಲೋಕವ್ಯವಹಾರಕ್ಕೆ ಅನುಗುಣವಾಗಿಯೇ ಅಂಗೀಕರಿಸಬೇಕು, ದುರಾಗ್ರಹಾತ್ = ದುರಾಗ್ರಹಾತ್, ನ = ಅಂಗೀಕರಿಸಬಾರದು.

**ಅನುವಾದ-** ಕರಣದಲ್ಲಿ ಪ್ರಾಮಾಣ್ಯವೆಂದರೆ, ಯಥಾರ್ಥಜ್ಞಾನಜನಕತ್ವ ರೂಪವಾದುದು ಎಂದೇ ಸಮ್ಮತವಾಗಿದೆ. ಪ್ರಮಾ ಎಂದರೆ ಯಥಾರ್ಥಜ್ಞಾನ. ಆದ್ದರಿಂದ ಪ್ರಮಾಣ ಶಬ್ದಾರ್ಥವನ್ನು (ಪ್ರಾಮಾಣ್ಯವನ್ನು) ಲೋಕವ್ಯವಹಾರಕ್ಕೆ ಅನುಗುಣವಾಗಿಯೇ ಹೇಳಬೇಕೇ ಹೊರತು ತಮ್ಮ ಮತದ ಮೇಲಿನ ದುರಾಗ್ರಹದಿಂದ ನಿರ್ವಚನ ಮಾಡಬಾರದು.

**ಭಾವವಿಲಾಸಿನೀ–** ತತ್ತ್ವಂ ಪ್ರಮಾಣತ್ವಮ್ । ಲೋಕೋಕ್ತ್ಯಾ ಲೋಕವ್ಯವಹಾರೇಣಾಂಗೀ-ಕಾರ್ಯಮ್। ದುರಾಗ್ರಹಾತ್ ಸ್ವಮತದುರಾಗ್ರಹಾತ್ । ಯಥಾರ್ಥಮೇವ ಮಯಾ ದೃಷ್ಟಮಿತಿ

ವದನ್‌ಲೋಕೋऽಹಿ ಯಥಾರ್ಥಜ್ಞಾನಕರಣಸ್ಯೈವ ಪ್ರಮಾಣತಾಂ ವಕ್ತಿ। ಅತಸ್ತದೇವ ಪ್ರಮಾಣಂ ನ ತ್ವರ್ಥೇऽನಧಿಗತತ್ವಾದಿಕಂ ಪ್ರವೇಶನೀಯಮಿತಿ ಭಾವಃ ॥ ೧೦೩೦ ॥

**ವಿವರಣೆ-** ನಾನು ಯಥಾರ್ಥವಾದದ್ದನ್ನೇ ನೋಡಿದ್ದೇನೆ ಎಂದು ಹೇಳುವ ಲೋಕವೂ ಸಹ, ಯಥಾರ್ಥಜ್ಞಾನಕರಣಕ್ಕೇ ಪ್ರಮಾಣತ್ವವನ್ನು ಹೇಳುತ್ತದೆ. ಆದ್ದರಿಂದ ಯಥಾರ್ಥಜ್ಞಾನವನ್ನೇ ಪ್ರಮಾಣವೆಂದು ಅಂಗೀಕರಿಸಬೇಕು. ಅದರಲ್ಲಿ ಅನಧಿ ಗತಾರ್ಥವಿಷಯಕತ್ವವನ್ನು ಸೇರಿಸಬಾರದು ಎಂದು ಅಭಿಪ್ರಾಯ.

ಅತೋ ಯದ್ವಿದ್ಯಮಾನತ್ವಂ ಪ್ರತ್ಯಕ್ಷೇಣೇತರೇಣ ವಾ ।
ನಿರ್ಣೀಯತೇ ಪ್ರಮಾಣೇನ ತತ್ಪ್ರಾಮಾಣಿಕಶಬ್ದವತ್ ॥ ೧೦೩೧ ॥

**ಅರ್ಥ-** ಅತಃ = ಆದ್ದರಿಂದ, ಯದ್ವಿದ್ಯಮಾನತ್ವಂ = ಯಾವ ಪದಾರ್ಥದ ವಿದ್ಯಮಾನತ್ವವು, ಪ್ರತ್ಯಕ್ಷೇಣ = ಪ್ರತ್ಯಕ್ಷದಿಂದಲಾಗಲೀ, ಇತರೇಣ ಪ್ರಮಾಣೇನ ವಾ = ಇತರ ಪ್ರಮಾಣದಿಂದಲಾಗಲೀ, ನಿರ್ಣೀಯತೇ = ನಿರ್ಣಯಿಸಲ್ಪಡುತ್ತದೆಯೋ, ತತ್ = ಆ ಪದಾರ್ಥವು, ಪ್ರಾಮಾಣಿಕ ಶಬ್ದವತ್ = ಪ್ರಾಮಾಣಿಕ ಶಬ್ದವಾಚ್ಯವಾಗುತ್ತದೆ.

**ಅನುವಾದ-** ಆದ್ದರಿಂದ ಯಾವ ಪದಾರ್ಥದ ವಿದ್ಯಮಾನತ್ವವು ಪ್ರತ್ಯಕ್ಷದಿಂದಲಾಗಲೀ ಅಥವಾ ಇತರ ಪ್ರಮಾಣಗಳಿಂದಲಾಗಲೀ, ನಿರ್ಣಯಿಸಲ್ಪಡುತ್ತದೆಯೋ ಆ ಪದಾರ್ಥವೇ ಪ್ರಾಮಾಣಿಕ ಶಬ್ದವಾಚ್ಯವಾದುದು.

**ಭಾವವಿಲಾಸಿನೀ–** ಪ್ರತ್ಯಕ್ಷೇಣ ಪ್ರಮಾಣತ್ವೇನ ಲೋಕಸಂಮತಪ್ರತ್ಯಕ್ಷೇಣ । ತತ್ ಲೋಕ-ಸಂಮತಪ್ರಮಾಣಸಿದ್ಧವಿದ್ಯಮಾನತ್ವಾಧಿಕರಣಮ್ । ಪ್ರಾಮಾಣಿಕಶಬ್ದವತ್ ಪ್ರಾಮಾಣಿಕ-ಶಬ್ದವಾಚ್ಯಮ್ । ಏವಂ ಚ ಮಹಾವಾಕ್ಯಮೇವ ಪ್ರಮಾಣಂ ನಾನ್ಯದಿತಿ ವದತಾ ಮಾಯಾ-ವಾದಿನಾಪಿ ನ ಹೇತೋರನ್ಯತರಾಸಿದ್ಧಿರ್ವಕ್ತುಂ ಶಕ್ಯಾ । ಲೋಕಸಂಮತ ಪ್ರಮಾಣ ಬೋಧಿತ ವಿದ್ಯಮಾನತ್ವಾಧಿಕರಣತ್ವಸ್ಯ ಹಾನೋಪದಾನಾದಿಕಂ ಕುರ್ವತಾ ತೇನಾಪಿ ಘಟಾದೌ ಪ್ರಪಂಚೇ ಬ್ರಹ್ಮಣಿ ಚ ವಕ್ತವ್ಯತ್ವಾತ್ ಶುಕ್ತಿರಜತಾದಾವವಕ್ತವ್ಯತ್ವಾಚ್ಚ ಇದಮೇವ ಚ ಪ್ರಾಮಾ-ಣಿಕತ್ವಮ್ । ಲೋಕೇ ಏತಾದೃಶೇ ವಸ್ತುನ್ಯೇವ ಪ್ರಾಮಾಣಿಕಪದಪ್ರಯೋಗದರ್ಶನಾತ್ । ಪ್ರಯೋಗಾನುಸಾರೇಣೈವ ವ್ಯಾಕರಣಸ್ಯಾಪಿ ಪ್ರವೃತ್ತತ್ವಾದುಕ್ತಸಂಬಂಧವಿಶೇಷ ಏವ ತದುದಿತ ಪ್ರತ್ಯಯಾರ್ಥ ಇತಿ ಭಾವಃ ॥ ೧೦೩೧ ॥

**ವಿವರಣೆ-** ಲೋಕಸಮ್ಮತವಾದ ಪ್ರಮಾಣಪ್ರಸಿದ್ಧವಾದ ವಿದ್ಯಮಾನತ್ವವು ಎಲ್ಲಿದೆಯೋ ಅದೇ ಪ್ರಾಮಾಣಿಕ ಶಬ್ದವಾಚ್ಯವಾಗುತ್ತದೆ. ಹೀಗೆ ಹೇಳುವುದರಿಂದ ಮಹಾವಾಕ್ಯವೇ ಪ್ರಮಾಣ. ಇನ್ನೊಂದು ಪ್ರಮಾಣವಲ್ಲ ಎಂದು ಹೇಳುವ ಮಾಯಾವಾದಿಯೂ ಕೂಡ, ನಮ್ಮ ಹೇತುವಿಗೆ ಅನ್ಯತರಾಸಿದ್ಧಿಯನ್ನು ಹೇಳಲು ಸಾಧ್ಯವಿಲ್ಲ ಎಂದು ಸೂಚಿಸುತ್ತಾರೆ.

ಅಂತಹ ವಿದ್ಯಮಾನತ್ವವುಳ್ಳ ವಸ್ತುಗಳಲ್ಲಿಯೇ ಹಾನೋಪಾದಾನಾದಿ ವ್ಯವಹಾರವನ್ನು ಮಾಡುವ ಮಾಯಾವಾದಿಯೂ ಸಹ ಘಟಾದಿಪ್ರಪಂಚದಲ್ಲಿಯೂ ಮತ್ತು ಬ್ರಹ್ಮನಲ್ಲಿಯೂ ಅಂತಹ ಪ್ರಾಮಾಣಿಕತ್ವವನ್ನೇ ಅಂಗೀಕಾರ ಮಾಡಬೇಕಾಗುವುದರಿಂದ ಶುಕ್ತಿರಜತಾದಿಗಳಲ್ಲಿ ಅಂತಹ ಪ್ರಾಮಾಣಿಕತ್ವವು ಇಲ್ಲದಿರುವುದರಿಂದ ಇದೇ ಪ್ರಾಮಾಣಿಕ ಶಬ್ದಾರ್ಥವಾದುದು. ಲೋಕದಲ್ಲಿ ಇಂತಹ ವಸ್ತುಗಳಲ್ಲಿಯೇ ಪ್ರಾಮಾಣಿಕ ಶಬ್ದವನ್ನು ಪ್ರಯೋಗಿಸುತ್ತಾರೆ ಎಂದು ಅಭಿಪ್ರಾಯ.

**ಪ್ರಯೋಗಸ್ಯಾನುಸಾರೇಣ ಶಬ್ದಸ್ಯಾರ್ಥೋ ಭವೇತ್ ಕಿಲ ।**
**ಪ್ರಯೋಗಮೂಲಂ ಯತ್ ಪ್ರಾಹುಃ ಸರ್ವೇ ವ್ಯಾಕರಣಂ ಬುಧಾಃ ॥೧೦೩೨॥**

**ಅರ್ಥ**- ಪ್ರಯೋಗಸ್ಯಾನುಸಾರೇಣ = ಪ್ರಯೋಗಕ್ಕೆ ಅನುಸಾರವಾಗಿ, ಶಬ್ದಸ್ಯ = ಶಬ್ದದ, ಅರ್ಥಃ = ಅರ್ಥವು, ಭವೇತ್ ಕಿಲ = ಇರುತ್ತದೆಯಷ್ಟೇ ? ಯತ್ = ಏಕೆಂದರೆ, ಸರ್ವೇ ಬುಧಾಃ = ಎಲ್ಲಾ ಜ್ಞಾನಿಗಳೂ, ವ್ಯಾಕರಣಂ = ವ್ಯಾಕರಣವನ್ನು, ಪ್ರಯೋಗಮೂಲಂ = ಪ್ರಯೋಗಮೂಲವಾದುದು ಎಂದು, ಪ್ರಾಹುಃ = ಹೇಳುತ್ತಾರೆ.

**ಅನುವಾದ**- ಪ್ರಯೋಗಕ್ಕೆ ಅನುಸಾರವಾಗಿ ಶಬ್ದದ ಅರ್ಥವು ಇರುತ್ತದೆಯಷ್ಟೇ ? ಏಕೆಂದರೆ, ಎಲ್ಲಾ ಜ್ಞಾನಿಗಳೂ ವ್ಯಾಕರಣವನ್ನು ಪ್ರಯೋಗಮೂಲವಾದುದು ಎಂದು ಹೇಳುತ್ತಾರೆ.

**ಭಾವವಿಲಾಸಿನೀ**– ಏತದೇವ ವಿಶದಯತಿ ॥ ಪ್ರಯೋಗಸ್ಯೇತ್ಯಾದಿನಾ ॥ ೧೦೩೨ ॥

ಪ್ರಯುಂಜತೇ ನ ತಚ್ಛಬ್ದಂ ಪ್ರಜಾ ರಜ್ಜುಭುಜಂಗಮೇ ।
ನಿಷೇಧ್ಯತ್ವೇನ ಬಾಧಾಖ್ಯಮಾನಸಂಬಂಧವತ್ಯಪಿ ॥ ೧೦೩೩ ॥

ನಿಷೇಧ್ಯತ್ವೇನ = ನಿಷೇಧ್ಯವಾಗಿ, ಬಾಧಾಖ್ಯಮಾನಸಂಬಂಧವತ್ಯಪಿ = ಬಾಧರೂಪವಾದ ಪ್ರಮಾಣದ ಸಂಬಂಧವನ್ನು ಹೊಂದಿದ್ದರೂ ಸಹ, ರಜ್ಜುಭುಜಂಗಮೇ = ರಜ್ಜುಸರ್ಪದಲ್ಲಿ, ಪ್ರಜಾ = ಲೌಕಿಕರು, ತಚ್ಛಬ್ದಂ = ಆ ಪ್ರಾಮಾಣಿಕ ಎಂಬ ಶಬ್ದವನ್ನು, ನ ಪ್ರಯುಂಜತೇ = ಪ್ರಯೋಗಿಸುವುದಿಲ್ಲವಷ್ಟೇ ?

**ಅನುವಾದ**- ನಿಷೇಧ್ಯತ್ವೇನ (ನಿಷೇಧಿಸಲ್ಪಡುವುದರಿಂದ) ಬಾಧರೂಪವಾದ ಪ್ರಮಾಣವನ್ನು ಹೊಂದಿದ್ದರೂ ರಜ್ಜುಸರ್ಪದಲ್ಲಿ ಲೌಕಿಕರು ಪ್ರಾಮಾಣಿಕ ಎಂಬ ಶಬ್ದವನ್ನು ಪ್ರಯೋಗಿಸುವುದಿಲ್ಲ.

**ಭಾವವಿಲಾಸಿನೀ**– ತಚ್ಛಬ್ದಂ ಪ್ರಾಮಾಣಿಕಶಬ್ದಂ ॥ ೧೦೩೩ ॥

ತತಃ ಪ್ರಮಾಣಸಂಬಂಧಮಾತ್ರಾರ್ಥಃ ಪ್ರತ್ಯಯೋಽತ್ರ ನ ।
ತತ್ಸಂಬಂಧವಿಶೇಷಾರ್ಥ ಇತ್ಯಾಹುಃ ಶಬ್ದಕೋವಿದಾಃ ॥ ೧೦೩೪ ॥

**ಅರ್ಥ-** ತತಃ = ಆ ಕಾರಣದಿಂದ, ಅತ್ರ = ಪ್ರಾಮಾಣಿಕ ಶಬ್ದದಲ್ಲಿ, ಪ್ರತ್ಯಯಃ = ಪ್ರಮಾಣ ಶಬ್ದದ ಮೇಲೆ ಉಂಟಾದ ಠಕ್ ಪ್ರತ್ಯಯವು, ಪ್ರಮಾಣಸಂಬಂಧಮಾತ್ರಾರ್ಥಃ ನ = ಕೇವಲ ಪ್ರಮಾಣಸಂಬಂಧವನ್ನು ಮಾತ್ರ ಹೇಳುವುದಲ್ಲ, ಶಬ್ದಕೋವಿದಾಃ = ಶಬ್ದಕೋವಿದರು (ವ್ಯಾಕರಣಶಾಸ್ತ್ರಜ್ಞರು) ತತ್ಸಂಬಂಧವಿಶೇಷಾರ್ಥಃ= ಪ್ರಮಾಣಸಂಬಂಧ ವಿಶೇಷವೇ ಆ ಪ್ರಾಮಾಣಿಕ ಶಬ್ದದ ಅರ್ಥ, ಇತ್ಯಾಹುಃ = ಎಂದು ಹೇಳುತ್ತಾರೆ.

**ಅನುವಾದ-** ಆದ್ದರಿಂದ ಪ್ರಾಮಾಣಿಕ ಎಂಬ ಶಬ್ದದಲ್ಲಿ ಪ್ರಮಾಣ ಶಬ್ದದ ಮೇಲೆ ಇರುವ ಠಕ್ ಪ್ರತ್ಯಯಕ್ಕೆ ಕೇವಲ ಪ್ರಮಾಣಸಂಬಂಧವುಳ್ಳದ್ದು ಎಂದು ಇಷ್ಟೇ ಅರ್ಥವಲ್ಲ, ಪ್ರಮಾಣಸಂಬಂಧವಿಶೇಷವುಳ್ಳದ್ದು ಎಂದೇ ಅರ್ಥ ಎಂದು ವ್ಯಾಕರಣಶಾಸ್ತ್ರಜ್ಞರು ಹೇಳುತ್ತಾರೆ.

**ಭಾವವಿಲಾಸಿನೀ-**ಪ್ರತ್ಯಯಃಪ್ರಮಾಣಪದೋಪರಿಪ್ರಾಮಾಣಿಕಪದಸಂಪತ್ತ್ಯರ್ಥಂ ವೈಯಾಕರಣೈರನುಶಿಷ್ಟಠಕ್ಪ್ರತ್ಯಯಃ । ಅತ್ರ ಪ್ರಾಮಾಣಿಕಶಬ್ದೇ । ಪ್ರಮಾಣಸಂಬಂಧ-ಮಾತ್ರಾರ್ಥೋ ನೇತಿ ಸಂಬಂಧಃ । ತತ್ ತಸ್ಮಾತ್ ॥ ೧೦೩೪ ॥

**ವಿವರಣೆ-** ಪ್ರಮಾಣಸಂಬಂಧವುಳ್ಳದ್ದು ಎಂದು ಇಷ್ಟೇ ಅರ್ಥವಾದರೆ, ಹಿಂದೆ ಹೇಳಿದಂತೆ ಅನುವ್ಯವಸಾಯ ಮತ್ತು ಬಾಧರೂಪವಾದ ಪ್ರಮಾಣಗಳ ಸಂಬಂಧವನ್ನು ಹೊಂದಿರುವುದರಿಂದ ಶುಕ್ತಿರಜತಕ್ಕೂ ಪ್ರಾಮಾಣಿಕತ್ವವು ಬರಬೇಕಾಗಿದ್ದಿತು. ಆದ್ದರಿಂದ ಪ್ರಮಾಣಸಂಬಂಧ ಮಾತ್ರವನ್ನು ಪ್ರತ್ಯಯಾರ್ಥ ಎಂದು ಹೇಳದೆ, ಪ್ರಮಾಣ ಸಂಬಂಧವಿಶೇಷವನ್ನು ಪ್ರತ್ಯಯಾರ್ಥವೆಂದು ಹೇಳಬೇಕು ಎಂದು ಅಭಿಪ್ರಾಯ.

ವಿಶೇಷಶ್ಚ ಸ ಏವ ಸ್ಯಾನ್ಮಿಥ್ಯಾರ್ಥಾದ್ ವಿಶಿನಷ್ಟಿ ಯಃ ।
ಅತೋಽಸ್ಮದುಕ್ತಮೇವಾರ್ಥಂ ಶಬ್ದೋಽಸೌ ವಕ್ತಿ ನಾಪರಮ್ ॥ ೧೦೩೫ ॥

**ಅರ್ಥ-** ಯಃ = ಯಾವುದು, ಮಿಥ್ಯಾರ್ಥಾತ್ = ಮಿಥ್ಯಾಭೂತವಾದ ಪದಾರ್ಥದಿಂದ, ವಿಶಿನಷ್ಟಿ = ಪ್ರತ್ಯೇಕಿಸುತ್ತದೆಯೋ, ಸ ಏವ = ಅದೇ, ವಿಶೇಷಶ್ಚ ಸ್ಯಾತ್ = ಆ ಸಂಬಂಧವಿಶೇಷವಾಗುತ್ತದೆ, ಅತಃ = ಆದ್ದರಿಂದ, ಅಸೌ ಶಬ್ದ = ಈ ಪ್ರಾಮಾಣಿಕವೆಂಬ ಶಬ್ದವು, ಅಸ್ಮದುಕ್ತಮೇವ ಅರ್ಥಂ = ನಾವು ಹೇಳಿದ ಅರ್ಥವನ್ನೇ, ವಕ್ತಿ = ಹೇಳುತ್ತದೆ, ಅಪರಮ್ ನ = ಇನ್ನೊಂದು ಅರ್ಥವನ್ನು ಹೇಳುವುದಿಲ್ಲ.

**ಅನುವಾದ-** ಯಾವ ಸಂಬಂಧವು ಸಂಬಂಧಿಯಾದ ತನ್ನ ಅರ್ಥವನ್ನು ಮಿಥ್ಯಾ-ಭೂತವಾದ ಅರ್ಥದಿಂದ ಪ್ರತ್ಯೇಕಿಸುತ್ತದೆಯೋ ಅದೇ ವಿವಕ್ಷಿತವಾದ

ಸಂಬಂಧವಿಶೇಷ. ಆದ್ದರಿಂದ ಪ್ರಾಮಾಣಿಕ ಎಂಬ ಈ ಶಬ್ದವು ನಾವು ಹೇಳಿದ ಅರ್ಥವನ್ನೇ ಹೇಳುತ್ತದೆ. ಬೇರೆ ಅರ್ಥವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಅತಃ ವ್ಯಾಕರಣಸ್ಯಾಪಿ ಪ್ರಯೋಗಮೂಲತ್ವಾತ್ । ಅಸೌ ಶಬ್ದಃ ಪ್ರಾಮಾಣಿಕಶಬ್ದಃ ॥

ಮಾನೇ ತವ ಮಹಾವಾಕ್ಯೇ ಯದಿ ತತ್ಪದಮರ್ಥವತ್ ।
ತದಾ ಪ್ರಾಮಾಣಿಕಂ ಬ್ರಹ್ಮ ನ ಚೇದೈಕ್ಯಮ್ ನ ವಾಕ್ಯತಃ ॥ ೧೦೩೬ ॥

ಸಿದ್ಧ್ಯೇದ್ ವಿಧ್ಯೇದತೋ ಬ್ರಹ್ಮ ತತ್ಪದೇಷುರ್ನ ಸಂಶಯಃ ।
ಐಕ್ಯಂ ತವ ಯತೋಽವಶ್ಯಂ ಮುಖ್ಯತತ್ತ್ವಚ್ಯುತಿರ್ನ ಚೇತ್ ॥ ೧೦೩೭ ॥

**ಅರ್ಥ-** ಮಾನೇ = ಪ್ರಮಾಣವಾದ, ತವ ಮಹಾವಾಕ್ಯೇ = ನಿನ್ನ ತತ್ತ್ವಮಸಿ ಎಂಬ ಮಹಾವಾಕ್ಯದಲ್ಲಿ, ಯದಿ = ಒಂದು ಪಕ್ಷ, ತತ್ಪದಮ್ = ತತ್ ಎಂಬ ಪದವು, ಅರ್ಥವತ್ = ಮುಖ್ಯವೃತ್ತಿಯಿಂದಲಾಗಲೀ ಅಥವಾ ಅಮುಖ್ಯವೃತ್ತಿಯಿಂದಲಾಗಲೀ ಅರ್ಥವನ್ನು ಪ್ರತಿಪಾದನೆ ಮಾಡಿದರೆ, ತದಾ = ಆಗ, ಬ್ರಹ್ಮ = ಬ್ರಹ್ಮನು, ಪ್ರಾಮಾಣಿಕಂ = ಪ್ರಾಮಾಣಿಕನಾಗುತ್ತಾನೆ, ನ ಚೇತ್ = ಇಲ್ಲದಿದ್ದರೆ, ವಾಕ್ಯತಃ = ಮಹಾವಾಕ್ಯದಿಂದ, ಐಕ್ಯಮ್= ಐಕ್ಯವು, ನ ಸಿದ್ಧ್ಯೇತ್ = ಸಿದ್ಧಿಸುವುದಿಲ್ಲ. ಅತಃ = ಆದ್ದರಿಂದ ತತ್ಪದೇಷುಃ = ತತ್ ಎಂಬ ಪದರೂಪವಾದ ಬಾಣವು, ಬ್ರಹ್ಮ = ಬ್ರಹ್ಮನನ್ನು, ವಿಧ್ಯೇತ್ = ಸ್ಪರ್ಶಿಸುತ್ತದೆ (ಪ್ರತಿಪಾದಿಸುತ್ತದೆ), ನ ಸಂಶಯಃ = ಈ ವಿಷಯದಲ್ಲಿ ಸಂಶಯವಿಲ್ಲ. ಯತಃ = ಏಕೆಂದರೆ, ತವ = ನಿನಗೆ, ಐಕ್ಯಮ್ = ಐಕ್ಯವು, ಅವಶ್ಯಂ = ಅವಶ್ಯವಾಗಿ ಸಿದ್ಧವಾಗಬೇಕಾಗಿದೆ, ನ ಚೇತ್ = ಇಲ್ಲದಿದ್ದರೆ, ಮುಖ್ಯತತ್ತ್ವಚ್ಯುತಿಃ = ನಿನ್ನ ಮುಖ್ಯತತ್ತ್ವವಾದ ಐಕ್ಯದ ಚ್ಯುತಿಯೇ ಉಂಟಾಗುತ್ತದೆ.

**ಅನುವಾದ-** ಪ್ರಮಾಣವಾದ ನಿನ್ನ ತತ್ತ್ವಮಸಿ ಮಹಾವಾಕ್ಯದಲ್ಲಿ ತತ್ ಎಂಬ ಪದವು ಮುಖ್ಯವೃತ್ತಿಯಿಂದಲಾಗಲೀ ಅಥವಾ ಅಮುಖ್ಯವೃತ್ತಿಯಿಂದಲಾಗಲೀ ಬ್ರಹ್ಮನನ್ನು ಪ್ರತಿಪಾದನೆ ಮಾಡಿದರೆ ಮಾತ್ರ ಬ್ರಹ್ಮನು ಪ್ರಾಮಾಣಿಕನಾಗುತ್ತಾನೆ, ಇಲ್ಲದಿದ್ದರೆ ಮಹಾವಾಕ್ಯದಿಂದ ಐಕ್ಯದ ಸಿದ್ಧಿಯು ಆಗುವುದಿಲ್ಲ. ಆದ್ದರಿಂದ ತತ್ ಪದವೆಂಬ ಬಾಣವು ಅವಶ್ಯವಾಗಿ ಬ್ರಹ್ಮನನ್ನು ಸ್ಪರ್ಶಿಸುತ್ತದೆ (ಪ್ರತಿಪಾದನೆ ಮಾಡುತ್ತದೆ). ಏಕೆಂದರೆ, ನಿನಗೆ ಅವಶ್ಯವಾಗಿ ಐಕ್ಯವು ಸಿದ್ಧವಾಗಬೇಕಾಗಿದೆ. ಇಲ್ಲದಿದ್ದರೆ, ನಿನ್ನ ಮುಖ್ಯತತ್ತ್ವವಾದ ಐಕ್ಯವೇ ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ದೃಷ್ಟಾಂತೇ ಸಾಧನವೈಕಲ್ಯಂ ಪರಿಹರತಿ ॥ **ಮಾನ ಇತಿ** ॥ ಮಹಾವಾಕ್ಯೇ ತತ್ತ್ವಮಸೀತಿ ವಾಕ್ಯೇ । ತತ್ಪದಂ ತದಿತಿಪದಮ್ । ಅರ್ಥವತ್ ಪ್ರತಿಪಾದ್ಯಾರ್ಥವತ್ ॥

ನ ಚೇತ್ ತತ್ಪದಸ್ಯ ಮುಖ್ಯತೋ ಲಕ್ಷಣಯಾ ವಾ ಬ್ರಹ್ಮಪ್ರತಿಪಾದಕತ್ವಂ ನ ಚೇತ್ । ಅತಸ್ತತ್ತ್ವಂ ಪದಾಭ್ಯಾಮ್ ಐಕ್ಯಬೋಧ್ಯತ್ವಾತ್ । ತತ್ಪದೇಷುಃ ತತ್ಪದಾಖ್ಯಶರಃ । ಬ್ರಹ್ಮವಿಧ್ಯೇತ್ । ಯಥಾ ಶರವೇಧಃ ಪರಿಹರ್ತುಂ ನ ಶಕ್ಯತೇ ತಥಾ ಬ್ರಹ್ಮಣೋऽಪಿ ತತ್ಪದಬೋಧ್ಯತ್ವಮನಿವಾರ್ಯಮಿತಿ ಭಾವಃ ॥ ೧೦೩೬-೧೦೩೭ ॥

**ವಿವರಣೆ-** ಜಗತ್ ಸತ್ಯಂ ಪ್ರಾಮಾಣಿಕತ್ವಾತ್ ಬ್ರಹ್ಮವತ್ ಎಂಬುದು ನಮಗೆ ವಿವಕ್ಷಿತವಾದ ಅನುಮಾನ. ಈ ಅನುಮಾನದ ದೃಷ್ಟಾಂತದಲ್ಲಿ ಸಾಧನವೈಕಲ್ಯವಿಲ್ಲವೆಂದು ಇಲ್ಲಿ ಸಮರ್ಥಿಸುತ್ತಿದ್ದಾರೆ. ಬ್ರಹ್ಮನಿಗೆ ಅವಶ್ಯವಾಗಿ ತತ್ಪದಬೋಧ್ಯತ್ವವನ್ನು ಅಂಗೀಕರಿಸಬೇಕು. ಆದ್ದರಿಂದ ಪ್ರಾಮಾಣಿಕತ್ವವು ಸಿದ್ಧವಾಗುತ್ತದೆ. ಆದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯವಿಲ್ಲ. ಬ್ರಹ್ಮನಿಗೆ ತತ್ಪದಬೋಧ್ಯತ್ವವನ್ನು ಅಂಗೀಕರಿಸದಿದ್ದರೆ, ತತ್ತ್ವಮಸಿ ವಾಕ್ಯದಿಂದ ಬ್ರಹ್ಮೈಕ್ಯವೇ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ತದಾ ತ್ವೈಕ್ಯಾಭಾವರೂಪಹೇತೋರೇವ ಪ್ರಸಿದ್ಧ್ಯತಿ ।**
**ಅನೇಕಂ ಜಗದೇತನ್ಮೇ ಬಾಧೇಷಾವಪ್ಯಯೋ ಗತಮ್ ॥ ೧೦೩೮ ॥**

**ಅರ್ಥ-** ತದಾ ತು = ಐಕ್ಯವು ಇಲ್ಲದಿದ್ದರೆ, ಐಕ್ಯಾಭಾವರೂಪಹೇತೋರೇವ = ಐಕ್ಯಾಭಾವರೂಪಹೇತುವಿನಿಂದಲೇ, ಮೇ ಏತತ್ ಜಗತ್ = ನನ್ನ ಈ ಜಗತ್ತು, ಅನೇಕಂ = ಭೇದಭಿನ್ನವಾದುದೆಂದೇ, ಪ್ರಸಿದ್ಧ್ಯತಿ = ಚೆನ್ನಾಗಿ ಸಿದ್ಧವಾಗುತ್ತದೆ, ಬಾಧೇಷಾವಪಿ = ಜಗತ್ತಿಗೆ ಬಾಧಕವೆಂದು ಅಭಿಮತವಾದ ಏಕಮೇವಾದ್ವಿತೀಯಮ್ ಮುಂತಾದ ವಾಕ್ಯರೂಪವಾದ ಬಾಣದಲ್ಲಿ, ಅಯಃ = ತುದಿಯಲ್ಲಿರುವ ಹರಿತವಾದ ಕಬ್ಬಿಣದ ಅಂಶವು (ಐಕ್ಯವಿಷಯತ್ವರೂಪವಾದುದು) ಗತಮ್ = ಹೊರಟುಹೋಗುತ್ತದೆ.

**ಅನುವಾದ-** ಐಕ್ಯವಿಲ್ಲದಿದ್ದರೆ ಆಗ ಐಕ್ಯಾಭಾವರೂಪವಾದ ಹೇತುವಿನಿಂದಲೇ ಪ್ರತ್ಯಕ್ಷಸಿದ್ಧವಾದ ಈ ಜಗತ್ತು ನನಗೆ ಭೇದಭಿನ್ನವೆಂದು ಚೆನ್ನಾಗಿ ಸಿದ್ಧವಾಗುತ್ತದೆ. ಜಗದ್ಬಾಧಕವೆಂದು ನಿನಗೆ ಅಭಿಮತವಾದ 'ಏಕಮೇವಾದ್ವಿತೀಯಮ್' ಮುಂತಾದ ವಾಕ್ಯಗಳಲ್ಲಿಯೂ ಐಕ್ಯವಿಷಯತ್ವವೆಂಬ ನಿಶಿತವಾದ ಕಬ್ಬಿಣದ ಅಗ್ರಭಾಗವು ಹೊರಟುಹೋಗುತ್ತದೆ.

**ಭಾವವಿಲಾಸಿನೀ–** ತದಾ ಐಕ್ಯಾಭಾವೇ । ಐಕ್ಯಾಭಾವರೂಪಹೇತೋಃ ಐಕ್ಯಾಭಾವಾಖ್ಯಹೇತುತ ಇತ್ಯರ್ಥಃ । ಮೇ ಮದಭಿಮತಮ್ । ಅನೇಕಂ ಜಗತ್ ಪ್ರಸಿದ್ಧ್ಯತಿ ಪ್ರಕರ್ಷೇಣ ಸಿದ್ಧ್ಯತೀತಿ ಯೋಜನಾ। ವಿಮತೋ ಜೀವೋ ಬ್ರಹ್ಮಣೋ ಭಿನ್ನೋ ಭವಿತುಮರ್ಹತಿ ಬ್ರಹ್ಮೈಕ್ಯರಹಿತ-ತ್ವಾತ್ । ಜಡಪ್ರಪಂಚವದಿತಿ ಸಾಧ್ಯತ ಇತಿ ಭಾವಃ । ಬಾಧೇಷೌ ಜಗದ್ಬಾಧಕತ್ವೇನಾಭಿಮತೇ ಏಕಮೇವಾದ್ವಿತೀಯಮಿತಿ ವಾಕ್ಯಾಖ್ಯಶರೇ । ಅಯಃ ಜಗನ್ನಾಶಕತ್ವೇನಾಯಸ್ಸ್ಥಾನೀಯ-ಮೈಕ್ಯವಿಷಯತ್ವಮ್ ॥ ೧೦೩೮ ॥

**ವಿವರಣೆ-** 'ವಿಮತೋ ಜೀವಃ ಬ್ರಹ್ಮಣೋ ಭಿನ್ನಃ ಬ್ರಹ್ಮೈಕ್ಯರಹಿತತ್ವಾತ್ ಜಡಪ್ರಪಂಚವತ್' ಎಂಬ ಅನುಮಾನದಿಂದ ಜೀವಬ್ರಹ್ಮಭೇದವನ್ನೇ ಚೆನ್ನಾಗಿ ಸಾಧನೆ ಮಾಡಲು ಸಾಧ್ಯವಾಗುತ್ತದೆ ಎಂದು ಅಭಿಪ್ರಾಯ.

**ಅತಃ ಪ್ರಾಮಾಣಿಕಂ ಬ್ರಹ್ಮ ತವಾಪಿ ಚ ಮಮಾಪಿ ಚ ।**
**ಪರಮಾರ್ಥಸದೇವ ಸ್ಯಾದ್ ಬ್ರಹ್ಮವತ್ ತೇನ ಮೇ ಜಗತ್ ॥ ೧೦೩೯ ॥**

**ಅರ್ಥ-** ಅತಃ = ಆದ್ದರಿಂದ, ತವಾಪಿ ಚ ಮಮಾಪಿ ಚ = ನಿನಗೂ ಮತ್ತು ನನಗೂ ಕೂಡ, ಪ್ರಾಮಾಣಿಕಂ = ಪ್ರಾಮಾಣಿಕನಾದ, ಬ್ರಹ್ಮ = ಬ್ರಹ್ಮನು, ಪರಮಾರ್ಥಸದೇವ ಸ್ಯಾತ್ = ಪರಮಾರ್ಥಸತ್ಯವೇ ಆಗಿದ್ದಾನೆ, ತೇನ = ಆ ಕಾರಣದಿಂದ, ಬ್ರಹ್ಮವತ್ = ಬ್ರಹ್ಮನಂತೆ, ಮೇ ಜಗತ್ = ನನ್ನ ಜಗತ್ತು, ಪರಮಾರ್ಥಸದೇವ = ಪಾರಮಾರ್ಥಿಕ ಸತ್ಯವೇ ಆಗಿದೆ.

**ಅನುವಾದ-** ಆದ್ದರಿಂದ ನಿನ್ನ ಮತದಂತೆಯೂ ಮತ್ತು ನನ್ನ ಮತದಂತೆಯೂ ಬ್ರಹ್ಮನು ಪ್ರಾಮಾಣಿಕನಾಗಿದ್ದಾನೆ. ಆದ್ದರಿಂದ ಪ್ರಾಮಾಣಿಕತ್ವರೂಪವಾದ ಹೇತುವಿನಿಂದ ನನ್ನ ಜಗತ್ತು ಬ್ರಹ್ಮನಂತೆ ಪಾರಮಾರ್ಥಿಕಸತ್ಯವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತೇನ ಪ್ರಾಮಾಣಿಕತ್ವಹೇತುನಾ ॥ ೧೦೩೯ ॥

**ಪ್ರಮಿತಂ ವಿಶ್ವಸತ್ಯತ್ವಂ ಸಚ್ಚೇನ್ನೋಪಾಧಿರಾತ್ಮತಾ ।**
**ಅತ್ರೈವ ಸಾಧ್ಯಸ್ಯಾವ್ಯಾಪ್ತ್ಯಾ ಭವೇನ್ನೋಪಾಧಿರಾತ್ಮತಾ ।**
**ನ್ಯಾಯಸಾಮ್ಯಾದ್ಬ್ರಹ್ಮಣಿ ತೇ ಸಾಧ್ಯಾವ್ಯಾಪ್ತಿಪ್ರಸಂಗತಃ ॥ ೧೦೪೦ ॥**

**ನ ಚೇತ್ ಪ್ರಮಾಪಿ ಜಗತಿ ಸಾಧನಾವ್ಯಾಪ್ತತಾ ಗತಾ ।**
**ಆತ್ಮತ್ವೋಪಾಧಿರೇತಸ್ಮಾತ್ ಸ್ವಾತ್ಮಾನಂ ಹಂತಿ ನಾಪರಮ್ ॥ ೧೦೪೧ ॥**

**ಅರ್ಥ-** ಪ್ರಮಿತಂ = ಪ್ರಮಾಣಸಿದ್ಧವಾದ, ವಿಶ್ವಸತ್ಯತ್ವಂ = ವಿಶ್ವಸತ್ಯತ್ವವು, ಸಚ್ಚೇತ್= ಸತ್ಯವಾದರೆ, ಆತ್ಮತಾ = ಆತ್ಮತ್ವವು, ನ ಉಪಾಧಿಃ = ಉಪಾಧಿಯಾಗುವುದಿಲ್ಲ, ಅತ್ರೈವ= ಜಗತ್ತಿನಲ್ಲಿಯೇ, ಸಾಧ್ಯಸ್ಯ ಅವ್ಯಾಪ್ತ್ಯಾ= ಸಾಧ್ಯವ್ಯಾಪಕತ್ವಕ್ಕೆ ಭಂಗವು ಬರುವುದರಿಂದ, ಆತ್ಮತಾ= ಆತ್ಮತ್ವವು, ಉಪಾಧಿಃ ನ ಭವೇತ್= ಉಪಾಧಿಯಾಗುವುದಿಲ್ಲ, ನ್ಯಾಯ-ಸಾಮ್ಯಾತ್= ನ್ಯಾಯಸಾಮ್ಯದಿಂದ, ತೇ ಬ್ರಹ್ಮಣಿ= ನಿನ್ನ ಬ್ರಹ್ಮನಲ್ಲಿ, ಸಾಧ್ಯಾವ್ಯಾಪ್ತಿಪ್ರಸಂಗತಃ= ಸಾಧ್ಯವ್ಯಾಪಕತ್ವಭಂಗವು ಬರುವುದರಿಂದಲೂ, ನ ಉಪಾಧಿಃ = ಉಪಾಧಿ ಯಾಗುವುದಿಲ್ಲ. ಜಗತಿ= ಜಗತ್ತಿನಲ್ಲಿ ಪ್ರಮಾಪಿ ನ ಚೇತ್= ಪ್ರಮೆಯನ್ನು ಅಂಗೀಕರಿಸದಿದ್ದರೆ (ಜಗತ್ತಿಗೆ ಪ್ರಮಾವಿಷಯತ್ವವನ್ನು ಅಂಗೀಕರಿಸದಿದ್ದರೆ), ಸಾಧನಾವ್ಯಾಪ್ತತಾ = ಸಾಧನಾವ್ಯಾಪಕತ್ವವು, ಗತಾ = ಹೊರಟುಹೋಯಿತು, ಏತಸ್ಮಾತ್= ಈ ಕಾರಣದಿಂದ,

ಆತ್ಮತ್ವೋಪಾಧಿಃ = ಆತ್ಮತ್ವ ಉಪಾಧಿಯು, ಸ್ವಾತ್ಮಾನಂ= ತನ್ನನ್ನೇ, ಹಂತಿ= ಕೊಲ್ಲುತ್ತದೆ, ಅಪರಮ್ ನ ಹಂತಿ= ಸಾಧ್ಯವನ್ನು ನಾಶಮಾಡುವುದಿಲ್ಲ.

**ಅನುವಾದ-** ಪ್ರಮಿತವಾದ ವಿಶ್ವಸತ್ಯತ್ವವು ಸತ್ಯವಾದರೆ, ಆತ್ಮತ್ವವು ಉಪಾಧಿಯಾಗುವುದಿಲ್ಲ. ಜಗತ್ತಿನಲ್ಲಿಯೇ ಸಾಧ್ಯವ್ಯಾಪಕತ್ವಕ್ಕೆ ಭಂಗವು ಬರುತ್ತದೆ. (ಜಗತ್ತಿನಲ್ಲಿ ಪ್ರಾಮಾಣಿಕತ್ವವಿರುವುದರಿಂದ ಸತ್ಯತ್ವವಿದೆ, ಆತ್ಮತ್ವವು ಇಲ್ಲ, ಆದ್ದರಿಂದ ಸಾಧ್ಯವ್ಯಾಪಕತ್ವಕ್ಕೆ ಭಂಗವು ಬರುತ್ತದೆ.) ಪ್ರಾಮಾಣಿಕವಾದ ಜಗತ್ತಿನಲ್ಲಿ ಸತ್ಯತ್ವವಿಲ್ಲ ಎಂದರೆ, ಅದೇ ನ್ಯಾಯದಿಂದ ಬ್ರಹ್ಮನಲ್ಲೂ ಸತ್ಯತ್ವವಿಲ್ಲದಿರುವುದರಿಂದ ಬ್ರಹ್ಮನಲ್ಲಿ ಆತ್ಮತ್ವವು ಇದೆ, ಸತ್ಯತ್ವವು ಇಲ್ಲ ಎಂದು ಸಾಧ್ಯಸಮವ್ಯಾಪ್ತಿಗೆ ಭಂಗ ಬರುತ್ತದೆ. ಜಗತ್ತಿನಲ್ಲಿ ಪ್ರಮೆಯನ್ನು ಒಪ್ಪದಿದ್ದರೆ, ಅಂದರೆ, ಜಗತ್ತಿನಲ್ಲಿ ಜಗದ್ವಿಷಯಕ ಪ್ರಮಾರೂಪವಾದ ಪ್ರಾಮಾಣಿಕತ್ವವನ್ನು ಒಪ್ಪದಿದ್ದರೆ, ಸಾಧನ-ಅವ್ಯಾಪಕತ್ವವು ಹೊರಟುಹೋಗುತ್ತದೆ. ಆದ್ದರಿಂದ ಈ ಆತ್ಮತ್ವ ಉಪಾಧಿಯು ತನ್ನನ್ನೇ ಕೊಲ್ಲುತ್ತದೆ ಹೊರತಾಗಿ ಸಾಧ್ಯವನ್ನು ನಾಶಮಾಡುವುದಿಲ್ಲ.

**ಭಾವವಿಲಾಸಿನೀ–** ಆತ್ಮತ್ವೋಪಾಧಿನಾ ಪ್ರಾಮಾಣಿಕತ್ವಹೇತೋಸ್ಸೋಪಾಧಿಕತ್ವಮಾಶಂಕ್ಯ ವಿಕಲ್ಪಾಸಹಂ ತದಿತ್ಯಾಹ - **ಪ್ರಮಿತಮಿತಿ** ॥ ನ್ಯಾಯಸಾಮ್ಯಾತ್ । ಜಗತಿ ಪ್ರಮಿತಸ್ಯ ಸತ್ತ್ವಸ್ಯಾಭಾವೇ ಬ್ರಹ್ಮಣ್ಯಪಿ ಪ್ರಮಿತಸ್ಯಾಭಾವಪ್ರಸಂಗಾತ್ । ನ ಹಿ ನ್ಯಾಯಸ್ಯ ಪಕ್ಷಪಾತೋಽಸ್ತೀತಿ ಭಾವಃ ॥ ೧೦೪೦-೧೦೪೧ ॥

**ವಿವರಣೆ-** ಉಪಾಧಿಯಾಗಬೇಕಾದರೆ ಸಾಧ್ಯವ್ಯಾಪಕತ್ವವೂ, ಸಾಧನಾವ್ಯಾಪಕತ್ವವೂ ಬರಬೇಕು. ಪ್ರಾಮಾಣಿಕತ್ವಹೇತುವಿನಿಂದ ಜಗತ್ತಿನಲ್ಲಿ ಸತ್ಯತ್ವವು ನಿಶ್ಚಿತವಾದಾಗ, ಜಗತ್ತಿನಲ್ಲಿ ಸತ್ಯತ್ವವು ಇದೆ ಆತ್ಮತ್ವವು ಇಲ್ಲ ಎಂದು ಸಾಧ್ಯವ್ಯಾಪಕತ್ವಕ್ಕೆ ಭಂಗವು ಬರುತ್ತದೆ. ಪ್ರಾಮಾಣಿಕತ್ವವಿದ್ದರೂ ಸತ್ಯತ್ವವಿಲ್ಲದಿದ್ದರೆ, ನ್ಯಾಯಸಾಮ್ಯದಿಂದ ಬ್ರಹ್ಮನಲ್ಲಿಯೂ ಸತ್ಯತ್ವವಿಲ್ಲವೆಂದು ಸಿದ್ಧವಾಗುವುದರಿಂದ ಅಲ್ಲಿ ಆತ್ಮತ್ವವಿರುವುದರಿಂದ ಉಪಾಧಿಗೆ ಸಾಧ್ಯಸಮವ್ಯಾಪ್ತಿಯು ಇರಬೇಕೆಂಬ ಪಕ್ಷದಲ್ಲಿ ಅಲ್ಲಿ ಆತ್ಮತ್ವರೂಪವಾದ ಉಪಾಧಿ ಇದೆ ಸತ್ಯತ್ವರೂಪವಾದ ಸಾಧ್ಯ ಇಲ್ಲ ಎಂಬ ಕಾರಣದಿಂದ ಸಾಧ್ಯಸಮವ್ಯಾಪ್ತಿಗೆ ಭಂಗವು ಬರುತ್ತದೆ. ಜಗತ್ತಿನಲ್ಲಿ ಪ್ರಾಮಾಣಿಕತ್ವವೂ ಇಲ್ಲವೆಂದು ಹೇಳಿದರೆ, ಆಗ ಉಪಾಧಿಗೆ ಸಾಧನಾವ್ಯಾಪಕತ್ವವನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಪ್ರಾಮಾಣಿಕತ್ವವಿದೆ, ಉಪಾಧಿಯಾದ ಆತ್ಮತ್ವವು ಇಲ್ಲ ಎಂದು ಹೇಳಿ ಸಾಧನಾವ್ಯಾಪಕತ್ವವನ್ನು ಉಪಪಾದನೆ ಮಾಡಬೇಕು. ಆದರೆ ಜಗತ್ತಿನಲ್ಲಿ ಪ್ರಾಮಾಣಿಕತ್ವವೇ ಇಲ್ಲದಿದ್ದರೆ, ಸಾಧನವುಳ್ಳ ಪಕ್ಷದಿಂದ ಉಪಾಧಿಯ ವ್ಯಾವೃತ್ತಿಯನ್ನು ಮಾಡಿ ಉಪಪಾದನೆ ಮಾಡಬೇಕಾದ ಸಾಧನಾವ್ಯಾಪಕತ್ವವನ್ನು ಉಪಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಇದು ಉಪಾಧಿ ಆಗುವುದಿಲ್ಲ ಎಂದು ಅಭಿಪ್ರಾಯ.

ಪ್ರಾಮಾಣಿಕಂ ಚ ಬಾಧ್ಯಂ ಚೇತ್ಯೇತಮರ್ಥಮನರ್ಥದಮ್ ।
ವ್ಯಾಘಾತೋ ಜಿತನಿರ್ಘಾತಸ್ತರ್ಕೋಽಪ್ಯಾಕ್ರೋಶಯೇದ್ ಧ್ರುವಮ್ ॥
॥ ೧೦೪೨॥

ಯದ್ ಬಾಧೋಽರ್ಥಾಯಥಾರ್ಥತ್ವಂ ತದ್ಯಾಥಾರ್ಥ್ಯಂ ಚ ಯತ್ಪ್ರಮಾ ।
ವಂಧ್ಯಾಸುತೋ ವದೇದೇವಂ ನ ತು ಪುತ್ರವತೀಸುತಃ ॥ ೧೦೪೩ ॥

**ಅರ್ಥ-** ಪ್ರಾಮಾಣಿಕಂ ಚ ಬಾಧ್ಯಂ ಚ = ಪ್ರಾಮಾಣಿಕವೂ ಮತ್ತು ಬಾಧ್ಯವೂ ಆಗಿದೆ ಎಂಬ, ಅನರ್ಥದಮ್ = ಅನರ್ಥಪ್ರದವಾದ, ಏತಮರ್ಥಮ್ = ಇಂತಹ ವಿಷಯವನ್ನು, ವಂಧ್ಯಾಸುತೋ = ವಂಧ್ಯಾಸುತನು, ಏವಂ ವದೇತ್ = ಹೀಗೆ ಹೇಳಬಹುದು, ನ ತು ಪುತ್ರವತೀಸುತಃ = ಪುತ್ರವತಿಯಾದ ತಾಯಿಯ ಸುತನು ಹೀಗೆ ಹೇಳಲಾರನು. ಏಕೆಂದರೆ, ಹೀಗೆ ಹೇಳಿದರೆ, ವ್ಯಾಘಾತಃ = ಉಂಟಾಗುವ ವ್ಯಾಹತಿದೋಷವು, ಜಿತನಿರ್ಘಾತಃ = ಸಿಡಿಲಿಗಿಂತಲೂ ಮಿಗಿಲಾದ ಪ್ರಹಾರವನ್ನು ಮಾಡುವಂತಹುದು, ತರ್ಕೋಽಪಿ = ಬಾಧ್ಯವಾದರೆ ಪ್ರಾಮಾಣಿಕವೇ ಆಗಲಾರದು ಎಂಬ ತರ್ಕವೂ ಕೂಡ, ಧ್ರುವಮ್ = ನಿಶ್ಚಯವಾಗಿ, ಆಕ್ರೋಶಯೇತ್ = ಗರ್ಜಿಸುತ್ತಿದೆ, ಯತ್ = ಏಕೆಂದರೆ, ಬಾಧಃ = ಬಾಧವೆಂದರೆ, ಅಯಥಾರ್ಥತ್ವಂ = ಅರ್ಥದ ಅಸತ್ಯತ್ವವೇ ಆಗಿದೆ, ಚ = ಮತ್ತು, ಯತ್ = ಏಕೆಂದರೆ, ಪ್ರಮಾ = ಪ್ರಮಾ ಎಂದರೆ, ತದ್ಯಾಥಾರ್ಥ್ಯಂ = ಅರ್ಥದ ಯಾಥಾರ್ಥ್ಯವೇ ಆಗಿದೆ.

**ಅನುವಾದ-** ಒಂದು ವಸ್ತುವು ಪ್ರಾಮಾಣಿಕವೂ ಆಗಿದೆ ಮತ್ತು ಬಾಧ್ಯವೂ ಆಗಿದೆ ಎಂಬ ಅನರ್ಥಪ್ರದವಾದ ಇಂತಹ ವಾಕ್ಯವನ್ನು ವಂಧ್ಯಾಸುತನು ಹೇಳಬಹುದೇ ಹೊರತು ಪ್ರಾಮಾಣಿಕನಾದ ಮಾತೃಪುತ್ರನು ಹೇಳಲಾರನು. ಏಕೆಂದರೆ, ಹಾಗೆ ಹೇಳಿದರೆ ಉಂಟಾಗುವ ವ್ಯಾಹತಿಯ ಪ್ರಹಾರವು ಸಿಡಿಲಿನ ಪ್ರಹಾರವನ್ನೂ ಮೀರಿಸುತ್ತದೆ ಮತ್ತು ಬಾಧ್ಯವಾದರೆ ಪ್ರಾಮಾಣಿಕವೇ ಆಗಲಾರದು ಎಂಬ ತರ್ಕವು ನಿಶ್ಚಯವಾಗಿ ಗರ್ಜಿಸುತ್ತದೆ ಮತ್ತು ಬಾಧವೆಂದರೆ ಅರ್ಥದ ಅಯಥಾರ್ಥತ್ವ ಮತ್ತು ಪ್ರಮಾ ಎಂದರೆ ಅರ್ಥದ ಯಥಾರ್ಥತ್ವವೇ ಆಗಿದೆ.

**ಭಾವವಿಲಾಸಿನೀ–** ಅನುಮಾನಾನುಗ್ರಾಹಕತರ್ಕಮಾಹ - **ಪ್ರಾಮಾಣಿಕಮಿತಿ** ॥ ಜಿತಃ ನಿರ್ಘಾತಃ ಅಶನಿರ್ಯೇನ ಸಃ । ಅಶನಿಪಾತಾದಪ್ಯಧಿಕ ಇತ್ಯರ್ಥಃ । ಯತ್ ಯಸ್ಮಾತ್ । ತದ್ಯಾಥಾರ್ಥ್ಯಮ್ ಅರ್ಥಯಾಥಾರ್ಥ್ಯಮ್ । ದ್ವಿತೀಯಮಪಿ ಯತ್ಪದಂ ಯಸ್ಮಾದಿತ್ಯರ್ಥಃ ॥ ೧೦೪೨- ೧೦೪೩ ॥

ಯದ್ಯೇಕಮಾನಮಾನತ್ವಹೀನತಾಯಾಂ ರತಿಸ್ತವ ।
ತರ್ಹಿ ಬಾಧಪ್ರಮಾಣೇಽಸ್ತು ಸಾ ಜಗತ್ಕಂಟಕೋಪಮೇ ॥ ೧೦೪೪ ॥

ಯದಿ = ಒಂದು ಪಕ್ಷ, ಏಕಮಾನಮಾನತ್ವಹೀನತಾಯಾಂ = ಜಗತ್ತಿಗೆ ಸಾಧಕವಾದ ಮತ್ತು ಬಾಧಕವಾದ ಪ್ರಮಾಣಗಳಲ್ಲಿ ಒಂದಕ್ಕೆ ನೀಚತ್ವವನ್ನು ಹೇಳುವುದರಲ್ಲಿ, ತವ ರತಿಃ = ನಿನಗೆ ಆಸಕ್ತಿ ಇರುವುದಾದರೆ, ತರ್ಹಿ = ಆಗ, ಸಾ = ಆ ಆಸಕ್ತಿಯು, ಜಗತ್ಕಂಟಕೋಪಮೇ = ಜಗತ್ತಿಗೆ ಮುಳ್ಳಿನಂತಿರುವ, ಬಾಧಪ್ರಮಾಣೇ = ನಿನಗೆ ಅಭಿಮತವಾದ ಬಾಧಕಪ್ರಮಾಣದಲ್ಲಿಯೇ, ಅಸ್ತು = ಇರಲಿ.

**ಅನುವಾದ-** ಜಗತ್ತನ್ನು ಸಾಧಿಸುವ ಮತ್ತು ಬಾಧಿಸುವ ಪ್ರಮಾಣಗಳಲ್ಲಿ ಒಂದಕ್ಕೆ ನೀಚತ್ವ ವನ್ನು ಹೇಳಬೇಕೆಂದು ನಿನಗೆ ಆಸಕ್ತಿ ಇದ್ದರೆ, ಜಗತ್ತಿಗೆ ಕಂಟಕಪ್ರಾಯವಾದ ಬಾಧಕಪ್ರಮಾಣದಲ್ಲಿಯೇ ಆ ಆಸಕ್ತಿ ಇರಲಿ.

**ಭಾವವಿಲಾಸಿನೀ–** ಏಕಮಾನಾಮಾನತ್ವಹೀನತಾಯಾಂ ವಿಶ್ವಬಾಧಕವಿಶ್ವಸಾಧಕಪ್ರಮಾಣಯೋರುಭಯೋರಪಿ ಪ್ರಾಮಾಣ್ಯಾಯೋಗಾತ್ ಏಕಮಾನಸ್ಯ ಮಾನತ್ವಹೀನತಾಯಾಂ ಮಾನತ್ವಾಭಾವೇ । ಸಾ ಮಾನತ್ವಹೀನತಾ ॥ ೧೦೪೫ ॥

ರಕ್ಷೋ ಘ್ನಂತಿ ಹಿ ಶಾಂತ್ಯರ್ಥಂ ಕಿಂ ಘ್ನಂತಿ ಜಗತೀಪತಿಮ್ ।
ಬಾಧಕತ್ವೇನ ಬಲಿತಾಽಪ್ಯೇತೇನೈವ ಬಹಿರ್ಗತಾ ॥ ೧೦೪೫ ॥

**ಅರ್ಥ-** ಶಾಂತ್ಯರ್ಥಂ = ಶಾಂತಿಯನ್ನು ಮಾಡುವ ಸಲುವಾಗಿ (ರಾಜ ರಕ್ಷೆಯನ್ನು ಮಾಡುವ ಸಲುವಾಗಿ ಮಾಂತ್ರಿಕರು), ರಕ್ಷಃ = ರಾಕ್ಷಸರನ್ನು, ಘ್ನಂತಿ = ಕೊಲ್ಲುತ್ತಾರೆ. ಜಗತೀಪತಿಮ್ = ಜಗತ್ತಿಗೆ ಒಡೆಯನಾದವನನ್ನು (ಭೂಪತಿಯಾದ ರಾಜನನ್ನು ಅಥವಾ ಪರಮಾತ್ಮನನ್ನು), ಕಿಂ ಘ್ನಂತಿ = ಯಾರಾದರೂ ಕೊಲ್ಲುತ್ತಾರೆಯೆ? ಏತೇನೈವ = ಈ ಕಾರಣದಿಂದಲೇ, ಬಾಧಕತ್ವೇನ = ಬಾಧಕವಾದ ಕಾರಣದಿಂದ, ಬಲಿತಾ = ಪ್ರಾಬಲ್ಯವೆಂಬುದು, ಬಹಿರ್ಗತಾ = ನಷ್ಟವಾಯಿತು.

**ಅನುವಾದ-** ರಾಜರಕ್ಷೆಯನ್ನು ಮಾಡುವ ಸಲುವಾಗಿ ಮಾಂತ್ರಿಕರು ರಾಕ್ಷಸರನ್ನು ಕೊಲ್ಲುತ್ತಾರೆ. ಜಗತೀಪತಿಯಾದ ರಾಜನನ್ನೇ ಯಾರು ಕೊಲ್ಲುತ್ತಾರೆ? ಆದ್ದರಿಂದ ಬಾಧಕವಾದುದರಿಂದ ಪ್ರಬಲವಾಗಿದೆ ಎಂಬ ವಾದವು ಈ ಕಾರಣದಿಂದಲೇ ನಿರಾಕೃತವಾಯಿತು.

**ಭಾವವಿಲಾಸಿನೀ–**ಕಂಟಕಭೇದ ಏವ ನ್ಯಾಯ್ಯ ಇತ್ಯಾಹ - ರಕ್ಷ ಇತಿ ॥ ಘ್ನಂತಿ ರಾಜರಕ್ಷಾಂ ಕುರ್ವಂತೋ ಮಾಂತ್ರಿಕಾಃ । ಪ್ರಕೃತೇಽಪಿ ಜಗತ ಏವಾಭಾವೇ ಜಗತ್ಪತೇರೇವಾಭಾವಪ್ರಸಂಗಾತ್ ಜಗದ್ಧನನೇ ಜಗತ್ಪತೇರೇವ ಹನನಂ ದ್ರಷ್ಟವ್ಯಮ್ । ಬಲಿತಾ ಬಲವತ್ತಾ । ಏತೇನ ಬಾಧಕೀಭೂತರಕ್ಷಸಾಮೇವ ಹನನೇನ ॥ ೧೦೪೫ ॥

**ವಿವರಣೆ-** ಜಗತ್ತಿಗೆ ಅಸತ್ಯತ್ವವನ್ನು ಹೇಳಿದರೆ ಜಗತ್ತಿನ ನಾಶವೇ ಉಂಟಾಗುವುದರಿಂದ ಜಗತೀಪತಿಯನ್ನೇ ನಾಶಮಾಡಿದಂತೆ ಆಗುತ್ತದೆ. ಆದ್ದರಿಂದ ಜಗದ್ಬಾಧಕವಾದ ಪ್ರಮಾಣವೂ

ಬಾಧಿತವಾಗಬೇಕು ಎಂದು ನಾವು ಹೇಳುವ ಈ ಕಾರಣದಿಂದಲೇ ಬಾಧಕವಾದ ಪ್ರಮಾಣವು ಪ್ರಬಲ ಎಂಬ ವಾದವು ನಿರಾಕೃತವಾಯಿತು.

ರಾಜನಿಗೆ ಬಾಧಕರಾದವರನ್ನೇ ಕೊಲ್ಲುತ್ತಾರೆಯೇ ಹೊರತು ರಾಜನನ್ನೇ ಯಾರೂ ಕೊಲ್ಲುವುದಿಲ್ಲ. ಆದ್ದರಿಂದ ಬಾಧಕವಾದುದು ಪ್ರಬಲ ಎಂಬುದು ಸುಳ್ಳು ಮಾತು. ಅದರಂತೆ ಜಗದ್ಬಾಧಕವಾದ ಪ್ರಮಾಣವೇ ಬಾಧಿಸಲ್ಪಡಬೇಕು. ಇಲ್ಲದಿದ್ದರೆ, ಜಗತ್ತಿಗೆ ಒಡೆಯನಾದ ಪರಮಾತ್ಮನು ಬಾಧಿತನಾಗುತ್ತಾನೆ ಎಂದು ಅಭಿಪ್ರಾಯ.

ಸಾಧಕಸ್ಯ ಸದೋಷತ್ವೇ ಬಾಧಕಂ ಪ್ರಬಲಂ ಭವೇತ್ ।
ವಿದೋಷಸಾಧಕಸ್ಯಾಗ್ರೇ ಕಿಂ ಬಾಧಕಶತೇನ ತೇ ॥ ೧೦೪೬ ॥

ನ ಹ್ಯಾಪಣಸ್ಥರೂಪ್ಯಸ್ಯ ಬಹ್ವಾಘಾತೇಽಪ್ಯರೂಪ್ಯತಾ ।
ರಸಯೋಗೇಽಪಿ ತದ್ರೂಪನಾಶಾದಭಿಭವೇನ ವಾ ।
ರೂಪಾಂತರಸ್ಯ ಚೋತ್ಪತ್ತೌ ತಸ್ಯೈವ ಸ್ಯಾತ್ ಸುವರ್ಣತಾ ॥ ೧೦೪೭ ॥

**ಅರ್ಥ**– ಸಾಧಕಸ್ಯ ಸದೋಷತ್ವೇ = ಸಾಧಕಪ್ರಮಾಣವು ದುಷ್ಟವಾದರೆ ಮಾತ್ರ , ಬಾಧಕಂ= ಬಾಧಕಪ್ರಮಾಣವು, ಪ್ರಬಲಂ ಭವೇತ್ = ಪ್ರಬಲವಾಗುತ್ತದೆ, ವಿದೋಷ– ಸಾಧಕಸ್ಯಾಗ್ರೇ = ನಿರ್ದುಷ್ಟವಾದ ಸಾಧಕದ ಎದುರಿನಲ್ಲಿ, ತೇ= ನಿನ್ನ, ಬಾಧಕಶತೇನ= ನೂರು ಬಾಧಕಪ್ರಮಾಣಗಳಿಂದಲೂ, ಕಿಂ = ಯಾವ ಹಾನಿಯು ಉಂಟಾಗುತ್ತದೆ?

ಆಪಣಸ್ಥರೂಪ್ಯಸ್ಯ = ಅಂಗಡಿಯಲ್ಲಿರುವ ಬೆಳ್ಳಿಯನ್ನು, ಬಹ್ವಾಘಾತೇಽಪಿ = ಬಹಳವಾಗಿ ಚಚ್ಚಿದರೂ ಸಹ, ಅರೂಪ್ಯತಾ = ಅರಜತತ್ವವು, ನಹಿ = ಉಂಟಾಗುವುದಿಲ್ಲವಷ್ಟೇ ? ರಸಯೋಗೇಽಪಿ = ಬೆಳ್ಳಿಗೆ ಪಾದರಸಾದಿ ರಸಾಂತರಯೋಗವನ್ನು ಮಾಡಿದರೂ, ತದ್ರೂಪನಾಶಾತ್ = ಬೆಳ್ಳಿಯ ರೂಪವು ನಾಶವಾಗಿ, ವಾ = ಅಥವಾ, ಅಭಿಭವೇನ = ಅಭಿಭೂತವಾಗಿ, ರೂಪಾಂತರಸ್ಯ ಉತ್ಪತ್ತೌ = ಸುವರ್ಣದ ರೂಪವು ಉಂಟಾಗುತ್ತಿರಲು, ತಸ್ಯೈವ = ಮೊದಲು ರಜತವಾಗಿದ್ದುದಕ್ಕೇ, ಸುವರ್ಣತಾ ಸ್ಯಾತ್ = ಸುವರ್ಣತ್ವವು ಉಂಟಾಗುವುದಷ್ಟೇ ?

**ಅನುವಾದ**– ಸಾಧಕವು ದುಷ್ಟವಾದರೆ ಮಾತ್ರ ಬಾಧಕವು ಪ್ರಬಲವಾಗುತ್ತದೆ. ನಿರ್ದುಷ್ಟವಾದ ಸಾಧಕದ ಎದುರಿನಲ್ಲಿ ನಿನ್ನ ನೂರು ಬಾಧಕಪ್ರಮಾಣಗಳು ಏನು ಮಾಡುತ್ತವೆ? ಅಂಗಡಿಯಲ್ಲಿರುವ ಬೆಳ್ಳಿಯನ್ನು ಬಹಳವಾಗಿ ಚಚ್ಚಿದರೂ ಅದು ಬೆಳ್ಳಿಯಲ್ಲವೆಂದು ಆಗುವುದಿಲ್ಲವಷ್ಟೇ? ಆ ಬೆಳ್ಳಿಗೆ ಪಾದರಸದ ಯೋಗವನ್ನು ಉಂಟುಮಾಡಿದರೂ, ಬೆಳ್ಳಿಯ ರೂಪವು ನಾಶವನ್ನು ಹೊಂದುತ್ತದೆ ಅಥವಾ ಅಭಿಭವವನ್ನು ಹೊಂದುತ್ತದೆ ಮತ್ತು ಅಲ್ಲಿಯೇ ಚಿನ್ನದ ರೂಪವು ಉಂಟಾಗಿ ಮೊದಲು ಬೆಳ್ಳಿಯಾಗಿದ್ದುದೇ ಚಿನ್ನವಾಗುತ್ತದೆ.

**ಭಾವವಿಲಾಸಿನೀ–** ವಿಶೇಷಸಾಧಕಸಿದ್ಧಸ್ಯಾಬಾಧ್ಯತ್ವಂ ದೃಷ್ಟಾಂತಮುಖೇನ ಘಟಯತಿ ॥ ನಹೀತಿ॥ ಆಘಾತೇ ಸ್ವರ್ಣಕಾರೈರ್ಬಹುಧಾ ಆಘಾತೇ ಕೃತೇಽಪಿ । ರಸಯೋಗೇಽಪಿ ರಸವಾದಿಭಿಃ ಪಾದರಸಯೋಗೇ ಕೃತೇಽಪಿ ತದ್ರೂಪನಾಶಾತ್ ತಸ್ಯ ರಜತಸ್ಯ ಶ್ವೇತತ್ವಾಖ್ಯರೂಪನಾಶಾತ್ । ರೂಪಾಂತರಸ್ಯ ಸುವರ್ಣವರ್ಣಸ್ಯ । ತಸ್ಯೈವ ಪ್ರಾಕ್ತನರಜತಸ್ಯೈವ ॥ ೧೦೪೬- ೧೦೪೭ ॥

**ವಿವರಣೆ-** ನಿರ್ದುಷ್ಟವಾದ ಸಾಧಕಪ್ರಮಾಣದ ಎದುರಿನಲ್ಲಿ ಬಾಧಕಪ್ರಮಾಣಗಳು ದುರ್ಬಲ ಎಂಬುದನ್ನು ದೃಷ್ಟಾಂತಮುಖದಿಂದ ಸಾಧಿಸುತ್ತಾರೆ. ಆಪಣಸ್ಥರಜತವು ಸತ್ಯವಾಗಿರುವುದರಿಂದ ಅದಕ್ಕೆ ಯಾವರೀತಿಯಲ್ಲಿಯೂ ಬಾಧವಿಲ್ಲ. ಅದನ್ನು ಸುತ್ತಿಗೆಯಿಂದ ಚಚ್ಚಿದರೂ ಅದು ತನ್ನ ರಜತತ್ವವನ್ನು ಕಳೆದುಕೊಳ್ಳುವುದಿಲ್ಲ. ರಸಯೋಗವು ಉಂಟಾದರೂ ಅದೇ ಸುವರ್ಣತ್ವವನ್ನು ಹೊಂದುತ್ತದೆಯೇ ಹೊರತು ತನ್ನ ಸ್ವರೂಪವನ್ನು ಕಳೆದುಕೊಳ್ಳುವುದಿಲ್ಲ. ಆದ್ದರಿಂದ ಪ್ರಬಲವಾದ ರಜತಪ್ರಮಾಣಕ್ಕೆ ಯಾವ ಬಾಧಕವಿಲ್ಲ. ದುರ್ಬಲವೇ ಬಾಧಕ ಎಂದು ಹೇಳಿದರೂ (ಬಾಧಕ ಎಂಬ ಅಭಿಮಾನಕ್ಕೆ ವಿಷಯವಾದರೂ) ಅದೇ ಬಾಧಿತವಾಗುತ್ತದೆ ಎಂದು ಅಭಿಪ್ರಾಯ.

ಫಲಸ್ಯ ಪೀತಪಕ್ವತ್ವಮಿವ ಬಾಧೋ ನ ಕಸ್ಯಚಿತ್ ।
ತಸ್ಯೈವಾವಸ್ಥಾಂತರತ್ವಾನ್ಮಿಥ್ಯಾತ್ವಾಪಾದನಂ ನ ತತ್ ॥ ೧೦೪೮ ॥

**ಅರ್ಥ-** ಫಲಸ್ಯ = ಮೊದಲು ಹಸಿರಾಗಿದ್ದ ಕಾಯಿಯು, ಪೀತಪಕ್ವತ್ವಮಿವ = ಸೂರ್ಯನ ಬಿಸಿಲಿನಿಂದ ಪಕ್ವವಾಗಿ ಪೀತವಾಗುವಂತೆ, ಕಸ್ಯಚಿತ್ = ಯಾವುದಕ್ಕೂ, ಬಾಧೋ ನ = ಬಾಧವಿಲ್ಲ. ತತ್ = ಹಿಂದಿನ ಶ್ಲೋಕದಲ್ಲಿ ಹೇಳಿದ ರಸಸಂಯೋಜನೆಯು, ತಸ್ಯೈವ = ಆ ರಜತಕ್ಕೇ, ಅವಸ್ಥಾಂತರತ್ವಾತ್ = ಇನ್ನೊಂದು ಅವಸ್ಥೆಯನ್ನು ಉಂಟುಮಾಡು ವುದರಿಂದ, ಮಿಥ್ಯಾತ್ವಾಪಾದನಂ ನ = ಮಿಥ್ಯಾತ್ವವನ್ನು ಉಂಟುಮಾಡುವುದಿಲ್ಲ.

ಅನುವಾದ- ಮೊದಲು ಹಸಿರಾಗಿದ್ದ ಕಾಯಿಯು ಸೂರ್ಯನ ಬಿಸಿಲಿನಿಂದ ಪಕ್ವವಾಗಿ ಹಳದಿಯಾಗುವಂತೆ ಯಾವುದಕ್ಕೂ ಬಾಧವಿಲ್ಲ. ರಜತಕ್ಕೆ ಮಾಡುವ ರಸಸಂಯೋಜನೆಯು ಅದಕ್ಕೆ ಅವಸ್ಥಾಂತರವನ್ನು ತಂದುಕೊಡುತ್ತದೆಯೇ ಹೊರತು ಮಿಥ್ಯಾತ್ವವನ್ನು ತಂದುಕೊಡುವುದಿಲ್ಲ.

**ಭಾವವಿಲಾಸಿನೀ–** ಫಲಸ್ಯ ಪ್ರಾಕ್ಶ್ಯಾಮಫಲಸ್ಯ । ಆತಪಯೋಗೇನ ಪೀತಪಕ್ವತ್ವಮಿವೇತಿ ದೃಷ್ಟಾಂತಸ್ಯಾಪಿ ದೃಷ್ಟಾಂತಃ । ತತ್ ರಸಯೋಜನಮ್ ॥ ೧೦೪೮ ॥

**ವಿವರಣೆ-** ಫಲದಲ್ಲಿ ಮೊದಲು ಹಸಿರು ಬಣ್ಣವಿರುತ್ತದೆ. ನಂತರ ಹಳದಿ ಬಣ್ಣವು ಬರುತ್ತದೆ. ಹಸಿರು ಬಣ್ಣವೂ ಬಾಧ್ಯವಲ್ಲ. ಹಳದಿಯ ಬಣ್ಣವೂ ಬಾಧ್ಯವಲ್ಲ. ಕಾಲಾಂತರದಲ್ಲಿ ಉಂಟಾಗುವ ಎರಡೂ ಅವಸ್ಥೆಗಳೂ ಸತ್ಯವಾದವುಗಳು. ಅದರಂತೆ ರಜತಕ್ಕೆ ಪಾದರಸ

ಸಂಯೋಜನೆಯು ರಜತಕ್ಕೆ ಇನ್ನೊಂದು ಅವಸ್ಥೆಯನ್ನು ತಂದುಕೊಡುತ್ತದೆಯೇ ಹೊರತು ಮಿಥ್ಯಾತ್ವವನ್ನು ತಂದುಕೊಡುವುದಿಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ರಜತದೃಷ್ಟಾಂತಕ್ಕೆ ಪಕ್ವಫಲದ ಇನ್ನೊಂದು ದೃಷ್ಟಾಂತವನ್ನು ಇಲ್ಲಿ ಹೇಳುತ್ತಿದ್ದಾರೆ.

ತತಃ ಕಾಚಾದಿದೋಷೋತ್ಥೋ ಬಾಧ್ಯೋಽಸ್ತು ರಜತಭ್ರಮಃ ।
ತದ್ದೋಷಹೀನಮಾನೋತ್ಥಾ ವಿಶ್ವಧೀರ್ನೈವ ಬಾಧ್ಯತೇ ॥ ೧೦೪೯ ॥

**ಅರ್ಥ-** ತತಃ = ಆ ಕಾರಣದಿಂದ, ಕಾಚಾದಿದೋಷೋತ್ಥಃ = ಕಾಚಾದಿದೋಷದಿಂದ ಜನ್ಯವಾದ, ರಜತಭ್ರಮಃ = ರಜತಭ್ರಾಂತಿಯು, ಬಾಧ್ಯೋಽಸ್ತು = ಬಾಧ್ಯವಾಗಲಿ. ತದ್ದೋಷಹೀನಮಾನೋತ್ಥಾ = ಕಾಚಾದಿದೋಷಹೀನವಾದ ಪ್ರಮಾಣಜನ್ಯವಾದ, ವಿಶ್ವಧೀಃ = ಜಗತ್‌ಜ್ಞಾನವು, ನೈವ ಬಾಧ್ಯತೇ = ಬಾಧಿಸಲ್ಪಡುವುದಿಲ್ಲ.

**ಅನುವಾದ-** ಕಾಚಾದಿದೋಷಜನ್ಯವಾದ ರಜತಭ್ರಮವು ಭ್ರಾಂತಿಯಾಗಲಿ. ನಿರ್ದೋಷ ಪ್ರಮಾಣಜನ್ಯವಾದ ವಿಶ್ವಪ್ರತ್ಯಕ್ಷವು ಬಾಧಿತವಾಗುವುದಿಲ್ಲ.

**ಭಾವವಿಲಾಸಿನೀ–** ನಿರ್ದೋಷಸಾಧಕಪ್ರಮಾಣಸಿದ್ಧಸ್ಯಾರ್ಥಸ್ಯ ಬಾಧಕಶತೇನಾಪಿ ಯತೋ ಮಿಥ್ಯಾತ್ವಂ ನ ದೃಷ್ಟಮ್ ಅತೋ ಬಾಧಕತ್ವೇನ ಪ್ರಾಬಲ್ಯಂ ನ ಯೌಕ್ತಮಿತಿ ಭಾವಃ । ಲೋಕಸಂಮತಕಾಚಾದಿದೋಷಮಾತ್ರರಹಿತಪ್ರತ್ಯಕ್ಷಸಿದ್ಧಾಪಣಸ್ಥರಜತಂ ಸ್ವನಾರೀಕರಕಟಕಾರ್ಥಮುಪಾದದತಾ ಪರೇಣಾಪಿತತ್ರ ಪ್ರಾಮಾಣಿಕತ್ವೋರರೀಕರಣಾತ್ ವ್ಯವಹಾರೋಪಯೋಗಿತಯಾ ಲೋಕಸಂಮತಪ್ರಮಾಣೇನೈವ ಪ್ರಾಮಾಣಿಕತ್ವಂ ವದತೋ ಮಮಾಪಿ ತಾವದೇವಾಲಮ್ । ಹಾನೋಪಾದಾನಾದಿಸ್ವವ್ಯವಹಾರಾಯ ಘಟಾದಿಪ್ರಪಂಚೇ ಯತ್ಪ್ರಾಮಾಣಿಕತ್ವಂ ಲೋಕೋಂಗೀಕುರುತೇ ತೇನೈವ ಪ್ರಾಮಾಣಿಕತ್ವೇನ ಸತ್ಯತ್ವಸ್ಯಾಪಿ ಸಾಧಯಿತುಂ ಶಕ್ಯತ್ವಾತ್ । ವಸ್ತುತತ್ವವಿಚಾರಾಯೈವ ಚರ್ಚೇಯಮಿತಿ ಜ್ಞಾತವ್ಯಮ್ ॥ ೧೦೪೯ ॥

**ವಿವರಣೆ-** ನಿರ್ದುಷ್ಟವಾದ ಸಾಧಕಪ್ರಮಾಣದಿಂದ ಸಿದ್ಧವಾದ ಅರ್ಥವು ನೂರು ಬಾಧಕಗಳಿಂದಲೂ ಬಾಧ್ಯವಾಗುವುದಿಲ್ಲವಾದ್ದರಿಂದ ಬಾಧಕವಾದುದು ಪ್ರಬಲ ಎಂಬ ವಾದವು ಕೂಡುವುದಿಲ್ಲ ಎಂದು ಅಭಿಪ್ರಾಯ. ಲೋಕಸಮ್ಮತವಾದ ಕಾಚಾದಿದೋಷರಹಿತ ಪ್ರತ್ಯಕ್ಷಕ್ಕೆ ವಿಷಯವಾದ ಆಪಣಸ್ಥರಜತವನ್ನೇ ಪತ್ನಿಯ ಆಭರಣಗಳಿಗಾಗಿ ಸ್ವೀಕರಿಸುವ ಮಾಯಾವಾದಿಯೂ ಕೂಡ ಹಾನೋಪಾದಾನವ್ಯವಹಾರಕ್ಕೆ ಉಪಯೋಗಿಯಾದುದು ಲೋಕಸಮ್ಮತಪ್ರಮಾಣದಿಂದ ಸಿದ್ಧವಾದುದು ಎಂದೇ ಹೇಳಬೇಕು. ನನಗೂ ಅಷ್ಟೇ ಸಾಕು. ಅಂತಹ ಪ್ರಾಮಾಣಿಕತ್ವದಿಂದಲೇ ಸತ್ಯತ್ವವನ್ನು ಸಾಧಿಸುತ್ತೇನೆ ಎಂದು ಅಭಿಪ್ರಾಯ.

ಕಾಚಾದಿದೋಷತೋಽನ್ಯೋಽಪಿ ಯಸ್ತು ದೋಷೋ ಮತಸ್ತವ ।
ಅವಿದ್ಯಾವದ್ವಿಷಯತಾಸಂಜ್ಞೋ ಭಾಷ್ಯಕೃತೋದಿತಃ ॥ ೧೦೫೦ ॥

**ದೋಷಃ ಸ ತೂಷ್ಣೀಂ ಕಿಮುತ ಪ್ರಮಾಯಾಃ ಪ್ರತಿರೋಧತಃ ।**
**ಭ್ರಮಸ್ಯೋತ್ಪಾದಕತ್ವಾದ್ವಾ ಕಂ ಪಕ್ಷಮವಲಂಬಸೇ ॥ ೧೦೫೧ ॥**

**ಅರ್ಥ-** ಕಾಚಾದಿದೋಷತಃ = ಕಾಚಾದಿದೋಷಕ್ಕಿಂತ, ಅನ್ಯ = ಭಿನ್ನವಾದಂತಹ, ಯಃ = ಯಾವ, ಅವಿದ್ಯಾವದ್ವಿಷಯತಾಸಂಜ್ಞಃ ತು = ಅವಿದ್ಯಾವದ್ವಿಷಯತ್ವ- ರೂಪವಾದ, ಭಾಷ್ಯಕೃತೋದಿತಃ = ನಿನ್ನ ಭಾಷ್ಯಕಾರರಿಂದ ಹೇಳಲ್ಪಟ್ಟ, ಯಸ್ತು ದೋಷಃ = ಯಾವ ದೋಷವು, ತವ ಮತಃ = ನಿನಗೆ ಸಮ್ಮತವಾಗಿದೆಯೋ, ಸಃ= ಅದು, ತೂಷ್ಣೀಂ = ಸುಮ್ಮನೆ (ಯಾವ ಕಾರ್ಯವನ್ನೂ ಮಾಡದೆ) ದೋಷಃ = ದೋಷವಾಗುತ್ತದೆಯೋ, ಉತ = ಅಥವಾ, ಪ್ರಮಾಯಾಃ = ಪ್ರಮೆಯನ್ನು, ಪ್ರತಿರೋಧತಃ = ಪ್ರತಿಬಂಧಿಸುವುದರಿಂದ ದೋಷವಾಗುತ್ತದೆಯೋ, ವಾ = ಅಥವಾ, ಭ್ರಮಸ್ಯೋತ್ಪಾದಕತ್ವಾತ್ = ಭ್ರಮಜನಕ ವಾದುದರಿಂದ ದೋಷವಾಗುತ್ತದೆಯೋ? ಕಂ ಪಕ್ಷಮ್ = ಇವುಗಳಲ್ಲಿ ಯಾವ ಪಕ್ಷವನ್ನು, ಅವಲಂಬಸೇ = ಸ್ವೀಕರಿಸುತ್ತೀಯೆ?

**ಅನುವಾದ-** ಕಾಚಾದಿದೋಷಕ್ಕಿಂತಲೂ ಭಿನ್ನವಾದ ನಿನ್ನ ಭಾಷ್ಯಕಾರರು ಹೇಳಿದ ಅವಿದ್ಯಾವದ್ವಿಷಯತ್ವ ಎಂಬ ಹೆಸರಿನ ಯಾವ ದೋಷವು ನಿನಗೆ ಸಮ್ಮತ ವಾಗಿದೆಯೋ ಆ ದೋಷವು ಯಾವುದೇ ಕಾರ್ಯವನ್ನು ಉಂಟು ಮಾಡದೆಯೇ ದೋಷವಾಗುತ್ತದೆಯೋ, ಅಥವಾ ಪ್ರಮಾಪ್ರತಿ ಬಂಧಕವಾಗಿ ದೋಷ ವಾಗುತ್ತದೆಯೋ ಅಥವಾ ಭ್ರಮಜನಕವಾಗಿ ದೋಷವಾಗುತ್ತದೆಯೋ? ಇವುಗಳಲ್ಲಿ ನೀನು ಯಾವ ಪಕ್ಷವನ್ನು ಸ್ವೀಕರಿಸುತ್ತೀಯೆ?

**ಭಾವವಿಲಾಸಿನೀ–** ನನು ಜಗತ್ಪ್ರಮಾಯಾಂ ಕಾಚಾದಿದೋಷಾಭಾವೇಽಪ್ಯವಿದ್ಯಾಖ್ಯದೋಷೋ ಭವಿಷ್ಯತೀತಿ ಚೇನ್ನ । ದೂಷಿತತ್ವಾತ್ । ಕಿಂಚ ಪ್ರಮಾಪ್ರಾಗಭಾವಸ್ಯ ಪ್ರಮೋತ್ಪತ್ತೌ ದೋಷತ್ವಾ ದರ್ಶನೇನಾವಿದ್ಯಾದೋಷತ್ವಸ್ಯಾನಾನುಭವಿಕತ್ವಾತ್ । ಭಾವರೂಪಾವಿದ್ಯಾದೋಷ ಇತಿ ಚೇತ್ । ನ । ಆವಿದ್ಯಕಚರಮಪ್ರಮಾಯಾ ಅಪಿ ಸದೋಷತ್ವಪ್ರಸಂಗಾತ್ । ಸ್ಯಾಃ ಅಜಡ- ಪ್ರಪಂಚೇಷು ತ್ವಯಾನಂಗೀಕಾರೇಣಾರ್ಥಾನಾವರಕತಯಾರ್ಥದೋಷತ್ವಾಯೋಗಾತ್ । ಅತ ಏವ ಕರಣಾನಾವರಕತಯಾ ಕರಣದೋಷತ್ವಾಯೋಗಾಚ್ಚ । ವಿಷಯಸ್ಯಾವಿದ್ಯೋಪಾದಾ- ನಕತ್ವಮಪಿ ದೋಷ ಇತಿ ಚೇನ್ನ । ತವಾಪಿ ಮತೇ ಶುಕ್ತಿರಜತಾದೌ ನಾವಿದ್ಯೋಪಾದಾನಕತ್ವಮೇವ ಸ್ವೋಪಾದೇಯೇ ವಿಷಯೇ ಉತ್ಪತ್ಸ್ಯಮಾನಜ್ಞಾನೇ ದೋಷಃ । ವಿಷಯೋಪೋದ್ಬಲಕಸ್ಯೈವಾ- ಲೋಕಾದೇರಿವ ಜ್ಞಾನೇ ದೋಷತ್ವಾಯೋಗಾತ್ । ಕಿಂ ತು ರಜತೋಪಾದಾನಕತ್ವನಿಮಿತ್ತ- ರಜತತ್ವಾಭಾವಾದೇವಾತದ್ವತಿ ತತ್ಪ್ರಕಾರಕತ್ವರೂಪಭ್ರಮಃ । ಘಟಾದೌ ತು ಮೃದಾದ್ಯುಪಾದಾನ- ಜನ್ಯೇ ತ್ವೇನ ಘಟತ್ವಾದೇರಪಿ ತತ್ರತತ್ರೈವ ಸತ್ವಾತ್ ಕಥಮಾವಿದ್ಯೋಪದಾನಕತ್ವೇಪ್ಯುಕ್ತರೂಪ ಭ್ರಮಃ ಭ್ರಮಸ್ಸ್ಯಾತ್ । ಕಥಮನ್ಯಥಾ ಕೇವಲಾವಿದ್ಯೋಪಾದಾನಕೇ ತಮಸಿ ಶುಕ್ತಿರಜತಾದಾವಿವ

ನ ಭ್ರಮಃ । ತತ ಏವೋಪಾದಾನಾತ್ತಮಸ್ತ್ವಸ್ಯಾಪಿ ತತ್ರ ಸಿದ್ಧೇರ್ನಭ್ರಮಶ್ಚೇತ್ತರ್ಹಿ ರಜತತ್ವಾಪಾದಕೋಪಾದಾನಾಭಾವಾದೇವ ಶುಕ್ತಿರಜತೇ ಭ್ರಮೋ ನಾವಿದ್ಯೋಪಾದಾನಕತ್ವಾದಿತಿ ಸುಷ್ಠೂಕ್ತಂ । ಅರ್ಥಗತಸ್ಯ ಕರಣಗತಸ್ಯ ಅರ್ಥೇಂದ್ರಿಯಮಧ್ಯವರ್ತಿನೋ ವಾ ಶಾಪಾದೇರ್ವಾ ಜ್ಞಾನಪ್ರತಿಬಂಧಕಸ್ಯೈವ ಕಸ್ಯಚಿದ್ದೋಷತ್ವೌಚಿತ್ಯೇನ ಜಡವೃತ್ತ್ಯಪ್ರತಿಬಂಧಕಸ್ಯಾಸ್ಯ ತತ್ರ ದೋಷತ್ವಾಯೋಗಾತ್ । ಪ್ರಾಮಾಣಿಕತ್ವಹೇತೌ ಪ್ರಮಾಣಜನ್ಯವೃತ್ತೇರೇವ ಪ್ರಸ್ತುತತ್ವಾಚ್ಚ । ಅಜ್ಞಾನಾನುಪಾದಾನಕಾನಾದಿಭೇದವೃತ್ತೇರ್ದೋಷಾ ಮೂಲತ್ವಪ್ರಸಂಗಾಚ್ಚ ।

ನ ಚ ವಾಚ್ಯಂ ಮಿಥ್ಯಾಭೂತಾಜ್ಞಾನೋಪಾದಾನಕತ್ವನಿಮಿತ್ತಮರ್ಥಗತಂ ಮಿಥ್ಯಾತ್ವಮೇವ ದೋಷ ಇತಿ । ಅನ್ಯೋನ್ಯಾಶ್ರಯಾತ್ । ಪೂರ್ವವದಜ್ಞಾನಾನುಪಾದಾನಕ ಭೇದಸ್ಯವೃತ್ತೌ ದೋಷಾಭಾವಪ್ರಸಂಗಾತ್ । ತತ್ರ ಬಾಧಾದೇವ ಮಿಥ್ಯಾತ್ವಂ ಚೇತ್ತರ್ಹಿ ಸರ್ವತ್ರಾಪಿ ತೇನೈವ ಮಿಥ್ಯಾತ್ವಸಂಭವೇನ ಭವದಜ್ಞಾನಸ್ಯ ದೋಷಸಂಪಾದಕತಯಾಪಿ ದೋಷತ್ವಾಭಾವೇಽಜ್ಞಾನದೋಷತಾವಾದಸ್ಯೈವಾಜ್ಞಾನಮೂಲತ್ವಾಪಾತಾತ್ । ನ ಚಾರ್ಥಗತಂ ಮಿಥ್ಯಾತ್ವಮಪಿ ದೋಷಃ । ಶುಕ್ತಿರಜತಾದಿಭ್ರಮಸ್ಯಾಪಿ ತೇನೈವ ಸಂಭವೇನ ತತ್ರ ಪುನಃ ಕಾಚಾದಿದೋಷಾಣಾಮನಾಶ್ರಯಣೀಯತ್ವಪ್ರಸಂಗಾತ್ । ಅರ್ಥಾಭಾವಾಪರಪರ್ಯಾಯಮಿಥ್ಯಾತ್ವೇ ಸತಿಜ್ಞಾನಜನಕೀಭೂತೇಂದ್ರಿಯಾರ್ಥ ಸನ್ನಿಕರ್ಷಾಖ್ಯಕಾರಣಾಭಾವೇನೈವ ಸ್ವಾಧಿಕರಣೇ ಪ್ರಮಾರೂಪಕಾರ್ಯಾಭಾವಸ್ಯ ಸಂಭವಾತ್ । ತದಪ್ರತಿಬಂಧಕಸ್ಯಾರ್ಥಾಭಾವಾತ್ಮಕಮಿಥ್ಯಾತ್ವಸ್ಯೈವ ಶುಕ್ತಿರಜತಾದೌ ಭ್ರಮಕಾರಣದೋಷತ್ವೇಸದಾಭ್ರಮಪ್ರಸಂಗೇನ ತದಭಾವವತಿ ತದ್ವತ್ತ್ವಬೋಧನಾಯ ದೋಷಾಂತರಸ್ಯಾವಶ್ಯಂ ವಕ್ತವ್ಯತ್ವಾತ್ ನ ಮಿಥ್ಯಾತ್ವಂ ಕ್ವಾಪ್ಯರ್ಥಗತೋ ದೋಷಃ । ಕಿಂತು ಸತಿ ಶುಕ್ತೀಂದ್ರಿಯಸನ್ನಿಕರ್ಷೇ ಪ್ರಸಕ್ತತತ್ಪ್ರಮಾ ಪ್ರತಿಬಂಧಸ್ಯಾರ್ಥಾಭಾವಾದೇವಾಪ್ರಸಕ್ತ ವಿಪರೀತಾರ್ಥಜ್ಞಾನಸ್ಯ ಬಲಾತ್ಪ್ರಸಂಜಕಸ್ಯ ಚ ಕಾಚಾದಿಕರಣದೋಷಸ್ಯಾತಿ ದೂರತ್ವಸಾದೃಶ್ಯಾದ್ಯರ್ಥದೋಷಸ್ಯೈವ ದೋಷತ್ವಮುಚಿತಮ್ । ಅರ್ಥಮಿಥ್ಯಾತ್ವಸಿದ್ಧೌ ಪ್ರಮಾಣಾನಾಂ ದೋಷಮೂಲತ್ವಸಿದ್ಧಿಃ । ಪ್ರಮಾಣಾನಾಂ ದೋಷಮೂಲತ್ವಸಿದ್ಧೌ ಸತ್ಯತ್ವಸಾಧಕಾಭಾವೇನಾರ್ಥಮಿಥ್ಯಾತ್ವಸಿದ್ಧಿರಿತ್ಯನ್ಯೋನ್ಯಾಶ್ರಯಾಚ್ಚ ನಾರ್ಥಗತಂ ಕರಣಗತಂ ವಾ ಮಿಥ್ಯಾತ್ವಂ ದೋಷಃ । ಕಿಂತು ಕಾಚಾದಿರೇವ। ಅನ್ಯಥಾಕರಣಗತಮಿಥ್ಯಾತ್ವಸ್ಯಾಪಿ ಕರಣದೋಷತ್ವಪ್ರಸಂಗೇನ ಮಿಥ್ಯಾಭೂತಕರಣಜನ್ಯಂ ಚರಮಾಪರೋಕ್ಷಜ್ಞಾನಮಪಿ ಭ್ರಮಸ್ಯಾತ್ । ವಿಷಯಾಭಾವ ಇವ ಕರಣಾಭಾವೇಽಪಿ ಭ್ರಮೋದಯಾಸಂಭವೇನಾಭಾವ ಸಂಪಾದಕಮಿಥ್ಯಾತ್ವಸ್ಯ ದೋಷತ್ವೇ ಉಭಯತ್ರಾಪಿ ದೋಷತ್ವಾಪರಿಹಾರಾತ್ । ಶುಕ್ತಿರೂಪ್ಯಾದೌ ಕಾಚಾದಿದೋಷಜನ್ಯಪ್ರತೀತಿವಿಷಯತ್ವನಿಯತತಯಾ ದೃಷ್ಟಮಿಥ್ಯಾತ್ವಸ್ಯ ತದಭಾವೇಽಸಂಭವಾಚ್ಚ । ತೂಷ್ಣೀಮೇವ ಕಲ್ಪನೇ ಬ್ರಹ್ಮಣ್ಯಪಿ ಕಲ್ಪನಸಂಭವೇನ ಪುನಶ್ಚರಮಪ್ರಮಾಯಾ ಭ್ರಮತ್ವಪ್ರಸಂಗಾತ್ । ಅತೋಽಪಿ ನ ಮಿಥ್ಯಾತ್ವಂ ದೋಷಃ । ಏತತ್ಸರ್ವಂ ಸೂಚಯನ್‌ಪ್ರಕಾರಾಂತರೇಣಾಪ್ಯವಿದ್ಯಾಯಾ ದೋಷತ್ವಂ ಖಂಡಯತಿ ॥ ಕಾಚಾದೀತಿ ॥ ಕಾಚಾದಿರೇವ ದೋಷೋ ನ ತ್ವನ್ಯ ಇತಿ ಹಿ ವಾಕ್ಯಸ್ಯ ಪರ್ಯವಸಿತೋಽರ್ಥಃ । ಅತಃ ಕಾಚಾದೇ-

ದೋಷತ್ವಸಮರ್ಥನಮಪ್ಯನೇನೈವ ಸೂಚಿತಮ್ । ಅವಿದ್ಯಾವದ್ವಿಷಯತೇತ್ಯನೇನಾ-ವಿದ್ಯಾವದ್ವಿಷಯಕಾಣಿ ಶಾಸ್ತ್ರಾಣಿ ಭವಂತಿ । ಸರ್ವಾಣಿ ಚ ಲೌಕಿಕಾನಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಚೇತಿ ವಾಕ್ಯಂ ಸಂಗೃಹ್ಣಾತಿ ॥ ೧೦೫೦-೧೦೫೧ ॥

**ವಿವರಣೆ-** ಜಗತ್ತತ್ತ್ವಕ್ಷದಲ್ಲಿ ಕಾಚಾದಿದೋಷಗಳು ಇಲ್ಲದಿದ್ದರೂ ಅವಿದ್ಯಾರೂಪವಾದ ದೋಷವಿದೆ ಎಂಬುದನ್ನು ಹಿಂದೆಯೇ ನಿರಾಕರಿಸಿದ್ದೇವೆ ಮತ್ತು ಅವಿದ್ಯಾ ಎಂದರೆ ಪ್ರಮಾಪ್ರಾಗಭಾವ ಎಂದು ಅರ್ಥವಾದರೆ, ಪ್ರಾಗಭಾವವು ಕಾರ್ಯೋತ್ಪತ್ತಿಯನ್ನು ಕುರಿತು ದೋಷವಾಗುವುದಿಲ್ಲವಾದ್ದರಿಂದ ಅವಿದ್ಯೆಗೆ ದೋಷತ್ವವು ಕೂಡುವುದಿಲ್ಲ. ಅವಿದ್ಯೆಯು ಪ್ರಾಗಭಾವವಲ್ಲ, ಭಾವರೂಪವಾದುದು, ಆದ್ದರಿಂದ ದೋಷವಾಗುತ್ತದೆ ಎಂದು ಹೇಳಿದರೆ, ಅದೂ ಸರಿಯಲ್ಲ. ಜಡಪ್ರಪಂಚದಲ್ಲಿ ನೀನು ಆ ಅವಿದ್ಯೆಯನ್ನು ಅಂಗೀಕರಿಸಿಲ್ಲವಾದ್ದರಿಂದ ಅದು ಅರ್ಥಕ್ಕೆ ಆವರಕವಾಗಿಲ್ಲ. ಆದ್ದರಿಂದ ಅವಿದ್ಯೆ ಎಂಬುದು ಅರ್ಥದೋಷವಲ್ಲ. ಮತ್ತು ಇಂದ್ರಿಯರೂಪವಾದ ಕರಣವು ಜಡವಾದುದರಿಂದ ಅದಕ್ಕೂ ಅವಿದ್ಯೆಯು ಆವರಕವಲ್ಲ. ಆದ್ದರಿಂದ ಅವಿದ್ಯೆಯು ಕರಣದೋಷವೂ ಅಲ್ಲ. ಆದ್ದರಿಂದ ಭಾವರೂಪ ಅವಿದ್ಯೆಯೂ ದೋಷವಾಗಲು ಸಾಧ್ಯವಿಲ್ಲ. ವಿಷಯವು ಅವಿದ್ಯೋಪಾದಾನಕವಾಗಿರುವುದೇ ದೋಷ ಎಂಬ ಪಕ್ಷವು ಸರಿಯಲ್ಲ. ಏಕೆಂದರೆ, ಶುಕ್ತಿರಜತಸ್ಥಳದಲ್ಲಿ ನಿನ್ನ ಮತದಲ್ಲಿಯೂ ಕೂಡ ರಜತಕ್ಕೆ ಉಪಾದಾನವಾದ ಶುಕ್ತಿವಿಷಯಕ ಜ್ಞಾನೋತ್ಪತ್ತಿಯಲ್ಲಿ ರಜತದ ಅವಿದ್ಯೋಪಾದಾನಕತ್ವವು ದೋಷವಲ್ಲ. ಅವಿದ್ಯೆಯು ರಜತವನ್ನು ಉತ್ಪಾದನೆ ಮಾಡಿ ಜ್ಞಾನಕ್ಕೆ ಸಹಕಾರಿಯಾಗುವುದರಿಂದ ಅದನ್ನು ದೋಷವೆಂದು ಎಣಿಸಬಾರದು. ಆದ್ದರಿಂದ ಶುಕ್ತಿರಜತದಲ್ಲಿ ರಜತೋಪಾದಾನಕತ್ವ ನಿಮಿತ್ತವಾದ ರಜತತ್ವವು ಇಲ್ಲದಿರುವುದರಿಂದ ಆ ಜ್ಞಾನದಲ್ಲಿ ತದಭಾವವತಿ ತತ್ಪ್ರಕಾರಕತ್ವರೂಪವಾದ ಭ್ರಮತ್ವವು ಬರುತ್ತದೆ ಎಂದೇ ಹೇಳಬೇಕು. ರಜತವು ಅವಿದ್ಯೋಪಾದಾನಕವಾದುದರಿಂದ ರಜತಜ್ಞಾನವು ಭ್ರಾಂತಿಯಾಗುವುದಾದರೆ, ಘಟವು ಮೃದುಪಾದಾನಕವಾದ್ದರಿಂದ ಘಟಜ್ಞಾನವು ಏಕೆ ಭ್ರಾಂತಿಯಲ್ಲ? ಇಲ್ಲದಿದ್ದರೆ, ಕೇವಲ ಅವಿದ್ಯೋಪಾದಾನಕವಾದ ತಮಸ್ಸಿನ ಜ್ಞಾನದಲ್ಲಿ ಕೇವಲ ಅವಿದ್ಯೋಪಾದಾನಕವಾದ ಶುಕ್ತಿರಜತಜ್ಞಾನದಲ್ಲಿ ಇರುವಂತೆ ಭ್ರಮತ್ವವು ಏಕೆ ಇಲ್ಲ? ಅವಿದ್ಯಾರೂಪವಾದ ಉಪಾದಾನದಿಂದ ಅಂಧಕಾರತ್ವವೂ ಅಲ್ಲಿ ಸಿದ್ಧವಾಗಿದೆ, ಆದ್ದರಿಂದ ಅದು ಭ್ರಮವಲ್ಲ ಎಂದು ಹೇಳುವುದಾದರೆ, ರಜತತ್ವವನ್ನು ಉಂಟುಮಾಡುವ ಉಪಾದಾನವಿಲ್ಲದಿರುವುದರಿಂದಲೇ, ಶುಕ್ತಿರಜತಜ್ಞಾನವು ಭ್ರಮ, ಅವಿದ್ಯೋಪಾದಾನಕವಾಗಿರುವುದರಿಂದ ಅಲ್ಲ ಎಂದು ಸ್ಪಷ್ಟವಾಗುತ್ತದೆ. ಅರ್ಥಗತವಾದ ಅಥವಾ ಕರಣಗತವಾದ ಅಥವಾ ಅರ್ಥೇಂದ್ರಿಯಮಧ್ಯಗತವಾದ ಅಥವಾ ಶಾಪಾದಿರೂಪವಾದ ಯಾವುದಾದರೂ ಒಂದು ಜ್ಞಾನಪ್ರತಿಬಂಧಕಕ್ಕೆ ದೋಷತ್ವವನ್ನು ಅಂಗೀಕರಿಸಬೇಕೇ ಹೊರತು ಜಡವಾದ ವೃತ್ತಿಯನ್ನು ಪ್ರತಿಬಂಧಿಸದಿರುವ, ಅವಿದ್ಯೋಪಾದಾನಕತ್ವರೂಪವಾದ ಧರ್ಮಕ್ಕೆ ದೋಷತ್ವವನ್ನು ಅಂಗೀಕರಿಸಬಾರದು. ಪ್ರಾಮಾಣಿಕತ್ವಹೇತುವಿನಲ್ಲಿ ಪ್ರಮಾಜನ್ಯವೃತ್ತಿಯೇ ಪ್ರಸ್ತುತವಾಗಿದೆ.

ಆದ್ದರಿಂದ ಇಲ್ಲಿ ಅಜ್ಞಾನೋಪಾದಾನಕತ್ವ ದೋಷದ ಪ್ರಸಕ್ತಿಯು ಉಚಿತವಲ್ಲಮತ್ತು ಅಜ್ಞಾನೋಪಾದಾನಕತ್ವಕ್ಕೆ ದೋಷತ್ವವನ್ನು ಹೇಳಿದರೆ, ಅಜ್ಞಾನೋಪಾದಾನಕವಲ್ಲದ ಅನಾದಿಭೇದವೃತ್ತಿಯಲ್ಲಿ ಅಜ್ಞಾನೋಪಾದಾನಕತ್ವವಿಲ್ಲದಿರುವುದರಿಂದ ಭೇದವೃತ್ತಿಗೆ ಬಾಧ್ಯತ್ವವು ಕೂಡುವುದಿಲ್ಲ ಎಂಬ ಅತಿಪ್ರಸಂಗವೂ ಇದೆ.

ಅಜ್ಞಾನೋಪಾದಾನಕತ್ವ ನಿಮಿತ್ತವಾಗಿ ಅರ್ಥದಲ್ಲಿರುವ ಮಿಥ್ಯಾತ್ವವೇ ದೋಷ ಎಂದು ಹೇಳಬಾರದು. ಏಕೆಂದರೆ, ಅನ್ಯೋನ್ಯಾಶ್ರಯವು ಬರುತ್ತದೆ. ಅರ್ಥಗತಮಿಥ್ಯಾತ್ವವನ್ನು ಸಾಧನೆ ಮಾಡುವುದಕ್ಕಾಗಿಯೇ, ಅರ್ಥಸಾಧಕವಾದ ಪ್ರಮಾಣದಲ್ಲಿ ದೋಷಜನ್ಯತ್ವವನ್ನು ಉಪಪಾದನೆ ಮಾಡಲು ದೋಷವನ್ನು ಹುಡುಕಲು ಹೊರಟಿರುವ ನಿನಗೆ ಅರ್ಥಮಿಥ್ಯಾತ್ವವು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ಅನ್ಯೋನ್ಯಾಶ್ರದೋಷವು ಬರುತ್ತದೆ. ಮತ್ತು ಹಿಂದೆ ಹೇಳಿದಂತೆ ಅಜ್ಞಾನ ಅನುಪಾದಾನಕವಾದ ಅನಾದಿಭೇದವೃತ್ತಿಯಲ್ಲಿ ದೋಷಾಭಾವಪ್ರಸಂಗವು ಬರುತ್ತದೆ. ಬಾಧವಿರುವುದರಿಂದಲೇ ಭೇದವೃತ್ತಿಗೆ ವಿಷಯವಾದ ಭೇದಕ್ಕೆ ಮಿಥ್ಯಾತ್ವವನ್ನು ಹೇಳುತ್ತೇವೆ ಎಂದು ಹೇಳುವುದಾದರೆ, ಎಲ್ಲಾ ಕಡೆಯಲ್ಲಿಯೂ ಬಾಧದಿಂದಲೇ ಮಿಥ್ಯಾತ್ವವು ಸಿದ್ಧವಾಗಬಹುದಾದ್ದರಿಂದ ನಿನ್ನ ಅಜ್ಞಾನವು ದೋಷಸಂಪಾದಕವಾಗಿಯೂ ದೋಷವಾಗುವುದಿಲ್ಲವಾದ ಕಾರಣದಿಂದ ಅಜ್ಞಾನವು ದೋಷ ಎಂದು ಹೇಳುವ ವಾದವೇ ಅಜ್ಞಾನವಮೂಲಕವಾದುದು ಎಂದಾಗುತ್ತದೆ. ಅಜ್ಞಾನೋಪಾದಾನಕತ್ವ ನಿಮಿತ್ತವಾದ ಅರ್ಥಗತಮಿಥ್ಯಾತ್ವವು ದೋಷವೆಂದು ಹೇಳುವುದಿಲ್ಲ. ಕೇವಲ ಅರ್ಥಗತವಾದ ಮಿಥ್ಯಾತ್ವವು ದೋಷವೆಂದು ಹೇಳುತ್ತೇವೆ ಎಂಬ ಪಕ್ಷವು ಸರಿಯಲ್ಲ. ಶುಕ್ತಿರಜತಾದಿ ಭ್ರಮಕ್ಕೂ ಅರ್ಥಮಿಥ್ಯಾತ್ವ ಪ್ರಯುಕ್ತವಾಗಿಯೇ ಭ್ರಮತ್ವವು ಉಪಪನ್ನವಾಗುವುದರಿಂದ, ಪುನಃ ಕಾಚಾದಿಗಳನ್ನು ದೋಷವೆಂದು ಅಂಗೀಕರಿಸಬೇಕಾದ ಅವಶ್ಯಕತೆಯಿಲ್ಲ ಎಂಬ ಪ್ರಸಂಗವು ಬರುತ್ತದೆ ಮತ್ತು ಮಿಥ್ಯಾತ್ವವೆಂದರೆ ಅರ್ಥಾಭಾವರೂಪವಾದುದು. ಅಂತಹ ಮಿಥ್ಯಾತ್ವವಿರುವಾಗ ಜ್ಞಾನಜನಕವಾದ ಅರ್ಥೇಂದ್ರಿಯ ಸನ್ನಿಕರ್ಷವೇ ಇರುವುದಿಲ್ಲ. ಸನ್ನಿಕರ್ಷವು ಪ್ರತ್ಯಕ್ಷವನ್ನು ಕುರಿತು ಕಾರಣ. ಸನ್ನಿಕರ್ಷವಿಲ್ಲದಿದ್ದರೆ ಕಾರಣವೇ ಇಲ್ಲದಿರುವುದರಿಂದ ರಜತಾದಿಸ್ಥಳದಲ್ಲಿ ಪ್ರಮಾರೂಪವಾದ ಕಾರ್ಯದ ಅಭಾವವು ಸ್ವತ ಏವ ಸಿದ್ಧವಾಗುತ್ತದೆ. ಆದ್ದರಿಂದ ಕಾಚಾದಿಗಳಿಗೆ ದೋಷತ್ವವನ್ನು ಏಕೆ ಹೇಳಬೇಕು ಅಥವಾ ಮಿಥ್ಯಾತ್ವಕ್ಕಾದರೂ ಏಕೆ ದೋಷತ್ವವನ್ನು ಹೇಳಬೇಕು? ಕಾರಣಾಭಾವದಿಂದಲೇ ಪ್ರಮಾಭಾವವು ಉಪಪನ್ನವಾಗುವುದರಿಂದ ಪ್ರಮೆಗೆ ಪ್ರತಿಬಂಧಕವಲ್ಲದ ಅರ್ಥಾಭಾವರೂಪವಾದ ಮಿಥ್ಯಾತ್ವವು ಶುಕ್ತಿರಜತಾದಿಸ್ಥಳದಲ್ಲಿ ಭ್ರಮಕಾರಣವಾದ ದೋಷ ಎಂದು ಹೇಳಿದರೆ, ಯಾವಾಗಲೂ (ಶುಕ್ತಿಯನ್ನು ನೋಡಿದಾಗಲೆಲ್ಲಾ) ಭ್ರಾಂತಿಯು ಉಂಟಾಗಲಿ ಎಂಬ ಆಪತ್ತಿಯು ಬರುವುದರಿಂದ ತದಭಾವವತಿ ತತ್ಪ್ರಕಾರಕಜ್ಞಾನತ್ವರೂಪವಾದ ಭ್ರಾಂತಿಯನ್ನು ನಿರ್ವಾಹಮಾಡಲು ದೋಷಾಂತರವನ್ನೇ ಹೇಳಬೇಕೇ ಹೊರತು ಅರ್ಥಗತಮಿಥ್ಯಾತ್ವವು ಎಲ್ಲಿಯೂ

ದೋಷವಾಗುವುದಿಲ್ಲ. ಆದ್ದರಿಂದ ಶುಕ್ತೀಂದ್ರಿಯಸನ್ನಿಕರ್ಷವಿರುವಾಗ ಉಂಟಾಗಬೇಕಾಗಿದ್ದ ಅದರ ಪ್ರಮೆಯ ಪ್ರತಿಬಂಧವು ಕಾಚಾದಿಕರಣದೋಷಪ್ರಯುಕ್ತವಾದುದು ಎಂದೇ ಅಥವಾ ಸಾದೃಶ್ಯಾದಿ ಅರ್ಥದೋಷ ಪ್ರಯುಕ್ತವಾದುದು ಎಂದೇ ಹೇಳಿ ಅವುಗಳಿಗೆ ದೋಷತ್ವವನ್ನು ಅಂಗೀಕರಿಸಬೇಕು. ಏಕೆಂದರೆ, ರಜತರೂಪವಾದ ಅರ್ಥದ ಅಭಾವವು ಇರುವುದರಿಂದಲೇ ರಜತಜ್ಞಾನವು ಪ್ರಸಕ್ತವೇ ಆಗುವುದಿಲ್ಲ. ಆದ್ದರಿಂದ ರಜತವಾಗಲೀ, ರಜತಜ್ಞಾನವಾಗಲೀ, ಪ್ರತಿಬಂಧಕ ವಾಗುವುದಿಲ್ಲವಾದ್ದರಿಂದ, ಭ್ರಮತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಕಾಚಾದಿರೂಪಕರಣದೋಷವನ್ನಾಗಲೀ ಸಾದೃಶ್ಯಾದಿರೂಪವಾದ ಅರ್ಥದೋಷವನ್ನಾಗಲೀ, ಅಂಗೀಕರಿಸುವುದೇ ಯೋಗ್ಯವಾದುದು. ಇಲ್ಲದಿದ್ದರೆ ಅರ್ಥಕ್ಕೆ ಮಿಥ್ಯಾತ್ವವು ಸಿದ್ಧವಾದರೆ ಪ್ರಮಾಣಗಳಿಗೆ ದೋಷಮೂಲತ್ವಸಿದ್ಧಿ. ಪ್ರಮಾಣಗಳಿಗೆ ದೋಷಮೂಲತ್ವವು ಸಿದ್ಧವಾದರೆ, ಸತ್ಯತ್ವಸಾಧಕವಾದ ಪ್ರಮಾಣವು ಇಲ್ಲದಿರುವುದರಿಂದ, ಅರ್ಥಗಳಿಗೆ ಮಿಥ್ಯಾತ್ವಸಿದ್ಧಿ ಎಂದು ಅನ್ಯೋನ್ಯಾಶ್ರಯದೋಷವು ಬರುತ್ತದೆ. ಇದರಂತೆ ಕರಣಗತಮಿಥ್ಯಾತ್ವವು ಭ್ರಮತ್ವವನ್ನು ಕುರಿತು ಕಾರಣ ಎಂದು ಹೇಳಿದರೂ ಹೀಗೆಯೇ ಅನ್ಯೋನ್ಯಾಶ್ರಯದೋಷವು ಬರುವುದರಿಂದ ಅರ್ಥಗತಮಿಥ್ಯಾತ್ವವಾಗಲೀ, ಕರಣಗತಮಿಥ್ಯಾತ್ವವಾಗಲೀ ದೋಷವಾಗುವುದಿಲ್ಲ, ಕಿಂತು ಕಾಚಾದಿಗಳನ್ನೇ ದೋಷವೆಂದು ಅಂಗೀಕರಿಸಬೇಕು. ಇಲ್ಲದಿದ್ದರೆ, ಕರಣಗತಮಿಥ್ಯಾತ್ವವು ಕರಣದೋಷವಾಗುವುದರಿಂದ ಅಂತಹ ಮಿಥ್ಯಾಭೂತವಾದ ಕರಣಜನ್ಯವಾದ ಚರಮಸಾಕ್ಷಾತ್ಕಾರವೂ ಸಹ ಭ್ರಾಂತಿಯಾಗಬೇಕಾದೀತು. ವಿಷಯವಿಲ್ಲದಿದ್ದರೆ ಹೇಗೆ ಭ್ರಾಂತಿ ಉಂಟಾಗುವುದಿಲ್ಲವೋ ಅದರಂತೆ ಕರಣವಿಲ್ಲದಿದ್ದರೂ ಭ್ರಾಂತಿ ಉಂಟಾಗುವುದಿಲ್ಲವಾದ್ದರಿಂದ, ಭ್ರಾಂತಿಯ ಅನುತ್ಪತ್ತಿಗೆ ಸಂಪಾದಕವಾದ ಮಿಥ್ಯಾತ್ವಕ್ಕೆ ದೋಷವನ್ನು ಹೇಳಿದರೆ, ಅರ್ಥ ಮತ್ತು ಕರಣ ಎರಡರಲ್ಲಿಯೂ ಇರುವ ಮಿಥ್ಯಾತ್ವವನ್ನು ದೋಷವೆಂದು ಹೇಳಬೇಕಾಗುತ್ತದೆ. ಶುಕ್ತಿರಜತಾದಿಸ್ಥಳದಲ್ಲಿ ಮಿಥ್ಯಾತ್ವವು ಕಾಚಾದಿದೋಷಜನ್ಯ- ಜ್ಞಾನವಿಷಯತ್ವವ್ಯಾಪ್ಯವಾಗಿರುವುದು ಕಂಡುಬಂದಿದೆ. ಕಾಚಾದಿಗಳು ದೋಷವೇ ಆಗದಿದ್ದರೆ, ವ್ಯಾಪಕನಿವೃತ್ತಿಯಿಂದ ವ್ಯಾಪ್ಯನಿವೃತ್ತಿಯಾಗಬೇಕಾದ್ದರಿಂದ ಶುಕ್ತಿರಜತಾದಿಸ್ಥಳದಲ್ಲಿ ಮಿಥ್ಯಾತ್ವವೇ ಸಿದ್ಧವಾಗುವುದಿಲ್ಲ. ಭ್ರಮಾಭಾವಕ್ಕೆ ಅಥವಾ ಜ್ಞಾನಾಭಾವಕ್ಕೆ ಅಥವಾ ಭ್ರಮೋತ್ಪತ್ತ್ಯಭಾವಕ್ಕೆ ಅಥವಾ ಜ್ಞಾನೋತ್ಪತ್ತ್ಯಭಾವಕ್ಕೆ ಪ್ರಯೋಜಕವಾಗದಿದ್ದರೂ ಹಾಗೆಯೇ ಅರ್ಥಮಿಥ್ಯಾತ್ವವು ದೋಷವಾಗುತ್ತದೆ ಎಂದು ಹೇಳುವುದಾದರೆ, ಬ್ರಹ್ಮನಲ್ಲಿಯೂ ಅಂತಹ ಮಿಥ್ಯಾತ್ವವನ್ನು (ಜ್ಞಾನೋತ್ಪತ್ತಿಗೆ ಪ್ರತಿಬಂಧಕವಲ್ಲದ) ಅಂಗೀಕರಿಸಬಹುದಾದ್ದರಿಂದ ಚರಮಸಾಕ್ಷಾತ್ಕಾರವು ಭ್ರಾಂತಿಯಾಗಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಆದ್ದರಿಂದಲೂ ಮಿಥ್ಯಾತ್ವವನ್ನು ದೋಷ ಎಂದು ಹೇಳಲು ಬರುವುದಿಲ್ಲ. ಕಾಚಾದಿಗಳೇ ದೋಷ, ಬೇರೆ ಯಾವ ದೋಷವೂ ಇಲ್ಲ ಎಂಬುದು ಫಲಿತಾರ್ಥ. 'ಅವಿದ್ಯಾವದ್ವಿಷಯತಾಸಂಜ್ಞಃ' ಎಂದು ಹೇಳುವ ಗ್ರಂಥಕಾರರು 'ಅವಿದ್ಯಾವದ್ವಿಷಯಕಾಣಿ ಶಾಸ್ತ್ರಾಣಿ ಭವಂತಿ, ಸರ್ವಾಣಿ ಚ ಲೌಕಿಕಾನಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಚ' ಎಂಬ ಶಾಂಕರಭಾಷ್ಯವಾಕ್ಯವನ್ನು ಅರ್ಥತಃ ಸಂಗ್ರಹಮಾಡಿದ್ದಾರೆ.

**ಆದ್ಯೇ ಗುಣೋಽಪಿ ದೋಷಃ ಸ್ಯಾದ್ ದ್ವಿತೀಯೇ ತೇ ಮತೇ ಪ್ರಮಾ ।**
**ಬ್ರಹ್ಮಚಿನ್ಮಾತ್ರವಿಷಯಾ ತದ್ರೋಧಾತ್ ತತ್ರ ಕೇವಲಮ್ ।**
**ದೋಷೋಽಸ್ತ್ವಸೌ ಘಟಾದ್ಯರ್ಥೇ ದೋಷತಾ ತಸ್ಯ ಕಿಂಕೃತಾ ॥ ೧೦೫೨ ॥**

**ಅರ್ಥ-** ಆದ್ಯೇ = ಮೊದಲನೆಯ ವಿಕಲ್ಪದಲ್ಲಿ, ಗುಣೋಽಪಿ ದೋಷಃ ಸ್ಯಾದ್= ಗುಣವೂ ಸಹ ದೋಷವಾಗಲಿ, ದ್ವಿತೀಯೇ= ಎರಡನೆಯ ಪಕ್ಷದಲ್ಲಿ, ತೇ ಮತೇ= ನಿನ್ನ ಮತದಲ್ಲಿ, ಪ್ರಮಾ= ಪ್ರಮೆಯು, ಬ್ರಹ್ಮಚಿನ್ಮಾತ್ರವಿಷಯಾ= ಬ್ರಹ್ಮಚೈತನ್ಯಮಾತ್ರ-ವಿಷಯವಾದುದು, ತದ್ರೋಧಾತ್ = ಬ್ರಹ್ಮಚೈತನ್ಯಮಾತ್ರ ವಿಷಯಕ ಪ್ರಮೆಯನ್ನು ಪ್ರತಿಬಂಧಿಸುವುದರಿಂದ, ಕೇವಲಮ್ = ಕೇವಲ, ತತ್ರ = ಬ್ರಹ್ಮಪ್ರಮೆಯಲ್ಲಿ, ಅಸೌ = ಈ ಅವಿದ್ಯಾವದ್ವಿಷಯತ್ವವು, ದೋಷೋಸ್ತು = ದೋಷವಾಗಲಿ, ತಸ್ಯ = ಅದಕ್ಕೆ, ಘಟಾದ್ಯರ್ಥೇ= ಘಟಾದಿರೂಪವಾದ ಅರ್ಥದಲ್ಲಿ, ದೋಷತಾ= ದೋಷತ್ವವು, ಕಿಂಕೃತಾ= ಯಾವ ಕಾರಣದಿಂದ ಅಂಗೀಕರಿಸಲ್ಪಡುತ್ತದೆ?

**ಅನುವಾದ-** ಯಾವ ಕಾರ್ಯವನ್ನೂ ಉಂಟುಮಾಡದೆ ದೋಷವಾಗುತ್ತದೆ ಎಂಬ ಮೊದಲನೆಯ ಪಕ್ಷದಲ್ಲಿ ಗುಣವೂ ದೋಷವಾಗಲಿ (ಎಂಬ ಆಪತ್ತಿಯು ಬರುತ್ತದೆ). ಪ್ರಮಾಪ್ರತಿಬಂಧಕತ್ವೇನ ದೋಷ ಎಂಬ ಎರಡನೆಯ ಪಕ್ಷದಲ್ಲಿ ನಿನ್ನ ಮತದಲ್ಲಿ ಪ್ರಮೆ ಎಂದರೆ ಬ್ರಹ್ಮಚಿನ್ಮಾತ್ರವಿಷಯಕವಾದ ಜ್ಞಾನ ಎಂದು ಅಂಗೀಕರಿಸುವುದರಿಂದ ಅಂತಹ ಚರಮಸಾಕ್ಷಾತ್ಕಾರಕ್ಕೆ ಬೇಕಾದರೆ, ಅವಿದ್ಯಾವದ್ವಿಷಯತ್ವವು ಪ್ರತಿಬಂಧಕವಾಗಿ ದೋಷವಾಗಲಿ. ಘಟಾದಿವಿಷಯಗಳಲ್ಲಿ ಪ್ರಮೆಯೇ ಇಲ್ಲದಿರುವುದರಿಂದ ಅಲ್ಲಿ ಏಕೆ ಅವಿದ್ಯಾವದ್ವಿಷಯತ್ವಕ್ಕೆ ದೋಷತ್ವವನ್ನು ಒಪ್ಪಬೇಕು?

**ಭಾವವಿಲಾಸಿನೀ–** ತದ್ರೋಧಾತ್ ಬ್ರಹ್ಮಚಿನ್ಮಾತ್ರವಿಷಯಕಪ್ರಮಾಪ್ರತಿರೋಧಾತ್ । ತತ್ರ ಬ್ರಹ್ಮಚಿತಿ। ತಸ್ಯ ಅವಿದ್ಯಾವದ್ವಿಷಯತ್ವಸ್ಯ । ಕಿಂ ಕೃತೇತ್ಯನೇನ ಘಟಾದಾಪ್ಯೆಬಧ್ಯಪ್ರಮಾಯಾ ಏವಾ-ಭಾವಾತ್ ಜಡೇಽಜ್ಞಾನಾವರಣಾನಂಗೀಕಾರೇಣ ತಜ್ಜನ್ಯಭ್ರಮಸ್ಯಾಪ್ಯಯೋಗಾತ್ ಅವಿದ್ಯಾ-ವದ್ವಿಷಯತ್ವಸ್ಯ ತ್ವನ್ಮತೇಽಭಾವಾಚ್ಚ ನೋಭಯಥಾಪಿ ದೋಷತ್ವಮಿತಿ ಸೂಚಯತಿ ॥೧೦೫೨॥

**ವಿವರಣೆ-** ಘಟಾದಿಗಳಲ್ಲಿ ಪ್ರತಿಬಧ್ಯಮಾನವಾದ ಪ್ರಮೆಯೇ ಇಲ್ಲದಿರುವುದರಿಂದ ಮತ್ತು ಅಜ್ಞಾನಾವರಣವನ್ನು ಅಂಗೀಕರಿಸದೇ ಇಲ್ಲದಿರುವುದರಿಂದ, ತಜ್ಜನ್ಯಭ್ರಾಂತಿಯೂ ಇಲ್ಲದಿರುವುದರಿಂದ, ಅವಿದ್ಯಾವದ್ವಿಷಯತ್ವವೇ ಇಲ್ಲ. ಆದ್ದರಿಂದ ಅಲ್ಲಿ ಅವಿದ್ಯಾವದ್ವಿಷಯಕತ್ವಕ್ಕೆ ಏಕೆ ದೋಷವನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಮಮ ಜೀವಗತಾವಿದ್ಯಾ ತಸ್ಯೇಶವಿಷಯಪ್ರಮಾಮ್ ।
ರುಣದ್ಧಿ ತಸ್ಯ ದೋಷೋಽಸೌ ತತ್ರೈವ ನ ಪರಾತ್ಮನಿ ॥ ೧೦೫೩ ॥

**ಅರ್ಥ-** ಮಮ = ನನಗಾದರೋ, ಜೀವಗತಾವಿದ್ಯಾ= ಜೀವನಲ್ಲಿರುವ ಅವಿದ್ಯೆಯು, ತಸ್ಯ= ಜೀವನವೇ, ಈಶವಿಷಯಪ್ರಮಾಮ್= ಈಶ್ವರವಿಷಯಕವಾದ ಪ್ರಮೆಯನ್ನು, ರುಣದ್ಧಿ= ಪ್ರತಿಬಂಧಿಸುತ್ತದೆ, ತಸ್ಯ= ಆ ಜೀವನನ್ನು ಕುರಿತು, ದೋಷಃ= ದೋಷವಾದ, ಅಸೌ= ಈ ಅವಿದ್ಯೆಯು, ತತ್ರೈವ = ಜೀವನಲ್ಲಿಯೇ ಇದೆ, ಪರಾತ್ಮನಿ ನ= ಪರಮಾತ್ಮನಲ್ಲಿ ಇಲ್ಲ.

**ಅನುವಾದ-** ನನಗಾದರೋ ಜೀವಗತವಾದ ಅವಿದ್ಯೆಯು ಜೀವನಿಗೆ ಈಶ್ವರ ವಿಷಯಕವಾದ ಪ್ರಮೆಯನ್ನು ಪ್ರತಿಬಂಧಿಸುತ್ತದೆ. ಜೀವನನ್ನು ಕುರಿತು ದೋಷವಾದ ಈ ಅವಿದ್ಯೆಯು ಜೀವನಲ್ಲಿಯೇ ಇದೆ. ಪರಮಾತ್ಮನಲ್ಲಿ ಇಲ್ಲ.

**ಭಾವವಿಲಾಸಿನೀ–** ಉಭಯತ್ರಾಪಿ ತಸ್ಯೇತಿ ಪದಂ ಜೀವಪರವಮ್ । ತತ್ರೈವ ತಸ್ಮಿನ್ವಿಷಯೇ ಅವಿದ್ಯಾಯಾಃ ಜೀವೇ ಸ್ಥಿತ್ವಾಪರಮಾತ್ಮವಿಷಯಕಪ್ರಮಾಮಾತ್ರಪ್ರತಿಬಂಧಕತ್ವೇನ ಪರಮಾತ್ಮವಿಷಯ ಏವ ದೋಷತ್ವಮ್ । ನ ತು ಪರಮಾತ್ಮನಿಷ್ಠತಯಾ ದೋಷತ್ವಂ ನಾಪಿ ಘಟಾದಿವಿಷಯ ಇತಿ ಭಾವಃ ॥ ೧೦೫೩ ॥

**ವಿವರಣೆ-** ನಮ್ಮ ಮತದಲ್ಲಿ ಈ ದೋಷವಿಲ್ಲವೆಂದು ಹೇಳುತ್ತಾರೆ. ಅವಿದ್ಯೆಯು ಜೀವನಲ್ಲಿದೆ. ಅವಿದ್ಯಾಕಾರ್ಯವಾದ ಪ್ರಮಾಪ್ರತಿರೋಧವು ಜೀವನಲ್ಲಿಯೇ ಇದೆ. ಆದ್ದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂದು ಹೇಳುತ್ತಾರೆ.

ಘಟಾದಿಷು ಪ್ರಮಾರೋಧಸ್ತವಾಪಿ ನ ಮಮಾಪಿ ನ ।
ತತ್ ಪ್ರತ್ಯಕ್ಷಾದಿಮಾನೇಷು ಕಾ ಹಾನಿಃ ಸ್ಯಾದವಿದ್ಯಯಾ ॥ ೧೦೫೪ ॥

ಚಕ್ಷುರ್ದೋಷಸ್ಯ ಕಾಚಸ್ಯ ಕಿಂ ಘ್ರಾಣಾದೌ ಚ ದೋಷತಾ ।
ಕ್ವಚಿತ್ ಕಶ್ಚಿದ್ ದೋಷ ಇತಿ ಯತ್ ಪ್ರಾಹುಃ ಪೂರ್ವಸೂರಯಃ ॥೧೦೫೫॥

**ಅರ್ಥ-** ಘಟಾದಿಷು = ಘಟಾದಿವಿಷಯಗಳಲ್ಲಿ, ಪ್ರಮಾರೋಧಃ = ಪ್ರಮಾಪ್ರತಿಬಂಧವು, ತವಾಪಿ ನ = ನಿನಗೂ ಇಲ್ಲ, ಮಮಾಪಿ ನ = ಮತ್ತು ನನ್ನ ಮತದ ರೀತಿಯೂ ಇಲ್ಲ. ತತ್ = ಆದ್ದರಿಂದ, ಪ್ರತ್ಯಕ್ಷಾದಿಮಾನೇಷು = ಪ್ರತ್ಯಕ್ಷಾದಿಪ್ರಮಾಣಗಳಲ್ಲಿ, ಅವಿದ್ಯಯಾ = ಅವಿದ್ಯೆಯಿಂದ, ಕಾ ಹಾನಿಃ ಸ್ಯಾತ್ = ಯಾವ ಹಾನಿಯು ಉಂಟಾಗುತ್ತದೆ?

ಚಕ್ಷುರ್ದೋಷಸ್ಯ = ಚಕ್ಷುಸ್ಸಿಗೆ ದೋಷವಾದ, ಕಾಚಸ್ಯ = ಕಾಚಕ್ಕೆ, ಘ್ರಾಣಾದೌ ಚ = ಘ್ರಾಣವನ್ನು ಕುರಿತು, ದೋಷತಾ ಕಿಂ = ದೋಷತ್ವವಿದೆಯೇನು? ಪೂರ್ವಸೂರಯಃ = ಹಿಂದಿನ ಜ್ಞಾನಿಗಳು, ಕ್ವಚಿತ್ = ಎಲ್ಲೋ ಒಂದು ಕಡೆ, ಕಶ್ಚಿತ್ = ಯಾವುದೋ ಒಂದು, ದೋಷಃ = ದೋಷವಾಗುತ್ತದೆ, ಇತಿ ಪ್ರಾಹುಃ =ಹೇಳುತ್ತಾರೆ.

**ಅನುವಾದ-** ಘಟಾದಿವಿಷಯಗಳಲ್ಲಿ ಪ್ರಮಾಪ್ರತಿಬಂಧವು ನಿನ್ನ ಮತದಂತೆಯೂ ಇಲ್ಲ ಮತ್ತು ನನ್ನ ಮತದಂತೆಯೂ ಇಲ್ಲ. ಆದ್ದರಿಂದ ಪ್ರತ್ಯಕ್ಷಪ್ರಮಾಣಗಳಲ್ಲಿ ಅವಿದ್ಯೆಯಿಂದ ಯಾವ ಹಾನಿ ಉಂಟಾಗುತ್ತದೆ? ಚಕ್ಷುಸ್ಸಿಗೆ ದೋಷವಾದ ಕಾಚವು ಘ್ರಾಣಕ್ಕೂ ದೋಷವಾಗುತ್ತದೆಯೇ? ಏಕೆಂದರೆ, ಪೂರ್ವಜ್ಞಾನಿಗಳು ಯಾವುದೋ ಒಂದು ವಿಷಯದಲ್ಲಿ ಯಾವುದೋ ಒಂದು ದೋಷವಾಗುತ್ತದೆ ಎಂದು ಹೇಳುತ್ತಾರಷ್ಟೇ?

**ಭಾವವಿಲಾಸಿನೀ–** ತತ್ ತಸ್ಮಾತ್ ಅವಿದ್ಯಾಯಾಃ ಬ್ರಹ್ಮಪ್ರಮಾಮಾತ್ರೇ ದೋಷತ್ವಾತ್ ॥

**ವಿವರಣೆ-** ಅವಿದ್ಯೆಯು ಕೇವಲ ಬ್ರಹ್ಮಪ್ರಮೆಯನ್ನು ಕುರಿತು ದೋಷವಾಗಬಹುದು. ಘಟಾದಿಪ್ರಮೆಯನ್ನು ಕುರಿತು ದೋಷವಾಗುವುದಿಲ್ಲ. ಏಕೆಂದರೆ, ನಾವಿಬ್ಬರೂ ಘಟಪ್ರಮೆಯನ್ನು ಒಪ್ಪುತ್ತೇವೆ, ಘಟಪ್ರಮಾಪ್ರತಿರೋಧವನ್ನು ಒಪ್ಪುವುದಿಲ್ಲ. ಒಂದು ಪ್ರಮೆಯನ್ನು ಕುರಿತು ಯಾವುದೋ ಒಂದು ಕಡೆಯಲ್ಲಿ ಒಂದು ದೋಷವಾಗುವುದೇ ಹೊರತಾಗಿ, ಎಲ್ಲಾ ಪ್ರಮೆಗಳನ್ನೂ ಕುರಿತು ಒಂದು ದೋಷ ಎಂಬುದು ಎಲ್ಲಿಯೂ ಇಲ್ಲ. ಆದ್ದರಿಂದ ಪ್ರಮಾಸಾಮಾನ್ಯಪ್ರತಿಬಂಧಕತ್ವೇನ ಅವಿದ್ಯೆಗೆ ಸಾರ್ವತ್ರಿಕವಾಗಿ ದೋಷತ್ವವನ್ನು ಅಂಗೀಕಾರಮಾಡಬಾರದು ಎಂದು ಅಭಿಪ್ರಾಯ.

**ತೃತೀಯೇಽಪಿ ಭ್ರಮಃ ಕಸ್ತೇ ಯದ್ಧೇತುತ್ವೇನ ದೋಷತಾ ।**
**ನಹಿ ಕುಡ್ಯಘಟಾದ್ಯರ್ಥಧೀರೇಷಾ ಭ್ರಮರೂಪಿಣೀ ।**
**ಕುಡ್ಯತ್ವಾದಿಯುತೇಷ್ವೇವ ಕುಡ್ಯತ್ವಾದಿಪ್ರಕಾರಿಕಾ ॥ ೧೦೫೬ ॥**

**ಅರ್ಥ-** ತೃತೀಯೇಽಪಿ = ಭ್ರಮಜನಕತ್ವೇನ ಅವಿದ್ಯೆಯು ದೋಷವಾಗುತ್ತದೆ ಎಂಬ ತೃತೀಯಪಕ್ಷದಲ್ಲಿಯೂ, ಯದ್ಧೇತುತ್ವೇನ = ಯಾವ ಭ್ರಮಕ್ಕೆ ಕಾರಣವಾಗಿ, ದೋಷತಾ = ಅವಿದ್ಯೆಯು ದೋಷವಾಗುತ್ತದೆಯೋ ಅಂತಹ, ತೇ ಭ್ರಮಃ = ನಿನಗೆ ಸಮ್ಮತವಾದ ಭ್ರಮವು, ಕಃ = ಯಾವುದು? ಕುಡ್ಯತ್ವಾದಿಯುತೇಷ್ವೇವ = ಕುಡ್ಯತ್ವಾದಿಗಳಿರುವ ವಸ್ತುವಿನಲ್ಲಿಯೇ, ಕುಡ್ಯತ್ವಾದಿಪ್ರಕಾರಿಕಾ = ಕುಡ್ಯತ್ವಾದಿ ಪ್ರಕಾರಕವಾದ, ಏಷಾ= ಈ, ಕುಡ್ಯಘಟಾರ್ಥಧೀಃ= ಕುಡ್ಯ ಘಟಾದಿ ವಿಷಯಕವಾದ ಜ್ಞಾನವು, ಭ್ರಮರೂಪಿಣೀ ನಹಿ= ಭ್ರಮರೂಪವಲ್ಲವಷ್ಟೆ?

**ಅನುವಾದ-** ಭ್ರಮಜನಕತ್ವೇನ ಅವಿದ್ಯೆಯು ದೋಷವಾಗುತ್ತದೆ ಎಂಬ ತೃತೀಯಪಕ್ಷದಲ್ಲಿ ನಿನಗೆ ಅಭಿಮತವಾದ ಭ್ರಮವು ಯಾವುದು? ಕುಡ್ಯಘಟಾದಿ ಪದಾರ್ಥ ವಿಷಯಕವಾದ ಈ ವೃತ್ತಿಯು ಭ್ರಮರೂಪವಲ್ಲವಷ್ಟೇ? ಅದು ಕುಡ್ಯತ್ವಾದಿಗಳನ್ನುಳ್ಳ ವಸ್ತುಗಳಲ್ಲಿಯೇ ಕುಡ್ಯತ್ವಾದಿಪ್ರಕಾರಕವಾಗಿದೆ.

**ಭಾವವಿಲಾಸಿನೀ–** ಏಷಾ ವೃತ್ತಿರೂಪಾ । ಕುಡ್ಯತ್ವಾದಿಯುತೇಷು ಕುಡ್ಯಾದಿಷು । ಕುಡ್ಯತ್ವಾದಿತಿ ಕುಡ್ಯಾದೌ ಕುಡ್ಯತ್ವಾದಿಪ್ರಕಾರಕತ್ವೇನ ತದ್ವತಿ ತತ್ಪ್ರಕಾರಕತ್ವಾತ್ ನ ಕುಡ್ಯಾದಿವೃತ್ತೇರ್ಭ್ರಮತ್ವಮ್। ಅತಸ್ತತ್ರಾವಿದ್ಯಾಯಾ ಭ್ರಮಹೇತುತ್ವೇನಾಪಿ ನ ದೋಷತ್ವಮಿತಿ ಭಾವಃ ॥ ೧೦೫೬ ॥

**ವಿವರಣೆ-** ಭ್ರಾಂತಿ ಎಂದರೆ ತದಭಾವವತಿ ತತ್ಪ್ರಕಾರಕ ಜ್ಞಾನ. ಘಟತ್ವವಿದ್ದಲ್ಲಿ ಘಟತ್ವವನ್ನು ಗ್ರಹಿಸುವ, ಕುಡ್ಯತ್ವವಿದ್ದಲ್ಲಿ ಕುಡ್ಯತ್ವವನ್ನು ಗ್ರಹಿಸುವ ಈ ಅಪರೋಕ್ಷವೃತ್ತಿರೂಪವಾದ ಜ್ಞಾನವು ತದಭಾವವತಿ ತತ್ಪ್ರಕಾರಕವಲ್ಲವಾದ್ದರಿಂದ ಅದು ಭ್ರಾಂತಿಯಲ್ಲ ಎಂದು ಅಭಿಪ್ರಾಯ.

ಭ್ರಮೋ ಹಿ ಬ್ರಹ್ಮಣಿ ತವ ತದ್ಗಾऽವಿದ್ಯಾಪಿ ತದ್ಭ್ರಮಮ್ ।
ಸಂಪಾದಯಂತೀ ತತ್ರೈವ ದೋಷಃ ಸ್ಯಾಚ್ಛಕ್ತಿಶೋಧನೇ ॥ ೧೦೫೭ ॥

**ಅರ್ಥ-** ತವ = ನಿನ್ನ ಮತದಲ್ಲಿ, ಭ್ರಮಃ = ಭ್ರಮವು, ಬ್ರಹ್ಮಣಿ ಹಿ = ಬ್ರಹ್ಮನಲ್ಲಿಯೇ ಇರುವುದಷ್ಟೇ ? ತದ್ಗಾವಿದ್ಯಾಪಿ = ಬ್ರಹ್ಮಗತವಾದ ಅವಿದ್ಯೆಯೂ ಕೂಡ, ತದ್ಭ್ರಮಮ್ = ಬ್ರಹ್ಮಭ್ರಮವನ್ನು, ಸಂಪಾದಯಂತೀ = ಸಂಪಾದಿಸುತ್ತಾ, ಶಕ್ತಿಶೋಧನೇ = ಆ ದೋಷದ ಶಕ್ತಿಯನ್ನು ವಿಚಾರಮಾಡಿದರೆ, ತತ್ರೈವ = ಬ್ರಹ್ಮಭ್ರಮವಿಷಯದಲ್ಲಿಯೇ, ದೋಷಃ ಸ್ಯಾತ್ = ದೋಷವಾಗುತ್ತದೆ.

**ಅನುವಾದ-** ನಿನ್ನ ಮತದಲ್ಲಿ ಭ್ರಮವೂ ಕೂಡ ಬ್ರಹ್ಮನಲ್ಲಿಯೇ ಇದೆ. ಅವಿದ್ಯೆಯ ಶಕ್ತಿಯನ್ನು ಶೋಧನೆಮಾಡಿದರೆ (ದೋಷದ ಶಕ್ತಿಯನ್ನು ವಿಮರ್ಶೆಮಾಡಿದರೆ) ಬ್ರಹಗತವಾದ ಅವಿದ್ಯೆಯೂ ಕೂಡ ಬ್ರಹ್ಮಭ್ರಮವನ್ನು ಸಂಪಾದಿಸುತ್ತಾ ಬ್ರಹ್ಮ-ಭ್ರಮವನ್ನು ಕುರಿತೇ ದೋಷವಾಗುತ್ತದೆ.

**ಭಾವವಿಲಾಸಿನೀ–** ತದ್ಗಾವಿದ್ಯಾ ಬ್ರಹ್ಮನಿಷ್ಠಾವಿದ್ಯಾ । ತದ್ಭ್ರಮಂ ಬ್ರಹ್ಮಭ್ರಮಮ್ । ತತ್ರೈವ ಬ್ರಹ್ಮಭ್ರಮವಿಷಯ ಏವ । ಭ್ರಮಸಂಪಾದಕತಯಾ ದೋಷತ್ವಮಂಗೀಕೃತ್ಯೇದಮುದಿತಮ್ । ವಸ್ತುತಸ್ತ್ವಸ್ಮತ್ಪ್ರಮಿತೇऽರ್ಥೇ ಬ್ರಹ್ಮಣೋऽಪಿ ನ ಭ್ರಮಃ । ಭ್ರಮಪ್ರಮಾವಿಷಯತ್ವಯೋರೇಕತ್ರಾಯೋಗಾತ್ । ಅನ್ಯಸ್ಯ ಚ ಪ್ರತ್ಯೇತವ್ಯಸ್ಯ ಚಿದವೇದ್ಯೇ ಬ್ರಹ್ಮಣಿ ತನ್ಮತೇऽಪ್ಯ-ಯೋಗಾತ್ ಅಭ್ರಮ ಏವೇತಿ ದ್ರಷ್ಟವ್ಯಮ್ ॥ ೧೦೫೭ ॥

**ವಿವರಣೆ-** ಬ್ರಹ್ಮಭ್ರಮಸಂಪಾದಕತ್ವೇನ ದೋಷವಾಗುತ್ತದೆ ಎಂಬುದು ಅಂಗೀಕೃತ್ಯ ವಾದ. ನಿಜವಾಗಿ ವಿಚಾರಮಾಡಿದರೆ, ಅಸ್ಮದಾದಿಪ್ರಮಾವಿಷಯವಾದ ಅರ್ಥದಲ್ಲಿ ಬ್ರಹ್ಮನಿಗೂ ಭ್ರಮವಿಲ್ಲ. ಏಕೆಂದರೆ, ಒಂದೇ ವಿಷಯವು ಒಂದೇ ಸಮಯದಲ್ಲಿ ಭ್ರಮ ಮತ್ತು ಪ್ರಮೆ ಎರಡಕ್ಕೂ ವಿಷಯವಾಗುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ಘಟವಿಷಯಕ-ಭ್ರಮವಿಲ್ಲ. ಬ್ರಹ್ಮನಿಗೆ ಸ್ವಾವೇದ್ಯತ್ವವಿರುವುದರಿಂದ ಸ್ವವಿಷಯಕಭ್ರಮವೂ ಇಲ್ಲ. ಆದ್ದರಿಂದ ಬ್ರಹ್ಮನಿಗೆ ಭ್ರಮವೇ ಇಲ್ಲವೆಂದು ಸಿದ್ಧವಾಗುತ್ತದೆ. ತಾದೃಶಭ್ರಮಸಂಪಾದಕತ್ವೇನ, ತಾದೃಶಭ್ರಮಜನಕತ್ವೇನ ಅವಿದ್ಯೆಗೆ ದೋಷತ್ವವನ್ನು ಹೇಳಲು ಬರುವುದಿಲ್ಲ.

**ಪ್ರತ್ಯಕ್ಷಾದಿಪ್ರಮಾಣಾನಾಂ ಜಡಾನಾಂ ಜೀವವರ್ತಿನಾಮ್ ।**
**ಕಥಂ ಸಾ ಭ್ರಮಹೇತುಃ ಸ್ಯಾಚ್ಚಕ್ಷುರ್ದೋಷೋಽಪಿ ಕೋ ಭವೇತ್ ॥೧೦೫೮॥**

**ಅರ್ಥ-** ಜೀವವರ್ತಿನಾಮ್ = ಜೀವಗತವಾದ, ಜಡಾನಾಂ = ಜಡರೂಪವಾದ, ಪ್ರತ್ಯಕ್ಷಾದಿಪ್ರಮಾಣಾನಾಂ = ಪ್ರತ್ಯಕ್ಷಾದಿಪ್ರಮಾಣಗಳಿಗೆ, ಸಾ = ಬ್ರಹ್ಮಗತವಾದ ಅವಿದ್ಯೆಯು, ಕಥಂ = ಹೇಗೆ, ಭ್ರಮಹೇತುಃ ಸ್ಯಾತ್ = ಭ್ರಮತ್ವವನ್ನು ಸಂಪಾದಿಸಿಕೊಡುತ್ತದೆ? ಚಕ್ಷುರ್ದೋಷೋಽಪಿ = ಚಕ್ಷುಸ್ಸಿನ ದೋಷವಾದರೂ, ಕೋ ಭವೇತ್ = ಯಾವುದು ಇದೆ?

**ಅನುವಾದ-** ಬ್ರಹ್ಮಗತವಾದ ಅವಿದ್ಯೆಯು ಜೀವಗತವಾದ, ಜಡರೂಪವಾದ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಹೇಗೆ ಭ್ರಮತ್ವವನ್ನು ಸಂಪಾದಿಸಿಕೊಡುತ್ತದೆ? ಚಕ್ಷುಸ್ಸಿನ ದೋಷವಾದರೂ ಯಾವುದು?

**ಭಾವವಿಲಾಸಿನೀ–** ಸಾ ಬ್ರಹ್ಮಗತಾಽವಿದ್ಯಾ ॥ ೧೦೫೮ ॥

**ವಿವರಣೆ-** ದೋಷ ಮತ್ತು ಭ್ರಮಗಳಿಗೆ ಸಾಮಾನಾಧಿಕರಣ್ಯವು ಇರಬೇಕಾಗುವುದರಿಂದ ಬ್ರಹ್ಮಗತವಾದ, ಅವಿದ್ಯಾರೂಪವಾದ ದೋಷವು ಜೀವಗತವಾದ ಭ್ರಮವನ್ನು ಕುರಿತು ಕಾರಣವಲ್ಲ. ಇನ್ನು 'ಭೂತಲೇ ಘಟಃ, ಘಟೇ ಘಟತ್ವಂ' ಮುಂತಾದ ಪ್ರತೀತಿಗಳು ಪ್ರಮೆಯೇ ಆಗುವುದರಿಂದ ಅಲ್ಲಿ ದೋಷಕಲ್ಪನೆಗೆ ಅವಕಾಶವಿಲ್ಲ. ಆದ್ದರಿಂದ ಯಾವ ದೋಷವಿದೆ ಎಂದು ಆಕ್ಷೇಪ ಮಾಡುತ್ತಾರೆ.

**ಕಿಂಚಿತ್ಪ್ರಮಾಸಾಧಕಶ್ಚ ಬಹುತದ್ರೋಧಕಶ್ಚ ಯಃ ।**
**ಸ ದೋಷೋ ಭ್ರಮದೋ ದೃಷ್ಟಃ ಪ್ರಮಾಽಭಾವೇ ಭ್ರಮಃ ಕುತಃ ॥೧೦೫೯॥**

ಯಃ = ಯಾವುದು, ಕಿಂಚಿತ್ಪ್ರಮಾಸಾಧಕಶ್ಚ = ಅಲ್ಪ ಪ್ರಮೆಯನ್ನು (ಅಲ್ಪಾಂಶದಲ್ಲಿ ಪ್ರಮೆಯನ್ನು) ಸಂಪಾದಿಸುತ್ತದೆಯೋ, ಬಹುತದ್ರೋಧಕಶ್ಚ = ಆ ವಸ್ತುವಿನಲ್ಲಿರುವ ಅನೇಕ ಅಂಶಗಳನ್ನು ಮುಚ್ಚಿಹಾಕುತ್ತದೆಯೋ, ಸ = ಅಂತಹ, ದೋಷಃ = ದೋಷವು, ಭ್ರಮದೋ ದೃಷ್ಟಃ = ಭ್ರಮಜನಕವಾಗಿ ಅನುಭವಸಿದ್ಧವಾಗಿದೆ, ಪ್ರಮಾಽಭಾವೇ = ಪ್ರಮೆಯೇ ಇಲ್ಲದಿರುವಾಗ, ಕುತಃ = ಎಲ್ಲಿಂದ, ಭ್ರಮಃ = ಭ್ರಮವು ಉಂಟಾಗುತ್ತದೆ?

**ಅನುವಾದ-** ಯಾವ ದೋಷವು ಅಲ್ಪಾಂಶದ ಪ್ರಮೆಯನ್ನು ಉಂಟುಮಾಡಿ ವಸ್ತುವಿನಲ್ಲಿರುವ ಅನೇಕ ಅಂಶಗಳ ಜ್ಞಾನವು ಬರದಂತೆ ಮಾಡುತ್ತದೆಯೋ ಅಂತಹ ದೋಷವು ಭ್ರಮಜನಕವೆಂದು ಅನುಭವಸಿದ್ಧವಾಗಿದೆ. ಪ್ರಮೆಯೇ ಇಲ್ಲದಿರುವಾಗ ಭ್ರಮವು ಎಲ್ಲಿಂದ ಬರಬೇಕು?

**ಭಾವವಿಲಾಸಿನೀ–** ಪರರೀತ್ಯಾಪಿ ವೃತ್ತೌ ದೋಷೋ ನ ಘಟತ ಇತ್ಯಾಹ - ಕಿಂಚಿದಿತಿ ॥ ಕಿಂಚಿತ್ಪ್ರಮಾಸಾಧಕಃ ಅಧಿಷ್ಠಾನಾಂಶೇ ಇದಂ ತ್ವಮಾತ್ರ ಪ್ರಮಾಸಾಧಕಃ । ತದಬಾಧಕ ಇತಿ ಯಾವತ್।

ಬಹುತದ್ರೋಧಕಃ ಬಹೂನಾಮಧಿಷ್ಠಾನನಿಷ್ಠಶುಕ್ತಿತ್ವಾದೀನಾಂ ತದ್ರೋಧಕಃ ಪ್ರಮಾರೋಧಕಃ । ಪರಮತೇ ಚರಮಪ್ರಮಾಯಾ ಏವ ಪ್ರಮಾತ್ವೇನ ವೃತ್ತೇರಂಶದ್ವಯೇಽಪಿ ಪ್ರಮಾತ್ವಾನಂಗೀಕಾರಾತ್ ನೋಕ್ತಲಕ್ಷಣೋ ದೋಷಸ್ತತ್ರ ಸಂಭವತೀತಿ ಭಾವಃ ॥೧೦೫೯॥

**ವಿವರಣೆ-** ಪರರೀತಿಯಿಂದಲೂ, ವೃತ್ತಿರೂಪಜ್ಞಾನದಲ್ಲಿ ಯಾವುದೂ ದೋಷವಿಲ್ಲ ಎಂದು ಉಪಪಾದನೆ ಮಾಡುತ್ತಾರೆ. ಅಧಿಷ್ಠಾನಾಂಶದಲ್ಲಿ ಇದಂತ್ವ ಪ್ರಮೆಯನ್ನು ಉಂಟುಮಾಡಿ ಅದನ್ನು ಬಾಧಿಸದೆ, ಅಧಿಷ್ಠಾನಗತವಾದ ಶುಕ್ತಿತ್ವಾದಿ ಅನೇಕ ಧರ್ಮಗಳ ಪ್ರಮೆಯನ್ನು ಪ್ರತಿರೋಧಿಸುವುದೇ ದೋಷವೆಂದು ಸಿದ್ಧವಾಗಿದೆ. ಪರಮತದಲ್ಲಾದರೂ, ಚರಮಸಾಕ್ಷಾತ್ಕಾರವನ್ನು ಬಿಟ್ಟು ಉಳಿದ ಯಾವುದೂ ಪ್ರಮೆಯೇ ಅಲ್ಲ. ಅವರು ಘಟಾದಿವೃತ್ತಿಗಳನ್ನು ಅಂಶದ್ವಯದಲ್ಲಿಯೂ ಅಪ್ರಮಾ ಎಂದು ಸ್ವೀಕರಿಸುತ್ತಾರೆ. ಆದ್ದರಿಂದ ದೋಷಕ್ಕೆ ಹೇಳಿದ ಲಕ್ಷಣವು ಅಲ್ಲಿ ಬರುವುದಿಲ್ಲವಾದ್ದರಿಂದ ಅಲ್ಲಿ ಯಾವ ದೋಷವೂ ಇಲ್ಲ.

**ಸರ್ವಂ ಜ್ಞಾನಂ ಯತೋ ಧರ್ಮಿಣ್ಯಭ್ರಾಂತಂ ಸರ್ವದೇಹಿನಾಮ್ ।**
**ಘಟೇ ಘಟತ್ವಮಿತಿ ಧೀಃ ಕಥಂ ಸ್ಯಾತ್ ಕೇವಲಂ ಭ್ರಮಃ ॥ ೧೦೬೦ ॥**

**ಅರ್ಥ-** ಸರ್ವಂ ಜ್ಞಾನಂ = ಎಲ್ಲ ಜ್ಞಾನವೂ, ಸರ್ವದೇಹಿನಾಮ್ = ಎಲ್ಲ ಪ್ರಾಣಿಗಳಿಗೂ, ಯತಃ = ಯಾವ ಕಾರಣದಿಂದ, ಧರ್ಮಿಣಿ = ಧರ್ಮಿಯ ವಿಷಯದಲ್ಲಿ, ಅಭ್ರಾಂತಂ = ಭ್ರಮಾತ್ಮಕವಾಗುವುದಿಲ್ಲವೋ ಆ ಕಾರಣದಿಂದ, ಘಟೇ ಘಟತ್ವಮಿತಿ ಧೀಃ = ಘಟೇ ಘಟತ್ವಂ ಎಂಬ ಜ್ಞಾನವು, ಕೇವಲಂ ಭ್ರಮಃ = ಸರ್ವಾಂಶದಲ್ಲಿಯೂ ಭ್ರಮವಾಗಿ, ಕಥಂ ಸ್ಯಾತ್ = ಹೇಗೆ ಆಗುತ್ತದೆ?

**ಅನುವಾದ-** ಎಲ್ಲ ಪ್ರಾಣಿಗಳಿಗೂ ಉಂಟಾಗುವ ಎಲ್ಲ ಜ್ಞಾನಗಳೂ ಧರ್ಮಿಯ ಅಂಶದಲ್ಲಿ ಅಭ್ರಮರೂಪವಾಗಿಯೇ ಇರುತ್ತದೆ. ಘಟೇ ಘಟತ್ವಂ ಎಂಬ ಜ್ಞಾನವು ಹೇಗೆ ಕೇವಲ ಭ್ರಮವಾಗುತ್ತದೆ?

**ಭಾವವಿಲಾಸಿನೀ–** ಕಿಂಚ ಪರಮತೇ ಬ್ರಹ್ಮೈವ ಜಗದಾರೋಪಾಧಿಷ್ಠಾನಮ್ । ಏವಂ ಚಾಯಂ ಘಟ ಇತಿ ವೃತ್ತೌ ಇದಮಂಶಸ್ಯ ಸಾಮಾನ್ಯಾಕಾರತಯಾಧಿಷ್ಠಾನ ಬ್ರಹ್ಮವಿಷಯತ್ವಾಂಗೀಕಾರೇಣ ಭ್ರಮತ್ವಶಂಕಾ ಸ್ಯಾದಪಿ । ಭೂತಲೇ ಘಟಃ ಘಟೇ ಘಟತ್ವಮ್ ಇತ್ಯಾದ್ಯಸಾಧಾರಣಾಕಾರೇಣ ಭೂತಲಘಟಾದಿಮಾತ್ರವಿಷಯ ಪ್ರಥಮಾಂಶಯುಕ್ತಶತಸಹಸ್ರವೃತ್ತಿಷು ಭ್ರಮತ್ವಶಂಕೈವ ನ ಘಟತೇ। ಯದಿ ಚ ಸ್ವಮತಂ ವಿಹಾಯ ಭ್ರಮತ್ವಪರಿರಕ್ಷಣಾರ್ಥಂ ಭೂತಲಘಟಾದಿಕಮೇವಾಧಿಷ್ಠಾನಂ ಬ್ರೂಯಾತ್ । ತದಾ ವ್ಯಾವಹಾರಿಕ ಜಗದಾರೋಪಾಧಿಷ್ಠಾನಭೂತಲಘಟಾದೇ- ಬ್ರಹ್ಮವತ್ಪರಮಾರ್ಥಸತ್ತ್ವಂ ಸ್ಯಾತ್ । ತೇಷಾಂ ಚ ಪರಮಾರ್ಥಸತ್ಯತ್ವೇ ಆಪಣಸ್ಥರಜತಾದೇರಿವ ಸ್ವಸ್ವಯೋಗ್ಯಸ್ಥಾನ ಏವ ವಿದ್ಯಮಾನತ್ವಾದ್ಬ್ರಹ್ಮಣಿ ನಿಷೇಧೇಽಪ್ಯತ್ರಾನಿಷೇಧಾತ್ । ಘಟತ್ವಾದಿಪ್ರತೀತೌ

ಘಟಾದೇರ್ಘಟತ್ವಾದಿನಿಷ್ಠಜಾತಿತ್ವಪ್ರಮೇಯತ್ವಾದಿಧರ್ಮಪ್ರತೀತೌ ಘಟತ್ವಾದೇರಧಿಷ್ಠಾನತ್ವಾಚ್ಚ ಪರಮಾರ್ಥಸತ್ಯತ್ವಮೇವ ಸ್ಯಾತ್ । ಏವಂ ಚ ಸರ್ವಸ್ಯಾಪಿ ಸತ್ಯತ್ವೇ ತತ್ರಾವಿದ್ಯಮಾನಸ್ಯ ಮಿಥ್ಯಾತ್ವಸ್ಯ ಪ್ರತೀತಿರೇವ ಭ್ರಮಸ್ಸ್ಯಾದಿತ್ಯಾಹ - **ಸರ್ವಮಿತಿ** ॥ ಕೇವಲಭ್ರಮಃ ಅಧಿಷ್ಠಾನಾಂಶೇ ಪ್ರಮಾಶೂನ್ಯಭ್ರಮಃ ॥ ೧೦೬೦ ॥

**ವಿವರಣೆ-** ಪರಮತದಲ್ಲಿ ಬ್ರಹ್ಮನೇ ಜಗದಾರೋಪಾಧಿಷ್ಠಾನವಾದ ವಸ್ತು. ಆದ್ದರಿಂದ 'ಅಯಂ ಘಟಃ' ಎಂಬ ವೃತ್ತಿಯಲ್ಲಿ ಇದಂ ಎಂಬ ಅಂಶವು ಸಾಮಾನ್ಯರೂಪದಿಂದ ಅಧಿಷ್ಠಾನಬ್ರಹ್ಮವಿಷಯವೆಂದು ಅಂಗೀಕರಿಸಿ ಭ್ರಮತ್ವಶಂಕೆಯನ್ನು ಕಥಂಚಿತ್ ಮಾಡಬಹುದು. ಆದರೆ 'ಭೂತಲೇ ಘಟಃ, ಘಟೇ ಘಟತ್ವಂ' ಎಂಬಲ್ಲಿ ಅಸಾಧಾರಣರೂಪದಿಂದ ಭೂತಲಘಟಾದಿಮಾತ್ರವಿಷಯಕವಾದ ಪ್ರಥಮಾಂಶಯುಕ್ತವಾದ ಸಹಸ್ರಾರು ವೃತ್ತಿಗಳಲ್ಲಿ ಭ್ರಮತ್ವಶಂಕೆಯೇ ಕೂಡುವುದಿಲ್ಲ. ತಮ್ಮ ಮತವನ್ನೂ ಪರಿತ್ಯಜಿಸಿ ಭ್ರಮತ್ವವನ್ನು ಸಂಪಾದಿಸುವುದಕ್ಕೋಸ್ಕರ ಭೂತಲ ಮತ್ತು ಘಟಾದಿಗಳೇ ಅಧಿಷ್ಠಾನವೆಂದು ಅಂಗೀಕರಿಸಿದರೆ, ವ್ಯಾವಹಾರಿಕವಾದ ಘಟ ಮತ್ತು ಘಟತ್ವಗಳ ಆರೋಪಕ್ಕೆ ಅಧಿಷ್ಠಾನವಾದ ಭೂತಲ ಮತ್ತು ಘಟಗಳು ಬ್ರಹ್ಮನಂತೆ ಪಾರಮಾರ್ಥಿಕವೇ ಆಗಬೇಕೆಂಬ ಆಪತ್ತಿಯು ಬರುತ್ತಿದೆ. ಅವುಗಳು ಪಾರಮಾರ್ಥಿಕ ಎಂದಾದರೆ, ಆಪಣಸ್ಥರಜತವು ಹೇಗೆ ತನಗೆ ಯೋಗ್ಯವಾದ ಆಪಣದೇಶದಲ್ಲಿಯೇ ಇರುತ್ತದೆಯೋ ಅದರಂತೆ, ಭೂತಲ ಘಟಾದಿಗಳನ್ನು ಬ್ರಹ್ಮನಲ್ಲಿ ನಿಷೇಧಮಾಡಿದರೆ, ಸ್ವಸ್ವದೇಶಗಳಲ್ಲಿ ಅವುಗಳ ನಿಷೇಧವೇ ಸಿದ್ಧವಾಗುವುದಿಲ್ಲ. ಘಟತ್ವಾದಿ ಪ್ರತೀತಿಯಲ್ಲಿ ಘಟಾದಿಗಳೇ ಅಧಿಷ್ಠಾನವಾದುದರಿಂದ ಘಟತ್ವನಿಷ್ಠ ಜಾತಿತ್ವ, ಪ್ರಮೇಯತ್ವ ಮೊದಲಾದ ಧರ್ಮಪ್ರತೀತಿಯಲ್ಲಿ ಘಟತ್ವಾದಿಗಳೇ ಅಧಿಷ್ಠಾನವಾದ ಕಾರಣದಿಂದ ಅವುಗಳಿಗೆ ಪಾರಮಾರ್ಥಿಕ ಸತ್ವವೇ ಬರಬೇಕಾದೀತು. ಕೇವಲಭ್ರಮ ಎಂದರೆ ಅಧಿಷ್ಠಾನಾಂಶದಲ್ಲಿಯೂ ಆರೋಪ್ಯಾಂಶದಲ್ಲಿಯೂ ಭ್ರಮರೂಪವಾದುದು ಎಂದು ಅರ್ಥ. ಅಂತಹ ಭ್ರಾಂತಿಯು ಅನಾನುಭವಿಕವಾದ್ದರಿಂದ ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

**ಕಲ್ಪ್ಯಾದಧಿಕಸತ್ತಾಕಮಧಿಷ್ಠಾನಂ ತವೈವ ಹಿ ।**
**ಯತೋಽವಶ್ಯಂ ತತೋ ವ್ಯಕ್ತಿಃ ಸತ್ಯೈವಾಸೀತ್ ಪರಾತ್ಮವತ್॥ ೧೦೬೧ ॥**

**ಅರ್ಥ-** ತವೈವ = ನಿನ್ನ ಮತದಂತೆಯೇ, ಅಧಿಷ್ಠಾನಂ = ಅಧಿಷ್ಠಾನವು, ಕಲ್ಪ್ಯಾತ್= ಆರೋಪ್ಯಮಾಣವಾದುದಕ್ಕಿಂತ, ಅಧಿಕಸತ್ತಾಕಂ ಹಿ = ಅಧಿಕಸತ್ತಾಕವಾದುದೆಂದು, ಯತಃ = ಯಾವ ಕಾರಣದಿಂದ ಅಂಗೀಕರಿಸಲ್ಪಡುತ್ತದೆಯೋ, ತತಃ = ಆ ಕಾರಣದಿಂದ, ವ್ಯಕ್ತಿಃ = ಭೂತಲ ಘಟಾದಿ ವ್ಯಕ್ತಿಗಳು, ಪರಾತ್ಮವತ್ = ಬ್ರಹ್ಮನಂತೆ, ಸತ್ಯೈವಾಸೀತ್ = ಸತ್ಯವೇ ಆಗುತ್ತದೆ.

**ಅನುವಾದ-** ನಿನ್ನ ಮತದಂತೆಯೇ ಅಧಿಷ್ಠಾನವು ಆರೋಪ್ಯಮಾಣವಾದುದಕ್ಕಿಂತ ಅಧಿಕಸತ್ತಾಕವಾದದ್ದರಿಂದ ಅವಶ್ಯಕವಾಗಿ ಭೂತಲಘಟಾದಿವ್ಯಕ್ತಿಗಳಿಗೆ ಘಟ-

ಘಟತ್ವಾದಿಗಳಿಗಿಂತ ಅಧಿಕಸತ್ತಾಕತ್ವವನ್ನು ಅಂಗೀಕರಿಸಿದರೆ, ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವೇ ಆಗುತ್ತದೆ.

**ಭಾವವಿಲಾಸಿನೀ–** ವ್ಯಕ್ತಿರಿತ್ಯುಪಲಕ್ಷಣಮ್ । ಭೂತಲಮಪಿ ಗ್ರಾಹ್ಯಮ್ ॥ ೧೦೬೧ ॥

**ವಿವರಣೆ-** 'ಭೂತಲೇ ಘಟಃ, ಘಟೇ ಘಟತ್ವಂ' ಎಂಬಲ್ಲಿ ತೋರುವ ಘಟ ಮತ್ತು ಘಟತ್ವಾದಿಗಳು ವ್ಯಾವಹಾರಿಕಗಳು. ಅದಕ್ಕೆ ಭೂತಲ ಮತ್ತು ಘಟಗಳು ಆರೋಪಾಧಿಷ್ಠಾನವೆಂದು ಒಪ್ಪಿದರೆ, ಭೂತಲ ಮತ್ತು ಘಟಗಳಿಗೆ ವ್ಯಾವಹಾರಿಕಸತ್ವಕ್ಕಿಂತಲೂ ಅಧಿಕಸತ್ವವನ್ನು ಒಪ್ಪಬೇಕಾಗುತ್ತದೆ. ಎಂದರೆ ಅವು ಬ್ರಹ್ಮನಂತೆ ಪಾರಮಾರ್ಥಿಕಸತ್ಯವೇ ಆಗಬೇಕಾಗುತ್ತದೆ ಎಂದು ಅಭಿಪ್ರಾಯ.

**ತದ್ವ್ಯಕ್ತ್ಯಂಶೇ ಪ್ರಮೈವೇಯಂ ಭವೇದ್ ಯುಕ್ತಿಬಲೇನ ಧೀಃ ।**
**ಜಾತ್ಯಂಶೇಽಪಿ ಪ್ರಮಾ ಸಾ ಸ್ಯಾತ್ ತಾಸಾಂ ಚಾಸ್ವೇವ ಸಂಸ್ಥಿತೇಃ ॥೧೦೬೨॥**

**ಅರ್ಥ-** ತತ್= ಆದ್ದರಿಂದ, ಯುಕ್ತಿಬಲೇನ= ಯುಕ್ತಿಯ ಬಲದಿಂದ, ಇಯಂ ಧೀಃ= ಭೂತಲೇ ಘಟಃ, ಘಟೇ ಘಟತ್ವಂ ಎಂಬ ಜ್ಞಾನವು, ವ್ಯಕ್ತ್ಯಂಶೇ = ಭೂತಲ ಮತ್ತು ಘಟರೂಪವಾದ ವ್ಯಕ್ತ್ಯಂಶದಲ್ಲಿ, ಪ್ರಮೈವ ಭವೇತ್ = ಪ್ರಮೆಯೇ ಆಗುತ್ತದೆ. ಸಾ= ಆ ಬುದ್ಧಿಯು, ತಾಸಾಂ = ಆ ಘಟತ್ವಾದಿಜಾತಿಗಳು, ಆಸ್ವೇವ = ಈ ಘಟಾದಿವ್ಯಕ್ತಿಗಳಲ್ಲಿಯೇ, ಸಂಸ್ಥಿತೇಃ = ಇರುವುದರಿಂದ, ಜಾತ್ಯಂಶೇಽಪಿ = ಜಾತ್ಯಂಶದಲ್ಲಿಯೂ, ಪ್ರಮಾ ಸ್ಯಾತ್ = ಪ್ರಮೆಯೇ ಆಗುತ್ತದೆ.

**ಅನುವಾದ-** ಆದ್ದರಿಂದ ಯುಕ್ತಿಯ ಬಲದಿಂದ ಘಟೇ ಘಟತ್ವಂ ಇತ್ಯಾದಿ ಜ್ಞಾನವು ಘಟರೂಪವಾದ ವ್ಯಕ್ತ್ಯಂಶದಲ್ಲಿ ಪ್ರಮೆಯೇ ಆಗುತ್ತದೆ ಮತ್ತು ಘಟತ್ವಾದಿಜಾತಿಗಳು ಘಟಾದಿಗಳಲ್ಲಿಯೇ ಇರುವುದರಿಂದ ಘಟತ್ವರೂಪಜಾತ್ಯಂಶದಲ್ಲಿಯೂ ಅದು ಪ್ರಮೆಯೇ ಆಗುತ್ತದೆ.

**ಭಾವವಿಲಾಸಿನೀ–** ತಾಸಾಂ ಜಾತೀನಾಮ್ । ಆಸು ವ್ಯಕ್ತಿಷು । ಘಟಾದೀನಾಂ ಭೂತಲ ಏವ ವಿದ್ಯಮಾನತ್ವಾದಿತ್ಯಪಿ ಗ್ರಾಹ್ಯಮ್ । ಭೂತಲಪದೇನ ಭೂತಲಾವಿಚ್ಛಿನ್ನಚೈತನ್ಯಮೇವೋಚ್ಯತೇ। ಘಟಪದೇನ ಚ ಘಟಾವಚ್ಛಿನ್ನಂ ಘಟತ್ವಪದೇನ ಚ ತದವಚ್ಛಿನ್ನಚೈತನ್ಯಮ್ । ಅತೋಽಧಿಷ್ಠಾನತ್ವೇನಾಪಿ ಚೈತನ್ಯಸ್ಯೈವ ಸತ್ಯತ್ವಂ ನ ಭೂತಲಾದೇರಿತಿ ಚೇತ್ ನ । ಇದಂ ಪದಸ್ಯ ಸರ್ವನಾಮ- ತಯಾ ಬ್ರಹ್ಮಪರತ್ವಸಂಭವೇಽಪಿ ಭೂತಲಾದಿಪದಾನಾಂ ಬ್ರಹ್ಮಪರತ್ವಾಯೋಗಾತ್ । ಮುಖ್ಯೇ ಸಂಭವತ್ಯಮುಖ್ಯಾಯೋಗೇನ ಲಕ್ಷಣಾದೇರನುಚಿತತ್ವಾಚ್ಚ । ವ್ಯಾವಹಾರಿಕಭ್ರಮಾಧಿಷ್ಠಾನತ್ವಸ್ಯ ಚೈತನ್ಯಾದನ್ಯತ್ರಾಯೋಗಾಲ್ಲಕ್ಷಣೇತಿ ಚೇತ್ ನ । ಧರ್ಮಿಭ್ರಮಸ್ಯೇದಂ ರಜತಮಿತ್ಯಾದೌ ತಾದಾತ್ಮ್ಯವಿಷಯತ್ವನಿಯಮದರ್ಶನೇನ ಭೂತಲೇ ಘಟ ಇತ್ಯಾಧಾರಾಧೇಯತಯಾ

ಧರ್ಮಿಪ್ರತೀತೇಸ್ತವ ಮತೇಽಬ್ರಹ್ಮಭ್ರಮತಯಾ ಸರ್ವಸಂಪ್ರತಿಪನ್ನಪ್ರತೀತೀನಾಂ ಭ್ರಮತ್ವಾಸಿದ್ಧ್ಯಾ ಚ ಕಲ್ಪಕಾಭಾವೇನಾನ್ಯೋನ್ಯಾಶ್ರಯಾತ್ । ಅನ್ಯತ್ರೈವಪ್ರಸಿದ್ಧಪದಸ್ಯಾಪ್ರಸಿದ್ಧಾ ಮುಖ್ಯಾರ್ಥಂ ಸ್ವೀಕೃತ್ಯ ತಸ್ಯಾಧಿಷ್ಠಾನತಾಂ ಸಂಪಾದ್ಯ ಸರ್ವೇಷಾಂ ಪ್ರತ್ಯೇತ್ೃಣಾಂ ಸರ್ವೇಷಾಂ ಪ್ರಮೇಯಾನಾಂ ಚಾಪ್ರಮಾತೃತ್ವಾಪ್ರಮೇಯತ್ವಕಲ್ಪನಾತೋಽಪಿ ಪ್ರಸಿದ್ಧಾರ್ಥಸ್ವೀಕಾರೇಣ ಪ್ರಮಾತೃತ್ವಪ್ರಮೇಯತ್ವರಕ್ಷಣಸ್ಯೈವ ನ್ಯಾಯ್ಯತ್ವಾತ್ ॥ ೧೦೬೨ ॥

**ವಿವರಣೆ-** ಘಟತ್ವವು ಘಟದಲ್ಲಿಯೇ ಇರುವುದರಿಂದ, ಘಟವು ಭೂತಲದಲ್ಲಿಯೇ ಇರುವುದರಿಂದ ಈ ಪ್ರತೀತಿಗಳು ಘಟ, ಭೂತಲ ಮುಂತಾದ ವ್ಯಕ್ತಿವಿಷಯಗಳಲ್ಲಿಯೂ, ಘಟತ್ವವೇ ಮೊದಲಾದ ಜಾತಿವಿಷಯದಲ್ಲಿಯೂ ಪ್ರಮೆಯೇ ಆಗುತ್ತದೆ. ಭೂತಲೇ ಘಟಃ ಎಂಬಲ್ಲಿ ಭೂತಲಪದಕ್ಕೆ ಭೂತಲಾವಚ್ಛಿನ್ನಚೈತನ್ಯವೆಂದೇ ಅರ್ಥ. ಅದರಂತೆ ಘಟ ಪದಕ್ಕೆ ಘಟಾವಚ್ಛಿನ್ನಚೈತನ್ಯವೆಂದೂ, ಘಟತ್ವ ಪದಕ್ಕೆ ಘಟತ್ವಾವಿಚ್ಛಿನ್ನಚೈತನ್ಯವೆಂದೂ ಅರ್ಥ. ಆದ್ದರಿಂದ ಮೇಲೆ ಹೇಳಿದ ಪ್ರತೀತಿಗಳಲ್ಲಿ ಅಧಿಷ್ಠಾನವಾದುದು ಭೂತಲಾವಚ್ಛಿನ್ನಚೈತನ್ಯ ಮತ್ತು ಘಟಾವಚ್ಛಿನ್ನಚೈತನ್ಯವೇ ಆಗುತ್ತದೆ. ಆದ್ದರಿಂದ ಅಧಿಷ್ಠಾನವಾದುದರಿಂದ ಭೂತಲಾದಿಗಳಿಗೆ ಸತ್ಯತ್ವವನ್ನು ಒಪ್ಪಬೇಕು ಎಂಬ ಪ್ರಸಂಗವಿಲ್ಲ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ, ಇದಂ ಪದವು ಸರ್ವನಾಮವಾದ್ದರಿಂದ ಕಥಂಚಿತ್ ಬ್ರಹ್ಮಪರತ್ವವನ್ನು ಒಪ್ಪಬಹುದಾದರೂ, ಭೂತಲಾದಿ ಶಬ್ದಗಳಿಗೆ ಬ್ರಹ್ಮಪರತ್ವವು ಎಂದೂ ಕೂಡುವುದಿಲ್ಲ. ಭೂತಲ ಪದಕ್ಕೆ ಬ್ರಹ್ಮನಲ್ಲಿ ಲಕ್ಷಣಾವನ್ನು ಮಾಡಿದರೆ, ಅದು ಅಮುಖ್ಯವೃತ್ತಿಯಾಗಿರುವುದರಿಂದ ಮುಖ್ಯವೃತ್ತಿಗೆ ಅವಕಾಶವಿರುವಾಗ, ಅಮುಖ್ಯವೃತ್ತಿಯನ್ನು ಎಂದೂ ಅನುಸರಿಸಬಾರದು ಎಂಬ ನ್ಯಾಯದಿಂದ ಅದು ಯುಕ್ತವಾಗುವುದಿಲ್ಲ. ಭೂತಲಾದಿಗಳು ಮುಖ್ಯಾರ್ಥವಾದರೂ, ಮುಖ್ಯಾರ್ಥ ಸ್ವೀಕಾರಕ್ಕೆ ಅನುಪಪತ್ತಿಯಿದೆ. ಅದು ಏನೆಂದರೆ, ಚೈತನ್ಯಭಿನ್ನವಾದುದಕ್ಕೆ ಎಲ್ಲಿಯೂ ವ್ಯಾವಹಾರಿಕಭ್ರಮಾಧಿಷ್ಠಾನತ್ವವು ಕೂಡುವುದಿಲ್ಲ. ಆದ್ದರಿಂದ ಭೂತಲಪದದಿಂದ ಲಕ್ಷಣಾವೃತ್ತಿಯಿಂದ ಭೂತಲಾವಚ್ಛಿನ್ನಚೈತನ್ಯವನ್ನೇ ತೆಗೆದುಕೊಳ್ಳುತ್ತೇವೆ ಎಂಬ ಸಮಾಧಾನವು ಸರಿಯಲ್ಲ. ಏಕೆಂದರೆ, ಧರ್ಮಿಭ್ರಮವು ಇದಂ ರಜತಂ ಇತ್ಯಾದಿ ಸ್ಥಳಗಳಲ್ಲಿ ನಿಯಮೇನ ತಾದಾತ್ಮ್ಯವಿಷಯಕವಾಗಿದೆ. ಭೂತಲೇ ಘಟಃ ಎಂಬ ಪ್ರತೀತಿಯಲ್ಲಿ ತಾದಾತ್ಮ್ಯವು ತೋರುವುದಿಲ್ಲ. ಆಧಾರಾಧೇಯಭಾವವು ತೋರುತ್ತದೆ. ಆದ್ದರಿಂದ ಈ ಭ್ರಮವು ಬ್ರಹ್ಮಭ್ರಮವಲ್ಲ. ಆಕಾರಣದಿಂದ ಸರ್ವಸಂಪ್ರತಿಪನ್ನವಾದ ಇಂತಹ ಪ್ರತೀತಿಗಳಿಗೆ ಭ್ರಮತ್ವವು ಸಿದ್ಧವಾಗುವುದಿಲ್ಲವಾದ್ದರಿಂದ ಭ್ರಮತ್ವಕ್ಕೆ ಕಲ್ಪಕವಾದುದು ಯಾವುದೂ ಇರದಿರುವುದರಿಂದ ಲಕ್ಷಣಾವೃತ್ತಿಯ ಆಶ್ರಯಣವು ಸರಿಯಲ್ಲ. ಇನ್ನು ವ್ಯಾವಹಾರಿಕಭ್ರಮಕ್ಕೆ ಚೈತನ್ಯಾತಿರಿಕ್ತವು ಅಧಿಷ್ಠಾನವಾಗುವುದಿಲ್ಲ ಎಂದು ಹೇಳಬೇಕಾದರೆ, ವ್ಯಾವಹಾರಿಕಭ್ರಮವು ಮೊದಲು ಸಿದ್ಧವಾಗಬೇಕು. ಅದೇ ಇನ್ನೂ ಸಿದ್ಧವಾಗಿಲ್ಲದಿರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಆದ್ದರಿಂದ ಭೂತಲಾದಿಗಳಲ್ಲೇ ಪ್ರಸಿದ್ಧವಾದ ಭೂತಲಾದಿ ಶಬ್ದಗಳಿಗೆ ಪ್ರಸಿದ್ಧವಾದ

ಮುಖ್ಯಾರ್ಥದ ಪರಿತ್ಯಾಗವನ್ನು ಮಾಡಿ ಅಪ್ರಸಿದ್ಧವಾದ ಬ್ರಹ್ಮ ಎಂಬ ಅರ್ಥವನ್ನು ಸ್ವೀಕರಿಸಿ ಅದಕ್ಕೆ ಅಧಿಷ್ಠಾನತ್ವವನ್ನು ಸಂಪಾದನೆ ಮಾಡಿ ಎಲ್ಲಾ ಪ್ರಮಾತೃಗಳಿಗೂ ಮತ್ತು ಪ್ರಮೇಯಗಳಿಗೂ, ಅಪ್ರಮಾತೃತ್ವವನ್ನೂ ಮತ್ತು ಅಪ್ರಮೇಯತ್ವವನ್ನೂ ಕಲ್ಪನೆಮಾಡುವುದಕ್ಕಿಂತಲೂ ಪ್ರಸಿದ್ಧಾರ್ಥವನ್ನು ಸ್ವೀಕರಿಸಿ ಎಲ್ಲಾ ಪ್ರಮಾತೃ ಮತ್ತು ಪ್ರಮೇಯಗಳನ್ನು ರಕ್ಷಣೆಮಾಡುವುದು ಒಳ್ಳೆಯದಾದ್ದರಿಂದ ಭೂತಲಾದಿ ಶಬ್ದಗಳಿಗೆ ಭೂತಲಾವಚ್ಛಿನ್ನಚೈತನ್ಯ ಎಂದು ಅರ್ಥವನ್ನು ಮಾಡಬಾರದು ಎಂದು ಅಭಿಪ್ರಾಯ.

ಘಟಾವಚ್ಛಿನ್ನಚೈತನ್ಯೇ ಘಟತ್ವಮಿತಿ ಕಸ್ಯ ಧೀಃ ।
ಘಟಾಧಿಷ್ಠಾನಚೈತನ್ಯೇ ಘಟೋಽಧ್ಯಸ್ತಃ ಪರಂ ತವ ॥ ೧೦೬೩ ॥

**ಅರ್ಥ-** ಘಟಾವಚ್ಛಿನ್ನಚೈತನ್ಯೇ = ಘಟಾವಚ್ಛಿನ್ನಚೈತನ್ಯದಲ್ಲಿ, ಘಟತ್ವಂ ಇತಿ = ಘಟತ್ವವು ಇದೆ ಎಂದು, ಕಸ್ಯ ಧೀಃ = ಯಾವನಿಗೆ ಜ್ಞಾನವುಂಟಾಗುತ್ತದೆ, ಪರಂ = ಆದರೆ, ತವ = ನಿನಗೆ, ಘಟಾಧಿಷ್ಠಾನಚೈತನ್ಯೇ = ಘಟಾಧಿಷ್ಠಾನಚೈತನ್ಯದಲ್ಲಿ, ಘಟಃ ಅಧ್ಯಸ್ತಃ = ಘಟವು ಅಧ್ಯಸ್ತವಾಗಿದೆ.

**ಅನುವಾದ-** ಘಟಾವಚ್ಛಿನ್ನಚೈತನ್ಯದಲ್ಲಿ ಘಟತ್ವವು ಇದೆ ಎಂದು ಯಾರಿಗೆ ಜ್ಞಾನವು ಬರುತ್ತದೆ ಮತ್ತು ನಿನ್ನ ರೀತಿಯಲ್ಲಿ ಘಟಾಧಿಷ್ಠಾನಚೈತನ್ಯದಲ್ಲಿಯೇ ಘಟವು ಅಧ್ಯಸ್ತವಷ್ಟೇ ?

**ಭಾವವಿಲಾಸಿನೀ–** ದೂಷಣಾಂತರಂ ಚಾಹ - **ಘಟೇತಿ** ॥ ಉಪಲಕ್ಷಣಂ ಚೈತತ್ । ಭೂತಲಾವಿಚ್ಛಿನ್ನೇ ಚೈತನ್ಯೇ ಘಟ ಇತಿ ಧೀರಿತ್ಯಪಿ ಗ್ರಾಹ್ಯಮ್ । ಸರ್ವಾನುಭವವಿರುದ್ಧತ್ವಾಚ್ಚ ನೇಯಂ ಕಲ್ಪನಾಯುಕ್ತೇತಿ ಭಾವಃ । ಭೂತಲಾವಚ್ಛಿನ್ನಚೈತನ್ಯೇ ಭೂತಲಸ್ಯೈವಾಧ್ಯಸ್ತತ್ವೇನ ಘಟಾದ್ಯವಚ್ಛಿನ್ನ-ಚೈತನ್ಯೇ ಚ ಘಟಾದೀನಾಮೇವಾಧ್ಯಸ್ತತ್ವೇನಾನ್ಯಾಧಿಷ್ಠಾನಚೈತನ್ಯೇ ಚೈತನ್ಯಾಂತರಾಧ್ಯಸ್ತ-ಪದಾರ್ಥಾನಾಂ ಪುನರಧ್ಯಾಸಾಂಗೀಕಾರೇ ಯುಕ್ತಿವಿರೋಧೋಽಪಸಿದ್ಧಾಂತಶ್ಚೇತ್ಯಾಹ - **ಘಟಾದಿಷ್ಠಾನೇತಿ** ॥ ಪರಂ ಕೇವಲಮ್ । ತವ ಮತೇ । ಪರಮಿತ್ಯನೇನ ಭೂತಲಾವಚ್ಛಿನ್ನಚೈತನ್ಯೇ ಘಟಾಧ್ಯಾಸಂ ವ್ಯವಚ್ಛಿನತ್ತಿ । ಅತೋ ಭೂತಲಾವಚ್ಛಿನ್ನಚೈತನ್ಯೇ ಘಟಸ್ಯ ಘಟಾವಚ್ಛಿನ್ನಚೈತನ್ಯೇ ಘಟತ್ವಸ್ಯಾರೋಪೇಽಪಸಿದ್ಧಾಂತ ಇತಿ ಭಾವಃ ॥ ೧೦೬೩ ॥

**ವಿವರಣೆ-** ಘಟೇಘಟತ್ವಂ ಎಂಬ ಜ್ಞಾನವೇ ಎಲ್ಲರಿಗೂ ಬರುತ್ತದೆ ಹೊರತಾಗಿ ಪಟೇಘಟತ್ವಂ ಎನ್ನುವ ಜ್ಞಾನವು ಯಾರಿಗೂ ಬರುವುದಿಲ್ಲ. ಆದರಂತೆ ಭೂತಲೇ ಘಟಃ ಎಂಬಲ್ಲಿಯೂ ಭೂತಲಾವಚ್ಛಿನ್ನಚೈತನ್ಯದಲ್ಲಿ ಘಟವು ಅಧ್ಯಸ್ತ ಎಂಬ ಜ್ಞಾನವು ಯಾರಿಗೂ ಬರುವುದಿಲ್ಲ. ಆದ್ದರಿಂದ ಇಂತಹ ಕಲ್ಪನೆಯು ಸರ್ವಾನುಭವವಿರುದ್ಧವಾದುದರಿಂದ ಅಯುಕ್ತವಾದುದು ಮತ್ತು ನಿನ್ನ ರೀತ್ಯಾ ಭೂತಲಾವಚ್ಛಿನ್ನಚೈತನ್ಯದಲ್ಲಿ ಭೂತಲವು ಅಧ್ಯಸ್ತವಾಗುತ್ತದೆ, ಘಟಾವಚ್ಛಿನ್ನಚೈತನ್ಯದಲ್ಲಿ ಘಟವು ಅಧ್ಯಸ್ತವಾಗುತ್ತದೆ, ಘಟತ್ವಾವಚ್ಛಿನ್ನ-

ಚೈತನ್ಯದಲ್ಲಿ ಘಟತ್ವವು ಅಧ್ಯಸ್ತವಾಗುತ್ತದೆ ಹೊರತು ಭೂತಲಾವಚ್ಛಿನ್ನಚೈತನ್ಯದಲ್ಲಿ ಘಟವು ಅಧ್ಯಸ್ತವಾಗುವುದಿಲ್ಲ. ಘಟಾವಚ್ಛಿನ್ನಚೈತನ್ಯದಲ್ಲಿ ಅಧ್ಯಸ್ತವಾದ ಘಟವನ್ನು ಪುನಃ ಭೂತಲಾವಚ್ಛಿನ್ನಚೈತನ್ಯದಲ್ಲಿ ಅಧ್ಯಾಸವನ್ನು ಮಾಡಿದರೆ ಇಂತಹ ಪ್ರಕ್ರಿಯೆಯು ಯುಕ್ತಿವಿರುದ್ಧವಾಗುತ್ತದೆ. ಆದ್ದರಿಂದ ಭೂತಲೇ ಘಟಃ ಎಂಬಲ್ಲಿ ಭೂತಲಾವಚ್ಛಿನ್ನಚೈತನ್ಯವೇ ಭೂತಲ ಶಬ್ದಾರ್ಥ, ಅದು ಅಧಿಷ್ಠಾನವೇ ಆಗಿದೆ, ಸತ್ಯವೇ ಆಗಿದೆ ಎಂದು ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

**ಘಟತ್ವಂ ತು ಘಟೇ ನೋಚೇತ್ ಸಾ ಧೀಃ ಸ್ಯಾತ್ ಪ್ರಾತಿಭಾಸಿಕೀ ॥೧೦೬೪॥**

**ಅರ್ಥ-** ಘಟೇ = ಘಟದಲ್ಲಿ, ಘಟತ್ವಂ ತು = ಘಟತ್ವವಾದರೂ, ನೋಚೇತ್ = ಇಲ್ಲವೆಂದಾದರೆ, ಸಾ ಧೀಃ = ಘಟದಲ್ಲಿ ಘಟತ್ವವನ್ನು ವಿಷಯೀಕರಿಸುವ ಜ್ಞಾನವು, ಪ್ರಾತಿಭಾಸಿಕೀ ಸ್ಯಾತ್ = ಪ್ರಾತಿಭಾಸಿಕವಾಗಬೇಕಾಗುತ್ತದೆ.

**ಅನುವಾದ-** ಘಟದಲ್ಲಿ ಘಟತ್ವವಿಲ್ಲವೆಂದಾದರೆ ಮತ್ತು ಬ್ರಹ್ಮನಲ್ಲಿ ಘಟತ್ವವು ಇದೆ ಎಂದಾದರೆ, ಪಟದಲ್ಲಿ ಘಟತ್ವವನ್ನು ವಿಷಯೀಕರಿಸುವ ಜ್ಞಾನವು ಹೇಗೆ ಪ್ರಾತಿ-ಭಾಸಿಕವಾಗುತ್ತದೆಯೋ ಅದರಂತೆ ಘಟದಲ್ಲಿ ಘಟತ್ವವನ್ನು ವಿಷಯೀಕರಿಸುವ ಜ್ಞಾನವು ಪ್ರಾತಿಭಾಸಿಕವಾಗಬೇಕು, ಮತ್ತು ಘಟವು ಪ್ರಾತಿಭಾಸಿಕವೇ ಆಗಬೇಕು. ಅದನ್ನು ನೀನು ಅಂಗೀಕರಿಸುವುದಿಲ್ಲ. ಆದ್ದರಿಂದ ಘಟವ್ಯಕ್ತಿಗೆ ಘಟತ್ವಾಧಾರತ್ವವನ್ನು ಹೇಳಬೇಕು.

**ಭಾವವಿಲಾಸಿನೀ–** ಘಟೇ ಘಟತ್ವಮಿತ್ಯತ್ರ ದೂಷಣಾಂತರಂ ಚಾಹ- **ಘಟತ್ವಮಿತಿ** ॥ ಘಟೇ ಘಟವ್ಯಕ್ತೌ । ಘಟೇ ನೋ ಚೇದಿತ್ಯುಪಲಕ್ಷಣಮ್ । ಚೈತನ್ಯೇ ಚೇದಿತ್ಯಪಿ ಗ್ರಾಹ್ಯಮ್ । ಸಾಧೀಃ ಚೈತನ್ಯೇ ಘಟತ್ವಮಿತಿ ಧೀಃ । ಘಟೇ ಪಟತ್ವಮಿತಿ ಧೀವತ್ ಅಸ್ಯಾ ಅಪಿ ಬುದ್ಧೇರಿದಾನೀಮೇವ ಬಾಧ್ಯತ್ವಾತ್ಪ್ರಾತಿಭಾಸಿಕತ್ವಂ ಸ್ಯಾತ್ । ತಚ್ಚಾನುಪಪನ್ನಮ್ । ಅತೋ ಘಟತ್ವಾಧಾರತಾ ಘಟವ್ಯಕ್ತಾವೇವ ಪ್ರತೀಯತ ಇತಿ ಭಾವಃ ॥ ೧೦೬೪ ॥

ಪೃಥುಬುಧ್ನೋದರಾಕಾರವ್ಯಕ್ತಾವೇವ ಘಟತ್ವಧೀಃ ।
ವ್ಯಂಜಕೋ ಹ್ಯಯಮಾಕಾರೋ ವ್ಯಂಗ್ಯಾ ಜಾತಿಶ್ಚ ಸಾ ಕಿಲ ।
ತಸ್ಮಾದನಂತವ್ಯಕ್ತೀನಾಂ ಸತ್ಯತಾ ಯುಕ್ತಿತೋಽಭವತ್ ॥ ೧೦೬೫ ॥

**ಅರ್ಥ-** ಪೃಥುಬುಧ್ನೋದರಾಕಾರವ್ಯಕ್ತಾವೇವ = ಪೃಥುಬುಧ್ನೋದರಾಕಾರವುಳ್ಳ ವ್ಯಕ್ತಿಯಲ್ಲಿಯೇ, ಘಟತ್ವಧೀಃ = ಘಟತ್ವಜ್ಞಾನವು ಉಂಟಾಗುತ್ತದೆ, ಅಯಮಾಕಾರಃ = ಈ ಪೃಥುಬುಧ್ನೋದರಾಕಾರವು, ವ್ಯಂಜಕಃ = ವ್ಯಂಜಕವಾದುದು, ಸಾ ಜಾತಿಶ್ಚ = ಮತ್ತು ಆ ಜಾತಿಯು, ವ್ಯಂಗ್ಯಾ ಕಿಲ = ವ್ಯಂಗ್ಯವಾದುದಷ್ಟೇ, ತಸ್ಮಾತ್ = ಆ ಕಾರಣದಿಂದ,

ಅನಂತವ್ಯಕ್ತೀನಾಂ = ಅನಂತ ವ್ಯಕ್ತಿಗಳಿಗೆ, ಸತ್ಯತಾ = ಸತ್ಯತ್ವವು, ಯುಕ್ತಿತಃ = ಯುಕ್ತಿ-ಬಲದಿಂದ, ಅಭವತ್ = ಉಂಟಾಯಿತು.

**ಅನುವಾದ-** ಪೃಥುಬುಧ್ನೋದರಾಕಾರವುಳ್ಳ ವ್ಯಕ್ತಿಯಲ್ಲಿಯೇ ಘಟತ್ವಜ್ಞಾನವು ಉಂಟಾಗುತ್ತದೆ. ಈ ಪೃಥುಬುಧ್ನೋದರಾಕಾರವು ವ್ಯಂಜಕವಾದುದು ಮತ್ತು ಆ ಘಟತ್ವಾದಿಜಾತಿಯು ವ್ಯಂಗ್ಯವಾದುದಷ್ಟೇ? ಆದ್ದರಿಂದ ಅನಂತವ್ಯಕ್ತಿಗಳಿಗೆ ಸತ್ಯತ್ವವು ಯುಕ್ತಿಬಲದಿಂದಲೇ ಸಿದ್ಧವಾಯಿತು.

**ಭಾವವಿಲಾಸಿನೀ-** ಅತ್ರೈವ ಯುಕ್ತಿಮಾಹ-**ಪೃಥ್ವಿತಿ** ॥ ವ್ಯಂಗ್ಯವ್ಯಂಜಕಯೋರೈಕಾಧಿಕರಣ್ಯ-ನಿಯಮಾತ್ ವ್ಯಂಜಕಸ್ಯ ಚಾಕಾರಸ್ಯ ನಿರಾಕಾರೇ ಬ್ರಹ್ಮಣ್ಯಯೋಗಾದಿತಿ ಭಾವಃ । ಫಲಿತಮಾಹ-**ತಸ್ಮಾದಿತಿ** ॥ ಅಸ್ಯೈವ ವಿವರಣಂ ಯುಕ್ತಿತ ಇತಿ । ಪರಿರೀತ್ಯೈವಾಗತಾಯಾಃ ವ್ಯಾವಹಾರಿಕ-ಜಗದಾರೋಪಾಧಿಷ್ಠಾನತ್ವಾಖ್ಯಯುಕ್ತೇಃ । ಅಯಮತ್ರ ಪ್ರಯೋಗಃ । ಘಟಾದಯೋ ವ್ಯಕ್ತಿಪದಾರ್ಥಾಃ ಪರಮಾರ್ಥಸತ್ಯಾಃ । ವ್ಯಾವಹಾರಿಕಜಗದಾರೋಪಾಧಿಷ್ಠಾನತ್ವಾತ್ । ಬ್ರಹ್ಮವದಿತಿ ॥ ೧೦೬೫ ॥

**ವಿವರಣೆ-** ಜಾತಿಯು ಆಕಾರದಿಂದ ವ್ಯಂಗ್ಯವಾದುದು. ಆದ್ದರಿಂದ ಆಕಾರಜ್ಞಾನವು ಬಂದರೆ ಅದರಿಂದ ವ್ಯಂಗ್ಯವಾದ ಜಾತಿಯ ಜ್ಞಾನವು ಬರುತ್ತದೆ. ಆಕಾರಜ್ಞಾನವಂತೂ ನಿರಾಕಾರನಾದ ಬ್ರಹ್ಮನಲ್ಲಿ ಬರಲು ಸಾಧ್ಯವಿಲ್ಲ. ಆಕಾರವುಳ್ಳ ವ್ಯಕ್ತಿಯಲ್ಲಿಯೇ ಆಕಾರದ ಜ್ಞಾನವು ಬರಬೇಕು. ಆದ್ದರಿಂದ ಆ ಆಕಾರವು ಸತ್ಯವೆಂದಾಯಿತು. ಅದರಂತೆ, ಆಕಾರವ್ಯಂಗ್ಯವಾದ ಜಾತಿಯು ಸತ್ಯವೆಂದೇ ಆಯಿತು. ಆದ್ದರಿಂದ ಅನಂತವ್ಯಕ್ತಿಗಳು ಸತ್ಯವೆಂದು ಯುಕ್ತಿಬಲದಿಂದ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ತದ್ವಿಶೇಷವಿದೋ ಧೀತ್ವಾಜ್ಞಾತಿಧೀರಪಿ ನ ಭ್ರಮಃ ।
ತತ್ರೈವ ವಿದ್ಯಮಾನಾರ್ಥಧೀತ್ವಾದಪಿ ನ ಸ ಭ್ರಮಃ ॥ ೧೦೬೬ ॥

**ಅರ್ಥ-** ತತ್ = ಆ ಕಾರಣದಿಂದ, ವಿಶೇಷವಿದಃ = ವಿಶೇಷಜ್ಞನ, ಧೀತ್ವಾತ್ = ಜ್ಞಾನವಾದುದರಿಂದ, ಜಾತಿಧೀರಪಿ = ಜಾತಿಜ್ಞಾನವೂ ಸಹ, ನ ಭ್ರಮಃ = ಭ್ರಾಂತಿಯಲ್ಲ, ತತ್ರೈವ = ಅಲ್ಲಿಯೇ, ವಿದ್ಯಮಾನಾರ್ಥಧೀತ್ವಾದಪಿ = ವಿದ್ಯಮಾನವಾದ ಅರ್ಥದ ಜ್ಞಾನವಾದುದರಿಂದಲೂ, ಸಃ = ಜಾತಿಜ್ಞಾನವು, ನ ಭ್ರಮಃ = ಭ್ರಮವಲ್ಲ.

**ಅನುವಾದ-** ವ್ಯಂಜಕವಾದ ಆಕಾರವಿಶೇಷವನ್ನು ತಿಳಿದವನ ಜ್ಞಾನವಾದುದರಿಂದ ಘಟತ್ವಜಾತಿಜ್ಞಾನವು ಭ್ರಾಂತಿಯಲ್ಲ. ಅಲ್ಲಿಯೇ ವಿದ್ಯಮಾನವಾದ ವಸ್ತುವಿನ ಜ್ಞಾನವಾದುದರಿಂದಲೂ ಅದು ಭ್ರಾಂತಿಯಲ್ಲ.

**ಭಾವವಿಲಾಸಿನೀ-** ಜಾತೇರಪಿ ಸತ್ಯತ್ವೇಽನುಮಾನಮಾಹ - **ತದ್ವಿಶೇಷೇತಿ** ॥ ತದ್ವಿಶೇಷವಿದಃ ಜಾತಿವ್ಯಂಜಕಾಕಾರವಿಶೇಷವಿದಃ । ಅಯಂ ಘಟಃ ಇದಂ ಘಟತ್ವಮಿತ್ಯಾದಿಪ್ರತೀತೌ ತ್ವದ್ರೀತ್ಯಾ

ಘಟಘಟತ್ವಭ್ರಮಾಧಿಷ್ಠಾನಚೈತನ್ಯೋಲ್ಲೇಖಸಂಭವೇಪಿ ಘಟೇ ಘಟತ್ವಮಿತ್ಯಾದೌ ತ್ವದ್ರೀತ್ಯಾ ಭ್ರಮೇಘಟಾಂಶಾನುಭವೇ ಘಟತ್ವಾಂಶಾನುಭವೇ ಚಾನುಲ್ಲಿಖ್ಯಮಾನಸ್ಯಾತ ಏವ ಸಕಲಭ್ರಮಾನನುಸ್ಯೂತಸ್ಯ ಚೈತನ್ಯಸ್ಯ ಸರ್ವತ್ರಾಪಿ ಭ್ರಮಾಧಿಷ್ಠಾನತ್ವಾಯೋಗೇನ ಘಟಾದಿಪ್ರತೀತೇಃ ಕ್ವಾಪಿ ಭ್ರಮತ್ವಯೋಗಾಚ್ಚ । ಕಥಂ ತರ್ಹೀದಂ ರಜತಮಿತಿ ಭ್ರಮಾನಂತರಮ್ ಅತ್ರ ಭೂತಲೇ ರಜತಮಿತಿ ಪ್ರತೀತೇರ್ಭ್ರಮತ್ವಮ್ । ಅಧಿಷ್ಠಾನಾಭಿಮತ ಶುಕ್ತೇರತ್ರಾಪ್ರತೀತೇಃ ಕಥಂ ವಾಽತ್ರೈವ ವ್ಯಭಿಚರಿತಸ್ಯ ಶುಕ್ತಿಕಾಶಕಲಸ್ಯ ತತ್ರಾಧಿಷ್ಠಾನತ್ವಮಿತಿ ಚೇತ್ ನ । ಅತ್ರ ರಜತತ್ವಮಿತ್ಯಾದಿಧರ್ಮಭ್ರಮೇ ಸಪ್ತಮ್ಯಂತೇದಂ ಪದೋದಿತಶುಕ್ತ್ಯಾದೇರಿವ ರಜತಸಂಸರ್ಗಭ್ರಮೇಽಸ್ಮಿನ್ ಭೂತಲಸ್ಯೈವಾಧಿಷ್ಠಾನತ್ವಸಂಭವಾತ್ । ಇಯಾಂಸ್ತು ವಿಶೇಷಃ । ಶುಕ್ತೇ ರಜತತ್ವಾನರ್ಹತ್ವಾತ್ತತ್ರೇದಂ ಪದೇನೈವ ಗ್ರಹಣಮ್ । ಭೂತಲಸ್ಯ ತು ರಜತಸಂಸರ್ಗಾರ್ಹತ್ವಾದ್ವಿಶಿಷ್ಯೈವ ಗ್ರಹಣಮಿತಿ । ರಜತಾದಿತಾದಾತ್ಮ್ಯಭ್ರಮಮಾತ್ರೇ ರಜತತ್ವಾದಿಸಂಸರ್ಗಭ್ರಮಮಾತ್ರೇ ಚ ಶುಕ್ತ್ಯಾದೇರಧಿಷ್ಠಾನತ್ವಾಂಗೀಕಾರೇಣ ವಿಜಾತೀಯೇಽಸ್ಮಿನ್ ಭ್ರಮೇ ಸರ್ಪಭ್ರಮ ಇವ ತದಭಾವಸ್ಯ ವ್ಯಭಿಚಾರಾನಾಪಾದಕತ್ವಾಚ್ಚ । ತವ ತು ವ್ಯಾವಹಾರಿಕಭ್ರಮಮಾತ್ರೇ ಚೈತನ್ಯಸ್ಯೈವಾಧಿಷ್ಠಾನತ್ವ ನಿಯಮಾಂಗೀಕಾರೇಣ ಕ್ವಚಿತ್ ವ್ಯಭಿಚಾರೇ ಅಧಿಷ್ಠಾನತ್ವಸ್ಯೈವ ಭಂಗಾತ್ ಭೂತಲಾದೇರಧಿಷ್ಠಾನತ್ವಾಸಂಭವಾಚ್ಚ । ಶುಕ್ತಿಶ್ವೇತಿವ್ನ ಇವ ಭೂತಲತ್ವಾದೇರ್ವಿಶೇಷಸ್ಯ ಜ್ಞಾನೇಽಪಿ ಭ್ರಮವಿರೋಧಿಶುಕ್ತಿತ್ವಾಜ್ಞಾನವದ್ಭೂತಲ ನಿಷ್ಠರಜತಸಂಸರ್ಗಭ್ರಮವಿರೋಧಿರಜತಾನಾಧಾರತ್ವಾಜ್ಞಾನಮಾತ್ರೇಣಾಧಿಷ್ಠಾನ ಸಾಮಾನ್ಯಜ್ಞಾನಸ್ಯಾಪಿ ಸಂಭವಾತ್।

ಏವಂ ಪರೋಕ್ಷಾನುಮಿತ್ಯಾದಿಭ್ರಮೇಽಪಿ ಪರ್ವತಾದೇರೇವಾಧಿಷ್ಠಾನತ್ವಂ ಬೋಧ್ಯಮ್ ।

ಯದ್ವಾ ತಸ್ಯಾಃ ಪ್ರತೀತೇರಧಿಷ್ಠಾನಭೂತಶುಕ್ತಿಭೂತಲಸಂಸರ್ಗೇ ರಜತಸಂಸರ್ಗತ್ವಾರೋಪ ರೂಪತಯಾ ತಸ್ಯ ಶುಕ್ತಿಭೂತಲಸಂಸರ್ಗಸ್ಯೈವಾಧಿಷ್ಠಾನತ್ವೇನ ಭ್ರಮತ್ವಸಂಭವಾತ್ । ವಿದ್ಯಮಾನಸ್ಯ ಪ್ರಮಾಂ ಪ್ರತಿರುಧ್ಯ ತತ್ರೈವ ಭ್ರಮಂ ಜನಯನ್ಹಿ ದೋಷಃ । ಅತೋ ವಿದ್ಯಮಾನಶುಕ್ತಿಭೂತಲಸಂಸರ್ಗಸ್ಯ ವಿಶಿಷ್ಯ ಪ್ರಮಾಂ ಪ್ರತಿರುಧ್ಯ ತತ್ರೈವ ರಜತಸಂಸರ್ಗತ್ವಭ್ರಮೋಽವಶ್ಯಂ ವಕ್ತವ್ಯಃ । ಅನ್ಯಥಾ ದೋಷಸ್ಯ ಸಾಮಾನ್ಯಪ್ರತೀತ್ಯಪ್ರತಿಬಂಧಕತಯೇಂದ್ರಿಯಸನ್ನಿಕೃಷ್ಟಶುಕ್ತಿಭೂತಲಸಂಸರ್ಗಸ್ಯೇದಂ ತ್ವೇನಾರೋಪ್ಯಮಾಣ ರಜತಭೂತಲಸಂಸರ್ಗಸ್ಯ ಚಾನ್ಯೇನೈವಾಕಾರೇಣ ವಿಶಿಷ್ಯ ಪ್ರತೀತಿರಿತಿ ಸರ್ವಾನುಭವವಿರುದ್ಧಸ್ಯ ಪುರೋವರ್ತ್ಯತ್ರ ರಜತಮಾತ್ರೇತಿ ವಿಶಕಲಿತಾಧಾರಾಧೇಯಭಾವದ್ವಯಸ್ಯಾಪಿ ಪ್ರತೀತಿಪ್ರಸಂಗಃ ।

ಯದಿ ಚ ಪುರೋವರ್ತಿನ ಏವ ರಜತತ್ವೇನೋಲ್ಲೇಖಾನ್ನ ತಸ್ಯ ಪೃಥಗುಲ್ಲೇಖಃ । ತರ್ಹಿ ತತ್ಸಂಸರ್ಗಸ್ಯೈವ ರಜತಸಂಸರ್ಗತಯೋಲ್ಲೇಖೋ ನಾನ್ಯಸ್ಯೇತ್ಯನಿಚ್ಛತಾಪ್ಯಂಗೀಕಾರ್ಯಮ್ । ಏವಮನ್ಯತ್ರಾಪ್ಯಪರೋಕ್ಷ ಭ್ರಮೇ ನಿರಧಿಷ್ಠಾನಕ ಭ್ರಮಾಭಾವಾದಧಿಷ್ಠಾನಸಂಸರ್ಗೇಽಧ್ಯಸ್ತಸಂಸರ್ಗಾರೋಪ ಇತ್ಯೂಹ್ಯಮ್ । ಪರೋಕ್ಷಸಂಸರ್ಗಭ್ರಮೇ ತು ಅನುಮಾನಸ್ಥಲೇಽಸಲ್ಲಿಂಗಪರಾಮರ್ಶ ಶಕ್ತ್ಯೈವ ಪ್ರತೀತಮನಾಧೇಯಪ್ರತಿಯೋಗಿಕಂ ಸತ್ಯಂ ಪಕ್ಷನಿಷ್ಠಮಾಧಾರತ್ವಮ್ ಅಧಿಷ್ಠಾನತಯಾ ಸಾಮಾನ್ಯತ ಉಲ್ಲಿಖ್ಯೈವ ತತ್ರಾಪರಸಂಬಂಧಿತಯಾಽವಿದ್ಯಮಾನಸಾಧ್ಯಾಂಶ-

ಮುಲ್ಲಿಖಂತ್ಯನುಮಿತಿ ಸ್ತದಂಶಮಾತ್ರೇ ಭ್ರಮರೂಪಾ । ಶಬ್ದಸ್ಥಲೇಽಪ್ಯನ್ವಿತಾಭಿಧಾಯಕ-ಶಶಾದಿಪದಶಕ್ತ್ಯಾ ಬೋಧಿತಂ ಸತ್ಯಂ ಶಶಾದಿನಿಷ್ಠಂ ಯೋಗ್ಯೇತರಾನ್ವಯಮಧಿಷ್ಠಾನತಯಾ ಸಾಮಾನ್ಯತ ಉಲ್ಲಿಖ್ಯೈವ ತತ್ರಾಪರಸಂಬಂಧಿತಯಾಽಯೋಗ್ಯಶೃಂಗಾದ್ಯರ್ಥಮುಲ್ಲಿಖಂತೀ ಶಾಬ್ದೀಪ್ರತೀತಿಸ್ತದಂಶಮಾತ್ರೇ ಭ್ರಮರೂಪಾ । ಸರ್ವಥಾ ಸತ್ಯಂ ಸಮಗ್ರಸಂಸರ್ಗಂ ಸಂಸರ್ಗಾಂಶಂ ವಾಽನವಲಂಬ್ಯ ನಕೋಽಪಿ ಸಂಸರ್ಗಭ್ರಮಃ । ಭೂತಲೇ ಘಟ ಇತ್ಯಾದೌ ತು ತ್ವದ್ರೀತ್ಯಾಖ್ಯ ವ್ಯಾವಹಾರಿಕ ಸಂಸರ್ಗಾರೋಪಸ್ಯಾಸ್ಯಾಧಿಷ್ಠಾನತ್ವಾರ್ಹಪಾರಮಾರ್ಥಿಕ ಸಂಸರ್ಗಾಂತರಸ್ಯಾಭಾವೇನಾಸಂಭವಾತ್ ಅಸ್ಯೈವಾನುಭವಸ್ಯೈವ ಪ್ರಮಾತ್ವೇ ವಕ್ತವ್ಯೇ ಸಂಸರ್ಗಪ್ರಮಾಯಾಸ್ಸಂಸರ್ಗಿಪ್ರಮಾಘಟಿತತ್ವನಿಯಮೇನ ಪ್ರಮಾವಿಷಯ ಭೂತಲ-ಘಟಾದೇರಿದಂ ಭೂತಲಮಯಂ ಘಟ ಇತ್ಯಾದಾವಪ್ಯಾರೋಪಾಸಂಭವೇನ ಚೈತನ್ಯಾಧಿಷ್ಠಾನತ್ವ ವಾರ್ತಾಯಾ ನಿರ್ಮೂಲತ್ವಾಪರಿಹಾರಾತ್ । ಸತ್ಯಪದಾರ್ಥಾಂತರಸನ್ನಿಕರ್ಷರಹಿತೇ ಕೇವಲ-ಭೂತಲೇ ಸನ್ನಿಕರ್ಷಭ್ರಮಸ್ಯ ಕ್ವಾಪ್ಯದರ್ಶನೇನ ಸನ್ನಿಕರ್ಷಭ್ರಮೇ ಸತ್ಯಸನ್ನಿಕರ್ಷಪೂರ್ವಕತ್ವಸ್ಯಾಪಿ ನಿಯತತ್ವೇನೋಕ್ತದೋಷಾನುದ್ಧಾರೋಽಪಿ ದ್ರಷ್ಟವ್ಯಃ । ಅತ್ರೇಮೌ ಪ್ರಯೋಗೌ ಭವತಃ । ಘಟೇ ಘಟತ್ವಮಿತಿ ಧೀಃ ನ ಘಟತ್ವಜಾತಿಭ್ರಮಃ । ಪೃಥುಬುಧ್ನೋದರಾಕಾರವ್ಯಕ್ತಜಾತಿ-ಪ್ರತೀತಿತ್ವಾತ್ । ಘಟತ್ವವತ್ಯೇವ ಘಟತ್ವಪ್ರತೀತಿತ್ವಾತ್ । ವ್ಯತಿರೇಕೇಣ ಪಾಷಾಣೇ ಘಟತ್ವಪ್ರತೀತಿವತ್ ॥ ೧೦೬೬ ॥

**ವಿವರಣೆ-** ಇಲ್ಲಿ ಅನುಮಾನದಿಂದ ಜಾತಿಗೂ ಸತ್ಯತ್ವವನ್ನು ಸಾಧನೆ ಮಾಡುತ್ತಾರೆ. 'ಅಯಂ ಘಟಃ' 'ಇದಂ ಘಟತ್ವಂ' ಇತ್ಯಾದಿ ಪ್ರತೀತಿಗಳಲ್ಲಿ ನಿನ್ನ ರೀತಿಯಿಂದ ಕ್ರಮವಾಗಿ ಘಟಭ್ರಮ ಮತ್ತು ಘಟತ್ವಭ್ರಮಗಳಿಗೆ ಅಧಿಷ್ಠಾನವಾದ ಚೈತನ್ಯದ ಉಲ್ಲೇಖವನ್ನು 'ಅಯಂ' ಮತ್ತು 'ಇದಂ' ಎಂಬ ಪದಗಳಿಂದ ಮಾಡಬಹುದಾದರೂ 'ಘಟೇ ಘಟತ್ವಂ' ಇತ್ಯಾದಿ ಭ್ರಮದಲ್ಲಿ ಘಟಾಂಶದ ಅನುಭವದಲ್ಲಾಗಲೀ, ಘಟತ್ವಾಂಶದ ಅನುಭವದಲ್ಲಾಗಲೀ, ಚೈತನ್ಯದ ಉಲ್ಲೇಖವಿಲ್ಲ. ಆದ್ದರಿಂದ ಸಕಲಭ್ರಮಗಳಲ್ಲಿಯೂ ಚೈತನ್ಯವು ಅನುಸ್ಯೂತವಾಗಿ ತೋರುವುದರಿಂದ ಅದಕ್ಕೆ ಎಲ್ಲ ಭ್ರಮಗಳಲ್ಲಿಯೂ ಅಧಿಷ್ಠಾನತ್ವವು ಕೂಡುತ್ತದೆ ಎಂಬುದು ಸರಿಯಲ್ಲ. ಆದ್ದರಿಂದ ಘಟಾದಿಪ್ರತೀತಿಗೆ ಎಲ್ಲಿಯೂ ಭ್ರಮತ್ವವೇ ಕೂಡುವುದಿಲ್ಲ. ಈ ನಮ್ಮ ಸಮಾಧಾನಕ್ಕೆ ಅದ್ವೈತಿಗಳು ಹೀಗೆ ಆಕ್ಷೇಪಿಸುತ್ತಾರೆ. ಹಾಗಾದರೆ 'ಇದಂ ರಜತಂ' ಎಂಬ ಭ್ರಮೆಯ ನಂತರ 'ಅತ್ರ ಭೂತಲೇ ರಜತಂ' ಎಂಬ ಪ್ರತೀತಿಯು ಬರುತ್ತದೆ. ಇದೂ ಕೂಡ ಭ್ರಮವೇ. ಇಲ್ಲಿ ಅಧಿಷ್ಠಾನಾಭಿಮತವಾದ ಶುಕ್ತಿಯ ಉಲ್ಲೇಖವಿಲ್ಲ. ಆದ್ದರಿಂದ ಎಲ್ಲ ಭ್ರಮಗಳಲ್ಲಿಯೂ ಅಧಿಷ್ಠಾನದ ಉಲ್ಲೇಖವಿರಬೇಕೆಂಬ ನಿಯಮಕ್ಕೆ ಈ ಭ್ರಮದಲ್ಲಿಯೇ ವ್ಯಭಿಚಾರವು ಬರುವುದರಿಂದ 'ಇದಂ ರಜತಂ' ಎಂಬ ಭ್ರಮದಲ್ಲಿಯೂ ಶುಕ್ತಿಗೆ ಅಧಿಷ್ಠಾನತ್ವವು ಕೂಡುವುದಿಲ್ಲ. ಶುಕ್ತ್ಯವಚ್ಛಿನ್ನವಾದ ಚೈತನ್ಯಕ್ಕೆ ಅಧಿಷ್ಠಾನತ್ವವು ಕೂಡುತ್ತದೆ. ಚೈತನ್ಯದ ಉಲ್ಲೇಖವು ಇರಬೇಕೆಂಬ ನಿಯಮವಿಲ್ಲ ಎಂದು. ಇದು ಅದ್ವೈತಿಗಳ ಆಕ್ಷೇಪ. ಇದಕ್ಕೆ ನಮ್ಮ ಉತ್ತರವು ಹೀಗಿದೆ. 'ಅತ್ರ ರಜತತ್ವಂ' ಎಂಬ ಆಕಾರವನ್ನು ಹೊಂದಿದ

ಧರ್ಮಭ್ರಮದಲ್ಲಿ ಸಪ್ತಮ್ಯಂತವಾದ ಇದಂ ಪದದಿಂದ ವಾಚ್ಯವಾದ ಶುಕ್ತಿಗೆ ಅಧಿಷ್ಠಾನತ್ವವು ಇರುವಂತೆ 'ಅತ್ರಭೂತಲೇ ರಜತಂ' ಎಂಬ ರಜತಸಂಸರ್ಗಭ್ರಮದಲ್ಲಿಯೂ ಭೂತಲಕ್ಕೆ ಅಧಿಷ್ಠಾನತ್ವವು ಕೂಡುತ್ತದೆ. ಇಷ್ಟು ಮಾತ್ರ ವಿಶೇಷ. ಶುಕ್ತಿಯು ರಜತತ್ವಕ್ಕೆ ಅನರ್ಹವಾದುದರಿಂದ ಅಲ್ಲಿ ಶುಕ್ತಿಯನ್ನು ಕೇವಲ ಇದಂ ಪದದಿಂದಲೇ ಉಲ್ಲೇಖಿಸುತ್ತೇವೆ. ಭೂತಲಕ್ಕಾದರೋ ರಜತಸಂಸರ್ಗಯೋಗ್ಯತ್ವವು ಇರುವುದರಿಂದ ವಿಶಿಷ್ಟ ಭೂತಲ ಎಂದೇ ಗ್ರಹಣಮಾಡುತ್ತೇವೆ. ರಜತತಾದಾತ್ಮ್ಯಭ್ರಮದಲ್ಲಿಯೂ, ರಜತಸಂಸರ್ಗಭ್ರಮದಲ್ಲಿಯೂ, ಶುಕ್ತಿಗೆ ಅಧಿಷ್ಠಾನತ್ವವನ್ನು ಅಂಗೀಕಾರಮಾಡುತ್ತೇವೆ. 'ಅತ್ರ ಭೂತಲೇ ರಜತಂ' ಎಂಬುದು ಅವುಗಳಿಗಿಂತ ವಿಲಕ್ಷಣವಾದ ಭ್ರಮ. ಈ ವಿಲಕ್ಷಣವಾದ ಭ್ರಮದಲ್ಲಿ ಅಧಿಷ್ಠಾನದ ಉಲ್ಲೇಖವಿಲ್ಲ ಎಂಬ ಕಾರಣದಿಂದ ತಾದಾತ್ಮ್ಯಭ್ರಮ ಮತ್ತು ಸಂಸರ್ಗಭ್ರಮಗಳಲ್ಲಿ ನಾವು ಅಂಗೀಕರಿಸಿದ ಅಧಿಷ್ಠಾನಜ್ಞಾನಕಾರಣತ್ವಕ್ಕೆ ವ್ಯಭಿಚಾರವು ಉಂಟಾಗುವುದಿಲ್ಲ. ರಜತ ತಾದಾತ್ಮ್ಯಭ್ರಮ ಅಥವಾ ರಜತತ್ವ ಸಂಸರ್ಗಭ್ರಮದಲ್ಲಿ ಯಾವುದು ಅಧಿಷ್ಠಾನವೋ ಅದು ಅದಕ್ಕಿಂತ ವಿಜಾತೀಯವಾದ ಸರ್ಪಭ್ರಮದಲ್ಲಿ ಅಧಿಷ್ಠಾನವಲ್ಲವೆಂಬ ಕಾರಣದಿಂದ ವ್ಯಭಿಚಾರವು ಬರುವುದಿಲ್ಲವಷ್ಟೆ? ನಿನಗೆ ಮಾತ್ರ ಎಲ್ಲಾ ವ್ಯಾವಹಾರಿಕಭ್ರಮಗಳಲ್ಲಿಯೂ ಚೈತನ್ಯವೇ ಅಧಿಷ್ಠಾನ ಎಂಬ ನಿಯಮವನ್ನು ಅಂಗೀಕರಿಸುವುದರಿಂದ ಒಂದು ಕಡೆ ವ್ಯಭಿಚಾರ ಬಂದರೂ ಅಧಿಷ್ಠಾನತ್ವಕ್ಕೇ ಭಂಗ ಬರುವುದರಿಂದ ಭೂತಲಾದಿಗಳು ಅಧಿಷ್ಠಾನವಾಗಲು ಸಾಧ್ಯವಿಲ್ಲ. ಭೂತಲದಲ್ಲಿ ಭೂತಲತ್ವರೂಪವಿಶೇಷವಾದ ಜ್ಞಾನ ಉಂಟಾದರೂ ಅದು ಶುಕ್ತಿಯಲ್ಲಿ ಶ್ವೇತತ್ವಜ್ಞಾನವು ಹೇಗೆ ಭ್ರಮವಿರೋಧಿಯಲ್ಲವೋ ಅದರಂತೆ ಭೂತಲದಲ್ಲಿ ಭೂತಲತ್ವಜ್ಞಾನವೂ ರಜತಭ್ರಮಕ್ಕೆ ವಿರೋಧಿಯಲ್ಲ. ಶುಕ್ತಿರಜತಭ್ರಮದಲ್ಲಿ ಭ್ರಮವಿರೋಧಿ ಯಾದುದು ಶುಕ್ತಿತ್ವ. ಅದರ ಅಜ್ಞಾನವೇ ಭ್ರಮಕ್ಕೆ ಕಾರಣ. ಭೂತಲೇ ರಜತಂ ಎಂಬಲ್ಲಿ ಭೂತಲನಿಷ್ಠರಜತಸಂಸರ್ಗಭ್ರಮವಿರೋಧಿಯಾದುದು ಭೂತಲದಲ್ಲಿ ರಜತಾನಾಧಾರತ್ವ. ಅದರ ಅಜ್ಞಾನವಿರುವುದರಿಂದ ಭೂತಲತ್ವೇನ ಜ್ಞಾನವು ಭ್ರಮ-ವಿರೋಧಿಯಲ್ಲವಾದ್ದರಿಂದ ಅದು ಸಾಮಾನ್ಯಜ್ಞಾನವೆನಿಸುತ್ತದೆ. ಆದ್ದರಿಂದ ಶುಕ್ತಿಯಲ್ಲಿ ಶ್ವೇತತ್ವಜ್ಞಾನ ಬಂದರೂ ಹೇಗೆ 'ಇದಂ ರಜತಂ' ಎಂಬ ಭ್ರಾಂತಿಯು ಬರುತ್ತದೆಯೋ ಹಾಗೆ ಭೂತಲದಲ್ಲಿ ಭೂತಲತ್ವಜ್ಞಾನವುಂಟಾದರೂ 'ಭೂತಲೇ ರಜತಂ' ಎಂಬ ಭ್ರಾಂತಿಯು ಬರಬಹುದು. ಇದರಂತೆ ಪರೋಕ್ಷವಾದ ಅನುಮಿತ್ಯಾದಿ ಭ್ರಾಂತಿಯ ಸ್ಥಳದಲ್ಲಿಯೂ ಪರ್ವತಾದಿಗಳನ್ನೇ ಅಧಿಷ್ಠಾನವೆಂದು ತಿಳಿಯಬೇಕು.

ಅಥವಾ 'ಭೂತಲೇ ರಜತಂ' ಎಂಬ ಭ್ರಮಕ್ಕೆ ಭೂತಲವು ಅಧಿಷ್ಠಾನವಲ್ಲ. ಭೂತಲಶುಕ್ತಿಸಂಸರ್ಗವು ಅಧಿಷ್ಠಾನವೆಂದು ಹೇಳುತ್ತೇವೆ. ಆ ಸಂಸರ್ಗದಲ್ಲಿ ರಜತಸಂಸರ್ಗತ್ವವು ಆರೋಪಿಸಲ್ಪಡುತ್ತದೆ. ಶುಕ್ತಿಭೂತಲಸಂಸರ್ಗವು ಶುಕ್ತಿಭೂತಲಸಂಸರ್ಗತ್ವೇನ ಉಲ್ಲೇಖಿಸಲ್ಪಡದೇ ಇರುವುದರಿಂದ ಭ್ರಮವು ಉಪಪನ್ನವಾಗುತ್ತದೆ. ವಿದ್ಯಮಾನವಾದ ವಸ್ತುವಿನ ಭ್ರಮೆಯನ್ನು ಪ್ರತಿಬಂಧಿಸಿ ಅಲ್ಲಿಯೇ ಭ್ರಾಂತಿಯನ್ನುಂಟು ಮಾಡುವುದು

ದೋಷವಷ್ಟೆ? ಆದ್ದರಿಂದ ವಿದ್ಯಮಾನವಾದ ಶುಕ್ತಿಭೂತಲದ ಸಂಸರ್ಗದ ಪ್ರಮೆಯನ್ನು ವಿಶೇಷವಾಗಿ ಪ್ರತಿಬಂಧಿಸಿ ಅಲ್ಲಿಯೇ ರಜತಸಂಸರ್ಗತ್ವಭ್ರಮೆಯನ್ನು ಅವಶ್ಯವಾಗಿ ಅಂಗೀಕರಿಸಬೇಕು. ಇಲ್ಲದಿದ್ದರೆ, ದೋಷವು ಸಾಮಾನ್ಯಪ್ರತೀತಿಗೆ ಪ್ರತಿಬಂಧಕವಾಗುವುದಿಲ್ಲ ವಾದ್ದರಿಂದ ಹಿಂದೆಯೇ ಸನ್ನಿಕೃಷ್ಟವಾದ ಶುಕ್ತಿಭೂತಲಸಂಸರ್ಗವನ್ನೂ ಮತ್ತು ಇದಂತ್ವೇನ ಆರೋಪ್ಯಮಾಣವಾದ ರಜತಭೂತಲಸಂಸರ್ಗವನ್ನೂ ಶುಕ್ತಿಭೂತಲಸಂಸರ್ಗತ್ವೇನ ಮತ್ತು ರಜತಭೂತಲಸಂಸರ್ಗತ್ವೇನ ವಿಶೇಷಾಕಾರದಿಂದ ಪ್ರತೀತವಾಗುವುವೆಂದು ಒಪ್ಪಿದರೆ, 'ಇದಂ ಅತ್ರ', 'ರಜತಂ ಅತ್ರ' ಎಂಬ ಪ್ರತ್ಯೇಕವಾದ ಎರಡು ಆಧಾರಾಧೇಯಭಾವಗಳು ಪ್ರತೀತವಾಗಬೇಕಾದ ಪ್ರಸಂಗವು ಬರುತ್ತದೆ. ಇದು ಸರ್ವಾನುಭವ ವಿರುದ್ಧವಾದುದು. ಪುರೋವರ್ತಿಯನ್ನೇ ರಜತತ್ವೇನ ಉಲ್ಲೇಖಮಾಡುವುದರಿಂದ 'ಇದಂ ಅತ್ರ', 'ರಜತಂ ಅತ್ರ' ಎಂದು ಪೃಥಗುಲ್ಲೇಖವು ಬೇಕಾಗಿಲ್ಲ ಎಂದು ಹೇಳುವುದಾದರೆ, ಪುರೋವರ್ತಿಸಂಸರ್ಗವನ್ನೇ ರಜತಸಂಸರ್ಗತ್ವೇನ ಈ ಭ್ರಮವು ಉಲ್ಲೇಖಮಾಡುತ್ತದೆ, ಬೇರೆಯದನ್ನು ಉಲ್ಲೇಖಮಾಡುವುದಿಲ್ಲ ಎಂದು ನಿನಗೆ ಇಷ್ಟವಿಲ್ಲದಿದ್ದರೂ ಅಂಗೀಕರಿಸ ಬೇಕಾಗುತ್ತದೆ. ಇದರಂತೆ ಬೇರೆ ಅಪರೋಕ್ಷಭ್ರಮಸ್ಥಳಗಳಲ್ಲಿಯೂ ಅಧಿಷ್ಠಾನಸಂಸರ್ಗದಲ್ಲಿ ಅಧ್ಯಸ್ತಸಂಸರ್ಗಾರೋಪವನ್ನು ಅಂಗೀಕರಿಸಬೇಕು ಏಕೆಂದರೆ ನಿರಧಿಷ್ಠಾನಕವಾದ ಭ್ರಮವು ಎಂದೂ ಉಪಪನ್ನವಾಗುವುದಿಲ್ಲ.

ಅನುಮಿತ್ಯಾದಿಗಳು ಪರೋಕ್ಷಸ್ಥಳಗಳು. ಅನುಮಿತಿರೂಪವಾದ ಭ್ರಮದಲ್ಲಿ ಅಸಲ್ಲಿಂಗಪರಾಮರ್ಶದ ಶಕ್ತಿಯಿಂದಲೇ ಪಕ್ಷದಲ್ಲಿ ಪ್ರತೀತವಾದ ಪಕ್ಷನಿಷ್ಠವಾದ ಪದಾರ್ಥನಿರೂಪಿತವಾದ ಪಕ್ಷನಿಷ್ಠವಾದ ಆಧಾರತ್ವವೇ ಅಧಿಷ್ಠಾನ. ಅದನ್ನು ಸಾಮಾನ್ಯತಯಾ ಉಲ್ಲೇಖಮಾಡಿ ಆ ಆಧಾರತ್ವಕ್ಕೆ ಪ್ರತಿಸಂಬಂಧಿಯ ಅಪೇಕ್ಷೆಯಿರುವುದರಿಂದ ಪ್ರತಿಸಂಬಂಧಿ - ಯಾಗಿ ಅವಿದ್ಯಮಾನವಾದ ಸಾಧ್ಯಾಂಶವನ್ನು ಉಲ್ಲೇಖಿಸುವ ಅನುಮಿತಿಯು ಪ್ರತಿಸಂಬಂಧಿ ಸಾಧ್ಯಾಂಶದಲ್ಲಿ ಮಾತ್ರ ಭ್ರಮವಾಗುತ್ತದೆ. ಶಬ್ದಸ್ಥಳದಲ್ಲಿಯೂ ಸಹ ಅನ್ವಿತಾಭಿಧಾಯಿಯಾದ ಶಶಾದಿಪದಶಕ್ತಿಯಿಂದ ಬೋಧಿತವಾದ ಸತ್ಯವಾದ, ಶಶಾದಿನಿಷ್ಠವಾದ, ಯೋಗ್ಯೇತರಾನ್ವಯವೇ ಅಧಿಷ್ಠಾನ. ಆ ಅನ್ವಯವನ್ನು ಸಾಮಾನ್ಯತಃ ಉಲ್ಲೇಖಮಾಡಿ ಆ ಅನ್ವಯಕ್ಕೆ ಪ್ರತಿಸಂಬಂಧಿಯಾಗಿ ಪ್ರತಿಸಂಬಂಧ ಅಯೋಗ್ಯವಾದ ಶೃಂಗಾದಿಗಳನ್ನು ಉಲ್ಲೇಖಮಾಡುವ ಶಾಬ್ದಬೋಧವು ಅನ್ವಯಪ್ರತಿಸಂಬಂಧಿಯಾದ ಶೃಂಗಾಂಶದಲ್ಲಿ ಭ್ರಮರೂಪವಾಗುತ್ತದೆ. ಒಟ್ಟಿನಲ್ಲಿ ಸತ್ಯವಾದ, ಸಮಗ್ರಸಂಸರ್ಗವನ್ನು ಅಥವಾ ಅಂತಹ ಸಂಸರ್ಗದ ಏಕದೇಶವನ್ನು ಅವಲಂಬಿಸದೆ, ಎಲ್ಲಿಯೂ ಭ್ರಮವು ಉಂಟಾಗುವುದಿಲ್ಲ. 'ಭೂತಲೇ ಘಟಃ' ಇತ್ಯಾದಿ ಸ್ಥಳಗಳಲ್ಲಿ-ನಿನ್ನ ರೀತಿಯಿಂದ ಇದು ವ್ಯಾವಹಾರಿಕಸಂಸರ್ಗಾರೋಪವಾಗಿದೆ. ಅಧಿಷ್ಠಾನತ್ವಯೋಗ್ಯವಾದ ಇನ್ನೊಂದು ಪಾರಮಾರ್ಥಿಕಸಂಸರ್ಗವು ಇಲ್ಲದಿರುವುದರಿಂದ ಇದನ್ನೇ ಪಾರಮಾರ್ಥಿಕಸಂಸರ್ಗವೆಂದು ಹೇಳಬೇಕು. ಆದ್ದರಿಂದ ಈ ಸಂಸರ್ಗಾನುಭವವು ಪ್ರಮಾ ಎಂದೇ ಸಿದ್ಧವಾಗುತ್ತದೆ.

ಸಂಸರ್ಗಪ್ರಮೆಯು ಸಂಸರ್ಗಿಪ್ರಮಾಘಟಿತವಾಗಿರುತ್ತದೆ ಎಂಬ ನಿಯಮವಿರುವುದರಿಂದ ಈ ಸಂಸರ್ಗಜ್ಞಾನವು ಪ್ರಮೆಯಾದ ಮೇಲೆ ಸಂಸರ್ಗಿಗಳಾದ ಭೂತಲ ಮತ್ತು ಘಟಗಳು ಪ್ರಮಾವಿಷಯವೇ ಆಗುತ್ತವೆ ಎಂದು ಸಿದ್ಧವಾಗುತ್ತದೆ. ಈ ಜ್ಞಾನದಲ್ಲಿ ಭೂತಲ ಮತ್ತು ಘಟಗಳು ಪ್ರಮಾವಿಷಯವಾದ್ದರಿಂದ ಸತ್ಯವೆಂದು ಸಿದ್ಧವಾಗುವಾಗ, 'ಇದಂ ಭೂತಲಂ' 'ಅಯಂ ಘಟಃ' ಎಂಬ ಜ್ಞಾನಗಳಲ್ಲಿಯೂ ಭೂತಲ ಮತ್ತು ಘಟಗಳು ಸತ್ಯವಾಗುವುದರಿಂದ, ಆರೋಪವೇ ಕೂಡುವುದಿಲ್ಲವಾದ್ದರಿಂದ ನಿನ್ನ ಚೈತನ್ಯಾಧಿಷ್ಠಾನವಾರ್ತೆಯೇ ನಿರ್ಮೂಲವಾದುದು ಎಂದಾಗುತ್ತದೆ. 'ಭೂತಲೇ ಘಟಃ' ಎಂಬಲ್ಲಿ ಭೂತಲವು ಸತ್ಯವಾದುದು, 'ಇದಂ ಭೂತಲಂ' ಎಂಬಲ್ಲಿ ಭೂತಲವು ಮಿಥ್ಯಾಭೂತವಾದುದು ಎಂದು ಹೇಳಲು ಬರುವುದಿಲ್ಲವಷ್ಟೆ. ಸತ್ಯವಾದ ಪದಾರ್ಥಾಂತರದ ಸನ್ನಿಕರ್ಷವಿಲ್ಲದಿರುವ ಕೇವಲ ಭೂತಲದಲ್ಲಿ ಎಂದೂ ಸನ್ನಿಕರ್ಷಭ್ರಮವು ಬರುವುದಿಲ್ಲವಾದ್ದರಿಂದ ಸನ್ನಿಕರ್ಷಭ್ರಮವನ್ನು ಕುರಿತು ಸತ್ಯಸನ್ನಿಕರ್ಷಪೂರ್ವಕತ್ವವು ನಿಯತವಾಗಿರುವುದರಿಂದ ಸನ್ನಿಕರ್ಷಪ್ರತಿಯೋಗಿಗಳಾದ ಭೂತಲಘಟಾದಿಗಳು ಅನಾರೋಪಿತವೆಂದೂ, ಆದ್ದರಿಂದಲೇ ಸತ್ಯವೆಂದೂ ಸಿದ್ಧವಾಗುತ್ತವೆ. ಇಲ್ಲಿ ಇದು ಅನುಮಾನವನ್ನು ಪ್ರಯೋಗಮಾಡುವ ರೀತಿ. 'ಘಟೇ ಘಟತ್ವಧೀಃ ನ ಘಟತ್ವಜಾತಿಭ್ರಮಃ ಪೃಥುಬುಧ್ನೋದರಾಕಾರವ್ಯಕ್ತಜಾತಿಪ್ರತೀತಿತ್ವಾತ್, ಘಟತ್ವವತ್ಯೇವ ಘಟತ್ವಪ್ರತೀತಿತ್ವಾತ್ ವ್ಯತಿರೇಕೇಣ ಪಾಷಾಣೇ ಘಟತ್ವಪ್ರತೀತಿವತ್' - ಇದರ ಅರ್ಥ ಹೀಗೆ. ಘಟೇ ಘಟತ್ವಂ ಎಂಬ ಜ್ಞಾನವು ಘಟತ್ವಜಾತಿಭ್ರಮರೂಪವಾದುದಲ್ಲ. ಪೃಥುಬುಧ್ನೋದರಾಕಾರ ವ್ಯಂಗವಾದ ಜಾತಿಪ್ರತೀತಿಯಾದುದರಿಂದ ಅಥವಾ ಘಟತ್ವವಿದ್ದಲ್ಲಿಯೇ ಘಟತ್ವಪ್ರತೀತಿಯಾದುದರಿಂದ ಪಾಷಾಣದಲ್ಲಿ ಘಟತ್ವಪ್ರತೀತಿಯ ವ್ಯತಿರೇಕ ದೃಷ್ಟಾಂತದಂತೆ. ಇಲ್ಲಿ ಎರಡು ಹೇತುಗಳಿಂದ ಈ ಘಟತ್ವಜಾತಿಜ್ಞಾನವು ಭ್ರಮವಲ್ಲವೆಂದು ಗ್ರಂಥಕಾರರು ಸಾಧಿಸುತ್ತಾರೆ.

**ತಸ್ಮಾದರಜತವ್ಯಕ್ತೌ ದೋಷಾದ್ ಯಾ ರಜತತ್ವಧೀಃ ।**
**ಸ ಭ್ರಮಃ ಸ್ಯಾನ್ನಿಜವ್ಯಕ್ತೌ ಜಾತಿಧೀಸ್ತು ನ ವಿಭ್ರಮಃ ॥ ೧೦೬೭ ॥**

**ಅರ್ಥ-** ತಸ್ಮಾತ್ = ಆ ಕಾರಣದಿಂದ, ಅರಜತವ್ಯಕ್ತೌ = ರಜತಭಿನ್ನವಾದ ವ್ಯಕ್ತಿಯಲ್ಲಿ, ದೋಷಾತ್ = ದೋಷದಿಂದ, ಯಾ = ಯಾವ, ರಜತತ್ವಧೀಃ = ರಜತತ್ವಜ್ಞಾನವು ಉಂಟಾಗುತ್ತದೆಯೋ, ಸಃ = ಅದು, ಭ್ರಮಃ ಸ್ಯಾತ್ = ಭ್ರಮವಾಗುತ್ತದೆ, ನಿಜವ್ಯಕ್ತೌ = ನಿಜವಾದ ರಜತದಲ್ಲಿ, ಜಾತಿಧೀಸ್ತು = ಜಾತಿಜ್ಞಾನವಾದರೋ, ನ ವಿಭ್ರಮಃ = ಭ್ರಾಂತಿಯಾಗುವುದಿಲ್ಲ.

**ಅನುವಾದ-** ಆದ್ದರಿಂದ ರಜತಭಿನ್ನವಾದ ವ್ಯಕ್ತಿಯಲ್ಲಿ ದೋಷದಿಂದ ಉಂಟಾಗುವ ರಜತತ್ವಜ್ಞಾನವು ಭ್ರಾಂತಿಯಾಗುತ್ತದೆ. ನಿಜವಾದ ರಜತದಲ್ಲಿ ಉಂಟಾಗುವ ರಜತತ್ವಜಾತಿಜ್ಞಾನವು ಭ್ರಾಂತಿಯಾಗುವುದಿಲ್ಲ.

**ಭಾವವಿಲಾಸಿನೀ–** ತಸ್ಮಾತ್ ವ್ಯಂಜಕವತಿ ವ್ಯಂಗ್ಯಪ್ರತೀತೇರ್ಭ್ರಮತ್ವಾಯೋಗಾತ್ । ವ್ಯಂಜಕಾಭಾವವತಿ ವ್ಯಂಗ್ಯಜ್ಞಾನಸ್ಯೈವ ಭ್ರಮತ್ವಾದಿತಿ ಯಾವತ್ ॥ ೧೦೬೭ ॥

ತದ್ ಬ್ರಹ್ಮಭ್ರಮಸೃಷ್ಟಾರ್ಥದರ್ಶನಾದ್ಭ್ರಾಂತಿತಾऽಪಿ ನ ।
ಜಾತಿಭ್ರಮೇ ಧರ್ಮಿಭೂತವ್ಯಕ್ತಿಃ ಸತ್ಯಾ ಯತೋ ಧ್ರುವಾ ॥ ೧೦೬೮ ॥

**ಅರ್ಥ-** ತತ್ = ಆ ಕಾರಣದಿಂದ, ಬ್ರಹ್ಮಭ್ರಮಸೃಷ್ಟಾರ್ಥದರ್ಶನಾತ್ ಭ್ರಾಂತಿತಾ = ಬ್ರಹ್ಮಭ್ರಮೆಯಿಂದ ಸೃಷ್ಟವಾದ ಪದಾರ್ಥಗಳ ದರ್ಶನರೂಪವಾದುದರಿಂದ ಜಗತ್‌ಜ್ಞಾನಕ್ಕೆ ಭ್ರಾಂತಿತ್ವವೂ ಕೂಡ, ನ = ಸಿದ್ಧವಾಗುವುದಿಲ್ಲ. ಯತಃ = ಏಕೆಂದರೆ, ಜಾತಿಭ್ರಮೇ = ಜಾತಿಭ್ರಮದಲ್ಲಿ, ಧರ್ಮಿಭೂತವ್ಯಕ್ತಿಃ = ಧರ್ಮಿಯಾದ ವ್ಯಕ್ತಿಯು, ಧ್ರುವಾ = ನಿಶ್ಚಯವಾಗಿ, ಸತ್ಯಾ = ಸತ್ಯವಾಗಿರುತ್ತದೆ.

**ಅನುವಾದ-** ಆ ಕಾರಣದಿಂದ ಬ್ರಹ್ಮಭ್ರಮಸೃಷ್ಟವಾದ ಪದಾರ್ಥದರ್ಶನ ರೂಪವಾದುದರಿಂದ, ಜಗತ್‌ಜ್ಞಾನವು ಭ್ರಾಂತಿರೂಪವಾದುದು ಎಂಬ ನಿನ್ನ ವಾದವು ಸರಿಯಲ್ಲ. ಏಕೆಂದರೆ, ಜಾತಿಭ್ರಮದಲ್ಲಿ ಧರ್ಮಿಯಾದ ವ್ಯಕ್ತಿಯು ಅವಶ್ಯವಾಗಿ ಸತ್ಯವಾಗಿಯೇ ಇರುತ್ತದೆ.

**ಭಾವವಿಲಾಸಿನೀ–** ಭೂತಲೇ ಘಟ ಇತ್ಯತ್ರ ಭೂತಲಾವಚ್ಛಿನ್ನಚೈತನ್ಯಸ್ಯ ಸ್ವಾನಧಿಷ್ಠಿತ ಘಟಂ ಪ್ರತಿ ಅಧಿಷ್ಠಾನಚೈತನ್ಯತಯಾ ಭ್ರಮತ್ವಾಯೋಗಾತ್ ನ ಬ್ರಹ್ಮ ಭ್ರಾಂತಿಸಿದ್ಧತ್ವಮಿತ್ಯುಕ್ತಮ್ । ಅತ ಏವ ವೃತ್ತೇರಪಿ ನ ಘಟಭ್ರಮತ್ವಮಿತ್ಯಾಹ-**ತದಿತಿ** ॥ ತತ್ ತಸ್ಮಾತ್‌ಘಟಸ್ಯ ಬ್ರಹ್ಮಭ್ರಮಸಿದ್ಧತ್ವಾಭಾವಾತ್। ಬ್ರಹ್ಮಭ್ರಮಸೃಷ್ಟಸ್ಯ ಘಟಸ್ಯ ದರ್ಶನಾತ್ । ಭ್ರಾಂತಿತಾ ವೃತ್ತೇರ್ಭ್ರಾಂತಿತಾ । ಘಟಸ್ಯ ಪ್ರಾಗ್ಬ್ರಹ್ಮಭ್ರಮಸೃಷ್ಟತ್ವೇ ಹಿ ಭ್ರಾಂತಾರ್ಥವಿಷಯಿಣೀ ವೃತ್ತಿರಪಿ ಭ್ರಾಂತಿಸ್ಸ್ಯಾತ್ । ತಸ್ಯ ಚೋಕ್ತವಿಧಯಾऽಭಾವಾತ್ ತದ್ವಿಷಯವೃತ್ತೇರಪಿ ನ ಭ್ರಾಂತಿತ್ವಮಿತಿ ಭಾವಃ । ನಿಮಿತ್ತಾಂತರಂ ಚಾಹ-**ಜಾತೀತಿ** ॥ ಜಾತಿಭ್ರಮೇ ಘಟೇ ಘಟತ್ವಮಿತಿ ಜಾತಿಭ್ರಮೇ । ಯತಃ ಧರ್ಮಿಭೂತಾ ವ್ಯಕ್ತಿಃ ಘಟವ್ಯಕ್ತಿಃ । ಸತ್ಯಾ । ತತೋ ವೃತ್ತೇರ್ನ ಭ್ರಾಂತಿತ್ವಮಿತ್ಯರ್ಥಃ ॥ ೧೦೬೮ ॥

**ವಿವರಣೆ-** 'ಭೂತಲೇ ಘಟಃ' ಎಂಬ ಸ್ಥಳದಲ್ಲಿ ಭೂತಲಾವಚ್ಛಿನ್ನಚೈತನ್ಯವು ತನ್ನಲ್ಲಿ ಇಲ್ಲದಿರುವ ಘಟವನ್ನು ಕುರಿತು ಅಧಿಷ್ಠಾನಚೈತನ್ಯವಾಗಿ ಭ್ರಮರೂಪವಾಗುವುದಿಲ್ಲ. ಆದ್ದರಿಂದ ಘಟಾದಿಗಳಿಗೆ ಬ್ರಹ್ಮಭ್ರಾಂತಿಸಿದ್ಧತ್ವವು ಇಲ್ಲ ಎಂದು ಹಿಂದೆ ಹೇಳಿದರು. ಈಗ ಆ ಕಾರಣದಿಂದಲೇ ವೃತ್ತಿಗೂ ಸಹ ಘಟಭ್ರಮತ್ವವು ಇಲ್ಲ ಎಂದು ಹೇಳುತ್ತಾರೆ. ವೃತ್ತಿಯು ಬ್ರಹ್ಮಭ್ರಮಸೃಷ್ಟವಾದ ಘಟದ ದರ್ಶನರೂಪವಾಗಿರುವುದರಿಂದ ಭ್ರಾಂತಿ ಎಂಬ ವಾದವೂ ಸರಿಯಲ್ಲ. ಘಟವು ಮೊದಲು ಬ್ರಹ್ಮಭ್ರಮಸೃಷ್ಟವಾದರೆ, ತದ್ವಿಷಯಕವಾದ ವೃತ್ತಿಯೂ ಕೂಡ ಭ್ರಾಂತಿಯಾಗಬಹುದು. ಆದರೆ, ಜಗತ್ತು ಬ್ರಹ್ಮಭ್ರಮಸೃಷ್ಟವೇ ಅಲ್ಲ ಎಂದು ಇಲ್ಲಿಯವರೆಗೆ ಉಪಪಾದನೆ ಮಾಡಿದ್ದಾಗಿದೆ. ಆದ್ದರಿಂದ ವೃತ್ತಿಯು ಭ್ರಾಂತಿಯಾಗುವುದಿಲ್ಲ.

ಸಂಸರ್ಗಪ್ರಮೆಯು ಸಂಸರ್ಗಿಪ್ರಮಾಘಟಿತವಾಗಿರುತ್ತದೆ ಎಂಬ ನಿಯಮವಿರುವುದರಿಂದ ಈ ಸಂಸರ್ಗಜ್ಞಾನವು ಪ್ರಮೆಯಾದ ಮೇಲೆ ಸಂಸರ್ಗಿಗಳಾದ ಭೂತಲ ಮತ್ತು ಘಟಗಳು ಪ್ರಮಾವಿಷಯವೇ ಆಗುತ್ತವೆ ಎಂದು ಸಿದ್ಧವಾಗುತ್ತದೆ. ಈ ಜ್ಞಾನದಲ್ಲಿ ಭೂತಲ ಮತ್ತು ಘಟಗಳು ಪ್ರಮಾವಿಷಯವಾದ್ದರಿಂದ ಸತ್ಯವೆಂದು ಸಿದ್ಧವಾಗುವಾಗ, 'ಇದಂ ಭೂತಲಂ' 'ಅಯಂ ಘಟಃ' ಎಂಬ ಜ್ಞಾನಗಳಲ್ಲಿಯೂ ಭೂತಲ ಮತ್ತು ಘಟಗಳು ಸತ್ಯವಾಗುವುದರಿಂದ, ಆರೋಪವೇ ಕೂಡುವುದಿಲ್ಲವಾದ್ದರಿಂದ ನಿನ್ನ ಚೈತನ್ಯಾಧಿಷ್ಠಾನವಾರ್ತೆಯೇ ನಿರ್ಮೂಲವಾದುದು ಎಂದಾಗುತ್ತದೆ. 'ಭೂತಲೇ ಘಟಃ' ಎಂಬಲ್ಲಿ ಭೂತಲವು ಸತ್ಯವಾದುದು, 'ಇದಂ ಭೂತಲಂ' ಎಂಬಲ್ಲಿ ಭೂತಲವು ಮಿಥ್ಯಾಭೂತವಾದುದು ಎಂದು ಹೇಳಲು ಬರುವುದಿಲ್ಲವಷ್ಟೆ. ಸತ್ಯವಾದ ಪದಾರ್ಥಾಂತರದ ಸನ್ನಿಕರ್ಷವಿಲ್ಲದಿರುವ ಕೇವಲ ಭೂತಲದಲ್ಲಿ ಎಂದೂ ಸನ್ನಿಕರ್ಷಭ್ರಮವು ಬರುವುದಿಲ್ಲವಾದ್ದರಿಂದ ಸನ್ನಿಕರ್ಷಭ್ರಮವನ್ನು ಕುರಿತು ಸತ್ಯಸನ್ನಿಕರ್ಷಪೂರ್ವಕತ್ವವು ನಿಯತವಾಗಿರುವುದರಿಂದ ಸನ್ನಿಕರ್ಷಪ್ರತಿಯೋಗಿಗಳಾದ ಭೂತಲಘಟಾದಿಗಳು ಅನಾರೋಪಿತವೆಂದೂ, ಆದ್ದರಿಂದಲೇ ಸತ್ಯವೆಂದೂ ಸಿದ್ಧವಾಗುತ್ತವೆ. ಇಲ್ಲಿ ಇದು ಅನುಮಾನವನ್ನು ಪ್ರಯೋಗಮಾಡುವ ರೀತಿ. 'ಘಟೇ ಘಟತ್ವಧೀಃ ನ ಘಟತ್ವಜಾತಿಭ್ರಮಃ ಪೃಥುಬುಧ್ನೋದರಾಕಾರವ್ಯಕ್ತಜಾತಿಪ್ರತೀತಿತ್ವಾತ್, ಘಟತ್ವವತ್ಯೇವ ಘಟತ್ವಪ್ರತೀತಿತ್ವಾತ್ ವ್ಯತಿರೇಕೇಣ ಪಾಷಾಣೇ ಘಟತ್ವಪ್ರತೀತಿವತ್' - ಇದರ ಅರ್ಥ ಹೀಗೆ. ಘಟೇ ಘಟತ್ವಂ ಎಂಬ ಜ್ಞಾನವು ಘಟತ್ವಜಾತಿಭ್ರಮರೂಪವಾದುದಲ್ಲ. ಪೃಥುಬುಧ್ನೋದರಾಕಾರ ವ್ಯಂಗವಾದ ಜಾತಿಪ್ರತೀತಿಯಾದುದರಿಂದ ಅಥವಾ ಘಟತ್ವ-ವಿದ್ದಲ್ಲಿಯೇ ಘಟತ್ವಪ್ರತೀತಿಯಾದುದರಿಂದ ಪಾಷಾಣದಲ್ಲಿ ಘಟತ್ವಪ್ರತೀತಿಯ ವ್ಯತಿರೇಕ ದೃಷ್ಟಾಂತದಂತೆ. ಇಲ್ಲಿ ಎರಡು ಹೇತುಗಳಿಂದ ಈ ಘಟತ್ವಜಾತಿಜ್ಞಾನವು ಭ್ರಮವಲ್ಲವೆಂದು ಗ್ರಂಥಕಾರರು ಸಾಧಿಸುತ್ತಾರೆ.

**ತಸ್ಮಾದರಜತವ್ಯಕ್ತೌ ದೋಷಾದ್ ಯಾ ರಜತತ್ವಧೀಃ ।**
**ಸ ಭ್ರಮಃ ಸ್ಯಾನ್ನಿಜವ್ಯಕ್ತೌ ಜಾತಿಧೀಸ್ತು ನ ವಿಭ್ರಮಃ ॥ ೧೦೬೭ ॥**

**ಅರ್ಥ-** ತಸ್ಮಾತ್ = ಆ ಕಾರಣದಿಂದ, ಅರಜತವ್ಯಕ್ತೌ = ರಜತಭಿನ್ನವಾದ ವ್ಯಕ್ತಿಯಲ್ಲಿ, ದೋಷಾತ್ = ದೋಷದಿಂದ, ಯಾ = ಯಾವ, ರಜತತ್ವಧೀಃ = ರಜತತ್ವಜ್ಞಾನವು ಉಂಟಾಗುತ್ತದೆಯೋ, ಸಃ = ಅದು, ಭ್ರಮಃ ಸ್ಯಾತ್ = ಭ್ರಮವಾಗುತ್ತದೆ, ನಿಜವ್ಯಕ್ತೌ = ನಿಜವಾದ ರಜತದಲ್ಲಿ, ಜಾತಿಧೀಸ್ತು = ಜಾತಿಜ್ಞಾನವಾದರೋ, ನ ವಿಭ್ರಮಃ = ಭ್ರಾಂತಿಯಾಗುವುದಿಲ್ಲ.

**ಅನುವಾದ-** ಆದ್ದರಿಂದ ರಜತಭಿನ್ನವಾದ ವ್ಯಕ್ತಿಯಲ್ಲಿ ದೋಷದಿಂದ ಉಂಟಾಗುವ ರಜತತ್ವಜ್ಞಾನವು ಭ್ರಾಂತಿಯಾಗುತ್ತದೆ. ನಿಜವಾದ ರಜತದಲ್ಲಿ ಉಂಟಾಗುವ ರಜತತ್ವಜಾತಿಜ್ಞಾನವು ಭ್ರಾಂತಿಯಾಗುವುದಿಲ್ಲ.

**ಭಾವವಿಲಾಸಿನೀ**– ತಸ್ಮಾತ್ ವ್ಯಂಜಕವತಿ ವ್ಯಂಗ್ಯಪ್ರತೀತೇರ್ಭ್ರಮತ್ವಾಯೋಗಾತ್ । ವ್ಯಂಜಕಾಭಾವವತಿ ವ್ಯಂಗ್ಯಜ್ಞಾನಸ್ಯೈವ ಭ್ರಮತ್ವಾದಿತಿ ಯಾವತ್ ॥ ೧೦೬೭ ॥

ತದ್ ಬ್ರಹ್ಮಭ್ರಮಸೃಷ್ಟಾರ್ಥದರ್ಶನಾದ್‌ಭ್ರಾಂತಿತಾಽಪಿ ನ ।
ಜಾತಿಭ್ರಮೇ ಧರ್ಮಿಭೂತವ್ಯಕ್ತಿಃ ಸತ್ಯಾ ಯತೋ ಧ್ರುವಾ ॥ ೧೦೬೮ ॥

**ಅರ್ಥ**- ತತ್ = ಆ ಕಾರಣದಿಂದ, ಬ್ರಹ್ಮಭ್ರಮಸೃಷ್ಟಾರ್ಥದರ್ಶನಾತ್ ಭ್ರಾಂತಿತಾ = ಬ್ರಹ್ಮಭ್ರಮೆಯಿಂದ ಸೃಷ್ಟವಾದ ಪದಾರ್ಥಗಳ ದರ್ಶನರೂಪವಾದುದರಿಂದ ಜಗತ್‌ಜ್ಞಾನಕ್ಕೆ ಭ್ರಾಂತಿತ್ವವೂ ಕೂಡ, ನ = ಸಿದ್ಧವಾಗುವುದಿಲ್ಲ. ಯತಃ = ಏಕೆಂದರೆ, ಜಾತಿಭ್ರಮೇ = ಜಾತಿಭ್ರಮದಲ್ಲಿ, ಧರ್ಮಿಭೂತವ್ಯಕ್ತಿಃ = ಧರ್ಮಿಯಾದ ವ್ಯಕ್ತಿಯು, ಧ್ರುವಾ = ನಿಶ್ಚಯವಾಗಿ, ಸತ್ಯಾ = ಸತ್ಯವಾಗಿರುತ್ತದೆ.

**ಅನುವಾದ**- ಆ ಕಾರಣದಿಂದ ಬ್ರಹ್ಮಭ್ರಮಸೃಷ್ಟವಾದ ಪದಾರ್ಥದರ್ಶನ ರೂಪವಾದುದರಿಂದ, ಜಗತ್‌ಜ್ಞಾನವು ಭ್ರಾಂತಿರೂಪವಾದುದು ಎಂಬ ನಿನ್ನ ವಾದವು ಸರಿಯಲ್ಲ. ಏಕೆಂದರೆ, ಜಾತಿಭ್ರಮದಲ್ಲಿ ಧರ್ಮಿಯಾದ ವ್ಯಕ್ತಿಯು ಅವಶ್ಯವಾಗಿ ಸತ್ಯವಾಗಿಯೇ ಇರುತ್ತದೆ.

**ಭಾವವಿಲಾಸಿನೀ**– ಭೂತಲೇ ಘಟ ಇತ್ಯತ್ರ ಭೂತಲಾವಚ್ಛಿನ್ನಚೈತನ್ಯಸ್ಯ ಸ್ವಾನಧಿಷ್ಠಿತ ಘಟಂ ಪ್ರತಿ ಅಧಿಷ್ಠಾನಚೈತನ್ಯತಯಾ ಭ್ರಮತ್ವಾಯೋಗಾತ್ ನ ಬ್ರಹ್ಮ ಭ್ರಾಂತಿಸಿದ್ಧತ್ವಮಿತ್ಯುಕ್ತಮ್ । ಅತ ಏವ ವೃತ್ತೇರಪಿ ನ ಘಟಭ್ರಮತ್ವಮಿತ್ಯಾಹ-**ತದಿತಿ** ॥ ತತ್ ತಸ್ಮಾತ್‌ಘಟಸ್ಯ ಬ್ರಹ್ಮಭ್ರಮಸಿದ್ಧತ್ವಾಭಾವಾತ್। ಬ್ರಹ್ಮಭ್ರಮಸೃಷ್ಟಸ್ಯ ಘಟಸ್ಯ ದರ್ಶನಾತ್ । ಭ್ರಾಂತಿತಾ ವೃತ್ತೇರ್ಭ್ರಾಂತಿತಾ । ಘಟಸ್ಯ ಪ್ರಾಗ್ಬ್ರಹ್ಮಭ್ರಮಸೃಷ್ಟತ್ವೇ ಹಿ ಭ್ರಾಂತಾರ್ಥವಿಷಯಿಣೀ ವೃತ್ತಿರಪಿ ಭ್ರಾಂತಿಸ್ಸ್ಯಾತ್ । ತಸ್ಯ ಚೋಕ್ತವಿಧಯಾಽಭಾವಾತ್ ತದ್ವಿಷಯವೃತ್ತೇರಪಿ ನ ಭ್ರಾಂತಿತ್ವಮಿತಿ ಭಾವಃ । ನಿಮಿತ್ತಾಂತರಂ ಚಾಹ-**ಜಾತೀತಿ** ॥ ಜಾತಿಭ್ರಮೇ ಘಟೇ ಘಟತ್ವಮಿತಿ ಜಾತಿಭ್ರಮೇ । ಯತಃ ಧರ್ಮಿಭೂತಾ ವ್ಯಕ್ತಿಃ ಘಟವ್ಯಕ್ತಿಃ । ಸತ್ಯಾ । ತತೋ ವೃತ್ತೇರ್ನ ಭ್ರಾಂತಿತ್ವಮಿತ್ಯರ್ಥಃ ॥ ೧೦೬೮ ॥

**ವಿವರಣೆ**- 'ಭೂತಲೇ ಘಟಃ' ಎಂಬ ಸ್ಥಳದಲ್ಲಿ ಭೂತಲಾವಚ್ಛಿನ್ನಚೈತನ್ಯವು ತನ್ನಲ್ಲಿ ಇಲ್ಲದಿರುವ ಘಟವನ್ನು ಕುರಿತು ಅಧಿಷ್ಠಾನಚೈತನ್ಯವಾಗಿ ಭ್ರಮರೂಪವಾಗುವುದಿಲ್ಲ. ಆದ್ದರಿಂದ ಘಟಾದಿಗಳಿಗೆ ಬ್ರಹ್ಮಭ್ರಾಂತಿಸಿದ್ಧತ್ವವು ಇಲ್ಲ ಎಂದು ಹಿಂದೆ ಹೇಳಿದರು. ಈಗ ಆ ಕಾರಣದಿಂದಲೇ ವೃತ್ತಿಗೂ ಸಹ ಘಟಭ್ರಮತ್ವವು ಇಲ್ಲ ಎಂದು ಹೇಳುತ್ತಾರೆ. ವೃತ್ತಿಯು ಬ್ರಹ್ಮಭ್ರಮಸೃಷ್ಟವಾದ ಘಟದ ದರ್ಶನರೂಪವಾಗಿರುವುದರಿಂದ ಭ್ರಾಂತಿ ಎಂಬ ವಾದವೂ ಸರಿಯಲ್ಲ. ಘಟವು ಮೊದಲು ಬ್ರಹ್ಮಭ್ರಮಸೃಷ್ಟವಾದರೆ, ತದ್ವಿಷಯಕವಾದ ವೃತ್ತಿಯೂ ಕೂಡ ಭ್ರಾಂತಿಯಾಗಬಹುದು. ಆದರೆ, ಜಗತ್ತು ಬ್ರಹ್ಮಭ್ರಮಸೃಷ್ಟವೇ ಅಲ್ಲ ಎಂದು ಇಲ್ಲಿಯವರೆಗೆ ಉಪಪಾದನೆ ಮಾಡಿದ್ದಾಗಿದೆ. ಆದ್ದರಿಂದ ವೃತ್ತಿಯು ಭ್ರಾಂತಿಯಾಗುವುದಿಲ್ಲ.

ಆದರೆ ಜಾತಿಭ್ರಮಸ್ಥಳದಲ್ಲಿ ವ್ಯಕ್ತಿಯು ಸತ್ಯವೆಂಬ ನಿಯಮವಿದೆ. ಅದರಿಂದ ಘಟತ್ವಜಾತಿಭ್ರಮದಲ್ಲಿ ವ್ಯಕ್ತಿಯಾದ ಘಟವು ಸತ್ಯವಾಗಿರುವಾಗ ಅಂತಹ ಘಟದ ವೃತ್ತಿಯು ಭ್ರಾಂತಿಯಾಗುವುದಿಲ್ಲ ಎಂದು ಅಭಿಪ್ರಾಯ.

**ಕಥಂ ಚ ಬ್ರಹ್ಮಣೋಽನ್ಯತ್ರ ಯೋಗಾಯೋಗಾದ್‌ಭ್ರಮಸ್ತವ ।**
**ಸತ್ಯೋ ಘಟೋಽನ್ಯದೃಷ್ಟೋಽಪಿ ಯದನ್ಯೈಃ ಪರಮೀಕ್ಷ್ಯತೇ ।**
**ಅನ್ಯದೃಷ್ಟೇ ತು ಮಿಥ್ಯಾರ್ಥೇ ಕ್ವಾಸ್ತ್ಯನ್ಯಸ್ಯಾಪಿ ದರ್ಶನಮ್ ॥ ೧೦೬ ॥**

**ಅರ್ಥ-** ಬ್ರಹ್ಮಣೋಽನ್ಯತ್ರ = ಅಧಿಷ್ಠಾನಭೂತನಾದ ಬ್ರಹ್ಮನನ್ನು ಬಿಟ್ಟು ಬೇರೆ ಕಡೆಯಲ್ಲಿ, ಯೋಗಾಯೋಗಾದ್ = ಅಧ್ಯಾಸರೂಪವಾದ ಸಂಬಂಧವು ಕೂಡುವುದಿಲ್ಲವಾದ್ದರಿಂದ, ತವ = ನಿನ್ನ , ಭ್ರಮಃ = ಭ್ರಮವು, ಕಥಂ = ಹೇಗೆ ಉಪಪನ್ನವಾಗುತ್ತದೆ, ಯತ್ = ಏಕೆಂದರೆ, ಸತ್ಯೋ ಘಟಃ = ಸತ್ಯವಾದ ಘಟವು, ಅನ್ಯದೃಷ್ಟೋಽಪಿ = ಒಬ್ಬನಿಂದ ನೋಡಲ್ಪಟ್ಟರೂ, ಅನ್ಯೈಃ = ಬೇರೆಯವರಿಂದಲೂ, ಈಕ್ಷ್ಯತೇ = ನೋಡಲ್ಪಡುತ್ತದೆ, ಅನ್ಯದೃಷ್ಟೇ = ಅನ್ಯದೃಷ್ಟವಾದ, ಮಿಥ್ಯಾರ್ಥೇ ತು = ಮಿಥ್ಯಾರ್ಥದಲ್ಲಿಯಾದರೂ, ಅನ್ಯಸ್ಯಾಪಿ ದರ್ಶನಮ್ = ಇನ್ನೊಬ್ಬನ ಜ್ಞಾನವು, ಕ್ವಾಸ್ತಿ = ಎಲ್ಲಿದೆ?

**ಅನುವಾದ-** ಅಧಿಷ್ಠಾನಭೂತನಾದ ಬ್ರಹ್ಮನನ್ನು ಬಿಟ್ಟು ಬೇರೆ ಕಡೆಯಲ್ಲಿ ಅಧ್ಯಾಸರೂಪವಾದ ಸಂಬಂಧವು ಕೂಡುವುದಿಲ್ಲವಾದ್ದರಿಂದ ನಿನಗೆ ಭ್ರಮವು ಹೇಗೆ ಉಪಪನ್ನವಾಗುತ್ತದೆ? ಏಕೆಂದರೆ, ಸತ್ಯವಾದ ಘಟವು ಒಬ್ಬನಿಂದ ನೋಡಲ್ಪಟ್ಟರೂ ಇನ್ನೊಬ್ಬರಿಂದಲೂ ನೋಡಲ್ಪಡುತ್ತದೆ. ಆದರೆ, ಒಬ್ಬನಿಂದ ನೋಡಲ್ಪಟ್ಟ ಮಿಥ್ಯಾವಸ್ತುವು ಇನ್ನೊಬ್ಬನಿಂದ ಎಲ್ಲಿಯೂ ಎಂದೂ ನೋಡಲ್ಪಡುವುದಿಲ್ಲ.

**ಭಾವವಿಲಾಸಿನೀ–** ಕಿಂಚ ಘಟಾದೇರಧಿಷ್ಠಾನರೂಪಬ್ರಹ್ಮಭ್ರಮಜತ್ವೇಽನ್ಯೇಷಾಂ ತದ್ದರ್ಶನಮೇವ ನ ಸ್ಯಾತ್ । ತೇಷ್ವಧ್ಯಾಸಾಖ್ಯಸಂಬಂಧಾಭಾವಾತ್ । ಲೋಕೇ ಏಕಭ್ರಮಜಸ್ಯ ರಜತಾದೇ-ರನ್ಯೈರದರ್ಶನಾಚ್ಚೇತ್ಯಾಹ-**ಕಥಂ ಚೇತಿ** ॥ ಬ್ರಹ್ಮಣಃ ಅಧಿಷ್ಠಾನಭೂತಬ್ರಹ್ಮಣಃ । ಯೋಗಾ-ಯೋಗಾತ್ । ಅಧ್ಯಾಸಾಖ್ಯಯೋಗಾಯೋಗಾತ್ । ತವ ಮತೇ । ಯತ್ ಯಸ್ಮಾತ್ । ತಸ್ಮಾದನ್ಯಸೃಷ್ಟೋ ಮಿಥ್ಯಾರ್ಥೋಽನ್ಯೈರ್ನೇಕ್ಷ್ಯತ ಇತಿ ಭಾವಃ । ತದೇವ ದರ್ಶಯತಿ ॥ **ಅನ್ಯೇತಿ** ॥ ೧೦೬ ॥

**ವಿವರಣೆ-** ಘಟಾದಿಗಳು ಅಧಿಷ್ಠಾನರೂಪವಾದ ಬ್ರಹ್ಮಭ್ರಮಜನ್ಯ ಎಂದು ಅಂಗೀಕರಿಸಿದರೆ, ಅನ್ಯರಿಗೆ ತದ್ದರ್ಶನವೇ ಆಗಲಾರದು. ಏಕೆಂದರೆ, ಅವರಿಗೂ ಮತ್ತು ಘಟಕ್ಕೂ ಅಧ್ಯಾಸರೂಪವಾದ ಸಂಬಂಧವಿಲ್ಲ. ಲೋಕದಲ್ಲಿ ಒಬ್ಬನ ಭ್ರಮಜನ್ಯವಾದ ರಜತವು ಇನ್ನೊಬ್ಬನಿಂದ ನೋಡಲ್ಪಡುವುದಿಲ್ಲ ಆದ್ದರಿಂದ ಘಟಾದಿಪ್ರಪಂಚವು ಸತ್ಯವೇ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ಏಕಸ್ಯ ರಜತಭ್ರಾಂತೌ ಕಿಮನ್ಯೇಷಾಂ ಚ ತದ್‌ಭ್ರಮಃ ।
ಸ್ವರೂಪೈಕ್ಯಾತ್ ಸಮಾಧಾನಮಪಿ ತೇನ ನ ಶೋಭತೇ ॥ ೧೦೭೦ ॥

**ಅರ್ಥ-** ಏಕಸ್ಯ = ಒಬ್ಬನಿಗೆ, ರಜತಭ್ರಾಂತೌ = ರಜತಭ್ರಾಂತಿಯು ಉಂಟಾದರೆ, ಅನ್ಯೇಷಾಂ ಚ= ಉಳಿದವರಿಗೂ ಸಹ, ತದ್‌ಭ್ರಮಃ = ರಜತಭ್ರಾಂತಿಯು, ಕಿಂ = ಉಂಟಾಗುತ್ತದೆಯೇ? ತೇನ= ಆ ಕಾರಣದಿಂದ, ಸ್ವರೂಪೈಕ್ಯಾತ್ = ಸ್ವರೂಪೈಕ್ಯದಿಂದ, ಸಮಾಧಾನಮಪಿ = ಸಮಾಧಾನಮಾಡುವುದೂ ಕೂಡ, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ-** ಒಬ್ಬನಿಗೆ ರಜತಭ್ರಮವು ಉಂಟಾದರೆ ಬೇರೆಯವರಿಗೂ ರಜತಭ್ರಮವು ಉಂಟಾಗುತ್ತದೆಯೇ? ಆ ಕಾರಣದಿಂದ ಸ್ವರೂಪೈಕ್ಯದಿಂದ ಸಮಾಧಾನ ಮಾಡುವುದೂ ಕೂಡ ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ತದ್ಭ್ರಮಃ ರಜತಭ್ರಮಃ । ಸ್ವರೂಪೈಕ್ಯಾತ್ ಅಧಿಷ್ಠಾನಚೈತನ್ಯಸ್ಯ ದ್ರಷ್ಟೃಜೀವಾನಾಂ ಚ ಸ್ವರೂಪೈಕ್ಯಾತ್ । ಸಮಾಧಾನಂ ತದ್ಭ್ರಮ ಏವಾಸ್ಯಾಪಿ ಭ್ರಮ ಇತಿ ಸಮಾಧಾನಮ್ । ತೇನ ಏಕತ್ರ ಜಾತರಜತಭ್ರಮಸ್ಯಾನ್ಯತ್ರಾದರ್ಶನೇನ । ಘಟಸ್ಥಲೇ ಐಕ್ಯಾದೇಕಸ್ಯ ಭ್ರಾಂತ್ಯಾನ್ಯಸ್ಯ ಭ್ರಾಂತಿಶ್ಚೇತ್ ಶುಕ್ತಿರಜತಸ್ಥಲೇ ತಥಾ ಸ್ಯಾತ್ । ಶುಕ್ತಿಪ್ರಮಾತುರಪಿ ವೃತ್ತಿಪ್ರತಿಫಲಿತಚೈತನ್ಯದ್ವಾರಾ ರಜತಭ್ರಮಸ್ಥಲೇ ಗಮನಸ್ಯಾಪಿ ಸಾಮ್ಯಾದಿತಿ ಭಾವಃ ॥ ೧೦೭೦ ॥

**ವಿವರಣೆ-** ಅಧಿಷ್ಠಾನಚೈತನ್ಯವೂ ಮತ್ತು ದ್ರಷ್ಟೃಚೈತನ್ಯವೂ ಅಭಿನ್ನವಾಗಿರುವುದರಿಂದ ಚೈತ್ರನಭ್ರಮವೇ ಮೈತ್ರನಭ್ರಮವೂ ಆಗುತ್ತದೆ ಎಂಬ ಸಮಾಧಾನವು ಸರಿಯಲ್ಲ. ಚೈತ್ರಭ್ರಮವು ಮೈತ್ರಭ್ರಮವಾಗುವುದು ಅನುಭವಸಿದ್ಧವಾಗಿಲ್ಲ. ಘಟಸ್ಥಳದಲ್ಲಿ ಚೈತ್ರನಭ್ರಾಂತಿಯು ಮೈತ್ರನಭ್ರಾಂತಿಯಾಗುತ್ತದೆ ಎಂದು ಹೇಳಿ ಚೈತ್ರದೃಷ್ಟವಾದ ಘಟದ ಜ್ಞಾನವನ್ನು ಮೈತ್ರನಿಗೂ ಕೂಡಿಸಿದರೆ, ಶುಕ್ತಿರಜತಸ್ಥಳದಲ್ಲಿಯೂ ಚೈತ್ರಭ್ರಮವೇ ಮೈತ್ರಭ್ರಮವೆಂಬ ಅನುಭವವುಂಟಾಗಲೆಂಬ ಆಪತ್ತಿಯು ಬರುತ್ತದೆ. ರಜತಭ್ರಮ ಬರುವ ಚೈತ್ರನ ಅಂತಃಕರಣವು ಹೇಗೆ ವೃತ್ತಿಪ್ರತಿಫಲಿತಚೈತನ್ಯದ್ವಾರಾ ರಜತಭ್ರಮಸ್ಥಳಕ್ಕೆ ಹೋಗುತ್ತದೆಯೋ ಅದರಂತೆ ಶುಕ್ತಿತ್ವೇನ ಶುಕ್ತಿಜ್ಞಾನ ಬರುವ ಮೈತ್ರನ ಅಂತಃಕರಣವು ವೃತ್ತಿಪ್ರತಿಫಲಿತಚೈತನ್ಯದ್ವಾರಾ ರಜತಭ್ರಮಸ್ಥಳದವರೆಗೆ ಹೋಗುವುದರಿಂದ ಮೈತ್ರನಿಗೂ ರಜತಭ್ರಮ ಉಂಟಾಗಲಿ ಎಂಬ ಆಪತ್ತಿಯು ಇದ್ದೇ ಇದೆ ಎಂದು ಅಭಿಪ್ರಾಯ.

ಅನ್ಯತ್ರಾದೃಷ್ಟಪದವೀ ಕಥಮತ್ರೈವ ಕಲ್ಪ್ಯತೇ ।
ಅದೃಷ್ಟಕಲ್ಪನಾದೋಷೋ ರುಂಧೇ ತ್ವದ್ದೋಷದೋಷತಾಮ್ ॥ ೧೦೭೧ ॥

**ಅರ್ಥ-** ಅನ್ಯತ್ರ = ಶುಕ್ತಿರಜತಾದಿಭ್ರಮಸ್ಥಳದಲ್ಲಿ, ಅದೃಷ್ಟಪದವೀ = ಅದೃಷ್ಟವಾದ ಮಾರ್ಗವು, ಅತ್ರೈವ = ಘಟಾದಿಭ್ರಾಂತಿಸ್ಥಳದಲ್ಲಿಯೇ, ಕಥಂ ಕಲ್ಪ್ಯತೇ = ಏಕೆ

ಕಲ್ಪಿಸಲ್ಪಡುತ್ತದೆ? ಅದೃಷ್ಟಕಲ್ಪನಾದೋಷಃ = ಅದೃಷ್ಟಕಲ್ಪನಾ ಎಂಬ ದೋಷವು, ತ್ವದ್ದೋಷದೋಷತಾಮ್ = ನಿನ್ನ ಧೋಷಕ್ಕೆ ದೋಷತ್ವವನ್ನೇ, ರುಂಧೇ = ನಾಶಮಾಡುತ್ತದೆ.

**ಅನುವಾದ-** ಶುಕ್ತಿರಜತಾದಿ ಭ್ರಾಂತಿಯ ಸ್ಥಳದಲ್ಲಿ ಅದೃಷ್ಟವಾದ ರೀತಿಯನ್ನು ಘಟಭ್ರಾಂತಿಯ ಸ್ಥಳದಲ್ಲಿ ಏಕೆ ಕಲ್ಪಸುತ್ತೀಯೆ? ಹೀಗೆ ಮಾಡಿದರೆ, ಅದೃಷ್ಟಕಲ್ಪನಾ ಎಂಬ ದೋಷವು ನಿನಗೆ ಅಭಿಮತವಾದ ಕಾಚಾದಿಗಳ ದೋಷತ್ವವನ್ನೇ ವಿನಾಶಗೊಳಿಸುತ್ತದೆ.

**ಭಾವವಿಲಾಸಿನೀ–** ಅನ್ಯತ್ರ ಶುಕ್ತಿರಜತಭ್ರಮಾದೌ । ಅತ್ರೈವ ಘಟಾದಿಭ್ರಮಸ್ಥಲ ಏವ । ನನು ಕಾಚಾದಿದೋಷವಶಾದೇಕಸ್ಯ ರಜತಭ್ರಮೋ ನಾಪರಸ್ಯೇತಿ ಚೇತ್ । ನ । ಭ್ರಮಸಾಂಕರ್ಯ-ಘಟಕಚೈತನ್ಯೈಕ್ಯಸ್ಯ ದೋಷಸಾಂಕರ್ಯಘಟಕತಾಯಾ ಅಪಿ ಸಂಭವೇನೈಕದೋಷಸ್ಯೈವಾ-ಪರದೋಷಸ್ಯಾಪಿ ಕಲ್ಪಯಿತುಂ ಶಕ್ಯತ್ವಾತ್ । ಯುಕ್ತ್ಯಂತರಂ ಚಾಹ - **ಅದೃಷ್ಟೇತಿ** ॥ ಘಟಭ್ರಮೇಽದೃಷ್ಟಸ್ಯ ಕಾಚಾದೇಃ ಕಲ್ಪನಾ ರಜತಭ್ರಮೇ ಕಲ್ಪನಾ ಸ ಏವ ದೋಷಃ। ತ್ವದ್ದೋಷದೋಷತಾಂ ತವ ದೋಷಾಣಾಂ ಕಾಚಾದೀನಾಂ ದೋಷತ್ವಮ್ । ಭ್ರಮತ್ವಾವಿಶೇಷಾತ್ ಘಟಭ್ರಮೇ ಕಾಚಾದಿದೋಷಾನಪೇಕ್ಷಣೇ ರಜತಭ್ರಮೇಽಪಿ ತದನಪೇಕ್ಷಣಮೇವ ಸ್ಯಾದಿತಿ ಭಾವಃ ॥ ೧೦೭೧ ॥

**ವಿವರಣೆ-** ಕಾಚಾದಿದೋಷವಶದಿಂದ ಒಬ್ಬನಿಗೆ ಉಂಟಾದ ರಜತಭ್ರಮೆಯು ಇನ್ನೊಬ್ಬರಿಗೆ ಉಂಟಾಗುವುದಿಲ್ಲ ಎಂಬ ಸಮಾಧಾನವು ಸರಿಯಲ್ಲ. ಚೈತ್ರನ ಭ್ರಮೆಯೇ ಮೈತ್ರನ ಭ್ರಮವೆಂದು ಭ್ರಮಸಾಂಕರ್ಯವನ್ನು ಉಪಪಾದಿಸುವವನು ಚೈತನ್ಯೈಕ್ಯದಿಂದಲೇ, ಚೈತ್ರನ ದೋಷವೇ ಮೈತ್ರನ ದೋಷ ಎಂದು ದೋಷದ ಸಾಂಕರ್ಯವನ್ನು ಉಪಪಾದನೆ ಮಾಡುವುದರಿಂದ ಮೈತ್ರನಿಗೂ ರಜತಭ್ರಮವು ಬರಲಿ ಎಂಬ ಆಪತ್ತಿಯು ಇದ್ದೇ ಇದೆ. ಘಟಭ್ರಮದಲ್ಲಿ ಅದೃಷ್ಟವಾದ ಕಾಚಾದಿದೋಷಗಳನ್ನು ರಜತಭ್ರಮಸ್ಥಳದಲ್ಲಿ ಕಲ್ಪನೆ ಮಾಡಿದರೆ, ನಿನ್ನ ನ್ಯಾಯದಿಂದ ಕಾಚಾದಿಗಳಿಗೆ ದೋಷತ್ವವೇ ನಷ್ಟವಾಗುತ್ತದೆ. ಭ್ರಮತ್ವ ಅವಿಶೇಷವಿರುವುದರಿಂದ ಘಟಭ್ರಮಸ್ಥಳದಲ್ಲಿ ಕಾಚಾದಿದೋಷಗಳ ಅಪೇಕ್ಷೆ ಇಲ್ಲವಾದ್ದರಿಂದ ರಜತಭ್ರಮಸ್ಥಳದಲ್ಲಿಯೂ ಕಾಚಾದಿಗಳು ದೋಷವಾಗುವುದು ಬೇಡ ಎಂಬ ನಮ್ಮ ಆಪಾದನೆಗೆ ನಿನ್ನಲ್ಲಿ ಯಾವ ಉತ್ತರವೂ ಇಲ್ಲ ಎಂದು ಅಭಿಪ್ರಾಯ.

**ಅಜ್ಞಾನೋಪಾದಾನಕತ್ವಮರ್ಥದೋಷಸ್ತು ಯಸ್ತವ ।**
**ಕುಂಭಕಾರಕುವಿಂದಾದ್ಯಾಃ ಸದ್ಯೋ ದದ್ಯುಸ್ತದುತ್ತರಮ್ ।**
**ನ ತೈಃ ಸಹ ವಯಂ ಬ್ರೂಮಃ ಕೃತಗ್ರಂಥಪರಿಶ್ರಮಾಃ ॥ ೧೦೭೨ ॥**

**ಅರ್ಥ-** ತವ = ನಿನಗೆ ಸಮ್ಮತವಾದ, ಅಜ್ಞಾನೋಪಾದಾನಕತ್ವಮ್ = ಅಜ್ಞಾನ ಉಪಾದಾನಕತ್ವರೂಪವಾದ, ಯಃ ಅರ್ಥದೋಷಸ್ತು = ಯಾವ ಅರ್ಥದೋಷವಿದೆಯೋ,

ತದುತ್ತರಮ್ = ಅದಕ್ಕೆ ಉತ್ತರವನ್ನು, ಕುಂಭಕಾರಕುವಿಂದಾದ್ಯಾಃ = ಕುಲಾಲ ಮತ್ತು ಕುವಿಂದರು, ಸದ್ಯೋ ದದ್ಯುಃ = ತಕ್ಷಣದಲ್ಲಿಯೇ ಕೊಡುತ್ತಾರೆ, ಕೃತಗ್ರಂಥಪರಿಶ್ರಮಾಃ = ಶಾಸ್ತ್ರಾಭ್ಯಾಸವನ್ನು ಮಾಡಿದ, ವಯಂ = ನಾವು, ತೈಃ ಸಹ = ಅವರ ಜೊತೆಯಲ್ಲಿ, ನ ಬ್ರೂಮಃ = ಮಾತನಾಡುವುದಿಲ್ಲ.

**ಅನುವಾದ-** ಅಜ್ಞಾನೋಪಾದಾನಕತ್ವರೂಪವಾದ ನಿನ್ನ ಅರ್ಥದೋಷವು ಏನಿದೆಯೋ ಅದಕ್ಕೆ ಕುಲಾಲಕುವಿಂದರೇ ತಕ್ಷಣದಲ್ಲಿಯೇ ಉತ್ತರವನ್ನು ಹೇಳುತ್ತಾರೆ. ಶಾಸ್ತ್ರಾಭ್ಯಾಸವನ್ನು ಮಾಡಿದ ನಾವು ಅವರ ಜೊತೆಯಲ್ಲಿ ಮಾತನಾಡುವುದಿಲ್ಲ.

**ಭಾವವಿಲಾಸಿನೀ–** ಅಜ್ಞಾನೋಪಾದಾನಕತ್ವಂ ಘಟಾದಾವರ್ಥದೋಷ ಇತ್ಯತ್ರ ಸೋಪಹಾಸಂ ದೂಷಣಮುಕ್ತ್ವಾ ದೂಷಣಾಂತರಂ ಚಾಹ-**ಅಜ್ಞಾನೇತಿ** ॥ ಘಟಾದಿಕರ್ತೃಭಿಃ ಕುಂಭಾಕಾರಾದಿಭಿರ್ಮೃದಾದೇರನುಸರಣಾದಿತಿ ಭಾವಃ ॥ ೧೦೭೨ ॥

**ವಿವರಣೆ-** ಘಟಪಟಾದಿವಸ್ತುಗಳು ಅಜ್ಞಾನೋಪಾದಾನಕವಾದರೆ, ಮೃತ್ ಮತ್ತು ತಂತು ರೂಪವಾದ ಉಪಾದಾನಕಾರಣಕ್ಕಾಗಿ ಕುಲಾಲಕುವಿಂದರು ಪ್ರಯತ್ನಪಡಬೇಕಾಗಿಲ್ಲ. ಅದಕ್ಕಾಗಿ ಪ್ರಯತ್ನಪಡುವ ಅವರು, ಘಟಾದಿಗಳು ಅಜ್ಞಾನೋಪಾದಾನಕವಲ್ಲ ಎಂಬ ಉತ್ತರವನ್ನು ಸುಲಭವಾಗಿ ಹೇಳುವುದರಿಂದ ನಾವು ಅವರ ಜೊತೆಯಲ್ಲಿ ಮಾತನಾಡಿ ನಿನ್ನನ್ನು ನಿರಾಕರಿಸುವುದು ನಮ್ಮ ಮರ್ಯಾದೆಗೆ ಕಡಿಮೆ ಎಂದು ಅಭಿಪ್ರಾಯ.

**ಕಥಂ ಚ ವೃತ್ತಿನಾಶ್ಯಂ ತದಜ್ಞಾನಂ ತತ್ರ ದೂಷಣಮ್ ।**
**ಅವಿದ್ಯಾವತ್ತ್ವಚರ್ಚಾಯಾಂ ವಕ್ಷ್ಯಾಮಸ್ತತ್ರ ಚೋತ್ತರಮ್ ॥ ೧೦೭೩ ॥**

**ಅರ್ಥ-** ವೃತ್ತಿನಾಶ್ಯಂ = ವೃತ್ತಿನಾಶ್ಯವಾದ, ತದಜ್ಞಾನಂ = ಆ ಅಜ್ಞಾನವು, ತತ್ರ = ಅಧಿಷ್ಠಾನಚೈತನ್ಯಾತ್ಮಕಭ್ರಮದಲ್ಲಿ, ಕಥಂ ದೂಷಣಮ್ = ಹೇಗೆ ದೂಷಣವಾಗುತ್ತದೆ? ಅವಿದ್ಯಾವತ್ತ್ವಚರ್ಚಾಯಾಂ = ಅವಿದ್ಯಾಸಂಬಂಧದ ಚರ್ಚೆಯಲ್ಲಿ, ತತ್ರ ಚ ಉತ್ತರಮ್ = ಈ ವಿಷಯದಲ್ಲಿ ಉತ್ತರವನ್ನು, ವಕ್ಷ್ಯಾಮಃ = ಹೇಳುವೆವು.

**ಅನುವಾದ-** ಅಜ್ಞಾನವು ವೃತ್ತಿಯಿಂದ ನಾಶವಾದ ಮೇಲೆ ಅಧಿಷ್ಠಾನಚೈತನ್ಯರೂಪವಾದ ಘಟಾಧಿಷ್ಠಾನಚೈತನ್ಯವು ಪ್ರಕಾಶಿಸುತ್ತದೆ. ಇದೇ ಘಟಭ್ರಮರೂಪವಾದುದು ಎಂದು ಪರರ ಅಂಗೀಕಾರ. ಇಂತಹ ಘಟಭ್ರಮಕ್ಕಿಂತ ಮೊದಲೇ ಅಜ್ಞಾನವು ನಾಶಹೊಂದಿರುವುದರಿಂದ ಇಂತಹ ಘಟಭ್ರಮವನ್ನು ಕುರಿತು ಅಜ್ಞಾನವು ಹೇಗೆ ದೋಷವಾಗುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ತತ್ರ ವೃತ್ತಿನಾಶೋತ್ತರಕಾಲೀನೇಽಧಿಷ್ಠಾನಚೈತನ್ಯಾತ್ಮಕಭ್ರಮೇ । ದೂಷಣಂ ಭ್ರಮಕಾರಣೀಭೂತದೋಷಃ ॥ ೧೦೭೩ ॥

**ಅಜ್ಞಾನಾಪಗಮೇ ತತ್ತದ್ವಸ್ತು ಬ್ರಹ್ಮ ತವೋಲ್ಲಿಖೇತ್ ।**
**ತದ್ಭ್ರಾಂತಿದೃಷ್ಟತ್ವಕಥಾಽಪ್ಯೇಷಾಂ ತಸ್ಮಾದ್ ವೃಥಾ ಭವೇತ್ ॥ ೧೦೭೪ ॥**

**ಅರ್ಥ-** ಅಜ್ಞಾನಾಪಗಮೇ = ಅಜ್ಞಾನವು ನಾಶವಾದ ಮೇಲೆ, ತವ ಬ್ರಹ್ಮ = ನಿನ್ನ ಬ್ರಹ್ಮನು, ತತ್ತದ್ವಸ್ತು = ಆಯಾವಸ್ತುಗಳನ್ನು, ಉಲ್ಲಿಖೇತ್. = ಉಲ್ಲೇಖಿಸುತ್ತದೆ, ಏಷಾಂ = ಈ ಘಟಾದಿವಸ್ತುಗಳಿಗೆ, ತಸ್ಮಾತ್ = ಆ ಕಾರಣದಿಂದ, ತದ್ಭ್ರಾಂತಿದೃಷ್ಟತ್ವಕಥಾಪಿ = ಬ್ರಹ್ಮಭ್ರಮದೃಷ್ಟತ್ವ ಕಥೆಯು ಕೂಡ, ವೃಥಾ ಭವೇತ್ = ವ್ಯರ್ಥವಾಗುತ್ತದೆ.

**ಅನುವಾದ-** ಅಜ್ಞಾನವು ನಾಶವಾದ ಮೇಲೆ ಬ್ರಹ್ಮನು ಆಯಾವಸ್ತುಗಳನ್ನು ಉಲ್ಲೇಖಿಸುತ್ತಾನೆ. ಆದ್ದರಿಂದ ಘಟಾದಿವಸ್ತುಗಳಿಗೆ ಬ್ರಹ್ಮಭ್ರಾಂತಿದೃಷ್ಟತ್ವ ಕಥೆಯೂ ಸಹ ವ್ಯರ್ಥವಾದುದು.

**ಭಾವವಿಲಾಸಿನೀ–** ಏತದೇವ ವಿಶದಯತಿ **॥ ಅಜ್ಞಾನಾಪಗಮ ಇತಿ ॥** ತದ್ಭ್ರಾಂತಿಸೃಷ್ಟತ್ವಕಥಾ। ತದ್ಭ್ರಾಂತಿಃ ಬ್ರಹ್ಮಭ್ರಾಂತಿಃ । ಏಷಾಂ ಘಟಾದೀನಾಮ್ । ತಸ್ಮಾದಜ್ಞಾನಾಖ್ಯ ದೋಷಾಭಾವದಶಾಯಾಂ ದೃಷ್ಟತ್ವಾತ್ ॥ ೧೦೭೪ ॥

**ತಸ್ಮಾನ್ನಾತ್ರಾಕ್ಷದೋಷೋಽಸ್ತಿ ನಾರ್ಥದೋಷೋಽಪಿ ದೃಶ್ಯತೇ ।**
**ಚಿತ್ರಂ ಪಿತ್ರೋರಭಾವೇಽಪಿ ಭ್ರಮಸೂನುರಯಂ ತವ ।**
**ತಸ್ಮಾತ್ ಸತ್ಯಂ ಜಗತ್ ಸರ್ವಮಭ್ರಾಂತೇರಪಿ ದರ್ಶನಾತ್ ॥ ೧೦೭೫ ॥**

**ಅರ್ಥ-** ತಸ್ಮಾತ್ = ಆ ಕಾರಣದಿಂದ, ಅತ್ರ = ಘಟಾದಿಭ್ರಮಸ್ಥಳದಲ್ಲಿ, ಅಕ್ಷದೋಷೋ ನಾಸ್ತಿ = ಇಂದ್ರಿಯ ದೋಷವು ಇಲ್ಲ, ಅರ್ಥದೋಷೋಽಪಿ = ಅರ್ಥದೋಷವೂ ಕೂಡ, ನ ದೃಶ್ಯತೇ = ಕಾಣುವುದಿಲ್ಲ, ಪಿತ್ರೋರಭಾವೇಽಪಿ = ತಂದೆ ತಾಯಿಗಳಿಲ್ಲದಿದ್ದರೂ, ತವ = ನಿನ್ನ, ಅಯಂ ಭ್ರಮಸೂನುಃ = ಈ ಭ್ರಮಕುಮಾರನು ಉತ್ಪನ್ನನಾಗಿದ್ದಾನೆ ಎಂಬುದು, ಚಿತ್ರಂ = ಆಶ್ಚರ್ಯಕರವಾದುದು, ತಸ್ಮಾತ್ = ಆದ್ದರಿಂದ, ಅಭ್ರಾಂತೇರಪಿ ದರ್ಶನಾತ್ = ಭ್ರಾಂತಿರಹಿತ ಪುರುಷನಿಂದಲೂ ಪ್ರತೀಯಮಾನವಾಗಿರುವುದರಿಂದ, ಸರ್ವಂ ಜಗತ್ = ಎಲ್ಲ ಜಗತ್ತು, ಸತ್ಯಂ = ಸತ್ಯವಾದುದು.

**ಅನುವಾದ-** ಆದ್ದರಿಂದ ಘಟಾದಿಜ್ಞಾನವಿಷಯದಲ್ಲಿ ಇಂದ್ರಿಯದೋಷವಿಲ್ಲ. ಅರ್ಥದೋಷವೂ ಕಾಣುವುದಿಲ್ಲ. ತಂದೆತಾಯಿಗಳಿಲ್ಲದಿದ್ದರೂ ನಿನ್ನ ಭ್ರಮ-ಕುಮಾರನ ಉತ್ಪತ್ತಿಯು ಆಶ್ಚರ್ಯಕರವಾದುದು. ಭ್ರಾಂತಿಯಲ್ಲದ ಜ್ಞಾನದಿಂದ ಪ್ರತೀಯಮಾನವಾದುದರಿಂದ ಈ ಎಲ್ಲ ಜಗತ್ತು ಸತ್ಯವೇ ಆಗಿದೆ.

**ಭಾವವಿಲಾಸಿನೀ–**ತಸ್ಮಾದರ್ಥಕರಣದೋಷಾಭಾವೇಽಪಿ ಪ್ರತೀಯಮಾನತ್ವಾತ್ ॥೧೦೭೫॥

**ವಿವರಣೆ-** ಕಾಚಾದಿಇಂದ್ರಿಯದೋಷವು ಪಿತೃಸ್ಥಾನಾಪನ್ನವಾದುದು. ಅವಿದ್ಯಾರೂಪವಾದ ಅರ್ಥದೋಷವು ಮಾತೃಸ್ಥಾನಾಪನ್ನವಾದುದು. ಅವೆರಡೂ ಇಲ್ಲದಿದ್ದರೂ ಭ್ರಮರೂಪಕುಮಾರನು ಜನಿಸಿದ್ದಾನೆ ಎಂದು ಇಲ್ಲಿ ರಾಜರು ಪರಿಹಾಸಮಾಡುತ್ತಾರೆ.

**ಪೃಥುಬುಧ್ನೋದರಾಕಾರೇ ಘಟ ಏವ ಘಟತ್ವಧೀಃ ।**
**ತಸ್ಯಾಪಿ ಸ್ಯಾಜ್ಜಡಾಕಾರವ್ಯಂಗ್ಯಧೀರ್ನ ನಿರಾಕೃತೌ ।**
**ತದಾ ಪೂರ್ವೋಕ್ತಯುಕ್ತ್ಯೈವ ತತ್ರಾಪಿ ಭ್ರಾಂತಿತಾ ಗತಾ ॥ ೧೦೭೬ ॥**

**ಅರ್ಥ-** ಪೃಥುಬುಧ್ನೋದರಾಕಾರೇ = ಪೃಥುಬುಧ್ನೋದರಾಕಾರವುಳ್ಳ, ಘಟ ಏವ = ಘಟದಲ್ಲಿಯೇ, ಘಟತ್ವಧೀಃ = ಘಟತ್ವಬುದ್ಧಿ ಉಂಟಾಗುತ್ತದೆ, ತಸ್ಯಾಪಿ = ಘಟತ್ವವ್ಯಂಜಕವಾದ ಆಕಾರವುಳ್ಳ ಘಟಾದಿಗಳಲ್ಲಿಯೇ, ಜಡಾಕಾರ-ವ್ಯಂಗ್ಯಧೀಃ = ಜಡವಾದ ಆಕಾರದಿಂದ ವ್ಯಂಗ್ಯವಾದ ಜಾತಿಪ್ರತೀತಿಯು, ಸ್ಯಾತ್ = ಉಂಟಾಗುತ್ತದೆ, ನಿರಾಕೃತೌ = ನಿರಾಕಾರವಾದ ಬ್ರಹ್ಮಚೈತನ್ಯದಲ್ಲಿ, ನ = ಉಂಟಾಗುವುದಿಲ್ಲ, ತದಾ = ಆಗ, ಪೂರ್ವೋಕ್ತಯುಕ್ತ್ಯೈವ = ಹಿಂದೆ ಹೇಳಿದ ಯುಕ್ತಿಯಿಂದಲೇ, ತತ್ರಾಪಿ = ಜಾತಿಪ್ರತೀತಿಯಲ್ಲಿಯೂ, ಭ್ರಾಂತಿತಾ = ಭ್ರಮತ್ವವು, ಗತಾ = ಹೊರಟುಹೋಗುತ್ತದೆ.

**ಅನುವಾದ-** ಪೃಥುಬುಧ್ನೋದರಾಕಾರವುಳ್ಳ ಘಟದಲ್ಲಿಯೇ ಘಟತ್ವಪ್ರತೀತಿಯು ಉಂಟಾಗುತ್ತದೆ. ಜಡಾಕಾರರೂಪವಾದ ವ್ಯಂಜಕವುಳ್ಳ ಘಟಾದಿಗಳಲ್ಲಿ ಉಂಟಾಗುವ ಘಟತ್ವಪ್ರತೀತಿಯೇ ಘಟತ್ವಜಾತಿಪ್ರತೀತಿಯಾಗಿದೆ. ಅಂತಹ ಜಡಾಕಾರವ್ಯಂಗ್ಯವಾದ ಘಟತ್ವಪ್ರತೀತಿಯು ನಿರಾಕಾರನಾದ ಬ್ರಹ್ಮನಲ್ಲಿ ಉಂಟಾಗುವುದಿಲ್ಲ. ಸಾಕಾರವಾದ ಘಟದಲ್ಲಿಯೇ ಉಂಟಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ವ್ಯಾವಹಾರಿಕಜಗದಾರೋಪಾಧಿಷ್ಠಾನ ಯುಕ್ತಿಯಿಂದಲೂ ಅಧಿಷ್ಠಾನಾಭಿಮತವಾದ ಚಿದಂಶ ಉಲ್ಲೇಖರಾಹಿತ್ಯರೂಪವಾದ ಯುಕ್ತಿಯಿಂದಲೂ ಜಾತಿಪ್ರತೀತಿಯಲ್ಲಿಯೂ ಭ್ರಮತ್ವವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಪ್ರಾಗುಕ್ತಯುಕ್ತಿಂ ಚ ಸ್ಮಾರಯತಿ ॥ **ಪೃಥ್ವಿತಿ** ॥ ತಸ್ಯ ಘಟತ್ವಸ್ಯ ವ್ಯಂಜಕವತಿ ಘಟಾದೌ ಯಾ ಘಟತ್ವಜಾತಿಬುದ್ಧಿಃ ಸೈವ ಘಟತ್ವಬುದ್ಧಿರಿತ್ಯರ್ಥಃ । ಜಡಾಕಾರವ್ಯಂಗ್ಯಧೀ-ರ್ಜಡಾಕಾರವ್ಯಂಗ್ಯಾ ಘಟತ್ವಧೀಶ್ಚ ನಿರಾಕೃತೌ ಬ್ರಹ್ಮಚಿತಿ ನ ಕಿಂತು ಸಾಕಾರೇ ಘಟ ಏವೇತ್ಯರ್ಥಃ। ತದಾ ಸಾಕಾರಘಟ ಏವ ಘಟತ್ವಜಾತೇಃ ಪ್ರತೀತೌ । ಪೂರ್ವೋಕ್ತಯುಕ್ತ್ಯಾ ವ್ಯಾವಹಾರಿಕಜಗದಾರೋಪಾಧಿಷ್ಠಾನತ್ವಯುಕ್ತ್ಯಾಅಧಿಷ್ಠಾನಾಭಿಮತಚಿದಂಶೋಲ್ಲೇಖ-ರಹಿತತ್ವಯುಕ್ತ್ಯಾ ಚ । ತತ್ರಾಪಿ ಜಾತಿಪ್ರತೀತಾವಪಿ ॥ ೧೦೭೬ ॥

**ಯಸ್ಮಾತ್ ಸಾರ್ವಜನೀನೋಽಯಂ ನ ಸ್ಯಾದನುಭವೋ ಭ್ರಮಃ ।**
**ಅತೋಽತ್ರ ದೋಷಚಿಂತಾಂ ಚ ತನ್ನ ದೋಷಜ್ಞೋಽನುಮನ್ಯತೇ ॥೧೦೭೭॥**

**ಅರ್ಥ-** ಯಸ್ಮಾತ್ = ಯಾವ ಕಾರಣದಿಂದ, ಅಯಂ ಅನುಭವಃ = ಈ ಅನುಭವವು, ಸಾರ್ವಜನೀನಃ = ಸಾರ್ವಜನೀನವಾಗಿದೆಯೋ ಆ ಕಾರಣದಿಂದ, ಭ್ರಮಃ ನ = ಭ್ರಮವಲ್ಲ, ಅತಃ = ಆದ್ದರಿಂದ, ಅತ್ರ = ಈ ಪ್ರತೀತಿಯಲ್ಲಿ, ದೋಷಚಿಂತಾಂ ಚ = ದೋಷಚಿಂತನೆಯನ್ನು, ದೋಷಜ್ಞಃ = ವಿದ್ವಾಂಸನಾದವನು, ನಾನುಮನ್ಯತೇ = ಅಂಗೀಕರಿಸುವುದಿಲ್ಲ.

**ಅನುವಾದ-** ಈ ಅನುಭವವು ಸಾರ್ವಜನೀನವಾದ್ದರಿಂದ ಭ್ರಮವಲ್ಲ. ಆದ್ದರಿಂದ ಇಲ್ಲಿ ವಿದ್ವಾಂಸನಾದವನು ದೋಷಚಿಂತನೆಯನ್ನು ಅಂಗೀಕರಿಸುವುದಿಲ್ಲ.

**ಭಾವವಿಲಾಸಿನೀ-** ಅಯಂ ಜಾತ್ಯಾದ್ಯನುಭವಃ । ಸಾರ್ವಜನೀನ ಇತ್ಯನೇನಾಪ್ಯಸ್ಯಾನುಭವಸ್ಯ ಚಿದಂಶಾವಿಷಯತ್ವಂ ಸೂಚಯತಿ । ಘಟಮಾತ್ರವಿಷಯತ್ವಸ್ಯೈವಾಽವಿಪಾಲ= ಗೋಪಾಲಂ ಸಂಮತತ್ವಾತ್ । ಅತಃ ಜಾತ್ಯಾದಿಪ್ರತೀತೇರ್ಭ್ರಮತ್ವಾಭಾವಾತ್ । ಅತ್ರ ಜಾತಿಪ್ರತೀತೌ । ದೋಷಚಿಂತಾಂ ಜಾತಿವ್ಯಕ್ತ್ಯೋರಜ್ಞಾನೋಪಾದಾನಕತ್ವಾಖ್ಯದೋಷಚಿಂತಾಮ್ ॥೧೦೭೭॥

**ವಿವರಣೆ-** ಸಾರ್ವಜನೀನ ಎಂಬ ಪದದಿಂದ ಆವಿಪಾಲಗೋಪಾಲರವರೆಗೆ ಈ ಪ್ರತೀತಿಯು ಘಟಮಾತ್ರಕವಿಷಯಕವೆಂದೂ, ಚಿದ್ ಅವಿಷಯಕವೆಂದೂ ಸಮ್ಮತವಾದ್ದರಿಂದ ಈ ಪ್ರತೀತಿಗೆ ಭ್ರಮತ್ವವನ್ನು ಹೇಳಬಾರದು ಎಂದು ಸೂಚಿಸುತ್ತಾರೆ.

ಬ್ರಹ್ಮಣ್ಯವಿದ್ಯಮಾನಾಂಸ್ತಾನ್ ಯದಿ ಬ್ರಹ್ಮಣಿ ದರ್ಶಯೇತ್ ।
ತದಾ ಭ್ರಮೋಽಪಿ ಸಾ ಧೀಃ ಸ್ಯಾದ್ಘಟಾದಿಸ್ವಸ್ವಧರ್ಮಿಷು ।
ತಾಂಸ್ತಾಂಧರ್ಮಾನ್ ದರ್ಶಯಂತೀ ಕೇನ ವಾ ಹೇತುನಾ ಭ್ರಮಃ ॥ ೧೦೭೮ ॥

**ಅರ್ಥ-** ಯದಿ = ಒಂದು ಪಕ್ಷ, ಬ್ರಹ್ಮಣ್ಯವಿದ್ಯಮಾನಾನ್= ಬ್ರಹ್ಮನಲ್ಲಿ ಇಲ್ಲದಿರುವ, ತಾನ್ = ಘಟತ್ವಾದಿ ಧರ್ಮಗಳನ್ನು, ಬ್ರಹ್ಮಣಿ = ಬ್ರಹ್ಮನಲ್ಲಿ, ದರ್ಶಯೇತ್ = ವಿಷಯೀಕರಿಸುವುದಾದರೆ, ತದಾ = ಆಗ, ಸಾ = ಆ ಜಾತಿಪ್ರತೀತಿಯು, ಭ್ರಮಃ ಸ್ಯಾದಪಿ = ಭ್ರಮವು ಆಗಬಹುದು, ಘಟಾದಿಸ್ವಸ್ವಧರ್ಮಿಷು = ಘಟಾದಿ ತನ್ನ ತನ್ನ ಧರ್ಮಿಗಳಲ್ಲಿ, ತಾಂಸ್ತಾನ್ಧರ್ಮಾನ್=ಆಯಾ ಘಟತ್ವಾದಿ ಧರ್ಮಗಳನ್ನು, ದರ್ಶಯಂತೀ= ತೋರಿಸುವಂತಹ ಈ ಪ್ರತೀತಿಯು, ಕೇನ ವಾ ಹೇತುನಾ = ಯಾವ ಕಾರಣದಿಂದ, ಭ್ರಮಃ = ಭ್ರಮವಾಗುತ್ತದೆ?

**ಅನುವಾದ-** ಬ್ರಹ್ಮನಲ್ಲಿ ಅವಿದ್ಯಮಾನವಾದ ಘಟತ್ವಾದಿಧರ್ಮಗಳನ್ನು ಬ್ರಹ್ಮನಲ್ಲಿ ತೋರಿಸಿದರೆ, ಆಗ ಆ ಜಾತಿಪ್ರತೀತಿಯು ಒಂದು ಪಕ್ಷ ಭ್ರಮವಾಗಬಹುದು. ಆದರೆ, ಘಟಾದಿ ತನ್ನ ತನ್ನ ಧರ್ಮಿಗಳಲ್ಲಿ ಆಯಾ ಘಟತ್ವಾದಿಧರ್ಮಗಳನ್ನು ತೋರಿಸುವ ಆ ಬುದ್ಧಿಯು ಯಾವ ಕಾರಣದಿಂದ ಭ್ರಮವಾಗುತ್ತದೆ?

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಜಾತಿಪ್ರತೀತೇರ್ಭ್ರಮತ್ವಂ ನ ಘಟತ ಇತ್ಯಾಹ - ಬ್ರಹ್ಮಣೀತಿ ॥ ತಾನ್ ಘಟಾದಿಜಡಮಾತ್ರಾಶ್ರಿತಧರ್ಮಾನ್ । ಸಾಧೀಃ ಬ್ರಹ್ಮಣ್ಯವಿದ್ಯಮಾನ-ಘಟತ್ವಸ್ಯ ಬ್ರಹ್ಮಣಿ ಧೀಃ । ತಾಂಸ್ತಾಂಧರ್ಮಾನ್ ಘಟತ್ವಪಟತ್ವಾದಿಧರ್ಮಾನ್ । ಅತದ್ವತಿ ತತ್ಪ್ರಕಾರಾಕಜ್ಞಾನಂ ಹಿ ಭ್ರಮಃ । ಸ ಚ ಘಟತ್ವರಹಿತೇ ಬ್ರಹ್ಮಣಿ ಘಟತ್ವರಹಿತಪಟ ಇವ ಘಟತ್ವಬುದ್ಧಾವೇವ ಸ್ಯಾತ್ । ನ ತು ಘಟಾದಿಷ್ವೇವ ಘಟತ್ವಾದಿಬುದ್ಧೌ । ವಿಶ್ವಾಧಾರೇಽಪಿ ಬ್ರಹ್ಮಣಿ ಯೋಗ್ಯಘಟಾದಿಧರ್ಮಿಣಾಂ ಕದಾಚಿದಾಶ್ರಿತತ್ವಪ್ರತೀತಾವಪಿ ಧರ್ಮಾಣಾಮೇಷಾಂ ಕದಾಪಿ ಬ್ರಹ್ಮಣಿ ಪ್ರತೀತ್ಯಭಾವೇನ ಕಥಂ ತದ್ಬುದ್ಧೀನಾಂ ಭ್ರಾಂತಿತ್ವಮ್ । ನ ಹಿ ಭೂತಲೇ ಘಟ ಇತಿವತ್ ಭೂತಲೇ ಘಟತ್ವಮಿತ್ಯಪಿ ಕೋಽಪಿ ಪ್ರತ್ಯೇತಿ । ಅತೋ ಧರ್ಮಿಣಾಮನ್ಯತ್ರ ಪ್ರತೀತಾವಪಿ ನ ಧರ್ಮಾಣಾಮನ್ಯತ್ರ ಪ್ರತೀತಿರಿತಿ ಭಾವಃ ॥ ೧೦೭೮ ॥

**ವಿವರಣೆ–** ಇಲ್ಲಿ ಇನ್ನೊಂದು ರೀತಿಯಿಂದ ಜಾತಿಪ್ರತೀತಿಗೆ ಭ್ರಮತ್ವವನ್ನು ನಿರಾಕರಿಸುತ್ತಾರೆ. ಅತದ್ವತಿ ತತ್ಪ್ರಕಾರಾಕಜ್ಞಾನವು ಭ್ರಮ. ಬ್ರಹ್ಮನಲ್ಲಿ ಘಟತ್ವವು ತೋರಿದರೆ ಆಗ ಅದು ಭ್ರಮವಾಗುತ್ತದೆ. ಘಟದಲ್ಲಿಯೇ ಘಟತ್ವವು ತೋರಿದರೆ, ಆ ಜ್ಞಾನವು ತದ್ವತಿ ತತ್ಪ್ರಕಾರಕವಾಗುವುದರಿಂದ ಭ್ರಾಂತಿಯಾಗುವುದಿಲ್ಲ. 'ಭೂತಲೇ ಘಟಃ' ಎಂದು ತೋರುತ್ತದೆಯೇ ಹೊರತಾಗಿ 'ಭೂತಲೇ ಘಟತ್ವಂ' ಎಂದು ಯಾರಿಗೂ ತೋರುವುದಿಲ್ಲ. ಆದ್ದರಿಂದ ಧರ್ಮಿಗಳು ಒಂದುಪಕ್ಷ ಅನ್ಯತ್ರಪ್ರತೀತವಾದರೂ ಧರ್ಮಗಳು ಸ್ವಸ್ವಧರ್ಮಿಯಲ್ಲಿಯೇ ಪ್ರತೀತವಾಗುತ್ತವೆ. ಆದ್ದರಿಂದ ಘಟಾದಿಗಳಲ್ಲಿಯೇ ಪ್ರತೀತವಾಗುವ ಘಟತ್ವಾದಿಗಳಿಗೆ ಭ್ರಾಂತಿವಿಷಯತ್ವವಿಲ್ಲ ಎಂದು ಅಭಿಪ್ರಾಯ.

ಅಥ ಧರ್ಮಾ ನ ಸಂತ್ಯೇವ ತೇಷು ತೇಷು ಚ ಧರ್ಮಿಷು ।
ಅತಸ್ತೇಷ್ವೇವ ತತ್ತದ್ಧೀರ್ಯದಿ ಭ್ರಾಂತಿರಿತೀರ್ಯತೇ ॥ ೧೦೭೯ ॥

ತರ್ಹಿ ಕುಡ್ಯೇಽಪಿ ಘಟಧೀರ್ಘಟಾದೌ ಪಟಧೀರಪಿ ।
ಕುತೋ ನ ತೇನ ತೇ ಧರ್ಮಾಃ ಸಂತ್ಯೇವ ಸ್ವಸ್ವ(ಭೂಮಿ)ಧರ್ಮಿಷು ॥
॥ ೧೦೮೦ ॥

**ಅರ್ಥ–** ಅಥ = ಪಕ್ಷಾಂತರದಲ್ಲಿ, ತೇಷು ತೇಷು ಚ ಧರ್ಮಿಷು = ಆಯಾ ಧರ್ಮಿಗಳಲ್ಲಿ, ಧರ್ಮಾಃ = ಘಟತ್ವಾದಿ ಧರ್ಮಗಳು, ನ ಸಂತ್ಯೇವ = ಇಲ್ಲವೇ ಇಲ್ಲ, ಅತಃ= ಆದ್ದರಿಂದ, ತೇಷ್ವೇವ = ಘಟಾದಿಗಳಲ್ಲಿಯೇ, ತತ್ತದ್ಧೀಃ= ಘಟತ್ವಾದಿಪ್ರತೀತಿಯು, ಭ್ರಾಂತಿಃ = ಭ್ರಾಂತಿ ಎಂದು, ಯದಿ = ಒಂದುಪಕ್ಷ, ಈರ್ಯತೇ = ಹೇಳಲ್ಪಡುವುದಾದರೆ,

ತರ್ಹಿ = ಆಗ, ಕುಡ್ಯೇಽಪಿ = ಭಿತ್ತಿಯಲ್ಲಿಯೂ, ಘಟಧೀಃ = ಘಟತ್ವಜ್ಞಾನವು, ಘಟಾದೌ= ಘಟಾದಿಗಳಲ್ಲಿಯೂ, ಪಟಧೀರಪಿ = ಪಟತ್ವಜ್ಞಾನವೂ ಕೂಡ, ಕುತೋ ನ = ಏಕೆ ಉಂಟಾಗುವುದಿಲ್ಲ? ತೇನ = ಆ ಕಾರಣದಿಂದ, ತೇ ಧರ್ಮಾಃ = ಆ ಘಟತ್ವಾದಿ ಧರ್ಮಗಳು, ಸ್ವಸ್ವಧರ್ಮಿಷು = ತಮ್ಮ ತಮ್ಮ ಧರ್ಮಿಗಳಲ್ಲಿ, ಸಂತ್ಯೇವ = ಇದ್ದೇ ಇವೆ.

**ಅನುವಾದ-** ಒಂದುಪಕ್ಷ ಘಟಾದಿಧರ್ಮಿಗಳಲ್ಲಿ ಘಟತ್ವಾದಿಧರ್ಮಗಳು ಇಲ್ಲವೇ ಇಲ್ಲ. ಆದ್ದರಿಂದ ಘಟಾದಿಗಳಲ್ಲಿ ಉಂಟಾಗುವ ಘಟತ್ವಾದಿಪ್ರತೀತಿಗಳು ಭ್ರಾಂತಿ ಎಂದು ಹೇಳುವುದಾದರೆ, ಆಗ ಭಿತ್ತಿಯಲ್ಲಿ ಘಟತ್ವಪ್ರತೀತಿಯು ಮತ್ತು ಘಟಾದಿಗಳಲ್ಲಿ ಪಟತ್ವಪ್ರತೀತಿಯು ಏಕೆ ಬರುವುದಿಲ್ಲ? ಆ ಕಾರಣದಿಂದ ಆ ಘಟತ್ವಾದಿ ಧರ್ಮಗಳು ತಮ್ಮ ತಮ್ಮ ಧರ್ಮಿಗಳಾದ ಘಟಾದಿಗಳಲ್ಲಿ ಇದ್ದೇ ಇವೆ.

**ಭಾವವಿಲಾಸಿನೀ–** ಶಂಕತೇ ॥ **ಅಥೇತಿ** ॥ ತೇಷ್ವೇವ ಘಟಾದಿಷ್ವೇವ । ತತ್ತದ್ಧೀಃ ಘಟತ್ವಪಟತ್ವಾದಿಧೀಃ । ತರ್ಹಿ ಘಟಧೀಃ ಘಟತ್ವವತ್ತಾಧೀಃ । ಕುಡ್ಯಘಟಯೋರುಭಯೋರಪಿ ಘಟತ್ವರಹಿತತ್ವ-ಸಾಮ್ಯೇ ಘಟ ಇವ ಕದಾಚಿತ್ಕುಡ್ಯೇಽಪಿ ಘಟತ್ವಧೀಸ್ಸ್ಯಾತ್ । ನ ಚೈತದಸ್ತಿ । ಅತೋ ಘಟೇ ಘಟತ್ವವತ್ತ್ವಮೇವ ವಕ್ತವ್ಯಮ್ । ನ ತು ತದಭಾವ ಇತಿ ಭಾವಃ । ತೇನ ವ್ಯವಸ್ಥಯಾ ಸ್ವಸ್ವ-ಧರ್ಮಿಷ್ವೇವ ತತ್ತದ್ಧರ್ಮಪ್ರತೀತಿನಿಯಮೇನ ॥ ೧೦೭೯-೧೦೮೦ ॥

ನ ಚೇತ್ ಕುತೋ ನ ಸಂತೀತಿ ಪ್ರಶ್ನೇ ಕಿಂ ಸ್ಯಾತ್ ತವೋತ್ತರಮ್ ।
ಬಾಧಾದಿತಿ ವದಂಶ್ಚಾಪಿ ಪ್ರಷ್ಟವ್ಯಃ ಪ್ರತಿವಾದಿನಾ ॥ ೧೦೮೧ ॥

**ಅರ್ಥ-** ನ ಚೇತ್ = ಇದನ್ನು ಅಂಗೀಕರಿಸದಿದ್ದರೆ, ಕುತೋ ನ ಸಂತೀತಿ ಪ್ರಶ್ನೇ = ಘಟಾದಿಗಳಲ್ಲಿ ಘಟತ್ವಾದಿಗಳು ಏಕೆ ಇಲ್ಲ ಎಂಬ ಪ್ರಶ್ನೆಗೆ, ತವ ಉತ್ತರಮ್ = ನಿನ್ನ ಉತ್ತರವು, ಕಿಂ = ಏನು? ಬಾಧಾದಿತಿ ವದನ್= ಬಾಧದಿಂದ ಎಂದು ಹೇಳುವುದಾದರೆ ಅಂತಹ ವಾದಿಯು, ಪ್ರತಿವಾದಿನಾ = ಪ್ರತಿವಾದಿಯಾದ ತತ್ತ್ವವಾದಿಯಿಂದ, ಪ್ರಷ್ಟವ್ಯಃ = ಪ್ರಶ್ನಿಸಲ್ಪಡಬೇಕು.

**ಅನುವಾದ -** ಧರ್ಮಿಗಳಲ್ಲಿ ಧರ್ಮಸತ್ವವನ್ನು ಅಂಗೀಕರಿಸದಿದ್ದರೆ ಘಟತ್ವಾದಿ-ಧರ್ಮಗಳು ಘಟದಲ್ಲಿ ಏಕೆ ಇಲ್ಲ ಎಂಬ ಪ್ರಶ್ನೆಗೆ ನಿನ್ನ ಉತ್ತರವೇನು? ಬಾಧವಿರುವ ಕಾರಣದಿಂದ ಎಂದು ಹೇಳುವ ವಾದಿಯು ಪ್ರತಿವಾದಿಯಾದ ತತ್ತ್ವವಾದಿಯಿಂದ ಹೀಗೆ ಪ್ರಶ್ನಿಸಲ್ಪಡಬೇಕು.

**ಭಾವವಿಲಾಸಿನೀ–** ನ ಚೇತ್ ಏವಮಪಿ ಧರ್ಮಿಷು ಧರ್ಮಸತ್ತ್ವಂ ನ ಚೇತ್ । ಕುತೋ ನ ಸಂತಿ ತತ್ತದ್ಧರ್ಮಾಸ್ತತ್ತದ್ಧರ್ಮಿಷು ಕುತೋ ನ ಸಂತೀತಿ ಪ್ರಶ್ನ ಇತ್ಯರ್ಥಃ ॥ ೧೦೮೧ ॥

ಘಟೇ ಘಟತ್ವಬಾಧಶ್ಚೇತ್ ಸ ನಾಸ್ತಿ ಮರಣೇಽಪಿ ತೇ ।
ಬ್ರಹ್ಮಣ್ಯಖಿಲಬಾಧಸ್ತು ನ ಬಾಧಸ್ತೇಷು ತದ್ಧಿಯಾಮ್ ॥ ೧೦೮೨ ॥

ಕಿಂತ್ವೇಷಾಂ ಜಡಧರ್ಮಾಣಾಂ ಬ್ರಹ್ಮಣಿ ಪ್ರತಿಷೇಧನೇ ।
ಜಡಧರ್ಮತ್ವದಾರ್ಢ್ಯಂ ಸ್ಯಾತ್ ತದಭಾವಃ ಕುತೋ ವದ ॥ ೧೦೮೩ ॥

**ಅರ್ಥ-** ಘಟೇ = ಘಟದಲ್ಲಿ, ಘಟತ್ವಬಾಧಶ್ಚೇತ್ = ಘಟತ್ವಬಾಧವನ್ನು ಇದೆ ಎಂದು ಹೇಳುವುದಾದರೆ, ಸಃ = ಅಂತಹ ಬಾಧವು, ತೇ = ನಿನಗೆ, ಮರಣೇऽಪಿ = ಮರಣವುಂಟಾದರೂ, ನಾಸ್ತಿ = ಇಲ್ಲ, ಬ್ರಹ್ಮಣಿ = ಬ್ರಹ್ಮನಲ್ಲಿ, ಅಖಿಲಬಾಧಸ್ತು = ಸರ್ವಬಾಧವಾದರೂ, ತೇಷು = ಘಟಾದಿಗಳಲ್ಲಿ, ತದ್ಧಿಯಾಮ್ = ಘಟತ್ವಾದಿಪ್ರತೀತಿಗಳಿಗೆ, ನ ಬಾಧಃ = ಬಾಧವಲ್ಲ.

ಕಿಂತು = ಆದರೆ, ಏಷಾಂ = ಈ, ಜಡಧರ್ಮಾಣಾಂ = ಜಡಧರ್ಮಗಳನ್ನು, ಬ್ರಹ್ಮಣಿ = ಬ್ರಹ್ಮನಲ್ಲಿ, ಪ್ರತಿಷೇಧನೇ = ಪ್ರತಿಷೇಧಮಾಡಿದರೆ, ಜಡಧರ್ಮತ್ವದಾರ್ಢ್ಯಂ = ಘಟತ್ವಾದಿಗಳು ಜಡಧರ್ಮ ಎಂಬ ದಾರ್ಢ್ಯವು, ಸ್ಯಾತ್ = ಉಂಟಾಗುತ್ತದೆ, ತದಭಾವಃ = ಘಟಾದಿಗಳಲ್ಲಿ ಘಟತ್ವಾಭಾವವು ಕುತಃ = ಯಾವ ಕಾರಣದಿಂದ ಎಂದು, ವದ = ಹೇಳು

**ಅನುವಾದ -** ಘಟದಲ್ಲಿ ಘಟತ್ವವು ಬಾಧಿತ ಎಂದು ಅಂಗೀಕರಿಸುವುದಾದರೆ, ಅಂತಹ ಬಾಧವು ನೀನು ಸತ್ತರೂ ಉಂಟಾಗುವುದಿಲ್ಲ. ಬ್ರಹ್ಮನಲ್ಲಿ ಸರ್ವವಸ್ತುಗಳ ಬಾಧವಾದರೂ ಘಟಾದಿಗಳಲ್ಲಿ ಘಟತ್ವಾದಿಪ್ರತೀತಿಗೆ ಬಾಧವಾಗುವುದಿಲ್ಲ. ಆದರೆ, ಇಂತಹ ಜಡಧರ್ಮಗಳನ್ನು ಬ್ರಹ್ಮನಲ್ಲಿ ಪ್ರತಿಷೇಧಮಾಡಿದರೆ ಘಟತ್ವಾದಿಗಳಿಗೆ ಜಡಧರ್ಮತ್ವದಾರ್ಢ್ಯವೇ ಉಂಟಾಗುತ್ತದೆ. ಆದ್ದರಿಂದ ಘಟಾದಿಗಳಲ್ಲಿ ಘಟತ್ವಾಭಾವವು ಯಾವ ಕಾರಣದಿಂದ ಸಿದ್ಧವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ತೇಷು ಘಟಾದಿಷು । ತದ್ಧಿಯಾಂ ಘಟತ್ವಾದಿಧಿಯಾಮ್ । ಯತ್ರ ಪ್ರತೀತಿಸ್ತತ್ರೈವ ತದಭಾವಧೀರ್ಹಿ ಬಾಧಃ । ತದಭಾವಾದ್ಧರ್ಮಾಣಾಂ ಧರ್ಮಿಷು ನಾಸ್ತಿತಾಪಿ ನ । ಅತಸ್ತತ್ರ ತತ್ಪ್ರತೀತಿರ್ನ ಭ್ರಮ ಇತಿ ಭಾವಃ ॥ ೧೦೮೨- ೧೦೮೩ ॥

ವ್ಯಾವಹಾರಿಕತಾऽಪ್ಯೇಷಾಂ ಬಾಧಾದೇವ ಭವೇತ್ ತವ ।
ಸ ಚ ನೈತೇಷು ತೇ ಧರ್ಮಾಃ ಸಂತೀತ್ಯಾಕಾರಕೋऽಸ್ತಿ ನ ॥ ೧೦೮೪ ॥

ಭಾವೀ ಚ ನಾಸೌ ಬಾಧಸ್ತದ್ ವ್ಯಾವಹಾರಿಕತಾ ಕುತಃ ।
ನ ಬ್ರಹ್ಮಣೀದಮಿತಿ ತು ಬಾಧೋ ನೈತಾನ್ ಪ್ರಬಾಧತೇ ॥ ೧೦೮೫ ॥

**ಅರ್ಥ-** ಏಷಾಂ = ಈ ಧರ್ಮಗಳಿಗೆ, ವ್ಯಾವಹಾರಿಕತಾಪಿ = ವ್ಯಾವಹಾರಿಕತ್ವವೂ ಕೂಡ, ತವ = ನಿನಗೆ, ಬಾಧಾದೇವ = ಬಾಧದಿಂದಲೇ, ಭವೇತ್ = ಉಂಟಾಗುತ್ತದೆ, ಏತೇಷು = ಈ ಘಟಾದಿಗಳಲ್ಲಿ, ತೇ ಧರ್ಮಾ = ಆ ಘಟತ್ವಾದಿಧರ್ಮಗಳು, ನ ಸಂತೀತ್ಯಾಕಾರಕಃ = ಇಲ್ಲ ಎಂಬ ಆಕಾರವುಳ್ಳ, ಸ ಚ = ಆ ಬಾಧವಾದರೂ, ನಾಸ್ತಿ = ವರ್ತಮಾನಕಾಲದಲ್ಲಿ ಇಲ್ಲ.

ಭಾವೀ = ಭವಿಷ್ಯತ್ಕಾಲದಲ್ಲಿಯಾದರೂ, ಅಸೌ ಬಾಧಃ = ಈ ಬಾಧವು, ನ = ಇಲ್ಲ, ತತ್ = ಆದ್ದರಿಂದ, ವ್ಯಾವಹಾರಿಕತಾ = ಘಟತ್ವಾದಿಗಳಿಗೆ ವ್ಯಾವಹಾರಿಕತ್ವವು, ಕುತಃ = ಯಾವ

ಕಾರಣದಿಂದ ಸಿದ್ಧವಾಗುತ್ತದೆ? ನ ಬ್ರಹ್ಮಣಿ ಇದಂ = ಬ್ರಹ್ಮನಲ್ಲಿ ಘಟತ್ವಾದಿಧರ್ಮಗಳು ಇಲ್ಲ, ಇತಿ ತು ಬಾಧಃ = ಎಂಬ ಬಾಧವಾದರೂ, ನೈತಾನ್ = ಘಟದಲ್ಲಿ ಘಟತ್ವಾದಿಧರ್ಮಗಳನ್ನು ನ ಪ್ರಬಾಧತೇ = ಬಾಧಿಸುವುದಿಲ್ಲ.

**ಅನುವಾದ** - ಘಟತ್ವಾದಿಧರ್ಮಗಳಿಗೆ ವ್ಯಾವಹಾರಿಕತ್ವವನ್ನಾದರೂ ನೀನು ಬಾಧದಿಂದಲೇ ಅಂಗೀಕರಿಸಬೇಕು. ಈ ಘಟಾದಿಗಳಲ್ಲಿ ಆ ಘಟತ್ವಾದಿಧರ್ಮಗಳು ಇಲ್ಲ ಎಂಬ ಆಕಾರವುಳ್ಳ ಬಾಧವಾದರೂ ವರ್ತಮಾನಕಾಲದಲ್ಲಿ ಇಲ್ಲ. ಭವಿಷ್ಯತ್ಕಾಲದಲ್ಲಿಯೂ ಅಂತಹ ಬಾಧವಿಲ್ಲ. ಆದ್ದರಿಂದ ಘಟತ್ವಾದಿಧರ್ಮಗಳಿಗೆ ವ್ಯಾವಹಾರಿಕತ್ವವು ಹೇಗೆ ಸಿದ್ಧವಾಗುತ್ತದೆ? ಬ್ರಹ್ಮನಲ್ಲಿ ಘಟತ್ವಾದಿಧರ್ಮಗಳು ಇಲ್ಲ ಎಂಬ ಬಾಧವಾದರೂ ಭಿನ್ನವಿಷಯಕವಾದುದರಿಂದ ಘಟಾದಿಗಳಲ್ಲಿ ಘಟತ್ವಾದಿ-ಧರ್ಮಗಳನ್ನು ಬಾಧಿಸುವುದಿಲ್ಲ.

**ಭಾವವಿಲಾಸಿನೀ**— ಸಃ ಬಾಧಃ । ಏತೇಷು ಧರ್ಮಿಷು ನ ಸಂತೀತಿ ಸಂಬಂಧಃ ॥ ತತ್ತಸ್ಮಾತ್ ॥

ಅತೋ ಜಡಸ್ಥರೂಪಾದಿಗುಣಾನಾಂ ಕರ್ಮಣಾಮಪಿ ।
ಜಾತ್ಯಾದೀನಾಂ ಚ ಸರ್ವೇಷಾಮಬಾಧ್ಯತ್ವೇನ ಸರ್ವದಾ ॥ ೧೦೮೬ ॥

ವ್ಯಾವಹಾರಿಕತಾಽಯೋಗಾತ್ ತತ್ಸತ್ತ್ವಂ ಬ್ರಹ್ಮಸತ್ತ್ವವತ್ ।
ಪಾರಮಾರ್ಥ್ಯೇನೈವ ಸತ್ತ್ವಮಭೂತ್ ಸದ್ಯುಕ್ತಿಸತ್ತ್ವತಃ ॥ ೧೦೮೭ ॥

ಘಟೋಽಪಿ ಬ್ರಹ್ಮಣಿ ನ ಚೇನ್ಮೃತ್ಕಪಾಲೇ ಭವಿಷ್ಯತಿ ।
ಬ್ರಹ್ಮಣ್ಯಖಿಲಬಾಧಸ್ತು ಕಸ್ಯ ವಾ ಬಾಧಕೋ ವದ ॥ ೧೦೮೮ ॥

ಕಪಾಲೇ ನೇತಿ ಬಾಧಸ್ತು ನಾಸ್ತಿ ನಾಪಿ ಭವಿಷ್ಯತಿ ।
ತದ್ಧರ್ಮಿಣಾಂ ಚ ಸರ್ವೇಷಾಮಬಾಧಾತ್ ಸ್ವಸ್ವಧರ್ಮವತ್ ॥ ೧೦೮೯ ॥

ವ್ಯಾವಹಾರಿಕತಾಽಯೋಗಾತ್ ಪಾರಮಾರ್ಥ್ಯಮಭೂದ್ ಬಲಾತ್ ।
ಆಪಣಸ್ಥಸ್ಯ ರೂಪ್ಯಸ್ಯ ಶುಕ್ತೌ ಬಾಧೇಽಪಿ ಕಾ ಕ್ಷತಿಃ ॥ ೧೦೯೦ ॥

**ಅರ್ಥ**- ಅತಃ = ಆದ್ದರಿಂದ, ಜಡಸ್ಥ = ಜಡದಲ್ಲಿರುವ, ರೂಪಾದಿಗುಣಾನಾಂ = ರೂಪಾದಿಗುಣಗಳಿಗೂ, ಕರ್ಮಣಾಮಪಿ = ಮತ್ತು ಕರ್ಮಗಳಿಗೂ, ಜಾತ್ಯಾದೀನಾಂ ಚ = ಮತ್ತು ಜಾತ್ಯಾದಿಗಳಿಗೂ, ಸರ್ವೇಷಾಂ = ಇವೆಲ್ಲಕ್ಕೂ, ಸರ್ವದಾ = ಯಾವಾಗಲೂ, ಅಬಾಧ್ಯತ್ವೇನ = ಬಾಧಪಿಲ್ಲದಿರುವುದರಿಂದ,

ವ್ಯಾವಹಾರಿಕತಾಽಯೋಗಾತ್ = ವ್ಯಾವಹಾರಿಕತ್ವವು ಕೂಡುವುದಿಲ್ಲವಾದ್ದರಿಂದ, ಸದ್ಯುಕ್ತಿಸತ್ತ್ವತಃ = ಸದ್ಯುಕ್ತಿಸಾಮರ್ಥ್ಯದಿಂದ, ತತ್ಸತ್ತ್ವಂ = ಅವುಗಳ ಸತ್ಯತ್ವವು, ಬ್ರಹ್ಮಸತ್ತ್ವವತ್

= ಬ್ರಹ್ಮಸತ್ಯತ್ವದಂತೆ, ಪಾರಮಾರ್ಥ್ಯೇನೈವ ಸತ್ತ್ವಂ = ಪಾರಮಾರ್ಥಿಕ ಸತ್ಯವೇ, ಅಭೂತ್ = ಆಯಿತು.

ಘಟೋಽಪಿ = ಘಟವೂ ಕೂಡ, ಬ್ರಹ್ಮಣಿ ನ ಚೇತ್ = ಬ್ರಹ್ಮನಲ್ಲಿ ಇಲ್ಲದಿದ್ದರೆ, ಮೃತ್ಕಪಾಲೇ= ಮಣ್ಣಿನ ಕಪಾಲದಲ್ಲಿ, ಭವಿಷ್ಯತಿ = ಇರುತ್ತದೆ. ಬ್ರಹ್ಮಣ್ಯಖಿಲಬಾಧಸ್ತು = ಬ್ರಹ್ಮನಲ್ಲಿ ಸರ್ವನಿಷೇಧವು, ಕಸ್ಯ ವಾ= ಯಾವುದಕ್ಕೆ, ಬಾಧಕಃ= ಬಾಧಕವಾಗುತ್ತದೆ ಎಂದು, ವದ= ಹೇಳು.

ಕಪಾಲೇ ನೇತಿ ಬಾಧಸ್ತು = ಘಟವು ಕಪಾಲದಲ್ಲಿ ಇಲ್ಲ ಎಂಬ ಬಾಧವಾದರೂ, ನಾಸ್ತಿ= ವರ್ತಮಾನಕಾಲದಲ್ಲಿ ಇಲ್ಲ, ನಾಪಿ ಭವಿಷ್ಯತಿ = ಮತ್ತು ಭವಿಷ್ಯತ್ಕಾಲದಲ್ಲಿಯೂ ಉಂಟಾಗುವುದಿಲ್ಲ. ತತ್ = ಆದ್ದರಿಂದ, ಸರ್ವೇಷಾಂ ಧರ್ಮಿಣಾಂ ಚ = ಎಲ್ಲ ಧರ್ಮಿಗಳಿಗೂ ಕೂಡ, ಸ್ವಸ್ವಧರ್ಮವತ್ = ತಮ್ಮ ತಮ್ಮ ಧರ್ಮಗಳಂತೆ, ಅಬಾಧಾತ್= ಬಾಧವಿಲ್ಲದಿರುವುದರಿಂದ,

ವ್ಯಾವಹಾರಿಕತಾಽಯೋಗಾತ್ = ವ್ಯಾವಹಾರಿಕತ್ವವು ಕೂಡುವುದಿಲ್ಲವಾದ ಕಾರಣ, ಬಲಾತ್ = ಯುಕ್ತಿಬಲದಿಂದ, ಪಾರಮಾರ್ಥ್ಯಂ = ಪಾರಮಾರ್ಥಿಕಸತ್ಯತ್ವವೇ, ಅಭೂತ್ = ಸಿದ್ಧವಾಯಿತು. ಆಪಣಸ್ಥಸ್ಯ ರೂಪ್ಯಸ್ಯ= ಆಪಣಸ್ಥವಾದ ರೂಪ್ಯಕ್ಕೆ, ಶುಕ್ತೌ = ಶುಕ್ತಿಯಲ್ಲಿ ಬಾಧೇಽಪಿ = ಬಾಧವುಂಟಾದರೂ, ಕಾ ಕ್ಷತಿಃ = ಯಾವ ಹಾನಿ ಉಂಟಾಗುತ್ತದೆ?

**ಅನುವಾದ -** ಆದ್ದರಿಂದ ಜಡದಲ್ಲಿರುವ ಗುಣಗಳು, ಕ್ರಿಯೆಗಳು ಮತ್ತು ಜಾತ್ಯಾದಿಗಳು ಇವೆಲ್ಲಕ್ಕೂ ಯಾವಾಗಲೂ ಬಾಧವಿಲ್ಲದಿರುವುದರಿಂದ ವ್ಯಾವಹಾರಿಕತ್ವವು ಕೂಡುವುದಿಲ್ಲ. ಆದ್ದರಿಂದ ಸದ್ಯುಕ್ತಿಸಾಮರ್ಥ್ಯದಿಂದ ಅವುಗಳ ಸತ್ವವು ಬ್ರಹ್ಮಸತ್ವದಂತೆ ಪಾರಮಾರ್ಥಿಕಸತ್ವವೇ ಆಯಿತು.

ಘಟವೂ ಕೂಡ ಬ್ರಹ್ಮನಲ್ಲಿ ಇಲ್ಲದಿದ್ದರೆ ಮೃತ್ತಿನಲ್ಲಾಗಲಿ ಅಥವಾ ಕಪಾಲದಲ್ಲಾಗಲಿ ಇರುತ್ತದೆ. ಬ್ರಹ್ಮನಲ್ಲಿ ಸರ್ವನಿಷೇಧವು ಯಾವುದಕ್ಕೆ ಬಾಧಕವಾಗುತ್ತದೆ ಎಂದು ಹೇಳು. ಕಪಾಲದಲ್ಲಿ ಘಟವಿಲ್ಲ ಎಂಬ ನಿಷೇಧವಾದರೂ ವರ್ತಮಾನಕಾಲದಲ್ಲಿ ಇಲ್ಲ. ಭವಿಷ್ಯತ್ಕಾಲದಲ್ಲಿಯೂ ಉಂಟಾಗುವುದಿಲ್ಲ. ಆದ್ದರಿಂದ ಎಲ್ಲ ಧರ್ಮಿಗಳೂ ತಮ್ಮ ತಮ್ಮ ಧರ್ಮಗಳಂತೆ ಅಬಾಧ್ಯವಾದ್ದರಿಂದ ಅವುಗಳಿಗೆ ವ್ಯಾವಹಾರಿಕತ್ವವು ಕೂಡುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ ಯುಕ್ತಿಯ ಬಲದಿಂದಲೇ ಧರ್ಮಿಗಳಿಗೂ ಪಾರಮಾರ್ಥಿಕಸತ್ವವು ಸಿದ್ಧವಾಯಿತು. ಆಪಣಸ್ಥವಾದ ರಜತವನ್ನು ಶುಕ್ತಿಯಲ್ಲಿ ಪ್ರತಿಷೇಧಮಾಡಿದರೆ, ಯಾವ ಹಾನಿ ಉಂಟಾಗುತ್ತದೆ?

**ಭಾವವಿಲಾಸಿನೀ–** ವ್ಯಾವಹಾರಿಕತಾಽಯೋಗಾತ್ ಧರ್ಮಾಣಾಂ ಧರ್ಮಿಷ್ವಿವ ಧರ್ಮಿಣಾಮಪಿ ಘಟಪಟಾದೀನಾಂ ಕಪಾಲತಂತ್ವಾದಿಷು ಸ್ವಸತ್ತಾದಶಾಯಾಂ ನೇತಿ ಬಾಧಾಭಾವೇನ ವ್ಯಾವಹಾರಿಕತಾಯಾ ಅಯೋಗಾತ್ ॥ ೧೦೮೬ - ೧೦೯೦ ॥

**ವಿವರಣೆ-** ಬ್ರಹ್ಮನಲ್ಲಿ ಘಟಾದಿಗಳನ್ನು ನಿಷೇಧಮಾಡಿದರೂ ಕಪಾಲತಂತ್ವಾದಿಗಳಲ್ಲಿ ಘಟಾದಿಗಳನ್ನು ನಿಷೇಧಮಾಡದೇ ಇರುವುದರಿಂದ ಧರ್ಮಿಗಳಿಗೂ ವ್ಯಾವಹಾರಿಕತ್ವವು ಸಿದ್ಧವಾಗುವುದಿಲ್ಲ. ಶುಕ್ತಿಯಲ್ಲಿ ಆಪಣಸ್ಥರಜತವನ್ನು ನಿಷೇಧಮಾಡಿದರೂ ಆಪಣದಲ್ಲಿ ಆ ರಜತಕ್ಕೆ ನಿಷೇಧವಿಲ್ಲವಾದ್ದರಿಂದ, ರಜತರೂಪವಾದ ಧರ್ಮಿಯೂ ವ್ಯಾವಹಾರಿಕವಾಗುವುದಿಲ್ಲ ಎಂದು ಅಭಿಪ್ರಾಯ.

**ಅತೋ ಘಟಾದ್ಯರ್ಥಧೀಷು ಭ್ರಮತ್ವಂ ನೈವ ಶೋಭತೇ ।**
**ತದ್ಧೇತುಭೂತಧರ್ಮಾಣಾಂ ದೋಷತ್ವಾಶಾಪಿ ತೇ ವೃಥಾ ॥ ೧೦೯೧ ॥**

**ತಸ್ಮಾದಾವಿದ್ಯಕತ್ವಂ ಚ ಮೃದುಪಾದಾನಕತ್ವವತ್ ।**
**ಪ್ರಮಾತ್ವಾಪ್ರತಿರೋಧಿತ್ವಾದ್ ದೋಷೋ ನಾಭೂದ್ ವಿಚಾರಣೇ ॥೧೦೯೨॥**

**ಅರ್ಥ-** ಅತಃ = ಆದ್ದರಿಂದ, ಘಟಾದ್ಯರ್ಥಧೀಷು = ಘಟಾದಿಧರ್ಮಿಪ್ರತೀತಿಗಳಿಗೆ, ಭ್ರಮತ್ವಂ = ಭ್ರಮತ್ವವು, ನೈವ ಶೋಭತೇ = ಶೋಭಿಸುವುದಿಲ್ಲ. ತದ್ಧೇತುಭೂತಧರ್ಮಾಣಾಂ = ಭ್ರಮತ್ವಕ್ಕೆ ಕಾರಣವಾದ ಅಜ್ಞಾನೋಪಾದಾನಕತ್ವ ರೂಪವಾದ ಧರ್ಮಗಳಿಗೆ, ತೇ = ನಿನ್ನ, ದೋಷತ್ವಾಶಾಪಿ = ದೋಷತ್ವದ ಆಸೆಯು, ವೃಥಾ= ವ್ಯರ್ಥವಾದುದು.

ತಸ್ಮಾತ್ = ಆದ್ದರಿಂದ, ಮೃದುಪಾದಾನಕತ್ವವತ್ = ಮೃದುಪಾದಾನಕತ್ವದಂತೆ, ಆವಿದ್ಯಕತ್ವಂ ಚ= ಅವಿದ್ಯೋಪಾದಾನಕತ್ವವೂ ಕೂಡ, ಪ್ರಮಾತ್ವಾಪ್ರತಿರೋಧಿತ್ವಾತ್= ಪ್ರಮಾತ್ವಪ್ರತಿಬಂಧಕವಲ್ಲವಾದ್ದರಿಂದ, ವಿಚಾರಣೇ= ವಿಮರ್ಶೆಮಾಡಿದರೆ, ದೋಷೋ ನಾಭೂತ್= ದೋಷವಾಗಲಿಲ್ಲ.

**ಅನುವಾದ - ಆದ್ದರಿಂದ ಘಟಾದಿಧರ್ಮಿಪ್ರತೀತಿಗಳಿಗೆ ಭ್ರಮತ್ವವು ಕೂಡುವುದಿಲ್ಲ. ಧರ್ಮಧರ್ಮಿಪ್ರತೀತಿಗಳಿಗೆ ಕಾರಣವಾದ ಅಜ್ಞಾನೋಪಾದಾನಕತ್ವರೂಪವಾದ ಧರ್ಮಕ್ಕೂ ನಿನ್ನ ದೋಷತ್ವದ ಆಸೆಯು ವ್ಯರ್ಥವಾದುದು. ಆದ್ದರಿಂದ ಮೃದುಪಾದಾನಕತ್ವದಂತೆ ಅವಿದ್ಯೋಪಾದಾನಕತ್ವವೂ ಕೂಡ ಪ್ರಮಾತ್ವ-ಪ್ರತಿಬಂಧಕವಲ್ಲವಾದ್ದರಿಂದ ವಿಮರ್ಶೆಮಾಡಿದರೆ ದೋಷವಲ್ಲವೆಂದೇ ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ತದ್ಧೇತುಭೂತಧರ್ಮಾಣಾಂ ತಸ್ಯಾಂ ಧರ್ಮಧರ್ಮಿಧಿಯಾಂ ಹೇತುಭೂತ-ಧರ್ಮಾಣಾಂ ತ್ವದ್ರೀತ್ಯಾ ಹೇತುಭೂತಾನಾಮಜ್ಞಾನೋಪಾದಾನಕತ್ವಾದಿಧರ್ಮಾಣಾಂ ಸಮಾನಪ್ರಕಾರಯೋರೇವ ಬಾಧ್ಯಬಾಧಕತ್ವಸ್ಯ ಲೋಕೇ ದರ್ಶನಾದಿಹಾಪಿ ಯೇನಾಕಾರೇಣ ಯತ್ರ ಯಸ್ಯ ಪ್ರತೀತಿಸ್ತೇನೈವಾಕಾರೇಣ ತಸ್ಯ ತತ್ರ ನಿಷೇಧೇ ಬಾಧಸ್ಸ್ಯಾನ್ನಾನ್ಯಥೇತ್ಯೇಕೋ

ಭಾವಃ । ನೇಹ ನಾನೇತಿ ವಾಕ್ಯಾಜ್ಜಾಯಮಾನೋ ಬಾಧ ಈದೃಶ ಏವ ಸ್ಯಾತ್ । ನಿರವಕಾಶ್ಯೆತದ್ವಾಕ್ಯಸಮಾಖ್ಯಯಾ ಸಾವಕಾಶಮದ್ವಿತೀಯವಾಕ್ಯಮಪಿ ನ ವಿದ್ಯತೇ ದ್ವಿತೀಯಂ ಯಸ್ಮಿನ್ನಿತ್ಯೇವ ವಿಗ್ರಹಂ ಲಭತೇ ನಾನ್ಯಥಾ । ಚರಮಪ್ರತೀತೇರ್ದ್ವಿಪ್ರಕಾರಕತ್ವಪ್ರಸಂಗಾತ್ । ಅತಸ್ತ್ವದ್ರೀತ್ಯೈವ ನ ಜಗತೋ ಬಾಧ ಇತಿ ಭಾವಃ ॥ ೧೦೯೧ ॥

**ವಿವರಣೆ-** ಸಮಾನಪ್ರಕಾರವಾದ ಜ್ಞಾನಗಳಿಗೆ ಲೋಕದಲ್ಲಿ ಬಾಧ್ಯಬಾಧಕಭಾವವು ಕಂಡಿದೆ. ಆದ್ದರಿಂದ ಯಾವ ವಸ್ತುವು ಯಾವ ಧರ್ಮಿಯಲ್ಲಿ ಯಾವ ಆಕಾರದಿಂದ ಪ್ರತೀತವಾಗುತ್ತದೆಯೋ ಆ ಆಕಾರದಿಂದಲೇ ಆ ವಸ್ತುವನ್ನು ಆ ಧರ್ಮಿಯಲ್ಲಿ ಪ್ರತಿಷೇಧಮಾಡಿದರೆ ಅದು ಬಾಧವಾಗುತ್ತದೆ. ಘಟಾದಿಗಳನ್ನು ಬ್ರಹ್ಮನಲ್ಲಿ ಪ್ರತಿಷೇಧಮಾಡಿದರೆ ಅದು ಕಪಾಲದಲ್ಲಿ ಘಟದಪ್ರತಿಷೇಧವಲ್ಲವಾದ್ದರಿಂದ ಘಟಾದಿಧರ್ಮಿಗಳಿಗೆ ಬಾಧ್ಯತ್ವವು ಉಂಟಾಗುವುದಿಲ್ಲ. 'ನೇಹ ನಾನಾಸ್ತಿ' ಎಂಬ ವಾಕ್ಯದಿಂದ ಉಂಟಾಗುವ ಬಾಧವು ಇಂತಹದೇ ಬಾಧ. ಎಂದರೆ, ಘಟಾದಿಗಳನ್ನು ಕಪಾಲಾದಿಗಳಲ್ಲಿ ನಿಷೇಧಮಾಡದೆ, ಬ್ರಹ್ಮನಲ್ಲಿ ಮಾತ್ರ ನಿಷೇಧಮಾಡುವ ಬಾಧ. ಆದ್ದರಿಂದ ಈ ವಾಕ್ಯದ ಸಮಾಖ್ಯೆಯಿಂದ 'ಏಕಮೇವಾದ್ವಿತೀಯಮ್' ಎಂಬ ವಾಕ್ಯದಲ್ಲಿಯೂ, ಅದ್ವಿತೀಯ ಶಬ್ದಕ್ಕೆ 'ನ ವಿದ್ಯತೇ ದ್ವಿತೀಯಂ ಯಸ್ಮಿನ್' -, ಯಾವ ಬ್ರಹ್ಮನಲ್ಲಿ ದ್ವಿತೀಯವಾದ ಘಟಾದಿಗಳು ಇಲ್ಲವೋ ಎಂದು ಅರ್ಥಮಾಡಬೇಕು. ಆಗ ಬ್ರಹ್ಮನಲ್ಲಿ ಘಟಾದಿಗಳ ನಿಷೇಧವು ಸಿದ್ಧವಾದರೂ, ಹಿಂದೆ ಹೇಳಿದಂತೆ ಕಪಾಲದಲ್ಲಿ ಘಟಾದಿಗಳ ನಿಷೇಧವು ಇಲ್ಲದಿರುವುದರಿಂದ ಘಟಾದಿಧರ್ಮಿಗಳು ಸತ್ಯವೇ ಆಗುತ್ತವೆ ಎಂದು ಅಭಿಪ್ರಾಯ.

**ಪ್ರತ್ಯಕ್ಷಾದಿಪ್ರಮಾಣಾನಾಂ ವ್ಯಾವಕಾರಿಕಮಾನತಾ ।**
**ಯಾ ಪರೈರುದಿತಾ ತಾಂ ಚ ಯುಕ್ತಿರೇಷಾ ನಿಷೇಧತಿ ॥ ೧೦೯೩ ॥**

**ಅರ್ಥ-** ಪ್ರತ್ಯಕ್ಷಾದಿಪ್ರಮಾಣಾನಾಂ= ಪ್ರತ್ಯಕ್ಷವಾದ ಪ್ರಮಾಣಗಳಿಗೆ, ಪರೈರುದಿತಾ= ಪರರಿಂದ ಹೇಳಲ್ಪಟ್ಟ, ಯಾ= ಯಾವ, ವ್ಯಾವಕಾರಿಕಮಾನತಾ= ವ್ಯಾವಹಾರಿಕ-ಪ್ರಾಮಾಣ್ಯವಿದೆಯೋ, ತಾಂ ಚ= ಅದನ್ನೂ ಸಹ, ಏಷಾ ಯುಕ್ತಿಃ= ಈ ಪ್ರಾಮಾಣಿಕವಾದ ಯುಕ್ತಿಯು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ-** ಪ್ರತ್ಯಕ್ಷಾದಿಪ್ರಮಾಣಗಳಿಗೆ ಪರರು ಹೇಳಿದ ವ್ಯಾವಹಾರಿಕ ಪ್ರಮಾಣತ್ವವನ್ನು ಈ ಪ್ರಾಮಾಣಿಕತ್ವಯುಕ್ತಿಯು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಏತೇನೈತದಪಿ ನಿರಸ್ತಮಿತ್ಯಾಹ-**ಪ್ರತ್ಯಕ್ಷಾದಿತಿ** ॥ ವ್ಯಾವಹಾರಿಕಮಾನತಾ ವ್ಯಾವಹಾರಿಕಾರ್ಥವಿಷಯಕಪ್ರಮಾಣತಾ । ಏಷಾ ಘಟಘಟತ್ವಾದಿಪ್ರತೀತೇರ್ಭ್ರಮತ್ವಾ-ನುಪಪತ್ತಿರೂಪಾಪ್ರತ್ಯಕ್ಷಾದಿಪ್ರಮಾಣಜನ್ಯಾಯಾಃ ಭೂತಲೇ ಘಟ ಇತ್ಯಾದಿಪ್ರತೀತೇ-ರುಕ್ತವಿಧಯಾ ಭ್ರಮತ್ವಾಭಾವೇ ಪ್ರಮಾತ್ವೇ ಚ ಸಿದ್ಧೇ ಪ್ರಮಾಕರಣಾನಾಂ ಚ ತೇಷಾಂ ಕುತೋ ವ್ಯಾವಹಾರಿಕ ಪ್ರಮಾಣತ್ವಮಿತಿ ಭಾವಃ ॥ ೧೦೯೩ ॥

**ವಿವರಣೆ-** ಘಟಾದಿಧರ್ಮಿಗಳು ವ್ಯಾವಹಾರಿಕವಾದರೆ, 'ಅಯಂ ಘಟಃ' ಇತ್ಯಾದಿ ಪ್ರತ್ಯಕ್ಷಕ್ಕೆ, ವ್ಯಾವಹಾರಿಕ ಪ್ರಾಮಾಣ್ಯವು ಉಂಟಾಗುತ್ತದೆ. ಘಟಾದಿಗಳಿಗೆ ವ್ಯಾವಹಾರಿಕತ್ವವೇ ಇಲ್ಲವೆಂದು ನಾವು ಉಪಪಾದನೆ ಮಾಡಿರುವುದರಿಂದ, ಘಟಾದಿಪ್ರತ್ಯಕ್ಷಕ್ಕೆ ವ್ಯಾವಹಾರಿಕಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಪ್ರಾಮಾಣಿಕತ್ವರೂಪವಾದ ಯುಕ್ತಿಯು ಘಟಾದಿಗಳಿಗೆ ಸತ್ಯತ್ವವನ್ನು ಸಮರ್ಥನೆಮಾಡಿದಂತೆ, ಘಟಾದಿಪ್ರತ್ಯಕ್ಷಕ್ಕೂ ಸತ್ಯತ್ವವನ್ನೇ ಸಮರ್ಥನೆ ಮಾಡುತ್ತದೆ ಎಂದು ಅಭಿಪ್ರಾಯ.

**ಅತಃ ಸಾಧಕಮಾನಸ್ಯೈವಾದೋಷತ್ವಮಭೂದ್ ಬಲಾತ್ ।**
**ಬಾಧಕೇ ವೈಯಧಿಕರಣ್ಯಾಖ್ಯದೋಷೇಣ ದುಷ್ಟತಾ ।**
**ಅತೋ ಬಾಧಕಮಾನಸ್ಯ ಮಾನತ್ವೈವಾಪಹೀಯತಾಮ್ ॥ ೧೮೯೪ ॥**

**ಅರ್ಥ-** ಅತಃ = ಆದ್ದರಿಂದ, ಸಾಧಕಮಾನಸ್ಯೈವ= ವಿಶ್ವಸತ್ಯತ್ವಸಾಧಕವಾದ ಪ್ರಮಾಣಕ್ಕೇ, ಬಲಾತ್ = ಯುಕ್ತಿಬಲದಿಂದ, ಅದೋಷತ್ವಮ್ = ನಿರ್ದೋಷತ್ವವು, ಅಭೂತ್ = ಉಂಟಾಯಿತು, ಬಾಧಕೇ = ಬಾಧಕಪ್ರಮಾಣದಲ್ಲಿ, ವೈಯಧಿಕರಣ್ಯಾಖ್ಯ- ದೋಷೇಣ = ವೈಯಧಿಕರಣ್ಯರೂಪವಾದ ದೋಷವಿರುವುದರಿಂದ, ದುಷ್ಟತಾ = ದೋಷವು ಉಂಟಾಯಿತು. ಅತಃ = ಆದ್ದರಿಂದ, ಬಾಧಕಮಾನಸ್ಯ = ಬಾಧಕಪ್ರಮಾಣಕ್ಕೆ, ಮಾನತ್ವೈವ = ಪ್ರಾಮಾಣ್ಯವೇ, ಅಪಹೀಯತಾಮ್ = ನಷ್ಟವಾಗಲಿ.

**ಅನುವಾದ-**ಆದ್ದರಿಂದ ಯುಕ್ತಿಬಲದಿಂದವಿಶ್ವಸತ್ಯತ್ವಸಾಧಕಪ್ರಮಾಣಕ್ಕೆ ನಿರ್ದೋಷತ್ವವೇ ಸಿದ್ಧವಾಯಿತು. ಬಾಧಕಪ್ರಮಾಣದಲ್ಲಿ, ವೈಯಧಿಕರಣ್ಯರೂಪ ದೋಷ ವಿರುವುದರಿಂದ ದುಷ್ಟತ್ವವೇ ಸಿದ್ಧವಾಯಿತು. ಆದ್ದರಿಂದ, ಬಾಧಕಪ್ರಮಾಣಕ್ಕೆ ಪ್ರಾಮಾಣ್ಯವೇ ನಾಶವಾಗಲಿ.

**ಭಾವವಿಲಾಸಿನೀ–** ಅತಃ ಭ್ರಮಜನಕತ್ವಾಭಾವಾತ್ ಪ್ರಮಾಜನಕತ್ವಾಚ್ಚ । ಸಾಧಕಮಾನಸ್ಯ ಘಟಾದಿಸಾಧಕಪ್ರತ್ಯಕ್ಷಾದಿಪ್ರಮಾಣಸ್ಯ । ಇದಂ ಚ ಮೇಯಘಟಾದೇರಪ್ಯುಪಲಕ್ಷಣಮ್ । ಬಲಾತ್ ಯುಕ್ತಿಬಲಾತ್ । ಭ್ರಮಾಖ್ಯಫಲಬಲೋನ್ನೇಯಃ ಕರಣದೋಷೋಽರ್ಥ ದೋಷಶ್ಚ ಭ್ರಮೇ ಸತ್ಯೇವ ಕಶ್ಚಿತ್ಕಲ್ಪನೀಯಃ । ಭ್ರಮಾಭಾವೇಽಪಿ ತತ್ಕಲ್ಪನಾಯಾ ಅನುಚಿತತ್ವಾದದೋಷತ್ವಮಿತಿ ಭಾವಃ । ಬಾಧಕೇ ಪ್ರತ್ಯಕ್ಷಾದಿಪ್ರಮಾಣ ಬಾಧಕತ್ವೇನಾಭಿಮತೇ ತದೈಕ್ಯವಾಕ್ಯೇ । ವೈಯಧಿಕರಣ್ಯಾಖ್ಯದೋಷೇಣ ದುಷ್ಟತಾ ವೈಯಧಿಕರಣ್ಯಂ ಚೈತನ್ಯೈಕ್ಯಮಾತ್ರವಿಷಯತ್ವೇನ ಘಟಾದಿಜಡಪ್ರಪಂಚಸತ್ಯತ್ವಮಿಥ್ಯಾತ್ವಾಸ್ಪರ್ಶಿತ್ವಂ ತದಾಖ್ಯದೋಷೇಣ ದುಷ್ಟತಾ । ಭಿನ್ನವಿಷಯತ್ವೇನ ಘಟಾದಿಸತ್ಯತ್ವಗ್ರಾಹಕಪ್ರತ್ಯಕ್ಷಾಣಾಂ ನ ಬಾಧಿಕಾ ಅತೋಽಪಿ ನ ತೇಷಾಂ ವ್ಯಾವಹಾರಿಕಪ್ರಮಾಣತ್ವಮಿತಿ ಭಾವಃ ॥ ೧೮೯೪ ॥

**ವಿವರಣೆ-** ಕರಣದೋಷವನ್ನಾಗಲೀ ಅಥವಾ ಅರ್ಥದೋಷವನ್ನಾಗಲೀ ಭ್ರಮ ರೂಪವಾದ ಫಲಬಲದಿಂದಲೇ ಕಲ್ಪನೆ ಮಾಡಬೇಕು. ಭ್ರಮವು ಇದ್ದರೆ ಮಾತ್ರ ಹಾಗೆ

ಕಲ್ಪನೆಯನ್ನು ಮಾಡಬಹುದು. ಭ್ರಮೆಯೇ ಇಲ್ಲದಿರುವಾಗ ಅಂತಹ ದೋಷವನ್ನು ಕಲ್ಪನೆಮಾಡುವುದು ಅನುಚಿತವಾದ್ದರಿಂದ ವಿಶ್ವಸತ್ಯತ್ವಸಾಧಕಪ್ರಮಾಣಗಳು ನಿರ್ದುಷ್ಟವಾಗುತ್ತವೆ ಎಂದು ಅಭಿಪ್ರಾಯ. ಬಾಧಕಪ್ರಮಾಣಗಳೆಂದು ನೀನು ಅಂಗೀಕರಿಸಿದ ಐಕ್ಯವಾಕ್ಯಗಳಾದರೂ ವೈಯಧಿಕರಣ್ಯದೋಷದಿಂದ ದುಷ್ಟವಾಗಿವೆ. ಏಕೆಂದರೆ ಅವು ನೀನೇ ಅಂಗೀಕರಿಸುವಂತೆ ಚೈತನ್ಯೈಕ್ಯಮಾತ್ರವಿಷಯಕವಾಗಿವೆ. ಘಟಾದಿಜಡಪ್ರಪಂಚದ ಸತ್ಯತ್ವವನ್ನಾಗಲೀ, ಮಿಥ್ಯಾತ್ವವನ್ನಾಗಲೀ ಅವು ಸ್ಪರ್ಶಿಸುವುದೇ ಇಲ್ಲ. ಆದ್ದರಿಂದ ಸತ್ಯತ್ವಸಾಧಕಪ್ರತ್ಯಕ್ಷಪ್ರಮಾಣಗಳು ಮತ್ತು ಬಾಧಕತ್ವೇನ ಅಭಿಮತವಾದ ಐಕ್ಯವಾಕ್ಯಗಳು ಭಿನ್ನವಿಷಯಕವಾದ್ದರಿಂದ ಬಾಧ್ಯಬಾಧಕಭಾವವೇ ಕೂಡುವುದಿಲ್ಲ. ಆದ್ದರಿಂದ ಪ್ರತ್ಯಕ್ಷವೂ, ಪ್ರತ್ಯಕ್ಷಕ್ಕೆ ವಿಷಯವಾದ ಘಟಾದಿಗಳೂ, ಸತ್ಯವೆಂದೇ ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ಅಥ ಮಾನಾಭಾವತೋಽರ್ಥಾಭಾವಸ್ತೇನ ಚ ಧೀರ್ಭ್ರಮಃ ।**
**ಭ್ರಮಾಚ್ಚ ದೋಷೋ ದೋಷೇಣ ಮಾನತಾಹೀನತೇತಿ ತು ।**
**ಅನ್ಯೋನ್ಯಾಶ್ರಯತಸ್ತಸ್ಯ ಕುರುತೇ ಬೋಧಹೀನತಾಮ್ ॥ ೧೮೫ ॥**

**ಅರ್ಥ-** ಅಥ = ಒಂದುಪಕ್ಷ, ಮಾನಾಭಾವತಃ = ಪ್ರಮಾಣಗಳಿಗೆ ಪ್ರಾಮಾಣ್ಯವಿಲ್ಲದಿರುವುದರಿಂದ, ಅರ್ಥಾಭಾವಃ = ಅರ್ಥಾಭಾವವು ಸಿದ್ಧವಾಗುತ್ತದೆ. ತೇನ ಚ = ಅರ್ಥಾಭಾವದಿಂದ, ಧೀಃ = ಆ ಪ್ರತೀತಿಯು, ಭ್ರಮಃ = ಭಮವೆಂದು ಸಿದ್ಧವಾಗುತ್ತದೆ, ಭ್ರಮಾಚ್ಚ = ಭ್ರಮದಿಂದ, ದೋಷಃ = ದೋಷವು ಸಿದ್ಧವಾಗುತ್ತದೆ, ದೋಷೇಣ = ಮತ್ತು ದೋಷದಿಂದ, ಮಾನತಾಹೀನತಾ = ಪ್ರಾಮಾಣ್ಯಾಭಾವವು ಸಿದ್ಧವಾಗುತ್ತದೆ, ಇತಿ ತು = ಎಂಬುದಾದರೂ, ಅನ್ಯೋನ್ಯಾಶ್ರಯತಃ = ಅನ್ಯೋನ್ಯಾಶ್ರಯದೋಷದಿಂದ, ತಸ್ಯ = ಅಂತಹ ವಾದಿಗೆ, ಬೋಧಹೀನತಾಮ್ = ಜ್ಞಾನಶೂನ್ಯತ್ವವನ್ನು, ಕುರುತೇ = ಸಾಧನೆ ಮಾಡಿಕೊಡುತ್ತದೆ.

**ಅನುವಾದ-** ಒಂದುಪಕ್ಷ ಜಗತ್‌ಸತ್ಯತ್ವಸಾಧಕಪ್ರಮಾಣಗಳಿಗೆ ಪ್ರಾಮಾಣ್ಯವೇ ಇಲ್ಲ. ಆದ್ದರಿಂದ ಅರ್ಥಾಭಾವವು ಸಿದ್ಧವಾಗುತ್ತದೆ. ಆದ್ದರಿಂದ ಘಟಾದಿವಸ್ತುಗಳನ್ನು ವಿಷಯೀಕರಿಸುವ ಪ್ರತೀತಿಯು, ಭ್ರಮವೆಂದು ಸಿದ್ಧವಾಗುತ್ತದೆ. ಭ್ರಮರೂಪವಾದ ಫಲಬಲದಿಂದ ದೋಷದ ಕಲ್ಪನೆಯನ್ನು ಮಾಡುತ್ತೇವೆ. ದೋಷದಿಂದ ಜಗತ್‌ಸತ್ಯತ್ವವಿಷಯಕಪ್ರಮಾಣಕ್ಕೆ ಪ್ರಾಮಾಣ್ಯಾಭಾವವು ಸಿದ್ಧವಾಗುತ್ತದೆ ಎಂದು ಹೇಳಿದರೆ, ಇಲ್ಲಿ ಸ್ಪಷ್ಟವಾಗಿ ಕಾಣುವ ಅನ್ಯೋನ್ಯಾಶ್ರಯದೋಷವು ಅಂತಹ ವಾದಿಗೆ ಜ್ಞಾನಶೂನ್ಯತ್ವವನ್ನೇ ಸಮರ್ಥನೆ ಮಾಡಿಕೊಡುತ್ತದೆ.

**ಭಾವವಿಲಾಸಿನೀ–** ಶಂಕತೇ ॥ **ಅಥೇತಿ** ॥ ಮಾನಾಭಾವಃ ಪ್ರತ್ಯಕ್ಷಾದಿಪ್ರಮಾಣಾನಾಂ ಶುಕ್ತಿ-ರಜತಪ್ರತ್ಯಕ್ಷವತ್ ಘಟಾದಿಪ್ರತ್ಯಕ್ಷಾಣಾಂ ಮಾನತ್ವಾಭಾವ ಇತ್ಯರ್ಥಃ । ತೇನ ಪ್ರಮಾಣಾಭಾವ-

ಪ್ರಯುಕ್ತಪ್ರಮೇಯಾಭಾವೇನ । ಧೀಃ ಘಟಾದಿಧೀಃ । ಭ್ರಮಾದ್ದೋಷಃ ಕರಣದೋಷೋಽರ್ಥದೋಷಶ್ಚ ಕಶ್ಚಿತ್ಕಲ್ಪ್ಯತೇ । ಮಾನತಾಹೀನತಾ ಪ್ರಾಮಾಣ್ಯಾಭಾವಃ । ದೂಷಯತಿ। ಅನ್ಯೋನ್ಯಾಶ್ರಯತ ಇತಿ । ಪ್ರತ್ಯಕ್ಷಾದಿಪ್ರಮಾಣಾನಾಂ ಪ್ರಾಮಾಣ್ಯಾಭಾವೇ ಘಟಾದ್ಯರ್ಥಭಾವಃ । ತದಭಾವೇ ಚ ತದ್ಧೀರ್ಭ್ರಮಃ । ಭ್ರಮೇಣ ಚ ದೋಷಃ । ದೋಷೇಣ ಚ ಪ್ರಾಮಾಣ್ಯಾಭಾವ ಇತಿ ಚಕ್ರಕಗರ್ಭಾನ್ಯೋನ್ಯಾಶ್ರಯತ ಇತ್ಯರ್ಥಃ । ತಸ್ಯ ಏವಂ ಕಲ್ಪಯಿತಃ ॥ ೧೦೯೫ ॥

ಐಕ್ಯಾಯೋಗೇನ ಮಿಥ್ಯಾತ್ವಂ ತತ್ತ್ವಮರ್ಥಗತಾರ್ಥಯೋಃ ।
ವಿರುದ್ಧಯೋಃ ಕಥಂಚಿತ್ ಸ್ಯಾದ್ ವಿಶ್ವಾಭಾವಸ್ತು ಕಿಂಕೃತಃ ॥ ೧೦೯೬ ॥

**ಅರ್ಥ-** ವಿರುದ್ಧಯೋಃ = ವಿರುದ್ಧವಾದ, ತತ್ತ್ವಮರ್ಥಗತಾರ್ಥಯೋಃ = ತತ್ ಪದಾರ್ಥ ಮತ್ತು ತ್ವಮ್‌ಪದಾರ್ಥದಲ್ಲಿರುವ ಧರ್ಮಗಳಿಗೆ, ಐಕ್ಯಾಯೋಗೇನ = ಐಕ್ಯವು ಕೂಡುವುದಿಲ್ಲವಾದ್ದರಿಂದ, ಕಥಂಚಿತ್ = ಹೇಗಾದರೂ, ಮಿಥ್ಯಾತ್ವಂ ಸ್ಯಾತ್ = ಮಿಥ್ಯಾತ್ವವು ಉಂಟಾಗಲಿ, ವಿಶ್ವಾಭಾವಸ್ತು = ವಿಶ್ವದಲ್ಲಿರುವ ಧರ್ಮಿಗಳಿಗೆ ಅಭಾವವು, ಕಿಂಕೃತಃ = ಯಾವ ಕಾರಣದಿಂದ ಸಿದ್ಧವಾಗುತ್ತದೆ?

**ಅನುವಾದ-** ತತ್ ಪದಾರ್ಥ ಮತ್ತು ತ್ವಮ್ ಪದಾರ್ಥಗಳಲ್ಲಿರುವ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಗಳು ವಿರುದ್ಧವಾದ್ದರಿಂದ ಅವುಗಳಿಗೆ ಐಕ್ಯವು ಕೂಡದಿರುವುದರಿಂದ ಕಥಂಚಿತ್ ಮಿಥ್ಯಾತ್ವವು ಉಂಟಾಗಲಿ. ಆದರೆ, ಧರ್ಮಿಗಳಾದ, ವಿಶ್ವದ ಘಟಾದಿ ಅಭಾವವು ಹೇಗೆ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ಪ್ರಾಗುಕ್ತಂ ವೈಯಧಿಕರಣ್ಯಮೇವ ವಿಶದಯತಿ ॥ ಐಕ್ಯೇತಿ ॥ ತತ್ತ್ವಮರ್ಥಗತಾರ್ಥಯೋಃ ತತ್ತ್ವಂ ಪದಾರ್ಥಭೂತಜೀವಬ್ರಹ್ಮನಿಷ್ಠಧರ್ಮಾಖ್ಯಾರ್ಥಯೋಃ ॥ ೧೦೯೬॥

**ವಿವರಣೆ-** ಕಥಂಚಿತ್ ಮಿಥ್ಯಾತ್ವವು ಸಿದ್ಧವಾಗಲಿ ಎಂಬುವುದು 'ತುಷ್ಯತು ಇತಿ' ನ್ಯಾಯದಿಂದ ಹೇಳಿದ ಮಾತು. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಗಳು ಶ್ರುತಿಯಿಂದಲೂ ಮತ್ತು ಪ್ರತ್ಯಕ್ಷದಿಂದಲೂ ಸಿದ್ಧವಾಗಿರುವುದರಿಂದ ಅವುಗಳಿಗೂ ಮಿಥ್ಯಾತ್ವವು ಕೂಡುವುದಿಲ್ಲ ಎಂದು ಅಭಿಪ್ರಾಯ.

ಸರ್ವಂ ಮಿಥ್ಯೇತಿ ಸರ್ವಸ್ಯ ಮಿಥ್ಯಾತ್ವಪ್ರತಿಪಾದಿಕಾ ।
ನ ಹಿ ವಾಗಸ್ತಿ ತೇನಾಯಂ ವಿಶ್ವಾಭಾವಃ ಕುತೋಽಪತತ್ ॥ ೧೦೯೭ ॥

**ಅರ್ಥ-** ಸರ್ವಂ ಮಿಥ್ಯೇತಿ = ಎಲ್ಲವೂ ಮಿಥ್ಯವೆಂದು, ಸರ್ವಸ್ಯ ಮಿಥ್ಯಾತ್ವಪ್ರತಿಪಾದಿಕಾ= ಎಲ್ಲದಕ್ಕೂ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ, ವಾಕ್ = ವಾಕ್ಯವು, ನ ಹಿ ಅಸ್ತಿ = ಇಲ್ಲವಷ್ಟೇ? ತೇನ = ಆ ಕಾರಣದಿಂದ, ಅಯಂ ವಿಶ್ವಾಭಾವಃ = ಈ ವಿಶ್ವದ ಅಭಾವವು, ಕುತಃ ಆಪತತ್ = ಯಾವ ಪ್ರಮಾಣದಿಂದ ಸಿದ್ಧವಾಯಿತು.

**ಅನುವಾದ-** ಸರ್ವಂ ಮಿಥ್ಯಾ ಎಂದು ಎಲ್ಲದಕ್ಕೂ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ವಾಕ್ಯವು ಇಲ್ಲವಷ್ಟೇ? ಆದ್ದರಿಂದ ಈ ವಿಶ್ವಾಭಾವವು ಯಾವ ಪ್ರಮಾಣದಿಂದ ಸಿದ್ಧವಾಯಿತು?

**ಭಾವವಿಲಾಸಿನೀ–** ತೇನ ಐಕ್ಯವಾಕ್ಯಸ್ಯ ಭಿನ್ನವಿಷಯತ್ವೇನ ಘಟಾದಿಕಂ ಮಿಥ್ಯೇತಿ ವಾಕ್ಯಾಭಾವೇನ ಚ ॥ ೧೦೯೭ ॥

**ವಾಕ್ಯಂ ಚ ನಾಕ್ಷಸಿದ್ಧಸ್ಯ ಬಾಧಕಂ ಸ್ಯಾದಿತೀರಿತಮ್ ।**
**ಅನ್ಯಥಾ ಲಕ್ಷಣಾವೃತ್ತೇಃ ಶಿಕ್ಷಣಂ ಸ್ಯಾದ್ವಿಚಾರಯ ॥ ೧೦೯೮ ॥**

**ಅರ್ಥ-** ವಾಕ್ಯಂ ಚ = ವಾಕ್ಯವಾದರೂ, ಅಕ್ಷಸಿದ್ಧಸ್ಯ = ಪ್ರತ್ಯಕ್ಷಸಿದ್ಧವಾದುದಕ್ಕೆ, ನ ಬಾಧಕಂ ಸ್ಯಾತ್ = ಬಾಧಕವಲ್ಲ, ಇತಿ = ಎಂದು, ಈರಿತಮ್ = ಹಿಂದೆಯೇ ಹೇಳಿದ್ದೇವೆ, ಅನ್ಯಥಾ = ಇಲ್ಲದಿದ್ದರೆ, ಲಕ್ಷಣಾವೃತ್ತೇಃ = ಲಕ್ಷಣಾವೃತ್ತಿಗೆ, ಶಿಕ್ಷಣಂ ಸ್ಯಾತ್ = ಉಚ್ಛೇದವೇ ಉಂಟಾಗುತ್ತದೆ, ವಿಚಾರಯ = ಇದನ್ನು ವಿಚಾರಮಾಡು.

**ಅನುವಾದ-** ಪ್ರತ್ಯಕ್ಷಸಿದ್ಧವಾದುದಕ್ಕೆ ವಾಕ್ಯವು ಬಾಧಕವಾಗುವುದಿಲ್ಲವೆಂದು ಮೊದಲೇ ಹೇಳಿದ್ದೇವೆ. ಇಲ್ಲದಿದ್ದರೆ, ಲಕ್ಷಣಾವೃತ್ತಿಯ ಉಚ್ಛೇದವೇ ಉಂಟಾಗುತ್ತದೆ. ಇದನ್ನು ವಿಚಾರಮಾಡು.

**ಭಾವವಿಲಾಸಿನೀ–** ಈರಿತಂ ಪ್ರಾಗೇವೋಕ್ತಮಿತ್ಯರ್ಥಃ ॥ ೧೦೯೮ ॥

**ಯದಾ ಬ್ರಹ್ಮಣಿ ನೇತ್ಯಾದ್ಯಾ ವಾಗ್ ವಾ ಧೀರ್ವಾ ತದುದ್ಭವಾ ।**
**ಸಖಂಡಾ ಸಪ್ರಕಾರಾಪಿ ಸ್ವೋಪಾದಾನಸ್ಥಧರ್ಮಿಣಾಮ್ ।**
**ಧರ್ಮಿಸ್ಥಾನಾಂ ಚ ಧರ್ಮಾಣಾಂ ಬಾಧಿಕಾ ನಾಭವತ್ ತದಾ ॥೧೦೯೯॥**

**ಅಖಂಡಾರ್ಥಾನಿ ವಾಕ್ಯಾನಿ ನಿಷ್ಪ್ರಕಾರಕಧೀಶ್ಚ ತೇ ।**
**ಕಂ ಬೋಧಯೇತ್ ಕಂ ಕಮರ್ಥಂ ಬಾಧಯೇದ್ವಾ ವಿಚಾರಯ ॥೧೧೦೦॥**

**ಅರ್ಥ-** ಯದಾ = ಯಾವಾಗ, ಬ್ರಹ್ಮಣಿ ನೇತ್ಯಾದ್ಯಾ = ಬ್ರಹ್ಮನಲ್ಲಿ ಯಾವುದೂ ಇಲ್ಲವೆಂಬ, ವಾಗ್ವಾ = ವಾಕ್ಯವಾಗಲೀ, ತದುದ್ಭವಾ = ಅದರಿಂದ ಉಂಟಾದ, ಧೀರ್ವಾ = ಜ್ಞಾನವಾಗಲೀ, (ಶಾಬ್ದಬೋಧವಾಗಲೀ ಅಥವಾ ಪ್ರತ್ಯಕ್ಷವಾಗಲೀ), ಸಖಂಡಾ ಸಪ್ರಕಾರಾಪಿ = ಸಖಂಡವೆಂದೂ, ಸಪ್ರಕಾರಕವೆಂದೂ ಅಂಗೀಕರಿಸಿದರೂ, ಸ್ವೋಪಾದಾನಸ್ಥ-ಧರ್ಮಿಣಾಮ್ = ತಮ್ಮ ತಮ್ಮ ಉಪಾದಾನಗಳಲ್ಲಿರುವ ಧರ್ಮಿಗಳಿಗೂ, ಧರ್ಮಿಸ್ಥಾನಾಂ ಧರ್ಮಾಣಾಂ ಚ = ಮತ್ತು ಆಯಾ ಧರ್ಮಿಗಳಲ್ಲಿರುವ ಆಯಾ ಧರ್ಮಗಳಿಗೂ, ಬಾಧಿಕಾ ನಾಭವತ್ = ಬಾಧಕವಾಗಲಿಲ್ಲವೋ, ತದಾ = ಆಗ,

ಅಖಂಡಾರ್ಥಾನಿ ವಾಕ್ಯಾನಿ = ಅಖಂಡಾರ್ಥವಾದ ವಾಕ್ಯಗಳು, ನಿಷ್ಪ್ರಕಾರಕಧೀಶ್ಚ = ಅದರಿಂದ ಉಂಟಾದ ನಿಷ್ಪ್ರಕಾರಕ ಜ್ಞಾನವೂ, ತೇ = ನಿನಗೆ, ಕಂ ಅರ್ಥಂ = ಯಾವ ಅರ್ಥವನ್ನು, ಬೋಧಯೇತ್ = ಬೋಧಿಸುತ್ತವೆ? ವಾ = ಅಥವಾ, ಕಮರ್ಥಂ = ಯಾವ ಅರ್ಥವನ್ನು, ಬಾಧಯೇತ್ = ಬಾಧಿಸುತ್ತದೆ ಎಂದು, ವಿಚಾರಯ = ವಿಚಾರಮಾಡು.

**ಅನುವಾದ-** ಬ್ರಹ್ಮನಲ್ಲಿ ಇಲ್ಲ ಎಂಬ ವಾಕ್ಯವಾಗಲೀ, ಅಂತಹ ವಾಕ್ಯದಿಂದ ಉಂಟಾದ ಜ್ಞಾನವಾಗಲೀ, ಸಖಂಡವೆಂದೂ, ಸಪ್ರಕಾರಕವೆಂದೂ ಅಂಗೀಕರಿಸಿದರೂ, ತಮ್ಮ ತಮ್ಮ ಉಪಾದಾನಗಳಲ್ಲಿರುವ ಧರ್ಮಿಗಳನ್ನೂ ಮತ್ತು ಆಯಾ ಧರ್ಮಿಗಳಲ್ಲಿರುವ ಧರ್ಮಗಳನ್ನೂ ಬಾಧಿಸುವುದಿಲ್ಲವೆಂದು ಸಿದ್ಧವಾದಾಗ, ಅಖಂಡಾರ್ಥವಾದ ವಾಕ್ಯಗಳೂ ಅವುಗಳಿಂದ ಉಂಟಾದ ನಿಷ್ಪ್ರಕಾರಕಬೋಧವೂ ನಿನಗೆ ಯಾವ ಅರ್ಥವನ್ನು ಸಾಧಿಸಿಕೊಡುತ್ತವೆ ಅಥವಾ ಯಾವ ಅರ್ಥವನ್ನು ಬಾಧಿಸುತ್ತವೆ ಎಂದು ವಿಚಾರಮಾಡು.

**ಭಾವವಿಲಾಸಿನೀ-** ಏಕಮೇವಾದ್ವಿತೀಯಮಿತ್ಯಾದಿವಾಕ್ಯಾನಾಮಪಿ ಭಿನ್ನವಿಷಯತ್ವಂ ಪ್ರದರ್ಶಯತಿ ॥ **ಯದೇತಿ** ॥ ಯದುದ್ಭವಾ ವಾಕ್ಯೋದ್ಭವಾ । ಸಖಂಡಾ ವಾಕ್ । ಸಪ್ರಕಾರಾ ಧೀರಿತಿ ವಿವೇಕಃ । ಅಪಿಪದೇನ ಅಖಂಡತ್ವೇ ನಿಷ್ಪ್ರಕಾರತ್ವೇ ಚ ಸುತರಾಮಿತಿ ಸೂಚಯತಿ । ಧರ್ಮಿಸ್ಥಾನಾಂ ಭೂತಲಾದಿಧರ್ಮಿಸ್ಥಾನಾಮ್ । ಭಿನ್ನವಿಷಯತ್ವಾದಿತಿ ಭಾವಃ ॥ ೧೦೯೮ ॥

ಅಪಿಪದೇನ ಸೂಚಿತಮರ್ಥಂ ಸ್ಪಷ್ಟಮಾಹ - **ಅಖಂಡೇತಿ** ॥ ೧೧೦೦ ॥

**ವಿವರಣೆ-** ಹಿಂದೆ ಹೇಳಿದಂತೆ ಬಾಧಕತ್ವೇನ ಅಭಿಮತ ವಾಕ್ಯಗಳು ಭಿನ್ನವಿಷಯಕವಾದುದರಿಂದ ಸಪ್ರಕಾರಕವೆಂದು ಅಂಗೀಕರಿಸಿದರೂ ಯಾವುದಕ್ಕೂ ಬಾಧಕವಾಗುವುದಿಲ್ಲ. ಹೀಗಿರುವಾಗ ನಿಷ್ಪ್ರಕಾರಕಜ್ಞಾನವು ಬ್ರಹ್ಮಚೈತನ್ಯವನ್ನು ಬಿಟ್ಟು ಯಾವುದನ್ನೂ ಸ್ಪರ್ಶಿಸುವುದಿಲ್ಲವಾದ್ದರಿಂದ ಅದು ಯಾವ ಅರ್ಥಕ್ಕೂ ಸಾಧಕವೂ ಆಗುವುದಿಲ್ಲ ಅಥವಾ ಬಾಧಕವೂ ಆಗುವುದಿಲ್ಲ ಎಂದು ಅಭಿಪ್ರಾಯ.

ತಸ್ಮಾತ್ ಸಾಧಕಮಾನಸ್ಯ ಹೀನತಾ ಮರಣೇಽಪಿ ನ ।
ಅವಿದ್ಯಾವದ್ವಿಷಯತಾ ನಾಭೂದೇವಂ ವಿಚಾರಣೇ ॥ ೧೧೦೧ ॥

**ಅರ್ಥ-** ತಸ್ಮಾತ್ = ಆದ್ದರಿಂದ, ಸಾಧಕಮಾನಸ್ಯ = ಸಾಧಕಪ್ರಮಾಣವು, ಮರಣೇಽಪಿ= ಸತ್ತರೂ ಸಹ, ಹೀನತಾ ನ = ದುರ್ಬಲವಾಗುವುದಿಲ್ಲ, ಏವಂ ವಿಚಾರಣೇ= ಹೀಗೆ ವಿಚಾರಮಾಡಿದರೆ, ಅವಿದ್ಯಾವದ್ವಿಷಯತಾ = ಸಾಧಕಪ್ರಮಾಣಕ್ಕೆ ಅವಿದ್ಯಾವದ್ವಿಷಯಕತ್ವವು, ನಾಭೂತ್ = ಉಂಟಾಗಲಿಲ್ಲ.

**ಅನುವಾದ -** ಕ್ಲೃಪ್ತದೋಷವು ಇಲ್ಲದಿರುವುದರಿಂದ, ಕಲ್ಪಕವೂ ಇಲ್ಲದಿರುವುದರಿಂದ, ಕಲ್ಪ್ಯವಾದದೋಷವೂ ಇಲ್ಲದಿರುವುದರಿಂದ, ವಿಶ್ವಸತ್ಯತ್ವ - ಸಾಧಕವಾದ ಪ್ರಮಾಣಕ್ಕೆ ಸತ್ತರೂ ದುರ್ಬಲತ್ವವು ಉಂಟಾಗುವುದಿಲ್ಲ. ಆದ್ದರಿಂದ ಹೀಗೆ ವಿಚಾರಮಾಡಿದರೆ ಜಗತ್ಪ್ರತ್ಯಕ್ಷದಲ್ಲಿ ಅವಿದ್ಯಾವದ್ವಿಷಯಕತ್ವವು ದೋಷ-ವಾಗುವುದಿಲ್ಲ.

**ಭಾವವಿಲಾಸಿನೀ–** ತಸ್ಮಾತ್ ಕ್ಲೃಪ್ತದೋಷಾಭಾವಾತ್ । ಕಲ್ಪಕಾಭಾವೇನ ಕಲ್ಪ್ಯದೋಷಾ-ಭಾವಾಚ್ಚ । ಸಾಧಕಮಾನಸ್ಯ ಘಟಾದಿಸಾಧಕಮಾನಸ್ಯ । ನಾಭೂತ್ ದೋಷೋ ನಾಭೂತ್ । ಏವಂ ಪೂರ್ವೋಕ್ತರೀತ್ಯಾ ॥ ೧೧೦೧ ॥

ತಥಾऽಕ್ಷಾದಿಪ್ರಮಾಣಾನಾಂ ಜಡಾನಾಂ ಹೀನತಾऽಪಿ ನ ।
ಅವಿದ್ಯಾವದ್ವಿಷಯತಾ ಚೇಯಂ ದೋಷಃ ಕಥಂ ವದ ॥ ೧೧೦೨ ॥

**ಅರ್ಥ-** ತಥಾ = ಅದರಂತೆ, ಜಡಾನಾಂ= ಜಡವಾದ, ಅಕ್ಷಾದಿಪ್ರಮಾಣಾನಾಂ= ಪ್ರತ್ಯಕ್ಷಾದಿಪ್ರಮಾಣಗಳಿಗೆ, ಹೀನತಾऽಪಿ ನ= ಹೀನತ್ವವೂ ಇಲ್ಲ, ಇಯಂ ಅವಿದ್ಯಾ-ವದ್ವಿಷಯತಾ= ಈ ಅವಿದ್ಯಾವದ್ವಿಷಯತ್ವವು, ಕಥಂ = ಹೇಗೆ, ದೋಷಃ= ದೋಷವಾಗುತ್ತದೆಂದು, ವದ= ಹೇಳು.

**ಅನುವಾದ-** ಅದರಂತೆ ಜಡವಾದ ಅಕ್ಷಾದಿಪ್ರಮಾಣಗಳಿಗೆ ಹೀನತ್ವವೂ ಇಲ್ಲ. ಈ ಅವಿದ್ಯಾವದ್ವಿಷಯತ್ವವು ಹೇಗೆ ದೋಷವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಘಟಾದಿಜ್ಞಾನಾನಾಂ ಭ್ರಮತ್ವಾಭಾವೇನ ದೋಷತ್ವಕಲ್ಪಕಾಭಾವಾತ್ । ಅವಿದ್ಯಾವಿಷಯತ್ವಸ್ಯ ಸತ್ವೇऽಪಿ ದೋಷತ್ವಕಲ್ಪಕಾಭಾವಾನ್ನ ದೋಷತೇತ್ಯುಕ್ತಮ್ । ಜಡೇ ತದನಂಗೀಕಾರಾಚ್ಚ ನ ದೋಷತೇತ್ಯಾಹ-**ತಥೇತಿ** ॥ ೧೧೦೨ ॥

**ವಿವರಣೆ-** ಘಟಾದಿಜ್ಞಾನಗಳು ಭ್ರಮವಲ್ಲವಾದ್ದರಿಂದ ದೋಷವನ್ನು ಕಲ್ಪನೆಮಾಡಬೇಕಾದ ಪ್ರಸಂಗವಿಲ್ಲ. ಆದ್ದರಿಂದ ಅವಿದ್ಯಾವದ್ವಿಷಯತ್ವಕ್ಕೆ ದೋಷತ್ವವನ್ನು ಕಲ್ಪನೆಮಾಡಬೇಕಾದ ಪ್ರಸಂಗವಿಲ್ಲ ಎಂದು ಮೊದಲೇ ಹೇಳಿದೆ. ಜಡದಲ್ಲಿ ಅಜ್ಞಾನವನ್ನು ಅಂಗೀಕರಿಸದೇ ಇರುವುದರಿಂದಲೂ ಅವಿದ್ಯಾವಿಷಯತ್ವಕ್ಕೆ ದೋಷತ್ವವಿಲ್ಲ ಎಂದು ಇಲ್ಲಿ ಹೇಳುತ್ತಾರೆ. ಇದನ್ನು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾರೆ.

ಅವಿದ್ಯಾವದ್ಧಿ ತೇ ಬ್ರಹ್ಮ ನಾನ್ಯದ್ ಘಟಪಟಾದಿಕಮ್ ।
ಮಹಾವಾಕ್ಯಾನ್ಯಮಾನಸ್ಯ ನ ತದ್ವಿಷಯತೇಷ್ಯತೇ ॥ ೧೧೦೩ ॥

**ಅವಿದ್ಯಾವದ್ವಿಷಯಕಂ ಮಹಾವಾಕ್ಯಂ ಹಿ ಕೇವಲಮ್ ।**
**ಪ್ರತ್ಯಕ್ಷಾದಿಪ್ರಮಾಣಸ್ಯ ಮಾನತಾ ಕೇನ ಹೀಯತೇ ॥ ೧೧೦೪ ॥**

**ಅರ್ಥ-** ಅವಿದ್ಯಾವತ್ = ಅವಿದ್ಯಾಶ್ರಯವಾದುದು, ತೇ ಬ್ರಹ್ಮ ಹಿ = ನಿನ್ನ ಬ್ರಹ್ಮನಷ್ಟೇ? ಅನ್ಯತ್ = ಉಳಿದ, ಘಟಪಟಾದಿಕಮ್ = ಘಟಪಟಾದಿಗಳು, ನ = ಅವಿದ್ಯಾಶ್ರಯವಲ್ಲ, ಮಹಾವಾಕ್ಯಾನ್ಯಮಾನಸ್ಯ = ಮಹಾವಾಕ್ಯಭಿನ್ನವಾದ ಪ್ರಮಾಣಕ್ಕೆ, ತದ್ವಿಷಯತಾ = ಅವಿದ್ಯಾವದ್ವಿಷಯತ್ವವು, ನೇಷ್ಯತೇ = ನಿನ್ನಿಂದ ಅಂಗೀಕರಿಸಲ್ಪಡುವುದಿಲ್ಲ.

ಅವಿದ್ಯಾವದ್ವಿಷಯಕಂ = ಅವಿದ್ಯಾವದ್ವಿಷಯಕವಾದುದು, ಕೇವಲಂ = ಕೇವಲ, ಮಹಾವಾಕ್ಯಂ ಹಿ = ಮಹಾವಾಕ್ಯವಷ್ಟೇ? ಪ್ರತ್ಯಕ್ಷಾದಿಪ್ರಮಾಣಸ್ಯ = ಪ್ರತ್ಯಕ್ಷಾದಿ ಪ್ರಮಾಣಗಳಿಗೆ, ಮಾನತಾ = ಪ್ರಾಮಾಣ್ಯವು, ಕೇನ ಹೀಯತೇ = ಯಾವುದರಿಂದ ಅಪಹರಿಸಲ್ಪಡುತ್ತದೆ?

**ಅನುವಾದ-** ಅವಿದ್ಯಾಶ್ರಯವಾದುದು ನಿನ್ನ ಬ್ರಹ್ಮನು ಮಾತ್ರ. ಘಟಪಟಾದಿಗಳು ಅವಿದ್ಯಾಶ್ರಯವಲ್ಲ. ಮಹಾವಾಕ್ಯಭಿನ್ನವಾದ ಪ್ರಮಾಣಕ್ಕೆ ಅವಿದ್ಯಾವದ್ವಿಷಯತ್ವವನ್ನು ನೀನೂ ಅಂಗೀಕರಿಸಬಾರದು. ಮಹಾವಾಕ್ಯವೊಂದೇ ಅವಿದ್ಯಾವದ್ವಿಷಯಕವಾದುದು. ಆದ್ದರಿಂದ ಪ್ರತ್ಯಕ್ಷಾದಿಪ್ರಮಾಣಗಳ ಪ್ರಾಮಾಣ್ಯಕ್ಕೆ ಯಾವುದರಿಂದ ಭಂಗವು ಬರುತ್ತದೆ?

**ಭಾವವಿಲಾಸಿನೀ–** ಏತದೇವ ವಿಶದಯತಿ ॥ **ಅವಿದ್ಯೇತಿ** ॥ ತದ್ವಿಷಯತಾ ಅವಿದ್ಯಾತ್ವಘಟಿತವಿಷಯತಾ ॥ ೧೧೦೩-೧೧೦೪ ॥

**ಅವಿದ್ಯೋಪಾದಾನಕತ್ವಂ ಯದಿ ತದ್ವತ್ತ್ವಮೀರ್ಯತೇ ।**
**ತದಾಽಜ್ಞಾನೇ ಸ ದೋಷೋ ನ ತನ್ಮಾನೇ ಹೀನತಾಽಪಿ ನ ॥ ೧೧೦೫ ॥**

**ನಹಿ ಸ್ವಯಂ ಸ್ವಸ್ಯ ಹೇತುರನಾದಿಶ್ಚ ನ ಹೇತುಮಾನ್ ।**
**ತಸ್ಮಾತ್ ಪ್ರಾಮಾಣಿಕತ್ವೇನ ಸ್ಯಾದಜ್ಞಾನಮಬಾಧಿತಮ್ ॥ ೧೧೦೬ ॥**

**ಅರ್ಥ-** ಯದಿ = ಒಂದುಪಕ್ಷ, ತದ್ವತ್ತ್ವಮ್ = ಅವಿದ್ಯಾವತ್ತ್ವಂ ಎನ್ನುವುದು, ಅವಿದ್ಯೋಪಾದಾನಕತ್ವಂ = ಅವಿದ್ಯೋಪಾದಾನಕತ್ವರೂಪವಾದುದು ಎಂದು ಈ ರೀತಿ ಹೇಳುವುದಾದರೆ, ತದಾ = ಆಗ, ಅಜ್ಞಾನೇ = ಅಜ್ಞಾನದಲ್ಲಿ, ಸಃ = ಅವಿದ್ಯೋಪಾದಾನಕತ್ವರೂಪವಾದ, ದೋಷಃ = ದೋಷವು, ನ = ಇಲ್ಲ, ತನ್ಮಾನೇ = ಅಜ್ಞಾನಸಾಧಕಪ್ರಮಾಣದಲ್ಲಿ, ಹೀನತಾಽಪಿ = ಹೀನತ್ವವೂ, ನ = ಇಲ್ಲ.

ಸ್ವಯಂ = ತಾನೇ, ಸ್ವಸ್ಯ = ತನಗೆ, ನ ಹಿ ಹೇತುಃ = ಹೇತುವಾಗುವುದಿಲ್ಲವಷ್ಟೇ? ಅನಾದಿಶ್ಚ = ಅನಾದಿಯಾದ ಪದಾರ್ಥವೂ ಸಹ, ನ ಹೇತುಮಾನ್ = ಕಾರಣವುಳ್ಳದ್ದಲ್ಲ,

ತಸ್ಮಾತ್ = ಆದ್ದರಿಂದ, ಪ್ರಾಮಾಣಿಕತ್ವೇನ = ಪ್ರಾಮಾಣಿಕತ್ವವು ಇರುವುದರಿಂದ, ಅಜ್ಞಾನಮ್ = ಅಜ್ಞಾನವು, ಅಬಾಧಿತಮ್ ಸ್ಯಾತ್ = ಅಬಾಧಿತವೆಂದು (ಸತ್ಯವೆಂದು) ಆಗಬೇಕಾಗುತ್ತದೆ.

**ಅನುವಾದ-** ಅವಿದ್ಯಾವದ್ವಿಷಯತ್ವಂ ಎಂಬಲ್ಲಿರುವ ಅವಿದ್ಯಾವತ್ತ್ವವು ಅವಿದ್ಯೋ- ಪಾದಾನಕತ್ವರೂಪವಾದರೆ, ಆಗ ಅನಾದಿಯಾದ ಅಜ್ಞಾನದಲ್ಲಿ ಆ ದೋಷವು ಇಲ್ಲವೆಂದಾಯಿತು. ಅಜ್ಞಾನಸಾಧಕಪ್ರಮಾಣದಲ್ಲಿ ಹೀನತ್ವವೂ ಇಲ್ಲವೆಂದಾಗುತ್ತದೆ. ಅಜ್ಞಾನದಲ್ಲಿ ಅಜ್ಞಾನೋಪಾದಾನಕತ್ವವು ಇಲ್ಲ, ಏಕೆಂದರೆ, ತನಗೆ ತಾನೇ ಹೇತುವಾಗುವುದಿಲ್ಲವಷ್ಟೇ ? ಮತ್ತು ಅಜ್ಞಾನವು ಅನಾದಿಯಾದುದರಿಂದಲೂ ಅದಕ್ಕೆ ಯಾವ ಹೇತುವೂ ಇಲ್ಲ. ಆದ್ದರಿಂದ ಅಜ್ಞಾನವು ಪ್ರಾಮಾಣಿಕವಾದ್ದರಿಂದ ಅಬಾಧ್ಯವೇ ಎಂದರೆ ಸತ್ಯವೇ ಆಗುತ್ತದೆ.

**ಭಾವವಿಲಾಸಿನೀ–** ಅವಿದ್ಯಾವತ್ವದೇನಾವಿದ್ಯೋಪಾದಾನಕತ್ವಗ್ರಹೇऽಪಿ ಚಮತ್ಕಾರಿ- ದೂಷಣಾಂತರಂ ಚಾಹ - **ಅವಿದ್ಯೋಪಾದಾನಕತ್ವಮಿತಿ** ॥ ಸಃ ಅವಿದ್ಯೋಪಾದಾನತ್ವಾಖ್ಯ- ದೋಷಃ ತನ್ಮಾನೇ ಅಜ್ಞಾನಸಾಧಕಪ್ರಮಾಣೇ ॥ ತತ್ರ ಹೇತುಮಾಹ - **ನ ಹೀತಿ** ॥ ಸ್ವಯಮಜ್ಞಾನಮ್ । ಸ್ವಸ್ಯ ಅಜ್ಞಾನಸ್ಯ । ಆತ್ಮಾಶ್ರಯಪ್ರಸಂಗಾದಿತಿ ಭಾವಃ । ಹೇತ್ವಂತರಂ ಚಾಹ-**ಅನಾದಿರಿತಿ** ॥ ಅಜ್ಞಾನಸ್ಯಾನಾದಿತ್ವಾಂಗೀಕಾರಾದಿತಿ ಭಾವಃ । ತಸ್ಮಾತ್ ಅಜ್ಞಾನೇ ಅಜ್ಞಾನೋಪಾದಾನಕತ್ವದೋಷಾಭಾವಾತ್ ॥ ೧೧೦೫- ೧೧೦೬ ॥

**ನ ಬ್ರಹ್ಮಣೀದಮಿತಿ ತು ಬಾಧೇ ಜೀವೇ ಭವೇದ್ಧಿ ತತ್ ।**
**ಅಬಾಧಿತಸ್ಯ ಯತ್ ಕಾರ್ಯಂ ತಚ್ಚಾವಶ್ಯಮಬಾಧಿತಮ್ ॥ ೧೧೦೭ ॥**

**ಅರ್ಥ-** ಬ್ರಹ್ಮಣಿ= ಬ್ರಹ್ಮನಲ್ಲಿ, ಇದಂ ನ = ಇದು ಇಲ್ಲ, ಇತಿ ಬಾಧೇತು = ಎಂದು ಬಾಧವು ಇರುವುದಾದರೆ, ತತ್ = ಆ ವಸ್ತುವು (ಅಜ್ಞಾನ-ರೂಪವಾದುದು) ಜೀವೇ = ಜೀವನಲ್ಲಿ, ಭವೇದ್ಧಿ = ಇರುವುದಷ್ಟೇ ? ಅಬಾಧಿತಸ್ಯ = ಅಬಾಧಿತವಾದ ಅಜ್ಞಾನಕ್ಕೆ, ಯತ್ = ಯಾವುದು (ಯಾವ ಜಗತ್ತು), ಕಾರ್ಯಂ = ಕಾರ್ಯವೋ, ತಚ್ಚ = ಅದೂ ಸಹ, ಅವಶ್ಯಂ = ಅವಶ್ಯವಾಗಿ, ಅಬಾಧಿತಮ್ = ಅಬಾಧಿತವೇ ಆಗುತ್ತದೆ.

**ಅನುವಾದ-** ಬ್ರಹ್ಮನಲ್ಲಿ ಅಜ್ಞಾನವು ಇಲ್ಲವೆಂದು ನಿಷೇಧಮಾಡಿದರೆ, ಜೀವನಲ್ಲಿ ಅಜ್ಞಾನವು ಇರಬಹುದು. ಅಜ್ಞಾನವು ಅಬಾಧಿತವೆಂದಾದರೆ, ಅಜ್ಞಾನಕಾರ್ಯ ವಾದ ಜಗತ್ತೂ ಸಹ ಅವಶ್ಯವಾಗಿ ಅಬಾಧಿತವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತತ್ ಅಜ್ಞಾನಮ್ । ಅಬಾಧಿತಸ್ಯ ಅಜ್ಞಾನಸ್ಯ । ಯತ್ಕಾರ್ಯಮುಪಾದೇಯ- ಕಾರ್ಯಮ್ । ತತ್ ಜಗತ್ ॥ ೧೧೦೭ ॥

**ಅಜ್ಞಾನೋಪಾದಾನತಯಾಽಪ್ಯೇವಂ ಸತಿ ಕಿಮಾಗತಮ್ ।**
**ಅಜ್ಞಾನೋಪಾದಾನತಾ ಚಾಧ್ಯಕ್ಷೇ ದೋಷಸ್ತವೈವ ಹಿ ।**
**ಕಿಂ ಕುಂಭಕಾರಶಾಲಾಗ್ನೇಃ ಸ್ಯಾದಾಮಘಟತೋ ಭಯಮ್ ॥ ೧೧೦೮ ॥**

**ಅರ್ಥ-** ಏವಂ ಸತಿ = ಹೀಗೆ ಅಜ್ಞಾನವು ಪ್ರಾಮಾಣಿಕವಾಗಿರುವಾಗ, ಅಜ್ಞಾನೋಪಾದಾನತಯಾಽಪಿ = ಅಜ್ಞಾನೋಪಾದಾನಕತ್ವವನ್ನು ಅಂಗೀಕರಿಸುವು ದರಿಂದಲೂ, ಕಿಮ್ ಆಗತಮ್ = ಏನು ಲಾಭವಾಯಿತು? ತವೈವ = ನಿನಗೇ, ಅಧ್ಯಕ್ಷೇ = ಪ್ರತ್ಯಕ್ಷಾದಿಪ್ರಮಾಣದಲ್ಲಿ, ಅಜ್ಞಾನೋಪಾದಾನತಾ = ಅಜ್ಞಾನೋಪಾದಾನತ್ವವು, ದೋಷಃ ಹಿ = ದೋಷವಾಗುತ್ತದೆ, ಕುಂಭಕಾರಶಾಲಾಗ್ನೇಃ= ಕುಂಬಾರನ ಮನೆಯ ಅಗ್ನಿಗೆ, ಆಮಘಟತೋ= ಹಸಿಯ ಮಡಕೆಯಿಂದ, ಭಯಮ್ ಸ್ಯಾತ್ ಕಿಂ= ಭಯವಾಗುತ್ತದೆಯೇ?

**ಅನುವಾದ-** ಅಜ್ಞಾನವು ಹೀಗೆ ಪ್ರಾಮಾಣಿಕವಾದರೆ, ಪ್ರಾಮಾಣಿಕವೆಂದು ಸಿದ್ಧವಾದ ಮೇಲೆ ಅಜ್ಞಾನೋಪಾದಾನಕತ್ವದಿಂದಲೂ ನಿನಗೆ ಯಾವ ಲಾಭವಾಗುತ್ತದೆ? ಪ್ರತ್ಯುತ ನಿನಗೆ ಅಭಿಮತವಾದ ಚರಮಸಾಕ್ಷಾತ್ಕಾರದಲ್ಲಿಯೇ ಅಜ್ಞಾನೋಪಾದಾನತ್ವವು ಇರುವುದರಿಂದ, ಅದು ಚರಮಸಾಕ್ಷಾತ್ಕಾರಕ್ಕೇ ದೋಷವಾಗುತ್ತದೆ. ಕುಂಬಾರನ ಮನೆಯ ಅಗ್ನಿಗೆ ಹಸಿಯ ಮಡಕೆಯಿಂದ ಭಯವು ಉಂಟಾಗುತ್ತದೆಯೇ? ಚರಮಸಾಕ್ಷಾತ್ಕಾರವು ಅಜ್ಞಾನನಾಶಕವಾದುದರಿಂದ ಅಜ್ಞಾನವು ಅಲ್ಲಿಯೂ ದೋಷವಾಗುವುದಿಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ - **ಅಜ್ಞಾನೇತಿ** ॥ ಅಪರೋಕ್ಷವೃತ್ತೇರಜ್ಞಾನನಾಶಕತ್ವಾದಿತಿ ಭಾವಃ । ಏವಂ ಸತಿ ಅಜ್ಞಾನಸ್ಯ ಪ್ರಾಮಾಣಿಕತ್ವೇ ಸತಿ । ಕಿಂ ದೂಷಣಮ್ । ಪ್ರಾಮಾಣಿಕೋಪಾದಾನಕಕಾರ್ಯಸ್ಯಾಪಿ ಪ್ರಾಮಾಣಿಕತ್ವಸ್ಯೈವಾಪಾತಾದಿತಿ ಭಾವಃ ॥ ೧೧೦೮ ॥

**ವಿವರಣೆ-** ಚರಮಸಾಕ್ಷಾತ್ಕಾರವು ಕುಂಬಾರನ ಮನೆಯ ಅಗ್ನಿ ಇದ್ದಂತೆ. ಅಜ್ಞಾನವು ಆಮಘಟವಿದ್ದಂತೆ. ಅಗ್ನಿಯು ಆಮಘಟವನ್ನೇ ಸುಡುತ್ತದೆ. ಆಮಘಟದ ಹೆದರಿಕೆಯು ಅಗ್ನಿಗೆ ಇಲ್ಲ. ಆದರಂತೆ ಅಜ್ಞಾನವನ್ನು ನಾಶಮಾಡುವ ಸಾಕ್ಷಾತ್ಕಾರಕ್ಕೆ ಅಜ್ಞಾನವು ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

**ಅಜ್ಞಾನೇಽಜ್ಞಾನತ್ವಮೇವ ಯದಿ ದೋಷೋ ಮತಸ್ತವ ।**
**ಸದಾ ಸದೋಷವಿಷಯಂ ತನ್ಮಾನಂ ತನ್ನ ಸಾಧಯೇತ್ ॥ ೧೧೦೯ ॥**

**ಅರ್ಥ-** ಯದಿ = ಒಂದುಪಕ್ಷ, ಅಜ್ಞಾನೇ = ಅಜ್ಞಾನದಲ್ಲಿ, ಅಜ್ಞಾನತ್ವಮೇವ = ಅಜ್ಞಾನತ್ವವೇ, ದೋಷಃ = ದೋಷವೆಂದು, ತವ ಮತಃ = ನಿನಗೆ ಅಭಿಪ್ರೇತವಾದರೆ, ಸದಾ =

ಯಾವಾಗಲೂ, ಸದೋಷವಿಷಯಂ = ದುಷ್ಟವಿಷಯಕವಾದ, ತನ್ಮಾನಂ = ಅಜ್ಞಾನಸಾಧಕಪ್ರಮಾಣವು, ತತ್ = ಅಜ್ಞಾನವನ್ನು, ನ ಸಾಧಯೇತ್ = ಸಾಧಿಸುವುದಿಲ್ಲ.

**ಅನುವಾದ-** **ಅಜ್ಞಾನದಲ್ಲಿ ಅಜ್ಞಾನತ್ವವೇ ದೋಷ ಎಂದು ನಿನ್ನ ಅಭಿಪ್ರಾಯವಾದರೆ, ಅಜ್ಞಾನದಲ್ಲಿ ಅಜ್ಞಾನತ್ವವು ಸರ್ವದಾ ಇರುವುದರಿಂದ ಅಂತಹ ದೋಷವಿಶಿಷ್ಟ-ವಿಷಯಕವಾದ ಅಜ್ಞಾನಸಾಧಕಪ್ರಮಾಣವು ಅಜ್ಞಾನವನ್ನು ಸಾಧಿಸುವುದಿಲ್ಲ.**

**ಭಾವವಿಲಾಸಿನೀ–** ಸದೋಷವಿಷಯವಮ್ ಅಜ್ಞಾನತ್ವಾಖ್ಯದೋಷೇಣ ಸಹಿತಃ । ಸ ಏವ ಅಜ್ಞಾನಾಖ್ಯ ಏವ ವಿಷಯೋ ಯಸ್ಯ ತತ್ತಥೋಕ್ತಮ್ । ತನ್ಮಾನಮ್ ಅಮಾನಪ್ರಮಾಣಮ್ । ತತ್ ಅಜ್ಞಾನಮ್ ॥ ೧೧೦೯ ॥

**ವಿವರಣೆ-** ಹೇಗೆ ಅರ್ಥದೋಷವಿರುವ ಸ್ಥಳದಲ್ಲಿ ಪ್ರಮಾಣದಿಂದ ಅರ್ಥವು ಸಿದ್ಧವಾಗುವುದಿಲ್ಲವೋ ಅದರಂತೆ ಅಜ್ಞಾನವೂ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಏವಂ ಚ ಮೃನ್ಮಯೇ ಬಾಹ್ಯಪ್ರತ್ಯಕ್ಷವಿಷಯೇ ಘಟೇ ।**
**ಅಜ್ಞಾನಮಯತಾವಾದೋ ಯುಕ್ತ್ಯಜ್ಞಾನಾತ್ ಪರಂ ತವ ॥ ೧೧೧೦ ॥**

**ಅರ್ಥ-** ಏವಂ ಚ = ಈ ಕಾರಣದಿಂದ, ಬಾಹ್ಯಪ್ರತ್ಯಕ್ಷವಿಷಯೇ = ಬಾಹ್ಯಪ್ರತ್ಯಕ್ಷಕ್ಕೆ ವಿಷಯವಾದ, ಮೃನ್ಮಯೇ = ಮೃದ್ವಿಕಾರವಾದ, ಘಟೇ = ಘಟದಲ್ಲಿ, ತವ = ನಿನ್ನ, ಅಜ್ಞಾನಮಯತಾವಾದಃ = ಅಜ್ಞಾನೋಪಾದಾನಕತ್ವವಾದವು, ಪರಂ = ಕೇವಲ, ಯುಕ್ತ್ಯಜ್ಞಾನಾತ್ = ಅದನ್ನು ಸಾಧಿಸುವ ನಿನ್ನ ಯುಕ್ತಿಯ ಅಜ್ಞಾನದಿಂದಲೇ ಇರುತ್ತದೆ.

**ಅನುವಾದ-** **ಈ ರೀತಿಯಾಗಿ ಬಾಹ್ಯಪ್ರತ್ಯಕ್ಷವಿಷಯವಾದ ಮೃದ್ವಿಕಾರವಾದ ಘಟಾದಿಗಳಲ್ಲಿ ನೀನು ಹೇಳುವ ಅಜ್ಞಾನೋಪಾದಾನಕತ್ವವಾದವು ಕೇವಲ ನಿನ್ನ ಯುಕ್ತ್ಯಜ್ಞಾನಮೂಲವಾಗಿದೆ.**

**ಭಾವವಿಲಾಸಿನೀ–** ಏವಂ ಚ ದುಷ್ಟಪ್ರಮಾಣಬೋಧಿತಾ ಜ್ಞಾನಸ್ಯ ಶುಕ್ತಿರಜತವದಭಾವೇಽ-ಜ್ಞಾನಮಯತಾವಾದಃ ಅಜ್ಞಾನೋಪಾದಾನಕತ್ವವಾದಃ ॥ ೧೧೧೦ ॥

**ಅನಾದ್ಯಜ್ಞಾನಪಿಹಿತಮೈಕ್ಯಮೈಕ್ಯತ್ವತೋ ನ ಚೇತ್ ।**
**ದುಷ್ಟಂ ಸ್ಯಾದ್ ದುಷ್ಟಸಂಸರ್ಗಾನ್ಮಾನೇಷು ಸ್ಯಾದಮಾನತಾ ॥ ೧೧೧೧॥**

**ಅರ್ಥ-** ನ ಚೇತ್ = ಅಜ್ಞಾನತ್ವಕ್ಕೆ ದೋಷತ್ವಾಭಾವವು ಇಲ್ಲದಿದ್ದರೆ ಅಥವಾ ಅಜ್ಞಾನದಲ್ಲಿ ಅಜ್ಞಾನತ್ವವೇ ದೋಷವಾದರೆ, ಅನಾದ್ಯಜ್ಞಾನಪಿಹಿತಮ್ = ಅನಾದಿಯಾದ ಅಜ್ಞಾನದಿಂದ ಆವೃತವಾದ, ಐಕ್ಯಮ್ = ಐಕ್ಯವು, ಐಕ್ಯತ್ವತಃ = ಐಕ್ಯತ್ವವು ಇರುವುದರಿಂದಲೆ, ದುಷ್ಟಂ ಸ್ಯಾತ್ = ದುಷ್ಟವಾಗಲಿ, ಮಾನೇಷು = ಐಕ್ಯಸಾಧಕಪ್ರಮಾಣಗಳಲ್ಲಿ, ದುಷ್ಟಸಂಸರ್ಗಾತ್ =

ದುಷ್ಟವಾದ ಐಕ್ಯದ ಸಂಬಂಧವಿರುವುದರಿಂದ, ಅಮಾನತಾಸ್ಯಾತ್ = ಅಪ್ರಮಾಣ್ಯವು ಉಂಟಾಗಲಿ.

**ಅನುವಾದ-** ಅಜ್ಞಾನದಲ್ಲಿ ಅಜ್ಞಾನತ್ವವೇ ದೋಷವಾಗುವುದಾದರೆ ಅನಾದಿಯಾದ ಅಜ್ಞಾನದಿಂದ ಆವೃತವಾದ ಐಕ್ಯದಲ್ಲಿ ಐಕ್ಯವೇ ದೋಷವಾಗುತ್ತದೆ. ಆದ್ದರಿಂದ ದುಷ್ಟವಾದ ಐಕ್ಯದ ಸಂಬಂಧವನ್ನು ಹೊಂದಿರುವ ಐಕ್ಯಸಾಧಕಪ್ರಮಾಣವು ಅಪ್ರಮಾಣವಾಗುತ್ತದೆ.

**ಭಾವವಿಲಾಸಿನೀ–** ದೋಷೀಭೂತಕಾಚನಿಷ್ಠಕಾಚತ್ವಸ್ಯ ಕಾಚೇ ಗೋಷತ್ವಾದರ್ಶನಾಚ್ಚ ಐಕ್ಯೇ ಐಕ್ಯತ್ವಮೇವ ದೋಷ ಇತಿ ಐಕ್ಯಪ್ರಮಾಣಮಪ್ಯಪ್ರಮಾಣಂ ಸ್ಯಾದಿತ್ಯಾಹ - **ಅನಾದಿತಿ** ॥ ನ ಚೇತ್ ಅಜ್ಞಾನತ್ವಸ್ಯ ದೋಷತ್ವಾಭಾವೋ ನ ಚೇತ್ । ಅಜ್ಞಾನೇಽಜ್ಞಾನತ್ವಮೇವದೋಷಶ್ಚೇದಿತಿ ಯಾವತ್ । ದುಷ್ಟಸಂಸರ್ಗಾತ್ ದುಷ್ಟೈಕ್ಯಾಖ್ಯವಿಷಯಸಂಸರ್ಗಾತ್ । ಮಾನೇಷು ಐಕ್ಯಪ್ರಮಾಣೇಷು ॥ ೧೧೧೧ ॥

> ಅತೋಽತಿದೂರತಾ ಸೌಕ್ಷ್ಮ್ಯಂ ವ್ಯವಧಾನಾದಿಯುಕ್ತತಾ ।
> ಅರ್ಥೇ ದೋಷೋ ಭವೇಲ್ಲೋಕಸಂಮತ್ಯಾ ನ ತ್ವಲೌಕಿಕಃ ॥ ೧೧೧೨ ॥

**ಅರ್ಥ-** ಅತಃ = ಆದ್ದರಿಂದ, ಅತಿದೂರತಾ = ಅತಿದೂರತ್ವ, ಸೌಕ್ಷ್ಮ್ಯಂ = ಸೂಕ್ಷ್ಮತ್ವ, ವ್ಯವಧಾನಾದಿಯುಕ್ತತಾ = ವ್ಯವಹಿತತ್ವ ಇವುಗಳು, ಲೋಕಸಂಮತ್ಯಾ = ಲೋಕಸಮ್ಮತಿಯಿಂದ, ಅರ್ಥೇ ದೋಷೋ ಭವೇತ್ = ಅರ್ಥದಲ್ಲಿ ದೋಷಗಳಾಗುತ್ತವೆ, ಅಲೌಕಿಕಃ = ಲೋಕಾನುಭವಸಿದ್ಧವಲ್ಲದ ಅಜ್ಞಾನೋಪಾದಾನತ್ವವು, ನ = ಅರ್ಥದೋಷವಾಗುವುದಿಲ್ಲ.

**ಅನುವಾದ-** ಆದ್ದರಿಂದ ಅತಿದೂರತ್ವ, ಸೂಕ್ಷ್ಮತ್ವ, ವ್ಯವಹಿತತ್ವ ಮೊದಲಾದವುಗಳು ಲೋಕಾನುಭವದಿಂದ ಅರ್ಥದೋಷಗಳಾಗುತ್ತದೆ. ಅಜ್ಞಾನೋಪಾದಾನಕತ್ವವು ಅರ್ಥದೋಷವೆಂದು ಅಂಗೀಕರಿಸಿದರೆ, ಸರ್ವಾನುಭವವಿರೋಧವು ಉಂಟಾಗುತ್ತದೆ.

**ಭಾವವಿಲಾಸಿನೀ–** ಅತಃ ಅವಿದ್ಯಾವತ್ತ್ವಸ್ಯ ಕೇನಾಪಿ ಪ್ರಕಾರೇಣ ದೋಷತ್ವಾಯೋಗಾತ್ ॥ ೧೧೧೨ ॥

> ತಮಸಾ ಪಿಹಿತತ್ವಂ ಹಿ ಮಹಾನ್ ದೋಷೋ ಘಟಾದಿಷು ।
> ತದ್ಯೈಕ್ಯಾಧ್ಯಕ್ಷವಿಷಯೇ ವಿಷಬಿಂದೋರ್ನ ಗಾರುಡಮ್ ॥ ೧೧೧೩ ॥

**ಅರ್ಥ-** ಘಟಾದಿಷು = ಘಟಾದಿಪದಾರ್ಥಗಳಲ್ಲಿ, ತಮಸಾ ಪಿಹಿತತ್ವಂ = ಅಂಧಕಾರಾವೃತತ್ವವು, ಮಹಾನ್‌ದೋಷೋ ಹಿ = ದೊಡ್ಡದೋಷವಷ್ಟೇ? ತತ್ = ಆದ್ದರಿಂದ,

ಐಕ್ಯಾಧ್ಯಕ್ಷವಿಷಯೇ = ಐಕ್ಯಪ್ರತ್ಯಕ್ಷವಿಷಯದಲ್ಲಿ, ವಿಷಬಿಂದೋಃ = ಅಜ್ಞಾನಾವೃತತ್ವರೂಪವಾದ ದೋಷವೆಂಬ ವಿಷಬಿಂದುವನ್ನು ಪರಿಹರಿಸುವ, ಗಾರುಡಮ್ = ಪರಿಹಾರೋಪಾಯವು (ಗರುಡಮಂತ್ರವು), ನ = ನಿನ್ನ ಬಳಿಯಲ್ಲಿ ಇಲ್ಲ.

**ಅನುವಾದ-** ಘಟಾದಿಗಳಲ್ಲಿ ಅಜ್ಞಾನಾವೃತತ್ವವು ದೊಡ್ಡದೋಷವಷ್ಟೇ? ಆಗ ಐಕ್ಯದ ಪ್ರತ್ಯಕ್ಷವಿಷಯವಾದ ಐಕ್ಯವೂ ಸಹ ಅಜ್ಞಾನದಿಂದ ಆವೃತವಾಗಿರುವುದರಿಂದ ಅದು ದೋಷವೇ ಆಗುತ್ತದೆ. ಆ ದೋಷವನ್ನು ಪರಿಹಾರಮಾಡುವ ಯಾವ ಉಪಾಯವೂ (ಗರುಡಮಂತ್ರವು) ನಿನ್ನ ಬಳಿಯಲ್ಲಿ ಇಲ್ಲ.

**ಭಾವವಿಲಾಸಿನೀ–** ಕಿಂಚಾವಿದ್ಯೋಪಾದಾನಕತ್ವಂ ನ ದೋಷಃ ಕಿಂತ್ವವಿದ್ಯಾವೃತತ್ವಮೇವ ದೋಷ ಇತ್ಯತ್ರ ನಿದರ್ಶನಮಾಹ - **ತಮಸೇತಿ** ॥ ಹೀತ್ಯನೇನ ತಮ ಉಪಾದಾನಕತ್ವಂ ನ ದೋಷಃ । ಖಂಡತಮ ಉಪಾದಾನಕೇ ಸ್ಥೂಲತಮಸಿ ಪ್ರಮಾದರ್ಶನಾದಿತಿ ಸೂಚಯತಿ । ವಿಷಬಿಂದೋಃ ದೋಷಾಖ್ಯವಿಷಬಿಂದೋಃ ॥ ೧೧೧೩ ॥

**ಅಯೋಗ್ಯತಾ ಮಹಾನ್‌ದೋಷಃ ಶಬ್ದಸ್ಯಾರ್ಥೇ ಸತಾಂ ಮತಃ ।**
**ತದ್ಬಹ್ವಲ್ಪಜ್ಞಯೋರೈಕ್ಯಂ ವಾಕ್ಯಾರ್ಥತ್ವೇऽಪಿ ದೋಷವತ್ ॥ ೧೧೧೪ ॥**

ಶಬ್ದಸ್ಯಾರ್ಥೇ = ಶಬ್ದಾರ್ಥದಲ್ಲಿ, ಅಯೋಗ್ಯತಾ = ಅಯೋಗ್ಯತ್ವವು, ಮಹಾನ್ ದೋಷಃ = ದೊಡ್ಡದೋಷವೆಂದು, ಸತಾಂ ಮತಃ = ಸಜ್ಜನರಿಗೆ ಸಮ್ಮತವಾಗಿದೆ, ತತ್ = ಆದ್ದರಿಂದ, ಬಹ್ವಲ್ಪಜ್ಞಯೋಃ = ಸರ್ವಜ್ಞ ಮತ್ತು ಅಲ್ಪಜ್ಞರಿಗೆ, ಐಕ್ಯಂ = ಐಕ್ಯವು, ವಾಕ್ಯಾರ್ಥತ್ವೇऽಪಿ = ವಾಕ್ಯಾರ್ಥವೆಂದು ಅಂಗೀಕರಿಸಿದರೂ, ದೋಷವತ್ = ಅದು ದುಷ್ಟವಾಗುತ್ತದೆ.

**ಅನುವಾದ-** ವಾಕ್ಯಾರ್ಥದಲ್ಲಿ ಅಯೋಗ್ಯತ್ವವು ದೊಡ್ಡದೋಷವೆಂದು ಸಜ್ಜನರಿಗೆ ಸಮ್ಮತವಾಗಿದೆ. ಆದ್ದರಿಂದ ಸರ್ವಜ್ಞ ಮತ್ತು ಅಲ್ಪಜ್ಞರ ಐಕ್ಯವು ವಾಕ್ಯಾರ್ಥವೆಂದು ಅಂಗೀಕರಿಸಿದರೂ ಅದು ದುಷ್ಟವೇ ಆಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಜೀವಬ್ರಹ್ಮೈಕ್ಯಪ್ರತಿಪಾದಕವಾಕ್ಯೇ ವಿಷಯದೋಷಂ ವದನ್ ಕರಣದೋಷಂ ಚ ಸೂಚಯತಿ ॥ **ಅಯೋಗ್ಯತೇತಿ** ॥ ಅಯೋಗ್ಯತಾ ಪರಸ್ಪರ-ವಿರುದ್ಧತ್ವಮ್ । ಅಯೋಗ್ಯಾರ್ಥಕವಾಕ್ಯೇऽಪ್ಯಯೋಗ್ಯತಾಯಾ ಲೋಕೇ ವ್ಯವಹಾರಾತ್ ಅಯೋಗ್ಯತಾಪದೇನೈವ ಶಬ್ದಾಖ್ಯಕರಣೇऽಪಿ ದೋಷಸ್ಸೂಚಿತಃ । ಅರ್ಥೇ ಅಯೋಗ್ಯತಾ-ಶಬ್ದಸ್ಯಾಪಿ ದೋಷ ಇತಿ ಯೋಜನಯಾ ಕರಣದೋಷೋऽಪಿ ಸಾಕ್ಷಾದೇವ ವಕ್ತವ್ಯ ಇತಿ ದ್ರಷ್ಟವ್ಯಮ್ । ದೋಷವತ್ ಅಯೋಗ್ಯತಾಖ್ಯದೋಷವತ್ ॥ ೧೧೧೪ ॥

**ವಿವರಣೆ-** ಜೀವಬ್ರಹ್ಮೈಕ್ಯಪ್ರತಿಪಾದಕವಾಕ್ಯಕ್ಕೆ ರೀತ್ಯಂತರದಿಂದ ವಿಷಯದೋಷವನ್ನು ಹೇಳಿ ಕರಣದೋಷವನ್ನು ಇಲ್ಲಿ ಸೂಚನೆಮಾಡುತ್ತಾರೆ. ಅಯೋಗ್ಯತ್ವ ಎಂದರೆ

ಪರಸ್ಪರಾನ್ವಯಾಭಾವ ಅಥವಾ ಪರಸ್ಪರ ವಿರುದ್ಧತ್ವ ಎಂದು ಅರ್ಥ. ಅಯೋಗ್ಯಾರ್ಥವನ್ನು ಹೇಳುವ ವಾಕ್ಯದಲ್ಲಿಯೂ ಅಯೋಗ್ಯತೆ ಇದೆ ಎಂದು ಲೋಕವ್ಯವಹಾರವಿರುವುದರಿಂದ ಅದೇ ಕರಣದೋಷವೂ ಆಗುತ್ತದೆ. ಆದ್ದರಿಂದ ಐಕ್ಯವನ್ನು ವಾಕ್ಯಾರ್ಥವೆಂದು ಅಂಗೀಕರಿಸಿದರೆ, ಅರ್ಥದಲ್ಲಿಯೂ ಮತ್ತು ಕರಣದಲ್ಲಿಯೂ ಅಯೋಗ್ಯತ್ವರೂಪವಾದ ದೋಷವು ಬರುತ್ತದೆ ಎಂದು ಅರ್ಥ.

**ಅವಿದ್ಯಾವದ್ವಿಷಯತಾಂ ದೋಷಮಾಹ ಗುರುಸ್ತವ ।**
**ತದರ್ಥಮನ್ಯಥೀಕೃತ್ಯ ನ ಚಾರ್ಥೀಕುರು ತದ್ವಚಃ ॥ ೧೧೧೫ ॥**

**ಅರ್ಥ-** ತವ ಗುರು = ನಿನ್ನ ಗುರುವು, ಅವಿದ್ಯಾವದ್ವಿಷಯತಾಂ = ಅವಿದ್ಯಾವದ್ವಿಷಯತ್ವವನ್ನು, ದೋಷಮಾಹ = ದೋಷವೆಂದು ಹೇಳಿದ್ದಾನೆ. ತದರ್ಥಂ = ಆ ಅರ್ಥವನ್ನು, ಅನ್ಯಥೀಕೃತ್ಯ = ವ್ಯತ್ಯಾಸಮಾಡಿ, ತದ್ವಚಃ = ನಿನ್ನ ಗುರುವಿನ ವಾಕ್ಯಕ್ಕೆ, ನ ಅರ್ಥೀ ಕುರು = ಅರ್ಥವನ್ನು ಮಾಡಬೇಡ.

**ಅನುವಾದ-** ನಿನ್ನ ಗುರುವು ಅವಿದ್ಯಾವದ್ವಿಷಯತ್ವವನ್ನು ದೋಷವೆಂದು ಹೇಳಿದ್ದಾನೆ. ನೀನು ಅದನ್ನು ಅವಿದ್ಯೋಪಾದಾನಕತ್ವವೆಂದು ವ್ಯತ್ಯಾಸಮಾಡಿ ನಿನ್ನ ಗುರುವಿನ ವಾಕ್ಯಕ್ಕೆ ಅರ್ಥವನ್ನು ಹೇಳಬೇಡ.

**ಭಾವವಿಲಾಸಿನೀ–** ತದರ್ಥಮ್ ಅವಿದ್ಯಾವತ್ಪದಾರ್ಥಮ್ । ಅನ್ಯಥೀಕೃತ್ಯ ಪ್ರಕಾರಾಂತರೇಣ ಯೋಜಯಿತ್ವಾ । ತದ್ವಚಃ ಗುರುವಚಃ । ಭವದ್ಭಾಷ್ಯಪರ್ಯಾಲೋಚನಯಾಪ್ಯ-ವಿದ್ಯಾವದ್ವಿಷಯತ್ವಮೇವ ದೋಷಃ । ನತ್ವವಿದ್ಯೋಪಾದಾನಕತ್ವಮಿತಿ ಭಾವಃ ॥ ೧೧೧೫ ॥

**ನ ಚೇದ್ ದುಷ್ಟಾಜ್ಞಾನಜಂ ತೇ ತತ್ತ್ವಜ್ಞಾನಂ ಕಥಂ ಶುಭಮ್ ।**
**ತಜ್‌ಜ್ಞಾನಜನಕಂ ಮಾನಂ ಕಥಂ ಮಾನಮಭೂದ್ ವದ ॥ ೧೧೧೬ ॥**

**ಅರ್ಥ-** ನ ಚೇತ್ = ಯಥಾಶ್ರುತವಾಕ್ಯಾರ್ಥವನ್ನು ಒಪ್ಪದಿದ್ದರೆ, ದುಷ್ಟಾಜ್ಞಾನಜಂ = ದುಷ್ಟವಾದ ಅಜ್ಞಾನೋಪಾದಾನಕವಾದ, ತೇ ತತ್ತ್ವಜ್ಞಾನಂ = ನಿನ್ನ ತತ್ತ್ವಜ್ಞಾನವು, ಕಥಂ ಶುಭಮ್ = ಹೇಗೆ ಶುಭವಾಗುತ್ತದೆ, ತಜ್‌ಜ್ಞಾನಜನಕಂ = ಅಂತಹ ಐಕ್ಯದ ಜ್ಞಾನವನ್ನು ಉಂಟುಮಾಡುವ, ಮಾನಂ = ಪ್ರಮಾಣವು, ಕಥಂ = ಹೇಗೆ, ಮಾನಮಭೂತ್ = ಪ್ರಮಾಣವಾಗುತ್ತದೆ ಎಂದು, ವದ = ಹೇಳು.

**ಅನುವಾದ-** ಗುರುವಿನ ವಾಕ್ಯಕ್ಕೆ ಯಥಾಶ್ರುತಾರ್ಥವನ್ನು ಒಪ್ಪದೆ, ಅಜ್ಞಾನೋ-ಪಾದಾನಕತ್ವವು ಅರ್ಥ ಎಂದು ಅಂಗೀಕರಿಸಿದರೆ, ಅಜ್ಞಾನೋಪಾದಾನಕವಾದ (ದುಷ್ಟವಾದ ಅಜ್ಞಾನದಿಂದ) ಜನ್ಯವಾದ ನಿನ್ನ ತತ್ತ್ವಜ್ಞಾನವು ಹೇಗೆ ಶುಭವಾಗುತ್ತದೆ? ಅಂತಹ ಜ್ಞಾನಜನಕವಾದ ಪ್ರಮಾಣವಾದರೂ ಹೇಗೆ ಪ್ರಮಾಣವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ನ ಚೇತ್ ಯಥಾಸ್ಥಿತವಾಕ್ಯಾರ್ಥೋ ನ ಚೇತ್ । ದುಷ್ಟಾಜ್ಞಾನಜಂ ದುಷ್ಟಾಜ್ಞಾನೋಪಾದಾನಕವಮ್ । ಅಜ್ಞಾನೋಪಾದಾನಕತ್ವಾಚ್ಚರಮಜ್ಞಾನಂ ತತ್ಕರಣಮಪಿ ದುಷ್ಟಂ ಸ್ಯಾತ್ । ನ ಚ ವಾಚ್ಯಂ ವಿಷಯಸ್ಯೈವಾಯಂ ದೋಷೋ ನ ಜ್ಞಾನಸ್ಯೇತಿ । ಆವರಕತಯಾ ದೋಷತ್ವೇ ತಥೈವ ತತ್ । ಉಪಾದಾನತಯಾ ದೋಷತ್ವೇ ತು ದುಷ್ಟೋಪಾದಾನತ್ವಾದೇವ ವಿಷಯೋಽಪಿ ದುಷ್ಟ ಇತ್ಯುಕ್ತಮ್ । ಏವಂ ಚ ದುಷ್ಟೋಪಾದಾನಕಂ ತತ್ವಜ್ಞಾನಮಪಿ ಕಥಂ ನ ದುಷ್ಟಮಿತಿ ಭಾವಃ ॥ ೧೧೧೬ ॥

**ವಿವರಣೆ-** ಅಜ್ಞಾನೋಪಾದಾನಕವಾದ್ದರಿಂದ ಚರಮಜ್ಞಾನವೂ, ಚರಮಜ್ಞಾನಕರಣವೂ ದುಷ್ಟವೇ ಆಗಬೇಕು. ಚರಮಜ್ಞಾನದಲ್ಲಿ ವಿಷಯಕ್ಕೆ ಮಾತ್ರ ದೋಷವಿದೆ, ಜ್ಞಾನಕ್ಕೆ ದೋಷವಿಲ್ಲ ಎಂಬ ವಾದವು ಸರಿಯಲ್ಲ. ಅಜ್ಞಾನವು ಆವರಕವಾಗಿ ದೋಷವಾಗಿದ್ದರೆ, ಆಗ ಅದನ್ನು ಅರ್ಥದೋಷವೆಂದು ಹೇಳಬಹುದಾಗಿದ್ದಿತು. ಅಜ್ಞಾನೋಪಾದಾನಕತ್ವವು ದೋಷವೆಂದು ಅಂಗೀಕರಿಸಿದಾಗ ವಿಷಯದುಷ್ಟವಾಗುವಂತೆ ಕರಣವೂ, ತತ್‌ಜನ್ಯಜ್ಞಾನವೂ ದುಷ್ಟವಾಗುವುದರಿಂದ ಅಂತಹ ಜ್ಞಾನಕ್ಕೆ, ಪ್ರಾಮಾಣ್ಯವೇ ಇಲ್ಲ ಎಂದು ಅಭಿಪ್ರಾಯ.

ತತ್ತ್ವಾರ್ಥವಿಷಯತ್ವೇನ ಜ್ಞಾನಸ್ಯ ಶುಭತಾ ಯದಿ ।
ದುರ್ಜ್ಞಾನವಿಷಯತ್ವೇನ ತಸ್ಯೈವಾತತ್ತ್ವತಾ ನ ಕಿಮ್ ॥ ೧೧೧೭ ॥

**ಅರ್ಥ-** ಜ್ಞಾನಸ್ಯ = ಜ್ಞಾನವು, ತತ್ತ್ವಾರ್ಥವಿಷಯತ್ವೇನ = ತಾತ್ವಿಕಾರ್ಥ-ವಿಷಯವಾದ್ದರಿಂದ, ಶುಭತಾ = ಶುಭವಾದುದು (ಪ್ರಮಾಣವಾದುದು) ಎಂದು, ಯದಿ = ಒಂದುಪಕ್ಷ ಹೇಳಿದರೆ, ದುರ್ಜ್ಞಾನವಿಷಯತ್ವೇನ = ದುಷ್ಟವಾದ ಜ್ಞಾನಕ್ಕೆ ವಿಷಯವಾದ ಕಾರಣದಿಂದಲೇ, ತಸ್ಯೈವ= ಅದೇ ಐಕ್ಯಕ್ಕೆ, ಅತತ್ತ್ವತಾ = ಅತಾತ್ವಿಕತ್ವವು, ಕಿಂ ನ = ಏಕೆ ಇಲ್ಲ?

**ಅನುವಾದ-** ತತ್ತ್ವಾರ್ಥವಿಷಯಕವಾದುದರಿಂದ ಜ್ಞಾನವು ಪ್ರಮಾಣ ಎಂದು ಹೇಳುವುದಾದರೆ, ದುಷ್ಟಜ್ಞಾನವಿಷಯವಾದ್ದರಿಂದ, ವಿಷಯವಾದ ಐಕ್ಯವೇ ಅತಾತ್ವಿಕವಾದುದು ಎಂದು ಏಕೆ ಆಗುವುದಿಲ್ಲ?

**ಭಾವವಿಲಾಸಿನೀ–** ನನು ಜ್ಞಾನಸ್ಯ ದುಷ್ಟತ್ವೇಽಪಿ ವಿಷಯಸೌಂದರ್ಯಾದ್‌ದುಷ್ಟತೇತಿ ಚೇತ್ ತರ್ಹಿ ವಿಷಯಸ್ಯಾದುಷ್ಟತ್ವೇಽಪಿ ಜ್ಞಾನದೋಷಾದ್ದುಷ್ಟತ್ವೈವ ಕಿಂ ನ ಸ್ಯಾದಿತ್ಯಾಹ - **ತತ್ವೇತಿ** ॥ ರಾಗಾದಿದೋಷಕಲಿಲಮನ ಉಪಾದಾನಕಸ್ಯ ದುಷ್ಟಕರಣಜನ್ಯಸ್ಯ ದುಷ್ಟಜ್ಞಾನಸ್ಯ ವಿಷಯೇ ಶುಕ್ತಿರಜತೇ ಅಶುಭತ್ವಸ್ಯೈವ ದರ್ಶನೇನಾರ್ಥಪ್ರಮಾಣೀಭೂತಜ್ಞಾನಸ್ಯಾಶುಭತ್ವೇಽರ್ಥಾ-ಶುಭತ್ವಸ್ಯೈವ ನ್ಯಾಯ್ಯತ್ವಾದಿತಿ ಭಾವಃ ॥ ೧೧೧೭ ॥

**ವಿವರಣೆ-** ಜ್ಞಾನವು ದುಷ್ಟವಾದರೂ, ವಿಷಯಸೌಂದರ್ಯಸಾಮರ್ಥ್ಯದಿಂದ ಅದುಷ್ಟವಾಗುತ್ತದೆ ಎಂದು ಹೇಳಿದರೆ, ವಿಷಯವು ಅದುಷ್ಟವಾದರೂ ಜ್ಞಾನದೋಷದಿಂದ

ಪರಸ್ಪರಾನ್ವಯಾಭಾವ ಅಥವಾ ಪರಸ್ಪರ ವಿರುದ್ಧತ್ವ ಎಂದು ಅರ್ಥ. ಅಯೋಗ್ಯಾರ್ಥವನ್ನು ಹೇಳುವ ವಾಕ್ಯದಲ್ಲಿಯೂ ಅಯೋಗ್ಯತೆ ಇದೆ ಎಂದು ಲೋಕವ್ಯವಹಾರವಿರುವುದರಿಂದ ಅದೇ ಕರಣದೋಷವೂ ಆಗುತ್ತದೆ. ಆದ್ದರಿಂದ ಐಕ್ಯವನ್ನು ವಾಕ್ಯಾರ್ಥವೆಂದು ಅಂಗೀಕರಿಸಿದರೆ, ಅರ್ಥದಲ್ಲಿಯೂ ಮತ್ತು ಕರಣದಲ್ಲಿಯೂ ಅಯೋಗ್ಯತ್ವರೂಪವಾದ ದೋಷವು ಬರುತ್ತದೆ ಎಂದು ಅರ್ಥ.

**ಅವಿದ್ಯಾವದ್ವಿಷಯತಾಂ ದೋಷಮಾಹ ಗುರುಸ್ತವ ।**
**ತದರ್ಥಮನ್ಯಥೀಕೃತ್ಯ ನ ಚಾರ್ಥೀಕುರು ತದ್ವಚಃ ॥ ೧೧೧೫ ॥**

**ಅರ್ಥ-** ತವ ಗುರು = ನಿನ್ನ ಗುರುವು, ಅವಿದ್ಯಾವದ್ವಿಷಯತಾಂ = ಅವಿದ್ಯಾವದ್ವಿಷಯತ್ವವನ್ನು, ದೋಷಮಾಹ = ದೋಷವೆಂದು ಹೇಳಿದ್ದಾನೆ. ತದರ್ಥಂ = ಆ ಅರ್ಥವನ್ನು, ಅನ್ಯಥೀಕೃತ್ಯ = ವ್ಯತ್ಯಾಸಮಾಡಿ, ತದ್ವಚಃ = ನಿನ್ನ ಗುರುವಿನ ವಾಕ್ಯಕ್ಕೆ, ನ ಅರ್ಥೀ ಕುರು = ಅರ್ಥವನ್ನು ಮಾಡಬೇಡ.

**ಅನುವಾದ-** ನಿನ್ನ ಗುರುವು ಅವಿದ್ಯಾವದ್ವಿಷಯತ್ವವನ್ನು ದೋಷವೆಂದು ಹೇಳಿದ್ದಾನೆ. ನೀನು ಅದನ್ನು ಅವಿದ್ಯೋಪಾದಾನಕತ್ವವೆಂದು ವ್ಯತ್ಯಾಸಮಾಡಿ ನಿನ್ನ ಗುರುವಿನ ವಾಕ್ಯಕ್ಕೆ ಅರ್ಥವನ್ನು ಹೇಳಬೇಡ.

**ಭಾವವಿಲಾಸಿನೀ–** ತದರ್ಥಮ್ ಅವಿದ್ಯಾವತ್ಪದಾರ್ಥಮ್ । ಅನ್ಯಥೀಕೃತ್ಯ ಪ್ರಕಾರಾಂತರೇಣ ಯೋಜಯಿತ್ವಾ । ತದ್ವಚಃ ಗುರುವಚಃ । ಭವದ್ಭಾಷ್ಯಪರ್ಯಾಲೋಚನಯಾಪ್ಯ-ವಿದ್ಯಾವದ್ವಿಷಯತ್ವಮೇವ ದೋಷಃ। ನತ್ವವಿದ್ಯೋಪಾದಾನಕತ್ವಮಿತಿ ಭಾವಃ ॥ ೧೧೧೫ ॥

**ನ ಚೇದ್ ದುಷ್ಟಾಜ್ಞಾನಜಂ ತೇ ತತ್ತ್ವಜ್ಞಾನಂ ಕಥಂ ಶುಭಮ್ ।**
**ತಜ್‌ಜ್ಞಾನಜನಕಂ ಮಾನಂ ಕಥಂ ಮಾನಮಭೂದ್ ವದ ॥ ೧೧೧೬ ॥**

**ಅರ್ಥ-** ನ ಚೇತ್ = ಯಥಾಶ್ರುತವಾಕ್ಯಾರ್ಥವನ್ನು ಒಪ್ಪದಿದ್ದರೆ, ದುಷ್ಟಾಜ್ಞಾನಜಂ = ದುಷ್ಟವಾದ ಅಜ್ಞಾನೋಪಾದಾನಕವಾದ, ತೇ ತತ್ತ್ವಜ್ಞಾನಂ = ನಿನ್ನ ತತ್ತ್ವಜ್ಞಾನವು, ಕಥಂ ಶುಭಮ್ = ಹೇಗೆ ಶುಭವಾಗುತ್ತದೆ, ತಜ್‌ಜ್ಞಾನಜನಕಂ = ಅಂತಹ ಐಕ್ಯದ ಜ್ಞಾನವನ್ನು ಉಂಟುಮಾಡುವ, ಮಾನಂ = ಪ್ರಮಾಣವು, ಕಥಂ = ಹೇಗೆ, ಮಾನಮಭೂತ್ = ಪ್ರಮಾಣವಾಗುತ್ತದೆ ಎಂದು, ವದ = ಹೇಳು.

**ಅನುವಾದ-** ಗುರುವಿನ ವಾಕ್ಯಕ್ಕೆ ಯಥಾಶ್ರುತಾರ್ಥವನ್ನು ಒಪ್ಪದೆ, ಅಜ್ಞಾನೋ-ಪಾದಾನಕತ್ವವು ಅರ್ಥ ಎಂದು ಅಂಗೀಕರಿಸಿದರೆ, ಅಜ್ಞಾನೋಪಾದಾನಕವಾದ (ದುಷ್ಟವಾದ ಅಜ್ಞಾನದಿಂದ) ಜನ್ಯವಾದ ನಿನ್ನ ತತ್ತ್ವಜ್ಞಾನವು ಹೇಗೆ ಶುಭವಾಗುತ್ತದೆ? ಅಂತಹ ಜ್ಞಾನಜನಕವಾದ ಪ್ರಮಾಣವಾದರೂ ಹೇಗೆ ಪ್ರಮಾಣವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ನ ಚೇತ್ ಯಥಾಸ್ಥಿತವಾಕ್ಯಾರ್ಥೋ ನ ಚೇತ್ । ದುಷ್ಟಾಜ್ಞಾನಜಂ ದುಷ್ಟಾಜ್ಞಾನೋಪಾದಾನಕಮ್ । ಅಜ್ಞಾನೋಪಾದಾನಕತ್ವಾಚ್ಚರಮಜ್ಞಾನಂ ತತ್ಕರಣಮಪಿ ದುಷ್ಟಂ ಸ್ಯಾತ್ । ನ ಚ ವಾಚ್ಯಂ ವಿಷಯಸ್ಯೈವಾಯಂ ದೋಷೋ ನ ಜ್ಞಾನಸ್ಯೇತಿ । ಆವರಕತಯಾ ದೋಷತ್ವೇ ತಥೈವ ತತ್ । ಉಪಾದಾನತಯಾ ದೋಷತ್ವೇ ತು ದುಷ್ಟೋಪಾದಾನತ್ವಾದೇವ ವಿಷಯೋಽಪಿ ದುಷ್ಟ ಇತ್ಯುಕ್ತಮ್ । ಏವಂ ಚ ದುಷ್ಟೋಪಾದಾನಕಂ ತತ್ವಜ್ಞಾನಮಪಿ ಕಥಂ ನ ದುಷ್ಟಮಿತಿ ಭಾವಃ ॥ ೧೧೧೬ ॥

**ವಿವರಣೆ-** ಅಜ್ಞಾನೋಪಾದಾನಕವಾದ್ದರಿಂದ ಚರಮಜ್ಞಾನವೂ, ಚರಮಜ್ಞಾನಕರಣವೂ ದುಷ್ಟವೇ ಆಗಬೇಕು. ಚರಮಜ್ಞಾನದಲ್ಲಿ ವಿಷಯಕ್ಕೆ ಮಾತ್ರ ದೋಷವಿದೆ, ಜ್ಞಾನಕ್ಕೆ ದೋಷವಿಲ್ಲ ಎಂಬ ವಾದವು ಸರಿಯಲ್ಲ. ಅಜ್ಞಾನವು ಆವರಕವಾಗಿ ದೋಷವಾಗಿದ್ದರೆ, ಆಗ ಅದನ್ನು ಅರ್ಥದೋಷವೆಂದು ಹೇಳಬಹುದಾಗಿದ್ದಿತು. ಅಜ್ಞಾನೋಪಾದಾನಕತ್ವವು ದೋಷವೆಂದು ಅಂಗೀಕರಿಸಿದಾಗ ವಿಷಯದುಷ್ಟವಾಗುವಂತೆ ಕರಣವೂ, ತತ್‌ಜನ್ಯಜ್ಞಾನವೂ ದುಷ್ಟವಾಗುವುದರಿಂದ ಅಂತಹ ಜ್ಞಾನಕ್ಕೆ, ಪ್ರಾಮಾಣ್ಯವೇ ಇಲ್ಲ ಎಂದು ಅಭಿಪ್ರಾಯ.

ತತ್ತ್ವಾರ್ಥವಿಷಯತ್ವೇನ ಜ್ಞಾನಸ್ಯ ಶುಭತಾ ಯದಿ ।
ದುರ್ಜ್ಞಾನವಿಷಯತ್ವೇನ ತಸ್ಯೈವಾತತ್ತ್ವತಾ ನ ಕಿಮ್ ॥ ೧೧೧೭ ॥

**ಅರ್ಥ-** ಜ್ಞಾನಸ್ಯ = ಜ್ಞಾನವು, ತತ್ತ್ವಾರ್ಥವಿಷಯತ್ವೇನ = ತಾತ್ವಿಕಾರ್ಥ-ವಿಷಯವಾದ್ದರಿಂದ, ಶುಭತಾ = ಶುಭವಾದುದು (ಪ್ರಮಾಣವಾದುದು) ಎಂದು, ಯದಿ = ಒಂದುಪಕ್ಷ ಹೇಳಿದರೆ, ದುರ್ಜ್ಞಾನವಿಷಯತ್ವೇನ = ದುಷ್ಟವಾದ ಜ್ಞಾನಕ್ಕೆ ವಿಷಯವಾದ ಕಾರಣದಿಂದಲೇ, ತಸ್ಯೈವ= ಅದೇ ಐಕ್ಯಕ್ಕೆ, ಅತತ್ತ್ವತಾ = ಅತಾತ್ವಿಕತ್ವವು, ಕಿಂ ನ = ಏಕೆ ಇಲ್ಲ?

**ಅನುವಾದ-** ತತ್ತ್ವಾರ್ಥವಿಷಯಕವಾದುದರಿಂದ ಜ್ಞಾನವು ಪ್ರಮಾಣ ಎಂದು ಹೇಳುವುದಾದರೆ, ದುಷ್ಟಜ್ಞಾನವಿಷಯವಾದ್ದರಿಂದ, ವಿಷಯವಾದ ಐಕ್ಯವೇ ಅತಾತ್ವಿಕವಾದುದು ಎಂದು ಏಕೆ ಆಗುವುದಿಲ್ಲ?

**ಭಾವವಿಲಾಸಿನೀ–** ನನು ಜ್ಞಾನಸ್ಯ ದುಷ್ಟತ್ವೇಽಪಿ ವಿಷಯಸೌಂದರ್ಯಾದ್‌ದುಷ್ಟತೇತಿ ಚೇತ್ ತರ್ಹಿ ವಿಷಯಸ್ಯಾದುಷ್ಟತ್ವೇಽಪಿ ಜ್ಞಾನದೋಷಾದ್ದುಷ್ಟತೈವ ಕಿಂ ನ ಸ್ಯಾದಿತ್ಯಾಹ - ತತ್ತ್ವೇತಿ ॥ ರಾಗಾದಿದೋಷಕಲಿಲಮನ ಉಪಾದಾನಕಸ್ಯ ದುಷ್ಟಕರಣಜನ್ಯಸ್ಯ ದುಷ್ಟಜ್ಞಾನಸ್ಯ ವಿಷಯೇ ಶುಕ್ತಿರಜತೇ ಅಶುಭತ್ವಸ್ಯೈವ ದರ್ಶನೇನಾರ್ಥಪ್ರಮಾಣೇಭೂತಜ್ಞಾನಸ್ಯಾಶುಭತ್ವೇಽರ್ಥಾ-ಶುಭತ್ವಸ್ಯೈವ ನ್ಯಾಯ್ಯತ್ವಾದಿತಿ ಭಾವಃ ॥ ೧೧೧೭ ॥

**ವಿವರಣೆ-** ಜ್ಞಾನವು ದುಷ್ಟವಾದರೂ, ವಿಷಯಸೌಂದರ್ಯಸಾಮರ್ಥ್ಯದಿಂದ ಅದುಷ್ಟವಾಗುತ್ತದೆ ಎಂದು ಹೇಳಿದರೆ, ವಿಷಯವು ಅದುಷ್ಟವಾದರೂ ಜ್ಞಾನದೋಷದಿಂದ

ದುಷ್ಟವಾಗುತ್ತದೆ ಎಂದು ಏಕೆ ಹೇಳಬಾರದು ಎಂದು ಇಲ್ಲಿ ಪ್ರಶ್ನಿಸುತ್ತಾರೆ. ರಾಗಾದಿದೋಷಕಲುಷಿತವಾದ ಮನಸ್ಸನ್ನು ಉಪಾದಾನವಾಗಿ ಹೊಂದಿರುವ ದುಷ್ಟಕರಣಜನ್ಯವಾಧ ದುಷ್ಟಜ್ಞಾನಕ್ಕೆ ವಿಷಯವಾದ ಶುಕ್ತಿರಜತದಲ್ಲಿ ಅತಾತ್ವಿಕತ್ವವೇ ಕಂಡುಬರುವುದರಿಂದ ಅರ್ಥವಿಷಯದಲ್ಲಿ ಪ್ರಮಾಣವಾದ ಜ್ಞಾನವು ದುಷ್ಟವಾದರೆ, ಅರ್ಥವೂ ದುಷ್ಟವೆಂದು ಅಂಗೀಕರಿಸುವುದೇ ನ್ಯಾಯವೆಂದು ಅಭಿಪ್ರಾಯ.

ಅರ್ಥಾಯಾಥಾರ್ಥ್ಯಯಾಥಾರ್ಥ್ಯೇ ಜ್ಞಾನೈಕಶರಣೇ ಕಿಲ ।
ಜ್ಞಾನಸ್ಯೈವ ಪ್ರದುಷ್ಟತ್ವೇ ಕಥಮರ್ಥಸ್ಯ ತತ್ತ್ವತಾ ॥ ೧೧೧೮ ॥

**ಅರ್ಥ-** ಅರ್ಥಾಯಾಥಾರ್ಥ್ಯಯಾಥಾರ್ಥ್ಯೇ = ಅರ್ಥದ ಅತಾತ್ವಿಕತ್ವ ಮತ್ತು ತಾತ್ವಿಕತ್ವಗಳು, ಜ್ಞಾನೈಕಶರಣೇ ಕಿಲ = ಕೇವಲ ಜ್ಞಾನವನ್ನೇ ಅವಲಂಬಿಸಿರುತ್ತವೆಯಷ್ಟೇ? ಜ್ಞಾನಸ್ಯೈವ ಪ್ರದುಷ್ಟತ್ವೇ = ಜ್ಞಾನವೇ ದುಷ್ಟವಾದರೆ, ಅರ್ಥಸ್ಯ = ಅರ್ಥಕ್ಕೆ, ತತ್ತ್ವತಾ = ತಾತ್ವಿಕತ್ವವು, ಕಥಂ = ಹೇಗೆ ಉಂಟಾಗುತ್ತದೆ?

**ಅನುವಾದ-** ಅರ್ಥದ ತಾತ್ವಿಕತ್ವ ಮತ್ತು ಅತಾತ್ವಿಕತ್ವಗಳು ಕೇವಲ ಜ್ಞಾನದಿಂದಲೇ ಸಿದ್ಧವಾಗುವ ವಿಷಯಗಳು. ಜ್ಞಾನವೇ ದುಷ್ಟವಾದರೆ, ಅದರ ವಿಷಯವಾದ ಅರ್ಥಕ್ಕೆ ಹೇಗೆ ತಾತ್ವಿಕತ್ವವು ಉಂಟಾಗುತ್ತದೆ?

**ಭಾವವಿಲಾಸಿನೀ–** ಏತದೇವ ದರ್ಶಯತಿ ॥ **ಅಥೇತಿ** ॥ ೧೧೧೭ ॥

ತತ್ತ್ವಸತ್ತ್ವಾತ್ ತವಾಜ್ಞಾನಕಾರ್ಯತಾ ದೂಷಣಂ ನ ಚೇತ್ ।
ಮೃತ್ತ್ವಸತ್ತ್ವಾನ್ಮಮಾಜ್ಞಾನಕಾರ್ಯತಾऽಪಿ ನ ದೂಷಣಮ್ ॥ ೧೧೧೯ ॥

**ಅರ್ಥ-** ತತ್ತ್ವಸತ್ತ್ವಾತ್ = ತತ್ವವಾದ ಐಕ್ಯವು ಇರುವುದರಿಂದ, ಅಜ್ಞಾನಕಾರ್ಯತಾ = ಜ್ಞಾನದಲ್ಲಿ ಅಜ್ಞಾನಕಾರ್ಯತ್ವವು, ತವ = ನಿನಗೆ, ದೂಷಣಂ ನ ಚೇತ್ = ದೂಷಣವಲ್ಲ ಎಂದು ಹೇಳುವುದಾದರೆ, ಮೃತ್ತ್ವಸತ್ತ್ವಾತ್ = ಘಟದಲ್ಲಿ ಮೃತ್ತ್ವವು ಇರುವುದರಿಂದ, ಅಜ್ಞಾನಕಾರ್ಯತಾ = ಘಟದಲ್ಲಿ ಅಜ್ಞಾನಕಾರ್ಯತ್ವವು, ಮಮಾಪಿ = ನನಗೂ ಕೂಡ, ನ ದೂಷಣಮ್ = ದೂಷಣವಾಗುವುದಿಲ್ಲ.

**ಅನುವಾದ-** ಐಕ್ಯವು ಸತ್ಯವಾಗಿರುವುದರಿಂದ ಐಕ್ಯಜ್ಞಾನಕ್ಕೆ ಅಜ್ಞಾನಕಾರ್ಯತ್ವವು ದೋಷವಲ್ಲವಾದರೆ ಘಟದಲ್ಲಿ ಮೃತ್ತ್ವವು ಇರುವುದರಿಂದ ಘಟವು ಅಜ್ಞಾನ ಕಾರ್ಯವಾದರೂ ಅಲ್ಲಿ ಅಜ್ಞಾನಕಾರ್ಯತ್ವವು ದೋಷವಲ್ಲವೆಂದು ಅಂಗೀಕರಿಸು.

**ಭಾವವಿಲಾಸಿನೀ–** ತತ್ವಸತ್ತ್ವಾತ್ ತತ್ವಸ್ಯ ಐಕ್ಯಸ್ಯ ಸತ್ತ್ವಾತ್ । ಅಜ್ಞಾನಕಾರ್ಯತಾ ಜ್ಞಾನೇऽಜ್ಞಾನೋಪಾದಾನತಾ । ಮೃತ್ತ್ವಸತ್ತ್ವಾತ್ ಘಟೋಪಾದಾನೇಮೃತ್ತ್ವಸತ್ತ್ವಾತ್ ।

ಮೃದುಪಾದಾನಕತ್ವಾದಿತಿ ಯಾವತ್ । ಅಜ್ಞಾನಕಾರ್ಯತಾ ಕೇವಲಾಜ್ಞಾನೋಪಾದಾನಕಂ ಶುಕ್ತಿರಜತಮೇವ ದುಷ್ಟಂ ದೃಷ್ಟಮ್ । ಘಟಸ್ತು ನ ತಥಾ । ಮೃದುಪಾದಾನಕತ್ವಸ್ಯಾಪಿ ಪ್ರತ್ಯಕ್ಷಸಿದ್ಧತ್ವಾತ್। ಅತೋ ಘಟೋಽಪಿ ತತ್ವಮೇವ । ತಜ್ಜ್ಞಾನಮಪಿ ಐಕ್ಯಜ್ಞಾನವತ್ ತತ್ವಜ್ಞಾನಮೇವ । ಅಥವಾ ಮೃದುಪಾದಾನಕಘಟೇ ಅಜ್ಞಾನೋಪಾದಾನಕತ್ವಸ್ಯೈವಾಭಾವಾತ್ ಘಟಜ್ಞಾನಮಪಿ ತತ್ವಜ್ಞಾನಮಿತಿ ಭಾವಃ ॥ ೧೧೧೯ ॥

**ವಿವರಣೆ-** ಕೇವಲ ಅಜ್ಞಾನೋಪಾದಾನಕವಾದ ಶುಕ್ತಿರಜತವೇ ದುಷ್ಟವೆಂದು (ಅತಾತ್ವಿಕವೆಂದು) ಅನುಭವಸಿದ್ಧವಾಗಿದೆ. ಘಟವು ಹಾಗಲ್ಲ. ಅಲ್ಲಿ ಮೃದುಪಾದಾನಕತ್ವವೂ ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಘಟವೂ ತಾತ್ವಿಕವೇ. ಘಟಜ್ಞಾನವೂ ಕೂಡ ಐಕ್ಯಜ್ಞಾನದಂತೆ ತಾತ್ವಿಕವೇ ಆಗುತ್ತದೆ ಎಂದು ಅಭಿಪ್ರಾಯ. ಅಥವಾ ಮೃದುಪಾದಾನಕವಾದ ಘಟಸ್ಥಳದಲ್ಲಿ ಅಜ್ಞಾನೋಪಾದಾನಕತ್ವವೇ ಇಲ್ಲದಿರುವುದರಿಂದ ಘಟಜ್ಞಾನವೂ ತತ್ತ್ವಜ್ಞಾನವಾಗುತ್ತದೆ ಎಂದು ಅಭಿಪ್ರಾಯ.

ತ್ವನ್ಮಾತ್ರಸಂಗೃಹೀತೈಕ್ಯೇ ದೋಷಘ್ನೀ ಯದಿ ತತ್ತ್ವತಾ ।
ಸರ್ವೋಪಕಾರಕೇ ಸರ್ವದೋಷಘ್ನೀ ಕಿನ್ನ ತತ್ತ್ವತಾ ॥ ೧೧೨೦ ॥

**ಅರ್ಥ-** ತ್ವನ್ಮಾತ್ರಸಂಗೃಹೀತೈಕ್ಯೇ = ಕೇವಲ ನೀನು ಮಾತ್ರ ಸ್ವೀಕರಿಸಿದ ಐಕ್ಯದಲ್ಲಿ, ತತ್ತ್ವತಾ = ತಾತ್ವಿಕತ್ವವು, ಯದಿ = ಒಂದುಪಕ್ಷ, ದೋಷಘ್ನೀ = ದೋಷವನ್ನು ಪರಿಹಾರಮಾಡುತ್ತದೆ ಎಂದು ಅಂಗೀಕರಿಸಿದರೆ, ಸರ್ವೋಪಕಾರಕೇ = ಅರ್ಥಕ್ರಿಯಾಕಾರಿಯಾದ್ದರಿಂದ ಎಲ್ಲರಿಗೂ ಉಪಕಾರವನ್ನು ಮಾಡುವ ಘಟಾದಿಗಳಲ್ಲಿ, ತತ್ತ್ವತಾ = ತಾತ್ವಿಕತ್ವವು, ಸರ್ವದೋಷಘ್ನೀ ಕಿಂ ನ = ಎಲ್ಲಾ ದೋಷಗಳನ್ನೂ ಪರಿಹಾರಮಾಡುವುದಾಗಿ ಆಗುವುದಿಲ್ಲವೇನು?

**ಅನುವಾದ-** ನೀನು ಮಾತ್ರ ಅಂಗೀಕರಿಸಿದ ಐಕ್ಯದಲ್ಲಿ ತಾತ್ವಿಕತ್ವವು ಅವಿದ್ಯೋಪಾದಾನ-ಕತ್ವರೂಪ ದೋಷವನ್ನು ಪರಿಹಾರಮಾಡುವುದಾದರೆ, ಸರ್ವೋಪಕಾರಕ-ವಾದ್ದರಿಂದ ಸರ್ವರಿಂದಲೂ ಸ್ವೀಕರಿಸಲ್ಪಟ್ಟ ಘಟದಲ್ಲಿ ತಾತ್ವಿಕತ್ವವು ಎಲ್ಲ ದೋಷಗಳನ್ನೂ ಪರಿಹಾರ ಮಾಡುವುದಿಲ್ಲವೇನು?

**ಭಾವವಿಲಾಸಿನೀ–** ಕಿಂ ಚೈಕ್ಯಸ್ಯ ತತ್ವತಾಯಾಂ ತದ್ಬಲಾತ್ತಜ್ಜ್ಞಾನಮಪ್ಯದುಷ್ಟಂ ಸ್ಯಾತ್ । ತದೇವ ಕುತಃ । ಪ್ರಮಾವಿಷಯತ್ವಾಚ್ಚೇತ್ತುಕ್ತಸ್ತಜ್ಜ್ಞಾನಸ್ಯ ಪ್ರಮಾತ್ವಮ್ । ತತ್ವಜ್ಞಾನತ್ವಾಚ್ಚೇತ್ ನ । ಐಕ್ಯಸ್ಯ ತತ್ವತಾಯಾಂ ತಜ್ಜ್ಞಾನಸ್ಯ ತತ್ವಜ್ಞಾನತ್ವಂ ತಸ್ಮಿಂಶ್ಚ ಸತಿ ತದೇವ ಜ್ಞಾನಂ ಪ್ರಮಾ ಸ್ಯಾತ್ । ಪ್ರಮಾವಿಷಯತ್ವೇನೈವ ಐಕ್ಯಸ್ಯ ತತ್ವತಾ ಅತೋಽನ್ಯೋನ್ಯಾಶ್ರಯಪ್ರಸಂಗಃ । ಅದುಷ್ಟಕರಣಜನ್ಯತ್ವಾಚ್ಚೇತ್ ತರ್ಹಿ ತಾದೃಶಘಟಜ್ಞಾನಾದ್ಘಟೋಽಪಿ ನ ಕುತಸ್ತತ್ವಮ್ । ತಸ್ಯ ಮೃದುಪಾದಾನಕತ್ವೇನ ಚ ಕುತೋ ನ ತತ್ವಮ್ । ಏವಂ ಚ ಘಟೋ ನಾಜ್ಞಾನೋಪಾದಾನಕಃ

ಕಿಂತು ತತ್ಪ್ರಮಾಣೀಭೂತಪ್ರತ್ಯಕ್ಷಾದೀನಾಂ ವ್ಯಾವಹಾರಿಕಪ್ರಮಾಣತ್ವಕಥನಮೇವಾ-ಜ್ಞಾನೋಪಾದಾನಕಮ್। ಏತದೇವಾಭಿಪ್ರೇತ್ಯಾಹ - ತ್ವನ್ಮಾತ್ರೇತಿ ॥

ದೋಷಘ್ನೀ ಜ್ಞಾನಗತದೋಷಘ್ನೀ । ಸರ್ವೋಪಕಾರಕೇ ಘಟಾದೌ ಜಗತಿ । ಸರ್ವದೋಷಘ್ನೀ ಅರ್ಥಕರಣಜ್ಞಾನೇಷು ಪರಪರಿಕಲ್ಪಿತಸರ್ವದೋಷಘ್ನೀ । ತತ್ಸಾಧಕಯುಕ್ತೇರುಭಯತ್ರ ಸಾಮ್ಯಾದಿತಿ ಭಾವಃ । ತಚ್ಚ ಪ್ರಾಗಸ್ಮಾಭಿರೇವ ವಿವೃತಮ್ । ಏತೇನೈತದಪಿ ಸೂಚಿತಮ್ । ಘಟಾದೇರಜ್ಞಾನೋಪಾದಾನಕತ್ವೇ ಐಕ್ಯಸ್ಯಾಪಿ ಕುತೋ ನ ತದುಪಾದಾನಕತ್ವಮ್ । ಅನಾದಿತ್ವಾದಿತಿ ಚೇತ್ । ಭೇದಾಭೇದಯೋರುಭಯೋರಪ್ಯನಾದಿತ್ವಾಸಂಭವೇನೈಕಸ್ಯ ಸಾದಿತ್ವಾವಶ್ಯಂಭಾವಾತ್ । ತಚ್ಚ "ಷಡಸ್ಮಾಕಮನಾದಯ" ಇತಿ ವದತಾ ತ್ವಯೈವ ಭೇದಸ್ಯಾನಾದಿಷಟ್ಕೇ ಸಂಗೃಹೀತತ್ವೇನ ಐಕ್ಯ ಏವ ವಕ್ತುಮುಚಿತಮ್ । ಅನ್ಯಥಾ-ನುಪಪತ್ತೇರಭಾವಾದೈಕ್ಯೇನ ತದಂಗೀಕ್ರಿಯತೇ ಚೇತ್ । ಘಟಾದಾವಪಿ ತತ ಏವ ನ ತದಂಗೀಕ್ರಿಯತಾಮ್ । ಅತೋಽಪ್ಯೈಕ್ಯಘಟಯೋಸ್ಸಾಮ್ಯಮೇವೇತಿ ॥ ೧೧೨೦ ॥

**ವಿವರಣೆ-** ಐಕ್ಯವು ತಾತ್ವಿಕವಾದರೆ ಅದರ ಬಲದಿಂದ ಐಕ್ಯಜ್ಞಾನವು ಅದುಷ್ಟ ಎಂದಾದೀತು. ಐಕ್ಯವು ತಾತ್ವಿಕ ಎಂಬುವುದೇ ಹೇಗೆ ಸಿದ್ಧವಾಗುತ್ತದೆ? ಪ್ರಮಾವಿಷಯತ್ವದಿಂದ ಎಂದು ಹೇಳುವುದಾದರೆ, ಐಕ್ಯಜ್ಞಾನಕ್ಕೆ ಪ್ರಮಾತ್ವವೇ ಹೇಗೆ ಸಿದ್ಧವಾಗುತ್ತದೆ? ಐಕ್ಯಜ್ಞಾನವು ತತ್ತ್ವಜ್ಞಾನವಾದುದರಿಂದ ಎಂದು ಹೇಳಿದರೆ, ಐಕ್ಯವು ತಾತ್ವಿಕವಾದರೆ ಐಕ್ಯಜ್ಞಾನಕ್ಕೆ ತತ್ತ್ವಜ್ಞಾನತ್ವವು ಉಂಟಾಗುತ್ತದೆ. ಐಕ್ಯಜ್ಞಾನಕ್ಕೆ ತತ್ತ್ವಜ್ಞಾನತ್ವವು ಉಂಟಾದರೆ ಐಕ್ಯಜ್ಞಾನಕ್ಕೆ ಪ್ರಮಾತ್ವವು ಸಿದ್ಧವಾಗುತ್ತದೆ. ಅಂತಹ ಪ್ರಮಾವಿಷಯತ್ವವಿರುವುದರಿಂದ ಐಕ್ಯವು ತಾತ್ವಿಕ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ ಎಂದು ಅಭಿಪ್ರಾಯ. ಅದುಷ್ಟಕರಣಜನ್ಯವಾದುದರಿಂದ ಐಕ್ಯಜ್ಞಾನವು ತತ್ತ್ವಜ್ಞಾನವಾಗುತ್ತದೆ ಎಂದು ಹೇಳುವುದಾದರೆ, ಅದುಷ್ಟಕರಣಜನ್ಯವಾದ ಘಟಜ್ಞಾನದ ಬಲದಿಂದ ಘಟವೂ ಏಕೆ ಸತ್ಯವಾಗುವುದಿಲ್ಲ? ಮತ್ತು ಘಟದ ಮೃದುಪಾದಾನಕತ್ವವೇ ಏಕೆ ತತ್ತ್ವವಾಗುವುದಿಲ್ಲಎಂದು ನಮ್ಮ ಪ್ರಶ್ನೆ. ಆದ್ದರಿಂದ ಘಟವು ಅಜ್ಞಾನೋಪಾದಾನಕವಲ್ಲ. ಆದರೆ, ಘಟವಿಷಯದಲ್ಲಿ ಪ್ರಮಾಣವಾದ ಪ್ರತ್ಯಕ್ಷಾದಿಗಳಿಗೆ ವ್ಯಾವಹಾರಿಕಪ್ರಮಾಣತ್ವವನ್ನು ಒಪ್ಪಿ ಅಜ್ಞಾನೋಪಾದಾನಕತ್ವವನ್ನು ಹೇಳುವುದೇ ಅಜ್ಞಾನೋಪಾದಾನಕವಾದುದು ಎಂದು ಇಲ್ಲಿ ತಿಳಿಸುತ್ತಾರೆ. ಮತ್ತು ಘಟಾದಿಗಳು ಅಜ್ಞಾನೋಪಾದಾನಕವಾದರೆ, ಐಕ್ಯವೂ ಏಕೆ ಅಜ್ಞಾನೋಪಾದಾನಕವಲ್ಲ? ಐಕ್ಯವು ಅನಾದಿಯಾದುದರಿಂದ ಅಜ್ಞಾನೋಪಾದಾನಕವಲ್ಲ ಎಂದು ಹೇಳುವುದಾದರೆ ಅದು ಸರಿಯಲ್ಲ. "ಷಡಸ್ಮಾಕಮನಾದಯಃ" ಎಂದು ಭೇದಕ್ಕೂ ಅನಾದಿತ್ವವನ್ನು ಒಪ್ಪಿ ಅದಕ್ಕೆ ವಿರುದ್ಧವಾದ ಐಕ್ಯಕ್ಕೂ ಅನಾದಿತ್ವವನ್ನು ಹೇಳುವುದು ಸರಿಯಲ್ಲ. ಅನ್ಯಥಾನುಪಪತ್ತಿ ಇಲ್ಲದಿರುವುದರಿಂದ ಐಕ್ಯದಲ್ಲಿ ಅಜ್ಞಾನೋಪಾದಾನಕತ್ವವನ್ನು ಅಂಗೀಕರಿಸುವುದಿಲ್ಲ ಎಂದು ಹೇಳಿದರೆ, ಅದೇ ಕಾರಣದಿಂದಲೇ ಘಟದಲ್ಲಿಯೂ ಅಜ್ಞಾನೋಪಾದಾನಕತ್ವವನ್ನು ಅಂಗೀಕರಿಸಬೇಡ. ಆದ್ದರಿಂದ ಘಟಕ್ಕೂ ಮತ್ತು ಐಕ್ಯಕ್ಕೂ

ಸಾಮ್ಯವೇ ಇರುವುದರಿಂದ ಒಂದು ಜ್ಞಾನವು ತತ್ತ್ವಜ್ಞಾನವಾಗುತ್ತದೆ, ಇನ್ನೊಂದು ಜ್ಞಾನವು ತತ್ತ್ವಜ್ಞಾನವಾಗುವುದಿಲ್ಲ ಎಂಬ ವಿಭಾಗವು ಕೂಡುವುದಿಲ್ಲ ಎಂದು ಅಭಿಪ್ರಾಯ.

**ಅಥೇಹಾಜ್ಞಾನಕಾರ್ಯತ್ವಂ ಯದಿ ದೋಷಾಯ ನೇಷ್ಯತೇ ।**
**ಕುತೋऽನ್ಯತ್ರ ಸ ದೋಷಃ ಸ್ಯಾತ್ ತದ್‌ದೂಷ್ಯಂ ಭಾಷ್ಯಮೇವ ತೇ ॥೧೧೨೦॥**

**ಅರ್ಥ-** ಅಥ = ಪಕ್ಷಾಂತರದಲ್ಲಿ, ಇಹ = ಐಕ್ಯಜ್ಞಾನದಲ್ಲಿ, ಅಜ್ಞಾನಕಾರ್ಯತ್ವಂ = ಅಜ್ಞಾನಕಾರ್ಯತ್ವವು, ಯದಿ = ಒಂದುಪಕ್ಷ, ದೋಷಾಯ ನೇಷ್ಯತೇ = ದೋಷವಲ್ಲವೆಂದು ಹೇಳುವುದಾದರೆ, ಅನ್ಯತ್ರ = ಘಟಾದಿಸ್ಥಳದಲ್ಲಿ, ಸಃ = ಅಜ್ಞಾನ- ಕಾರ್ಯತ್ವವು, ಕುತಃ = ಏಕೆ, ದೋಷಃ ಸ್ಯಾತ್ = ದೋಷವಾಗುತ್ತದೆ?, ತತ್ = ಆದ್ದರಿಂದ, ತೇ ಭಾಷ್ಯಮೇವ = ನಿನ್ನ ಭಾಷ್ಯವೇ, ದೂಷ್ಯಂ ಸ್ಯಾತ್ = ದೂಷಣೀಯವಾಗುತ್ತದೆ.

**ಅನುವಾದ-** **ಐಕ್ಯಜ್ಞಾನದಲ್ಲಿ ಅಜ್ಞಾನಕಾರ್ಯತ್ವವು ದೋಷವಲ್ಲ ಎಂದು ಹೇಳುವುದಾದರೆ, ಘಟಾದಿಗಳಲ್ಲಾದರೂ ಅಜ್ಞಾನಕಾರ್ಯತ್ವವು ಏಕೆ ದೋಷವಾಗುತ್ತದೆ. ಆದ್ದರಿಂದ ಘಟಾದಿಗಳಿಗೆ ಅಜ್ಞಾನಕಾರ್ಯತ್ವವನ್ನು ಹೇಳುವ ನಿನ್ನ ಭಾಷ್ಯವೇ ದೂಷ್ಯವಾಗುತ್ತದೆ.**

**ಭಾವವಿಲಾಸಿನೀ–** ಇಹ ಐಕ್ಯಜ್ಞಾನೇ । ಅನ್ಯತ್ರ ಘಟಾದೌ । ತತ್ ತಸ್ಮಾತ್ । ಏವಂ ಚಾತ್ರಾ- ಪ್ಯುಭಯತಃ ಪಾಶರಜ್ಜುದ್ವಯಂ ಪರಸ್ಯೇತ್ಯಾಹೋತ್ತರಶ್ಲೋಕದ್ವಯೇನ ॥ ೧೧೨೦ ॥

**ಅಜ್ಞಾನಜತ್ವಂ ದೋಷಶ್ಚೇದ್ ಗತಮೇವ ಮತಂ ತವ ।**
**ನಾಜ್ಞಾನಜತ್ವಂ ದೋಷಶ್ಚೇದ್ ಗತಮೇವ ಮತಂ ತವ ॥ ೧೧೨೨ ॥**

**ಅರ್ಥ-** ಅಜ್ಞಾನಜತ್ವಂ = ಅಜ್ಞಾನಕಾರ್ಯತ್ವವು, ದೋಷಶ್ಚೇತ್ = ದೋಷವಾಗುವುದಾದರೆ, ತವ ಮತಂ = ನಿನ್ನ ಮತವು, ಗತಮೇವ = ಹೊರಟು ಹೋಗುತ್ತದೆ, ಅಜ್ಞಾನಜತ್ವಂ = ಅಜ್ಞಾನಕಾರ್ಯತ್ವವು, ನದೋಷಶ್ಚೇತ್ = ದೋಷ ವಲ್ಲವೆಂಬುದಾದರೆ, ತವ ಮತಂ = ನಿನ್ನ ಮತವು ಗತಮೇವ = ಹೊರಟುಹೋಗುತ್ತದೆ.

**ಅನುವಾದ-** **ಅಜ್ಞಾನಕಾರ್ಯತ್ವವು ದೋಷವೆಂದಾದರೆ, ಚರಮಸಾಕ್ಷಾತ್ಕಾರವು ಅಜ್ಞಾನಕಾರ್ಯವಾದ್ದರಿಂದ ಅದಕ್ಕೆ ವಿಷಯವಾದ ಐಕ್ಯವು ಅತಾತ್ವಿಕ ವಾಗುವುದರಿಂದ ನಿನ್ನ ಮತವು ಹೊರಟುಹೋಗುತ್ತದೆ. ಅಜ್ಞಾನಜನ್ಯತ್ವವು ದೋಷವಲ್ಲವೆಂದಾದರೆ, ಘಟಾದಿಜ್ಞಾನಗಳು ಅಪ್ರಮಾಣವಲ್ಲವಾದ್ದರಿಂದ ಅವುಗಳಿಗೆ ವಿಷಯವಾದ ಘಟಾದಿಗಳು ಸತ್ಯವೆಂದೇ ಸಿದ್ಧವಾಗುವುದರಿಂದ ನಿನ್ನ ಮತವು ಹೊರಟುಹೋಗುತ್ತದೆ.**

**ಭಾವವಿಲಾಸಿನೀ–** ಮತಂ ಐಕ್ಯಮತಮ್ । ಐಕ್ಯಜ್ಞಾನಸ್ಯಾಪ್ಯಜ್ಞಾನಜನ್ಯತಯಾ ದುಷ್ಟತ್ವೇನೈಕ್ಯ-ಸಾಧಕತ್ವಾಯೋಗಾದಿತಿ ಭಾವಃ । ಉತ್ತರಾರ್ಧೇ ತವ ಮತಂ ಘಟಾದಿಗ್ರಾಹಕಪ್ರತ್ಯಕ್ಷಾದೀನಾಂ ವ್ಯಾವಹಾರಿಕಪ್ರಮಾಣತ್ವಮತಮ್ । ತೇಷಾಮಪಿ ನಿರ್ದುಷ್ಟಾರ್ಥಗ್ರಾಹಿತ್ವಾತ್ ॥ ೧೧೨೨ ॥

ಭಾಷ್ಯಸ್ಯಾನ್ಯಾರ್ಥಕಥನಂ ಹಂತೈಕ್ಯಂ ತವ ಕೃಂತತಿ ।
ಯಥಾಸ್ಥಿತಾರ್ಥವಾರ್ತಾ ಚ ಹಂತೈಕ್ಯಂ ತವ ಕೃಂತತಿ ॥ ೧೧೨೩ ॥

**ಅರ್ಥ–** ಭಾಷ್ಯಸ್ಯ = ಭಾಷ್ಯಕ್ಕೆ, ಅನ್ಯಾರ್ಥಕಥನಂ = ಬೇರೆ ಅರ್ಥವನ್ನು ಹೇಳುವುದು, ತವ ಐಕ್ಯಂ = ನಿನ್ನ ಐಕ್ಯವನ್ನು, ಕೃಂತತಿ = ನಾಶಮಾಡುತ್ತದೆ, ಹಂತ = ಸಂತೋಷ, ಯಥಾಸ್ಥಿತಾರ್ಥವಾರ್ತಾ ಚ = ಯಥಾಸ್ಥಿತವಾದ ಅರ್ಥವನ್ನು ಹೇಳುವುದೂ ಸಹ, ತವ ಐಕ್ಯಂ = ನಿನ್ನ ಐಕ್ಯವನ್ನು, ಕೃಂತತಿ = ನಾಶಮಾಡುತ್ತದೆ, ಹಂತ = ಸಂತೋಷ.

**ಅನುವಾದ–** ಅವಿದ್ಯಾವದ್ವಿಷಯಕ ಎಂಬ ಭಾಷ್ಯಕ್ಕೆ ಅನ್ಯಾರ್ಥವನ್ನು ಹೇಳುವುದಾದರೆ, ಜೀವಬ್ರಹ್ಮೈಕ್ಯಪ್ರತಿಪಾದಕವಾದ ನಿನ್ನ ಭಾಷ್ಯವಾಕ್ಯಕ್ಕೂ ಮತ್ತೈಕ್ಯಾದಿರೂಪವಾದ ಅನ್ಯಾರ್ಥವನ್ನು ಹೇಳಬಹುದಾದ್ದರಿಂದ ನಿನ್ನ ಐಕ್ಯವು ನಷ್ಟವಾಗುತ್ತದೆ. ಭಾಷ್ಯಕ್ಕೆ ಯಥಾಶ್ರುತಾರ್ಥವನ್ನು ಹೇಳಿದರೂ ಚರಮಸಾಕ್ಷಾತ್ಕಾರವು ಅವಿದ್ಯಾವದ್ವಿಷಯಕವಾಗುವುದರಿಂದ ದುಷ್ಟವಾಗುವ ಕಾರಣದಿಂದ ಅದಕ್ಕೆ ವಿಷಯವಾದ ಐಕ್ಯವು ನಾಶವನ್ನು ಹೊಂದುತ್ತದೆ.

**ಭಾವವಿಲಾಸಿನೀ–** ಭಾಷ್ಯಸ್ಯ ಅವಿದ್ಯಾವದ್ವಿಷಯಕಾಣೀತಿ ಭಾಷ್ಯಸ್ಯ ಅನ್ಯಾರ್ಥಕಥನಂ ಯಥಾಶ್ರುತಾರ್ಥಪರಿತ್ಯಾಗೇನಾವಿದ್ಯೋಪಾದಾನಕತ್ವಾರ್ಥಕಥನಮ್ । ಐಕ್ಯಂ ಜೀವಬ್ರಹ್ಮೈಕ್ಯಮ್ । ಜೀವಬ್ರಹ್ಮೈಕ್ಯಪ್ರತಿಪಾದಕಭಾಷ್ಯಸ್ಯಾಪಿ ಮತ್ತೈಕ್ಯವಿಷಯತಯಾ ಯೋಜಯಿತುಂ ಶಕ್ಯತ್ವಾತ್ । ಉತ್ತರಾರ್ಧೇಽಪ್ಯೈಕ್ಯ ಪ್ರಮಾಣಸ್ಯಾಪ್ಯವಿದ್ಯಾವೃತ್ತ್ಯೈಕ್ಯವಿಷಯತ್ವೇ-ನಾವಿದ್ಯಾವದ್ವಿಷಯತಯಾ ಮುಖ್ಯಪ್ರಮಾಣತ್ವಾಭಾವಾತ್ ॥ ೧೧೨೩ ॥

ಅನ್ಯಥಾ ಚಿಂತಿತಂ ಕಾರ್ಯಂ ದೈವೇನ ಕೃತಮನ್ಯಥಾ ।
ಸರ್ವಾರ್ಥಾನ್ ಸಂಜಿಹೀರ್ಷೋಸ್ತೇ ಮಹಾನರ್ಥೋಽಗಮತ್ ಕ್ಷಯಮ್
॥ ೧೧೨೪ ॥

**ಅರ್ಥ–** ಅನ್ಯಥಾ ಚಿಂತಿತಂ = ನೀನು ಬೇರೆ ರೀತಿಯಲ್ಲಿ ಯೋಚಿಸಿದ, ಕಾರ್ಯಂ = ಕಾರ್ಯವು, ದೈವೇನ = ದೈವದಿಂದ, ಅನ್ಯಥಾ ಕೃತಮ್ = ಬೇರೆ ರೀತಿಯಾಗಿಯೇ ಮಾಡಲ್ಪಟ್ಟಿತು, ಸರ್ವಾರ್ಥಾನ್ = ಎಲ್ಲ ಪದಾರ್ಥಗಳನ್ನೂ, ಸಂಜಿಹೀರ್ಷೋಃ = ವಿನಾಶಮಾಡಲು ಹೊರಟ, ತೇ = ನಿನಗೆ, ಮಹಾನರ್ಥಃ = ದೊಡ್ಡ ಅರ್ಥವಾದ ಐಕ್ಯವು, ಕ್ಷಯಮ್ ಅಗಮತ್ = ನಾಶವನ್ನು ಹೊಂದಿತು.

**ಅನುವಾದ-** ನೀನು ಬೇರೆ ರೀತಿಯಲ್ಲಿಯೇ ಯೋಚನೆ ಮಾಡಿದ ಕಾರ್ಯವು ದೈವದಿಂದ ಬೇರೆ ರೀತಿಯಲ್ಲಿಯೇ ಮಾಡಲ್ಪಟ್ಟಿತು. ಎಲ್ಲ ಪದಾರ್ಥಗಳನ್ನೂ ನಾಶಮಾಡಲು ಹೊರಟ ನಿನಗೆ ನಿನ್ನ ಶ್ರೇಷ್ಠವಾದ ಅರ್ಥವಾದ ಐಕ್ಯವೇ ನಾಶವನ್ನು ಹೊಂದಿತು.

**ಭಾವವಿಲಾಸಿನೀ–** ಲೌಕಿಕಾಭಾಣಕೇನಾಪಿ ಪರಂ ಪರಿಹಸತಿ ॥ **ಅನ್ಯಥೇತಿ** ॥ **ಅರ್ಥಃ** ಐಕ್ಯರೂಪಾರ್ಥಃ ॥ ೧೧೨೪ ॥

**ವಿವರಣೆ-** ಅಜ್ಞಾನೋಪಾದಾನಕತ್ವರೂಪವಾದ ದೋಷವನ್ನು ಹೇಳಿ ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿಷಯವಾದ ಎಲ್ಲಾ ಪದಾರ್ಥಗಳಿಗೂ ಬಾಧವನ್ನು ಹೇಳಲು ಹೊರಟರೆ, ಚರಮಸಾಕ್ಷಾತ್ಕಾರವೂ ಅಜ್ಞಾನಕಾರ್ಯವಾದ್ದರಿಂದ ಅದಕ್ಕೆ ವಿಷಯವಾದ ಐಕ್ಯವೂ ಕೂಡ ಬಾಧಿತವಾಗಬೇಕಾದ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

**ಅನಾದೇರ್ಜೀವಭೇದಾದೇರ್ಮಾನೈರ್ಭೀರ್ನ ಕಥಂಚನ ।**
**ಮಾನಂ ಹೀನಂ ಚಿಕೀರ್ಷೋಸ್ತೇ ಮಾನೋ ಹೀನೋ ಭವೇದ್ಧ್ರುವಮ್।**
**ಮಾನಂ ವಾ ತಸ್ಯ ಹೀನಂ ಸ್ಯಾತ್ ತಾಮಸಬ್ರಹ್ಮಗೋಚರಮ್ ॥ ೧೧೨೫ ॥**

**ಅರ್ಥ-** ಅನಾದೇಃ = ಅನಾದಿಯಾದ, ಜೀವಭೇದಾದೇಃ = ಜೀವಭೇದಾದಿಗಳಿಗೆ, ಕಥಂಚನ = ಯಾವ ರೀತಿಯಿಂದಲೂ, ಮಾನೈಃ = ಪ್ರಮಾಣಗಳಿಂದ, ನ ಭೀಃ = ಭಯವಿಲ್ಲ. ಮಾನಂ = ಭೇದಪ್ರಮಾಣವನ್ನು, ಹೀನಂ = ಅವಿದ್ಯಾವದ್ವಿಷಯತ್ವೇನ ದುಷ್ಟವನ್ನಾಗಿ, ಚಿಕೀರ್ಷೋಃ = ಮಾಡಲು ಹೊರಟ, ತೇ = ನಿನ್ನ, ಮಾನಃ = ಅಹಂಕಾರವು, ಧ್ರುವಮ್ = ನಿಶ್ಚಿತವಾಗಿ, ಹೀನಃ ಭವೇತ್ = ನಾಶವನ್ನು ಹೊಂದುತ್ತದೆ. ತಾಮಸಬ್ರಹ್ಮಗೋಚರಮ್ = ಅವಿದ್ಯಾವೃತನಾದ ಬ್ರಹ್ಮವಿಷಯಕವಾದ, ತಸ್ಯ ಮಾನಂ ವಾ = ಆ ಬ್ರಹ್ಮವಿಷಯಕವಾದ ಮಹಾವಾಕ್ಯವೂ ಕೂಡ, ಹೀನಂ ಸ್ಯಾತ್ = ಅಪ್ರಮಾಣವಾಗುತ್ತದೆ.

**ಅನುವಾದ-** ಅನಾದಿಯಾದ ಜೀವಭೇದಾದಿಗಳಿಗೆ ಯಾವ ರೀತಿಯಿಂದಲೂ ಪ್ರಮಾಣಗಳಿಂದ ಭಯವಿಲ್ಲ. ಭೇದಪ್ರಮಾಣವನ್ನು ದುರ್ಬಲವನ್ನಾಗಿ ಮಾಡಲು ಹೊರಟ ನಿನಗೆ ನಿನ್ನ ಅಹಂಕಾರವೇ ನಾಶವನ್ನು ಹೊಂದಿತು. ಅಥವಾ ಅಜ್ಞಾನಾವೃತವಾದ ಬ್ರಹ್ಮನನ್ನು ಹೇಳುವ ಬ್ರಹ್ಮವಿಷಯಕವಾದ ಆ ಮಹಾವಾಕ್ಯಗಳೇ ಅಪ್ರಮಾಣವಾಗುತ್ತವೆ.

**ಭಾವವಿಲಾಸಿನೀ–** ನಾಸ್ಮಾಕಮಯಂ ದೋಷ ಇತ್ಯಾಹ - **ಅನಾದೇರಿತಿ** ॥ ಅನಾದೌ ಸಾರ್ವಜನೀನೇ ಚ ಜೀವೇಶ್ವರಭೇದೇ ತ್ವದುಕ್ತದೋಷದ್ವಯಸ್ಯಾಪ್ಯಭಾವಾದಿತಿ ಭಾವಃ । ಮಾನಂ ಭೇದಪ್ರಮಾಣಮ್। ಹೀನಂ ಅವಿದ್ಯಾವದ್ವಿಷಯತ್ವೇನ ಹೀನಮ್ । ಮಾನಃ ಅಹಂಕಾರಃ ।

ಅವಿದ್ಯಾವದ್ವಿಷಯತ್ವೇನ ಸ್ವಾಭಿಮತೈಕ್ಯಸ್ಯೈವ ಖಂಡನಾದಿತಿ ಭಾವಃ । ಮಾನಂ ತ್ವದಭಿಲಷಿತಮಹಾವಾಕ್ಯಮ್ । ತಾಮಸಬ್ರಹ್ಮಗೋಚರಮ್ ಅಜ್ಞಾನಾವೃತಬ್ರಹ್ಮಗೋಚರಮ್ । ಅವಿದ್ಯಾವದ್ವಿಷಯತ್ವಸ್ಯ ತತ್ರೈವ ವಿದ್ಯಮಾನತ್ವಾತ್ ॥ ೧೧೨೫ ॥

**ವಿವರಣೆ-** ಭೇದಪ್ರಮಾಣವನ್ನು ದುರ್ಬಲವನ್ನಾಗಿ ಮಾಡಲು ನೀನು ಅವಿದ್ಯೋಪಾದಾನಕತ್ವವನ್ನು ದೋಷವೆಂದು ಹೇಳಿದರೆ ನಿನ್ನ ಚರಮಸಾಕ್ಷಾತ್ಕಾರವೂ ದುಷ್ಟವಾಗುವುದರಿಂದ ಅದಕ್ಕೆ ವಿಷಯವಾದ ನಿನಗೆ ಅಭೀಷ್ಟವಾದ, ಐಕ್ಯವೂ ನಾಶವನ್ನು ಹೊಂದುವುದರಿಂದ ನಿನ್ನ ಅಹಂಕಾರಕ್ಕೇ ನಾಶವುಂಟಾಗುತ್ತದೆ ಎಂದು ಅಭಿಪ್ರಾಯ.

ಜೀವೇಶಭೇದೇ ಚಾಜ್ಞಾನೇ ಬಾಧೇಽನಾದಾವಸಂಭವಾತ್ ।
ಮೃದಾದ್ಯುಪಾದಾನಕೇಷು ಘಟಾದಿಷ್ವಪ್ಯಸಂಭವಾತ್ ॥ ೧೧೨೬ ॥

ಬಾಧಾಸಂಭವತಃ ಕಲ್ಪಕಾಭಾವೇನಾಪ್ಯಸಂಭವಾತ್ ।
ಬ್ರಹ್ಮಜ್ಞಾನಸ್ಯ ಹೀನತ್ವಾಪಾತಾದಜ್ಞಾನಜಸ್ಯ ತೇ ॥ ೧೧೨೭ ॥

ದೋಷಜನ್ಯಾಸು ಧೀಷ್ವೇವಾಪ್ರಾಮಾಣ್ಯಸ್ಯ ಪ್ರದರ್ಶನಾತ್ ।
ತಮೋಽವಯವಜನ್ಯೇಷು ತಮಸ್ಸು ತದದರ್ಶನಾತ್ ।
ಪ್ರಾಮಾಣ್ಯಾನುಭವಾಚ್ಚೈವ ತಮೋನೀಲಿಮ್ನಿ ಚಾಖಿಲೈಃ ॥ ೧೧೨೮ ॥

ಅಜ್ಞಾನೋಪಾದಾನಕತ್ವಮಪ್ಯರ್ಥೇಽನರ್ಥಕೃನ್ನ ತತ್ ।
ಅವಿದ್ಯಾವದ್ವಿಷಯತಾ ಕಥಂ ದೋಷೋ ಭವೇದ್ ವದ ॥ ೧೧೨೯ ॥

**ಅರ್ಥ-** ಅನಾದೌ = ಅನಾದಿಯಾದ, ಜೀವೇಶಭೇದೇ = ಜೀವೇಶಭೇದದಲ್ಲಿಯೂ, ಚ = ಮತ್ತು, ಅಜ್ಞಾನೇ = ಅಜ್ಞಾನದಲ್ಲಿಯೂ, ಬಾಧೇ = ಬಾಧದಲ್ಲಿಯೂ, ಅಸಂಭವಾತ್ = ಉಪಪನ್ನವಾಗದಿರುವುದಿಂದ, ಮೃದಾದ್ಯುಪಾದಾನಕೇಷು = ಮೃದಾದ್ಯುಪಾದಾನವುಳ್ಳ, ಘಟಾದಿಷು = ಘಟಾದಿಗಳಲ್ಲಿಯೂ ಕೂಡ, ಅಸಂಭವಾತ್ = ಕೂಡದಿರುವುದರಿಂದ,

ಬಾಧಾಸಂಭವತಃ = ಬಾಧವು ಕೂಡದೇ ಇರುವುದರಿಂದ, ಕಲ್ಪಕಾಭಾವೇನ = ಅಜ್ಞಾನೋಪಾದಾನಕತ್ವವನ್ನು ಕಲ್ಪನೆಮಾಡುವ ಪ್ರಮಾಣವು ಇಲ್ಲದಿರುವುದರಿಂದ ಕೂಡ, ಅಸಂಭವಾತ್ = ಬಾಧವು ಕೂಡದಿರುವುದರಿಂದ, ಅಜ್ಞಾನಜಸ್ಯ = ಅಜ್ಞಾನಕಾರ್ಯವಾದ, ತೇ = ನಿನ್ನ, ಬ್ರಹ್ಮಜ್ಞಾನಸ್ಯ = ಚರಮಸಾಕ್ಷಾತ್ಕಾರಕ್ಕೂ ಕೂಡ, ಹೀನತ್ವಾಪಾತಾತ್ = ಹೀನತ್ವವು ಉಂಟಾಗುವುದರಿಂದ,

ದೋಷಜನ್ಯಾಸು ಧೀಷ್ವೇವ = ದೋಷಜನ್ಯಜ್ಞಾನಗಳಲ್ಲಿಯೇ, ಅಪ್ರಾಮಾಣ್ಯಸ್ಯ ಪ್ರದರ್ಶನಾತ್ = ಅಪ್ರಾಮಾಣ್ಯವು ಕಂಡುಬರುವುದರಿಂದ, ತಮೋಽವಯವಜನ್ಯೇಷು =

ತಮೋ ಅವಯವಗಳಿಂದ ಜನ್ಯವಾದ, ತಮಸ್ಸು = ಕತ್ತಲೆಯ ಜ್ಞಾನದಲ್ಲಿ, ತದದರ್ಶನಾತ್ = ಅಪ್ರಾಮಾಣ್ಯವು ಕಂಡುಬರುವುದಿಲ್ಲವಾದ್ದರಿಂದ, ತಮೋನೀಲಿಮ್ನಿ = ತಮಸ್ಸಿನ ನೀಲವರ್ಣದ ಜ್ಞಾನದಲ್ಲಿ, ಅಖಿಲೈಃ = ಎಲ್ಲರಿಂದಲೂ, ಪ್ರಾಮಾಣ್ಯಾನುಭವಾಚ್ಚ = ಪ್ರಾಮಾಣ್ಯವೇ ಗೃಹೀತವಾದ್ದರಿಂದ,

ಅಜ್ಞಾನೋಪಾದಾನಕತ್ವಮಪಿ = ಅಜ್ಞಾನೋಪಾದಾನಕತ್ವವೂಕೂಡ, ಅರ್ಥೇ = ಅರ್ಥದಲ್ಲಿ, ನ ಅನರ್ಥಕೃತ್ = ಮಿಥ್ಯಾತ್ವರೂಪವಾದ ಅನರ್ಥವನ್ನು ಸಂಪಾದನೆ ಮಾಡುವುದಿಲ್ಲ. ತತ್ = ಆದ್ದರಿಂದ,ಅವಿದ್ಯಾವದ್ವಿಷಯತಾ = ಅವಿದ್ಯಾವದ್ವಿಷಯಕತ್ವವು, ಕಥಂ = ಹೇಗೆ, ದೋಷೋ ಭವೇತ್ = ದೋಷವಾಗುತ್ತದೆಂದು, ವದ = ಹೇಳು.

**ಅನುವಾದ-** ಅನಾದಿಯಾದ ಜೀವೇಶಭೇದದಲ್ಲಿಯೂ, ಅನಾದಿಯಾದ ಅಜ್ಞಾನದಲ್ಲಿಯೂ ಮತ್ತು ಬಾಧದಲ್ಲಿಯೂ ಬಾಧವು ಅನುಪಪನ್ನವಾದುದರಿಂದ, ಮೃದಾದ್ಯುಪಾದಾನಕವಾದ ಘಟಾದಿಗಳಲ್ಲಿಯೂ ಬಾಧವು ಅನುಪಪನ್ನ ವಾಗುವುದರಿಂದ, ಅಜ್ಞಾನೋಪಾದಾನಕತ್ವವನ್ನು ಕಲ್ಪನೆಮಾಡುವ ಪ್ರಮಾಣವೂ ಇಲ್ಲದಿರುವುದರಿಂದ, ಅಜ್ಞಾನೋಪಾದಾನಕತ್ವವು ದೋಷವೆಂದು ಅಂಗೀಕರಿಸಿದರೆ, ತಾದೃಶ ಅಜ್ಞಾನಜನ್ಯವಾದ ಬ್ರಹಜ್ಞಾನಕ್ಕೂ ದೋಷವು ಬರುವ ಕಾರಣದಿಂದ, ದೋಷಜನ್ಯವಾದ ಜ್ಞಾನಗಳಲ್ಲಿಯೇ ಅಪ್ರಾಮಾಣ್ಯವು ಸಿದ್ಧವಾದ ಕಾರಣದಿಂದ, ತಮೋಅವಯವಜನ್ಯವಾದ ತಮಸ್ಸಿನ ಜ್ಞಾನದಲ್ಲಿ ಅಪ್ರಾಮಾಣ್ಯವು ಇಲ್ಲವಾದ್ದರಿಂದ, ಅಂಧಕಾರದ ಕಪ್ಪುಬಣ್ಣದ ಜ್ಞಾನದಲ್ಲಿ ಎಲ್ಲರಿಂದಲೂ ಪ್ರಾಮಾಣ್ಯವೇ ಗೃಹೀತವಾಗುವುದರಿಂದ ಅಜ್ಞಾನೋಪಾದಾನಕತ್ವವೂ ಕೂಡ ಅರ್ಥದಲ್ಲಿ ಯಾವ ದೋಷವನ್ನೂ ಉಂಟು ಮಾಡುವುದಿಲ್ಲ. ಆದ್ದರಿಂದ ಅವಿದ್ಯಾವದ್ವಿಷಯತ್ವವು ಹೇಗೆ ದೋಷವಾಗುವುದು ಎಂದು ಹೇಳು.

**ಭಾವವಿಲಾಸಿನೀ–** ಅವಿದ್ಯೋಪಾದಾನಕತ್ವಸ್ಯಾದೋಷತ್ವೇ ಪ್ರಾಗುಕ್ತಯುಕ್ತೀರಭಿನವ ಯುಕ್ತೀಶ್ಚ ಬುದ್ಧ್ಯಾವಾರೋಹಾಯ ಸಂಗೃಹ್ಯಾಹ - **ಜೀವೇಶ ಭೇದ ಇತಿ** ॥ ಬಾಧಾಸಂಭವತಃ ಪದಾರ್ಥಾನಾಂ ಸತ್ಯತ್ವೇ ಸಿದ್ಧೇ ಅಜ್ಞಾನೋಪಾದಾನಕತ್ವಸ್ಯ ಮಿಥ್ಯಾತ್ವಾನಾಪಾದಕತ್ವೇನಾ-ಕಿಂಚಿತ್ಕರತ್ವಾದದೋಷತ್ವಮೇವೇತಿ ಭಾವೇನ ಸೋಽಪಿ ಸಂಗೃಹೀತಃ । ಕಲ್ಪಕಾಭಾವೇನ ಅಜ್ಞಾನೋಪಾದಾನಕತ್ವಕಲ್ಪಕ ಪ್ರಮಾಣಾಭಾವೇನ। ದೋಷಜನ್ಯಾಸು ಕಾಚಾದಿದೋಷ-ಜನ್ಯಾಸು । ಇತೋಽಪ್ಯಜ್ಞಾನೋಪಾದಾನಕತ್ವಂ ನ ದೋಷ ಇತಿ ಭಾವಃ । ತದದರ್ಶನಾತ್ ಅಪ್ರಾಮಾಣಕತ್ವಾದರ್ಶನಾತ್ । ಏತದುಭಯನಿದರ್ಶನೇನಾಪಿ ಅಜ್ಞಾನೋಪಾದಾನಕತ್ವಂ ನ ದೋಷ ಇತಿ ಭಾವಃ। ವಕ್ಷ್ಯಮಾಣಮೇವೇದಂ ಪ್ರಾಗಸ್ಮಾಭಿಃ ಕಿಂಚಿತ್ಪ್ರಸ್ತಾವಿತಮಿತಿ ದ್ರಷ್ಟವ್ಯಮ್ । ತತ್ ತಸ್ಮಾತ್ ಉಕ್ತಯುಕ್ತಿಜಾಲಾತ್ ॥ ೧೧೨೬ - ೧೧೨೯ ॥

**ವಿವರಣೆ-** ಅವಿದ್ಯೋಪಾದಾನಕತ್ವವು ದೋಷವಲ್ಲ ಎಂಬ ವಿಷಯದಲ್ಲಿ ಮೊದಲು ಹೇಳಿದ ಯುಕ್ತಿಗಳನ್ನೂ ಮತ್ತು ಹೊಸಯುಕ್ತಿಗಳನ್ನೂ ಸಂಗ್ರಹಿಸಿ ಶಿಷ್ಯರ ಬುದ್ಧ್ಯಾರೋಹವನ್ನು ಮಾಡುವುದಕ್ಕಾಗಿ ಇಲ್ಲಿ ಹೇಳುತ್ತಾರೆ.

**ಯದ್ ವೃತ್ತೌ ತನ್ನಿವೃತ್ತಿಸ್ತೇ ತನ್ನಾಶೋತ್ತರವರ್ತಿನೀ ।**
**ಯತಶ್ಚ ದೃಕ್ ತತಶ್ಚೈಷ ದೋಷಃ ಕಂ ದೂಷಯೇದ್ ವದ ॥ ೧೧೩೦ ॥**

**ಅಜ್ಞಾನದೋಷತಾವಾದಸ್ತನ್ನ ಖೇದಾಯ ಧೀಮತಾಮ್ ।**
**ಯತಃ ಕೇನಾಪ್ಯುಪಾಯೇನ ಜಗಜ್ಜ್ಞಾನೇ ನ ಹೀನತಾ ॥ ೧೧೩೧ ॥**

**ಪಶ್ಯ ಪ್ರಾಮಾಣಿಕತ್ವಾಖ್ಯಹೇತೋರ್ನೃಪಶಿಖಾಮಣೇಃ ।**
**ತರ್ಕಮಂತ್ರಿಬಲಾದೇವ ಪ್ರತ್ಯರ್ಥಿಮುಖಮೋಟನಮ್ ॥ ೧೧೩೨ ॥**

**ಅರ್ಥ-** ಯತ್ = ಯಾವ ಕಾರಣದಿಂದ, ವೃತ್ತೌ = ವೃತ್ತಿಯು ಇರುತ್ತಿರಲು, ತೇ = ನಿನಗೆ, ತನ್ನಿವೃತ್ತಿಃ = ಅಜ್ಞಾನನಿವೃತ್ತಿ ಉಂಟಾಗುತ್ತದೆಯೋ, ಯತಶ್ಚ = ಮತ್ತು ಯಾವ ಕಾರಣದಿಂದ, ದೃಕ್ = ಜ್ಞಾನವು, ತನ್ನಾಶೋತ್ತರವರ್ತಿನೀ = ಅವಿದ್ಯಾನಾಶೋತ್ತರ-ಕಾಲೀನವಾದುದೋ, ತತಃ = ಆದ್ದರಿಂದ, ಏಷ ದೋಷಃ = ಈ ಅವಿದ್ಯಾ ಎಂಬ ದೋಷವು, ಕಂ ದೂಷಯೇತ್ = ಏನನ್ನು ನಿರಾಕರಿಸುತ್ತದೆ (ಯಾವುದಕ್ಕೆ ದೂಷಣವಾಗುತ್ತದೆ) ಎಂದು, ವದ = ಹೇಳು. ತತಃ = ಆದ್ದರಿಂದ, ಅಜ್ಞಾನದೋಷತಾವಾದಃ = ಅಜ್ಞಾನಕ್ಕೆ ದೋಷತ್ವವನ್ನು ಹೇಳುವ ವಾದವು, ಧೀಮತಾಮ್ = ಮೇಧಾವಿಗಳಿಗೆ, ಖೇದಾಯ ನ = ಖೇದವನ್ನುಉಂಟುಮಾಡುವುದಿಲ್ಲ, ಯತಃ = ಏಕೆಂದರೆ, ಕೇನಾಪ್ಯುಪಾಯೇನ = ಯಾವ ರೀತಿಯಿಂದಲೂ, ಜಗತ್ ಜ್ಞಾನೇ = ಜಗತ್ ಜ್ಞಾನದಲ್ಲಿ, ಹೀನತಾ ನ = ಅಪ್ರಮಾಣ್ಯವು ಸಿದ್ಧವಾಗುವುದಿಲ್ಲ.

ನೃಪಶಿಖಾಮಣೇಃ = ನೃಪಶಿಖಾಮಣಿಯಾದ, ಪ್ರಾಮಾಣಿಕತ್ವಾಖ್ಯಹೇತೋಃ = ಪ್ರಾಮಾಣಿಕತ್ವರೂಪವಾದ ಹೇತುವು, ತರ್ಕಮಂತ್ರಿಬಲಾದೇವ= ತರ್ಕವೆಂಬ ಮಂತ್ರಿಯ ಬಲದಿಂದಲೇ, ಪ್ರತ್ಯರ್ಥಿಮುಖಮೋಟನಮ್ = ಶತ್ರುಗಳ ಮುಖವನ್ನು ಮುದ್ರಿಸುವುದನ್ನು, ಪಶ್ಯ = ನೋಡು.

**ಅನುವಾದ- ಯಾವ ಕಾರಣದಿಂದ ವೃತ್ತಿಯಿಂದ ಅಜ್ಞಾನವು ನಾಶವನ್ನು ಹೊಂದಿದ ಮೇಲೆ ಘಟಾದಿಜ್ಞಾನವು ಅಜ್ಞಾನನಾಶೋತ್ತರಭಾವಿಯಾಗುತ್ತದೆಯೋ, ಅದರಂತೆ ವೃತ್ತಿಯೂ ಅಜ್ಞಾನನಾಶಕವಾಗುತ್ತದೆಯೋ, ಆದ್ದರಿಂದ ಅಜ್ಞಾನರೂಪವಾದ ದೋಷವು ಯಾವ ಅನುಭವವನ್ನು ದೂಷಿಸುತ್ತದೆ ಎಂದು ಹೇಳು. ಆದ್ದರಿಂದ ಅಜ್ಞಾನಕ್ಕೆ ದೋಷತ್ವವನ್ನು ಹೇಳುವ ವಾದವು ಮೇಧಾವಿಗಳಿಗೆ ಖೇದವನ್ನು**

ಉಂಟುಮಾಡುವುದಿಲ್ಲ. ಏಕೆಂದರೆ, ಯಾವರೀತಿಯಿಂದಲೂ ಅದರಿಂದ ಜಗತ್‌ಜ್ಞಾನದಲ್ಲಿ ಅಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಪ್ರಾಮಾಣಿಕತ್ವವೆಂಬ ಹೇತುರೂಪವಾದ ನೃಪಶಿಖಾಮಣಿಯು ತರ್ಕವೆಂಬ ಮಂತ್ರಿಯ ಬಲದಿಂದ ತನ್ನ ಶತ್ರುಗಳ ಮುಖವನ್ನು ಮುದ್ರಿಸುವುದನ್ನು ನೋಡು.

**ಭಾವವಿಲಾಸಿನೀ–** ಕಂ ಅನುಭವವಮ್ । ಏಕಸ್ಯಾಜ್ಞಾನನಾಶಕತ್ವಾದಪರಸ್ಯ ತನ್ನಾಶೋತ್ತರ-ಕಾಲೀನತ್ವಾಚ್ಚಾಜ್ಞಾನಮೇವ ನ ತಯೋರ್ದೋಷಃ । ಅಜ್ಞಾನೋಪಾದಾನಕತ್ವಂ ತು ಸುತರಾಂ ನ ದೋಷ ಇತಿ ಭಾವಃ ॥ ೧೧೩೦-೧೧೩೨ ॥

**ವಿವರಣೆ-** ವೃತ್ತಿಯು ಅಜ್ಞಾನನಾಶಕವಾದುದರಿಂದ, ಚೈತನ್ಯವು ಅಜ್ಞಾನನಾಶೋತ್ತರ-ಕಾಲೀನವಾದುದರಿಂದ ಅಜ್ಞಾನವು ವೃತ್ತಿಗಾಗಲೀ, ಚೈತನ್ಯಕ್ಕಾಗಲೀ ದೋಷವಾಗುವುದಿಲ್ಲ. ಅಜ್ಞಾನವೇ ದೋಷವಾಗುವುದಿಲ್ಲವೆಂದಮೇಲೆ ಅಜ್ಞಾನೋಪಾದಾನಕತ್ವವು ಸುತರಾಂ ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

ಯತೋಽಜ್ಞಾನಸ್ಯೈವ ದೋಷಾಜ್ಜನ್ಮದೋಷೋ ನ ವಸ್ತುನಃ ।
ತಮಸೋ ನೀಲಿಮಾ ಯಸ್ಮಾತ್ ತಮಸ್ಯೇವ ಪ್ರಮೀಯತೇ ॥ ೧೧೩೩ ॥

**ಅರ್ಥ-** ಯತಃ = ಏಕೆಂದರೆ, ಅಜ್ಞಾನಸ್ಯೈವ ದೋಷಾತ್ = ಅಜ್ಞಾನರೂಪವಾದ ದೋಷದಿಂದ, ಜನ್ಮದೋಷಃ = ವಸ್ತುವಿನ ಜನ್ಮದಲ್ಲಿ ದೋಷವುಂಟಾಗುತ್ತದೆ, ವಸ್ತುನಃ ನ = ವಸ್ತುವಿನಲ್ಲಿ ದೋಷವುಂಟಾಗುವುದಿಲ್ಲ. ಯಸ್ಮಾತ್ = ಏಕೆಂದರೆ, ತಮಸಃ = ಅಂಧಕಾರದ, ನೀಲಿಮಾ = ನೀಲವರ್ಣವು, ತಮಸ್ಯೇವ = ಅಂಧಕಾರದಲ್ಲಿಯೇ, ಪ್ರಮೀಯತೇ = ಪ್ರಮಾರೂಪವಾದ ಜ್ಞಾನಕ್ಕೆ ವಿಷಯವಾಗುತ್ತದೆ.

**ಅನುವಾದ-** ಅಜ್ಞಾನರೂಪವಾದ ದೋಷವು ವಸ್ತುವಿನ ಜನ್ಮದಲ್ಲಿಯೇ ದೋಷವಾಗುತ್ತದೆಯೇ ಹೊರತು ವಸ್ತುವಿನ ಸ್ವರೂಪದಲ್ಲಿ ದೋಷವಾಗುವುದಿಲ್ಲ. ಏಕೆಂದರೆ, ಅಂಧಕಾರದ ನೀಲವರ್ಣವು ಅಂಧಕಾರದಲ್ಲಿಯೇ ತೋರುತ್ತದೆ.

**ಭಾವವಿಲಾಸಿನೀ–** ಅಜ್ಞಾನೋಪಾದಾನಕತ್ವಮನುಭವೇನ ದೋಷಃ । ಕಿಂತು ಜಾಯಮಾನ-ಕಾರ್ಯಸ್ಯ ತಾಮಸತ್ವಾಪಾದಕತಯಾ ತಜ್ಜನ್ಮನ್ಯೇವ ದೋಷಃ । ಅಜ್ಞಾನಾವೃತತ್ವಂ ತು ಪ್ರತಿ-ಬಂಧಕತಯಾಽನುಭವೇಽಪಿ ದೋಷ ಇತಿ ಸದೃಷ್ಟಾಂತಮುಪಪಾದಯತಿ ॥ ಯತ ಇತಿ ॥ ದೋಷಾತ್ ತಮೋರೂಪತ್ವದೋಷಾತ್ । ಜನ್ಮದೋಷಃ ಜಾಯಮಾನಕಾರ್ಯಜನ್ಮನಿ ಹೀನತೇತ್ಯರ್ಥಃ । ತಮಸ್ಯೇವ ತಮಸಿ ಸತ್ಯೇವ । ಅಜ್ಞಾನಮಜ್ಞಾನೋಪಾದಾನಕಕಾರ್ಯಾನುಭವೇನ ದೋಷ ಇತ್ಯತ್ರೇದಂ ನಿದರ್ಶನಮ್ ॥ ೧೧೩೩ ॥

**ವಿವರಣೆ-** ಅಜ್ಞಾನೋಪಾದಾನಕತ್ವವು ವಸ್ತುವಿನ ಅನುಭವದಲ್ಲಿ ದೋಷವಾಗುವುದಿಲ್ಲ. ಆದರೆ, ಹುಟ್ಟುವ ವಸ್ತುವಿಗೆ ತಾಮಸತ್ವವನ್ನು ತಂದುಕೊಡುವುದರಿಂದ ವಸ್ತುವಿನ ಜನ್ಮದಲ್ಲಿ

ದೋಷವಾಗುತ್ತದೆ. ಅಜ್ಞಾನಾವೃತತ್ವವಾದರೆ, ಜ್ಞಾನಪ್ರತಿಬಂಧಕವಾಗುವುದರಿಂದ ಅನುಭವದಲ್ಲಿಯೇ ದೋಷವಾಗುತ್ತದೆ ಎಂಬುದನ್ನು ದೃಷ್ಟಾಂತಪೂರ್ವಕವಾಗಿ ಇಲ್ಲಿ ಉಪಪಾದನೆ ಮಾಡುತ್ತಾರೆ. ಅಜ್ಞಾನವು ಅಜ್ಞಾನೋಪಾದಾನಕ ಕಾರ್ಯದ ಅನುಭವದಲ್ಲಿ ದೋಷವಾಗುವುದಿಲ್ಲ ಎಂಬ ವಿಷಯದಲ್ಲಿ ಅಂಧಕಾರದ ನೀಲವರ್ಣದ ಪ್ರತೀತಿಯು ದೃಷ್ಟಾಂತವಾಗಿ ಕೊಡಲ್ಪಟ್ಟಿದೆ. ಜನ್ಮದೋಷವೆಂದರೆ ಜಾಯಮಾನಕಾರ್ಯಜನ್ಮದಲ್ಲಿ ಹೀನತ್ವರೂಪವಾದ ದೋಷ ಎಂದು ಅರ್ಥ.

**ದೋಷೇಣಾಪಿಹಿತತ್ತ್ವಂ ತು ಸ್ಯಾದರ್ಥಸ್ಯಾಪಿ ದೂಷಣಮ್ ।**
**ತಮೋವೃತಘಟಾದೀನಾಂ ಯತೋ ನ ಸ್ಫುಟಮೀಕ್ಷಣಮ್ ॥ ೧೧೩೪ ॥**

**ಅರ್ಥ-** ದೋಷೇಣ ಅಪಿಹಿತತ್ತ್ವಂ ತು = ದೋಷದಿಂದ ಆವೃತವಾಗಿರುವಿಕೆಯು, ಅರ್ಥಸ್ಯ ದೂಷಣಮ್ ಅಪಿ = ಅರ್ಥ ದೂಷಣವೂ, ಸ್ಯಾತ್ = ಆಗುತ್ತದೆ, ಯತಃ = ಏಕೆಂದರೆ, ತಮೋವೃತಘಟಾದೀನಾಂ = ಅಂಧಕಾರಾವೃತ ಘಟಾದಿಗಳ, ಕ್ಷಣಮ್ = ದರ್ಶನವು, ಸ್ಫುಟಂ= ಸ್ಪಷ್ಟವಾಗಿ, ನ = ಆಗುವುದಿಲ್ಲ.

**ಅನುವಾದ- ದೋಷದಿಂದ ವಿಷಯವು ಆವೃತವಾದರೆ, ದೋಷವು ಅರ್ಥ ದೋಷವೂ ಆಗುತ್ತದೆ. ಏಕೆಂದರೆ, ಅಂಧಕಾರಾವೃತವಾದ ಘಟಾದಿಗಳ ಸ್ಪಷ್ಟವಾದ ದರ್ಶನವು ಉಂಟಾಗುವುದಿಲ್ಲ.**

**ಭಾವವಿಲಾಸಿನೀ– ದೋಷೇಣ ದೋಷರೂಪೇಣ । ಜ್ಞಾನಪ್ರತಿಬಂಧಕವಸ್ತುನೇತ್ಯರ್ಥಃ । ಅತ್ರಾಪಿ ದೃಷ್ಟಾಂತಮಾಹ - ತಮ ಇತಿ ॥ ೧೧೩೪ ॥**

**ಅತಸ್ತವೈಕ್ಯಧೀರೇವ ದ್ವೇಧಾಽಪ್ಯಾಸೀದ್ಧಿ ವಿಭ್ರಮಃ ।**
**ಯದೈಕ್ಯಾವೃತಿರಜ್ಞಾನಂ ತದ್ಧೀಶ್ಚಾಜ್ಞಾನಜಾ ತವ ॥ ೧೧೩೫ ॥**

**ಅನಾವೃತಂ ತು ತಮಸಾ ತವಾಜ್ಞಾನೇನ ಚಾಖಿಲಮ್ ।**
**ಜಡಂ ಜಗಜ್ಜಡೈರ್ಮಾನೈರಜ್ಞಾನಾನಾಶ್ರಯೈಃ ಶುಭೈಃ ।**
**ದೃಶ್ಯಮಾನಂ ಕಥಂ ಚ ಸ್ಯಾದಪ್ರಾಮಾಣಿಕಮುಚ್ಯತಾಮ್ ॥ ೧೧೩೬ ॥**

**ಕಿಂಚಾಜ್ಞಾನಸ್ಯ ಸತ್ಯತ್ವೇ ತದುಪಾದಾನಕಂ ಜಗತ್ ।**
**ಸತ್ಯಮೇವೇತಿ ಮಾನಾನಾಂ ಮಾನತಾಹೀನತಾ ಕುತಃ ॥ ೧೧೩೭ ॥**

**ಅರ್ಥ-** ಅತಃ = ಆದ್ದರಿಂದ, ತವೈಕ್ಯಧೀರೇವ = ನಿನ್ನ ಐಕ್ಯಜ್ಞಾನವೇ, ದ್ವೇಧಾಽಪಿ = ಎರಡು ರೀತಿಯಿಂದಲೂ, ವಿಭ್ರಮಃ ಆಸೀದ್ಧಿ = ಭ್ರಾಂತಿಯಾಯಿತಷ್ಟೇ? ಯತ್ = ಏಕೆಂದರೆ, ಅಜ್ಞಾನಂ = ಅಜ್ಞಾನವು, ಐಕ್ಯಾವೃತಿಃ = ಐಕ್ಯಕ್ಕೆ ಆವರಣವಾಗಿದೆ, ಚ = ಮತ್ತು, ತದ್ಧೀಃ = ಐಕ್ಯಜ್ಞಾನವೂ, ತವ = ನಿನಗೆ, ಅಜ್ಞಾನಜಾ = ಅಜ್ಞಾನಜನ್ಯವಾಗಿದೆ.

ತವ = ನಿನ್ನ, ಅಜ್ಞಾನೇನ = ಅಜ್ಞಾನರೂಪವಾದ, ತಮಸಾ = ಅಂಧಕಾರದಿಂದ, ಅನಾವೃತಂ = ಅನಾವೃತವಾದ, ಅಖಿಲಮ್ = ಸಮಗ್ರವಾದ, ಜಡಂ ಜಗತ್ = ಜಡರೂಪವಾದ ಜಗತ್ತು, ಅಜ್ಞಾನಾನಾಶ್ರಯೈಃ = ಅಜ್ಞಾನ ಅನಾಶ್ರಯವಾದ, ಶುಭೈಃ = ಆದ್ದರಿಂದಲೇ ಶುಭವಾದ, ಜಡೈರ್ಮಾನೈಃ = ಜಡವಾದ ಪ್ರಮಾಣಗಳಿಂದ, ದೃಶ್ಯಮಾನಂ = ದೃಶ್ಯಮಾನವಾದುದು, ಕಥಂ ಚ = ಹೇಗಾದರೂ, ಅಪ್ರಾಮಾಣಿಕಂ ಸ್ಯಾತ್ = ಅಪ್ರಾಮಾಣಿಕವಾಗುತ್ತದೆ ಎಂದು, ಉಚ್ಯತಾಮ್ = ಹೇಳು.

ಕಿಂಚ = ಮತ್ತು, ಅಜ್ಞಾನಸ್ಯ ಸತ್ಯತ್ವೇ = ಅಜ್ಞಾನವು ಸತ್ಯವಾದರೆ, ತದುಪಾದಾನಕಂ ಜಗತ್ = ಅಜ್ಞಾನೋಪಾದಾನಕವಾದ ಜಗತ್ತು,ಸತ್ಯಮೇವೇತಿ = ಸತ್ಯವೇ ಆಗುವ ಕಾರಣದಿಂದ, ಮಾನಾನಾಂ = ಜಗತ್‌ಸತ್ಯತ್ವಸಾಧಕಪ್ರಮಾಣಗಳಿಗೆ, ಮಾನತಾಹೀನತಾ = ಪ್ರಾಮಾಣ್ಯಾಭಾವವು, ಕುತಃ = ಹೇಗೆ ಉಂಟಾಗುತ್ತದೆ?

**ಅನುವಾದ-** ಆದ್ದರಿಂದ ನಿನ್ನ ಐಕ್ಯಪ್ರತೀತಿಯೇ ಎರಡು ರೀತಿಯಿಂದಲೂ ಭ್ರಾಂತಿಯಾಯಿತು. ಏಕೆಂದರೆ, ಐಕ್ಯವು ಅಜ್ಞಾನದಿಂದ ಆವೃತವಾಗಿದೆ ಮತ್ತು ಐಕ್ಯಜ್ಞಾನವೂ ಕೂಡ ನಿನ್ನ ರೀತಿಯಲ್ಲಿ ಅಜ್ಞಾನಜನ್ಯವಾಗಿದೆ. ನೀನು ಅಂಗೀಕರಿಸಿದ ಅಜ್ಞಾನರೂಪವಾದ ತಮಸ್ಸಿನಿಂದ ಅನಾವೃತವಾದ, ಅಜ್ಞಾನಾಶ್ರಯವಲ್ಲದ ಶುಭಜಡಪ್ರಮಾಣಗಳಿಂದ ದೃಶ್ಯಮಾನವಾದ, ಜಡರೂಪವಾದ, ಈ ಸಮಸ್ತವಾದ ಜಗತ್ತು ಹೇಗೆ ಅಪ್ರಾಮಾಣಿಕವಾಗುತ್ತದೆ ಎಂದು ಹೇಳು. ಮತ್ತು ಅಜ್ಞಾನವು ಸತ್ಯವಾದರೆ, ತದುಪಾದಾನಕವಾದ ಜಗತ್ತು ಸತ್ಯವೇ ಆಗುವುದರಿಂದ ವಿಶ್ವಸತ್ಯತ್ವಸಾಧಕ ಪ್ರಮಾಣಗಳಿಗೆ ಅಪ್ರಾಮಾಣ್ಯವು ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ–** ದ್ವೇಧೇತ್ಯುಕ್ತಪ್ರಕಾರದ್ವಯಂ ದರ್ಶಯತಿ ॥ **ಯದಿತಿ** ॥ ಯಸ್ಮಾದಿತ್ಯರ್ಥಃ । ತದ್ಧೀಃ ಐಕ್ಯಧೀಃ । ತವ ಮತೇ ॥ ೧೧೩೫-೧೧೩೭ ॥

**ಅತೋ ಮಾನಾಂತರೇಣಾದೌ ಮಿಥ್ಯಾತ್ವಮಖಿಲಸ್ಯ ಚ ।**
**ವಕ್ತವ್ಯಮಾಸೀತ್ ತೇನಾಯಂ ತ್ಯಕ್ತವ್ಯೋ ಭಾಷ್ಯಕೃತ್ ತವ ॥ ೧೧೩೮ ॥**

**ಅರ್ಥ-** ಅತಃ = ಆದ್ದರಿಂದ, ಆದೌ = ಮೊದಲಿನಲ್ಲಿಯೇ, ಮಾನಾಂತರೇಣ = ಬೇರೆ ಪ್ರಮಾಣದಿಂದ, ಅಖಿಲಸ್ಯ = ಸಮಸ್ತವಾದ ಜಗತ್ತಿಗೆ, ಮಿಥ್ಯಾತ್ವಂ = ಮಿಥ್ಯಾತ್ವವು, ವಕ್ತವ್ಯಮಾಸೀತ್ = ಹೇಳಲ್ಪಡಬೇಕಾಗಿದ್ದಿತು, ತೇನ = ಆ ಕಾರಣದಿಂದ, ತವ = ನಿನ್ನ, ಭಾಷ್ಯಕೃತ್ = ಭಾಷ್ಯಕಾರನು, ತ್ಯಕ್ತವ್ಯಃ = ಪರಿತ್ಯಜಿಸಲ್ಪಡಬೇಕು.

**ಅನುವಾದ-** ಆದ್ದರಿಂದ ಸಮಸ್ತವಾದ ಜಗತ್ತಿಗೆ ಪ್ರಮಾಣಾಂತರದಿಂದಲೇ ಮೊದಲು ಮಿಥ್ಯಾತ್ವವನ್ನು ಹೇಳಬೇಕು. ಆದ್ದರಿಂದ ಮಿಥ್ಯಾತ್ವಸಾಧಕವಲ್ಲದ ಅವಿದ್ಯಾ-

ವದ್ವಿಷಯತ್ವರೂಪವಾದ ದೋಷವನ್ನು ಹೇಳುವ ನಿನ್ನ ಭಾಷ್ಯಕಾರನು ಪರಿತ್ಯಜಿಸಲ್ಪಡಬೇಕು.

**ಭಾವವಿಲಾಸಿನೀ–** ಅಯಮ್ ಅವಿದ್ಯಾವದ್ವಿಷಯತ್ವಸ್ಯೈವ ದೋಷತ್ವಂ ವದನ್ ॥ ೧೧೩೮ ॥

**ಯೋಽವಿದ್ಯಾವದ್ವಿಷಯತಾಂ ವ್ಯರ್ಥಮಾದತ್ತ ಮತ್ತವತ್ ।**
**ಅನ್ಯೋನ್ಯಾಶ್ರಯದೋಷಂ ಚ ಯೋಽಸೌ ಭೂಷಾಮಮನ್ಯತ ॥ ೧೧೩೯॥**

**ಅರ್ಥ–** ಏಕೆಂದರೆ, ಯಃ = ಯಾವ ನಿನ್ನ ಗುರುವು, ವ್ಯರ್ಥಮ್ = ನಿಷ್ಪ್ರಯೋಜನವಾದ, ಅವಿದ್ಯಾವದ್ವಿಷಯತಾಂ = ಅವಿದ್ಯಾವದ್ವಿಷಯತ್ವವನ್ನು, ಮತ್ತವತ್ = ಮತ್ತನಂತೆ, ಆದತ್ತ = ಸ್ವೀಕರಿಸಿದನು, ಚ = ಮತ್ತು, ಯಃ ಅಸೌ = ಯಾವ ನಿನ್ನ ಈ ಗುರುವು, ಅನ್ಯೋನ್ಯಾಶ್ರಯದೋಷಂ = ಅನ್ಯೋನ್ಯಾಶ್ರಯ- ದೋಷವನ್ನು, ಭೂಷಾಮ್ = ಅಲಂಕಾರವೆಂದು, ಅಮನ್ಯತ = ತಿಳಿದನು.

**ಅನುವಾದ–** ಯಾವ ನಿನ್ನ ಈ ಗುರುವು ನಿಷ್ಪ್ರಯೋಜನವಾದ ಅವಿದ್ಯಾ-ವದ್ವಿಷಯತ್ವವನ್ನು ಮತ್ತನಂತೆ ಸ್ವೀಕರಿಸಿದನೋ ಮತ್ತು ಯಾವ ನಿನ್ನ ಈ ಗುರುವು ಅನ್ಯೋನ್ಯಾಶ್ರಯದೋಷವನ್ನು ಭೂಷಣವೆಂದು ತಿಳಿದನೋ ಅಂತಹ ನಿನ್ನ ಗುರುವು ಪರಿತ್ಯಜಿಸಲ್ಪಡಬೇಕು.

**ಮಿಥ್ಯಾತ್ವೇ ಜಗತಸ್ಸಿದ್ಧೇ ಮಾನಾನಾಂ ಹೀನತಾ ಭವೇತ್ ।**
**ವಿರೋಧಿಮಾನಹೈನ್ಯೇ ಚ ಮಿಥ್ಯಾತ್ವಂ ಜಗತೋ ಯತಃ ॥ ೧೧೪೦ ॥**

ಜಗತ್ = ಜಗತ್ತಿಗೆ, ಮಿಥ್ಯಾತ್ವೇ ಸಿದ್ಧೇ = ಮಿಥ್ಯಾತ್ವವು ಸಿದ್ಧವಾದರೆ, ಮಾನಾನಾಂ = ಜಗತ್ಸತ್ಯತ್ವವಿಷಯಕ ಪ್ರಮಾಣಗಳಿಗೆ, ಹೀನತಾ = ಅಪ್ರಾಮಾಣ್ಯವು, ಭವೇತ್ = ಉಂಟಾಗುತ್ತದೆ. ವಿರೋಧಿಮಾನಹೈನ್ಯೇ = ಮಿಥ್ಯಾತ್ವ-ವಿರೋಧಿಯಾದ ಪ್ರಾಮಾಣಗಳಿಗೆ ಅಪ್ರಾಮಾಣ್ಯವು ಉಂಟಾದರೆ, ಜಗತಃ = ಜಗತ್ತಿಗೆ, ಮಿಥ್ಯಾತ್ವಂ ಚ = ಮಿಥ್ಯಾತ್ವವಾದರೂ ಕೂಡ ಸಿದ್ಧವಾಗುತ್ತದೆ.

**ಅನುವಾದ–** ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾದರೆ ಜಗತ್ಸತ್ಯತ್ವವಿಷಯಕಪ್ರಮಾಣಗಳಿಗೆ ಅಪ್ರಾಮಾಣ್ಯವು ಸಿದ್ಧವಾಗುತ್ತದೆ. ಮಿಥ್ಯಾತ್ವವಿರೋಧಿಯಾದ ಜಗದ್ವಿಷಯಕ ಪ್ರಮಾಣಗಳಿಗೆ ಅಪ್ರಾಮಾಣ್ಯವು ಸಿದ್ಧವಾದರೆ ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತದೇವ ದರ್ಶಯತಿ ॥ ಯ ಇತಿ ॥ ವ್ಯರ್ಥಮಿತಿ ಕ್ರಿಯಾವಿಶೇಷಣಮ್ । ಸರ್ವಮಿಥ್ಯಾತ್ವಸಾಧಕಪ್ರಮಾಣಾಂತರಂ ವಿನಾ ಸ್ವಸ್ಯೈವ ಮಿಥ್ಯಾತ್ವಾಸಂಪಾದಕತ್ವಾದಿತಿ ಭಾವಃ ॥ ೧೧೩೯-೧೧೪೦ ॥

**ವಿವರಣೆ-** ಇಂತಹ ಅನ್ಯೋನ್ಯಾಶ್ರಯದೋಷವನ್ನು ನಿನ್ನ ಗುರುವು ಗಮನಿಸಲಿಲ್ಲ ಎಂದು ಅಭಿಪ್ರಾಯ.

**ಅತಃ ಪ್ರಾಮಾಣಿಕತ್ವಾಖ್ಯಹೇತುರ್ವಿಜಯತೇತರಾಮ್ ।**
**ಪರನ್ಯಾಯೇನೈವ ಪರಂ ಯೋ ಹಂತಿ ಸ್ಮ ರಣಾಂಕಣೇ ॥ ೧೧೪೧ ॥**

**ಅರ್ಥ-** ಅತಃ = ತನ್ನ ವಿಷಯವು ಮಿಥ್ಯೆಯಾದುದರಿಂದಲೇ ಪ್ರಮಾಣಗಳಿಗೆ ಅಪ್ರಾಮಾಣ್ಯವನ್ನು ಸಾಧನೆಮಾಡಿದರೆ ಅನ್ಯೋನ್ಯಾಶ್ರಯದೋಷವು ಬರುವುದರಿಂದ, ಪ್ರಾಮಾಣಿಕತ್ವಾಖ್ಯಹೇತುಃ = ಪ್ರಾಮಾಣಿಕತ್ವರೂಪವಾದ ಹೇತುವು, ವಿಜಯತೇತರಾಮ್ = ಅತ್ಯಂತ ಉತ್ಕೃಷ್ಟವಾಗಿದೆ, ಯಃ = ಯಾವ ಆ ಹೇತುವು, ಪರನ್ಯಾಯೇನೈವ = ಪರನ್ಯಾಯದಿಂದಲೇ, ರಣಾಂಕಣೇ = ವಾದರಣಾಂಗಣದಲ್ಲಿ, ಪರಂ = ಪರನನ್ನು, ಹಂತಿ ಸ್ಮ= ಕೊಲ್ಲುವುದಷ್ಟೇ ?

**ಅನುವಾದ-** ಸ್ವವಿಷಯಮಿಥ್ಯಾತ್ವದಿಂದಲೇ ಪ್ರಮಾಣಗಳಿಗೆ ಅಪ್ರಾಮಾಣ್ಯವನ್ನು ಸಾಧಿಸಿದರೆ ಅನ್ಯೋನ್ಯಾಶ್ರಯದೋಷವು ಬರುವುದರಿಂದ, ಪ್ರಾಮಾಣಿಕತ್ವರೂಪವಾದ ಹೇತುವು ಅತ್ಯಂತ ಉತ್ಕೃಷ್ಟವಾಗಿದೆ. ಯಾವ ಹೇತುವು ಅವಿದ್ಯಾವದ್ವಿಷಯಕತ್ವರೂಪವಾದ ಪರನ್ಯಾಯದಿಂದಲೇ ಐಕ್ಯವಾದಿಯಾದ ಪರನನ್ನು ವಾದರಣಾಂಗಣದಲ್ಲಿ ಕೊಲ್ಲುತ್ತದೆ?

**ಭಾವವಿಲಾಸಿನೀ-** ಅತಃ ಸ್ವವಿಷಯಮಿಥ್ಯಾತ್ವೇನೈವ ಪ್ರಮಾಣಾನಾಮ ಪ್ರಮಾಣ್ಯಸಾಧನೇಽನ್ಯೋನ್ಯಾಶ್ರಯಾತ್ । ಪರನ್ಯಾಯೇನ ಪರೋದೀರಿತಾವಿದ್ಯಾವದ್ವಿಷಯಕತ್ವಾಖ್ಯನ್ಯಾಯೇನ । ಪರಮ್ ಐಕ್ಯವಾದಿನಮ್ । ರಣಾಂಕಣೇ ವಾದಯುದ್ಧಾಂಕಣೇ । ಸ್ವೋಪರಿಪತದಾಯುಧಂ ಪರಸ್ಯೈವೋಪರಿಪಾತಯನ್ ಭಟೋಽತ್ರ ನಿದರ್ಶನಮಿತಿ ಸೂಚನಾಯ ರಣಾಂಕಣ ಇತ್ಯುಕ್ತಮ್ ॥ ೧೧೪೧ ॥

**ವಿವರಣೆ-** ತನ್ನ ಮೇಲೆ ಬೀಳುವ ಆಯುಧವನ್ನು ಪರನ ತಲೆಯ ಮೇಲೆ ಬೀಳಿಸುವ ಭಟನು ಇಲ್ಲಿ ದೃಷ್ಟಾಂತವಾಗಿದ್ದಾನೆ ಎಂದು ಸೂಚಿಸಲು ರಣಾಂಕಣೇ ಎಂದು ಹೇಳಿದ್ದಾರೆ. ಪರೋದೀರಿತವಾದ ಅವಿದ್ಯಾವದ್ವಿಷಯಕತ್ವರೂಪವಾದ ಆಯುಧ ಇದು ಪರನಿಗೇ ಪ್ರತಿಕೂಲವಾಗಿದೆ ಎಂದು ಅಭಿಪ್ರಾಯ.

**ಭೇದೇಶಧರ್ಮವಿಶ್ವಾಖ್ಯತ್ರಿಲೋಕೀಸತ್ತ್ವರಕ್ಷಣೇ ।**
**ಪ್ರಾಮಾಣಿಕತ್ವಹೇತುಸ್ತಜ್ಜಂಭಾರಿರಿವ ಜೃಂಭತೇ ॥ ೧೧೪೨ ॥**

**ಅರ್ಥ-** ತತ್ = ಆ ಕಾರಣದಿಂದ, ಭೇದೇಶಧರ್ಮವಿಶ್ವಾಖ್ಯತ್ರಿಲೋಕೀಸತ್ತ್ವರಕ್ಷಣೇ= ಭೇದ, ಈಶಧರ್ಮವಾದ ಸರ್ವಜ್ಞತ್ವಾದಿಗಳು ಮತ್ತು ಜಗತ್ತು ಏತದ್ರೂಪವಾದ ಮೂರು

ಲೋಕಗಳ ಸತ್ಯತ್ವವನ್ನು ರಕ್ಷಣೆಮಾಡುವ ವಿಷಯದಲ್ಲಿ, ಪ್ರಾಮಾಣಿಕತ್ವಹೇತುಃ= ಪ್ರಾಮಾಣಿಕತ್ವ ಎಂಬ ಹೇತುವು, ಜಂಭಾರಿರಿವ= ಇಂದ್ರನಂತೆ, ಜೃಂಭತೆ= ಶಕ್ತಿಯುತವಾಗಿ, ಅಭಿವೃದ್ಧಿಯನ್ನು ಹೊಂದಿದೆ.

**ಅನುವಾದ-** ಭೇದ, ಈಶಧರ್ಮವಾದ ಸರ್ವಜ್ಞತ್ವಾದಿಗಳು ಮತ್ತು ಪ್ರಪಂಚರೂಪವಾದ ಮೂರು ಲೋಕಗಳನ್ನು ರಕ್ಷಿಸುವ ವಿಷಯದಲ್ಲಿ ಪ್ರಾಮಾಣಿಕತ್ವ ಹೇತುವು ಮೂರು ಲೋಕಗಳನ್ನು ರಕ್ಷಿಸುವ ಇಂದ್ರನಂತೆ ಮೆರೆಯುತ್ತಿದೆ.

**ಭಾವವಿಲಾಸಿನೀ-** ಸತ್ತ್ವಂ ಸತ್ಯತ್ವಂ ಜೀವೇಶ್ವರಭೇದಸತ್ಯತ್ವೇ ಸಾರ್ವಜ್ಞಾದಿಭಗವದ್ಧರ್ಮಸತ್ಯತ್ವೇ ವಿಶ್ವಸತ್ಯತ್ವೇ ಚಾಯಮೇವ ಹೇತುಃ ಪ್ರಯೋಕ್ತುಂ ಶಕ್ಯತ ಇತಿ ಭಾವಃ । ಉಪಾಸನಾರ್ಥಂ ಭೇದಸ್ಯ ಭಗವದ್ಧರ್ಮಾಣಾಂ ಚ ಶ್ರುತ್ಯೈವ ಸಮರ್ಥಿತತ್ವಸ್ಯ ಪರೇಣಾಪ್ಯಂಗೀಕಾರಾತ್ । ತತ್ರಾಪಿ ಹೇತೋರಸಿದ್ಧಿಃ ॥ ೧೧೪೨ ॥

**ವಿವರಣೆ-** ಭೇದಗಳು ಮತ್ತು ಭಗವದ್ಧರ್ಮಗಳು ಉಪಾಸನೆಗಾಗಿ ವೇದದಲ್ಲಿಯೇ ಹೇಳಲ್ಪಟ್ಟಿವೆ ಎಂದು ಪರನು ಅಂಗೀಕರಿಸಿರುವುದರಿಂದ ಪ್ರಾಮಾಣಿಕತ್ವರೂಪವಾದ ಹೇತುವು ಪರನಿಗೂ ಸಮ್ಮತವಾದುದು. ಆದ್ದರಿಂದ ಹೇತುವಿಗೆ ಅಸಿದ್ಧಿದೋಷವಿಲ್ಲ. ಎಂದರೆ ಪ್ರಾಮಾಣಿಕತ್ವರೂಪವಾದ ಹೇತುವಿನಿಂದ ಭೇದವನ್ನೂ, ಸರ್ವಜ್ಞತ್ವಾದಿಧರ್ಮಗಳನ್ನೂ, ಜಗತ್‌ಸತ್ಯತ್ವವನ್ನೂ ಸಾಧನೆಮಾಡಬಹುದು ಎಂದು ಅಭಿಪ್ರಾಯ.

ಯದಿ ಮಿಥ್ಯಾ ಜಗತ್ಸರ್ವಂ ಕಥಮರ್ಥಕ್ರಿಯಾ ತತಃ ।
ಮರೀಚಿಕಾಜಲೈಃ ಕಿಂ ಸ್ಯಾದ್ ಧಾವತಸ್ತಡ್‌ವಿಮೋಚನಮ್ ॥ ೧೧೪೩ ॥

ಜಲಸ್ಯ ಮುಖ್ಯಕಾರ್ಯಂ ಹಿ ಪಿಪಾಸಾಶಮನಂ ವಿದುಃ ।
ಮರೀಚಿಕಾಜಲೇ ಕ್ವಾಪಿ ಕದಾಪಿ ನ ಕುತೋಽಸ್ತಿ ತತ್ ॥ ೧೧೪೪ ॥

ಅತಸ್ತ್ವಯಾಽಪಿ ವಕ್ತವ್ಯಂ ಮಿಥ್ಯಾತ್ವಾದೇವ ಕೇವಲಮ್ ।
ನಾಭೂದಿತಿ ತದಾ ಸಿದ್ಧಂ ತವಾಪಿ ಚ ಮಮಾಪಿ ಚ ।
ಮಿಥ್ಯಾಭೂತಂ ಸ್ವಕ್ರಿಯಾಯಾಮಶಕ್ತಮಿತಿ ಸುಸ್ಫುಟಮ್ ॥ ೧೧೪೫ ॥

**ಅರ್ಥ-** ಯದಿ = ಒಂದು ಪಕ್ಷ, ಸರ್ವಂ ಜಗತ್ = ಎಲ್ಲ ಜಗತ್ತು, ಮಿಥ್ಯಾ = ಮಿಥ್ಯೆಯಾದರೆ, ತತಃ = ಆದರಿಂದ, ಅರ್ಥಕ್ರಿಯಾ = ಅರ್ಥಕ್ರಿಯೆಯು, ಕಥಮ್ = ಹೇಗೆ ಉಂಟಾಗುತ್ತದೆ?

ಧಾವತಃ = ಓಡುವವನಿಗೆ, ಮರೀಚಿಕಾಜಲೈಃ = ಮರೀಚಿಕಾಜಲದಿಂದ, ತಡ್ ವಿಮೋಚನಮ್ = ತೃಷಾನಿವೃತ್ತಿಯು, ಸ್ಯಾತ್ ಕಿಂ = ಆಗುತ್ತದೆಯೇ?

ಜಲಸ್ಯ = ಜಲಕ್ಕೆ, ಮುಖ್ಯಕಾರ್ಯಂ = ಮುಖ್ಯಕಾರ್ಯವೆಂದರೆ, ಪಿಪಾಸಾಶಮನಂ = ತೃಷಾನಿವೃತ್ತಿ ಎಂದು, ವಿದುಃ ಹಿ = ವಿದು ತಿಳಿದಿರುವರಷ್ಟೇ? ಮರೀಚಿಕಾಜಲೇ = ಮರೀಚಿಕಾಜಲದಲ್ಲಿ, ಕ್ವಾಪಿ = ಎಲ್ಲಿಯೂ, ಕದಾಪಿ = ಯಾವಾಗಲೂ, ಕುತಃ = ಯಾವಕಾರಣದಿಂದಲೂ, ತತ್ = ಆ ಪಿಪಾಸಾಉಪಶಮನವು, ನಾಸ್ತಿ = ಇಲ್ಲ.

ಅತಃ = ಆದ್ದರಿಂದ, ಕೇವಲಮ್ = ಕೇವಲ, ಮಿಥ್ಯಾತ್ವಾದೇವ = ಮಿಥ್ಯಾತ್ವವಿರುವ ಕಾರಣದಿಂದಲೇ, ನಾಭೂತ್ = ತೃಷಾಶಮನವು ಆಗಲಿಲ್ಲ, ಇತಿ = ಎಂದು, ತ್ವಯಾಽಪಿ ವಕ್ತವ್ಯಂ = ನಿನ್ನಿಂದಲೂ ಹೇಳಲ್ಪಡಬೇಕು, ತದಾ = ಆಗ, ಮಿಥ್ಯಾಭೂತಂ = ಮಿಥ್ಯಾಭೂತವಾದ ವಸ್ತುವು, ಸ್ವಕ್ರಿಯಾಯಾಮ್ = ತನಗೆ ಯೋಗ್ಯವಾದ ಕಾರ್ಯವನ್ನುಂಟುಮಾಡಲು, ಅಶಕ್ತಮ್ ಇತಿ = ಅಸಮರ್ಥವೆಂದು, ಸುಸ್ಫುಟಮ್ = ಅತ್ಯಂತ ಸ್ಪಷ್ಟವಾಗಿ, ತವಾಪಿ ಚ = ನಿನಗೂ, ಮಮಾಪಿ ಚ = ಮತ್ತು ನನಗೂ, ಸಿದ್ಧಂ = ಸಿದ್ಧವಾಯಿತು.

**ಅನುವಾದ-** ಒಂದು ಪಕ್ಷ ಜಗತ್ತೆಲ್ಲವೂ ಮಿಥ್ಯೆಯಾದರೆ ಅದರಿಂದ ಅರ್ಥಕ್ರಿಯೆಯು ಹೇಗೆ ಉಂಟಾಗುತ್ತದೆ? ಓಡುವವನಿಗೆ ಮರೀಚಿಕಾಜಲದಿಂದ ತೃಷಾನಿವೃತ್ತಿ ಉಂಟಾಗುತ್ತದೆಯೇ? ಜಲದ ಮುಖ್ಯಕಾರ್ಯವೆಂದರೆ ಪಿಪಾಸೋಪಶಮನವೆಂದು ತಿಳಿಯುತ್ತಾರೆ. ಮರೀಚಿಕಾಜಲದಲ್ಲಿ ಎಲ್ಲಿಯೂ ಯಾವಾಗಲೂ ಮತ್ತು ಯಾವ ಕಾರಣದಿಂದಲೂ ಪಿಪಾಸಾನಿವೃತ್ತಕತ್ವವಿಲ್ಲ. ಆದ್ದರಿಂದ ನೀನೂ ಸಹ ಮರೀಚಿಕಾಜಲವು ಮಿಥ್ಯೆಯಾದುದರಿಂದಲೇ ಪಿಪಾಲಾನಿವೃತ್ತಿಯಾಗಲಿಲ್ಲವೆಂದು ಹೇಳಬೇಕು. ಆಗ ನಿನಗೂ ಮತ್ತು ನನಗೂ ಬಹಳ ಸ್ಪಷ್ಟವಾಗಿ ಮಿಥ್ಯಾವಸ್ತುವಿಗೆ ಅರ್ಥಕ್ರಿಯಾಶಕ್ತಿ ಇಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಪ್ರಾಗನುಕೂಲತರ್ಕಾ ಉಕ್ತಾಃ । ಇದಾನೀಂ ವಿಪಕ್ಷೇ ಬಾಧಕತರ್ಕಂ ಚಾಹ - **ಯದೀತಿ** ॥ ತತಃ ಜಗತಃ । ತತ್ರ ನಿದರ್ಶನಮಾಹ - **ಮರೀಚಿಕೇತಿ** ॥ ಭ್ರಾಂತಿ-ಕಾರ್ಯಪ್ರವೃತ್ತ್ಯಾದಿಸದ್ಭಾವೇಽಪಿ ಮಿಥ್ಯಾತ್ವಪ್ರಯುಕ್ತಾರ್ಥಕಾರ್ಯಾಭಾವಸೂಚನಾಯ ತೃಡ್ವಿಮೋಚನಮಿತ್ಯುಕ್ತಮ್ । ಅನೇನ ಯದಿ ಜಗನ್ಮಿಥ್ಯಾ ಸ್ಯಾತ್ ತದಾಽರ್ಥಕ್ರಿಯಾಕಾರಿ ನ ಸ್ಯಾತ್ । ಯಥಾ ಮರೀಚಿಕಾಜಲಮ್ । ಭವತಿ ಚಾರ್ಥಕ್ರಿಯಾಕಾರಿ ತಸ್ಮಾನ್ನ ಮಿಥ್ಯೇತಿ ಮಿಥ್ಯಾತ್ವೇ ಬಾಧಕಸ್ತರ್ಕ ಉಕ್ತ ಇತಿ ಜ್ಞಾತವ್ಯಮ್ ॥ ೧೧೪೩-೧೧೪೫ ॥

**ವಿವರಣೆ-** ಮೊದಲು ಸತ್ಯತ್ವಸಾಧಕ ಅನುಮಾನಗಳಿಗೆ ಅನುಕೂಲತರ್ಕಗಳನ್ನು ಹೇಳಿದರು. ಈಗ ವಿಪಕ್ಷದಲ್ಲಿ ಬಾಧಕತರ್ಕಗಳನ್ನು ಹೇಳುತ್ತಾರೆ. ಜಗತ್ತಿಗೆ ಸತ್ಯತ್ವವನ್ನು ಅಂಗೀಕರಿಸದಿದ್ದರೆ, ಮಿಥ್ಯಾತ್ವವನ್ನು ಅಂಗೀಕರಿಸಬೇಕು. ಜಗತ್ತಿಗೆ ಮಿಥ್ಯಾತ್ವವಿದ್ದರೆ, ಅದು ಅರ್ಥಕ್ರಿಯಾಕಾರಿಯಾಗಲಾರದು ಎಂಬ ವಿಪಕ್ಷಬಾಧಕತರ್ಕವು ನಮ್ಮ ಅನುಮಾನಕ್ಕೆ

ಸಹಕಾರಿಯಾಗಿದೆ. 'ಜಗತ್ ಯದಿ ಮಿಥ್ಯಾಸ್ಯಾತ್ ತರ್ಹಿ ಅರ್ಥಕ್ರಿಯಾಕಾರಿ ನ ಸ್ಯಾತ್, ಭವತಿ ಚ ಅರ್ಥಕ್ರಿಯಾಕಾರಿ ತಸ್ಮಾನ್ ನ ಮಿಥ್ಯಾ' ಎಂದು ತರ್ಕವು ವಿಪರ್ಯಯದಲ್ಲಿ ಪರ್ಯವಸಾನವನ್ನು ಹೊಂದುವುದರಿಂದ ವಿಪಕ್ಷಕ್ಕೆ ಬಾಧಕವಾಗಿದೆ ಎಂದು ಅಭಿಪ್ರಾಯ.

ಪ್ರಾತಿಭಾಸಿಕತ್ವೈವಾರ್ಥಕ್ರಿಯಾಯಾ ಘಾತಿಕಾ ಯದಿ ।
ಪ್ರತಿಭಾಸಶರೀರತ್ವಂ ತನ್ಮಾತ್ರಾಕಾರತಾಽಥವಾ ॥ ೧೧೪೬ ॥

ಇದಾನೀಂ ಬಾಧ್ಯತಾ ವಾ ಸ್ಯಾತ್ತತ್ರ ನಾದ್ಯೋಽರ್ಥಘಾತಕಃ ।
ಜ್ಞಾನಾತ್ ಸ್ವಾರ್ಥಕ್ರಿಯಾದೃಷ್ಟೇಃ ದ್ವಿತೀಯೇಽಪ್ಯರ್ಥ ಏವ ಹಿ ॥ ೧೧೪೭ ॥

ವ್ಯಾವರ್ತ್ಯೋ ಮಾತ್ರಶಬ್ದೇನ ತತೋಽರ್ಥಾಭಾವಲಕ್ಷಣಮ್ ।
ಮಿಥ್ಯಾತ್ವಮೇವ ಕಾರ್ಯಸ್ಯ ವಿಘಾತಕಮಭೂದ್ಬಲಾತ್ ॥ ೧೧೪೮ ॥

**ಅರ್ಥ-** ಯದಿ = ಒಂದುಪಕ್ಷ, ಪ್ರಾತಿಭಾಸಿಕತ್ವೈವ = ಪ್ರಾತಿಭಾಸಿಕತ್ವವೇ, ಅರ್ಥಕ್ರಿಯಾಯಾ = ಅರ್ಥಕ್ರಿಯೆಗೆ, ಘಾತಿಕಾ = ನಾಶಕವೆಂದು ಒಪ್ಪುವುದಾದರೆ, ಪ್ರತಿಭಾಸಶರೀರತ್ವಂ = ಪ್ರಾತಿಭಾಸಿಕತ್ವವು ಪ್ರತಿಭಾಸಸ್ವರೂಪತ್ವವೋ, ಅಥವಾ = ಅಥವಾ, ತನ್ಮಾತ್ರಾಕಾರತಾ= ಪ್ರತಿಭಾಸಾಮಾತ್ರಾಕಾರತ್ವವೋ,

ವಾ = ಅಥವಾ, ಇದಾನೀಂ ಬಾಧ್ಯತಾ = ಈಗಲೇ ಎಂದರೆ ಬ್ರಹ್ಮಜ್ಞಾನಕ್ಕಿಂತ ಮೊದಲೇ ಬಾಧ್ಯತ್ವರೂಪವೋ, ಸ್ಯಾತ್ = ಆಗಬೇಕು, ತತ್ರ = ಅವುಗಳಲ್ಲಿ, ಆದ್ಯಃ= ಪ್ರತಿಭಾಸಶರೀರರೂಪತ್ವವಾದ ಪ್ರಾತಿಭಾಸಿಕತ್ವವು, ಅರ್ಥಘಾತಕಃ ನ = ಅರ್ಥಕ್ರಿಯಾಘಾತಕವಲ್ಲ, ಏಕೆಂದರೆ, ಜ್ಞಾನಾತ್ = ಜ್ಞಾನದಿಂದ, ಸ್ವಾರ್ಥಕ್ರಿಯಾದೃಷ್ಟೇ = ಜ್ಞಾನಕ್ಕೆ ಯೋಗ್ಯವಾದ ಅರ್ಥಕ್ರಿಯೆಯು ಉಂಟಾಗುವುದು ಕಂಡಿದೆ. ದ್ವಿತೀಯೇಪಿ = ದ್ವಿತೀಯಪಕ್ಷದಲ್ಲಿಯೂ,

ಮಾತ್ರಶಬ್ದೇನ = ಮಾತ್ರಶಬ್ದದಿಂದ, ಅರ್ಥ ವ ವ್ಯಾವರ್ತ್ಯೋ ಹಿ = ಅರ್ಥವೇ ವ್ಯಾವೃತ್ತವಾದುದಷ್ಟೇ? ತತಃ = ಆದ್ದರಿಂದ, ಅರ್ಥಾಭಾವಲಕ್ಷಣಮ್ = ಅರ್ಥಾಭಾವರೂಪವಾದ, ಮಿಥ್ಯಾತ್ವಮೇವ = ಮಿಥ್ಯಾತ್ವವೇ, ಕಾರ್ಯಸ್ಯ ವಿಘಾತಕಮ್ = ಕಾರ್ಯವಿಘಾತಕವೆಂದು, ಬಲಾತ್ = ಯುಕ್ತಿಬಲದಿಂದ, ಅಭೂತ್ = ಸಿದ್ಧವಾಯಿತು.

**ಅನುವಾದ-** ಪ್ರಾತಿಭಾಸಿಕತ್ವವೇ ಅರ್ಥಕ್ರಿಯಾಘಾತಕವೆಂದು ಒಪ್ಪಿದರೆ, ಪ್ರಾತಿಭಾಸಿಕತ್ವವು ಪ್ರತಿಭಾಸಶರೀರತ್ವರೂಪವೆಂದಾಗಲೀ ಅಥವಾ ಪ್ರತಿಭಾಸ-ಮಾತ್ರಾಕಾರತಾರೂಪವೆಂದಾಗಲೀ ಅಥವಾ ಬ್ರಹ್ಮಜ್ಞಾನಕ್ಕಿಂತ ಮೊದಲೇ ಬಾಧ್ಯತ್ವರೂಪವೆಂದಾಗಲೀ ಆಗಬೇಕು. ಅದರಲ್ಲಿ ಜ್ಞಾನಕ್ಕೆ ತನಗೆ ಉಚಿತವಾದ

ಕ್ರಿಯಕಾರಿತ್ವವು ದೃಷ್ಟವಾಗಿರುವುದರಿಂದ ಪ್ರತಿಭಾಸಶರೀರತ್ವ ಎಂದರೆ ಪ್ರತಿಭಾಸಸ್ವರೂಪತ್ವರೂಪವಾದ ಮೊದಲನೆಯ ಪಕ್ಷವು ಅರ್ಥಕ್ರಿಯಾಘಾತಕವಲ್ಲ. ಎರಡನೆಯ ಪಕ್ಷದಲ್ಲಿ ಮಾತ್ರಶಬ್ದದಿಂದ ಅರ್ಥವನ್ನೇ ವ್ಯಾವೃತ್ತಿ-ಮಾಡಬೇಕಾಗಿರುವುದರಿಂದ ಅರ್ಥಾಭಾವಲಕ್ಷಣಮಿಥ್ಯಾತ್ವವೇ ಸಿದ್ಧವಾಗುತ್ತದೆ. ಆದ್ದರಿಂದ ಮಿಥ್ಯಾತ್ವವೇ ಅರ್ಥಕ್ರಿಯಾವಿಘಾತಕವೆಂದು ವ್ಯಾಪ್ತಿಬಲದಿಂದ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಶಂಕತೇ ॥ **ಪ್ರಾತಿಭಾಸಿಕತೇತಿ** ॥ ಏವಶಬ್ದೇನ ಮಿಥ್ಯಾತ್ವಂ ವ್ಯಾವರ್ತಯತಿ । ಪ್ರಾತಿಭಾಸಿಕತ್ವಮೇವಾರ್ಥಕ್ರಿಯಾಽಭಾವಪ್ರಯೋಜಕಮ್ । ನ ತು ಮಿಥ್ಯಾತ್ವಮಾತ್ರಮ್ । ಅತೋ ಪ್ರಯೋಜಕಸ್ತರ್ಕ ಇತಿ ಶಂಕಾಭಿಪ್ರಾಯಃ । ವಿಕಲ್ಪ್ಯ ದೂಷಯತಿ ॥ **ಪ್ರತಿಭಾಸೇತಿ** ॥ ಪ್ರತಿಭಾಸಯೋಗ್ಯತ್ವಂ ಪ್ರತಿಭಾಸಸಮಸಮಯವರ್ತಿತ್ವಂ ಚ ಘಟಾದೌ ಸುಖಾದೌ ಚ ಗತತ್ವಾತ್ ಅರ್ಥಕ್ರಿಯಾಘಟನೋಪಯೋಗಿತ್ವಾಚ್ಚ ನ ಪರೇಣ ವಕ್ತುಮುಚಿತಮ್ । ಅತಸ್ತ್ರೇಧೈವ ವಿಕಲ್ಪಃ ಕೃತಃ । ಪ್ರತಿಭಾಸಶರೀರತ್ವಂ ಪ್ರತಿಭಾಸಾತ್ಮಕತ್ವಮಿತ್ಯರ್ಥಃ । ಪ್ರಸಿದ್ಧಶರೀರಸ್ಯ ರಜತಾದಾವ-ಪ್ರಸ್ತುತತ್ವೇನ ಸ್ವರೂಪಸ್ಯೈವ ಶರೀರಪದವಾಚ್ಯತ್ವಾದಿತ್ಯರ್ಥಃ । ತನ್ಮಾತ್ರಾಕಾರತಾ ಪ್ರತಿಭಾಸ-ಮಾತ್ರಾಕಾರತಾ । ಪ್ರತಿಭಾಸ ಏವಾಕಾರ ಇವಾಕಾರೋ ನ ತತೋಽನ್ಯಃ ಸ್ವಾಕಾರೋಽಸ್ತೀತಿ ಭಾವಃ । ಸ್ವಾರ್ಥಕ್ರಿಯಾದೃಷ್ಟೇಃ ಸ್ವಕಾರ್ಯಪ್ರವೃತ್ತ್ಯಾದಿದರ್ಶನಾತ್ । ತದ್ರೂಪತ್ವೇಽ-ರ್ಥಸ್ಯಾಪ್ಯರ್ಥಕ್ರಿಯಾಕಾರಿತ್ವಂ ಸ್ಯಾದೇವೇತಿ ಭಾವಃ । ವಿಜ್ಞಾನವಾದಿಮತ ಪ್ರವೇಶಶ್ಚೇತ್ಯಪಿ ದ್ರಷ್ಟವ್ಯಮ್ । ಜ್ಞಾನಾತ್ಸ್ವಾರ್ಥಕ್ರಿಯಾ ದೃಷ್ಟೇರಿತ್ಯನೇನ ಶಂಕೈವೇಯಂ ನ ಘಟತ ಇತ್ಯಪಿ ಸೂಚಿತಮ್ । ಅರ್ಥಜ್ಞಾನಯೋರುಭಯೋರಪ್ಯಧ್ಯಾಸವಾದಿನಃ ಪರಸ್ಯ ಮತೇ ಪ್ರಾತಿಭಾಸಿಕಸ್ಯ ಜ್ಞಾನಸ್ಯೈವ ಸ್ವಾರ್ಥಕ್ರಿಯಾಕಾರಿತ್ವದೃಷ್ಟೇಃ ಪ್ರಾತಿಭಾಸಿಕತ್ವಮರ್ಥಕ್ರಿಯಾಽಭಾವೇ ಪ್ರಯೋಜಕಮಿತಿ ಪಕ್ಷಸ್ಯ ಭಗ್ನತ್ವಾದಿತಿ ದೂಷಣಸ್ಯಾಪ್ಯನೇನೈವ ಸೂಚಿತತ್ವಾತ್ । ವಿಸ್ತರಸ್ತೂಪ-ನ್ಯಾಸರತ್ನಮಾಲಾಯಾಂ ದ್ರಷ್ಟವ್ಯಃ ॥ ೧೧೪೬-೧೧೪೮ ॥

**ವಿವರಣೆ–** ಪ್ರಾತಿಭಾಸಿಕತ್ವವೇ ಅರ್ಥಕ್ರಿಯಾಭಾವಪ್ರಯೋಜಕವಾದುದು. ಮಿಥ್ಯಾತ್ವವು ಪ್ರಯೋಜಕವಲ್ಲ. ಆದ್ದರಿಂದ ನೀವು ಹೇಳಿದ ಬಾಧಕತರ್ಕವು ಅಪ್ರಯೋಜಕವಾದುದು ಎಂದು ಶಂಕೆಯನ್ನು ಮಾಡಿದರೆ, ಪ್ರಾತಿಭಾಸಿಕತ್ವಸ್ವರೂಪವನ್ನು ವಿಕಲ್ಪಮಾಡಿ ಇಲ್ಲಿ ದೂಷಿಸುತ್ತಾರೆ. ಪ್ರಾತಿಭಾಸಿಕತ್ವವೆಂದರೆ ಪ್ರತಿಭಾಸಯೋಗ್ಯತ್ವಂ ಎಂಬ ಪಕ್ಷವನ್ನಾಗಲೀ, ಪ್ರತಿಭಾಸಮಾನಕಾಲೀನತ್ವಂ ಎಂಬ ಪಕ್ಷವನ್ನಾಗಲಿ ಇಲ್ಲಿ ಶಂಕಿಸಲಿಲ್ಲ. ಏಕೆಂದರೆ, ಅಂತಹ ಪ್ರಾತಿಭಾಸಿಕತ್ವವು ಘಟಾದಿಗಳಲ್ಲಿಯೂ ಮತ್ತು ಸುಖಾದಿಗಳಲ್ಲಿಯೂ ಅರ್ಥಕ್ರಿಯಾಕಾರಿಯಾಗಿರುವುದು ಕಂಡುಬಂದಿದೆ. ಆದ್ದರಿಂದ ಮೂರೇ ವಿಕಲ್ಪಗಳನ್ನು ಮಾಡಿದ್ದಾರೆ. ಶರೀರಶಬ್ದದ ಮುಖ್ಯಾರ್ಥವಾದ ಶರೀರವು ಈ ರಜತಾದಿಗಳಲ್ಲಿ ಅಪ್ರಸ್ತುತವಾದ್ದರಿಂದ ಶರೀರಶಬ್ದದಿಂದ ಸ್ವರೂಪವನ್ನೇ ತೆಗೆದುಕೊಳ್ಳಬೇಕು. ಆದ್ದರಿಂದ ಪ್ರತಿಭಾಸಶರೀರತ್ವಂ ಎಂದರೆ ಪ್ರತಿಭಾಸಸ್ವರೂಪತ್ವಂ ಎಂದು ಅರ್ಥವಾಗುತ್ತದೆ.

ತನ್ಮಾತ್ರಾಕಾರತಾ ಎಂದರೆ ಪ್ರತಿಭಾಸಮಾತ್ರಾಕಾರತಾ ಎಂದು ಅರ್ಥ. ಪ್ರತಿಭಾಸಮಾತ್ರಾಕಾರತಾ ಎಂದರೆ, ಪ್ರತಿಭಾಸವೇ ಯಾವುದಕ್ಕೆ ಆಕಾರವೋ ಅದನ್ನು ಬಿಟ್ಟು ಇನ್ನೊಂದು ತನ್ನ ಆಕಾರವಿಲ್ಲವೋ ಎಂದು ಅರ್ಥ. ಅಥವಾ ಯಾವುದಕ್ಕೆ ಪ್ರತಿಭಾಸವೇ ಆಕಾರದಂತಿದೆಯೋ, ಬೇರೆ ಆಕಾರವಿಲ್ಲವೋ ಅಂತಹುದು ಎಂದು ಅರ್ಥ. ಈ ಎರಡು ಪಕ್ಷಗಳಲ್ಲಿಯೂ ವಿಷಯವೇ ವ್ಯಾವೃತ್ತವಾಗುತ್ತದೆ. ಆದ್ದರಿಂದ ಜ್ಞಾನಕ್ಕೆ ಅರ್ಥಕ್ರಿಯಾಕಾರಿತ್ವವು ದೃಷ್ಟವಾಗಿಯೇ ಇದೆ. ಆದ್ದರಿಂದ ಪ್ರತಿಭಾಸಮಾತ್ರಾಕಾರತ್ವವನ್ನು ಒಪ್ಪಿದರೂ ಅರ್ಥಕ್ರಿಯಾಕಾರಿತ್ವಕ್ಕೆ ಭಂಗ ಬರುವುದಿಲ್ಲ. ಜೊತೆಗೆ ವಿಜ್ಞಾನವಾದಿ ಮತಪ್ರವೇಶವೂ ಉಂಟಾಗುತ್ತದೆ. ಆದ್ದರಿಂದ ಎರಡನೆಯ ಪಕ್ಷವೂ ಸರಿಯಲ್ಲ. 'ಜ್ಞಾನಾತ್ಸ್ವಾರ್ಥಕ್ರಿಯಾ ದೃಷ್ಟೇಃ' ಎಂಬ ವಾಕ್ಯದಿಂದ ಈ ಶಂಕೆಯೇ ಅನುಪಪನ್ನವಾದುದೆಂದು ಗ್ರಂಥಕಾರರು ಸೂಚಿಸುತ್ತಾರೆ. ಪರರು ಅರ್ಥಜ್ಞಾನ ಉಭಯರೂಪವಾದ ಅಧ್ಯಾಸವನ್ನು ಅಂಗೀಕರಿಸುವುದರಿಂದ ಪ್ರಾತಿಭಾಸಿಕವಾದ ಜ್ಞಾನಕ್ಕೇ ಅರ್ಥಕ್ರಿಯಾಕಾರಿತ್ವವು ದೃಷ್ಟವಾಗಿರುವುದರಿಂದ ಪ್ರಾತಿಭಾಸಿಕವಾದ ಅರ್ಥಕ್ಕೆ ಅರ್ಥಕ್ರಿಯಾಕಾರಿತ್ವವು ಇರುವುದಕ್ಕೆ ಯಾವ ಬಾಧಕವೂ ಇಲ್ಲದಿರುವುದರಿಂದ ಅರ್ಥಕ್ರಿಯಾಭಾವವನ್ನು ಕುರಿತು ಪ್ರಾತಿಭಾಸಿಕತ್ವವು ಪ್ರಯೋಜಕ ಎಂಬುದು ಭಗ್ನವಾಗುವುದರಿಂದ ಇಂತಹ ಶಂಕೆಯನ್ನೇ ಮಾಡಬಾರದು ಎಂದು ಅಭಿಪ್ರಾಯ. ಇದಕ್ಕಿಂತ ಹೆಚ್ಚಿನ ವಿವರಗಳನ್ನು ಶ್ರೀವಾದಿರಾಜರ ಉಪನ್ಯಾಸರತ್ನಮಾಲಾ ಎಂಬ ಗ್ರಂಥದಿಂದ ತಿಳಿಯಬೇಕು ಎಂದು ಸುರೋತ್ತಮತೀರ್ಥರು ತಿಳಿಸುತ್ತಾರೆ.

ತೃತೀಯೇಽಪ್ಯೇವಮೇವಾಸೀದ್ ಯನ್ಮಿಥ್ಯಾತ್ವಂ ಹಿ ಬಾಧ್ಯತಾ ।
ಮರೀಚಿಕಾಜಲಂ ತಸ್ಮಾನ್ಮಿಥ್ಯಾತ್ವಾದೇವ ನಾರ್ಥಕೃತ್ ॥ ೧೧೪೯ ॥

**ಅರ್ಥ-** ತೃತೀಯೇಪಿ = ಮೂರನೇಪಕ್ಷದಲ್ಲಿಯೂ, ಏವಮೇವಾಸೀತ್ = ಹೀಗೆಯೇ ಅರ್ಥಾಭಾವವೇ ಉಂಟಾಯಿತು, ಯತ್ = ಏಕೆಂದರೆ, ಬಾಧ್ಯತಾ = ಬಾಧ್ಯತ್ವವೆಂದರೆ, ಮಿಥ್ಯಾತ್ವಂ ಹಿ = ಮಿಥ್ಯಾತ್ವವೇ ಅಷ್ಟೇ? ತಸ್ಮಾತ್ = ಆದ್ದರಿಂದ, ಮರೀಚಿಕಾಜಲಂ = ಮರೀಚಿಕಾಜಲವು, ಮಿಥ್ಯಾತ್ವಾದೇವ = ಮಿಥ್ಯೆಯಾದ ಕಾರಣದಿಂದಲೇ, ನ ಅರ್ಥಕೃತ್ = ಅರ್ಥಕ್ರಿಯಾಕಾರಿಯಲ್ಲ.

**ಅನುವಾದ-** ಇದಾನೀಂ ಬಾಧ್ಯತ್ವಂ ಎಂದರೆ ಬ್ರಹ್ಮಜ್ಞಾನಕ್ಕಿಂತ ಪೂರ್ವದಲ್ಲಿಯೇ, ಈಗಲೇ ಬಾಧ್ಯತ್ವವೆಂಬ ತೃತೀಯಪಕ್ಷವು ಅರ್ಥಾಭಾವದಲ್ಲಿಯೇ ಪರ್ಯವಸಾನ-ವನ್ನು ಹೊಂದಿತು. ಏಕೆಂದರೆ, ಬಾಧ್ಯತ್ವವೆಂದರೆ ಅರ್ಥಮಿಥ್ಯಾತ್ವವಷ್ಟೇ? ಆದ್ದರಿಂದ ಮರೀಚಿಕಾಜಲವು ಮಿಥ್ಯೆಯಾದುದರಿಂದಲೇ ಅರ್ಥಕ್ರಿಯಾಕಾರಿಯಲ್ಲ ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ತಸ್ಮಾದುಕ್ತವಿಕಲ್ಪಪರ್ಯಾಲೋಚನಯಾ ಪ್ರಾತಿಭಾಸಿಕತ್ವಸ್ಯಾಪಿ ಮಿಥ್ಯಾತ್ವ ಏವ ಪರ್ಯವಸಾನಾತ್ ॥ ೧೧೪೯ ॥

**ಸತ್ಯಂ ಜಲಂ ಚಾರ್ಥಕಾರಿ ತತಃ ಸತ್ಯಮಭೂಜ್ಜಗತ್ ।**
**ಅರ್ಥಕ್ರಿಯಾಯಾ ಯೋಗ್ಯತ್ವಾದ್ ವ್ಯತಿರೇಕಾನ್ಮೃಷಾರ್ಥವತ್ ।। ೧೧೫೦ ।।**

**ಅರ್ಥ-** ಸತ್ಯಂ ಜಲಂ ಚ = ಸತ್ಯವಾದ ಜಲವಾದರೂ, ಅರ್ಥಕಾರಿ = ಅರ್ಥಕ್ರಿಯಾಕಾರಿಯಾಗಿದೆ, ತತಃ ಅರ್ಥಕ್ರಿಯಾಯಾ ಯೋಗ್ಯತ್ವಾತ್ = ಅರ್ಥಕ್ರಿಯಾಯೋಗ್ಯವಾದುದರಿಂದ, ವ್ಯತಿರೇಕಾನ್ಮೃಷಾರ್ಥವತ್ = ವ್ಯತಿರೇಕದಿಂದ ಮೃಷಾರ್ಥದಂತೆ, ಜಗತ್ = ಜಗತ್ತು, ಸತ್ಯಮಭೂತ್ = ಸತ್ಯವಾಯಿತು.

**ಅನುವಾದ-** ಮತ್ತು ಸತ್ಯವಾದ ಜಲವು ಅರ್ಥಕ್ರಿಯಾಕಾರಿಯಾಗಿದೆ. ಆದ್ದರಿಂದ ಅರ್ಥಕ್ರಿಯಾಯೋಗ್ಯವಾದುದರಿಂದ ವ್ಯತಿರೇಕದಿಂದ ಮಿಥ್ಯಾಭೂತವಾದ ಅರ್ಥದಂತೆ ಜಗತ್ತು ಸತ್ಯವೇ ಆಯಿತು.

**ಭಾವವಿಲಾಸಿನೀ–** ತರ್ಕೋತ್ಥಾಪಿತಮನುಮಾನಂ ಚ ದರ್ಶಯತಿ ।। ತತ ಇತಿ ।। ಸದಾಽರ್ಥಕ್ರಿಯಾಯಾ ಘಟಾದಾವಪ್ಯಭಾವಾದ್ಯೋಗ್ಯತ್ವಾದಿತ್ಯುಕ್ತಮ್ ।। ೧೧೫೦ ।।

**ವಿವರಣೆ-** ಬಾಧಕತರ್ಕದಿಂದ ಉಂಟಾದ ಅನುಮಾನವನ್ನು ಇಲ್ಲಿ ಪ್ರದರ್ಶಿಸುತ್ತಾರೆ. ಜಗತ್, ಸತ್ಯಂ, ಅರ್ಥಕ್ರಿಯಾಯೋಗ್ಯತ್ವಾತ್, ಜಲವತ್ ಅಥವಾ ವ್ಯತಿರೇಕೇಣ ಮಿಥ್ಯಾರ್ಥವತ್ ಎಂಬ ತರ್ಕಜನ್ಯವಾದ ಅನುಮಾನವು ಜಗತ್ತಿಗೆ ಸತ್ಯತ್ವವನ್ನು ಸಾಧಿಸುತ್ತದೆ ಎಂದು ಅಭಿಪ್ರಾಯ.

**ಕಿಂಚ ನಾರ್ಥಕ್ರಿಯಾ ತೇಽಪಿ ಪ್ರತಿಭಾಸಿಕಸತ್ಯತಃ ।**
**ಸತ್ಯೇ ಜಲೇಽಸ್ತಿ ಸಾ ಸ್ಪಷ್ಟಂ ತೇನೇದಂ ಸಿದ್ಧಮಾವಯೋಃ ।**
**ಸತ್ಯತಾಽಭ್ಯಧಿಕಾ ಯತ್ರ ತಚ್ಛಕ್ತಂ ನಾವರಂ ತ್ವಿತಿ ।। ೧೧೫೧ ।।**

**ಅರ್ಥ-** ಕಿಂಚ = ಮತ್ತು, ತೇ ಅಪಿ = ನಿನಗೂ ಕೂಡ, ಪ್ರತಿಭಾಸಿಕಸತ್ಯತಃ = ಪ್ರಾತಿಭಾಸಿಕಸತ್ಯವಾದ ವಸ್ತುವಿನಿಂದ, ಅರ್ಥಕ್ರಿಯಾ ನ = ಅರ್ಥಕ್ರಿಯೆಯು ಉಂಟಾಗುವುದಿಲ್ಲ. ಸಾ = ಅರ್ಥಕ್ರಿಯೆಯು, ಸತ್ಯೇ ಜಲೇ = ಸತ್ಯವಾದ ಜಲದಲ್ಲಿ, ಅಸ್ತಿ = ಇದೆ. ತೇನ = ಆ ಕಾರಣದಿಂದ, ಸತ್ಯತಾ = ಸತ್ಯತ್ವವು, ಯತ್ರ = ಎಲ್ಲಿ, ಅಭ್ಯಧಿಕಾ = ಅಧಿಕವಾಗಿರುತ್ತದೆಯೋ, ತತ್ = ಆ ವಸ್ತುವು, ಶಕ್ತಂ = ಅರ್ಥಕ್ರಿಯಾಸಮರ್ಥವಾಗಿದೆ, ಅಪರಂತು = ಅದಕ್ಕಿಂದ ಭಿನ್ನವಾದುದು, ನ = ಅರ್ಥಕ್ರಿಯಾಯೋಗ್ಯವಲ್ಲ, ಇತಿ = ಎಂದು, ಇದಂ = ಈ ಪ್ರಮೇಯವು, ಆವಯೋಃ = ನಮ್ಮಿಬ್ಬರಿಗೆ, ಸ್ಪಷ್ಟಂ = ಸ್ಪಷ್ಟವಾಗಿ, ಸಿದ್ಧಂ = ಸಿದ್ಧವಾಯಿತು.

ಅನುವಾದ- ಮತ್ತು ನಿನಗೂ ಸಹ ಪ್ರಾತಿಭಾಸಿಕಸತ್ಯದಿಂದ ಅರ್ಥಕ್ರಿಯೆಯು ಉಂಟಾಗುವುದಿಲ್ಲ. ಸತ್ಯವಾದ ಜಲದಲ್ಲಿಯೇ ಅರ್ಥಕ್ರಿಯೆಯು ಉಂಟಾಗುತ್ತದೆ.

ಆದ್ದರಿಂದ ಎಲ್ಲಿ ಸತ್ಯತ್ವವು ಅಧಿಕವಾಗಿರುತ್ತದೆಯೋ ಅದೇ ಅರ್ಥಕ್ರಿಯಾಕಾರಿ, ಇನ್ನೊಂದು ಅರ್ಥಕ್ರಿಯಾಕಾರಿಯಲ್ಲ ಎಂಬ ಈ ಪ್ರಮೇಯವು ನಮ್ಮಿಬ್ಬರಿಗೂ ಸಿದ್ಧವಾಯಿತು.

**ಭಾವವಿಲಾಸಿನೀ–**ಅರ್ಥಕ್ರಿಯಾಕಾರಿತ್ವಸತ್ಯತ್ವಯೋರ್ವ್ಯಾಪ್ತಿಮನುಭವಾರೂಢಾಂ ಕುರ್ವನ್ ದ್ರಢಯತಿ ॥ ಕಿಂಚೇತಿ ॥ ಸಾ ಅರ್ಥಕ್ರಿಯಾ । ತೇನ ಕಾರಣೇನ । ಇದಂ ವಕ್ಷ್ಯಮಾಣಂ ಪ್ರಮೇಯಮ್ । ವ್ಯಾವಹಾರಿಕಸತ್ವೇ ಪ್ರಾತಿಭಾಸಿಕಸತ್ತ್ವಾದಾಧಿಕ್ಯಸ್ಯ ಪರೇಣಾಪ್ಯಂಗೀಕಾರಾತ್ ಆವಯೋರಿತ್ಯುಕ್ತಮ್ ॥ ೧೧೫೧ ॥

**ವಿವರಣೆ-** ಅರ್ಥಕ್ರಿಯಾಕಾರಿತ್ವ ಮತ್ತು ಸತ್ಯತ್ವಗಳಿಗೆ ಇರುವ ವ್ಯಾಪ್ತಿಯನ್ನು ಅನುಭವಾರೂಢವನ್ನಾಗಿ ಮಾಡಿ ಇಲ್ಲಿ ದೃಢಪಡಿಸುತ್ತಾರೆ. ವ್ಯಾವಹಾರಿಕಸತ್ವದಲ್ಲಿ ಪ್ರಾತಿಭಾಸಿಕಸತ್ವಕ್ಕಿಂತಲೂ ಆಧಿಕ್ಯವನ್ನು ಪರನು ಅಂಗೀಕರಿಸುವುದರಿಂದ ನಮ್ಮಿಬ್ಬರಿಗೂ ಈ ಪ್ರಮೇಯವು ಸಿದ್ಧವಾಯಿತು ಎಂದು ಅಭಿಪ್ರಾಯ.

ಆಧಿಕ್ಯಂ ಯದ್ಯಬಾಧ್ಯತ್ವಂ ಸಿದ್ಧಂ ಮಮ ಸಮೀಹಿತಮ್ ।
ಅನ್ಯಚ್ಚೇನ್ನಾಮಮಾತ್ರಂ ತತ್ತ್ರಿಕಾಲಾಸತ್ತ್ವಸಾಮ್ಯತಃ ॥ ೧೧೫೨ ॥

**ಅರ್ಥ-** ಯದಿ = ಒಂದುಪಕ್ಷ, ಆಧಿಕ್ಯಂ = ಹಿಂದಿನ ಶ್ಲೋಕದಲ್ಲಿ ಹೇಳಿದ ಆಧಿಕ್ಯವು, ಅಬಾಧ್ಯತ್ವಂ = ಅಬಾಧ್ಯತ್ವರೂಪವಾದ, ಮಮ ಸಮೀಹಿತಮ್ = ನನ್ನ ಅಭೀಷ್ಟವು, ಸಿದ್ಧಂ = ಸಿದ್ಧವಾಯಿತು, ಅನ್ಯಚ್ಚೇತ್ = ಅದಕ್ಕಿಂತ ಭಿನ್ನವಾದರೆ, ತದ = ಅದು, ತ್ರಿಕಾಲಾಸತ್ತ್ವಸಾಮ್ಯತಃ = ತ್ರಿಕಾಲದಲ್ಲಿ ಅಸತ್ವವು ಸಮಾನವಾಗಿರುವುದರಿಂದ, ಸತ್ = ಆ ಆಧಿಕ್ಯವು, ನಾಮಮಾತ್ರಂ = ಕೇವಲ ಒಂದು ನಾಮವಷ್ಟೇ.

**ಅನುವಾದ-** ಹಿಂದಿನ ಶ್ಲೋಕದಲ್ಲಿ ಹೇಳಿದ ಆಧಿಕ್ಯವು ಅಬಾಧ್ಯತ್ವರೂಪವಾದರೆ, ನನ್ನ ಅಭೀಷ್ಟವು ಸಿದ್ಧವಾಯಿತು. ಆಬಾಧ್ಯತ್ವಕ್ಕಿಂತ ಭಿನ್ನವಾದರೆ ಆ ಕಾಲತ್ರಯದಲ್ಲಿ ಅಸತ್ವವು ಸಮಾನವಾಗಿರುವುದರಿಂದ ಅದು ಕೇವಲ ಒಂದು ನಾಮಮಾತ್ರ.

**ಭಾವವಿಲಾಸಿನೀ–** ಅನ್ಯಚ್ಚೇತ್ ಬ್ರಹ್ಮಪ್ರಮಾನ್ಯಾಬಾಧ್ಯತ್ವೇ ಸತಿ ಬ್ರಹ್ಮಪ್ರಮಾಬಾಧ್ಯತ್ವರೂಪವ್ಯಾವಹಾರಿಕತ್ವಂ ಚೇತ್ ॥ ೧೧೫೨ ॥

**ವಿವರಣೆ-** ಕೇವಲ ಅಬಾಧ್ಯತ್ವವನ್ನು ಆದಿಕ್ಯವೆಂದು ಅಂಗೀಕರಿಸಿದೇ, ಬ್ರಹ್ಮಪ್ರಮಾನ್ಯಾಬಾಧ್ಯತ್ವೇ ಸತಿ ಬ್ರಹ್ಮಪ್ರಮಾಬಾಧ್ಯತ್ವರೂಪವಾದ ವ್ಯಾವಹಾರಿಕತ್ವವು ಆಧಿಕ್ಯವೆಂದು ಅಂಗೀಕರಿಸಿದರೆ ತ್ರಿಕಾಲದಲ್ಲಿ ಅಸತ್ವವು ಶಶಭಿಷಾಣತ್ವವು ಆಂತರಪದಾರ್ಥತ್ವವು ಸಮಾನವಾಗಿರುವುದರಿಂದ ಆದು ಅರ್ಥಕ್ರಿಯೆಯನ್ನು ಕುರಿತು ಅಪ್ರಯೋಜಕವಾದುದು ಎಂದು ಅಭಿಪ್ರಾಯ.

ಅಸತೋಽಸಿದ್ಧಕಾರ್ಯಸ್ಯ ಸಾಧಕತ್ವೇ ಪ್ರಯೋಜಿಕಾ ।
ತ್ರಿಕಾಲಾಸತ್ಯತಾ ಸ್ಯಾತ್ ಕಿಂ ವಾಚ್ಯಾಽನ್ಯಾ ಸತ್ಯತೈವ ಹಿ ।
ಸಾ ಚಾಬಾಧ್ಯತ್ವರೂಪೈವ ತಸ್ಮಾದನ್ಯನ್ನ ವಿದ್ಯತೇ ॥ ೧೧೫೩ ॥

**ಅರ್ಥ-** ಅಸತಃ ಅಸಿದ್ಧಕಾರ್ಯಸ್ಯ = ಅಸತ್‌ನಲ್ಲಿ ಅದೃಷ್ಟವಾದ ಅರ್ಥಕ್ರಿಯಾಕಾರ್ಯತ್ವವನ್ನು ಕುರಿತು ಪ್ರಯೋಜಕ, ಅಪ್ರಯೋಜಕವಾದದ್ದು, ಸಾಧಕತ್ವೇ = ಸಾಧಕತ್ವದಲ್ಲಿ, ತ್ರಿಕಾಲಾಸತ್ಯತಾ = ಕಾಲತ್ರಯದಲ್ಲಿ ಅಸತ್ವವು, ಪ್ರಯೋಜಿಕಾ ಸ್ಯಾತ್ಕಿಂ = ಪ್ರಯೋಜಕವಾಗುತ್ತದೆಯೇ? ಅನ್ಯತ್ ಸತ್ಯತೈವ = ಅದಕ್ಕಿಂತ ಭಿನ್ನವಾದ ಸತ್ಯತ್ವವನ್ನೇ, ವಾಚ್ಯಾ ಹಿ = ಪ್ರಯೋಜಕವೆಂದು ಹೇಳಬೇಕಷ್ಟೇ. ಸಾಚ= ಅಂತಹ ಭಿನ್ನವಾದ ಸತ್ಯತ್ವವಾದರೂ, ಅಬಾಧ್ಯತ್ವರೂಪೈವ = ಅಬಾಧ್ಯತ್ವರೂಪವಾದುದೇ. ತಸ್ಮಾತ್ = ಅಬಾಧ್ಯತ್ವರೂಪವಾದ ಸತ್ಯತ್ವಕ್ಕಿಂತಲೂ, ಅನ್ಯತ್ = ಭಿನ್ನವಾದ ಸತ್ಯತ್ವವು, ನ ವಿದ್ಯತೇ = ಇಲ್ಲ.

**ಅನುವಾದ-** ಅಸತ್ತಿನಲ್ಲಿ ಅರ್ಥಕ್ರಿಯಾಕಾರಿತ್ವವು ಇಲ್ಲ. ಸತ್ತಾದ ಘಟದಲ್ಲಿದೆ. ಈ ಅರ್ಥಕ್ರಿಯಾಕಾರಿತ್ವಕ್ಕೆ ಪ್ರಯೋಜಕವಾದುದು ವ್ಯಾವಹಾರಿಕಸತ್ವವಲ್ಲ. ಇದೂ ಬಾಧ್ಯವಾದುದರಿಂದ ಕಾಲತ್ರಯದಲ್ಲಿ ಅವಿದ್ಯಮಾನವೇ ಆಗಿದೆ. ಆದ್ದರಿಂದ ಕಾಲತ್ರಯಸತ್ವಕ್ಕಿಂತ ಭಿನ್ನವಾದ ಸತ್ಯತ್ವವನ್ನೇ ಪ್ರಯೋಜಕವೆಂದು ಹೇಳಬೇಕು. ಅಂತಹ ಭಿನ್ನವಾದ ಸತ್ಯತ್ವವಾದರೂ ಅಬಾಧ್ಯತ್ವರೂಪವಾದುದೇ ಆಗಿದೆ. ಇದಕ್ಕಿಂತ ಭಿನ್ನವಾದ ಸತ್ಯತ್ವವು ಎಲ್ಲಿಯೂ ಇಲ್ಲ.

**ಭಾವವಿಲಾಸಿನೀ–** ಅಸತಃ ಶಶಶೃಂಗಾದೇಃ ಶುಕ್ತಿರಜತಾದೇಶ್ಚ । ತ್ರಿಕಾಲಾಸತ್ಯತಾ ವ್ಯಾವಹಾರಿಕ-ಸತ್ಯತ್ವಲಕ್ಷಣೇ ಬ್ರಹ್ಮಪ್ರಮಾಬಾಧ್ಯಪದೇನೋಕ್ತಾ । ಅವಿದ್ಯಾಮಾನರಜತಾದಾವದೃಷ್ಟಂ ಕಾರ್ಯಂ ಕಥಂ ಜಗತೀತಿ ಪೃಷ್ಟೇ ವ್ಯಾವಹಾರಿಕಸತ್ಯತ್ವಾದಿತಿ ವದತಾ ಕಾಲತ್ರಯೇಽಪ್ಯ-ವಿದ್ಯಮಾನತ್ವಮೇವೋಕ್ತಂ ಸ್ಯಾತ್ । ತಸ್ಯ ಚಾತ್ಯಂತಾಸಂಬದ್ಧತ್ವಾತ್ಕಿಮಿತ್ಯಾಕ್ಷೇಪಃ । ಬ್ರಹ್ಮ-ಪ್ರಮಾನ್ಯಾಬಾಧ್ಯತ್ವೇನ ವಿಶೇಷಣಂ ತು ಪರಮತೇ ಕ್ರಿಯಾವೇಶಶೂನ್ಯೇ ಬ್ರಹ್ಮಣಿ ಶಶವಿಷಾಣೇ ಚ ಗತತ್ವಾಚ್ಛುಕ್ತಿರಜತಾದಾವದೃಷ್ಟಕಾರ್ಯಕಾರಿತ್ವೇ ಸುತರಾಮನುಪಯುಕ್ತಮೇವ । ಕಿಂ ಚ ಬ್ರಹ್ಮಣೋ ಜಗದಾರೋಪಾಧಿಷ್ಠಾನತ್ವೇ ನ್ಯ ದತ್ತಮಪೀದಂ ವಿಶೇಷಣಮಧಿಷ್ಠಾನಾನ್ಯ-ಪ್ರಮಾಽಬಾಧ್ಯತ್ವೇ ಪರ್ಯವಸಿತಂ ಸ್ಯಾತ್ । ತಚ್ಚ ಪುನಶ್ಶುಕ್ತಿರಜತಾದಾವಪಿ ಸಮಾನಮೇವೇತಿ ನಾರ್ಥಕ್ರಿಯಾಕಾರಿತ್ವೇ ಪ್ರಯೋಜಕಮ್ । ನ ಹಿ ಕೋಽಪಿ ಶೂದ್ರಾಂತರಮಭೋಜಯ-ನ್ನಿಮಂ ಶೂದ್ರಂ ಕಿಮಿತಿ ಭೋಜಯಸೀತಿ ಪೃಷ್ಟೇ ಲೀಲಯಾ ಧೃತಕಂಠಸೂತ್ರಶೂದ್ರತ್ವಾದಿತಿ ಪ್ರತಿಬ್ರೂತೇ । ವಿಪ್ರಪರಿಹಾಸಕಶೂದ್ರತ್ವೇನಾಸ್ಯ ಸುತರಾಮಭೋಜ್ಯತ್ವಾತ್ । ಕಿಂತು ಶೂದ್ರಮಭೋಜಯನ್‌ವಟುಮಿಮಂ ಕಿಮಿತಿ ಭೋಜಯಸೀತಿ ಪೃಷ್ಟೇ ಬ್ರಾಹ್ಮಣತ್ವಾದಿತ್ಯೇವ

ಪ್ರೇಕ್ಷಾವಾನ್‌ಪ್ರತಿವಕ್ತಿ । ಏವಮಿಹಾಪಿ ಅಸತ್ಯಾಂತರಾದಜಾತಕಾರ್ಯಂ ಕಥಮಸ್ಮಾಜ್ಜಾಯತ ಇತಿ ಪೃಷ್ಟೇ ಸ್ವಭಾವತಸ್ಸತ್ಯತ್ವಾದಿತ್ಯೇವ ವದನ್‌ಸುಧೀಃ । ಇದಾನೀಮಬಾಧ್ಯತ್ವೇನ ಚಿರಕಾಲಂ ಸತ್ಯಶಬ್ದವಾಚ್ಯತ್ವೇ ಸತಿ ತ್ರಿಕಾಲಾವಿದ್ಯಮಾನತ್ವಾದಿತಿ ವಚನಂ ತು ಬಾಧ ಏವ ಪರ್ಯವಸಾನಾನ್ನ ಪ್ರಕೃತೋಪಯೋಗಿ । ಅಸಂಜಾತಬಾಧಭ್ರಮಸ್ಯಾಪಿ ಸಂಭವಾತ್ ತವೋಕ್ತಸತ್ಯಪದಸ್ಯಾಪ್ಯುಭಯತ್ರ ಸಾಮ್ಯೇನ ಶಬ್ದಮಾತ್ರಾದಪಿ ನ ವೈಲಕ್ಷಣ್ಯಮ್ । ಅನ್ಯಾ.ಅಸತ್ತ್ವಪ್ರವೇಶರಹಿತಾ ಸತ್ಯತೈವ ವಾಚ್ಯೇತಿ ಸಂಬಂಧಃ । ಸಾ ಅಸತ್ತ್ವಪ್ರವೇಶರಹಿತಸತ್ಯತಾ ॥ ೧೧೫೩ ॥

**ವಿವರಣೆ-** ಅಸತ್ತಾದ ಶಶಶೃಂಗಾದಿಗಳಿಗೂ ಶುಕ್ತಿರಜತಾದಿಗಳಿಗೂ ಅರ್ಥಕ್ರಿಯಾಕಾರಿತ್ವವು ಇಲ್ಲ. ಘಟಾದಿಗಳಲ್ಲಿ ಅರ್ಥಕ್ರಿಯಾಕಾರಿತ್ವವು ಇದೆ. ಅಂತಹ ಅರ್ಥಕ್ರಿಯಾಕಾರಿತ್ವವನ್ನು ಕುರಿತು, ಯಾವುದು ಪ್ರಯೋಜಕ ಎಂದು ಕೇಳಿದರೆ, ವ್ಯಾವಹಾರಿಕ ಸತ್ಯತ್ವವು ಪ್ರಯೋಜಕವೆಂದು ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ವ್ಯವಹಾರಿಕ ಸತ್ಯವು ಬಾಧ್ಯವೇ ಆಗುವುದರಿಂದ, ಅದು ಕಾಲತ್ರಯದಲ್ಲಿ ಅವಿದ್ಯಮಾನವೇ ಆಗುತ್ತದೆ. ಆದ್ದರಿಂದ ಸಾಧಕತ್ವವನ್ನು ಕುರಿತು ಯಾವುದು ಪ್ರಯೋಜಕ ಎಂದು ಕೇಳಿದರೆ, ಕಾಲತ್ರಯದಲ್ಲಿ ಅವಿದ್ಯಮಾನತ್ವ ಎಂಬ ಉತ್ತರವು ಅಸಂಗತವಾಗುತ್ತದೆ. 'ಬ್ರಹ್ಮಪ್ರಮಾನ್ಯೇನ ಅಬಾಧ್ಯತ್ವೇ ಸತಿ' ಎಂದು ವಿಶೇಷಣವನ್ನು ಕೊಟ್ಟು, ವಿಶೇಷ್ಯವಾಗಿ ಬ್ರಹ್ಮಪ್ರಮಾಬಾಧ್ಯತ್ವವನ್ನು ಸ್ವೀಕರಿಸಿದರೆ ಆಗಲೂ ದೋಷ ಬರುತ್ತದೆ. ಬ್ರಹ್ಮಪ್ರಮಾ ಬಾಧ್ಯತ್ವವು ಸಾಧಕತ್ವವನ್ನು ಕುರಿತು ಪ್ರಯೋಜಕ ಎಂದು ಹೇಳಿದರೆ ಆಗ ವಿಶೇಷಣವಾದ ಬ್ರಹ್ಮಪ್ರಮಾನ್ಯಾಬಾಧ್ಯತ್ವವು ಕ್ರಿಯಾವೇಶ ಶೂನ್ಯವಾದ ಬ್ರಹ್ಮನಲ್ಲಿ ಮತ್ತು ಶಶವಿಷಾಣದಲ್ಲಿ ಬರುತ್ತದೆ. ಶುಕ್ತಿರಜತಾದಿಗಳಲ್ಲಿ ಇಲ್ಲದ ಘಟಾದಿಗಳಲ್ಲಿರುವ ಕಾರ್ಯಕಾರಿತ್ವವನ್ನು ಕುರಿತು, ಯಾವುದು ಪ್ರಯೋಜಕ ಎಂದು ಅರ್ಥಕ್ರಿಯಾಕಾರಿತ್ವವಿಲ್ಲದ ಬ್ರಹ್ಮ ಮತ್ತು ಶಶವಿಷಾಣಗಳಲ್ಲಿ ಅತಿವ್ಯಾಪ್ತವಾದ ಧರ್ಮವನ್ನು ಹೇಳುವುದು ಅತ್ಯಂತ ಅನುಪಯುಕ್ತವಾದುದು. ಮತ್ತು ಬ್ರಹ್ಮಪ್ರಮಾನ್ಯೇನ ಅಬಾಧ್ಯತ್ವ ರೂಪವಾದ ವಿಶೇಷಣವನ್ನು ಕೊಟ್ಟರೂ, ಬ್ರಹ್ಮನು ಜಗದಧಿಷ್ಠಾನರೂಪವಾದುದರಿಂದ 'ಅಧಿಷ್ಠಾನ ಪ್ರಮಾ ಅನ್ಯಪ್ರಮಾ ಅಬಾಧ್ಯತ್ವೇ ಸತಿ' ಎಂದೇ ಈ ವಿಶೇಷಣವು ಪರ್ಯವಸಾನವನ್ನು ಹೊಂದುತ್ತದೆ. ಶುಕ್ತಿರಜತಾದಿಗಳು ಅಧಿಷ್ಠಾನಪ್ರಮಾಬಾಧ್ಯವೇ ಹೊರತು, ಅಧಿಷ್ಠಾನಪ್ರಮಾಅನ್ಯ ಪ್ರಮಾಬಾಧ್ಯವಲ್ಲ. ಆದ್ದರಿಂದ ಶುಕ್ತಿರಜತಾದಿಗಳಲ್ಲಿರುವ ಈ ಧರ್ಮವು ಅರ್ಥಕ್ರಿಯಾಕಾರಿತ್ವವನ್ನು ಕುರಿತು ಪ್ರಯೋಜಕವಲ್ಲ. ಶೂದ್ರಾಂತರನಿಗೆ ಭೋಜನವನ್ನು ಮಾಡಿಸದಿರುವ ನೀನು ಈ ಶೂದ್ರನಿಗೆ ಏಕೆ ಭೋಜನವನ್ನು ಮಾಡಿಸುತ್ತಿದ್ದೀಯೆ ಎಂದು ಯಾರಾದರೂ ಕೇಳಿದರೆ, ಇವನು ಲೀಲೆಯಿಂದ ಯಜ್ಞೋಪವೀತವನ್ನು ಧರಿಸಿದ ಶೂದ್ರನಾದುದರಿಂದ ಎಂದು ಯಾರೂ ಉತ್ತರವನ್ನು ಹೇಳುವುದಿಲ್ಲ. ಲೀಲೆಯಿಂದ ಯಜ್ಞೋಪವೀತವನ್ನು ಧರಿಸಿದ ಶೂದ್ರನು ಬ್ರಾಹ್ಮಣರ ಪರಿಹಾಸವನ್ನು ಮಾಡುವುದರಿಂದ ಸುತರಾಂ ಅಭೋಜ್ಯನಾಗುತ್ತಾನೆ. ಆದರೆ ಶೂದ್ರನಿಗೆ ಭೋಜನವನ್ನು ನೀಡದಿರುವ ನೀನು, ಈ ವಟುವಿಗೆ ಏಕೆ ಭೋಜವನ್ನು ನೀಡುತ್ತಿದ್ದೀಯೇ

ಎಂದು ನೀನು ಕೇಳಿದರೆ, ಇವನು ಸ್ವಭಾವತಃ ಬ್ರಾಹ್ಮಣನಾದುದರಿಂದಲೇ ಎಂದು ವಿವೇಕಿಯಾದವನು ಉತ್ತರವನ್ನು ಕೊಡುತ್ತಾನೆ. ಅದರಂತೆ ಇಲ್ಲಿಯೂ ಅಸತ್ಯವಾದ ಇನ್ನೊಂದು ಪದಾರ್ಥದಲ್ಲಿ ಅರ್ಥಕ್ರಿಯಾಕಾರಿತ್ವವು ಇಲ್ಲದಿರುವಾಗ ಘಟದಿಂದ ಹೇಗೆ ಅರ್ಥಕ್ರಿಯಾಕಾರಿತ್ವವು ಇದೆ ಎಂದು ಪ್ರಶ್ನೆ ಮಾಡಿದರೆ, ವಿವೇಕಿಯಾದವನು ಸ್ವಭಾವಿಕವಾಗಿ ಸತ್ಯವಾದುದರಿಂದಲೇ ಎಂದು ಉತ್ತರವನ್ನು ಕೊಡುತ್ತಾನೆ. ಈಗ ಅಬಾಧ್ಯವಾಗಿ ಬಹುಕಾಲದವರೆಗೆ ಸತ್ಯಶಬ್ದವಾಚ್ಯವಾದರೂ ಕಾಲತ್ರಯದಲ್ಲಿ ಅವಿದ್ಯಮಾನವಾದ ಕಾರಣದಿಂದ ಎಂದು ಯಾರೂ ಹೇಳುವುದಿಲ್ಲ. ಕಾಲತ್ರಯದಲ್ಲಿ ಅವಿದ್ಯಮಾನತ್ವವು ಬಾಧದಲ್ಲಿಯೇ ಪರ್ಯವಸಾನವನ್ನು ಹೊಂದುವುದರಿಂದ ಅದು ಪ್ರಕೃತವಾದ ಅರ್ಥಕ್ರಿಯಾಕಾರಿತ್ವಕ್ಕೆ ಉಪಯೋಗಿ ಅಲ್ಲ. ಅಸಂಜಾತ ಬಾಧಭ್ರಮವುಳ್ಳ ವಸ್ತುವಿನಲ್ಲಿಯೂ ಇದಾನೀಮಬಾಧ್ಯತ್ವೇ ಸತಿ ಚಿರಕಾಲಂ ಸತ್ಯಶಬ್ದವಾಚ್ಯತ್ವೇ ಸತಿ ತ್ರಿಕಾಲಾವಿದ್ಯಮಾನತ್ವ ರೂಪವಾದ ಈ ಪ್ರಯೋಜಕವಿರುವುದರಿಂದ ಅದು ಅರ್ಥಕ್ರಿಯಾಕಾರಿ ಅಲ್ಲದ ವಸ್ತುವಿನಲ್ಲಿ ಅತಿಪ್ರಸಕ್ತವಾಗುತ್ತದೆ. ಆದ್ದರಿಂದ ಅರ್ಥಕ್ರಿಯಾಕಾರಿತ್ವವನ್ನು ಕುರಿತು ಪ್ರಯೋಜಕವಾಗಿ ಅಸತ್ಯತ್ವ ಪ್ರವೇಶವಿಲ್ಲದಿರುವ ಸತ್ಯತ್ವವನ್ನೇ ಹೇಳಬೇಕು. ಅಂತಹ ಸತ್ಯತ್ವರೂಪವು ಅಬಾಧ್ಯತ್ವಕ್ಕಿಂತಲೂ ಬೇರೆಯಾದುದಲ್ಲ ಎಂದು ಅಭಿಪ್ರಾಯ.

**ನಭೋನೈಲ್ಯಂ ತವ ಮತೇ ದೇಹಾತ್ಮೈಕ್ಯಂ ಚ ಕೇವಲಮ್ ।**
**ಬಾಧ್ಯತೇ ಚರಮಜ್ಞಾನೇ ಸಾಧ್ಯತೇ ತಾವತಾಪಿ ಕಿಮ್ ॥ ೧೧೫೪ ॥**

**ಅರ್ಥ-** ತವ ಮತೇ = ನಿನ್ನ ಮತದಲ್ಲಿ, ನಭೋನೈಲ್ಯಂ = ನಭೋನೈಲ್ಯವು, ಚ = ಮತ್ತು, ದೇಹಾತ್ಮೈಕ್ಯಂ = ದೇಹಾತ್ಮೈಕ್ಯವು, ಕೇವಲಮ್ = ಕೇವಲ, ಚರಮಜ್ಞಾನೇ = ಚರಮಜ್ಞಾನದಲ್ಲಿಯೇ, ಬಾಧ್ಯತೇ = ಬಾಧಿಸಲ್ಪಡುತ್ತದೆ, ತಾವತಾಪಿ = ಇದಾನೀಮಬಾಧ್ಯತ್ವೇ ಸತಿ ಕಾಲಾಂತರೇ ಬಾಧ್ಯತ್ವರೂಪವಾದ ಪ್ರಯೋಜಕವನ್ನು ಹೇಳಿದ್ದರೂ ಕೂಡ, ಕಿಮ್ = ಅದರಿಂದ ಏನು ಪ್ರಯೋಜನ.

**ಅನುವಾದ-** ನಿನ್ನ ಮತದಲ್ಲಿ ನಭೋನೈಲ್ಯವು ಮತ್ತು ದೇಹಾತ್ಮೈಕ್ಯವು ಕೇವಲ ಚರಮಜ್ಞಾನದಿಂದಲೇ ಬಾಧಿತವಾಗುತ್ತದೆ. ಆದ್ದರಿಂದ ಇದಾನೀಮಬಾಧ್ಯತ್ವೇ ಸತಿ ಕಾಲಾಂತರ ಬಾಧ್ಯತ್ವರೂಪವಾದ ವ್ಯವಹಾರಿಕಸತ್ಯವು ಅರ್ಥಕ್ರಿಯೆಯನ್ನು ಕುರಿತು ಪ್ರಯೋಜಕವೆಂದು ಹೇಳಿದರೂ ನಿನಗೆ ಅದರಿಂದ ಏನು ಪ್ರಯೋಜನ?

**ಭಾವವಿಲಾಸಿನೀ–** ಇದಾನೀಮಬಾಧ್ಯತ್ವೇ ಸತಿ ಕಾಲಾಂತರಾಬಾಧ್ಯತ್ವರೂಪವ್ಯಾವಹಾರಿಕ-ಸತ್ಯತ್ವಸ್ಯಾರ್ಥಕ್ರಿಯಾಯಾಂ ಪ್ರಯೋಜಕತಾ ತ್ವದ್ರೀತ್ಯೈವ ನ ಘಟತ ಇತ್ಯಾಹ - **ನಭೋನೈಲ್ಯಮಿತಿ ॥ ॥ ೧೧೫೪ ॥**

**ವಿವರಣೆ-** ಇಂತಹ ವ್ಯವಹಾರಿಕತ್ವವನ್ನು ಹೇಳಿದರೆ ಅದು ಪ್ರಾತಿಭಾಸಿಕವಾದ ನಭೋನೈಲ್ಯದಲ್ಲಿಯೂ ದೇಹಾತ್ಮೈಕ್ಯದಲ್ಲಿಯೂ ಬರುತ್ತದೆ. ಅವು ಪ್ರತಿಭಾಸಿಕವಾದವು

ಅರ್ಥಕ್ರಿಯಾಕಾರಿಯಲ್ಲ. ಆದ್ದರಿಂದ ಇಂತಹ ಧರ್ಮಕ್ಕೆ ಅರ್ಥಕ್ರಿಯಕಾರಿತ್ವ ಪ್ರಯೋಜಕತ್ವವು ನಿನ್ನ ರೀತಿಯಿಂದಲೂ ಕೂಡುವುದಿಲ್ಲ ಎಂದು ಅಭಿಪ್ರಾಯ.

**ತತ್ರಾರ್ಥಕಾರ್ಯಂ ತನ್ನಿಷ್ಠತಾರಾದೇರ್ನೈಲ್ಯಮೇವ ಚ ।**
**ಚಿತ್ತ್ವಂ ಚ ದೇಹೇ ಬಾಧೋಽಸೌ ದೂರಸ್ಥೋಽಪಿ ಹಿ ವಾರಯೇತ್**
**॥ ೧೧೫೫ ॥**

**ಅರ್ಥ-** ತತ್ರ = ನಭೋನೈಲ್ಯ ಮತ್ತು ದೈಹಾತ್ಮೈಕ್ಯ ಸ್ಥಳಗಳಲ್ಲಿ, ಅರ್ಥಕಾರ್ಯಂ = ನಭೋನೈಲ್ಯದ ಅರ್ಥಕಾರ್ಯವೆಂದರೆ, ತನ್ನಿಷ್ಠತಾರಾದೇಃ = ಆಕಾಶದಲ್ಲಿರುವ ತಾರಾದಿಗಳಿಗೆ, ನೈಲ್ಯಮೇವ = ನೈಲ್ಯವನ್ನುಂಟು ಮಾಡುವುದು, ಮತ್ತು ದೇಹೇಚ = ದೇಹದಲ್ಲಿ, ಚಿತ್ತ್ವಂ ಚ = ಚಿತ್ತ್ವವನ್ನುಂಟು ಮಾಡುವುದೇ ಆಗಿದೆ, ಅಸೌ ಬಾಧಃ = ಇವುಗಳಿಗೆ ವಿವಕ್ಷಿತವಾದ ಬಾಧವು, ದೂರಸ್ಥೋಽಪಿ = ಬಹಳ ವಿಳಂಬದ ನಂತರ ಬ್ರಹ್ಮಜ್ಞಾನದ ಸಮಯದಲ್ಲಿ ಇದ್ದರೂ, ತಾರಾದೇರ್ನೈಲ್ಯಮ್ = ತಾರಾದಿಗಳ ನೈಲ್ಯವನ್ನು, ದೇಹೇಚ ಚಿತ್ತ್ವಂ = ದೇಹದ ಚಿತ್ತ್ವವನ್ನು, ವಾರಯೇತ್ ಹಿ = ನಿಷೇಧಿಸುವುದಷ್ಟೇ ?

**ಅನುವಾದ-** ನಭೋನೈಲ್ಯ ಮತ್ತು ದೈಹಾತ್ಮೈಕ್ಯ ಈ ಎರಡರಲ್ಲಿ ನಭೋನೈಲ್ಯದ ಅರ್ಥಕಾರ್ಯವು, ತಾರಾದಿಗಳಿಗೆ ನೈಲ್ಯಸಂಪಾದನೆ ಮತ್ತು ದೇಹಾತ್ಮೈಕ್ಯದ ಅರ್ಥಕಾರ್ಯವು ದೇಹದಲ್ಲಿ ಚಿತ್ತ್ವಸಂಪಾದನೆ, ದೂರಸ್ಥವಾದ ಚರಮಜ್ಞಾನದಿಂದ ಉಂಟುಮಾಡಲ್ಪಡುವ ಈ ಬಾಧವು, ಅಂತಹ ತಾರಾದಿ ನೈಲ್ಯವನ್ನು, ದೇಹದ ಚಿತ್ತ್ವವನ್ನು ನಿಷೇಧಿಸುವುದಷ್ಟೇ.

**ಭಾವವಿಲಾಸಿನೀ–** ನ ಕೇವಲಂ ಕಾಲಾಂತರಬಾಧ್ಯಸ್ಯಾರ್ಥಕ್ರಿಯಾನುಪಯೋಗಿತ್ವಮಾತ್ರಂ ದೃಷ್ಟಮ್ । ಕಿಂತು ತದ್ಘಾತಕತ್ವಮೇವ ದೃಷ್ಟಮಿತ್ಯಾಹ - ತತ್ರೇತಿ ॥ ತತ್ರ ನಭೋನೈಲ್ಯೇ ದೇಹಾತ್ಮೈಕ್ಯೇ ಚ ಅರ್ಥಕಾರ್ಯಮ್ ಅರ್ಥಸ್ಯ ನಭೋನೈಲ್ಯಸ್ಯ ದೇಹಾತ್ಮೈಕ್ಯಸ್ಯ ಚ ಕಾರ್ಯಮ್ । ತನ್ನಿಷ್ಠತಾರಾದೇರ್ನಭೋನಿಷ್ಠತಾರಾದೇರ್ನೈಲ್ಯಂ ದೇಹೇ ಚಿತ್ತ್ವಂ ಚ । ದೂರಸ್ಥೋಽಪ್ಯಸೌ ಚರಮಜ್ಞಾನೇನ ಕ್ರಿಯಮಾಣಬಾಧಃ ವಾರಯೇದ್ಧೀತಿ ಸಂಬಂಧಃ । ಸತ್ಯನೀಲದ್ರವ್ಯಸಂಯೋಗೇ ತನ್ಮಧ್ಯಪತಿತಮಣ್ಯಾದೇರಪಿ ನೈಲ್ಯಂ ದೃಷ್ಟಮ್ । ಮೃದ್ಘಟಯೋರೈಕ್ಯೇ ಮೃನ್ನಿಷ್ಠಂ ಮೃತಮಪಿ ಘಟೇ ದೃಷ್ಟಮ್ । ತಥಾ ನಭೋನೈಲ್ಯೇನ ತಾರಾದೇರ್ನೈಲ್ಯಮ್ ಆತ್ಮಗರಚಿತ್ವೇನ ದೇಹಸ್ಯಾಪಿ ಚಿತ್ತ್ವಂ ಕುತೋ ನ ಜಾಯತೇ । ಕಾಲಾಂತರಬೋಧ್ಯನಾಸ್ತಿತ್ವಾಖ್ಯ-ಬಾಧೇನೈವೇತಿ ತ್ವಯೈವ ವಕ್ತವ್ಯಮ್ । ಏವಂ ಚ ಸತಿ ತಾದೃಶಬಾಧಬಾಧ್ಯಘಟಾದೇ-ರಪ್ಯರ್ಥಕ್ರಿಯಾಪ್ರತಿಘಾತಸ್ತಾದೃಶಬಾಧೇನೈವ ಕುತೋ ನ ಜಾಯತೇ । ತಸ್ಮಾತ್ಸರ್ವಥಾಽ-ಬಾಧ್ಯತ್ವಮೇವಾರ್ಥಕ್ರಿಯಾಯಾಂ ಪ್ರಯೋಜಕಮ್ । ಅತೋ ಪ್ರತಿಹತ್ಯೈವ ಹೇತುಸಾಧ್ಯಯೋ-ರಾಪಾದ್ಯಾಪಾದಕಯೋಶ್ಚಾನುಮಾನೇ ತರ್ಕೇ ಚ ವ್ಯಾಪ್ತಿರಿತಿ ಭಾವಃ ॥ ೧೧೫೫ ॥

**ವಿವರಣೆ-** ಕಾಲಾಂತರಬಾಧ್ಯವಾದುದಕ್ಕೆ ಅರ್ಥಕ್ರಿಯಾನುಪಯೋಗಿತ್ವವು ಇಲ್ಲವೆಂದು ಇಷ್ಟೇ ವಿಷಯವಲ್ಲ. ಆದರೆ ಅರ್ಥಕ್ರಿಯಕಾರ್ಯತ್ವ ಘಾತಕತ್ವವು ಅನುಭವಸಿದ್ಧವಾಗಿದೆ ಎಂದು ಇಲ್ಲಿ ಹೇಳುತ್ತಾರೆ. ನೀಲಮಣಿಗಳ ಮಧ್ಯೆ ಬಿದ್ದ ಗಾಜಿನ ಮಣಿಯು ಹೇಗೆ ನೀಲವಾಗಿ ತೋರುತ್ತದೆಯೋ, ಅದರಂತೆ ನೀಲವಾದ ನಭಸ್ಸಿನ ಮಧ್ಯೆ ಬಿದ್ದ ತಾರಾದಿಗಳು ನೀಲವಾಗಿಯೇ ತೋರಬೇಕು. ಇದು ನಭೋನೈಲ್ಯದ ಅರ್ಥಕಾರ್ಯ. ಆದರಂತೆ ಆತ್ಮನ ಅರ್ಥಕಾರ್ಯವೆಂದರೆ ಚಿತ್ತ್ವ. ಆದ್ದರಿಂದ ದೇಹದಲ್ಲಿ ಚಿತ್ತ್ವವು ತೋರಬೇಕು. ಆದರೆ ಬಹಳದೂರದಲ್ಲಿರುವ ಚರಮಸಾಕ್ಷಾತ್ಕಾರರೂಪವಾದ ಬಾಧವು ದೇಹದಲ್ಲಿ ಚಿತ್ತ್ವವನ್ನು ಮತ್ತು ನಭಸ್ಸಿನ ನೈಲ್ಯವನ್ನು ಬಾಧಿಸುತ್ತದೆ. ಮೃದ್ಘಟಗಳಿಗೆ ಐಕ್ಯವಿರುವುದರಿಂದ ತನ್ನಿಷ್ಠವಾದ ಮೃತ್ತ್ವವು ಘಟದಲ್ಲಿಯೂ ಇದೆ. ಅದರಂತೆ ನಭೋನೈಲ್ಯದಿಂದ ತಾರಾದಿ ನೈಲ್ಯವು, ಆತ್ಮಗತ ಚಿತ್ತ್ವದಿಂದ ದೇಹದಲ್ಲಿ ಚಿತ್ತ್ವವು ಏಕೆ ಉಂಟಾಗುವುದಿಲ್ಲ ಎಂಬ ಪ್ರಶ್ನೆಗೆ ಕಾಲಾಂತರದಲ್ಲಿ ಜನಿಸುವ ನಾಸ್ತಿತ್ವಬೋಧರೂಪವಾದ ಬಾಧವು ಇರುವುದರಿಂದ ಎಂದು ನೀನು ಉತ್ತರವನ್ನು ಹೇಳಬೇಕು. ಹಾಗಾದರೆ ಅಂತಹ ಬಾಧಬಾಧ್ಯವಾದ ಘಟಾದಿಗಳಿಗೂ ಅರ್ಥಕ್ರಿಯಪ್ರತಿಘಾತವು ಅಂತಹ ಬಾಧದಿಂದ ಏಕೆ ಉಂಟಾಗುವುದಿಲ್ಲ ಎಂಬ ಆಕ್ಷೇಪವು ಬರುತ್ತದೆ. ಆದ್ದರಿಂದ ಸರ್ವಥಾ ಅಬಾಧ್ಯತ್ವವೇ ಅರ್ಥಕ್ರಿಯೆಯನ್ನು ಕುರಿತು ಪ್ರಯೋಜಕ ಎಂದು ಹೇಳಬೇಕು. ಆದ್ದರಿಂದ ನಿನ್ನ ಅನುಮಾನದಲ್ಲಿಯೂ ತರ್ಕದಲ್ಲಿಯೂ ವ್ಯಾಪ್ತಿಭಂಗವುಂಟಾಗುತ್ತದೆಂದು ಅಭಿಪ್ರಾಯ.

**ಬಾಧ್ಯತೇ ಶುಕ್ತಿರೂಪ್ಯಾದಿ ತಜ್ಜ್ಞಾನಂ ತು ನ ಬಾಧ್ಯತೇ ।**
**ಯತೋ ರೂಪ್ಯಂ ನೇತಿ ಬಾಧೋ ನ ತು ಜ್ಞಾನಂ ಚ ನೇತ್ಯಪಿ ॥೧೧೫೬॥**

**ಅರ್ಥ-** ಶುಕ್ತಿರೂಪ್ಯಾದಿ = ಶುಕ್ತಿರಜತಾದಿಯು, ಬಾಧ್ಯತೇ = ಬಾಧಿಸಲ್ಪಡುತ್ತದೆ, ತಜ್ಜ್ಞಾನಂ = ಶುಕ್ತಿರಜತಜ್ಞಾನವು, ನ ಬಾಧ್ಯತೇ = ಬಾಧಿಸಲ್ಪಡುವುದಿಲ್ಲ. ಯತಃ= ಏಕೆಂದರೆ, ರೂಪ್ಯಂ ನೇತಿ = ರೂಪ್ಯವಲ್ಲ ಎಂದು, ಬಾಧ = ಬಾಧವೂ ಇದೆ. ತು = ಆದರೆ, ಜ್ಞಾನಂ ಚ ನೇತ್ಯಪಿ = ರೂಪ್ಯಜ್ಞಾನವೂ ಇಲ್ಲ ಎಂಬ ಆಕಾರವುಳ್ಳ ಬಾಧಃ= ಬಾಧವು, ನತು= ಇಲ್ಲ.

**ಅನುವಾದ-** ಶುಕ್ತಿರೂಪ್ಯಾದಿಯು ಬಾಧಿಸಲ್ಪಡುತ್ತವೆ. ಶುಕ್ತಿರೂಪ್ಯಜ್ಞಾನವು ಬಾಧಿಸಲ್ಪಡುವುದಿಲ್ಲ. ಇದು ರೂಪ್ಯವಲ್ಲ ಎಂಬ ಬಾಧವು ಇದೆಯೇ ಹೊರತು, ಇದು ರೂಪ್ಯಜ್ಞಾನವೇ ಅಲ್ಲ ಎಂಬ ಬಾಧವು ಇರುವುದಿಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಹೇತುಸಾಧ್ಯಯೋರ್ವ್ಯಾಪ್ತಿಮನುಭಾವಯತಿ ॥ **ಬಾಧ್ಯತ ಇತಿ** ॥ ತಜ್ಜ್ಞಾನಂ ರೂಪ್ಯಜ್ಞಾನಮ್ । ಅತೋ ರೂಪ್ಯಮೇವ ಮಿಥ್ಯಾ ನ ತು ತಜ್ಜ್ಞಾನಮಿತಿ ಭಾವಃ ॥ ೧೧೫೬ ॥

**ವಿವರಣೆ-** ಪ್ರಕಾರಾಂತರದಿಂದ ಸತತ್ವ ಮತ್ತು ಅರ್ಥಕ್ರಿಯಕಾರಿತ್ವಗಳಿಗೆ ವ್ಯಾಪ್ತಿಯನ್ನು ಉಪಪಾದನೆ ಮಾಡುತ್ತಾರೆ. ರೂಪ್ಯವೇ ಮಿಥ್ಯ ಹೊರತು, ರೂಪ್ಯಜ್ಞಾನವು ಮಿಥ್ಯೆಯಲ್ಲ. ರೂಪ್ಯಜ್ಞಾನಕ್ಕೇ ಅರ್ಥಕ್ರಿಯಾಕಾರ್ಯತ್ವವು ಇರುವುದು. ಆದ್ದರಿಂದ ಅಬಾಧ್ಯವಾದುದೇ ಅರ್ಥಕ್ರಿಯಾಕಾರಿ ಎಂಬ ನಮ್ಮ ವ್ಯಾಪ್ತಿಗೆ ಭಂಗವಿಲ್ಲ ಎಂದು ಅಭಿಪ್ರಾಯ.

**ಜ್ಞಾನಕಾರ್ಯಂ ಪ್ರವೃತ್ತ್ಯಾದಿ ತತಸ್ತತ್ರಾಪಿ ಜಾಯತೇ ।**
**ತಸ್ಮಾದಬಾಧ್ಯತೈವಾರ್ಥಕ್ರಿಯಾಯಾಮುಪಯುಜ್ಯತೇ ॥ ೧೧೫೭ ॥**

**ಅರ್ಥ-** ಜ್ಞಾನಕಾರ್ಯಂ = ಜ್ಞಾನಕಾರ್ಯವಾದ, ಪ್ರವೃತ್ತ್ಯಾದಿ = ಪ್ರವೃತ್ತ್ಯಾದಿಗಳು, ತತಃ = ಅಂತಹ ಶುಕ್ತಿರಜತಜ್ಞಾನದಿಂದ, ತತ್ರಾಪಿ = ಶುಕ್ತಿರಜತಸ್ಥಳದಲ್ಲಿಯೂ, ಜಾಯತೇ = ಉಂಟಾಗುತ್ತದೆ, ತಸ್ಮಾತ್ = ಆ ಕಾರಣದಿಂದ, ಅರ್ಥಕ್ರಿಯಾಯಾಂ = ಅರ್ಥಕ್ರಿಯೆಯನ್ನು ಕುರಿತು, ಅಬಾಧ್ಯತೈವ = ಅಬಾಧ್ಯತ್ವವೇ, ಉಪಯುಜ್ಯತೇ = ಪ್ರಯೋಜಕವಾಗುತ್ತದೆ.

**ಅನುವಾದ-** ಜ್ಞಾನಕಾರ್ಯವಾದ ಪ್ರವೃತ್ತ್ಯಾದಿಗಳು ಅಂತಹ ಶುಕ್ತಿರಜತಜ್ಞಾನದಿಂದ ಆ ಸ್ಥಳದಲ್ಲಿಯೂ ಉಂಟಾಗುತ್ತದೆ ಆ ಕಾರಣದಿಂದ ಅರ್ಥಕ್ರಿಯೆಯನ್ನು ಕುರಿತು ಅಬಾಧ್ಯತ್ವವೇ ಪ್ರಯೋಜಕವಾದುದು.

**ಭಾವವಿಲಾಸಿನೀ–** ತತಃ ಅಬಾಧ್ಯತ್ವಾತ್ ॥ ೧೧೫೭ ॥

**ಅನ್ವಯವ್ಯತಿರೇಕಾಭ್ಯಾಂ ಕಾರ್ಯಾಕಾರ್ಯವ್ಯವಸ್ಥಿತಿಃ ।**
**ಪ್ರವೃತ್ತ್ಯಾ ಚ ನಿವೃತ್ತ್ಯಾ ಚ ತೌ ಜ್ಞಾನಸ್ಯೈವ ಕೇವಲಮ್ ॥ ೧೧೫೮ ॥**

**ಅರ್ಥ-** ಕಾರ್ಯಾಕಾರ್ಯವ್ಯವಸ್ಥಿತಿಃ = ಈ ಕಾರಣಗಳಿಗೆ ಇದು ಕಾರ್ಯ, ಇದು ಕಾರ್ಯವಲ್ಲ ಎಂಬ ವ್ಯವಸ್ಥೆಯು, ಅನ್ವಯವ್ಯತಿರೇಕಾಭ್ಯಾಂ = ಕಾರಣದ ಅನ್ವಯ ವ್ಯತಿರೇಕದಿಂದ ಉಂಟಾಗುತ್ತದೆ. ಪ್ರವೃತ್ತ್ಯಾ ಚ = ಜ್ಞಾನವಿದ್ದರೆ ಭಯಕಂಪಾದಿಗಳು ಪ್ರವೃತ್ತವಾಗುವುದರಿಂದ (ಉಂಟಾಗುವುದರಿಂದ), ನಿವೃತ್ತ್ಯಾ = ಜ್ಞಾನವಿಲ್ಲದಿದ್ದರೆ ಭಯಕಂಪಾದಿಗಳು ನಿವೃತ್ತವಾಗುವುದರಿಂದ (ಇಲ್ಲದಿರುವುದರಿಂದ), ತೌ= ಆ ಅನ್ವಯವ್ಯತಿರೇಕಗಳು ಕೇವಲಂ, ಜ್ಞಾನಸ್ಯೈವ = ಜ್ಞಾನಕ್ಕೆ ಮಾತ್ರ ಇವೆ. (ಅರ್ಥಕ್ಕೆ ಕಾರ್ಯವನ್ನು ಕುರಿತು) ಅನ್ವಯವ್ಯತಿರೇಕಗಳು ಇಲ್ಲ.

**ಅನುವಾದ-** ಇದು ಕಾರ್ಯ, ಇದು ಕಾರ್ಯವಲ್ಲವೆಂಬ ವ್ಯವಸ್ಥೆಗೆ ಅನ್ವಯ ವ್ಯತಿರೇಕ ವ್ಯಾಪ್ತಿಗಳು ಕಾರಣ. ಪ್ರಕೃತ ಜ್ಞಾನಕ್ಕೆ ಅನ್ವಯವ್ಯತಿರೇಕಗಳಿವೆಯೇ ವಿನಾ ಅರ್ಥಕ್ಕಲ್ಲ. ಜ್ಞಾನವಿದ್ದರೆ ಭಯಕಂಪಾದಿಗಳು ಹುಟ್ಟುತ್ತವೆ. ಜ್ಞಾನವಿಲ್ಲದಿದ್ದರೆ ಇಲ್ಲ. ಆದ್ದರಿಂದ ಜ್ಞಾನವೇ ಅರ್ಥಕ್ರಿಯಾಕಾರಿ.

**ಭಾವವಿಲಾಸಿನೀ–** ಪ್ರವೃತ್ತ್ಯಾ ಜ್ಞಾನೇ ಸತಿ ಭಯಕಂಪಾದೇಃ ಪ್ರವೃತ್ತ್ಯಾ । ತದಭಾವೇ ನಿವೃತ್ತ್ಯಾ ಚ। ತೌ ಅನ್ವಯವ್ಯತಿರೇಕೌ ॥ ೧೧೫೮ ॥

ಉದಾಹರಣಮೇತಸ್ಯ ಕೃಷ್ಣಕಾವ್ಯೇ ಪ್ರದೃಶ್ಯತಾಮ್ ।
ಪುನರುಕ್ತೇರ್ವಿಸ್ತೃತೇಶ್ಚ ಭಯಾನ್ನೇಹಾಪಿ ಲಿಖ್ಯತೇ ॥ ೧೧೫೯ ॥

ದುರಾಗ್ರಹಗೃಹೀತೋ ಯೋ ಯುಕ್ತಿಯುಕ್ತಂ ನ ಪೋಷಯೇತ್ ।
ಸ ದೂಷಯೇನ್ನಿಜಂ ಶ್ಲಾಘ್ಯಂ ದೋಷಜ್ಞತ್ವಂ ನ ಸಂಶಯಃ ॥ ೧೧೬೦ ॥

**ಅರ್ಥ-** ಏತಸ್ಯ ಉದಾಹರಣಮ್= ಇದರ ಉದಾಹರಣೆಯನ್ನು, ಕೃಷ್ಣಕಾವ್ಯೇ= ನಮ್ಮಿಂದ ರಚಿತವಾದ ಕೃಷ್ಣಕಾವ್ಯವಾದ ರುಕ್ಮಿಣೀಶವಿಜಯದಲ್ಲಿ, ಪ್ರದೃಶ್ಯತಾಮ್ = ನೋಡಿ, ಪುನರುಕ್ತೇಃ= ಪೌನರುಕ್ತ್ಯದ, ಚ = ಮತ್ತು, ವಿಸ್ತೃತೇಃ = ವಿಸ್ತಾರದ, ಭಯಾತ್ = ಭಯದಿಂದ, ಇಹಾಪಿ= ಇಲ್ಲಿಯೂ ಕೂಡ, ನ ಲಿಖ್ಯತೇ = ನಮ್ಮಿಂದ ಬರೆಯಲ್ಪಡುವುದಿಲ್ಲ.

ಯಃ = ಯಾವನು, ದುರಾಗ್ರಹಗೃಹೀತಃ = ದುರಾಗ್ರಹಗೃಹೀತನಾಗಿ, ಯುಕ್ತಿಯುಕ್ತಮ್ = ಯುಕ್ತಿಯುಕ್ತವಾದ ಅರ್ಥವನ್ನು, ನ ಪೋಷಯೇತ್ = ಪೋಷಿಸುವುದಿಲ್ಲವೋ, ಸ = ಅವನು, ನಿಜಂ = ತನ್ನ, ಶ್ಲಾಘ್ಯಂ = ಮಾನ್ಯವಾದ, ದೋಷಜ್ಞತ್ವಂ = ವಿದ್ವತ್ತ್ವವನ್ನೇ, ದೂಷಯೇತ್ = ದೂಷಿಸುತ್ತಾನೆ, ನ ಸಂಶಯಃ = ಇದರಲ್ಲಿ ಸಂಶಯವಿಲ್ಲ.

**ಅನುವಾದ-** ಜ್ಞಾನವೇ ಅರ್ಥಕ್ರಿಯಾಕಾರಿ ಎಂಬ ವಿಷಯದಲ್ಲಿ ಉದಾಹರಣೆಯನ್ನು ರುಕ್ಮಿಣೀಶವಿಜಯದಲ್ಲಿ ನೋಡಿ. ಪುನರುಕ್ತಿಯ ಭಯದಿಂದಲೂ ಮತ್ತು ಗ್ರಂಥವಿಸ್ತಾರ ಭಯದಿಂದಲೂ ಇಲ್ಲಿಯೂ ಕೂಡ ಆ ವಿಷಯವನ್ನು ಬರೆಯುವುದಿಲ್ಲ. (ಹೇಳುವುದಿಲ್ಲ.) ಯಾವನು ದುರಾಗ್ರಹಗೃಹೀತನಾದವನೋ ಅವನು ಯುಕ್ತಿಯುಕ್ತವಾದ ಅರ್ಥವನ್ನು ಸಮರ್ಥಿಸುವುದಿಲ್ಲ. ಅವನು ತನ್ನ ಶ್ಲಾಘ್ಯವಾದ ವಿದ್ವತ್ತೆಯನ್ನೇ ದೂಷಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಕೃಷ್ಣಕಾವ್ಯೇ ರುಗ್ಮಿಣೀಶವಿಜಯೇ । ಯಮಕರೂಪತ್ವಾನ್ನಾಸ್ಮಾಭಿರ್ಲಿಖಿತಮ್। ಸುಪ್ತಪುರುಷೋಪರಿ ಸರ್ಪಗಮನೇಽಪಿ ಜ್ಞಾನಾಭಾವೇ ಭಯಾದೇರ್ನಿವೃತ್ತಿಃ ರಜ್ಜುಸರ್ಪಾದಿಸ್ಥಲೇ ಸರ್ಪಾಭಾವೇಽಪಿ ಜ್ಞಾನಸದ್ಭಾವಾತ್ ಪ್ರವೃತ್ತಿರಿತಿ ತತ್ರತ್ಯಶ್ಲೋಕಸ್ಯ ಫಲಿತೋಽರ್ಥಃ ॥ ೧೧೬೦ ॥

ಇದಾನೀಂ ಬಾಧಬೋಧೋಽಸ್ತಿ ನಾಸ್ತ್ಯನ್ಯಸ್ಯ ಕಿಲಾಧುನಾ ।
ಕಿಮನೇನ ವಿಶೇಷೇಣ ಪ್ರಕೃತಾನುಪಯೋಗಿನಾ ॥ ೧೧೬೧ ॥

ಗೃಹೇ ಮೃತಸ್ಯ ಮರಣಮುರಸ್ತಾಡನಕಾರಿಭಿಃ ।
ಆಘೋಷ್ಯತೇ ಗುಹಾಮಧ್ಯೇ ಮೃತಸ್ಯ ತು ಕಥಾಽಪಿ ನ ॥ ೧೧೬೨ ॥

**ಅರ್ಥ-** ಇದಾನೀಂ = ಈಗ, ಬಾಧಬೋಧೋऽಸ್ತಿ = ಶಶವಿಷಣಾದಿಗಳಿಗೆ ಬಾಧಬೋಧವಿದೆ, ಅನ್ಯಸ್ಯ = ಘಟಾದಿಗಳಿಗೆ, ಅಧುನಾ = ಈಗ, ನಾಸ್ತಿ ಕಿಲ = ಬಾಧವು ಇಲ್ಲವಷ್ಟೇ, ಪ್ರಕೃತಾನುಪಯೋಗಿನಾ = ಪ್ರಕೃತ ಅನುಪಯೋಗಿಯಾದ, ಅನೇನ ವಿಶೇಷೇಣ = ಈ ವೈಲಕ್ಷಣ್ಯದಿಂದ, ಕಿಂ = ಏನು ಪ್ರಯೋಜನ?

ಗೃಹೇ ಮೃತಸ್ಯ = ಮನೆಯಲ್ಲಿ ಮೃತನಾದವನ, ಮರಣಮ್ = ಮರಣವು, ಉರಸ್ತಾಡನಕಾರಿಭಿಃ = ಎದೆಯನ್ನು ಬಡಿದುಕೊಳ್ಳುವ ವ್ಯಕ್ತಿಗಳಿಂದ, ಆಘೋಷ್ಯತೇ = ಘೋಷಿಸಲ್ಪಡುತ್ತದೆ, ಗುಹಾಮಧ್ಯೇ ಮೃತಸ್ಯ = ಗುಹೆಯ ಮಧ್ಯದಲ್ಲಿ ಮೃತನಾದವನಿಗಾದರೂ, ಕಥಾऽಪಿ ನ = ಅವನ ವಾರ್ತೆಯೇ ಇರುವುದಿಲ್ಲ.

**ಅನುವಾದ- ಒಂದಕ್ಕೆ ಈಗ ಬಾಧವು ಇದೆ. ಇನ್ನೊಂದಕ್ಕೆ ಈಗ ಬಾಧವು ಇಲ್ಲ. ಇಂತಹ ಪ್ರಕೃತ ಅನುಪಯೋಗಿಯಾದ ವೈಲಕ್ಷಣ್ಯದಿಂದ ಏನು ಪ್ರಯೋಜನ? ಮನೆಯಲ್ಲಿ ಮೃತನಾದವನ ಮನೆಯು ಎದೆಯನ್ನು ಬಡಿದುಕೊಳ್ಳುವ ವ್ಯಕ್ತಿಗಳಿಂದ ಘೋಷಿಸಲ್ಪಡುತ್ತದೆ. ಗುಹೆಯ ಮಧ್ಯದಲ್ಲಿ ಮೃತನಾದವನ ವಾರ್ತೆಯೂ ಕೇಳಿ ಬರುವುದಿಲ್ಲ.**

**ಭಾವವಿಲಾಸಿನೀ–** ಬಾಧ್ಯತ್ವಸಾಮ್ಯೇ ಇದಾನೀಂ ತದ್ಬೋಧತದಬೋಧಾಭ್ಯಾಂ ನ ಕೋऽಪಿ ವಿಶೇಷ ಇತ್ಯತ್ರ ದೃಷ್ಟಾಂತಮಾಹ - **ಇದಾನೀಮಿತಿ** ॥ ೧೧೬೧- ೧೧೬೨ ॥

**ವಿವರಣೆ-** ತ್ರಿಕಾಲದಲ್ಲಿ ಅವಿದ್ಯಮಾನತ್ವವು ಪ್ರಾತಿಭಾಸಿಕ ಮತ್ತು ವ್ಯಾವಹಾರಿಕಕ್ಕೆ ಸಾಧಾರಣವಾಗಿದೆಯೆಂದ ಮೇಲೆ ಈಗ ಬಾಧಬಾರದೇ ಇರುವುದು, ಈಗ ಬರುವುದು ಪ್ರಕೃತ ಅನುಪಯುಕ್ತವಾದುದು. ವಸ್ತುವು ಅವಿದ್ಯಮಾನವೆಂದಾದ ಮೇಲೆ ಅದರಿಂದ ಯಾವ ಅರ್ಥಕ್ರಿಯೆಯೂ ಉಂಟಾಗುವುದಿಲ್ಲ. ಆದ್ದರಿಂದ ಘಟದಲ್ಲಿ ಅರ್ಥಕ್ರಿಯೆಯನ್ನು ಕೂಡಿಸಲು ಸಾಧ್ಯವಿಲ್ಲ. ಗುಹೆಯಲ್ಲಿ ಮೃತನಾದವನ ಮರಣವು ಈಗ ಊಹಿಸಲ್ಪಡುವುದಿಲ್ಲ ಎಂಬ ನಿಮಿತ್ತದಿಂದ ಮರಣದಲ್ಲಿ ಏನು ವ್ಯತ್ಯಾಸವಿಲ್ಲವಷ್ಟೇ? ಆದ್ದರಿಂದ ಅವನು ಹೇಗೆ ಜೀವನಪ್ರಯುಕ್ತವಾದ ಅರ್ಥಕ್ರಿಯೆಯನ್ನು ಮಾಡಲಾರನೋ, ಅದರಂತೆ ಯಾವನ ಮರಣವು ಈಗಲೇ ಊಹಿಸಲ್ಪಡುತ್ತದೋ, ಅವನು ಅರ್ಥಕ್ರಿಯೆಯನ್ನು ಮಾಡಲಾರನು. ಅದರಂತೆ ಪ್ರಾತಿಭಾಸಿಕವೂ ಮತ್ತು ವ್ಯಾವಹಾರಿಕವೂ ಎರಡು ಕಾಲತ್ರಯದಲ್ಲಿ ಅವಿದ್ಯಮಾನವಾದವುಗಳಾದ್ದರಿಂದ ಎರಡು ಸ್ಥಳದಲ್ಲಿಯೂ ಅರ್ಥಕ್ರಿಯೆ ಉಂಟಾಗಲಾರದು ಎಂದು ಅಭಿಪ್ರಾಯ.

**ಅಯಂ ನ ಕಾರ್ಯಕರ್ತಾ ಚೇತ್ಸ ಕಿಂ ಕರ್ತಾ ಭವಿಷ್ಯತಿ ।**
**ಅತೋ ಹಿ ಮರಣಾದನ್ಯಜ್ಜೀವನಂ ಸಿದ್ಧಯೇ ಭವೇತ್ ॥ ೧೧೬೩ ॥**

ಶಾಸನ - ಶಿಲ್ಪ - 303 page



ಅಸತ್ತ್ವಂ ಮರಣಪ್ರಾಯಂ ಸತ್ತ್ವಮೇವ ಹಿ ಜೀವನಮ್ ।
ತಸ್ಮಾದರ್ಥಕ್ರಿಯಾಸಿದ್ಧ್ಯೈ ಸತ್ತ್ವಂ ವಾಚ್ಯಮಬಾಧಿತಮ್ ॥ ೧೧೬೪ ॥

**ಅರ್ಥ-** ಅಯಂ = ಈಗ ಮರಣವು ಘೋಷಿಸಲ್ಪಟ್ಟವನು, ಕಾರ್ಯಕರ್ತಾ ನ ಚೇತ್ = ಕಾರ್ಯಕರ್ತನಾಗದಿದ್ದರೆ, ಸಃ = ಗುಹೆಯಲ್ಲಿ ಮೃತನಾದವನು, ಕರ್ತಾ ಕಿಂ ಭವಿಷ್ಯತಿ = ಕರ್ತನಾಗುತ್ತಾನೆಯೇ ? ಅತೋ ಹಿ = ಆ ಕಾರಣದಿಂದಲೂ ಕೂಡ, ಮರಣಾದನ್ಯತ್ = ಮರಣಭಿನ್ನವಾದ, ಜೀವನಂ = ಜೀವನವೇ, ಸಿದ್ಧಯೇ = ಕಾರ್ಯಸಿದ್ಧಿಗಾಗಿ, ಭವೇತ್ = ಅಪೇಕ್ಷಿತವಾಗುತ್ತದೆ, ಅಸತ್ತ್ವಂ = ಅಸತ್ತ್ವವು, ಮರಣಪ್ರಾಯಂ = ಮರಣಪ್ರಾಯವಾದುದು, ಸತ್ತ್ವಮೇವ = ಸತ್ತ್ವವೇ, ಜೀವನಮ್ ಹಿ = ಜೀವನವಷ್ಟೇ, ತಸ್ಮಾತ್ = ಆದ್ದರಿಂದ, ಅರ್ಥಕ್ರಿಯಾಸಿದ್ಧಿಃ = ಅರ್ಥಕ್ರಿಯಾಕ್ಕೋಸ್ಕರ, ಅಬಾಧಿತಮ್ ಸತ್ತ್ವಂ = ಅಬಾಧಿತವಾದ ಸತ್ವವು, ವಾಚ್ಯಮ್ = ಪ್ರಯೋಜಕವಾಗಿ ಹೇಳಲ್ಪಡಬೇಕು.

**ಅನುವಾದ-** ಈಗ ಆಘೋಷಿತವಾದ ಮರಣವುಳ್ಳವನು ಕಾರ್ಯಕರ್ತನಾಗದಿದ್ದರೆ, ಗುಹೆಯಲ್ಲಿ ಮರಣಹೊಂದಿದವನು, ಕಾರ್ಯಕರ್ತನಾಗುತ್ತಾನೆಯೇ? ಆದ್ದರಿಂದಲೂ ಮರಣಭಿನ್ನವಾದ ಜೀವನವೇ ಕಾರ್ಯಸಿದ್ಧಿಯನ್ನು ಕುರಿತು ಪ್ರಯೋಜಕವೆಂದು ಹೇಳಬೇಕು. ಅಸತ್ತ್ವವು ಮರಣಪ್ರಾಯವಾದದು. ಸತ್ತ್ವವೇ ಜೀವನವಷ್ಟೇ. ಆದ್ದರಿಂದ ಅರ್ಥಕ್ರಿಯಾಕಾರಿತ್ವಸಿದ್ಧಿಗಾಗಿ ಅಬಾಧಿತಸತ್ತ್ವವನ್ನು ಪ್ರಯೋಜಕವೆಂದು ಹೇಳಬೇಕು.

**ಭಾವವಿಲಾಸಿನೀ–** ಅಯಮಿದಾನೀಮಾಘೋಷಿತಮರಣಃ । ಸಃ ಅನಾಘೋಷಿತಮರಣಃ । ಸಿದ್ಧಯೇ ಕಾರ್ಯಸಿದ್ಧಯೇ ॥ ೧೧೬೩ - ೧೧೬೪ ॥

ವ್ಯಾವಹಾರಿಕಸತ್ತ್ವಂ ಚ ಸನ್ನಾಮ್ನಾ ಛಾದನಂ ಪರಮ್ ।
ಅಮಂಗಲಸ್ಯ ವಾರಸ್ಯ ಯಥಾ ಮಂಗಲವಾರತಾ ॥ ೧೧೬೫ ॥

**ಅರ್ಥ-** ಅಮಂಗಲಸ್ಯ ವಾರಸ್ಯ = ಅಮಂಗಲವಾದ ವಾರಕ್ಕೆ, ಯಥಾ = ಹೇಗೆ, ಮಂಗಲವಾರತಾ = ಮಂಗಳವಾರವೆಂದು ವ್ಯವಹಾರವಿದೆಯೋ, ಅದರಂತೆ ವ್ಯವಹಾರಿಕಸತ್ತ್ವಂ = ವ್ಯಾವಹಾರಿಕ ಸತ್ತ್ವವು, ಸನ್ನಾಮ್ನಾ = ಸತ್ಯ ಎಂಬ ಹೆಸರಿನಿಂದ, ಪರಮ್ ಛಾದನಂ = ಕೇವಲ ಆಚ್ಛಾದನೆ ಮಾಡುವುದಾಗಿದೆ.

**ಅನುವಾದ-** ಅಮಂಗಲವಾದ ವಾರಕ್ಕೆ ಹೇಗೆ ಮಂಗಳವಾರ ಎಂಬ ವ್ಯವಹಾರವಿದೆಯೋ, ಅದರಂತೆ ವ್ಯಾವಹಾರಿಕ ಸತ್ವವೆಂಬುದು ಸತ್ ಎಂಬ ಹೆಸರಿನಿಂದ ಕೇವಲ ಆಚ್ಛಾದನೆ ಮಾಡುವುದಷ್ಟೇ.

**ಭಾವವಿಲಾಸಿನೀ–** ಛಾದನಮ್ ಅಸತ್ತ್ವಸ್ಯಾಚ್ಛಾದನಮ್ ॥ ೧೧೬೫ ॥

**ವಿವರಣೆ-** ಅಮಂಗಲವಾರವನ್ನು ಮಂಗಳವಾರವೆಂದು ಕರೆದರೂ ಹೇಗೆ ಅದರಲ್ಲಿ ಮಂಗಳತ್ವವು ಉಂಟಾಗುವುದಿಲ್ಲವೋ, ಅದರಂತೆ ಕಾಲಾಂತರದಲ್ಲಿ ಬಾಧ್ಯವಾದುದನ್ನು ವ್ಯಾವಹಾರಿಕ ಸತ್ ಎಂಬ ಶಬ್ದದಿಂದ ಕರೆದರೂ, ಅದು ಕೇವಲ ಆಚ್ಛಾದನೆಯೇ ಹೊರತು, ಅದರಿಂದ ಅರ್ಥಕ್ರಿಯೆಯು ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

ಕಿಂ ವಾಂಛಿತಫಲಂ ದದ್ಯಾನ್ನಾಮಮಾತ್ರಮಹಾತರುಃ ।
ತ್ರಿಕಾಲೇಷ್ವಪಿ ಸತ್ತ್ವಸ್ಯಾಭಾವೇನ ಹ್ಯುಭಯಂ ಸಮಮ್ ॥ ೧೧೬೬ ॥

**ಅರ್ಥ-** ನಾಮಮಾತ್ರಮಹಾತರುಃ = ಹೆಸರಿನಿಂದ ಮಾತ್ರ ಮಹಾವೃಕ್ಷವೆಂದು ಕರೆಸಿಕೊಳ್ಳಲ್ಪಡುವುದು, ವಾಂಛಿತಫಲಂ = ಅಭೀಷ್ಟವಾದ ಫಲವನ್ನು, ಕಿಂ ದದ್ಯಾತ್ = ಕೊಡುತ್ತದೆಯೇ, ಹ್ಯುಭಯಂ = ಪ್ರಾತಿಭಾಸಿಕ ಮತ್ತು ವ್ಯಾವಹಾರಿಕಗಳೆರಡೂ, ತ್ರಿಕಾಲೇಷ್ವಪಿ = ಮೂರು ಕಾಲದಲ್ಲಿಯೂ, ಸತ್ತ್ವಸ್ಯಾಭಾವೇನ = ಸತ್ತ್ವವು ಇಲ್ಲದಿರುವುದರಿಂದ, ಸಮಮ್ ಹಿ = ಸಮಾನವಾಗಿದೆಯಷ್ಟೇ.

**ಅನುವಾದ-** ಯಾವುದಾದರೂ ಒಂದು ಮುಳ್ಳುಗಿಡಕ್ಕೆ ಮಹಾವೃಕ್ಷವೆಂದು ನಾಮಕರಣ ಮಾಡಿದರೆ, ಅದು ಅಭೀಷ್ಟವಾದ ಫಲಗಳನ್ನು ಕೊಡುತ್ತದೆಯೇ ? ಕಾಲತ್ರಯದಲ್ಲಿ ಅಸತ್ತ್ವವು ವ್ಯವಹಾರಿಕ ಮತ್ತು ಪ್ರಾತಿಭಾಸಿಕಗಳಿಗೆ ಸಮಾನವಾಗಿದೆಯಷ್ಟೇ ?

**ಭಾವವಿಲಾಸಿನೀ–** ನಾಮಮಾತ್ರಮಹಾತರುಃ ಮಾತ್ರಪದೇನ ಫಲಪುಷ್ಪಾದಿಕಂ ವ್ಯವಚ್ಛಿನತ್ತಿ । ಮಹಾತರುರಿತಿ ಕಂಟಕಿತಗುಲ್ಮವಿಶೇಷಸ್ಯ ನಾಮ । ಯಥಾ ಸ ತೂಷ್ಣೀಂ ಮಹಾತರುರಿತ್ಯುಚ್ಯತೇ। ತಥಾ ಕಾಲತ್ರಯೇಽಪ್ಯಸತ್ತ್ವರೂಪವ್ಯಾವಹಾರಿಕಸತ್ತ್ವಮಪೀತಿ ಭಾವಃ ॥ ೧೧೬೬ ॥

**ವಿವರಣೆ-** ಕಾಲತ್ರಯದಲ್ಲಿ ಅಸತ್ತ್ವವಿರುವುದರಿಂದ ಹೇಗೆ ಪ್ರಾತಿಭಾಸಿಕವು, ಅರ್ಥಕ್ರಿಯಾಕಾರಿಯಾಗುವುದಿಲ್ಲವೋ, ಅದರಂತೆ ವ್ಯವಹಾರಿಕವೂ ಅರ್ಥಕ್ರಿಯಾಕಾರಿ ಆಗುವುದಿಲ್ಲವೆಂದು ಅಭಿಪ್ರಾಯ.

ವ್ಯಾವಹಾರಿಕತಾ ಬಾಧೇ ತ್ವಸತ್ತಾ ಪರನಾಮಿಕಾ ।
ಬಾಧಾಭಾವೇ ತು ಸತ್ತ್ವೈವ ನಾಸ್ಮತ್ಪಕ್ಷವಿರೋಧಿನೀ ॥ ೧೧೬೭ ॥

**ಅರ್ಥ-** ಬಾಧೇ= ವ್ಯಾವಹಾರಿಕವಾದುದು ಬಾಧ್ಯವಾದರೆ, ವ್ಯವಹಾರಿಕತಾ= ವ್ಯವಹಾರಿಕತ್ವವೆಂಬುದು, ಸತ್ತಾಪರನಾಮಿಕಾ= ಅಸತ್ತ್ವ ಎಂಬುದಕ್ಕೆ ಇನ್ನೊಂದು ಪರ್ಯಾಯಪದವಾಗುತ್ತದೆ. ಬಾಧಾಭಾವೇ = ಬಾಧವು ಇಲ್ಲದಿದ್ದರೆ, ಸತ್ತೈವ= ಅದು ಸತ್ತ್ವವೇ, ಅಸ್ಮತ್ಪಕ್ಷವಿರೋಧಿನೀ ನ= ನಮ್ಮ ಪಕ್ಷಕ್ಕೆ ವಿರೋಧಿಯಲ್ಲ.

**ಅನುವಾದ-** ವ್ಯಾವಹಾರಿಕ ಸತ್‌ಪದಾರ್ಥಕ್ಕೆ ಬಾಧವಿದ್ದರೆ, ವ್ಯವಹಾರಿಕಾ ಎಂಬ ಪದವು ಅಸತ್ ಎಂಬ ಪದಕ್ಕೆ ಪರ್ಯಾಯ ಪದವಾಗುತ್ತದೆ. (ವ್ಯಾವಹಾರಿಕತ್ವ ಎಂಬ ಪದವು ಅಸತ್ತ್ವ ಎಂಬ ಪದಕ್ಕೆ ಪರ್ಯಾಯವಾಗುತ್ತದೆ.) ಬಾಧವು ಇಲ್ಲದಿದ್ದರೆ ಅದು ನಮಗೆ ಅಭಿಪ್ರೇತವಾದ ಸತ್ತ್ವವೇ ಆಗಿದೆ. ಅದು ನಮ್ಮ ಪಕ್ಷಕ್ಕೆ ವಿರೋಧಿಯಲ್ಲ.

**ಭಾವವಿಲಾಸಿನೀ–** ಏತದೇವ ದರ್ಶಯತಿ ॥ ವ್ಯಾವಹಾರಿಕತೇತಿ ॥ ಬಾಧೇ ಬಾಧೇ ಸತಿ ॥

ಅತಸ್ತತೋಽಪ್ಯನ್ಯದೇವ ಸತ್ತ್ವಂ ಹೇತುತ್ವಸಿದ್ಧಯೇ ।
ವಾಚ್ಯಂ ಸಾ ಚಾಬಾಧ್ಯತೈವ ಸತ್ತ್ರೈವಿಧ್ಯಂ ಹಿ ತೇ ಮತೇ ॥ ೧೧೬೮ ॥

ಅತಃ = ಆದ್ದರಿಂದ, ತತೋಽಪ್ಯನ್ಯದೇವ ಸತ್ತ್ವಂ = ವ್ಯಾವಹಾರಿಕಸತ್ತ್ವಕ್ಕಿಂತ ಭಿನ್ನವಾದ ಸತ್ತ್ವವೇ, ಹೇತುತ್ವಸಿದ್ಧಯೇ = ಅರ್ಥಕ್ರಿಯಾಕಾರಿತ್ವವನ್ನು ಕುರಿತು ಪ್ರಯೋಜಕವೆಂದು, ವಾಚ್ಯಮ್ = ಹೇಳಲ್ಪಡಬೇಕು, ಸಾಚ = ಅಂತಹ ಸತ್ವವಾದರೂ, ಅಬಾಧ್ಯತೈವ = ಅಬಾಧ್ಯತ್ವ ರೂಪವಾದುದೇ, ತೇ ಮತೇ = ನಿನ್ನ ಮತದಲ್ಲಿ, ಸತ್ತ್ರೈವಿಧ್ಯಂ ಹಿ = ಮೂರುವಿಧವಾದ ಸತ್ಯವು ಇದೆಯಷ್ಟೇ.

**ಭಾವವಿಲಾಸಿನೀ–** ತತಃ ವ್ಯಾವಹಾರಿಕಸತ್ತ್ವಾತ್ ॥ ೧೧೬೮ ॥

ಧ್ವಸ್ತೇ ಘಟೇ ಧ್ವಂಸ ಏವ ಕಾರ್ಯಕರ್ತೃತ್ವಘಾತಕಃ ।
ಧ್ವಂಸೋ ನಾಮೋತ್ತರಾಸತ್ತ್ವಂ ತಚ್ಚ ಯದ್ಯರ್ಥಘಾತಕಮ್ ।
ತ್ರಿಕಾಲೇಽಪ್ಯಸತಸ್ತರ್ಹಿ ಕರ್ತೃತಾ ಕಥಮುಚ್ಯತಾಮ್ ॥ ೧೧೬೯ ॥

**ಅರ್ಥ-** ಧ್ವಸ್ತೇ ಘಟೇ = ಧ್ವಂಸವನ್ನು ಹೊಂದಿದ ಘಟದಲ್ಲಿ, ಧ್ವಂಸ ಏವ = ಧ್ವಂಸವೇ, ಕಾರ್ಯಕರ್ತೃತ್ವಘಾತಕಃ = ಅರ್ಥಕ್ರಿಯಾಕಾರಿತ್ವಕ್ಕೆ ಘಾತಕವಾಗಿದೆ, ಧ್ವಂಸೋ ನಾಮ = ಧ್ವಂಸ ಎಂದರೆ, ಉತ್ತರಾಸತ್ತ್ವಂ = ಉತ್ತರಕಾಲೀನವಾದ ಅಸತ್ತ್ವ, ತಚ್ಚ = ಅಂತಹ ಅಸತ್ತ್ವವೇ, ಯದಿ ಅರ್ಥಘಾತಕಮ್ = ಅರ್ಥಘಾತಕವಾದರೆ, ತ್ರಿಕಾಲೇಽಪಿ = ಮೂರು ಕಾಲದಲ್ಲಿಯೂ, ಅಸತಃ = ಅಸತ್ತಾದ ವಸ್ತುವಿಗೆ, ತರ್ಹಿ= ಹಾಗಾದರೆ, ಕರ್ತೃತಾ = ಅರ್ಥಕ್ರಿಯಾಕಾರಿತ್ವವು, ಕಥಮ್ = ಹೇಗೆ ಎಂದು, ಉಚ್ಯತಾಮ್ = ಎಂದು ಹೇಳಲ್ಪಡಲಿ.

**ಅನುವಾದ-** ಧ್ವಸ್ತವಾದ ಘಟದಲ್ಲಿ ಧ್ವಂಸವೇ ಅರ್ಥಕ್ರಿಯಾಕಾರಿತ್ವಕ್ಕೆ ಘಾತಕವಾಗಿದೆ. ಧ್ವಂಸವೆಂದರೆ ಪ್ರತಿಯೋಗಿಯ ಉತ್ತರಕಾಲೀನವಾದ ಅಸತ್ತ್ವ. ಉತ್ತರಕಾಲೀನ ಅಸತ್ತ್ವವೇ ಅರ್ಥಕ್ರಿಯಾಕಾರಿತ್ವವನ್ನು ಘಾತಿಸುತ್ತಿದೆ ಎಂದಾದ ಮೇಲೆ, ಆಗ ಮೂರು ಕಾಲದಲ್ಲಿಯೂ ಅಸತ್ತಾದ ಪದಾರ್ಥಕ್ಕೆ ಹೇಗೆ ಅರ್ಥಕ್ರಿಯಾ- ಕಾರ್ಯತ್ವವು ಉಂಟಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ತ್ರಿಕಾಲಾಸತಃ ಕಾರಣತ್ವಾಭಾವೇ ಕೈಮುತ್ಯಮಾಹ - ಧ್ವಸ್ತ ಇತಿ ॥ ಕಾರ್ಯಂ ಜಲಾಹರಣಾದಿ । ತತ್ ಉತ್ತರಾಸತ್ತ್ವಮ್ ॥ ೧೧೬೯ ॥

**ತದಾನೀಂ ಬಾಧಿತಾದ್ರೂಪ್ಯಾತ್ ಕಿಂ ಕಾಲಾಂರತಬಾಧಿತೇ ।**
**ಅಲ್ಪಾಪಿ ಕಟಕಾದ್ಯರ್ಥಯೋಗ್ಯತಾऽಸ್ತಿ ವಿಚಾರ್ಯತಾಮ್ ।**
**ಅತೋ ಹಿ ಮಾನಬಾಹುಲ್ಯಾಬಾಹುಲ್ಯಾಭ್ಯಾಂ ನ ಕಿಂಚನ ॥ ೧೧೭೦ ॥**

**ಅಬಾಧಿತಾದ್ ಭವೇತ್ಕಾರ್ಯಂ ಬಾಧಿತೇ ತು ನ ತದ್ ಭವೇತ್ ।**
**ಇತ್ಯೇವ ವಾಚ್ಯಂ ಭವತಾ ತದ್ಬಲಾತ್ ಸತ್ಯತಾ ಭವೇತ್ ॥ ೧೧೭೧ ॥**

**ಉಕ್ತಶ್ರುತಿಬಲಾತ್ ಸೂತ್ರಬಲಾದ್ ಯುಕ್ತಿಬಲಾದಪಿ ।**
**ಅರ್ಥಕ್ರಿಯಾಯೋಗ್ಯಭಾವದಪ್ಯಬಾಧ್ಯಮಭೂಜ್ಜಗತ್ ॥ ೧೧೭೨ ॥**

**ಅರ್ಥ-** ತದಾನೀಂ ಬಾಧಿತಾತ್ = ತತ್ಕಾಲದಲ್ಲಿ ಬಾಧಿತವಾದ, ರೂಪ್ಯಾತ್ = ರೂಪಕ್ಕಿಂತಲೂ, ಕಾಲಾಂತರಮಾಧಿತೇ = ವಿಳಂಬವಾಗಿ ಬಾಧಿತವಾದ ರೂಪ್ಯದಲ್ಲಿ, ಅಲ್ಪಾಪಿ= ಸ್ವಲ್ಪವಾದರೂ, ಕಟಕಾದ್ಯರ್ಥಯೋಗ್ಯತಾ = ಕಟಕಾದಿಕಾರ್ಯ ಯೋಗ್ಯತ್ವವು, ಕಿಂ ಅಸ್ತಿ= ಇದೆಯೇ, ವಿಚಾರ್ಯತಾಮ್ = ವಿಚಾರ ಮಾಡು, ಅತಃ= ಆದ್ದರಿಂದ, ಮಾನಬಾಹುಲ್ಯಾಬಾಹುಲ್ಯಾಭ್ಯಾಂ = ಬಾಧ ಉಂಟಾಗುವ ಕಾಲಪರಿಮಾಣದ ಆದಿಕ್ಯ ಮತ್ತು ನ್ಯೂನತೆಗಳಿಂದ, ನ ಕಿಂಚನ = ಏನೂ ಸಿದ್ಧವಾಗುವುದಿಲ್ಲ.

ಅಬಾಧಿತಾತ್ = ಅಬಾಧಿತವಾದ ವಸ್ತುವಿನಿಂದ, ಕಾರ್ಯಂ ಭವೇತ್ = ಕಾರ್ಯವು ಉಂಟಾಗುತ್ತದೆ, ಬಾಧಿತೇ ತು = ಬಾಧಿತವಾದ ವಸ್ತುವಿನಿಂದ, ನ ತದ್ಭವೇತ್ = ಕಾರ್ಯವು ಉಂಟಾಗುವುದಿಲ್ಲ, ಇತ್ಯೇವ = ಎಂದೇ, ಭವತಾ ವಾಚ್ಯಂ = ನಿನ್ನಿಂದ ಹೇಳಲ್ಪಡಬೇಕು, ತತ್ = ಆದ್ದರಿಂದ, ಬಲಾತ್ = ಅರ್ಥಕ್ರಿಯಾಕಾರಿತ್ವ ಬಲದಿಂದ, ಸತ್ಯತಾ = ಜಗತ್ತಿಗೆ ಸತ್ಯತ್ವವೇ, ಭವೇತ್ = ಸಿದ್ಧವಾಗುತ್ತದೆ.

ಉಕ್ತಶ್ರುತಿಬಲಾತ್ = 'ವಿಶ್ವಂ ಸತ್ಯಂ' ಮುಂತಾದ ಶ್ರುತಿಗಳ ಬಲದಿಂದಲೂ, ಸೂತ್ರಬಲಾತ್ = 'ನಾ ಸತಃ ಅದೃಷ್ಟತ್ವಾತ್' ಮೊದಲಾದ ಸೂತ್ರಬಲದಿಂದಲೂ, ಯುಕ್ತಿಬಲಾತ್= ಯಕ್ತಿಬಲದಿಂದಲೂ, ಅರ್ಥಕ್ರಿಯಾಯೋಗ್ಯಭಾವಾತ್ ಅಪಿ= ಮತ್ತು ಅರ್ಥಕ್ರಿಯಾಕಾರಿತ್ವದಿಂದಲೂ, ಜಗತ್ = ಜಗತ್ತು, ಅಬಾಧ್ಯಮಭೂತ್= ಅಬಾಧ್ಯವೆಂದೇ ಸಿದ್ಧವಾಗುತ್ತದೆ.

**ಅನುವಾದ-** ತತ್ಕಾಲದಲ್ಲಿ ಬಾಧಿತವಾದ ರೂಪ್ಯಕ್ಕಿಂತ ವಿಳಂಬವಾಗಿ ಬಾಧಿತವಾದ ರೂಪ್ಯದಲ್ಲಿ ಅಲ್ಪವಾದರೂ ಕಟಕಾದಿ ಅರ್ಥಯೋಗ್ಯತ್ವವು ಇದೆಯೇ ಎಂದು ವಿಚಾರ

ಮಾಡು. ಆದ್ದರಿಂದ ಬಾಧವು ಉಂಟಾಗುವ ಕಾಲಪರಿಮಾಣದ ಆಧಿಕ್ಯ ಮತ್ತು ನ್ಯೂನತೆಯಿಂದ ಏನೂ ಸಿದ್ಧವಾಗುವುದಿಲ್ಲ. ಅಬಾಧಿತವಾದ ಪದಾರ್ಥದಿಂದ ಕಾರ್ಯವು ಉಂಟಾಗುತ್ತದೆ. ಬಾಧಿತವಾದ ಪದಾರ್ಥದಿಂದ ಕಾರ್ಯವು ಉಂಟಾಗುವುದಿಲ್ಲ ಎಂದು ನೀನೂ ಹೇಳಬೇಕು. ಆದ್ದರಿಂದ ಅರ್ಥಕ್ರಿಯಾಕಾರಿತ್ವದ ಬಲದಿಂದಲೇ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ.

'ವಿಶ್ವಂ ಸತ್ಯಮ್' ಮೊದಲಾದ ಹಿಂದೆ ಹೇಳಿದ ಶ್ರುತಿಗಳ ಬಲದಿಂದಲೂ, 'ನಾ ಸತಃ ಅದೃಷ್ಟತ್ವಾತ್' ಮೊದಲಾದ ಸೂತ್ರಗಳ ಬಲದಿಂದಲೂ, ಪ್ರಮಾದಿವಿಷಯತ್ವ ಮೊದಲಾದ ಯುಕ್ತಿಬಲದಿಂದಲೂ ಮತ್ತು ಅರ್ಥಕ್ರಿಯಾಯೋಗ್ಯತ್ವದಿಂದಲೂ ಜಗತ್ತು ಅಬಾಧ್ಯವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಮಾನಬಾಹುಲ್ಯಾಬಾಹುಲ್ಯಾಭ್ಯಾಂ ಮಾನಂ ಬಾಧಸ್ಯ ಕಾಲಪರಿಮಾಣಮ್। ತತ್ ತಸ್ಮಾತ್ । ಬಲಾತ್ ಅರ್ಥಕ್ರಿಯಾಕಾರಿತ್ವಬಲಾತ್ ॥ ೧೧೭೦-೧೧೭೨ ॥

ಅತಸ್ತದ್ ಬ್ರಹ್ಮ ನಃ ಕರ್ತೃ ತವಾಪಿ ಬ್ರಹ್ಮಕರ್ತೃತಾಮ್ ।
ನ ಸತ್ಯತಾ ವಿಘಟಯೇನ್ನಿಷ್ಕ್ರಿಯತ್ವಶ್ರುತಿಃ ಪರಮ್ ॥ ೧೧೭೩ ॥

ಸಾ ಚೇದರ್ಥಾಂತರೇ ಲುಬ್ಧಾ ಬ್ರಹ್ಮ ಕರ್ತೃ ಶ್ರುತೇರ್ಬಲಾತ್ ।
ತಸ್ಮಾದರ್ಥಕ್ರಿಯಾಯೋಗ್ಯಂ ಬ್ರಹ್ಮ ಸ್ಯಾದ್ಧಿ ನಿದರ್ಶನಮ್ ॥ ೧೧೭೪ ॥

**ಅರ್ಥ–** ಅತಃ = ಆದ್ದರಿಂದ, ಸದ್‌ಬ್ರಹ್ಮ = ಆ ಸತ್ಯವಾದ ಬ್ರಹ್ಮನು, ನಃ = ನಮಗೆ, ಕರ್ತೃ = ಕರ್ತೃವಾಗಿದ್ದಾನೆ, ತವಾಪಿ = ನಮಗೂ ಕೂಡ, ಸತ್ಯತಾ = ಸತ್ಯತ್ವವು, ಬ್ರಹ್ಮಕರ್ತೃತಾಮ್= ಬ್ರಹ್ಮಕರ್ತೃತ್ವವನ್ನು, ನ ವಿಘಟಯೇತ್ = ವಿಘಟನೆ ಮಾಡುವುದಿಲ್ಲ, ಪರಮ್ = ಆದರೆ, ನಿಷ್ಕ್ರಿಯತ್ವಶ್ರುತಿಃ = ನಿಷ್ಕ್ರಿಯತ್ವಶ್ರುತಿಯು, ವಿಘಟಯೇತ್ = ವಿಘಟನೆಯನ್ನು ಮಾಡಬಹುದು, ಆ = ಆ ನಿಷ್ಕ್ರೀಯತ್ವಶ್ರುತಿಯು, ಅರ್ಥಾಂತರೇ = ಅರ್ಥಾಂತರದಲ್ಲಿ, ಲುಬ್ಧಾ ಚೇತ್ = ಲೋಭವುಳ್ಳದ್ದಾದರೆ, ಶ್ರುತೇರ್ಬಲಾತ್ = 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯ ಬಲದಿಂದ, ಬ್ರಹ್ಮ = ಬ್ರಹ್ಮನು, ಕರ್ತೃ = ಕರ್ತೃವಾಗುತ್ತಾನೆ, ತಸ್ಮಾತ್= ಆದ್ದರಿಂದ ಅರ್ಥಕ್ರಿಯಾಯೋಗ್ಯಂ = ಅರ್ಥಕ್ರಿಯಾಯೋಗ್ಯನಾದ ಬ್ರಹ್ಮನು, ನಿದರ್ಶನಮ್= ನಮ್ಮ ಅನುಮಾನದಲ್ಲಿ ದೃಷ್ಟಾಂತವಾಗಿ, ಸ್ಯಾದ್ಧಿ = ಆಗುತ್ತಾನಷ್ಟೇ.

**ಅನುವಾದ–** ಸತ್ಯನಾದ ಬ್ರಹ್ಮನು ನಮಗೆ ಕರ್ತೃವಾಗಿದ್ದಾನೆ. ನಿನಗೂ ಕೂಡ ಸತ್ಯತ್ವವು ಬ್ರಹ್ಮಕರ್ತೃತ್ವವನ್ನು ವಿಘಟನೆ ಮಾಡುವುದಿಲ್ಲ. ಆದರೆ ನಿಷ್ಕ್ರಿಯತ್ವಶ್ರುತಿಯು ವಿಘಟನೆ ಮಾಡಬಹುದು. ಅರ್ಥಾಂತರದಲ್ಲಿ ಲುಬ್ಧವಾದ ಆ ಶ್ರುತಿಯನ್ನು ಪುಣ್ಯಪಾಪಾಭಾವ ರೂಪವಾದ ಅರ್ಥಾಂತರದಲ್ಲಿ ನಯನ ಮಾಡಿದರೆ 'ಸ ಇದಂ ಸರ್ವಮಸೃಜತ'

ಎಂಬ ಶ್ರುತಿಯ ಬಲದಿಂದ ಬ್ರಹ್ಮನು ಕರ್ತೃವೆಂದು ಸಿದ್ಧವಾಗುತ್ತಾನೆ. ಆದ್ದರಿಂದ ಅರ್ಥಕ್ರಿಯಾಯೋಗ್ಯನಾದ ಬ್ರಹ್ಮನು ನಮ್ಮ ಪ್ರಾಮಾಣಿಕತ್ವಾನುಮಾನದಲ್ಲಿ ದೃಷ್ಟಾಂತನಾಗುತ್ತಾನೆ.

**ಭಾವವಿಲಾಸಿನೀ–** ಅತಃ ಸತ್ತ್ವಸ್ಯೈವ ಕರ್ತೃತ್ವಪ್ರಯೋಜಕತ್ವಾತ್ । ತತ್ ಕರ್ತೃತ್ವಪ್ರಯೋಜಕ-ಸತ್ತ್ವಸಹಿತವ್ ॥ ಅರ್ಥಾಂತರೇ ಶುಭಾಶುಭರೂಪಕ್ರಿಯಾರಾಹಿತ್ಯೇ । ಅರ್ಥಸ್ಯ ಲೋಭಹೇತುತ್ವದರ್ಶನಾಲ್ಲುಬ್ಧೇತ್ಯುಕ್ತಮ್ । ಶ್ರುತೇಃ ಸ ಇದಂ ಸರ್ವಮಸೃಜತೇತಿ ಶ್ರುತೇಃ । ಶ್ರುತೇರ್ಬಲಾದಿತಿ ವದತಾ ಅರ್ಥಾತ್ ಶ್ರುತ್ಯೋಃ ಪರಸ್ಪರವಿರೋಧೇನಾಪ್ರಾಮಾಣ್ಯಂ ಸ್ಯಾತ್। ಅತಸ್ಸಾವಕಾಶಾಯಾ ಅರ್ಥಾಂತರೇ ನಯನಮೇವ ನ್ಯಾಯ್ಯಮಿತಿ ಸೂಚಿತಮ್ । ಅಥವಾ ''ಆಶ್ರಯತ್ವವಿಷಯತ್ವಯೋಗಿನೀ ನಿರ್ವಿಶೇಷಚಿತಿರೇವ ಕೇವಲಾ ಇತಿ ಬ್ರಹ್ಮಚಿನ್ಮಾತ್ರಸ್ಯಾಧಿಕರಣ-ಕಾರಕತ್ವಪ್ರತಿಪಾದಕತ್ವದ್ವಚನನ್ಯಾಯಬಲಾತ್ ಶ್ರುತೇಶ್ಚ ಕರ್ತೃಕಾರಕಮಿತ್ಯರ್ಥಃ ॥ ೧೧೭೩-೭೪॥

**ವಿವರಣೆ-** ನಿಷ್ಕ್ರಿಯತ್ವ ಶ್ರುತಿಗೆ ಅರ್ಥಾಂತವನ್ನು ಮಾಡದಿದ್ದರೆ, 'ಸ ಇದಂ ಸರ್ವಮಸೃಜತ' ಶ್ರುತಿಗೂ, ನಿಷ್ಕ್ರಿಯತ್ವಶ್ರುತಿಗೂ ವಿರೋಧವು ಬಂದು ಅಪ್ರಾಮಾಣ್ಯವು ಬರುವುದರಿಂದ ಅವಶ್ಯವಾಗಿ ನಿಷ್ಕ್ರಿಯತ್ವಶ್ರುತಿಗೇ ಅರ್ಥಾಂತರವನ್ನು ಮಾಡಬೇಕು. ಬ್ರಹ್ಮಕರ್ತೃತ್ವಶ್ರುತಿಗೆ ಅರ್ಥಾಂತರವನ್ನು ಮಾಡಿದರೆ ಜಗತ್ತಿಗೆ ಕರ್ತೃವು ಇಲ್ಲವೆಂಬ ಪ್ರಸಂಗವು ಬರುವುದರಿಂದ ನಿಷ್ಕ್ರಿಯತ್ವಶ್ರುತಿಗೇ ಅರ್ಥಾಂತರವನ್ನು ಮಾಡಬೇಕು. ಆಗ 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯ ಬಲದಿಂದಲೇ ಬ್ರಹ್ಮನಿಗೆ ಕರ್ತೃತ್ವವು ಸಿದ್ಧವಾಗುತ್ತದೆ. ಅಥವಾ ''ಆಶ್ರಯತ್ವವಿಷಯತ್ವಯೋಗಿನೀ ನಿರ್ವಿಶೇಷಚಿತಿರೇವ ಕೇವಲಾ'' ಎಂಬ ಪರವಾಕ್ಯದಿಂದಲೇ ಬ್ರಹ್ಮನಲ್ಲಿ ಅಜ್ಞಾನಾದಿಕಾರಣತ್ವರೂಪವಾದ ಅರ್ಥ-ಕ್ರಿಯಾಕಾರಿತ್ವವಿರುವುದರಿಂದ ಬ್ರಹ್ಮನಿಗೆ ಕರ್ತೃತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಅರ್ಥಕ್ರಿಯಾಯೋಗ್ಯತಾ ಚ ಸತ್ತ್ವೇನೈವಾವಸೀಯತೇ ।
ಹೇತುತಾ ಪೂರ್ವಭಾವಿತ್ವಂ ತತ್ ಸತ್ತಾಽಪರನಾಮಕಮ್ ॥ ೧೧೭೫ ॥

**ಅರ್ಥ-** ಅರ್ಥಕ್ರಿಯಾಯೋಗ್ಯತಾ ಚ = ಅರ್ಥಕ್ರಿಯಾ ಯೋಗ್ಯತ್ವವಾದರೂ, ಸತ್ತ್ವೇನೈವಾವಸೀಯತೇ = ಸತ್ತ್ವದಿಂದಲೇ ಉಪಪನ್ನವಾಗುತ್ತದೆ, ಹೇತುತಾ = ಹೇತುತ್ವವೆಂದರೆ, ಪೂರ್ವಭಾವಿತ್ವಂ = ಪೂರ್ವಭಾವಿತ್ವಮ್ ಎಂದು ಅರ್ಥ, ತತ್ = ಆ ಪೂರ್ವಭಾವಿತ್ವವು ಎಂದರೆ ಆ ಪೂರ್ವಕಾಲದಲ್ಲಿ ಇರುವಿಕೆಯು, ಸತ್ತಾಪರನಾಮಕಮ್ = ಸತ್ತ್ವವನ್ನು ಇನ್ನೊಂದು ಪದದಿಂದ ಹೇಳುವುದಷ್ಟೇ.

**ಅನುವಾದ- ಅರ್ಥಕ್ರಿಯಾ ಯೋಗ್ಯತ್ವವಾದರೂ ಕೂಡ ಸತ್ತ್ವದಿಂದಲೇ ಉಪಪನ್ನವಾಗುತ್ತದೆ. ಆ ಯೋಗ್ಯತ್ವವು ಹೇತುತ್ವರೂಪವಾದುದು, ಹೇತುತ್ವವೆಂದರೆ, ಪೂರ್ವಭಾವಿತ್ವ, ಪೂರ್ವಭಾವಿತ್ವವೆಂದರೆ ಪೂರ್ವಕಾಲದಲ್ಲಿ ಸತ್ತ್ವ, ಪೂರ್ವಭಾವಿ**

ಎನ್ನುವುದು ಸತ್ಯ ಎಂಬ ಪದಕ್ಕೆ ಪರ್ಯಾಯಪದವಾಗುತ್ತದೆ. ಆದ್ದರಿಂದ ಸತ್ತ್ವದಿಂದಲೇ ಅರ್ಥಕ್ರಿಯಾಕಾರಿತ್ವವು ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ತತ್ ಪೂರ್ವಭಾವಿತ್ವಮ್ ॥ ೧೧೭೫ ॥

**ಕುಣಪಸ್ಯ ಪ್ರವೃತ್ತಿರ್ನ ಸಜೀವಸ್ತು ಪ್ರವರ್ತತೇ ।**
**ಅನ್ವಯವ್ಯತಿರೇಕಾಭ್ಯಾಂ ಪ್ರಾಪ್ತಾ ಚಿತ್ಯೇವ ಹೇತುತಾ ॥ ೧೧೭೬ ॥**

**ಅರ್ಥ–** ಕುಣಪಸ್ಯ = ಶವಕ್ಕೆ, ಪ್ರವೃತ್ತಿಃ= ಪ್ರವೃತ್ತಿಯು, ನ = ಇಲ್ಲ. ಸಜೀವಸ್ತು = ಜೀವಸಹಿತವಾದ ಶರೀರವಾದರೂ, ಪ್ರವರ್ತತೇ = ಪ್ರವೃತ್ತಿಯನ್ನು ಮಾಡುತ್ತದೆ, ಆದ್ದರಿಂದ ಅನ್ವಯವ್ಯತಿರೇಕಾಭ್ಯಾಂ = ಅನ್ವಯವ್ಯತಿರೇಕಗಳಿಂದ, ಚಿತ್ಯೇವ = ಚೇತನದಲ್ಲಿಯೇ, ಹೇತುತಾ = ಹೇತುತ್ವವು, ಪ್ರಾಪ್ತಾ = ಪ್ರಾಪ್ತವಾಗುತ್ತದೆ.

**ಅನುವಾದ–** ಶವಕ್ಕೆ ಪ್ರವೃತ್ತಿಯುಂಟಾಗುವುದಿಲ್ಲ. ಜೀವಸಹಿತವಾದ ದೇಹವೇ ಪ್ರವೃತ್ತಿಯನ್ನು ಮಾಡುತ್ತದೆ. ಆದ್ದರಿಂದ ಅನ್ವಯವ್ಯತಿರೇಕಗಳಿಂದ ಚೈತನ್ಯದಲ್ಲಿಯೇ ಅರ್ಥಕ್ರಿಯಾಕಾರಿತ್ವವು ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಶುದ್ಧಚಿತ ಏವಾರ್ಥಕ್ರಿಯಾಕಾರಿತ್ವಂ ಸಾಧಯತಿ ॥ **ಕುಣಪಸ್ಯೇತಿ** ॥ ೧೧೭೬ ॥

**ವಿವರಣೆ–** ಈ ಪ್ರಕರಣದಲ್ಲಿ ಪ್ರಕಾರಾಂತರದಿಂದ ಶುದ್ಧಚೈತನ್ಯಕ್ಕೆ ಅರ್ಥಕ್ರಿಯಾಕಾರ್ಯತ್ವವನ್ನು ಸಮರ್ಥನೆ ಮಾಡುತ್ತಾರೆ.

**ಕರಣಾದಿಸಹಾಯಸ್ಯ ಹೇತುತ್ವಂ ಯದಿ ಕಿಂ ತತಃ ।**
**ಸರ್ವಂ ಚಾವಚ್ಛೇದಕಂ ತೇ ಜಡತ್ವಾನ್ನ ಪ್ರವೃತ್ತಿಮತ್ ॥ ೧೧೭೭ ॥**

**ಪ್ರವರ್ತಕಂ ಚ ನಾನ್ಯಸ್ಯ ತತ ಏವ ಘಟಾದಿವತ್ ।**
**ಅತೋ ಜಡಪ್ರೇರಕೋಽಸೌ ಸ್ವಯಮೇವ ಹಿ ಚೇತನಃ ॥ ೧೧೭೮ ॥**

**ಅರ್ಥ–** ಕರಣಾದಿಸಹಾಯಸ್ಯ = ಇಂದ್ರಿಯಾದಿ ಸಹಾಯವುಳ್ಳ ಚೇತನರಿಗೆ, ಹೇತುತ್ವಂ ಯದಿ = ಹೇತುತ್ವವು ಇದೆಯೆಂದು ಹೇಳುವುದಾದರೆ, ತತಃ = ಅದರಿಂದ, ಕಿಂ = ಏನು ಹಾನಿ? ತೇ = ನಿನಗೆ, ಅವಚ್ಛೇದಕಂ ಸರ್ವಂ ಚ = ಚೇತನಾವಚ್ಛೇದಕವಾದ ಎಲ್ಲವೂ, ಜಡತ್ವಾತ್ = ಜಡವಾದುದರಿಂದ, ನ ಪ್ರವೃತ್ತಿಮತ್ = ಸ್ವತಃ ಪ್ರವೃತ್ತಿಶೂನ್ಯವಾಗಿದೆ, ತತ ಏವ = ಜಡವಾದ ಕಾರಣದಿಂದಲೇ, ಘಟಾದಿವತ್ = ಘಟಾದಿಗಳಂತೆ, ಅನ್ಯಸ್ಯ = ಇನ್ನೊಂದಕ್ಕೆ, ಪ್ರವರ್ತಕಂ ಚ = ಪ್ರವರ್ತಕವು, ನ = ಆಗುವುದಿಲ್ಲ, ಅತಃ = ಆದ್ದರಿಂದ, ಅಸೌ ಚೇತನಃ=

ಈ ಚೇತನನು, ಸ್ವಯಮೇವ = ತಾನೇ ಅನ್ಯ ಸಹಾಯವಿಲ್ಲದೇ, ಜಡಪ್ರೇರಕಃ= ಜಡವನ್ನು ಪ್ರಯೋಗಿಸುತ್ತಾನಷ್ಟೇ.

**ಅನುವಾದ-** ಇಂದ್ರಿಯಾದಿ ಸಹಾಯವುಳ್ಳ ಜೀವನಿಗೆ ಹೇತುತ್ವವಿದೆಯೆಂದು ಹೇಳಿದರೂ ಅದರಿಂದ ಏನು ಹಾನಿ? ನಿನ್ನ ಮತದಲ್ಲಿ ಚೇತನಕ್ಕೆ ಅವಚ್ಛೇದಕವಾದ ಎಲ್ಲವೂ ಜಡವಾದುದರಿಂದ ಸ್ವತಃ ಪ್ರವೃತ್ತಿಶೂನ್ಯವಾಗಿದೆ. ಮತ್ತು ಜಡವಾದುದರಿಂದಲೇ ಘಟಾದಿಗಳಂತೆ ಇನ್ನೊಂದು ವಸ್ತುವಿಗೆ ಪ್ರವರ್ತಕವೂ ಆಗುವುದಿಲ್ಲ. ಆದ್ದರಿಂದ ಈ ಚೇತನನು ಅನನ್ಯಾಪೇಕ್ಷನಾಗಿ ತಾನೇ ಜಡವನ್ನು ಪ್ರವರ್ತಿಸುತ್ತಾನೆ ಎಂದು ತಿಳಿಯುತ್ತದೆ.

**ಭಾವವಿಲಾಸಿನೀ–** ಅನ್ಯಸ್ಯ ಪದಾರ್ಥಾಂತರಸ್ಯ ಪ್ರವರ್ತಕಂ ಚ ನ । ತತ ಏವ ಜಡತ್ವಾದೇವ । ಅತಃ ಜಡಸ್ಯ ಸ್ವಪ್ರವೃತ್ತೌ ಪರಪ್ರವೃತ್ತೌ ಚಾಹೇತುತ್ವಾತ್ । ಏವಂ ಚ ದೇಹೇಂದ್ರಿಯಾದಿ-ಸಕಲಜಡಸ್ಯ ಸ್ವಪ್ರವೃತ್ತೌ ಜೀವಪ್ರವೃತ್ತೌ ಚಾಹೇತುತ್ವಾಜ್ಜಡಾಮಿಶ್ರಂ ಜೀವಚೈತನ್ಯಮೇವಾಸ್ಯ ಪ್ರವರ್ತಕಮಿತಿ ಭಾವಃ ॥ ೧೧೭೮ ॥

**ವಿವರಣೆ-** ಜಡವು ಸ್ವಪ್ರವೃತ್ತಿಯಲ್ಲಿಯೂ, ಪರಪ್ರವೃತ್ತಿಯಲ್ಲಿಯೂ ಹೇತುವಾಗುವುದಿಲ್ಲ. ಆದ್ದರಿಂದ ದೇಹೇಂದ್ರಿಯಾದಿ ಸಕಲಜಡಕ್ಕೆ ಸ್ವಪ್ರವೃತ್ತಿಯಲ್ಲಿಯೂ, ಜೀವಪ್ರವೃತ್ತಿಯಲ್ಲಿಯೂ ಹೇತುತ್ವವಿಲ್ಲದಿರುವುದರಿಂದ, ಜಡಮಿಶ್ರಿತನಲ್ಲದ ಜೀವಚೈತನ್ಯವೇ ಈ ಎಲ್ಲದಕ್ಕೂ ಪ್ರವರ್ತಕನೆಂದು ಅಂಗೀಕರಿಸಬೇಕೆಂದು ಅಭಿಪ್ರಾಯ.

**ಅಜ್ಞಾನಸ್ಯ ಪ್ರೇರಕತ್ವಂ ನಾಜ್ಞಾನಸ್ಯ ಸಹಾಯತಃ ।**
**ಆತ್ಮಾಶ್ರಯಪ್ರಸಂಗೇನ ಸನ್ಮಾತ್ರಂ ತತ್ಪ್ರವರ್ತಕಮ್ ॥ ೧೧೭೯ ॥**

**ಅರ್ಥ-** ಆತ್ಮಾಶ್ರಯಪ್ರಸಂಗೇನ = ಆತ್ಮಾಶ್ರಯವು ಬರುವ ಪ್ರಸಂಗದಿಂದ, ಅಜ್ಞಾನಸ್ಯ ಸಹಾಯತಃ= ಅಜ್ಞಾನದ ಸಹಾಯದಿಂದ, ಅಜ್ಞಾನಸ್ಯ = ಅಜ್ಞಾನಕ್ಕೆ, ಪ್ರೇರಕತ್ವಂ ನ = ಪ್ರೇರಕತ್ವವು ಇಲ್ಲ. ಆದ್ದರಿಂದ ಸನ್ಮಾತ್ರಂ = ಕೇವಲ ಶುದ್ಧಚೈತನ್ಯವೇ, ತತ್ಪ್ರವರ್ತಕಮ್ = ಪ್ರವರ್ತಕವಾಗಿದೆ.

**ಅನುವಾದ-** ಆತ್ಮಾಶ್ರಯ ಪ್ರಸಂಗವು ಬರುವುದರಿಂದ, ಅಜ್ಞಾನದ ಸಹಾಯದಿಂದ ಅಜ್ಞಾನಕ್ಕೆ ಪ್ರೇರಕತ್ವವು ಇಲ್ಲ. ಆದ್ದರಿಂದ ಶುದ್ಧಚೈತನ್ಯವೇ ಅಜ್ಞಾನಕ್ಕೆ ಪ್ರೇರಕವೆಂದು ಅಂಗೀಕರಿಸಬೇಕು.

**ಭಾವವಿಲಾಸಿನೀ–** ಯುಕ್ತ್ಯಂತರಮಪ್ಯಾಹ - **ಅಜ್ಞಾನಸ್ಯೇತಿ** ॥ ದೇಹೇಂದ್ರಿಯಾದೇಃ ಪ್ರವರ್ತಕತ್ವೇ ಏವಮೇವಾತ್ಮಾಶ್ರಯೋಽಪಿ ದ್ರಷ್ಟವ್ಯಃ । ಯದ್ಯಪಿ ಜಡತ್ವಹೇತುನಾ ಜ್ಞಾನಮಪಿ ನಿರಸ್ತಮ್ । ತಥಾಪ್ಯಜ್ಞಾನವಿಶಿಷ್ಟಸ್ಯೈವ ಚೈತನ್ಯಸ್ಯ ಕರ್ತೃತ್ವಮಿತಿ ಪರಸ್ಯ ದುರಾಗ್ರಹಂ ಮೋಚಯಿತುಂ ತದಪಿ ಪೃಥಗೇವ ದೂಷಿತಮ್ । ತತ್ಪ್ರವರ್ತಕಮ್ ಅಜ್ಞಾನಪ್ರವರ್ತಕಮ್ ॥ ೧೧೭೯ ॥

**ವಿವರಣೆ-** ದೇಹೇಂದ್ರಿಯಾದಿಗಳು ಪ್ರವರ್ತಕವೆಂದು ಅಂಗೀಕರಿಸಿದರೂ ಅದೇ ಪ್ರವರ್ತ್ಯವಾದುದರಿಂದ ಹೀಗೆಯೇ ಆತ್ಮಾಶ್ರಯದೋಷವು ಬರುತ್ತದೆ ಎಂದು ತಿಳಿಯಬೇಕು. ಯದ್ಯಪಿ ಜಡತ್ವಹೇತುವಿನಿಂದ ಜ್ಞಾನವು ನಿರಸ್ತವಾಗುತ್ತದೆ. ಆದರೂ ಅಜ್ಞಾನವಿಶಿಷ್ಟಚೇತನನಿಗೆ ಕರ್ತೃತ್ವವೆಂದು ಪರವಾದಿಯ ದುರಾಗ್ರಹವನ್ನು ಬಿಡಿಸಲು ಕರ್ತೃತ್ವವನ್ನು ಪ್ರತ್ಯೇಕವಾಗಿ ದೂಷಿಸಿದ್ದಾರೆ ಎಂದು ತಿಳಿಯಬೇಕು.

ಪ್ರೇರಕತ್ವಂ ಹಿ ಚಿನ್ಮಾತ್ರೇ ತಜ್ಜಡಸ್ಯಾಸ್ತಿ ನ ಕ್ವಚಿತ್ ।
ಅತಃ ಕೇವಲಚಿನ್ಮಾತ್ರೇ ಕರ್ತೃತಾಽಽವಶ್ಯಕೀ ವಿದಾಮ್ ।
ಅತಶ್ಚೇತನಮಾತ್ರಸ್ಯ ಹೇತುತಾ ಸರ್ವಸಂಮತಾ ॥ ೧೧೮೦ ॥

**ಅರ್ಥ-** ಪ್ರೇರಕತ್ವಂ = ಪ್ರೇರಕತ್ವವಾದರೂ, ಚಿನ್ಮಾತ್ರೇ ಹಿ = ಕೇವಲ ಚೈತನ್ಯದಲ್ಲಿಯೇ ಇರುವುದಷ್ಟೇ, ತತ್ = ಆ ಪ್ರೇರಕತ್ವವು, ಕ್ವಚಿತ್ = ಎಲ್ಲಿಯೂ, ಜಡಸ್ಯ = ಜಡಕ್ಕೆ, ನಾಸ್ತಿ = ಇಲ್ಲ. ಅತಃ = ಆದ್ದರಿಂದ, ಕೇವಲಚಿನ್ಮಾತ್ರೇ = ಕೇವಲ ಶುದ್ಧಚೈತನ್ಯದಲ್ಲಿ, ವಿದಾಮ್ = ಜ್ಞಾನಿಗಳಿಗೆ, ಕರ್ತೃತಾ = ಕರ್ತೃತ್ವವು, ಆವಶ್ಯಕೀ = ಅವಶ್ಯಕವಾದುದು, ಅತಃ = ಆದ್ದರಿಂದ, ಚೇತನಮಾತ್ರಸ್ಯ = ಕೇವಲ ಚೇತನನಿಗೆ, ಹೇತುತಾ = ಹೇತುತ್ವವು, ಸರ್ವಸಂಮತಾ = ಸರ್ವಸಮ್ಮತವಾಗಿದೆ.

**ಅನುವಾದ-** ಪ್ರೇರಕತ್ವವು ಕೇವಲ ಚಿನ್ಮಾತ್ರದಲ್ಲಿದೆ (ಅದು ಚೇತನಮಾತ್ರ ಧರ್ಮ), ಅದು ಎಲ್ಲಿಯೂ ಜಡದಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ವಿದ್ವಾಂಸರಾದವರು ಚಿನ್ಮಾತ್ರದಲ್ಲಿ ಪ್ರೇರಣಕರ್ತೃತ್ವವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಆದ್ದರಿಂದ ಕೇವಲ ಚೇತನಕ್ಕೆ ಹೇತುತ್ವವು ಸರ್ವಸಮ್ಮತವಾಗಿದೆ.

**ಭಾವವಿಲಾಸಿನೀ–** ನಿರವಕಾಶಶುಕ್ತಿಂ ಚಾಹ - **ಪ್ರೇರಕತ್ವಮಿತಿ** ॥ ಹೀತ್ಯನೇನ ಚೇತನಧರ್ಮಸ್ಯ ಪ್ರೇರಕತ್ವಸ್ಯ ಚೇತನಸಹಾಯತಯಾ ಪರೇಣಾಂಗೀಕೃತದೇಹಾಜ್ಞಾನಾದಾವಪಿ ಪರಪ್ರಕ್ರಿಯ-ಯೈವಾಭಾವಂ ಸೂಚಯತಿ । ತತ್ ಪ್ರೇರಕತ್ವಂ ಜಡಸ್ಯ ಕ್ವಚಿದಪಿ ನಾಸ್ತೀತಿ ಸಂಬಂಧಃ । ಅತಃ ಜಡೇ ಪ್ರೇರಕತ್ವಸ್ಯ ಕೇನಾಪ್ಯವ್ಯವಹಾರಾತ್ । ಕರ್ತೃತಾ ಪ್ರೇರಣಕರ್ತೃತಾ । ಅತಃ ಪ್ರೇರಣಕರ್ತೃತ್ವಾತ್ । ಹೇತುತಾ ವ್ಯಾಪಾರಾಂತರೇಽಪಿ ಹೇತುತಾ ॥ ೧೧೮೦ ॥

ವಿಶಿಷ್ಟಸ್ಯಾಪಿ ಹೇತುತ್ವೇ ವಿಶೇಷ್ಯೇ ಹೇತುತಾ ನ ಕಿಮ್ ।
ನಹಿ ದ್ವಿನಿಷ್ಠಧರ್ಮೋಽಯಮಿತಿ ಸಾಧಿತಮೇವ ಹಿ ॥ ೧೧೮೧ ॥

ಅತೋ ವಿಶೇಷ್ಯಭಾಗೋ ಯಃ ಸ ಏವ ಸ್ಯಾನ್ನಿದರ್ಶನಮ್ ।
ಸ ತು ಸತ್ಯಸ್ತವ ಮತೇ ಸರ್ವಬಾಧೇಽಪ್ಯಬಾಧನಾತ್ ॥ ೧೧೮೨ ॥

**ಅರ್ಥ-** ವಿಶಿಷ್ಟಸ್ಯಾಪಿ ಹೇತುತ್ವೇ = ಜಡವಿಶಿಷ್ಟವಾದುದೇ ಹೇತುವೆಂದಾದರೂ, ವಿಶೇಷ್ಯೇ= ವಿಶೇಷ್ಯವಾದ ಚೈತನ್ಯದಲ್ಲಿ, ಹೇತುತಾ = ಹೇತುತ್ವವು, ಕಿಮ್ ನ = ಇಲ್ಲವೇನು, ಅಯಂ = ಈ ಹೇತುತ್ವವು, ದ್ವಿನಿಷ್ಠಧರ್ಮಃ = ವ್ಯಾಸಜ್ಯ ವೃತ್ತಿಧರ್ಮವು, ನಹಿ ಇತಿ = ಅಲ್ಲವೆಂದು, ಸಾಧಿತಮೇವ ಹಿ = ಶುದ್ಧಿಸೌರಭದಲ್ಲಿಯೇ ಸಾಧಿಸಲ್ಪಟ್ಟಿದೆಯಷ್ಟೇ.

ಅತಃ = ಆದ್ದರಿಂದ, ಯಃ ವಿಶೇಷ್ಯಭಾಗಃ = ಯಾವ ವಿಶೇಷ್ಯಭಾಗವಾದ ಚೇತನವಿದೆಯೋ, ಸ ಏವ = ಆ ಚೇತನವೇ, ನಿದರ್ಶನಮ್ ಸ್ಯಾತ್ = ನಮ್ಮ ಅನುಮಾನದಲ್ಲಿ ದೃಷ್ಟಾಂತವಾಗುತ್ತದೆ. ಸ ತು = ಆ ಚೇತನನಾದರೋ, ತವಮತೇ = ನಿನ್ನ ಮತದಲ್ಲಿ, ಸರ್ವಬಾಧೇಽಪಿ = ಎಲ್ಲವೂ ಬಾಧಿತವಾದರೂ, ಅಬಾಧನಾತ್ = ಅಬಾಧಿತನಾದುದರಿಂದ, ಸತ್ಯಃ = ಸತ್ಯನೇ ಆಗಿದ್ದಾನೆ.

**ಅನುವಾದ-** ಜಡವಿಶಿಷ್ಟವಾದ ಚೇತನಕ್ಕೆ ಹೇತುತ್ವವನ್ನು ಹೇಳಿದರೂ, ವಿಶೇಷ್ಯನಾದ ಚೇತನನಲ್ಲಿ ಹೇತುತ್ವವು ಬರುವುದಿಲ್ಲವೇನು? ಈ ಹೇತುತ್ವವು ವ್ಯಾಸಜ್ಯವೃತ್ತಿ-ಧರ್ಮವಲ್ಲವೆಂದು ನಾವು ಶುದ್ಧಿಸೌರಭದಲ್ಲಿಯೇ ಸಾಧಿಸಿದ್ದೇವಷ್ಟೇ? ಆದ್ದರಿಂದ ಯಾವ ವಿಶೇಷ್ಯಭಾಗವಾದ ಚೈತನ್ಯವಿದೆಯೋ ಅದೇ ನಮ್ಮ ಸತ್ಯತ್ವ ಸಾಧಕವಾದ ಪ್ರಾಮಾಣಿಕತ್ವಾನುಮಾನದಲ್ಲಿ ದೃಷ್ಟಾಂತವಾಗುತ್ತದೆ. ಉಳಿದೆಲ್ಲದಕ್ಕೂ ಬಾಧವುಂಟಾದರೂ, ಚೇತನನಿಗೆ ಬಾಧವಿಲ್ಲವಾದ್ದರಿಂದ ಆ ಚೇತನನು ನಿನ್ನ ಮತದಲ್ಲಿಯೂ ಸತ್ಯವೇ ಆಗಿದ್ದಾನೆ. (ಆದ್ದರಿಂದ ಸತ್ಯವಾದ ಶುದ್ಧಚೈತನ್ಯಕ್ಕೆ ಅರ್ಥಕ್ರಿಯಾಕಾರಿತ್ವವು ಸಿದ್ಧವಾಗುತ್ತದೆ.)

**ಭಾವವಿಲಾಸಿನೀ–** ಸಾಧಿತಂ ಶುದ್ಧಿಸೌರಭೇ ॥ ೧೧೮೧-೧೧೮೨ ॥

**ಅನಾಮರೂಪಂ ತದ್‌ಬ್ರಹ್ಮ ಮಾಯಾಯಾಃ ಶಾಸ್ತಿಕೃತ್ ಪುರಾ ।**
**ಮಾಯಾಮನುಸಸಾರೇತಿ ಶ್ರೀಮದ್ಭಾಗವತೇ ಸ್ಫುಟಮ್ ॥ ೧೧೮೩ ॥**

**ಅನಾಮರೂಪೇ ನಿರ್ಮಾಯೇ ಶುದ್ಧೇ ಬ್ರಹ್ಮಣಿ ಕೇವಲಮ್ ।**
**ಮಾಯಾಪ್ರವೃತ್ತಿಹೇತುತ್ವಪ್ರೋಕ್ತೇಸ್ತನ್ಮೂಲಕಾರಣಮ್ ॥ ೧೧೮೪ ॥**

**ಅರ್ಥ-** ಅನಾಮರೂಪಂ = ನಾಮರೂಪರಹಿತನಾದ, ತದ್‌ಬ್ರಹ್ಮ = ಆ ಬ್ರಹ್ಮನು, ಪುರಾ= ಹಿಂದೆ, ಮಾಯಾಯಾ= ಮಾಯೆಯನ್ನು, ಶಾಸ್ತಿಕೃತ್ = ಶಾಸನ ಮಾಡುವವನಾಗಿ, ಮಾಯಾಮ್ = ಮಾಯೆಯನ್ನು, ಅನುಸಸಾರ ಇತಿ = ಅನುಸರಿಸಿದನು ಎಂದು, ಶ್ರೀಮದ್ಭಾಗವತೇ = ಶ್ರೀಮದ್‌ಭಾಗವತದಲ್ಲಿ, ಸ್ಫುಟಮ್ = ಸ್ಫುಟವಾಗಿ, ಅನಾಮರೂಪೇ = ನಾಮರೂಪರಹಿತನಾದ, ನಿರ್ಮಾಯೇ = ಮಾಯಾರಹಿತನಾದ, ಕೇವಲಮ್ = ಕೇವಲ, ಶುದ್ಧೇ ಬ್ರಹ್ಮಣಿ = ಶುದ್ಧ ಬ್ರಹ್ಮನಲ್ಲಿ, ಮಾಯಾಪ್ರವೃತ್ತಿಹೇತುತ್ವಪ್ರೋಕ್ತೇಃ =

ಮಾಯಪ್ರವೃತ್ತಿಕಾರಣತ್ವವನ್ನು ಹೇಳಿರುವುದರಿಂದ, ತತ್ = ಆ ಶುದ್ಧ ಚೈತನ್ಯನು, ಮೂಲಕಾರಣಮ್ = ಮೂಲಕಾರಣವಾಗಿದೆ.

**ಅನುವಾದ-** ನಾಮರೂಪರಹಿತನಾದ ಆ ಬ್ರಹ್ಮನು ಸೃಷ್ಟಿಯ ಆದಿಯಲ್ಲಿ ಮಾಯೆಯನ್ನು ಶಾಸನ ಮಾಡುವವನಾಗಿ ಮಾಯೆಯನ್ನು ಸಮೀಪಿಸಿದನು ಎಂದು ಶ್ರೀಮದ್‌ಭಾಗವತದಲ್ಲಿ ಸ್ಫುಟವಾಗಿ ನಾಮರೂಪರಹಿತನಾದ ಮಾಯಾ ರಹಿತನಾದ ಕೇವಲಶುದ್ಧಚೈತನ್ಯದಲ್ಲಿ ಮಾಯಪ್ರವರ್ತಕತ್ವವನ್ನು ಹೇಳಿರುವುದರಿಂದ ಶುದ್ಧಚೈತನ್ಯವೇ ಮೂಲಕಾರಣವೆಂದು, ಪ್ರಕೃತ ಅರ್ಥಕ್ರಿಯಾ-ಕಾರಿಯೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅನಾಮರೂಪಂ ತದ್ಬ್ರಹ್ಮೇತ್ಯನೇನ 'ಸ ಏವ ಭೂಯೋ ನಿಜವೀರ್ಯ-ಚೋದಿತಾಂ ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ । ಅನಾಮರೂಪಾತ್ಮನಿ ರೂಪನಾಮನಿ ವಿಧಿತ್ಸಮಾನೋऽನುಸಸಾರಶಾಸ್ತ್ರಕೃತ್' ಇತಿ ಭಾಗವತಶ್ಲೋಕಂ ಸಂಗೃಹ್ಣಾತಿ । ಅನಾಮ-ರೂಪಾತ್ಮನಿ ನಾಮರೂಪರಹಿತಸರ್ವಾಧಾರಭೂತೇ ಸ್ವಸ್ವರೂಪೇ ರೂಪನಾಮನಿ ರೂಪಾತ್ಮಕ-ನಾಮಾತ್ಮಕಪ್ರಪಂಚೌ ವಿಧಿತ್ಸಮಾನಃ ಸ ಭಗವಾನಿತ್ಯುಕ್ತ್ಯಾ ಬ್ರಹ್ಮಣ ಏವ ನಾಮರೂಪಾತ್ಮಕ-ಜಡಾಮಿಶ್ರಿತ್ವಸ್ಯಾಪಿ ಲಾಭಾತ್ ಅನಾಮರೂಪಂ ತದ್ಬ್ರಹ್ಮೇತ್ಯುಕ್ತಮ್ ॥ ೧೧೮೩-೮೪ ॥

**ವಿವರಣೆ-** 'ಸ ಏವ ಭೂಯೋ ನಿಜವೀರ್ಯಚೋದಿತಾಂ ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ । ಅನಾಮರೂಪಾತ್ಮನಿ ರೂಪನಾಮನೀ ವಿಧಿತ್ಸಮಾನೋऽನುಸಸಾರಶಾಸ್ತ್ರಕೃತ್' ಎಂಬುದು ಇಲ್ಲಿ ಸಂಗ್ರಹಿತವಾದ ಭಾಗವತಶ್ಲೋಕ. ಅನಾಮರೂಪಾತ್ಮನಿ ನಾಮರೂಪರಹಿತವಾದ ಸರ್ವಾಧಾರಭೂತವಾದ ತನ್ನ ಸ್ವರೂಪದಲ್ಲಿ ರೂಪನಾಮನೀ, ರೂಪಾತ್ಮಕ ಮತ್ತು ನಾಮಾತ್ಮಕ ಪ್ರಪಂಚಗಳನ್ನು, ವಿಧಿತ್ಸಮಾನಃ ಸೃಷ್ಟಿಸಲು ಇಚ್ಛೆಯುಳ್ಳವನಾಗಿ ಶಾಸ್ತ್ರಕೃತ್ ಮಾಯೆಯನ್ನು ಶಾಸನವನ್ನು ಮಾಡುವ ಆ ಬ್ರಹ್ಮನು ಅನುಸಸಾರ ಮಾಯೆಯನ್ನು ಸಮೀಪಿಸಿದನು ಎಂದು ಇಲ್ಲಿ ಉಪಯುಕ್ತವಾದ ಶ್ಲೋಕದ ಅರ್ಥ. ಆದ್ದರಿಂದ ಮಾಯಾರಹಿತವಾದ ಶುದ್ಧಚೈತನ್ಯಕ್ಕೆ ಅರ್ಥಕ್ರಿಯಾಕಾರಿತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ದೃಷ್ಟಾಂತೀಕೃತ್ಯ ತದ್ ಬ್ರಹ್ಮ ವಿಶ್ವಸ್ಯ ಪರಮಾರ್ಥತಾ ।
ಅರ್ಥಕ್ರಿಯಾಹೇತುತಾಖ್ಯಹೇತುನಾ ಸ್ಯಾದಿತಿ ಸ್ಥಿತಮ್ ॥ ೧೧೮೫ ॥

**ಅರ್ಥ-** ತದ್‌ಬ್ರಹ್ಮ = ಆ ಬ್ರಹ್ಮನನ್ನು, ದೃಷ್ಟಾಂತೀಕೃತ್ಯ = ದೃಷ್ಟಾಂತವನ್ನಾಗಿ ಮಾಡಿ, ಅರ್ಥಕ್ರಿಯಾಹೇತುತಾಖ್ಯಹೇತುನಾ= ಅರ್ಥಕ್ರಿಯಾಹೇತುತ್ವರೂಪವಾದ ಹೇತುವಿನಿಂದ, ವಿಶ್ವಸ್ಯ= ಜಗತ್ತಿಗೆ, ಪರಮಾರ್ಥತಾ= ಪಾರಮಾರ್ಥಿಕತ್ವವು, ಸ್ಯಾತ್= ಸಿದ್ಧವಾಗುತ್ತದೆ, ಇತಿ= ಎಂದು, ಸ್ಥಿತಮ್= ಸಿದ್ಧವಾಯಿತು.

**ಅನುವಾದ-** ಆ ಬ್ರಹ್ಮನನ್ನು ದೃಷ್ಟಾಂತವನ್ನಾಗಿ ಮಾಡಿ ಅರ್ಥಕ್ರಿಯಾಹೇತುತ್ವರೂಪವಾದ ಹೇತುವಿನಿಂದ ಜಗತ್ತಿಗೆ ಪಾರಮಾರ್ಥಿಕತ್ವವು, ಸಿದ್ಧವಾಗುತ್ತದೆ ಎಂಬುದು ಈ ಸ್ಮೃತಿಯಿಂದ ಸಿದ್ಧವಾಯಿತು.

**ಭಾವವಿಲಾಸಿನೀ–** ಶ್ಲೋಕಸ್ಯ ಫಲಿತಮಾಹ - ಅನಾಮರೂಪ ಇತಿ ॥ ತತ್ ಮಾಯಾರೂಪನಾಮಭಿರಶಬಲಿತಂ ಶುದ್ಧಂ ಬ್ರಹ್ಮ । ಏವಂ ಚ ನ ಕೇವಲಂ ಯುಕ್ತ್ಯೈವ ಶುದ್ಧಸ್ಯ ಕರ್ತೃತಾ ಸಿದ್ಧಾ ಕಿಂತೂಕ್ತಸ್ಮೃತ್ಯಾಪೀತಿ ಭಾವಃ । ಅನಯೈವ ಸ್ಮೃತ್ಯಾ ನಿಜವೀರ್ಯಚೋದಿತಾಮಿತ್ಯುಕ್ತೇಃ ಚೇತನಶಕ್ತ್ಯೈವ ಮಾಯಾಪ್ರೇರಣಮ್ । ನ ತು ತತ್ಸಹಾಯೇನೇತ್ಯಪಿ ಸಾಧಿತಮ್ । ಅತಃ ಪ್ರಾಗ್ಗ್ರಂಥಕೃತೋಕ್ತಯುಕ್ತಿರಪಿ ಪ್ರಾಮಾಣಿಕೀತ್ಯಪಿ ದ್ರಷ್ಟವ್ಯಮ್ ॥ ೧೧೮೪-೧೧೮೫ ॥

**ವಿವರಣೆ-** 'ಜಗತ್ ಸತ್ಯಮ್ ಅರ್ಥಕ್ರಿಯಾಹೇತುತ್ವಾತ್ ಬ್ರಹ್ಮವತ್' ಎಂಬ ಅನುಮಾನವು ಭಾಗವತ ಸ್ಮೃತಿ ಮೂಲಕವಾದದ್ದು ಎಂದು ಹೇಳಿ ಗ್ರಂಥಕಾರರು ತಮ್ಮ ಅನುಮಾನಕ್ಕೆ ಇಲ್ಲಿ ಸ್ಮೃತಿಮೂಲತ್ವವನ್ನು ಹೇಳುತ್ತಾರೆ.

ನಿಮಿತ್ತಮಾತ್ರಂ ತತ್ರಾತ್ಮಾ ನಿರ್ಗುಣಃ ಪುರುಷಃ ಪರಃ ।
ವ್ಯಕ್ತಾವ್ಯಕ್ತಮಿದಂ ವಿಶ್ವಂ ಯತ್ರ ಭ್ರಮತಿ ಲೋಹವತ್ ॥ ೧೧೮೬ ॥

ಇತಿ ಭಾಗವತೇ ಸಾಕ್ಷಾನ್ನಿರ್ಗುಣಸ್ಯ ನಿಮಿತ್ತತಾ ।
ಯತ್ ಪ್ರೋಕ್ತಾ ತತ್ ಸದೇವಾರ್ಥಕ್ರಿಯಾಕಾರಿ ನ ಸಂಶಯಃ॥ ೧೧೮೭ ॥

ಅರ್ಥಕ್ರಿಯಾನಿಮಿತ್ತತ್ವಾಜ್ಜಗತಃ ಪರಮಾರ್ಥತಾ ।
ನಿರ್ಗುಣಬ್ರಹ್ಮದೃಷ್ಟಾಂತಾತ್ ಸಿದ್ಧ್ಯತೀತ್ಯತಿಮಂಗಲಮ್ ॥ ೧೧೮೮ ॥

**ಅರ್ಥ-** ಯತ್ರ = ಯಾವ ಪರಮಾತ್ಮನಲ್ಲಿ, ವ್ಯಕ್ತಾವ್ಯಕ್ತಮಿದಂ ವಿಶ್ವಂ = ವ್ಯಕ್ತವಾದ ಮತ್ತು ಅವ್ಯಕ್ತವಾದ ಈ ಜಗತ್ತು, ಲೋಹವತ್ = ಅಯಸ್ಕಾಂತ ಪ್ರಭಾವಕ್ಕೆ ಸಿಲುಕಿದ ಲೋಹದಂತೆ, ಭ್ರಮತಿ = ಚಲಿಸುತ್ತದೆಯೋ, ಅಂತಹ, ನಿರ್ಗುಣಃ = ನಿರ್ಗುಣನಾದ, ಪುರುಷಃ ಪರಃ = ಉತ್ತಮಪುರುಷನಾದ, ಆತ್ಮಾ= ಅದಾನಾದಿ ಕರ್ತೃವಾದ ವಿಷ್ಣುವು, ತತ್ರ= ಜೀವರ ಸುಖದುಃಖಗಳಿಗೆ, ನಿಮಿತ್ತಮಾತ್ರಮ್ = ನಿಮಿತ್ತಕಾರಣನು ಮಾತ್ರ, ಇತಿ= ಎಂದು, ಭಾಗವತೇ = ಭಾಗವತದಲ್ಲಿ, ನಿರ್ಗುಣಸ್ಯ = ನಿರ್ಗುಣನಾದ ಚೈತನ್ಯನಿಗೆ, ನಿಮಿತ್ತತಾ= ನಿಮಿತ್ತಕಾರಣತ್ವವು, ಯತ್= ಯಾವ ಕಾರಣದಿಂದ, ಸಾಕ್ಷಾತ್ = ನೇರವಾಗಿ, ಪ್ರೋಕ್ತಾ= ಹೇಳಲ್ಪಟ್ಟಿದೆಯೋ, ತತ್ = ಆದ್ದರಿಂದ, ಸದೇವ = ಸತ್ಯವಾದ ಶುದ್ಧಚೈತನ್ಯವೇ ಅರ್ಥಕ್ರಿಯಾಕಾರಿ = ಅರ್ಥಕ್ರಿಯಾಕಾರಿಯಾದುದು, ನ ಸಂಶಯಃ = ಇದರಲ್ಲಿ ಸಂಶಯವಿಲ್ಲ. ಅರ್ಥಕ್ರಿಯಾನಿಮಿತ್ತತ್ವಾತ್= ಅರ್ಥಕ್ರಿಯಾಹೇತುತ್ವವಿರುವುದರಿಂದ,

ನಿರ್ಗುಣಬ್ರಹ್ಮ ದೃಷ್ಟಾಂತಾತ್= ನಿರ್ಗುಣಬ್ರಹ್ಮದೃಷ್ಟಾಂತದಿಂದ, ಜಗತಃ = ಜಗತ್ತಿಗೆ, ಪರಮಾರ್ಥತಾ= ಪರಮಾರ್ಥಿಕ ಸತ್ವವು, ಸಿದ್ಧ್ಯತೀತಿ = ಸಿದ್ಧವಾಗುತ್ತದೆ ಎಂದು, ಅತಿಮಂಗಲಮ್= ಪರಮಮಂಗಲವಾದುದು.

**ಅನುವಾದ-** ಯಾವನಲ್ಲಿ ವ್ಯಕ್ತಾವ್ಯಕ್ತವಾದ ಈ ಜಗತ್ತು ಅಯಸ್ಕಾಂತ ಪ್ರಭಾವಕ್ಕೆ ಸಿಕ್ಕಿದ ಲೋಹದಂತೆ ಚಲಿಸುತ್ತದೆಯೋ ಅಂತಹ ನಿರ್ಗುಣನಾದ ಪುರುಷೋತ್ತಮ ನಾದ ಅದಾನಾದಿ ಕರ್ತೃವಾದ ವಿಷ್ಣುವು ಜೀವರ ಸುಖದುಃಖಗಳಿಗೆ ಕೇವಲ ನಿಮಿತ್ತಕಾರಣನಾದವನು ಎಂದು ಭಾಗವತದಲ್ಲಿ ನೇರವಾಗಿ ನಿರ್ಗುಣನಿಗೆ ನಿಮಿತ್ತಕಾರಣತ್ವವವನ್ನು ಹೇಳಿದ್ದರಿಂದ, ಸತ್ಯವಾದ ಶುದ್ಧಚೈತನ್ಯವೇ ಅರ್ಥ-ಕ್ರಿಯಾಕಾರಿ. ಇದರಲ್ಲಿ ಸಂಶಯವಿಲ್ಲ. ನಿರ್ಗುಣಬ್ರಹ್ಮದೃಷ್ಟಾಂತದಿಂದ ಅರ್ಥಕ್ರಿಯಾ ಹೇತುತ್ವವಿರುವುದರಿಂದ, ಜಗತ್ತು ಪರಮಾರ್ಥಿಕ ಸತ್ಯವೆಂದು ಸಿದ್ಧವಾಗುತ್ತದೆ ಎಂಬುದು ಪರಮಮಂಗಲವಾದುದು.

**ಭಾವವಿಲಾಸಿನೀ–** ನಿರವಕಾಶಭಾಗವತಶ್ಲೋಕಾಂತರೇಣಾಪಿ ಚಿನ್ಮಾತ್ರಸ್ಯಾರ್ಥ ಕ್ರಿಯಾಕಾರಿತ್ವಂ ಸಾಧಯತಿ ॥ **ನಿಮಿತ್ತಮಾತ್ರಮಿತಿ** ॥ ೧೧೮೬-೧೧೮೮ ॥

**ಕಿಂಚೇಂದ್ರಿಯೇಣ ಸಂಬಂಧಾದ್ ಘಟಾದ್ಯಂ ಪರಮಾರ್ಥಸತ್ ।**
**ಚಿತ್ಸಂವಲಿತಚಿತ್ತೇನ ಸನ್ನಿಕೃಷ್ಟಪರಾತ್ಮವತ್ ॥ ೧೧೮೯ ॥**

**ಅರ್ಥ-** ಕಿಂಚ = ಮತ್ತು, ಇಂದ್ರಿಯೇಣ ಸಂಬಂಧಾತ್ = ಇಂದ್ರಿಯ-ಸನ್ನಿಕರ್ಷವಿರುವುದರಿಂದ, ಘಟಾದ್ಯಂ = ಘಟಾದಿಗಳು, ಚಿತ್ಸಂವಲಿತಚಿತ್ತೇನ = ಚಿತ್ ಸಂವಲಿತವಾದ ಅಂತಃಕರಣದಿಂದ, ಸನ್ನಿಕೃಷ್ಟಪರಾತ್ಮವತ್ = ಸನ್ನಿಕೃಷ್ಟನಾದ ಬ್ರಹ್ಮನಂತೆ, ಪರಮಾರ್ಥಸತ್= ಪರಮಾರ್ಥಸತ್ಯವೇ ಆಗಿದೆ.

**ಅನುವಾದ- ಮತ್ತು ಇಂದ್ರಿಯಸನ್ನಿಕೃಷ್ಟವಾದುದರಿಂದ ಘಟಾದಿಗಳು ಚಿತ್ ಸಂವಲಿತವಾದ ಅಂತಃಕರಣಸನ್ನಿಕೃಷ್ಟನಾದ ಚೇತನದಂತೆ ಪರಮಾರ್ಥಸತ್ಯವೇ ಆಗಿದೆ.**

**ಭಾವವಿಲಾಸಿನೀ–** ವಿಶ್ವಸತ್ಯತ್ವೇಽನುಮಾನಾಂತರಂ ಚ ರಚಯತಿ ॥ **ಕಿಂಚೇತಿ** ॥ ಜ್ಞಾನೇನ ವಿಷಯವಿಷಯಿಭಾವಾಖ್ಯಸಂಬಂಧಸ್ಯ ಮಿಥ್ಯಾಭೂತೇಽಪಿ ಸತ್ತ್ವಾದಿಂದ್ರಿಯೇತಿ ವಿಶೇಷಣಮ್ ॥ ೧೧೮೯ ॥

**ವಿವರಣೆ-** ಇನ್ನು ವಿಶ್ವಸತ್ಯತ್ವವನ್ನು ಸಾಧಿಸಲು ಇನ್ನೊಂದು ಅನುಮಾನವನ್ನು ಪ್ರಯೋಗಿಸುತ್ತಾರೆ. ಜ್ಞಾನದಿಂದ ಸಂಬಂಧವನ್ನು ಹೇಳಿದರೆ, ವಿಷಯವಿಷಯಭಾವರೂಪವಾದ ಸಂಬಂಧವು ಮಿಥ್ಯಾಭೂತವಾದ ಅರ್ಥಕ್ಕೂ

ಉಪಪನ್ನವಾಗುವುದರಿಂದ 'ಇಂದ್ರಿಯೇಣ ಸಂಬಂಧಾತ್' ಎಂದು ಇಂದ್ರಿಯಸನ್ನಿಕರ್ಷವನ್ನು ಹೇತುವನ್ನಾಗಿ ಮಾಡಿದ್ದಾರೆ. ತಥಾಚ ಘಟಾದ್ಯಂ, ಪರಮಾರ್ಥಸತ್, ಇಂದ್ರಿಸನ್ನಿಕೃಷ್ಟತ್ವಾತ್, ಅಂತಕರಣಸನ್ನಿಕೃಷ್ಟ ಪರಾತ್ಮವತ್ ಎಂದು ಅನುಮಾನದ ಆಕಾರವಾಗುತ್ತದೆ.

**ಕಿಂಚ ಯೋಗೋಽಸ್ತಿ ಮನಸಾ ಯದಾ ಸ್ಯಾಚ್ಚರಮಪ್ರಮಾ ।**
**ಆವಯೋರುಭಯೋಸ್ತೇನ ದೃಷ್ಟಾಂತಃ ಸಂಮತೋ ಹ್ಯಯಮ್ ॥೧೯೦॥**

**ಅರ್ಥ-** ಕಿಂಚ = ಮತ್ತು, ಯದಾ = ಯಾವಾಗ, ಚರಮಪ್ರಮಾ = ಚರಮಸಾಕ್ಷಾತ್ಕಾರವು, ಸ್ಯಾತ್ = ಉಂಟಾಗುತ್ತದೆಯೋ ಆಗ, ಮನಸಾ = ಮನಸ್ಸಿನಿಂದ, ಯೋಗ = ಸನ್ನಿಕರ್ಷವು, ಅಸ್ತಿ = ಇದೆ. ತೇನ = ಆ ಕಾರಣದಿಂದ, ಆವಯೋಃ ಉಭಯೋಃ = ನಮ್ಮಿಬ್ಬರಿಗೂ, ಅಯಮ್ ದೃಷ್ಟಾಂತಃ = ಈ ದೃಷ್ಟಾಂತವು, ಸಂಮತಃ = ಸಮ್ಮತವಾಗಿದೆ.

**ಅನುವಾದ-** ಮತ್ತು ಯಾವಾಗ ಚರಮಸಾಕ್ಷಾತ್ಕಾರವು ಉಂಟಾಗುತ್ತದೆಯೋ ಆಗ ಮನಸ್ಸನ್ನಿಕರ್ಷವೂ ಇದೆ. ಆದ್ದರಿಂದ ಈ ದೃಷ್ಟಾಂತವು ನಮ್ಮಿಬ್ಬರಿಗೂ ಸಮ್ಮತವಾಗಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಚಿನ್ಮಾತ್ರೇ ಇಂದ್ರಿಯಸಂಬಂಧಂ ಸಾಧಯತಿ ॥ **ಕಿಂಚೇತಿ** ॥ ಯೋಗಃ ಬ್ರಹ್ಮಚಿತಾಸಂಬಂಧಃ । ದೃಷ್ಟಾಂತಃ ಇಂದ್ರಿಯಸಂಬದ್ಧತ್ವೇನ ತತ್ರ ಹೇತೋಃ ಸಾಧ್ಯಸ್ಯ ಚ ಪರಸ್ಯಾಪಿ ಸಂಮತತ್ವಾದಿತಿ ಭಾವಃ । ಮಿಥ್ಯಾಭೂತೇ ಶುಕ್ತಿರಜತಾದೌ ಹೇತುಸಾಧ್ಯಯೋರುಭಯೋರಪ್ಯಭಾವಾತ್ ವ್ಯತಿರೇಕನಿದರ್ಶನಸ್ಯ ವ್ಯಭಿಚಾರಾಭಾವಸ್ಯ ಚೋಪಲಕ್ಷಣಮೇತದಿತ್ಯಪಿ ದ್ರಷ್ಟವ್ಯಮ್ ॥ ೧೯೦ ॥

**ವಿವರಣೆ-** ಈ ಶ್ಲೋಕದಲ್ಲಿ ಪ್ರಕಾರಾಂತರದಿಂದ ಚಿನ್ಮಾತ್ರಕ್ಕೆ ಇಂದ್ರಿಯಸನ್ನಿಕರ್ಷವನ್ನು ಸಾಧಿಸುತ್ತಾರೆ. ಚರಮಸಾಕ್ಷಾತ್ಕಾರವು ಶುದ್ಧಚಿನ್ಮಾತ್ರಕವಿಷಯಕವಾಗಿದೆ. ಆದ್ದರಿಂದ ಅಲ್ಲಿ ಹೇತುವೂ ಇದೆ. ಮತ್ತು ಸಾಧ್ಯವೂ ಇದೆ. ಮಿಥ್ಯಾಭೂತಗಳಾದ ಶುಕ್ತಿರಜತಾದಿಗಳಲ್ಲಿ ಹೇತುವೂ ಇಲ್ಲ, ಸಾಧ್ಯವೂ ಇಲ್ಲ. ಆದ್ದರಿಂದ ವ್ಯಾಪ್ತಿಗೆ ವ್ಯಭಿಚಾರವಿಲ್ಲ. ಆದ್ದರಿಂದ ಈ ಅನುಮಾನದಿಂದ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಥವಾ ಸ್ತಂಭಕುಂಭಾದಿದ್ರವ್ಯಂ ನಃ ಪರಮಾರ್ಥಸತ್ ।**
**ಸಂಯುಕ್ತತ್ವಾತ್ತವಾಜ್ಞಾನಧಾರಾಗೋಚರವಸ್ತುವತ್ ॥ ೧೯೧ ॥**

**ಅರ್ಥ-** ಅಥವಾ ನಃ= ನಮಗೆ, ಸ್ತಂಭಕುಂಭಾದಿದ್ರವ್ಯಂ = ಸ್ತಂಭಕುಂಭಾದಿದ್ರವ್ಯವು, ಪರಮಾರ್ಥಸತ್= ಪಾರಮಾರ್ಥಿಕಸತ್ಯವಾಗಿದೆ, ಸಂಯುಕ್ತತ್ವಾತ್= ಸಂಯುಕ್ತವಾಗಿರುವುದರಿಂದ, ತವ= ನಿನ್ನ, ಅಜ್ಞಾನಧಾರಾಗೋಚರವಸ್ತುವತ್= ಅಜ್ಞಾನಾಶ್ರಯವಾದ ಅಗೋಚರನಾದ ವಸ್ತುವಿನಂತೆ (ಎಂಬ ಅನುಮಾನವು ಜಗತ್ತಿಗೆ ಸತ್ಯತ್ವವನ್ನು ಸಾಧನೆ ಮಾಡುತ್ತದೆ.)

**ಅನುವಾದ-** ಅಥವಾ ನಮಗೆ ಸ್ತಂಭಕುಂಭಾದಿದ್ರವ್ಯಂ ಪರಮಾರ್ಥಸತ್ ಸಂಯುಕ್ತತ್ವಾತ್ ತವ ಅಜ್ಞಾನಧಾರಾಗೋಚರವಸ್ತುವತ್ ಎಂಬ ಅನುಮಾನ ದಿಂದಲೂ ಜಗತ್ ಸತ್ಯತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಇತೋಽಪಿ ಲಘುತರಮನುಮಾನಂ ರಚಯತಿ ॥ **ಅಥವೇತಿ** ॥ ೧೯೧ ॥

**ವಿವರಣೆ-** ಹಿಂದಿನ ಅನುಮಾನದಲ್ಲಿ ಇಂದ್ರಿಯಸಂಯುಕ್ತತ್ವಾತ್ ಎಂದು ಹೇತುವನ್ನು ಮಾಡಿದ್ದರು. ಈಗ ಇಂದ್ರಿಯಪದವನ್ನು ಬಿಟ್ಟು, ಕೇವಲ ಸಂಯುಕ್ತತ್ವರೂಪಹೇತುವಿನಿಂದಲೇ ಸತ್ಯತ್ವವನ್ನು ಸಮರ್ಥನೆ ಮಾಡುತ್ತಾರೆ. ದೃಷ್ಟಾಂತವಾದ ಬ್ರಹ್ಮನಲ್ಲಿ ಸಾಧನವೈಕಲ್ಯವಿಲ್ಲವೆಂದು ತಿಳಿಸಲು ಅಜ್ಞಾನಧಾರತ್ವರೂಪವಾದ ವಿಶೇಷಣವನ್ನು ಹೇತುವಿನಲ್ಲಿ ಜ್ಞಾಪಿಸಿದ್ದಾರೆ. ಆದ್ದರಿಂದ ಬ್ರಹ್ಮನಿಗೆ ಅಜ್ಞಾನಸಂಯುಕ್ತತ್ವವೇ ಇದೆ. ಬ್ರಹ್ಮವತ್ ಎಂದೇ ದೃಷ್ಟಾಂತ. ಅಥವಾ ಶುಕ್ತಿರೂಪ್ಯವು ವ್ಯತಿರೇಕ ದೃಷ್ಟಾಂತವಾಗುತ್ತದೆ.

ಯಥಾ ಶಶೋಽತಿದೂರಸ್ಥೋ ನಾನ್ಯತ್ರ ಕ್ವಾಪಿ ದೃಶ್ಯತೇ ।
ಅಚ್ಛೇಂದುನಾಽಪಿ ಚ್ಛುರಿತೋ ದೃಶ್ಯತೇಽದ್ಯಾಪಿ ಲೌಕಿಕೈಃ ॥ ೧೯೨ ॥

ತಥಾ ರಾಹೋರಪಿ ಚ್ಛಾಯಾ ನೀಲಾ ನೀಲಾಭ್ರಸಂಕುಲಾ ।
ಅನ್ಯತ್ರಾದೃಶ್ಯಮಾನಾಪಿ ದೃಶ್ಯತಾಂ ಚಂದ್ರಮಂಡಲೇ ॥ ೧೯೩ ॥

**ಅರ್ಥ-** ಯಥಾ = ಹೇಗೆ, ಅತಿದೂರಸ್ಥಃ = ಅತಿದೂರದಲ್ಲಿರುವ, ಶಶಃ = ಶಶದ ಚಿಹ್ನೆಯು, ಅನ್ಯತ್ರ ಕ್ವಾಪಿ = ಬೇರೆ ಎಲ್ಲಿಯೂ, ನ ದೃಶ್ಯತೇ = ಕಾಣಿಸುವುದಿಲ್ಲ. ಅಚ್ಛೇಂದುನಾಽಪಿ ಚ್ಛುರಿತಃ = ಸ್ವಚ್ಛವಾದ ಚಂದ್ರನ ಜೊತೆಯಲ್ಲಿ ಮಿಶ್ರವಾದಾಗ, ಅದ್ಯಾಪಿ = ಈ ದಿನವೂ ಕೂಡ, ಲೌಕಿಕೈಃ = ಲೌಕಿಕರಿಂದ, ದೃಶ್ಯತೇ = ಕಾಣಲ್ಪಡುತ್ತದೆಯೋ, ತಥಾ = ಅದರಂತೆ, ರಾಹೋ = ರಾಹುವಿನ, ನೀಲಾ = ಕಪ್ಪಾದ, ನೀಲಾಭ್ರಸಂಕುಲಾ = ನೀಲವಾದ ಆಕಾಶದಿಂದ ಮಿಶ್ರಿತವಾದ, ಛಾಯಾಪಿ = ಛಾಯೆಯೂ ಕೂಡ, ಅನ್ಯತ್ರಾದೃಶ್ಯಮಾನಾಪಿ = ಬೇರೆ ಕಡೆಯಲ್ಲಿ ಕಾಣದಿದ್ದರೂ ಕೂಡ, ಚಂದ್ರಮಂಡಲೇ = ಚಂದ್ರಮಂಡಲದಲ್ಲಿ ದೃಶ್ಯತಾಂ = ಕಾಣಲ್ಪಡಲಿ.

**ಅನುವಾದ-** ಹೇಗೆ ಅತಿದೂರಸ್ಥವಾದ ಮೊಲದ ಚಿಹ್ನೆಯು ಬೇರೆ ಎಲ್ಲಿಯೂ ಕಾಣದಿದ್ದರೂ. ಸ್ವಚ್ಛವಾದ ಚಂದ್ರನ ಜೊತೆಯಲ್ಲಿ ಮಿಶ್ರಿತವಾಗಿ ಈ ದಿನವೂ ಲೌಕಿಕರಿಂದ ನೋಡಲ್ಪಡುತ್ತದೆಯೋ ಅದರಂತೆ ರಾಹುವಿನ ಕಪ್ಪಾದ ಆಕಾಶದ ಜೊತೆಯಲ್ಲಿ ಬೆರೆತ ಛಾಯೆಯೂ ಕೂಡ ಬೇರೆಲ್ಲೂ ಕಾಣದಿದ್ದರೂ ಕೂಡ ಚಂದ್ರಮಂಡಲದಲ್ಲಿ ಕಾಣಲ್ಪಡಲಿ.

**ಭಾವವಿಲಾಸಿನೀ–** ಯಚ್ಚ ಪರೋಕ್ತಂ ಸ್ವಗ್ರಂಥೇ ಅನ್ಯತ್ರಾದೃಷ್ಟಾಪಿ ರಾಹುಚ್ಛಾಯಾ ಯಥಾ ಚಂದ್ರಮಂಡಲಯೋಗಾತ್ ದೃಶ್ಯತೇ । ತಥಾ ನೀರೂಪತಯಾ ಅನ್ಯತ್ರಾದೃಷ್ಟಮಪಿ ಬ್ರಹ್ಮ

ಘಟಾದಿಯೋಗಾದ್ದೃಶ್ಯತ ಇತಿ ದೃಷ್ಟಾಂತವೈಷಮ್ಯಾದಿನಾ ತದ್ದೂಷಯನ್‌ಪರಮತೇ ನೀರೂಪ-ಬ್ರಹ್ಮಣಶ್ಚಾಕ್ಷುಷವೃತ್ತಾವದೃಶ್ಯತಾಂ ದೃಢಯತಿ ॥ **ಯಥೇತಿ** ॥ ಅನ್ಯತ್ರ ಚಂದ್ರಾದನ್ಯತ್ರಾಪಿ । ಘುರಿತಃ ಮಿಶ್ರಃ। ನೀಲಾಭ್ರಸಂಕುಲಾ ನೀಲೇನಾಕಾಶೇನ ಸಂಕುಲಾ ಮಿಲಿತಾ । ದೂರಸ್ಥನಭಸೋಽಪಿ ನೀಲತಯಾ ದರ್ಶನಾನ್ನೀಲಾಭ್ರೇತ್ಯುಕ್ತಮ್ । ಅತಿನೀಲೇ ಕಂ ಬಲಾದೌ ಪತಿತಾ ಮನುಷ್ಯಚ್ಛಾಯಾ ಯಥಾ ವಿವಿಚ್ಯ ನ ದೃಶ್ಯತೇ । ತಥಾ ನೀಲಾರಾಹುಚ್ಛಾಯಾಯಾ ನೀಲಾಭ್ರಶಬಲಿತತ್ವಾದನ್ಯತ್ರಾದರ್ಶನಮಿತಿ ಭಾವಃ। ಯದ್ಯಪಿ ದೂರಸ್ಥಶಶವತ್ ಅನ್ಯತ್ರ ದೂರಸ್ಥತ್ವಾದೇವ ನ ದೃಶ್ಯತ ಇತ್ಯೇತಾವತ್ಯೆವಾಲಮ್ । ತಥಾಪಿ ತಮೋರೂಪಚ್ಛಾಯಾಯಾಂ ಸಂಭವನ್ನಿಮಿತ್ತಾಂತರಮಪಿ ಗ್ರಂಥಕೃತೋಕ್ತಮಿತಿ ಜ್ಞಾತವ್ಯಮ್ ॥ ೧೧೯೨-೧೧೯೩ ॥

**ವಿವರಣೆ-** ಪರರು ತಮ್ಮ ಗ್ರಂಥದಲ್ಲಿ ರಾಹುಚ್ಛಾಯೆಯು ಬೇರೆ ಕಡೆಯಲ್ಲಿ ಕಾಣದಿದ್ದರೂ, ಹೇಗೆ ಚಂದ್ರಮಂಡಲ ಸಂಬಂಧದಿಂದ ಕಾಣುತ್ತದೆಯೋ, ಅದರಂತೆ ರೂಪರಹಿತನಾದ ಬ್ರಹ್ಮನು ಬೇರೆಕಡೆಯಲ್ಲಿ ಕಾಣದಿದ್ದರೂ ಘಟಾದಿ ಸಂಬಂಧದಿಂದ ಕಾಣುತ್ತಾನೆ ಎಂದು ಹೇಳಿದ್ದಾರೆ. ಇದನ್ನು ದೃಷ್ಟಾಂತ ವೈಷಮ್ಯದಿಂದ ದೂಷಿಸುವವರಾಗಿ, ಮೊದಲು ರೂಪರಹಿತನಾದ ಬ್ರಹ್ಮನಿಗೆ ಚಾಕ್ಷುಷವೃತ್ತಿಯಲ್ಲಿ ಭಾನವೇ ಕೂಡುವುದಿಲ್ಲ ಎಂದು ಸ್ಪಷ್ಟಪಡಿಸುತ್ತಾರೆ. ಕಪ್ಪಾದ ಕಂಬಳಿಯಲ್ಲಿ ಬಿದ್ದ ಮನುಷ್ಯನ ಛಾಯೆಯು ಹೇಗೆ ಗೋಚರಿಸುವುದಿಲ್ಲವೋ, ಅದರಂತೆ ಕಪ್ಪಾದ ರಾಹುವಿನ ಛಾಯೆಯು ನೀಲಾಕಾಶ ಮಿಶ್ರಿತವಾದುದರಿಂದ ಬೇರೆಕಡೆಯಲ್ಲಿ ಕಾಣುವುದಿಲ್ಲ ಎಂದು ಅಭಿಪ್ರಾಯ. ಯದ್ಯಪಿ ದೂರಸ್ಥ ಶಶದಂತೆ ರಾಹುಚ್ಛಾಯೆಯು ದೂರಸ್ಥತ್ವದ ರೂಪದ ದೋಷದಿಂದಲೇ ಕಾಣುವುದಿಲ್ಲ ಎಂದು ಸಮಾಧಾನವನ್ನು ಹೇಳಬಹುದು. ಆದರೆ ತಮೋರೂಪವಾದ ಛಾಯೆಯಲ್ಲಿ ಅದೃಶ್ಯತ್ವವನ್ನು ಕುರಿತು ನಿಮಿತ್ತಾಂತರವಿದೆಯೆಂದು ಸೂಚಿಸಲು ಗ್ರಂಥಕಾರರು ಬೇರೆ ನಿಮಿತ್ತವನ್ನು ಹೇಳಿದ್ದಾರೆ.

**ನೀರೂಪಂ ಬ್ರಹ್ಮ ದುರ್ದ್ರವ್ಯಸಾಚಿವ್ಯೇಽಪಿ ನೃಚಕ್ಷುಷಾ ।**
**ಕಥಂ ನಿರೀಕ್ಷ್ಯತೇ ಶುದ್ಧಂ ಯದ್ಧಿ ಪ್ರಾಹುರಧೋಕ್ಷಜಮ್ ॥ ೧೧೯೪ ॥**

**ಅರ್ಥ-** ನೀರೂಪಂ ಬ್ರಹ್ಮ = ರೂಪರಹಿತನಾದ ಬ್ರಹ್ಮನು, ದುರ್ದ್ರವ್ಯಸಾಚಿವ್ಯೇಽಪಿ = ದುರ್ದ್ರವ್ಯಯೋಗವನ್ನು ಹೊಂದಿದರೂ, ನೃಚಕ್ಷುಷಾ = ಮನುಷ್ಯನ ಕಣ್ಣಿಗೆ, ಕಥಂ = ಹೇಗೆ, ನಿರೀಕ್ಷ್ಯತೇ = ಗೋಚರನಾಗುತ್ತಾನೆ, ಏಕೆಂದರೆ, ಯತ್ = ಯಾವ, ಶುದ್ಧಂ = ಶುದ್ಧ ಬ್ರಹ್ಮನನ್ನು, ಅಧೋಕ್ಷಜಮ್ = ಇಂದ್ರಿಯ ಅಗೋಚರನೆಂದು, ಪ್ರಾಹುಃ = ಹೇಳುತ್ತಾರಷ್ಟೇ.

**ಅನುವಾದ-** ರೂಪರಹಿತನಾದ ಬ್ರಹ್ಮನು ಘಟಾದಿ ದುರ್ದ್ರವ್ಯಯೋಗವನ್ನು ಹೊಂದಿದರೂ ಹೇಗೆ ಮನುಷ್ಯನ ಕಣ್ಣಿಗೆ ಗೋಚರಿಸುತ್ತಾನೆ ? ಏಕೆಂದರೆ ಶುದ್ಧನಾದ ಆ ಬ್ರಹ್ಮನನ್ನು ಇಂದ್ರಿಯ ಅಗೋಚರನಾದವನು ಎಂದು ಹೇಳುತ್ತಾರಷ್ಟೆ?

**ಭಾವವಿಲಾಸಿನೀ–** ದುರ್ದ್ರವ್ಯೇತ್ಯನೇನ ದೃಷ್ಟಾಂತದಾರ್ಷ್ಟಾಂತಿಕಯೋರ್ವೈಷಮ್ಯಾಂತರಂ ಚ ಸೂಚಿತಮ್ । ಏವಂ ಚ ಮಹತ್ವೇ ಸತ್ಯುದ್ಭೂತರೂಪವತ್ತ್ವಾ ಚ್ಚಕ್ಷುರ್ಯೋಗ್ಯಾರಾಹುಚ್ಛಾಯಾ ಅತಿದೂರತ್ವಾತ್ಸಮಾನಾಭಿಘಾತಾಚ್ಚಾನ್ಯತ್ರದೃಷ್ಟಾಪಿ ತೇಜೋರೂಪಚಂದ್ರಮಂಡಲೇ ಆತಪೇನ ರಾಹುಚ್ಛಾಯೇವ ದರ್ಪಣೇ ಮುಖಚ್ಛಾಯೇವ ವಾ ದೃಶ್ಯತಾಂ ನಾಮ । ಬ್ರಹ್ಮ ತವಮತೇ ನೀರೂಪಂ ಸ್ವಾಂತಸ್ಸ್ಥದೀಪಾವರಕಘಟಾದಿದುರ್ದ್ರವ್ಯಾಂತರಿತಂ ಚ ಕಥಂ ಚಕ್ಷುಷಾದೃಶ್ಯತೇ । ವೈಷಮ್ಯಾಂತರಂ ಚಾಹ - ಯದ್ಧೀತಿ ॥ ದರ್ಶನಯೋಗ್ಯತ್ವಾಚ್ಛಾಯಾದಿಕಂ ದೃಶ್ಯತಾಮ್ । ಅವ್ಯಕ್ತಸ್ವಭಾವತ್ವಾತ್ ಅಧಃ ಕೃತಾಕ್ಷಜನಿತಮಾನಂ ಬ್ರಹ್ಮ ಸ್ವಮಹಾಪ್ರಸಾದಂ ವಿನಾ ಯೋಗಶತಕೇಽಪ್ಯದೃಶ್ಯಮೇವೇತಿ ಭಾವಃ । ಅನೇನ ಭವತಾಂ ಮತೇ ಬ್ರಹ್ಮಣಸ್ಸರೂಪತ್ವಾತ್ತುಕ್ತೋ ನ ದರ್ಶನಮಿತಿ ಚೋದ್ಯಮಪಿ ಪರಿಹೃತಮ್ ॥ ೧೯೪ ॥

**ವಿವರಣೆ-** ರಾಹುಚ್ಛಾಯೆಯು ಮಹತ್ವವಿಶಿಷ್ಟವಾದ ಉದ್ಭೂತರೂಪವನ್ನು ಹೊಂದಿ, ಚಕ್ಷುಸ್ಸಿಗೆ ಯೋಗ್ಯವಾಗಿದ್ದರೂ ಅತಿದೂರಸ್ಥದೋಷದಿಂದಲೂ, ಸಮಾನದ್ರವ್ಯಾದಿಗಳ ದೋಷದಿಂದಲೂ, ಬೇರೆ ಕಡೆಯಲ್ಲಿ ಕಾಣದಿದ್ದರೂ, ಚಂದ್ರಮಂಡಲವು ತೇಜೋರೂಪವಾಗಿರುವುದರಿಂದ, ಬಿಸಿಲಿನಿಂದ ವೃಕ್ಷಛಾಯೆಯು ಕಂಡಂತೆ, ದರ್ಪಣದಲ್ಲಿ ಮುಖಛಾಯೆಯು ಕಂಡಂತೆ ಚಂದ್ರನಲ್ಲಿ ಕಾಣಲ್ಪಡಲಿ, ಆದರೆ ನಿನ್ನ ಮತದಲ್ಲಿ ಬ್ರಹ್ಮನು ರೂಪರಹಿತನಾದವನು, ಘಟದ ಒಳಗೆ ಇಟ್ಟಿರುವ ದೀಪವು ಘಟದಿಂದ ಆವೃತವಾದಂತೆ ದುರ್ದ್ರವ್ಯದಿಂದ ಆವೃತನಾದವನು ಅವನು ಹೇಗೆ ಚಕ್ಷುಸ್ಸಿಗೆ ವಿಷಯನಾಗುತ್ತಾನೆ. ಇದು ಒಂದು ವೈಷಮ್ಯ. ಶುದ್ಧನಾದ ಬ್ರಹ್ಮನು ಅಧೋಕ್ಷಜನೆಂದು ಹೇಳುತ್ತಾರೆ. ಅಧೋಕ್ಷಜನೆಂದರೆ ಇಂದ್ರಿಯಕ್ಕೆ ವಿಷಯನಾಗದವನು ಎಂದರ್ಥ. ಇಂದ್ರಿಯಕ್ಕೆ ವಿಷಯನಾಗದ ಬ್ರಹ್ಮನು ಹೇಗೆ ಇಂದ್ರಿಯಜನ್ಯವೃತ್ತಿಯಲ್ಲಿ ವಿಷಯನಾಗುತ್ತಾನೆ? ಆದ್ದರಿಂದ ಇಂದ್ರಿಯ ವಿಷಯತ್ವಾಯೋಗ್ಯತ್ವ ಎಂಬುದು ಇನ್ನೊಂದು ವೈಷಮ್ಯ. ಆದ್ದರಿಂದ ನೀನು ಹೇಳುವ ದೃಷ್ಟಾಂತವು ವಿಷಮವಾಗಿದೆ ಎಂದು ಅಭಿಪ್ರಾಯ.

**ರೂಪಾಭಿಭವಮಾತ್ರೇಣ ತಪ್ತವಾರಿಸ್ಥತೇಜಸಃ ।**
**ಯದಾ ನೇಕ್ಷಾ ರೂಪಶೂನ್ಯದ್ರವ್ಯೇಕ್ಷಾ ತೇ ಕಥಂ ತದಾ ॥ ೧೯೫ ॥**

**ಅರ್ಥ-** ಯದಾ = ಯಾವಾಗ, ರೂಪಾಭಿಭವಮಾತ್ರೇಣ = ರೂಪವಿದ್ದರೂ ರೂಪದ ಅಭಿಭವ ಮಾತ್ರವು ಇರುವುದರಿಂದ, ತಪ್ತವಾರಿಸ್ಥತೇಜಸಃ = ತಪ್ತಜಲದಲ್ಲಿರುವ ತೇಜಸ್ಸಿನ, ಈಕ್ಷಾ= ಚಾಕ್ಷುಷ ಜ್ಞಾನವು, ನ = ಉಂಟಾಗುವುದಿಲ್ಲವೋ, ತದಾ = ಆಗ, ರೂಪಶೂನ್ಯದ್ರವ್ಯೇಕ್ಷಾ = ರೂಪಶೂನ್ಯದ್ರವ್ಯನಾದ ಬ್ರಹ್ಮನ, ಈಕ್ಷಾ = ಜ್ಞಾನವು, ತೇ = ನಿನಗೆ, ಕಥಂ = ಹೇಗೆ ಉಂಟಾಗುತ್ತದೆ?

**ಅನುವಾದ-** ತಪ್ತಜಲದಲ್ಲಿರುವ ತೇಜಸ್ಸಿಗೆ ರೂಪವಿದ್ದರೂ ಅಲ್ಲಿ ರೂಪದ ಅಭಿಭವವು ಇರುವ ಕಾರಣದಿಂದ ಚಕ್ಷುಸ್ಸಿಗೆ ವಿಷಯವಾಗದಿರುವಾಗ, ರೂಪರಹಿತನಾದ, ಬ್ರಹ್ಮರೂಪವಾಹ ದ್ರವ್ಯದ ದರ್ಶನವು ಚಕ್ಷುಸ್ಸಿಗೆ ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ–** ನೀರೂಪದ್ರವ್ಯಸ್ಯ ಚಕ್ಷುಷಾ ನ ದರ್ಶನಮಿತ್ಯತ್ರ ಕೈಮುತ್ಯಮಾಹ - **ರೂಪೇತಿ** ॥ ೧೧೯೬ ॥

ಅತೋ ವೃತ್ತೇರ್ಭ್ರಮತ್ವೇ ಸ್ಯಾನ್ನಿರಧಿಷ್ಠಾನಕೋ ಭ್ರಮಃ ।
ಪರೋಕ್ಷವೃತ್ತೌ ಸಾಧಿಷ್ಠಾನತ್ವಂ ತು ಭವತೋಽಪಿ ನ ।
ತಸ್ಮಾತ್ ಪ್ರಮಾತ್ವಂ ಸರ್ವತ್ರ ವೃತ್ತೇರ್ಯುಕ್ತಿಬಲಾದಭೂತ್ ॥ ೧೧೯೬ ॥

**ಅರ್ಥ-** ಅತಃ = ಆದ್ದರಿಂದ, ವೃತ್ತೇರ್ಭ್ರಮತ್ವೇ = ವೃತ್ತಿಯು ಭ್ರಮವಾದರೆ, ಭ್ರಮಃ= ಭ್ರಮವು, ನಿರಧಿಷ್ಠಾನಕಃ= ಅಧಿಷ್ಠಾನಶೂನ್ಯವಾಗಿ, ಸ್ಯಾತ್= ಆಗುತ್ತದೆ. ಪರೋಕ್ಷವೃತ್ತೌ ತು = ಪರೋಕ್ಷವೃತ್ತಿಯಲ್ಲಾದರೂ, ಭವತೋಽಪಿ= ನಿನಗೂ ಸಹ, ಸಾಧಿಷ್ಠಾನತ್ವಂ = ಅಧಿಷ್ಠಾನ ಸಹಿತತ್ವವು, ನ = ಇಲ್ಲ. ತಸ್ಮಾತ್ = ಆ ಕಾರಣದಿಂದ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ ಎಂದರೆ ಪರೋಕ್ಷ ಸ್ಥಳದಲ್ಲಿಯೂ ಮತ್ತು ಅಪರೋಕ್ಷ ಸ್ಥಳದಲ್ಲಿಯೂ, ವೃತ್ತೇಃ = ವೃತ್ತಿಗೆ, ಪ್ರಮಾತ್ವಂ = ಪ್ರಮಾತ್ವವು, ಯುಕ್ತಿಬಲಾತ್ = ಯುಕ್ತಿಬಲದಿಂದ, ಅಭೂತ್= ಸಿದ್ಧವಾಯಿತು.

**ಅನುವಾದ-** ಆದ್ದರಿಂದ ಚಾಕ್ಷುಷ ವೃತ್ತಿಯು ಭ್ರಮವಾದರೆ ನಿರಧಿಷ್ಠಾನಕ ಭ್ರಮವನ್ನು ಅಂಗೀಕರಿಸಬೇಕಾಗುತ್ತದೆ. ಪರೋಕ್ಷವೃತ್ತಿಯಲ್ಲಿ ಅಧಿಷ್ಠಾನವು ಇಲ್ಲವೆಂದು ನಿನಗೂ ಸಮ್ಮತವಾಗಿದೆ. ಆದ್ದರಿಂದ ಪರೋಕ್ಷವೃತ್ತಿಸ್ಥಳದಲ್ಲಿಯೂ ಮತ್ತು ಅಪರೋಕ್ಷವೃತ್ತಿ ಸ್ಥಳದಲ್ಲಿಯೂ, ವೃತ್ತಿಗೆ ಯುಕ್ತಿಬಲದಿಂದ ಪ್ರಾಮಾಣ್ಯವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಸ್ತು ನೀರೂಪಸ್ಯಾದರ್ಶನಂ ಪ್ರಕೃತೇ ಕಿಮಾಯಾತಮಿತ್ಯತ ಆಹ - **ಅತ ಇತಿ** ॥ ಅತಃ ಉಕ್ತರೀತ್ಯಾ ಬ್ರಹ್ಮಣಶ್ಚಾಕ್ಷುಷವೃತ್ತಾವುಲ್ಲೇಖಾಯೋಗಾತ್ । ನ ಚ ತದ್ಯುಕ್ತಮ್ । ಅತೋ ಘಟಾದ್ಯಪರೋಕ್ಷವೃತ್ತಿಪ್ರಮೈವೇತಿ ಭಾವಃ । ತಸ್ಮಾತ್ ಪರೋಕ್ಷವೃತ್ತಾವಪರೋಕ್ಷವೃತ್ತೌ ಚಾಧಿಷ್ಠಾನಾಭಿಮತಬ್ರಹ್ಮೋಲ್ಲೇಖಾಭಾವಾತ್ ॥ ೧೧೯೬ ॥

**ವಿವರಣೆ-** ಪರೋಕ್ಷವೃತ್ತಿಯಲ್ಲಾಗಲೀ ಅಥವಾ ಅಪರೋಕ್ಷವೃತ್ತಿಯಲ್ಲಾಗಲೀ ರೂಪರಹಿತನಾದ ಬ್ರಹ್ಮನು ಗೋಚರನಾಗುವುದಿಲ್ಲ. ಆ ಬ್ರಹ್ಮನೇ ನಿನಗೆ ಅಧಿಷ್ಠಾನ. ಅಧಿಷ್ಠಾನವಿಷಯಕತ್ವವು ಇಲ್ಲದಿರುವುದರಿಂದ, ಪರೋಕ್ಷ ಮತ್ತು ಅಪರೋಕ್ಷ ವೃತ್ತಿಗಳು ಭ್ರಾಂತಿಯಾಗುವುದಿಲ್ಲ ಎಂದು ಅಭಿಪ್ರಾಯ.

ತಸ್ಯಾಮುಲ್ಲಿಖಿತಾ ಸತ್ತಾ ತತ್ತದರ್ಥಗತೈವ ತತ್ ।
ತತ್ರೋಲ್ಲಿಖಿತವಸ್ತೂನಿ ಚಾರ್ಥಾತ್ ಪ್ರಾಪುರ್ಯಥಾರ್ಥತಾಮ್ ॥೧೧೯೭॥

**ಅರ್ಥ-** ತತ್= ಆ ಕಾರಣದಿಂದ, ತಸ್ಯಾಮ್= ಆ ವೃತ್ತಿಯಲ್ಲಿ, ಉಲ್ಲಿಖಿತಾ ಸತ್ತಾ = ಉಲ್ಲಿಖಿತವಾದ ಸತ್ವವು, ತತ್ತದರ್ಥಗತೈವ= ಆಯಾ ಅರ್ಥಗಳಲ್ಲಿ ಇರುವಂತಹದೇ, ತತ್ರೋಲ್ಲಿಖಿತವಸ್ತೂನಿ= ಉಲ್ಲಿಖಿತ ವಸ್ತುಗಳು, ಅರ್ಥಾತ್= ಯುಕ್ತಿಯಬಲದಿಂದ, ಯಥಾರ್ಥತಾಮ್= ಸತ್ಯತ್ವವನ್ನು, ಪ್ರಾಪುಃ= ಹೊಂದಿದವು.

**ಅನುವಾದ-** ಆದ್ದರಿಂದ ಆ ವೃತ್ತಿಯಲ್ಲಿ ಉಲ್ಲೇಖಗೊಂಡ ಸತ್ವವು ತತ್ತದರ್ಥಗತವಾದುದೇ, ಅಲ್ಲಿ ಉಲ್ಲೇಖಗೊಂಡ ವಸ್ತುಗಳೂ ಸಹ ಸತ್ಯವಾದವುಗಳೇ ಎಂದು ಯುಕ್ತಿಯ ಬಲದಿಂದ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತಸ್ಯಾಂ ಅಪರೋಕ್ಷವೃತ್ತೌ । ತತ್ತಸ್ಮಾತ್ । ತತ್ರ ಅಪರೋಕ್ಷವೃತ್ತೌ । ವಸ್ತೂನಿ ಘಟಾದಿವಸ್ತೂನಿ । ಅರ್ಥಾತ್ ವೃತ್ತೇಃ ಪ್ರಮಾತ್ವೇ ಅರ್ಥಾನಾಮಪಿ ಪ್ರಮಾ-ವಿಷಯತ್ವಲಾಭಾತ್ ॥ ೧೧೯೭ ॥

**ವಿವರಣೆ-** ವೃತ್ತಿಗೆ ಪ್ರಮಾತ್ವವಿರುವುದರಿಂದ, ವೃತ್ತಿಯಲ್ಲಿ ವಿಷಯವಾದ ಅರ್ಥಗಳು ಮತ್ತು ಅದರ ಸತ್ವಗಳು ಸತ್ಯವೇ ಆಗುತ್ತವೆ ಎಂದು ಅಭಿಪ್ರಾಯ.

**ಸಾಕ್ಷಾದ್ವೃತ್ತಾವನ್ಯಸತ್ತಾ ಯತ್ರೋಲ್ಲೇಖ್ಯಾ ಭವೇತ್ ತವ ।**
**ಪರೋಕ್ಷವೃತ್ತ್ಯಾ ಸಾ ಕ್ವತ್ಯೋಲ್ಲಿಖ್ಯತೇ ತೇಷು ವಸ್ತುಷು ॥ ೧೧೯೮ ॥**

**ಅರ್ಥ-** ತವ= ನಿನಗೆ, ಯತ್ರ= ಯಾವ, ಸಾಕ್ಷಾದ್ವೃತ್ತೌ= ಅಪರೋಕ್ಷವೃತ್ತಿಯಲ್ಲಿ, ಅನ್ಯಸತ್ತಾ= ಅನ್ಯಗತವಾದ ಸತ್ಯವು, ಉಲ್ಲೇಖ್ಯಾ ಭವೇತ್= ಉಲ್ಲೇಖಿಸಲ್ಪಡುತ್ತದೆಯೋ, ಪರೋಕ್ಷವೃತ್ತ್ಯಾ= ಪರೋಕ್ಷವೃತ್ತಿ ಅಪರೋಕ್ಷವೃತ್ತಿಯಿಂದ, ಕ್ವತ್ಯಾ= ಎಲ್ಲಿರುವ, ಸಾ = ಅಸತ್ಯವು, ತೇಷ ವಸ್ತುಷು= ಆ ವಸ್ತುಗಳಲ್ಲಿ, ಉಲ್ಲಿಖ್ಯತೇ= ಉಲ್ಲೇಖಿಸಲ್ಪಡುತ್ತದೆ.

**ಅನುವಾದ-** ಯಾವ ನೀನು ಅಪರೋಕ್ಷವೃತ್ತಿಯಲ್ಲಿ ಅನ್ಯಗತವಾದ ಸತ್ಯವು ಉಲ್ಲೇಖಿಸಲ್ಪಡುತ್ತದೆಯೆಂದು ಅಂಗೀಕರಿಸುತ್ತಿಯೋ, ಅಂತಹ ನೀನು ಪರೋಕ್ಷವೃತ್ತಿಯಲ್ಲಿ ಆಯಾ ವಸ್ತುಗಳಲ್ಲಿ ಉಲ್ಲೇಖಿಸಲ್ಪಡುವ ಸತ್ವವು ಎಲ್ಲಿರುವ ಸತ್ವ ಎಂದು ಹೇಳು?

**ಭಾವವಿಲಾಸಿನೀ–** ಯತ್ರ ವಸ್ತುಷು । ಪರೋಕ್ಷವೃತ್ತೇಸ್ತ್ವನ್ಮತೇಽಪ್ಯಧಿಷ್ಠಾನಾಗೋಚರತ್ವೇನ ತಯೋಲ್ಲಿಖ್ಯಮಾನಾಸತ್ತಾ ತತ್ತದರ್ಥಗತಾ ಚೇತ್ ಅಪರೋಕ್ಷವೃತ್ತ್ಯಾಪಿ ಸೈವೋಲ್ಲಿಖ್ಯತಾಮ್। ಸತಿ ಸ್ವೀಯಧನೇ ಕುತೋಽನ್ಯಯಾಚ್ಞೇತಿ ಭಾವಃ ॥ ೧೧೯೮ ॥

**ವಿವರಣೆ-** ನಿನ್ನ ಮತದಲ್ಲಿ ಪರೋಕ್ಷವೃತ್ತಿಯಲ್ಲಿ ಅಧಿಷ್ಠಾನವು ಗೋಚರಿಸದೇ ಇರುವುದರಿಂದ ಅಲ್ಲಿ ತೋರುವ ಸತ್ವವು. ಅಧಿಷ್ಠಾನಗತ ಸತ್ವವಲ್ಲ. ತತ್ತದರ್ಥಗತವೆಂದೇ ಒಪ್ಪಬೇಕು. ಹೀಗಿರುವಾಗ ಅಪರೋಕ್ಷವೃತ್ತಿಯಲ್ಲಿ ತೋರುವ ಸತ್ವವೂ ತತ್ತದರ್ಥಗತವೆಂದೇ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ತತ್ ಪ್ರಮಾರೂಪಯಾ ವೃತ್ತ್ಯೋಲ್ಲಿಖ್ಯಮಾನಾಽಖಿಲೇಷು ಚ ।
ಸತ್ತೇಯಂ ಬ್ರಹ್ಮ ಸತ್ತಾಯಾಃ ಸಮೈವೇತಿ ಮತಿರ್ಮಮ ॥ ೧೧೯೯ ॥

**ಅರ್ಥ-** ತತ್= ಆದ್ದರಿಂದ, ಅಖಿಲೇಷು ಚ= ಎಲ್ಲಾ ವಸ್ತುಗಳಲ್ಲಿಯೂ, ಪ್ರಮಾರೂಪಯಾ ವೃತ್ತ್ಯಾ= ಪ್ರಮಾರೂಪವಾದ ವೃತ್ತಿಯಿಂದ, ಉಲ್ಲಿಖ್ಯಮಾನಾ= ಉಲ್ಲೇಖಿಸಲ್ಪಡುವ, ಇಯಂ ಸತ್ತಾ= ಈ ಸತ್ವವು, ಬ್ರಹ್ಮ ಸತ್ತಾಯಾ = ಬ್ರಹ್ಮ ಸತ್ತ್ವಕ್ಕೆ, ಸಮೈವೇತಿ= ಸಮಾನವಾದುದೆಂದೇ, ಮತಿರ್ಮಮ= ನನ್ನ ಅಭಿಪ್ರಾಯ.

**ಅನುವಾದ-** ಆದ್ದರಿಂದ ಎಲ್ಲ ವಸ್ತುಗಳಲ್ಲಿ ಪ್ರಮಾರೂಪವಾದ ವೃತ್ತಿಯಿಂದ ಉಲ್ಲೇಖಿಸಲ್ಪಡುವ ಈ ಸತ್ತ್ವವು ಬ್ರಹ್ಮ ಸತ್ತಾಸಮಾನವಾದುದೆಂದೇ ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೧೧೯೯ ॥

ಅರ್ಥೋಽಯಂ ಬ್ರಹ್ಮವದ್ ವಸ್ತುತತ್ತ್ವಂ ಯಸ್ತತ್ರ ಭಾಸತೇ ।
ವೃತ್ತೌ ಪ್ರತೀತಸ್ಯ ತಸ್ಯ ಪ್ರಾಕ್ ಸತೋ ನ ದೃಶಿ ಭ್ರಮಃ ॥ ೧೨೦೦ ॥

**ಅರ್ಥ-** ಯಃ = ಯಾವ, ಅಯಂ ಅರ್ಥಃ = ಈ ಘಟಾದಿ ಅರ್ಥವು, ತತ್ರ = ಅಪರೋಕ್ಷವೃತ್ತಿಯಲ್ಲಿ, ಭಾಸತೇ= ತೋರುತ್ತದೆಯೋ, ಅದು ಬ್ರಹ್ಮವತ್ = ಬ್ರಹ್ಮನಂತೆ, ವಸ್ತುತತ್ತ್ವಂ = ಸತ್ಯವೇ ಆಗಿದೆ, ವೃತ್ತೌ = ವೃತ್ತಿಯಲ್ಲಿ, ಪ್ರತೀತಸ್ಯ = ಪ್ರತೀತವಾದಂತಹ, ಪ್ರಾಕ್= ವೃತ್ತಿಗಿಂತ ಮೊದಲೇ, ಸತಃ = ವಿದ್ಯಮಾನವಾದಂತಹ, ತಸ್ಯ = ಆ ಅರ್ಥಕ್ಕೆ, ದೃಶಿಃ= ಜ್ಞಾನದಲ್ಲಿ, ಭ್ರಮಃ ನ= ಆರೋಪವೂ ಇಲ್ಲ.

**ಅನುವಾದ-** ಆದ್ದರಿಂದ ಯಾವ ಅರ್ಥವು ಅಪರೋಕ್ಷವೃತ್ತಿಯಲ್ಲಿ ತೋರುತ್ತದೆಯೋ, ಅದು ಬ್ರಹ್ಮನಂತೆ ಸತ್ಯವೇ ಆಗಿದೆ. ವೃತ್ತಿಯಲ್ಲಿ ಪ್ರತೀತವಾದಂತಹ ಮತ್ತು ವೃತ್ತಿಗಿಂತಲೂ ಮೊದಲೇ ವಿದ್ಯಮಾನವಾದಂತಹ, ಆ ಅರ್ಥಕ್ಕೆ ಜ್ಞಾನದಲ್ಲಿ ಆರೋಪವಿಲ್ಲ.

**ಭಾವವಿಲಾಸಿನೀ–** ಅಯಂ ಬ್ರಹ್ಮಸತ್ತಾಸಮಾನಸತ್ತಾಶ್ರಯಭೂತಃ । ಅರ್ಥಃ ಘಟಪಟಾದಿಃ । ವಸ್ತುತತ್ತ್ವಂ ವಸ್ತುತೋ ವಿದ್ಯಮಾನಂ ತತ್ತ್ವಮ್ । ಯಃ ಅರ್ಥಃ । ತತ್ರ ಪ್ರಮಾರೂಪವೃತ್ತೌ । ಪ್ರಮಾರೂಪವೃತ್ತೌ ಪ್ರತೀಯಮಾನಸತ್ತಾ ಬ್ರಹ್ಮಸತ್ತೋಪಮಾ । ತತ್ರ ಪ್ರಮೀಯಮಾನಾ ಅರ್ಥಾಶ್ಚ ಬ್ರಹ್ಮವದೇವೇತಿ ಭಾವಃ ॥ ೧೨೦೦ ॥

ವೃತ್ತ್ಯಾಽಜ್ಞಾನಕ್ಷಯೇ ಪಶ್ಚಾದ್ ದೃಕ್ಚಕ್ಷುಷ್ಟೇ ಕಿಲೋನ್ಮಿಷೇತ್ ।
ವಿಭ್ರಮಂ ತದ್ ದ್ವಿಧಾ ಧತ್ತೇ ಸತ್ತಾದ್ಯಾ ಮತ್ತಕಾಶಿನೀ ॥ ೧೨೦೧ ॥

**ಅರ್ಥ-** ವೃತ್ತ್ಯಾ = ವೃತ್ತಿಯಿಂದ, ಅಜ್ಞಾನಕ್ಷಯೇ = ಅಜ್ಞಾನನಾಶವುಂಟಾಗುತ್ತಿರಲು, ಪಶ್ಚಾತ್ = ಅನಂತರ, ತೇ = ನಿನಗೆ, ದೃಕ್‌ಚಕ್ಷುಃ = ಚೈತನ್ಯರೂಪವಾದ ಜ್ಞಾನವು, ಉನ್ಮಿಷೇತ್ ಕಿಲ = ಅರ್ಥವನ್ನು ಉಲ್ಲೇಖ ಮಾಡುವುದಷ್ಟೇ, ತತ್ = ಆದ್ದರಿಂದ, ಸತ್ತಾದ್ಯಾ = ಸತ್ತಾದಿರೂಪವಾದ, ಮತ್ತಕಾಶಿನೀ = ಉತ್ತಮ ವಧುವು, ದ್ವಿಧಾ = ಎರಡು ರೀತಿಯಲ್ಲಿ, ವಿಭ್ರಮಂ = ಭ್ರಮಾಭಾವವನ್ನು (ವಿಲಾಸವನ್ನು) ಧತ್ತೇ= ಧರಿಸಿದ್ದಾಳೆ.

**ಅನುವಾದ-** ವೃತ್ತಿಯಿಂದ ಅಜ್ಞಾನನಾಶವು ಉಂಟಾದ ಮೇಲೆ ನಿನಗೆ ಚೈತನ್ಯ ರೂಪವಾದ ಜ್ಞಾನವು ಅರ್ಥವನ್ನು ಉಲ್ಲೇಖಿಸುವುದಷ್ಟೇ, ಆದ್ದರಿಂದ ಸತ್ತಾದಿಗಳನ್ನು ಹೊಂದಿದ ಉತ್ತಮ ವಧು ಭ್ರಮಾಭಾವವನ್ನು (ವಿಲಾಸವನ್ನು) ಎರಡು ರೀತಿಯಲ್ಲಿಯೂ ಧರಿಸಿದ್ದಾಳೆ.

**ಭಾವವಿಲಾಸಿನೀ–** ತೇ ದೃಕ್‌ಚಕ್ಷುರುನ್ಮಿಷೇತ್ ತದ್ಯೆವಾರ್ಥಮುಲ್ಲಿಖೇನ್ನಾನ್ಯದೇತಿ ಭಾವಃ । ಉಕ್ತಮರ್ಥಂ ಸಾಹಿತ್ಯಮುದ್ರಯಾ ರಂಜಯತಿ ॥ ವಿಭ್ರಮಮಿತಿ ॥ ತತ್ತಸ್ಮಾತ್ । ದ್ವಿಧಾ ಅಧಿಷ್ಠಾನೋಲ್ಲೇಖಾಭಾವೇ ನಾರ್ಥಾನಾಂ ಪ್ರಾಕ್ಸತ್ತ್ವೇನ ಚೇತಿ ದ್ವಿಧಾ । ವಿಭ್ರಮಂ ವಿಗತಭ್ರಮಮ್। ಭ್ರಮಾಭಾವಂ ಪ್ರಮಾಮಿತ್ಯರ್ಥಃ । ಧತ್ತೇ ವಿಷಯತಯಾ ದಧಾತಿ । ವಿಲಾಸಮಿತಿ ಧ್ವನಿಃ । ಸತ್ತಾದ್ಯಾ। ಸತ್ತಾ ಆದ್ಯಾ ಯಸ್ಯಾಸ್ಸಾ । ಘಟಪಟಾದಿರೂಪಾಜಗತೀ । ಸೈವ ಮತ್ತಕಾಶಿನೀ ಉತ್ತಮವಧೂಃ । ಯಥೋತ್ತಮಾ ನಾರೀ ವಿಲಾಸಾಖ್ಯವಿಭ್ರಮಂ ಧತ್ತೇ ತಥೇಯಮಪಿ ಭ್ರಮಾಭಾವಾಖ್ಯವಿಭ್ರಮಂ ಧತ್ತ ಇತಿ ಶ್ಲೇಷಗರ್ಭೋ ರೂಪಕಾಲಂಕಾರಃ । ಪ್ರಕಾರದ್ವಯೇನಾಪಿ ಜಗದಪರೋಕ್ಷವೃತ್ತಿರ್ಭ್ರಮೋ ನೇತಿ ಭಾವಃ । ಅಥವಾ ಮದ್ರೀತ್ಯಾ ವೃತ್ತಾಖ್ಯಭ್ರಮಾಭಾವಂ ತ್ವದ್ರೀತ್ಯಾ ಅಧಿಷ್ಠಾನಚೈತನ್ಯಾಖ್ಯಭ್ರಮಾಭಾವಮ್ । ಕುತ ಇತ್ಯ-ಸ್ಯಾಪೀದಮೇವೋತ್ತರಮ್ । ಉಭಯತ್ರಾಪಿ ದ್ವಿಧಾವೃತ್ತಾವಪಿ ನೀರೂಪಾಧಿಷ್ಠಾನೋಲ್ಲೇಖಾ-ಯೋಗಾತ್ ಪ್ರಾಗರ್ಥಸತ್ತ್ವಾಚ್ಚ । ಚೈತನ್ಯೇಽಪಿ ಕರ್ತೃಕರ್ಮಭಾವವಿರೋಧೇನಾಧಿ ಷ್ಠಾನೋಲ್ಲೇಖಾಯೋಗಾತ್ಪ್ರಾಗರ್ಥಸತ್ತ್ವಾಚ್ಚೇತ್ಯರ್ಥಃ ॥ ೧೨೦೧ ॥

**ವಿವರಣೆ-** ಘಟಪಟಾದಿ ರೂಪ ಜಗತ್ತನ್ನು 'ಮತ್ತಕಾಶಿನೀ' ಎಂದರೆ ವೃತ್ತಿಯೆಂದು ತೆಗೆದುಕೊಳ್ಳಬೇಕು. ಆ ಜಗತ್ತಿನ ಜ್ಞಾನದಲ್ಲಿ ಅಧಿಷ್ಠಾನ ಉಲ್ಲೇಖವಿಲ್ಲದಿರುವುದರಿಂದ ಮತ್ತು ವೃತ್ತಿಗಿಂತ ಮೊದಲು ಸತ್ತ್ವವೇ ಇರುವುದರಿಂದ ಭ್ರಮಾಭಾವರೂಪವಾದ ಎಂದರೆ ಭ್ರಮತ್ವಾನಾಪಾದಕವಾದ ವಿಲಾಸವನ್ನು ಧರಿಸಿದೆ ಎಂದು ಅಭಿಪ್ರಾಯ. ಎರಡು ಪ್ರಕಾರಗಳಿಂದಲೂ ಅಪರೋಕ್ಷವೃತ್ತಿಯು ಭ್ರಮವಾಗುವುದಿಲ್ಲಎಂದು ಅಭಿಪ್ರಾಯ. ಅಥವಾ ನನ್ನ ರೀತಿಯಲ್ಲಿ ವೃತ್ತಿರೂಪವಾದ ಭ್ರಮವಿಲ್ಲ. ನಿನ್ನ ರೀತಿಯಲ್ಲಿ ಅಧಿಷ್ಠಾನಚೈತನ್ಯ ರೂಪವಾದ ಭ್ರಮವಿಲ್ಲ. ಆದ್ದರಿಂದ ಎರಡು ರೀತಿಯಲ್ಲಿಯೂ ಭ್ರಮವಿಲ್ಲ ಎಂದು ಅಭಿಪ್ರಾಯ. ಅಲ್ಲಿಯೂ ಸಹ ವೃತ್ತಿಯಲ್ಲಿ ರೂಪರಹಿತ ಬ್ರಹ್ಮನ ಉಲ್ಲೇಖವಿಲ್ಲದಿರುವುದು. ಮತ್ತು ಅರ್ಥದ ಸತ್ತ್ವವು ಮೊದಲೇ ಇರುವುದು ಪ್ರಯೋಜಕವಾದುದು ಎಂದು

ಅಭಿಪ್ರಾಯ. ಸತ್ತ್ವವಿರುವುದರಿಂದ ಎರಡು ರೀತಿಯಲ್ಲಿಯೂ ಅದಕ್ಕೆ ಭ್ರಮತ್ವವು ಕೂಡುವುದಿಲ್ಲ. ಪ್ರಮಾತ್ವವೇ ಇದೆಯೆಂದು ಅರ್ಥ. ಇದನ್ನು ಸೂಚಿಸುವುದಕ್ಕಾಗಿಯೇ 'ಸತ್ತ್ವಾದ್ಯಾ' ಎಂದು ಹೇಳಿದ್ದಾರೆ. ಮೊದಲು ಸತ್ತ್ವವು ಇದ್ದರೆ ಮಾತ್ರ ಸನ್ನಿಕರ್ಷವುಂಟಾಗಿ ವೃತ್ತಿಯು ಉತ್ಪತ್ತಿಯಾಗುವುದಷ್ಟೇ?

**ಯೋಗಾಯೋಗಾದ್ ಭ್ರಮಾಯೋಗಂ ಮಾ ವಿಸ್ಮಾರ್ಷೀಃ ಪುರೋದಿತಮ್ ।**
**ಪ್ರಮಿನಂತೀತಿ ವೇದೇಽಸ್ಯಾಂ ಪ್ರಾಹ ಪ್ರಮಿತಿಮೇವ ತತ್ ॥ ೧೨೦೨ ॥**

**ಅರ್ಥ-** ಯೋಗಾಯೋಗಾತ್ = ಸನ್ನಿಕರ್ಷವೇ ಕೂಡದಿರುವುದರಿಂದ, ಪುರೋದಿತಮ್= ಮೊದಲೇ ಹೇಳಿದಂತಹ, ಭ್ರಮಾಯೋಗಂ= ಭ್ರಾಂತಿಯ ಅನುಪಪತ್ತಿಯನ್ನು, ಮಾ ವಿಸ್ಮಾರ್ಷೀಃ= ಮರೆಯಬೇಡ, ತತ್= ನಾವು ಹೇಳಿದಂತೆ ಭ್ರಮವು ಅನುಪಪನ್ನವಾಗುವುದರಿಂದ, ವೇದೇ = ವೇದದಲ್ಲಿ, ಪ್ರಮಿನಂತೀತಿ = ಪ್ರಮಿನಂತಿ ಎಂದು, ಅಸ್ಯಾಂ= ಈ ಜಗತ್ತಿನಲ್ಲಿ, ಪ್ರಮಿತಿಮೇವ = ಪ್ರಮಾತ್ವವನ್ನೇ, ಪ್ರಾಹ= ಹೇಳಲಾಗಿದೆ.

**ಅನುವಾದ-** ಅರ್ಥಕ್ಕೆ ಸತ್ತ್ವವಿಲ್ಲದಿದ್ದರೆ, ಸನ್ನಿಕರ್ಷವೇ ಇಲ್ಲದಿರುವುದರಿಂದ ನಾವು ಹಿಂದೆ ಹೇಳಿದ ಸನ್ನಿಕರ್ಷವು ಇಲ್ಲದಿದ್ದರೆ ಸನ್ನಿಕರ್ಷಜನ್ಯವಾದ ವೃತ್ತಿರೂಪವಾದ ಭ್ರಮವು ಕೂಡುವುದಿಲ್ಲ ಎಂಬ ದೋಷವನ್ನು ಮರೆಯಬೇಡ. ಆದ್ದರಿಂದ ಭ್ರಮವು ಅನುಪಪನ್ನವಾದುದರಿಂದಲೇ ವೇದದಲ್ಲಿ ಪ್ರಮಿನಂತಿ ಎಂದು ಈ ಜಗದ್ವಿಷಯಕ ವೃತ್ತಿಗೆ ಪ್ರಮಾತ್ವವನ್ನೇ ಹೇಳಿದೆ.

**ಭಾವವಿಲಾಸಿನೀ–** ನನು ಪ್ರಾಗರ್ಥಸತ್ತ್ವಂ ಕುತ ಇತ್ಯತಃ ಪೂರ್ವೋಕ್ತಯುಕ್ತಿಂ ಸ್ಮಾರಯತಿ ॥ **ಯೋಗೇತಿ** ॥ ಯೋಗೋಽರ್ಥೇಂದ್ರಿಯಸನ್ನಿಕರ್ಷಃ । ತತ್ತಸ್ಮಾತ್ ಉಕ್ತರೀತ್ಯಾ ಭ್ರಮಾಯೋಗಾತ್ ॥ ೧೨೦೨ ॥

**ವಿವರಣೆ-** 'ಆಪಶ್ಚನ ಪ್ರಮಿನಂತಿ ವ್ರತಂ ವಾಂ' ಎಂಬುದು ಋಗ್ವೇದ ಮಂತ್ರ, ಅಬಭಿಮಾನಿದೇವತೆಗಳು ನಿಮ್ಮ ಜಗತ್ಸರ್ಜನಾದಿ ಕ್ರಿಯೆಗಳ ಪ್ರಮಾರೂಪವಾದ ಜ್ಞಾನವನ್ನು ಹೊಂದಿದವರಾಗಿದ್ದಾರೆ ಎಂದು ಅರ್ಥ. ದೇವತೆಗಳ ಪ್ರಮೆಗೆ ವಿಷಯವಾದ ಜಗತ್ಸರ್ಜನಾದಿ ವ್ಯಾಪಾರಗಳು ಸತ್ಯವೆಂದೇ ಸಿದ್ಧವಾಗುತ್ತದೆ.

**ಮಾಯಾಸೃಷ್ಟೌ ಚ ಮಾಯಾವಿಭ್ರಾಂತ್ಯಾರೋಪೋ ನ ಯೌಕ್ತಿಕಃ ।**
**ಅನ್ಯೇಷಾಮರ್ಥಯೋಗೋತ್ಥವೃತ್ತೇಶ್ಚಾಭ್ರಮತೋದಿತಾ ॥ ೧೨೦೩ ॥**

**ನಿರೀಕ್ಷತೋಽಪಿ ಯಸ್ಯೇಕ್ಷಾ ಮಾಯಯಾಽಣ್ವಪಿ ನಾಜ್ಯತೇ ।**
**ಸ್ತೌತೀತ್ಥಂ ಪಂಚಮಸ್ಕಂಧೇ ಪಂಚವಕ್ತ್ರ ಇತೀರಿತಮ್ ॥ ೧೨೦೪ ॥**

**ಅರ್ಥ-** ಮಾಯಾಸೃಷ್ಟೌ ಚ = ಮಾಯಾಸೃಷ್ಟಿಯಲ್ಲಾದರೂ, ಮಾಯಾ-ವಿಭ್ರಾಂತ್ಯಾರೋಪಃ = ಮಾಯಾವಿಗೆ ಭ್ರಾಂತಿರೂಪವಾದ ಆರೋಪವು, ನ ಯೌಕ್ತಿಕಃ = ಯುಕ್ತಿಯುಕ್ತವಾದುದಲ್ಲ, ಅನ್ಯೇಷಾಮ್ = ಉಳಿದವರಿಗಾದರೊ, ಅರ್ಥ-ಯೋಗೋತ್ಥವೃತ್ತೇಃ = ಅರ್ಥಸನ್ನಿಕರ್ಷಜನ್ಯವಾದ ವೃತ್ತಿಗೆ, ಅಭ್ರಮತಾ= ಭ್ರಮತ್ವಾಭಾವವೇ, ಉದಿತಾ = ಉಪಪಾದಿಸಲ್ಪಟ್ಟಿದೆ.

ನಿರೀಕ್ಷತೋಽಪಿ = ಜಗತ್ತನ್ನು ಪ್ರತ್ಯಕ್ಷವಾಗಿ ನೋಡುವ, ಯಸ್ಯ= ಯಾವ ಪರಮಾತ್ಮನ, ಈಕ್ಷಾ = ಜ್ಞಾನವು, ಮಾಯಯಾ = ಮಾಯೆಯಿಂದ, ಅಣ್ವಪಿ = ಸ್ವಲ್ಪವೂ, ನಾಜ್ಯತೇ = ಲೇಪಿಸಲ್ಪಡುವುದಿಲ್ಲ ಎಂದು, ಇತ್ಥಂ = ಈ ರೀತಿಯಾಗಿ, ಈರಿತಮ್= ಬ್ರಹ್ಮನ ಜ್ಞಾನಕ್ಕೆ ಮಾಯಾಸ್ಪರ್ಶಾಭಾವವನ್ನು , ಪಂಚಮಸ್ಕಂಧೇ= ಪಂಚಮಸ್ಕಂಧದಲ್ಲಿ ಪಂಚವಕ್ತ್ರ = ರುದ್ರದೇವರು, ಇತ್ಥಂ = ಈ ರೀತಿಯಾಗಿ, ಸ್ತೌತಿ= ಸ್ತೋತ್ರಮಾಡುತ್ತಾರೆ.

**ಅನುವಾದ- ಮಾಯಾಸೃಷ್ಟಿಯೆಂದು ಅಂಗೀಕರಿಸಿದರೆ ಮಾಯಾವಿಯಾದ ಈಶ್ವರನಿಗೆ ಜಗತ್ತಿನ ಭ್ರಾಂತಿಯು ಯುಕ್ತಿಯುಕ್ತವಾದುದಲ್ಲ. ಉಳಿದವರಿಗಾದರೋ ವೃತ್ತಿಯು ಸನ್ನಿಕರ್ಷಜನ್ಯವಾದುದರಿಂದ ಭ್ರಾಂತಿಯು ಇಲ್ಲ. ಭಗವಂತನ ಜ್ಞಾನಕ್ಕೆ ಮಾಯಸ್ಪರ್ಶವಿಲ್ಲವೆಂಬುದನ್ನು ಪಂಚಮಸ್ಕಂಧದಲ್ಲಿ ರುದ್ರದೇವರು ಜಗತ್ತನ್ನು ಪ್ರತ್ಯಕ್ಷವಾಗಿ ನೋಡುವ ಯಾವ ಪರಮಾತ್ಮನ ಜ್ಞಾನವು ಮಾಯೆಯಿಂದ ಸ್ವಲ್ಪವೂ ಸ್ಪರ್ಶಿಸಲ್ಪಡುವುದಿಲ್ಲವೋ ಎಂದು ಈ ರೀತಿಯಾಗಿ ಸ್ತೋತ್ರ ಮಾಡಿದ್ದಾರೆ.**

**ಭಾವವಿಲಾಸಿನೀ–ಮಾಯಾಸೃಷ್ಟಿಪಕ್ಷೇ ಚ ಪ್ರಾಗುಕ್ತಯುಕ್ತಿಂ ಸ್ಮಾರಯನ್ದ್ವಿಧೇತಿ ವಾಕ್ಯೇನೈವ ಸಾಪಿ ದೂಷಿತೇತಿ ಸೂಚಯತಿ ॥ ಮಾಯೇತಿ ॥ ಉದಿತಾ ಪೂರ್ವಮುಕ್ತಾ ॥ ೧೨೦೩-೧೨೦೪॥**

**ವಿವರಣೆ-** ಮಾಯಾಸೃಷ್ಟಿಯ ಪಕ್ಷದಲ್ಲಿ ಮಾಯಿಕವಾದ ವಸ್ತುವಿನ ಜ್ಞಾನವನ್ನು ಒಪ್ಪಬೇಕು. ಹಿಂದೆ ಹೇಳಿದ ರೀತಿಯಲ್ಲಿ ಮಾಯಾವಿಯಾದ ಈಶ್ವರನಿಗೆ ಮಾಯಿಕ ವಸ್ತುವಿನ ಅಪರೋಕ್ಷಜ್ಞಾನವಿಲ್ಲ. ಉಳಿದ ಜೀವರ ಅಪರೋಕ್ಷಜ್ಞಾನವಾದರೋ ಅರ್ಥಸನ್ನಿಕರ್ಷದಿಂದಲೇ ಉಂಟಾಗಿರುವ ಕಾರಣ ಅಪರೋಕ್ಷಜ್ಞಾನಕ್ಕಿಂತ ಮೊದಲೇ ಅರ್ಥಸತ್ವವು ಇರುವುದರಿಂದ ಅವರಿಗೂ ಭ್ರಾಂತಿಯಿಲ್ಲ . ಆದ್ದರಿಂದ ಯಾರಿಗೂ ಭ್ರಾಂತಿಯಿಲ್ಲವಾದ ಕಾರಣ ಜಗತ್ತು ಮಾಯಾಸೃಷ್ಟಿಯಲ್ಲ. ಅಲ್ಲದೇ, ರುದ್ರದೇವರು ಪರಮಾತ್ಮನ ಜ್ಞಾನವು ಮಾಯಾಸ್ಪರ್ಶರಹಿತವಾದುದೆಂದು ಸ್ತೋತ್ರ ಮಾಡುವುದರಿಂದಲೂ ಈಶ್ವರ ಜ್ಞಾನವು ಆರೋಪರೂಪವಾದುದಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೂ ಜಗತ್ತು ಸತ್ಯವೆಂದು ಸಿದ್ದವಾಗುತ್ತದೆ.

ನ ಯತ್ರೇತ್ಯಾದಿ ವಾಕ್ಚೋಕ್ತಾ ತತ್ಪ್ರಮಾಽಮಾಯದೃಕ್ಪ್ರಭೋಃ ।
ಆಪಶ್ಚ ಪ್ರಮಿನಂತೀತಿ ಪ್ರಜಾನಾಂ ಚ ಪ್ರಮೋಚ್ಯತೇ ॥ ೧೨೦೫ ॥

**ಅತಃ ಪ್ರಭೋಃ ಪ್ರಜಾನಾಂ ಚ ಪ್ರಮಾದೋಽಯಂ ನ ಶೋಭತೇ ।**
**ಏವಂ ಚಾರೋಪಿತತ್ವೇನ ಮಿಥ್ಯಾಭೂತಜಗನ್ನ ಮೇ ॥ ೧೨೦೬ ॥**

**ಅರ್ಥ-** ನಯತ್ರೇತಿ ಇತ್ಯಾದಿ = ನಯತ್ರಮಾಯಾ ಮೊದಲಾದ, ವಾಕ್‌ಚ= ವಾಕ್ಯವೂ ಕೂಡ, ಉಕ್ತಾ = ಭಾಗವತದಲ್ಲಿ ಹೇಳಲ್ಪಟ್ಟಿದೆ. ತತ್ = ಆದ್ದರಿಂದ, ಪ್ರಭೋಃ = ಪ್ರಭುವಿನ, ಅಮಾಯದೃಕ್ = ಮಾಯಿಕವಲ್ಲದ ಜ್ಞಾನವು, ಪ್ರಮಾ = ಪ್ರಮಾರೂಪವಾದುದೆ. ಆಪಶ್ಚ ಪ್ರಮಿನಂತೀತಿ = ಅಭಿಮಾನಿದೇವತೆಗಳು ನಿನ್ನ ಜಗತ್‌ಸೃಷ್ಟ್ಯಾದಿ ವ್ಯಾಪಾರಗಳ ಪ್ರಮೆಯನ್ನೇ ಹೊಂದಿದ್ದಾರೆ ಎಂದು, ಪ್ರಜಾನಾಂ ಚ = ದೇವತಾರೂಪರಾದ ಪ್ರಜೆಗಳಿಗೂ ಸಹ, ಪ್ರಮಾ ಉಚ್ಯತೇ = ಪ್ರಮೆಯು ಹೇಳಲ್ಪಟ್ಟಿದೆ.

ಅತಃ = ಆದ್ದರಿಂದ, ಪ್ರಭೋಃ = ಪ್ರಭುವಾದ ಈಶ್ವರನಿಗೂ, ಪ್ರಜಾನಾಂ ಚ = ಮತ್ತು ಪ್ರಜೆಗಳಿಗೂ, ಅಯಂ ಪ್ರಮಾದಃ = ಈ ಜಗತ್ತಿನ ಆರೋಪವನ್ನು ಅಂಗೀಕರಿಸುವುದು, ನ ಶೋಭತೇ = ಶೋಭಿಸುವುದಿಲ್ಲ. ಏವಂ = ಈ ರೀತಿಯಾಗಿ , ಮೇ = ನನಗೆ, ಜಗತ್ = ಜಗತ್ತು, ಆರೋಪಿತತ್ವೇನ ಮಿಥ್ಯಾಭೂತಂ ನ = ಆರೋಪಿತವಾದ ಕಾರಣದಿಂದ ಮಿಥ್ಯಾಭೂತವಾದುದ್ದಲ್ಲ.

**ಅನುವಾದ-** ನ ಯತ್ರಮಾಯಾ ಎಂಬ ಭಾಗವತವಾಕ್ಯವು ಹಿಂದೆಯೇ ಹೇಳಲ್ಪಟ್ಟಿದೆ, ಆದ್ದರಿಂದ ಮಾಯಾಸ್ಪರ್ಶವಿಲ್ಲದ ಪ್ರಭುವಿನ ಜ್ಞಾನವು ಪ್ರಮಾಣ ಎಂದೇ ಸಿದ್ಧವಾಗುತ್ತದೆ. ಆಪಶ್ಚನ ಪ್ರಮಿನಂತಿ ಎಂಬ ವೇದವಾಕ್ಯವು ಅಭಿಮಾನಿ ದೇವತೆಗಳ ಜಗದ್ವಿಷಯಕಜ್ಞಾನವು ಪ್ರಮಾಣ ಎಂದು ಹೇಳುತ್ತದೆ. ಆದ್ದರಿಂದ ಪ್ರಭುವಿಗಾಗಲೀ, ಪ್ರಜೆಗಳಿಗಾಗಲೀ ಈ ಜಗದಾರೋಪರೂಪವಾದ ಭ್ರಾಂತಿಯು ಶೋಭಿಸುವುದಿಲ್ಲ. ಈ ರೀತಿಯಲ್ಲಿ ಜಗತ್ತು ಆರೋಪಿತವಲ್ಲವಾದ್ದರಿಂದ ನನ್ನ ರೀತಿಯಲ್ಲಿ ಜಗತ್ತು ಆರೋಪಿತತ್ವಪ್ರಯುಕ್ತವಾದ ಮಿಥ್ಯಾತ್ವವನ್ನು ಹೊಂದಿರುವುದಿಲ್ಲ.

**ಭಾವವಿಲಾಸಿನೀ–** ತತ್ ತಸ್ಮಾತ್ ವಾಕ್ಯದ್ವಯೇನಾಪಿ ಭಗವತಿ ಮಾಯಾಯಾ ನಿವಾರಿತತ್ವಾತ್। ಪ್ರಭೋಃ ಅಮಾಯದೃಕ್ ನ ವಿದ್ಯತೇ ಮಾಯಾ ಯಸ್ಯಾಸ್ಸಾ ಅಮಾಯಾ ದೃಕ್ ಘಟಪಟಾದಿ-ದರ್ಶನಮ್। ಪ್ರಮಾ ಪ್ರಮೈವ । ಮಾಯಾರಹಿತತ್ವಾತ್ ನೇಶ್ವರೋ ಮಾಯಯಾ ಜಗತ್ಸೃಷ್ಟ್ವಾ ಪಶ್ಯತಿ ಕಿಂತು ಸಮ್ಯಕ್ಸೃಷ್ಟ್ವಾ ಪ್ರಮಿನೋತ್ಯೇವ । ಅತೋ ಮಾಯಾಸೃಷ್ಟಿಪಕ್ಷೋಽಪಿ ನೋಪಾದೇಯ ಇತಿ ಭಾವಃ । ಪ್ರಭೋರ್ಮಾಯಿಕಾರ್ಥದರ್ಶನಂ ದೂಷಯಿತ್ವಾ ಪ್ರಜಾನಾಮಪಿ ತನ್ನೇತ್ಯಾಹ - **ಅತ ಇತಿ** ॥ ೧೨೦೫-೧೨೦೬ ॥

**ನಿರಧಿಷ್ಠಾನಧೀತ್ವಂ ಚ ಪರೋಕ್ಷಪ್ರಮಯೋಪಮಾ ।**
**ಪೂರ್ವಪ್ರಮಿತದೃಕ್ತ್ವಂ ಚ ಯೋಗಾಯೋಗಶ್ಚ ಬಾಧಕಃ ॥ ೧೨೦೭ ॥**

**ಅರ್ಥ-** ನಿರಧಿಷ್ಠಾನಧೀತ್ವಂ = ನಿರಧಿಷ್ಠಾನ ಜ್ಞಾನತ್ವ, ಚ = ಮತ್ತು, ಪರೋಕ್ಷಪ್ರಮಯೋಪಮಾ = ಪರೋಕ್ಷಪ್ರಮಾಸಾದೃಶ್ಯ ಚ = ಮತ್ತು , ಪೂರ್ವಪ್ರಮಿತದೃಕ್ತ್ವಂ = ಪೂರ್ವಪ್ರಮಿತ ಜ್ಞಾನತ್ವ , ಚ = ಮತ್ತು , ಯೋಗಾಯೋಗ = ಸನ್ನಿಕರ್ಷಅನುಪಪತ್ತಿಯು, ಬಾಧಕಃ = ಜಗದಾರೋಪಕ್ಕೆ ಬಾಧಕಗಳು.

**ಅನುವಾದ-** ನಿರಧಿಷ್ಠಾನಜ್ಞಾನತ್ವ, ಪರೋಕ್ಷಪ್ರಮಾಸಾದೃಶ್ಯ, ಪೂರ್ವಪ್ರಮತದೃಕ್ತ್ವ ಮತ್ತು ತನ್ನಿ ಕರ್ಷಾಯೋಗಗಳು ಜಗದಾರೋಪಕ್ಕೆ ಬಾಧಕಗಳು.

**ಭಾವವಿಲಾಸಿನೀ–** ಪರಾಭಿಮತಜಗನ್ಮಿಥ್ಯಾತ್ವಾಖ್ಯವಿಷತರೋರ್ಮೂಲರೂಪಾರೋಪ-ಚ್ಛೇದಾಯ ಶಾಖಾರೂಪಬಾಧಚ್ಛೇದಾಯ ಚ ಸ್ವೇನ ಪ್ರಾಗುಪಪಾದಿತದೂಷಣಾಖ್ಯ-ಮೌಕ್ತಿಕಮಣೀನ್ಸ್ವಬುದ್ಧಿಪ್ರದಮಧ್ವಾಚಾರ್ಯಚರಣದ್ವಯೇ ದ್ವೇಧಾ ಸಮರ್ಪಯಿತುಂ ಶ್ಲೋಕಾಖ್ಯಸೂತ್ರೇಣ ಮಾಲಾದ್ವಿತಯಾಕಾರತಯಾ ಸಂಗೃಹ್ಣಾತಿ ॥ ನಿರಧಿಷ್ಠಾನೇತ್ಯಾದಿನಾ ವಿಶ್ವಮಾಸೀದನಾಕುಲಮಿತ್ಯಂತೇನ ಗ್ರಂಥೇನ ॥ ನೀರೂಪಸ್ಯೌಪನಿಷದಸ್ಯ ಚಾಧಿಷ್ಠಾನಾಭಿಮತತ್ವದ್ಬ್ರಹ್ಮಣಃ ಸಾರ್ವಜನೀನಚಾಕ್ಷುಷವೃತ್ತಾವುಲ್ಲೇಖಾಯೋಗಾತ್ ಸ್ವಾವೇದ್ಯಸ್ಯ ಸ್ವವೇದ್ಯತ್ವೇಽಪಿ ದೃಗ್ದೃಶ್ಯಯೋರಧ್ಯಾಸಸಂಬಂಧಮತೇ ಸ್ವಾನಧ್ಯಸ್ತಸ್ಯ ಚ ಬ್ರಹ್ಮಣೋಧಿಷ್ಠಾನಚಿದ್ರೂಪೇ ಸ್ವಸ್ಮಿನ್ನುಲ್ಲೇಖಾಯೋಗಾತ್ ಭೂತಲೇ ಘಟಃ ಘಟೇ ಘಟತ್ವಂ ಘಟಸ್ಸನ್ಪಟಸ್ಸನ್ಘಟೋಽಸ್ತಿ ಪಟೋಽಸ್ತೀತ್ಯಾದಿಸಾರ್ವಜನೀನಪ್ರತ್ಯಯೇ ಚೋಕ್ತವಿಧಯಾ ಅಧಿಷ್ಠಾನಚೈತನ್ಯೋ-ಲ್ಲೇಖಾಯೋಗಾಚ್ಚ ನಿರಧಿಷ್ಠಾನಧೀತ್ವಮಧಿಷ್ಠಾನೋಲ್ಲೇಖಶೂನ್ಯಧೀತ್ವಮ್ ।

ಯೋಗಾಯೋಗಾಖ್ಯಚತುರ್ಥದೂಷಣರೀತ್ಯಾ ಇಂದ್ರಿಯಾರ್ಥಸನ್ನಿಕರ್ಷಜನ್ಯಾ ಪರೋಕ್ಷವೃತ್ತೇಃ ಅಪರೋಕ್ಷವೃತ್ತಿಕಾರ್ಯಾಜ್ಞಾನನಿವೃತ್ತ್ಯುತ್ತರಕಾಲೀನಘಟಾದಿಜ್ಞಾನಾಭಿಮತಾಧಿಷ್ಠಾನಚೈತನ್ಯಸ್ಯ ಚ ಸನ್ನಿಕರ್ಷಘಟಕತಯಾ ಪ್ರಾಗ್ವಿದ್ಯಮಾನಮತ ಏವ ಬ್ರಹ್ಮವದ್ಬಾಧಾಯೋಗ್ಯಂ ಚ ಘಟಂ ಪ್ರತಿತತ್ಸತ್ತೋತ್ತರಕಾಲತಯಾನಯೋಃ ಪ್ರಯತ್ನಶತೇನಾಪಿ ತದಾರೋಪರೂಪತ್ವಾಸಂಭವೇ ನೋಭಯತ್ರಾಪ್ಯಧಿಷ್ಠಾನಚಿಂತಾಯಾ ವ್ಯರ್ಥತ್ವಾಚ್ಚ ನಿರಧಿಷ್ಠಾನಧೀತ್ವಮಿತಿ ಚೈಕಮಿದಮಾರೋಪ-ದೂಷಣಮ್ ॥ ಮಾಯಾಸೃಷ್ಟಿಪಕ್ಷೇಽಪಿ ಲೌಕಿಕಮಾಯಾಮಯಪದಾರ್ಥಾನಾಂ ಮಾಯಾವಿಭ್ರಾಂತ್ಯಕಲ್ಪಿತತ್ವದರ್ಶನೇನ ಪ್ರತ್ಯುತಮಾಯಾವಿಮಂತ್ರೌಷಧಾದಿನಾ ದುಷ್ಟದ್ರಷ್ಟೃದೃಷ್ಟಿಪರಿ-ಕಲ್ಪಿತತ್ವದರ್ಶನೇನ ಚ ಮಾಯಿಕಜಗತೋಽಪಿ ನ ಭಗವದ್ಭ್ರಾಂತಿಕಲ್ಪಿತತ್ವಮ್ । ಕಿಂತು ದ್ರಷ್ಟೄಣಾಮ್ ಅಸ್ಮದಾದೀನಾಂ ಭ್ರಾಂತಿಕಲ್ಪಿತತ್ವಮೇವ ವಕ್ತವ್ಯಮ್ । ತಚ್ಚಾರ್ಥಸನ್ನಿಕರ್ಷ-ನಿರಪೇಕ್ಷಲೌಕಿಕಮಾಯಾಯಾಂ ಘಟತೇ । ಅರ್ಥಸನ್ನಿಕರ್ಷಸಾಪೇಕ್ಷಜಗಜ್ಜ್ಞಾನೇಷು ಕಥಂ ತದುತ್ತರಕಾಲೀನದ್ರಷ್ಟೃದೃಷ್ಟಿಜನ್ಯತ್ವಮ್ । ತಥಾಚಾಸ್ಮಿನ್ಪಕ್ಷೇಽಪಿ ಭ್ರಾಂತ್ಯಕಲ್ಪಿತಘಟಾದಿ-ಜ್ಞಾನಾಯಾಧಿಷ್ಠಾನಸ್ಯಾನಪೇಕ್ಷಿತತ್ವಾತ್ ನಿರಧಿಷ್ಠಾನಧೀತ್ವಸ್ಯಾಪರಿಹಾರ ಏವ । ಏವಂ ಚಾಯಮರ್ಥಸನ್ನಿಕರ್ಷಸ್ತವಾನರ್ಥಪರಂಪರಾಸನ್ನಿಕರ್ಷ ಏವ । ನಿರಧಿಷ್ಠಾನಭ್ರಮಸ್ಯ ಪರೇಣಾಪ್ಯನಂಗೀಕಾರಾದಪರಿಹಾರ್ಯಮಿದಂ ದೂಷಣಮ್ । ಪರ್ವತೇ ವಹ್ನಿಸ್ಸನ್ ಗೇಹೇ ಘಟಸ್ಸನ್

ತಮಾನಯೇತ್ಯಾದಿವಾಕ್ಯಜನಿತಪರೋಕ್ಷಪ್ರಮಾಯಾಂ ಭಾಸಮಾನಾಸತ್ತಾ ತತ್ತದರ್ಥಗತೈವ ನ ಬ್ರಹ್ಮಗತೇತಿ ಪರಸ್ಯೈವಾಭಿಮತಮ್ । ಪರೋಕ್ಷವೃತ್ತೇರಜ್ಞಾನಾನಾಶಕತ್ವೇನಾಧಿಷ್ಠಾನಚೈತನ್ಯಸ್ಯ ತತ್ರಾನುಲ್ಲೇಖಾಂಗೀಕಾರಾತ್ । ಅತ ಏವ ನಾಯಂ ಭ್ರಮಃ ।

ಏವಂ ಚ ತತ್ರ ಪ್ರಮೀಯಮಾಣತತ್ತದರ್ಥಗತಸ್ತಾಯಾ ಏವಾಪರೋಕ್ಷವೃತ್ತಾವಪ್ಯುಲ್ಲೇಖ ಸಂಭವಾನ್ನಾಧಿಷ್ಠಾನಗತಸತ್ತಾರೋಪಃ । ತಥಾ ತಸ್ಮಿನ್ನೇವ ವಾಕ್ಯೇ ಪ್ರಮೀಯಮಾಣವಹ್ನ್ಯಾದಿ-ವತ್ ಅಯಂ ವಹ್ನಿರಯಂ ಘಟ ಇತ್ಯಪರೋಕ್ಷವೃತ್ತಾವಪಿ ಪ್ರತೀಯಮಾನವಹ್ನಿಘಟಾದೀ-ನಾಮಪಿ ನಾರೋಪಃ । ಪ್ರಾಗುಕ್ತಸತ್ತಾಯಾಶ್ಚ ನಾತ್ರೈವಾವಿದ್ಯಮಾನಾಯಾ ಆರೋಪಃ । ಘಟಾದಿಸ್ಸನ್ ಅರ್ಥಕ್ರಿಯಾಕಾರಿತ್ವಾತ್ ಪರ್ವತೋ ವಹ್ನಿಮಾನ್ ಧೂಮವತ್ತ್ವಾತ್ । ಇಯಂ ಶಾಲಾ ಘಟವತೀ ಕುಲಾಲಶಾಲಾತ್ವಾದಿತ್ಯಾದ್ಯನುಮಿತಿರೂಪಪರೋಕ್ಷವೃತ್ತೌ ಪ್ರಾಗುಕ್ತಾ-ಪರೋಕ್ಷವೃತ್ತೌ ಚ ನಿರಧಿಷ್ಠಾನಭ್ರಮತ್ವಪ್ರಸಂಗೇನ ಭ್ರಮತ್ವಶಂಕಾಯಾ ಅಪ್ಯಯೋಗ್ಯಾಯಾಮತ ಏವ ಪ್ರಮಾಯಾಂ ಚ ಪ್ರಮೀಯಮಾಣತ್ವಾತ್ । ನ ಹ್ಯೇಕಸ್ಯೈವಾರ್ಥಸ್ಯೈಕತ್ರ ಪ್ರಮಾ ಅಪರತ್ರ ಭ್ರಮ ಇತಿ ವಕ್ತುಂ ಶಕ್ಯತೇ। ವಸ್ತುನೋ ದ್ವೈರೂಪ್ಯಪ್ರಸಂಗಾತ್ । ಪರೋಕ್ಷವೃತ್ತಿತೋಽಪರೋಕ್ಷ-ವೃತ್ತೇರ್ನೈಚ್ಯಪ್ರಸಂಗಾಚ್ಚ । ಪ್ರವೃತ್ತಿನಿವೃತ್ತ್ಯಾದಿಸಕಲವ್ಯವಹಾರ ಸಂಪಾದಿಕಾಯಾ ಸ್ವರ್ಗಾ-ಪವರ್ಗಸಾಧಕ ಯಜ್ಞಾದಿಸ್ವರೂಪೇಽಪಿ ಪ್ರಮಾಣೀಭೂತಾಯಾಃ ವಿಶೇಷದರ್ಶನ-ಸಹಕೃತತ್ವೇನಾತಿಪ್ರಬಲಾಯಾಃ ಪರೋಕ್ಷವೃತ್ತೇರುಕ್ತವಿಧಯಾ ಪ್ರಮಾತ್ವದೃಷ್ಟೇರಧಿಷ್ಠಾನಚೈತನ್ಯಾ-ರೋಪಂ ವಿನಾಪಿ ಸ್ವಶಕ್ತ್ಯೈವ ಸರ್ವೋಪಕಾರಕತ್ವದೃಷ್ಟೇಶ್ಚ।

ಸರ್ವಪ್ರಮಾಣೋಪಜೀವ್ಯತಯಾ ವಿವಿದಿಷಂತಿ ಯಜ್ಞೇನೇತ್ಯಾದಿವಾಕ್ಯಾತ್ ತಸ್ಯಾ ಅಪ್ಯುದ್ದೇಶ್ಯ-ತಯಾ ಸಾಕ್ಷಾನ್ಮೋಕ್ಷಸಾಧಕಾಪರೋಕ್ಷಮಾನಜಾತೀಯತಯಾ ಚಾತಿಪ್ರಬಲಾಯಾ ಅಪರೋಕ್ಷವೃತ್ತೇಃ ಪ್ರಮಾತ್ವಸ್ಯ ಸುತರಾಂ ವಕ್ತವ್ಯತ್ವಾತ್ । ಸ್ವಶಕ್ತ್ಯೈವ ಸರ್ಗನಿರ್ವಾಹಕತ್ವಸಂಭವೇನ ತದತಿರಿಕ್ತಾಧಿಷ್ಠಾನ ಚೈತನ್ಯರೂಪಾರೋಪಸ್ಯಾನುಪಯೋಗಾಚ್ಚ । ನ ಹಿ ದಾಸೀ ಪೂಜ್ಯಾ ನ ತು ರಾಜ್ಞೀತಿ ಘಟತೇ । ''ತಮೇವ ಭಾಂತಮನುಭಾತಿಸರ್ವಮಿ''ತಿ ತ್ವದಭಿಪ್ರಷಿತಶ್ರುತ್ಯರ್ಥಸ್ಯ ಪರೋಕ್ಷಪ್ರತೀತಾವೇವ ಭಂಗ ಇತಿ ಯಾ ಪರೋಕ್ಷಪ್ರಮಯೋಪಮಾ । ಇದಂ ದ್ವಿತೀಯಮ್। ಏತತ್ಸರ್ವಂ ಸೂಚಯಿತುಂ ಪರೋಕ್ಷಪ್ರಮಯೇತಿ ಚೋಪಮೇತಿ ಚೋಕ್ತಮ್ । ತಮಸಾಽಽವೃತಘಟಾದಾವಿದಮಿತ್ಯುಲ್ಲೇಖಾದರ್ಶನೇನೇಹಾಪಿ ಸ್ವವೃತ್ತಿಕಾರ್ಯಾಜ್ಞಾನ-ನಿವೃತ್ತೇಃ ಪೂರ್ವಮ್ ಅಜ್ಞಾನಾವೃತಚೈತನ್ಯೇ ಇದಮಿತ್ಯುಲ್ಲೇಖಾಸಂಭವೇನ ನಿರಧಿಷ್ಠಾನ-ಭ್ರಮಸ್ಯಾಯೋಗೇನ ಚ ಪೂರ್ವಂ ವೃತ್ತೌ ಪ್ರಮಿತಘಟಾದೌ ವಿಷಯೇ ಯದಧಿಷ್ಠಾನಚೈತನ್ಯಸ್ಯ ದೃಕ್ತ್ವಮ್ ಇದಮಸ್ಯಾರೋಪರೂಪತ್ವೇ ದೂಷಣಮ್ । ಇದಂ ತೃತೀಯಮ್ । ಯೋಗಾ-ಯೋಗಃ ಇಂದ್ರಿಯಾರ್ಥ ಸನ್ನಿಕರ್ಷಾಯೋಗಃ । ಇದಂ ಚತುರ್ಥಮ್ । ಸನ್ನಿಕರ್ಷಾಯ ಪ್ರಾಕ್ ಸತೋಽರ್ಥಸ್ಯ ಪುನರ್ವ್ಯತ್ಯಾದಾವಾರೋಪಾಯೋಗಾತ್ ॥ ೨೨೦೭ ॥

**ವಿವರಣೆ-** ಪರರಿಗೆ ಅಭಿಮತವಾದ ಜಗನ್ಮಿಥ್ಯಾತ್ವ ಎಂಬ ಮೂಲವೃಕ್ಷಕ್ಕೆ ಮೂಲವಾದ ಆರೋಪವನ್ನು ನಿರಾಕರಿಸಲು ಮತ್ತು ಶಾಖಾರೂಪವಾದ ಬಾಧವನ್ನು ನಿರಾಕರಿಸಲು ಗ್ರಂಥಕಾರರು ತಾವು ಹಿಂದೆ ಹೇಳಿದ ದೂಷಣೋಕ್ತಿಗಳೆಂಬ ಮುತ್ತಿನ ಮಣಿಗಳನ್ನು ತಮಗೆ ಇಂತಹ ಪ್ರತಿಭೆಯನ್ನು ನೀಡಿದ ಶ್ರೀಮಧ್ವಾಚಾರ್ಯರ ಪಾದದ್ವಯದಲ್ಲಿ ಎರಡು ರೀತಿಯಿಂದ ಸಮರ್ಥಿಸಲು ತಮ್ಮ ಶ್ಲೋಕಗಳು ಎಂಬ ಸೂತ್ರದಿಂದ ಎರಡು ಮಾಲೆಗಳನ್ನು ಮಾಡಿ ಇನ್ನು ಐದು ಶ್ಲೋಕಗಳಲ್ಲಿ ಎಲ್ಲವನ್ನೂ ಸಂಗ್ರಹಿಸುತ್ತಾರೆ. ('ನಿರಧಿಷ್ಠಾನಧೀತ್ವಂ' ಎಂಬುದರಿಂದ ಆರಂಭಿಸಿ 'ವಿಶ್ವಮಾಸೀದನಾಕುಲಂ' ಎನ್ನುವವರೆಗೆ ಹೀಗೆ ಸಂಗ್ರಹವನ್ನು ಮಾಡುತ್ತಾರೆ).

ಇದರಲ್ಲಿ 'ನಿರಧಿಷ್ಠಾನಧೀತ್ವ' ಎನ್ನುವುದು ಮೊದಲನೆಯ ಭಾದಕವು. ಅಧೀಷ್ಠನಾತ್ವೇನ ಅಭಿಮತವಾದ ಬ್ರಹ್ಮನು ರೂಪರಹಿತನೂ ಮತ್ತು ಶಬ್ದೈಕಗಮ್ಯನೂ ಆಗಿದ್ದಾನೆ. ಸಾರ್ವಜನೀನವಾದ ಚಾಕ್ಷುಷವೃತ್ತಿಯಲ್ಲಿ ಆ ಕಾರಣದಿಂದ ಇಂತಹ ಬ್ರಹ್ಮನ ಉಲ್ಲೇಖವು ಇರುವುದಿಲ್ಲ. ಬ್ರಹ್ಮನಿಗೆ ಸ್ವಾವೇದ್ಯತ್ವರೂಪವಾದ ಸ್ವಪ್ರಕಾಶತ್ವವನ್ನು ಒಪ್ಪುವುದರಿಂದ ಆರೋಪಾತ್ಮಕವಾದ ಘಟಜ್ಞಾನದಲ್ಲಿ ಆ ಘಟಜ್ಞಾನವು ಬ್ರಹ್ಮರೂಪವೇ ಆಗಿರುವುದರಿಂದ ಅಧಿಷ್ಠಾನತ್ವೇನ ಅಭಿಮತನಾದ ಬ್ರಹ್ಮನು ವಿಷಯನಾಗುವುದಿಲ್ಲ. ಬ್ರಹ್ಮನಿಗೆ ಸ್ವವೇದ್ಯತ್ವವನ್ನು ಒಪ್ಪಿದರೂ ದೃಗ್ದೃಶ್ಯಗಳಿಗೆ ಆಧ್ಯಾಸಿಕ ಸಂಬಂಧವನ್ನು ಒಪ್ಪುವ ಮತದಲ್ಲಿ ಬ್ರಹ್ಮಜ್ಞಾನದಲ್ಲಿ ಬ್ರಹ್ಮನು ಆರೋಪಿತನಲ್ಲನಾದುದರಿಂದ ಅಧಿಷ್ಠಾನಭೂತನಾದ ಬ್ರಹ್ಮನು ಬ್ರಹ್ಮಜ್ಞಾನರೂಪವಾದ ಜಗದಾರೋಪದಲ್ಲಿ ಉಲ್ಲೇಖವನ್ನು ಹೊಂದುವುದಿಲ್ಲ. ಭೂತಲೇ ಘಟಃ, ಘಟೇ ಘಟತ್ವಂ, ಮೊದಲಾದ ಸಾರ್ವಜನೀನ ಪ್ರತ್ಯಯದಲ್ಲಿ ಅಧಿಷ್ಠಾನದ ಉಲ್ಲೇಖವೇ ಇಲ್ಲದಿರುವುದರಿಂದ ಅಲ್ಲಿಯೂ ನಿರಧಿಷ್ಠಾನಧೀತ್ವವೇ ಇದೆ. ಸನ್ನಿಕರ್ಷಾಯೋಗ ರೂಪವಾದ ಚತುರ್ಥದೋಷದ ರೀತಿಯಲ್ಲಿ ಇಂದ್ರಿಯ ಸನ್ನಿಕರ್ಷಜನ್ಯವಾದ ಅಪರೋಕ್ಷವೃತ್ತಿಯಿಂದ ಅಜ್ಞಾನನಾಶವಾದ ಉತ್ತರಕಾಲದಲ್ಲಿ ಉಂಟಾಗುವ ಘಟಜ್ಞಾನವೆಂದು ಅಭಿಮತವಾದ ಅಧಿಷ್ಠಾನಚೈತನ್ಯದಲ್ಲಿ ಅದಕ್ಕಿಂತ ಮೊದಲೇ ಸನ್ನಿಕರ್ಷಕ್ಕೆ ಉಪಪಾದಕವಾಗಿ ವಿದ್ಯಮಾನವಾದ ಘಟವು ಎಂದು ಆರೋಪಿತವಾಗುವುದಿಲ್ಲ. ಆದ್ದರಿಂದ ವೃತ್ತಿಗಿಂತಲೂ ಮೊದಲು ಅಧಿಷ್ಠಾನ ಚೈತನ್ಯಕ್ಕಿಂತಲೂ ಮೊದಲು ಇರುವ ಘಟವು ಉತ್ತರಕಾಲೀನವಾದ ವೃತ್ತಿ ಮತ್ತು ಚೈತನ್ಯಗಳಲ್ಲಿ ಮೂರುಕಾರಗಳಿಂದಲೂ ಆರೋಪಿತವಾಗುವುದಿಲ್ಲವಾದ್ದರಿಂದ ಅದೇ ಅಧಿಷ್ಠಾನ ಚಿಂತೆಯನ್ನು ಮಾಡುವುದೇ ವ್ಯರ್ಥವಾಗುತ್ತದೆ. ಆದ್ದರಿಂದ ಅಲ್ಲಿಯೂ ನಿರಧಿಷ್ಠಾನಧೀತ್ವವು ಇದೆ. ಮಾಯಾಸೃಷ್ಟಿಯನ್ನು ಅಂಗೀಕರಿಸಿದರೂ ಲೌಕಿಕ ಮಾಯಮಯ ಪದಾರ್ಥಗಳು ಮಾಯಾವಿಯ ಭ್ರಾಂತಿಯಿಂದ ಕಲ್ಪಿತವಲ್ಲ. ಆದರೆ, ಮಾಯಾವಿಯ ಮಂತ್ರೌಷದಾದಿಗಳಿಂದ ದುಷ್ಟವಾದ ನೋಡುವ ಜನರ ದೃಷ್ಟಿಯಿಂದಲೇ ಕಲ್ಪಿತವಾದದ್ದು. ಆದ್ದರಿಂದ, ಮಾಯಿಕ ಜಗತ್ತಿಗೆ ಭಗವದ್ಭ್ರಾಂತಿಕಲ್ಪಿತತ್ವವು ಇಲ್ಲ. ಇನ್ನು ಅಸ್ಮದಾದಿ ಭ್ರಾಂತಿಕಲ್ಪಿತತ್ವವನ್ನು ಹೇಳಬೇಕು. ಅಸ್ಮದಾದಿ ಭ್ರಾಂತಿಕಲ್ಪಿತತ್ವವನ್ನು ಅರ್ಥಸನ್ನಿಕರ್ಷ ನಿರಪೇಕ್ಷವಾದ ಲೌಕಿಕ ಮಾಯಾಮಯ ಪದಾರ್ಥಗಳಲ್ಲಿ ಹೇಳಬಹುದು. ಅರ್ಥಸನ್ನಿಕರ್ಷ

ಸಾಪೇಕ್ಷವಾದ ಜಗತ್‌ಜ್ಞಾನದಲ್ಲಿ ತದುತ್ತರಕಾಲದಲ್ಲಿ ಉಂಟಾಗುವ ಸಾಮಾನ್ಯಜನರ ದೃಷ್ಟಿಯಿಂದ ಕಲ್ಪಿತತ್ವವು ಜಗತ್ತಿಗೆ ಹೇಗೆ ಕೂಡುತ್ತದೆ. ಆದ್ದರಿಂದ ಮಾಯಾಮಯ ಸೃಷ್ಟಿಪಕ್ಷದಲ್ಲಿಯೂ ಭ್ರಾಂತಿಕಲ್ಪಿತವಲ್ಲದ ಘಟಾದಿಗಳ ಜ್ಞಾನಕ್ಕೋಸ್ಕರವಾಗಿ ಅಧಿಷ್ಠಾನವು ಅನಪೇಕ್ಷಿತವಾದ್ದರಿಂದ ನಿರಧಿಷ್ಠಾನಧೀತ್ವವು ಇದ್ದೇ ಇದೆ. ಅಧಿಷ್ಠಾನದ ಉಲ್ಲೇಖವಿಲ್ಲದ ಭ್ರಮವನ್ನು ನೀನೂ ಅಂಗೀಕಾರ ಮಾಡದೇ ಇರುವುದರಿಂದ ಈ ಅರ್ಥಸನ್ನಿಕರ್ಷವು ನಿನಗೆ ಅನರ್ಥಪರಂಪರಾಸನ್ನಿಕರ್ಷವನ್ನೇ ಉಂಟುಮಾಡುತ್ತದೆ.

'ಪರ್ವತೇ ವಹ್ನಿಃ ಸನ್ ಗೇಹೇ ಘಟಃಸನ್ ತಮಾನಯ' ಮೊದಲಾದ ವಾಕ್ಯಗಳಿಂದ ಪರೋಕ್ಷಪ್ರಮೆಯು ಉಂಟಾಗುತ್ತದೆ. ಆ ಪ್ರಮೆಯಲ್ಲಿ ಘಟಾದಿಗಳಲ್ಲಿ ಸತ್ವವು ಪ್ರತೀತವಾಗುತ್ತದೆ. ಆ ಸತ್ವವು ಘಟಾದಿಗತವೇ ಹೊರತು ಬ್ರಹ್ಮಗತವಲ್ಲ ಎಂದು ಪರನಿಗೂ ಸಮ್ಮತವಾಗಿದೆ. ಏಕೆಂದರೆ ಪರೋಕ್ಷವೃತ್ತಿಯು ಅಜ್ಞಾನನಾಶಕವಲ್ಲವಾದ್ದರಿಂದ ಅಲ್ಲಿ ಪರನು ಅಧಿಷ್ಠಾನ ಚೈತನ್ಯದ ಉಲ್ಲೇಖವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಈ ಪರೋಕ್ಷವೃತ್ತಿಯು ಭ್ರಮವಲ್ಲ. ಹೀಗೆ ಪರೋಕ್ಷವೃತ್ತಿಯಲ್ಲಿ ಭ್ರಮೆಗೆ ವಿಷಯವಾಗದ ತತ್ತದರ್ಥಗತವಾದ ಸತ್ವವೇ ಅಪರೋಕ್ಷವೃತ್ತಿಯಲ್ಲಿಯೂ ಉಲ್ಲೇಖಿಸಲ್ಪಡಬಹುದಾದ್ದರಿಂದ ಅಧಿಷ್ಠಾನಗತಸತ್ವದ ಆರೋಪವನ್ನು ಅಪರೋಕ್ಷವೃತ್ತಿಯಲ್ಲಿ ಅಂಗೀಕರಿಸಬೇಕಾದ ಅವಶ್ಯಕತೆಯಿಲ್ಲ. ಅದರಂತೆ, ಅದೇ ವಾಕ್ಯಜನ್ಯಪ್ರಮೆಗೆ ವಿಷಯವಾಗುವ ವಹ್ನ್ಯಾದಿಗಳಂತೆ 'ಅಯಂ ವಹ್ನಿಃ', 'ಅಯಂ ಘಟಃ', ಎಂಬ ಅಪರೋಕ್ಷವೃತ್ತಿಯಲ್ಲಿಯೂ ಪ್ರತೀಯಮಾನವಾದ ಘಟಾದಿಗಳು ಆರೋಪಿತವಲ್ಲವೆಂದೇ ಸಿದ್ಧವಾಗುತ್ತದೆ. ಪರೋಕ್ಷಸ್ಥಳದಲ್ಲಿ ಘಟದಲ್ಲಿ ಇರುವ ಸತ್ವವು ಅಪರೋಕ್ಷಸ್ಥಳದಲ್ಲಿ ಮಾತ್ರ ಘಟದಲ್ಲಿ ಇಲ್ಲದೇ ಆರೋಪಿತವಾಗುತ್ತದೆ ಎಂಬುದು ಅನುಪಪನ್ನವಾಗುತ್ತದೆ ಮತ್ತು ಘಟಾದಿಃ ಸನ್ ಅರ್ಥಕ್ರಿಯಾಕಾರಿತ್ವಾತ್, ಪರ್ವತೋ ವಹ್ನಿಮಾನ್ ಧೂಮವತ್ತ್ವಾತ್, ಇಯಂ ಶಾಲಾ ಘಟವತೀ ಕುಲಾಲಶಾಲಾತ್ವಾತ್ ಇವೇ ಮೊದಲಾದ ಅನುಮಾನಗಳಿಂದ ಉಂಟಾದ ಅನುಮಿತಿರೂಪವಾದ ಪರೋಕ್ಷವೃತ್ತಿಯಲ್ಲಿಯೂ ಹಿಂದೆ ಹೇಳಿದ ಅಪರೋಕ್ಷವೃತ್ತಿಯಲ್ಲಿಯೂ ಸಹ ನಿರಧಿಷ್ಠಾನ ಭ್ರಮತ್ವವನ್ನು ಒಪ್ಪಬೇಕಾಗುವ ಪ್ರಸಂಗವು ಬರುವುದರಿಂದ ಭ್ರಮತ್ವಶಂಕೆಯೂ ಕೂಡದಿರುವ ಮತ್ತು ಆ ಕಾರಣದಿಂದಲೇ ಪ್ರಮೆಯಾದ ಅಪರೋಕ್ಷವೃತ್ತಿಯಲ್ಲಿಯೂ ತೋರುವುದರಿಂದಲೂ ಘಟಾದಿಗಳ ಆರೋಪವು ನಿರಾಕೃತವಾಗುತ್ತದೆ. ಘಟದಲ್ಲಿರುವ ಸತ್ವವು ಪರೋಕ್ಷವೃತ್ತಿಯಲ್ಲಿ ಪ್ರಮಾವಿಷಯವಾಗುತ್ತದೆ ಅಪರೋಕ್ಷವೃತಿಯಲ್ಲಿ ಭ್ರಮ ವಿಷಯವಾಗುತ್ತದೆ ಎಂದು ಹೇಳುವುದು ಅಯುಕ್ತವಾದುದು, ಹಾಗೆ ಹೇಳಿದರೆ ವಸ್ತುವಿಗೆ ದ್ವಿರೂಪತ್ವಪ್ರಸಂಗವು ಬರುತ್ತದೆ. ಜೊತೆಗೆ, ಪರೋಕ್ಷವೃತ್ತಿಗಿಂತಲೂ ಅಪರೋಕ್ಷವೃತ್ತಿಗೆ ನೀಚತ್ವವನ್ನು ಅಂಗೀಕರಿಸುವ ಪ್ರಸಂಗವು ಬರುತ್ತದೆ. ಪರೋಕ್ಷವೃತ್ತಿಗೂ ಸಹ ಪ್ರವೃತ್ತಿನಿವೃತ್ತ್ಯಾದಿ ಸಕಲ ವ್ಯವಹಾರಪ್ರಯೋಜಕತ್ವವು ಇರುವುದರಿಂದ ಸ್ವರ್ಗಾಪವರ್ಗಾದಿ ಸಾಧಕ ಯಜ್ಞಾದಿಸ್ವರೂಪದಲ್ಲಿಯೂ ಪ್ರಮಾಣವಾಗಿರುವುದರಿಂದ ವಿಶೇಷದರ್ಶನ ಬಲದಿಂದ

ಅತಿಪ್ರಬಲವಾದ ಪರೋಕ್ಷವೃತ್ತಿಗೂ ಪ್ರಮಾತ್ವವು ಸಿದ್ಧವಾಗುವುದರಿಂದ ಅಧಿಷ್ಠಾನಚೈತನ್ಯದ ಆರೋಪವಿಲ್ಲದೇ ತನ್ನ ಶಕ್ತಿಯಿಂದಲೇ ಅದಕ್ಕೆ ಸರ್ವೋಪಕಾರತ್ವವನ್ನು ಅಂಗೀಕರಿಸಬೇಕು. ಹೀಗಿರುವಾಗ, ಅಪರೋಕ್ಷವೃತ್ತಿಗಂತೂ ಅದಕ್ಕಿಂತ ಹೆಚ್ಚಿನ ಸ್ಥಾನವನ್ನೇ ಅಂಗೀಕರಿಸಬೇಕು. ಹೊರತಾಗಿ ನೀಚಸ್ಥಾನವನ್ನು ಅಂಗೀಕರಿಸಬಾರದು. ಏಕೆಂದರೆ ಅಪರೋಕ್ಷವೃತ್ತಿಯು ಸರ್ವಪ್ರಮಾಣಗಳಿಗೆ ಉಪಜೀವ್ಯವಾದುದು. 'ವಿವಿದಿಷಂತಿ ಯಜ್ಞೇನ' ಎಂಬ ಬೃಹದಾರಣ್ಯಕ ವಾಕ್ಯದಲ್ಲಿ ಅಪರೋಕ್ಷವೃತ್ತಿಯನ್ನು ಉದ್ದೇಶ್ಯತಯಾ ಎಂದು ಹೇಳಿ ಅದಕ್ಕೆ ಪ್ರಾಧಾನ್ಯವನ್ನು ಹೇಳಿದ್ದಾರೆ. ಘಟಾದಿ ಅಪರೋಕ್ಷವೃತ್ತಿಯು ಮೋಕ್ಷಸಾಧಕವಾದ ಚರಮಸಾಕ್ಷಾತ್ಕಾರಕ್ಕೆ ಸಜಾತೀಯವಾಗಿದೆ. ಆದ್ದರಿಂದ ಅಂತಹ ಅಪರೋಕ್ಷವೃತ್ತಿಗೆ ಪ್ರಮಾತ್ವವನ್ನು ಸುತರಾಂ ಹೇಳಬೇಕು. ಅಲ್ಲಿಯೂ ಕೂಡ ಅಪರೋಕ್ಷವೃತ್ತಿಯು ತನ್ನ ಸಾಮರ್ಥ್ಯದಿಂದಲೇ ಎಲ್ಲವನ್ನೂ ನಿರ್ವಾಹಮಾಡುವದಾದ್ದರಿಂದ ತದತಿರಿಕ್ತವಾದ ಅಧಿಷ್ಠಾನಚೈತನ್ಯ ರೂಪವಾದ ಆರೋಪವನ್ನು ಅಂಗೀಕರಿಸುವ ಅವಶ್ಯಕತೆಯಿಲ್ಲ. ದಾಸಿಯ ಸ್ಥಾನದಲ್ಲಿರುವ ಪರೋಕ್ಷವೃತ್ತಿಯು ಪೂಜ್ಯವಾಗುತ್ತದೆ. ಮಹಾರಾಣಿಯ ಸ್ಥಾನದಲ್ಲಿರುವ ಅಪರೋಕ್ಷವೃತ್ತಿಯು ಪೂಜ್ಯವಾಗುವುದಿಲ್ಲ ಎಂಬುದು ಅನುಪಪನ್ನವಾಗುತ್ತದೆಯಷ್ಟೆ. 'ತಮೇವ ಭಾಂತಮನುಭಾತಿಸರ್ವಮ್' ಎನ್ನುವ ಶ್ರುತಿಯಿಂದ ನೀನು ಬಯಸಿದ ಅಧಿಷ್ಠಾನಚೈತನ್ಯರೂಪವಾದ ಆರೋಪವು ಪರೋಕ್ಷಪ್ರತೀತಿಯಲ್ಲೇ ಭಗ್ನವಾಗಿದೆ. ಆದ್ದರಿಂದ ಪರೋಕ್ಷಪ್ರತೀತಿಯಂತೆ, ಆ ಪ್ರತೀತಿಯಲ್ಲಿ ತೋರುವ ಸತ್ತಾದಿಗಳಂತೆ ಅಪರೋಕ್ಷಪ್ರತೀತಿಯಲ್ಲಿ ತೋರುವ ಸತ್ತಾದಿಗಳು ಅನಾರೋಪಿತವಾದದ್ದೇ ಆಗುತ್ತವೆ. ಇದು ಅಪರೋಕ್ಷವೃತ್ತಿಗೆ ಪರೋಕ್ಷವೃತ್ತಿಯ ಸಾಮ್ಯರೂಪವಾದ ದ್ವಿತೀಯ ಬಾಧಕ. ಈ ಎಲ್ಲಾ ವಿಷಯಗಳನ್ನು ಸೂಚಿಸಲು 'ಪರೋಕ್ಷಪ್ರಮಯಾತ್ ಉಪಮಾ ಚ' ಎಂದು ಮೂಲಕಾರರು ಹೇಳಿದ್ದಾರೆ.

'ಪೂರ್ವಪ್ರಮಿತ ದೃಕ್ತ್ವ' ಎನ್ನುವುದು ಮೂರನೆಯ ಬಾಧಕ. ಕತ್ತಲೆಯಿಂದ ಆವೃತವಾದ ಘಟದಲ್ಲಿ 'ಇದಂ' ಎಂದು ಉಲ್ಲೇಖವಿಲ್ಲದಿರುವುದರಿಂದ ಇಲ್ಲಿಯೂ ಕೂಡ ಘಟವೃತ್ತಿಕಾರ್ಯವಾದ ಅಜ್ಞಾನನಿವೃತ್ತಿಗಿಂತ ಮೊದಲು ಅಜ್ಞಾನಾವೃತವಾದ ಘಟಾಧಿಷ್ಠಾನಚೈತನ್ಯದಲ್ಲಿ 'ಇದಂ' ಎಂಬ ಉಲ್ಲೇಖವು ಇಲ್ಲದಿರುವದರಿಂದ ಮತ್ತು ನಿರಧಿಷ್ಠಾನ ಭ್ರಮವೂ ಕೂಡದೇ ಇರುವುದರಿಂದ ಮೊದಲೇ ವೃತ್ತಿಯಲ್ಲಿ ಪ್ರಮಿತವಾದ ಘಟಾದಿಗಳಿಗೆ ಪುನಃ ಅಧಿಷ್ಠಾನಚೈತನ್ಯವು ಆರೋಪರೂಪವಾಗುವುದಿಲ್ಲ. ಇದು ಮೂರನೆಯ ದೂಷಣ.

ಯೋಗಾಯೋಗಃ ಎಂದರೆ ಇಂದ್ರಿಯಸನ್ನಿಕರ್ಷದ ಅಸಂಭವ ಎಂದು ಅರ್ಥ. ಇದು ನಾಲ್ಕನೆಯ ದೂಷಣ. ಸನ್ನಿಕರ್ಷವನ್ನು ಉಪಪಾದನೆ ಮಾಡುವ ಸಲುವಾಗಿ ಮೊದಲೇ ವಿದ್ಯಮಾನವಾದ ಘಟವು ಸನ್ನಿಕರ್ಷಜನ್ಯವಾದ ವೃತ್ತಿಯಲ್ಲಾಗಲೀ ಅಥವಾ ಆ ವೃತ್ತಿಯಿಂದ ಅಭಿವ್ಯಕ್ತವಾದ ಅಧಿಷ್ಠಾನಚೈತನ್ಯದಲ್ಲಾಗಲೀ ಆರೋಪಿತವಾಗುವುದಿಲ್ಲ ಎಂದು ಅಭಿಪ್ರಾಯ.

ಮಾಯಾವಿಭ್ರಾಂತ್ಯಯೋಗಶ್ಚ ಯೋಗಾಯೋಗೋಽಪರಸ್ಯ ಚ ।
ರೌದ್ರೀ ವಾಗ್ ವಾರುಣೀ ವಾಕ್ ಚ ಪಾರ್ಥಸ್ಯ ವಚನಂ ತಥಾ ।
ಶ್ರುತಿಶ್ಚೇತಿ ಜಗದ್ಬಾಧಾರೋಪಬಾಧಾ ದಶಾಭವನ್ ॥ ೧೨೦೮ ॥

**ಅರ್ಥ-** ಮಾಯಾವಿಭ್ರಾಂತ್ಯಯೋಗಶ್ಚ = ಮಾಯಾವಿಭ್ರಾಂತಿಯ ಅಯೋಗ, ಚ = ಮತ್ತು , ಅಪರಸ್ಯ = ಜೀವಸಮುದಾಯಕ್ಕೆ, ಯೋಗಾಯೋಗಃ = ಇಂದ್ರಿಯಸನ್ನಿಕರ್ಷ ಅನುಪಪತ್ತಿ , ಚ = ಮತ್ತು , ರೌದ್ರೀವಾಕ್ = ಪಂಚಮಸ್ಕಂಧದ ರುದ್ರದೇವರ ವಾಕ್ಯ , ಚ = ಮತ್ತು , ವಾರುಣೀವಾಕ್ = ದಶಮಸ್ಕಂಧದ ವರುಣನ ವಾಕ್ಯ , ಚ = ಮತ್ತು, ಪಾರ್ಥಸ್ಯ ವಚನಂ = ಪ್ರಥಮಸ್ಕಂಧದ ಅರ್ಜುನನ ವಾಕ್ಯ , ಚ = ಮತ್ತು , ಶ್ರುತಿಶ್ಚ = ಜಗತ್ಸತ್ಯತ್ವ ಬೋಧಕವಾದ ಶ್ರುತಿಗಳು, ಇತಿ = ಹೀಗೆ, ಜಗದ್ಬಾಧಾರೋಪಬಾಧಾಃ = ಜಗತ್ತಿನ ಪೀಡಾರೂಪವಾದ ಆರೋಪಕ್ಕೆ ಬಾಧಕಗಳು, ದಶ= ಹತ್ತು, ಅಭವನ್ = ಆದವು.

**ಅನುವಾದ-** ಮಾಯಾವಿಭ್ರಾಂತಿಯ ಅನುಪಪತ್ತಿ ಮತ್ತು ಜೀವಸಮುದಾಯಕ್ಕೆ ಇಂದ್ರಿಯಸನ್ನಿಕಾರ್ಷಾನುಪಪತ್ತಿ ಮತ್ತು ರುದ್ರದೇವರ ವಾಕ್ಯ , ಮತ್ತು ವರುಣನ ವಾಕ್ಯ ಮತ್ತು ಪಾರ್ಥನ ವಾಕ್ಯಮತ್ತು ಸತ್ಯತ್ವ ಪ್ರತಿಪಾದಕ ಶ್ರುತಿಗಳು. ಈ ಹತ್ತು ಯುಕ್ತಿಗಳು ಮತ್ತು ಶ್ರುತಿಯೂ (ಸೇರಿ) ಜಗತ್ತನ್ನು ಪೀಡಿಸುವ ಆರೋಪ ರೂಪವಾದ ದೋಷಕ್ಕೆ ಬಾಧಕಗಳಾಗುತ್ತವೆ.

**ಭಾವವಿಲಾಸಿನೀ–** ಮಾಯಾಸೃಷ್ಟಿಪಕ್ಷೇ ಮಾಯಾವಿನಿ ಐಂದ್ರಜಾಲಿಕಾದಾವಪಿ ಭ್ರಾಂತ್ಯಾದೇ-ರದರ್ಶನೇನ ಜಗನ್ಮಾಯಾವಿನಿ ಭಗವತಿ ಪರಿದೃಶ್ಯಮಾನಜಗದ್ಭ್ರಾಂತೇರಯೋಗಃ । ತಥಾ ಸ್ವದೇಹಗೇಹಕಲತ್ರಪುತ್ರವಾಹನಶಯ್ಯಾದೌ ಸ್ವಸ್ಯ ದ್ರಷ್ಟ್ರೂಣಾಂ ಚ ಮಾಯಯಾ ಸುತರಾಂ ವಿಭ್ರಾಂತ್ಯಯೋಗಃ ಲೋಕಮರ್ಯಾದೋಲ್ಲಂಘನೇ ಮಾಯಾವಿಭ್ರಾಂತೇರೇವಾಯೋಗಃ । ಮಾಯಾವಿಭ್ರಾಂತಿತ್ವಪಕ್ಷಸ್ಯೈವಾಯೋಗಾದಿತಿ ಯಾವತ್ । ತಥಾ ಮಾಯಾಯಾ ಅಜ್ಞಾನಸ್ಯ ವಿಪರೀತಾ ಯಾ ಭ್ರಾಂತಿಃ ತದಪಗಮಾನಂತರಂ ಜಾಯಮಾನಾಭ್ರಾಂತಿರಿತ್ಯರ್ಥಃ । ಪೂರ್ವೋಕ್ತರೀತ್ಯಾ ತಸ್ಯಾಶ್ಚಾಯೋಗ ಇತಿ ಚ ಭಗವಜ್ ಜ್ಞಾನಸ್ಯ ಜಗದಾರೋಪರೂಪತ್ವೇ ಪಂಚಮಂ ಬಾಧಕಮ್ ।

ಅಪರಸ್ಯ ಭಗವನ್ಮಾಯಿಕಘಟಾದಿಪದಾರ್ಥದ್ರಷ್ಟೃಜೀವಜಾತಸ್ಯ ಯೋಗಾಯೋಗಃ । ಇಂದ್ರಿಯಾರ್ಥಸನ್ನಿಕರ್ಷಸ್ಯಾಯೋಗಃ । ಘಟಾದಿಜ್ಞಾನೇ ತದಪರೋಕ್ಷಾಯೋಗ ಇತಿ ಯಾವತ್ । ಮಾಯಾವಿನಾ ದ್ರಷ್ಟ್ರೂಣಾಮಗ್ರೇ ನಿಕ್ಷಿಪ್ತಕಪರ್ದಿಕಾತೃಣಾದೇರಿಂದ್ರಿಯಸನ್ನಿಕರ್ಷೇ ಸತಿ ತನ್ಮಾತ್ರೌಷಧಾದಿಸಾಮರ್ಥ್ಯೇನ ತತ್ರ ಸರ್ವಥಾ ಅವಿದ್ಯಮಾನಾನಾಮ್ ಅತ ಏವ ಸ್ವೇಂದ್ರಿಯೈರಸಂಬದ್ಧಾನಾಂ ಕರಿತುರಗಾದೀನಾಂ ರಜತಾದಿಭ್ರಾಂತಿಷು ರಜತಾದೇರಿವ ದರ್ಶನಮಿತಿ ಐಂದ್ರಜಾಲಿಕಮಾಯಾಸೃಷ್ಟೌ ಪ್ರಕ್ರಿಯಾ । ಜಗತಿ ತು ತತ್ತದರ್ಥೇಂದ್ರಿಯ-ಸನ್ನಿಕರ್ಷೇ ಸತ್ಯೇವ ತತ್ತದರ್ಥಾಪರೋಕ್ಷಜ್ಞಾನಮಿತಿ ಪರಸ್ಯಾಪಿ ಮತಮ್ । ಅತೋ

ಜಗದ್ದರ್ಶನೇ ನಿಯಮೇನಾಪೇಕ್ಷಿತೇಂದ್ರಿಯಾರ್ಥಸನ್ನಿಕರ್ಷಾಖ್ಯಯೋಗಸ್ಯಾಯೋಗಸ್ಸ್ಯಾದಿತಿ । ತಥಾ ಮಾಯಾಸೃಷ್ಟೌ ತುರಗಭ್ರಮಾಧಿಷ್ಠಾನಕಪರ್ದಿಕಾಯಾಮೇವ ಪುನರ್ಗಜಾದಿಭ್ರಮಸ್ಯ ಯೋಗ ಉಪಾಯೋಽಸ್ತಿ । ಜಗದ್ಭ್ರಮೇ ತು ತಂತೌ ಪಟಸ್ಯೈವ ಕಪಾಲೇ ಘಟಸ್ಯೈವ । ಏವಂ ಚಾತ್ರ ತಸ್ಯ ಯೋಗಸ್ಯಾಯೋಗ ಇತಿ । ತಥಾ ಐಂದ್ರಜಾಲಿಕಸೃಷ್ಟಾವರ್ಥಕ್ರಿಯಾಯಾ ಅದರ್ಶನೇನ ಜಗತ್ಯರ್ಥಕ್ರಿಯಾಯಾ ಯೋಗಸ್ಯ ಸಂಬಂಧಸ್ಯಾಯೋಗಸ್ಸ್ಯಾದಿತಿ ಚ ಮಾಯಾ-ದ್ರಷ್ಟೃಪುರುಷದೃಷ್ಟೇರ್ಜಗದಾರೋಪ ರೂಪತ್ವಾಭಾವೇ ಷಷ್ಠಮ್ ।

ರೌದ್ರೀವಾಕ್ ನ ಯಸ್ಯ ಮಾಯಾಗುಣಚಿತ್ತವೃತ್ತಿಭಿರ್ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತ ಇತಿ ಪಂಚಮಸ್ಕಂಧೇ ರುದ್ರೇಣೋಕ್ತವಾಕ್ । ಯಸ್ಯ ಪರಮಾತ್ಮನೋ ನಿರೀಕ್ಷತೋ ದೃಷ್ಟಿಃ ಮಾಯಯಾ ಅವಿದ್ಯಯಾ ಐಂದ್ರಜಾಲಿಕವಿದ್ಯಯಾ ಚ ಗುಣೈಸ್ಸತ್ವರಜಸ್ತಮೋಗುಣೈಃ ಚಿತ್ತವೃತ್ತಿಭಿಃ ಅಹಂಕಾರರಾಗದ್ವೇಷಾದ್ಯೈರಣ್ವಪಿ ನಾಜ್ಯತೇ ಸಂಸಕ್ತಾ ಭವತೀತಿ ವಿಶ್ವವಿಷಯಸರ್ವಜ್ಞಭಗ-ವದ್ದೃಷ್ಟೇರ್ಮಾಯಾದಿದೋಷಲೇಶೇನಾಪಿ ಶೂನ್ಯತ್ವಕಥನೇನ ಪ್ರಮಾತ್ವನಿರ್ಣಯಾತ್ ಪ್ರಮಾವಿಷಯಘಟಾದಿಪ್ರಪಂಚಸ್ಯ ಭಗವಜ್ಜ್ಞಾನೇನಾನ್ಯಜ್ಞಾನೇನ ವಾಽಽರೋಪೇ ಮಾಯಾಸೃಷ್ಟತ್ವೇ ಚ ಕಥ್ಯಮಾನೇ ಸಪ್ತಮಮ್ ।

ವಾರುಣಿವಾಕ್ ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ॥ ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನೇತಿ ಕೃಷ್ಣಂ ಪ್ರತಿ ವರುಣೇನೋಕ್ತಾ ವಾಕ್ । ಸರ್ವಜ್ಞಭಗವತೋ ನಿರ್ಮಾಯತ್ವಕಥನೇನ ತದ್ದೃಷ್ಟಜಗತಃ ಪ್ರಮಾವಿಷಯತ್ವಸಮರ್ಥನಾತ್ ಜಗತಿ ತಸ್ಯ ಭ್ರಾಂತಾವನ್ಯಭ್ರಾಂತೌ ಮಾಯಾಸೃಷ್ಟತ್ವೇ ಚಾಷ್ಟಮಮ್ ।ಭಗವತ್ಸ್ವರೂಪಚಿತೋ ಮಾಯಾ-ನಿರಸನಸಮರ್ಥತ್ವಕಥನಾತ್ ಭಗವತಸ್ಸ್ವಾಶ್ರಿತಮಾಯಯಾ ಜಗತ್ಸ್ರಷ್ಟೃತ್ವೇ ಭಗವಚ್ಚೈತನ್ಯ-ಜಗದಾರೋಪತ್ವೇ ಭಗವದ್ದೃಷ್ಟಜಗತೋಽನ್ಯದೃಷ್ಟ್ಯಾಽಽರೋಪೇ ಚ ನವಮಮಿದಂ ಬಾಧಕಮ್ ।

ಶ್ರುತಿಃ ವಿಶ್ವಂ ಸತ್ಯಂ ''ಯಾಥಾತಥ್ಯತೋಽರ್ಥಾನ್ವ್ಯದಧಾಚ್ಛಾಶ್ವತೀಭ್ಯ- ಸ್ಸಮಾಭ್ಯ'' ಇತ್ಯಾದಿರೂಪಾ । ಇಯಂ ಜಗತಸ್ಸತ್ಯತ್ವಪ್ರಮಾವಿಷಯತ್ವಯಥಾರ್ಥತ್ವಕಥನಾತ್ ತದಾರೋಪಸ್ಯ ಸಾಕ್ಷಾದೇವ ಬಾಧಿಕಾ। ಏವಂ ಚ ಜಗದ್ಬಾಧಾರೋಪಬಾಧಾಃ ಜಗತಃ ಬಾಧಾ ಪೀಡಾ ಯಸ್ಮಾತ್ಸ ತಥೋಕ್ತಃ । ಆರೋಪಃ ಜಗದಾರೋಪಃ । ತಸ್ಯ ಬಾಧಾಃ ಬಾಧಕಯುಕ್ತಯ ಇತ್ಯರ್ಥಃ । ದಶಶ್ರುತ್ಯಾ ಸಹ ದಶಸಂಖ್ಯಾತಾಃ ॥ ೧೨೦೮ ॥

**ವಿವರಣೆ-** ಮಾಯಾಸೃಷ್ಟಿಯನ್ನು ಅಂಗೀಕಾರ ಮಾಡಿದ ಪಕ್ಷದಲ್ಲಿ ಮಾಯಾವಿಯಾದ ಐಂದ್ರಜಾಲಕನಿಗೆ ಭ್ರಾಂತಿಯಿಲ್ಲವಾದ್ದರಿಂದ ಪ್ರಕೃತದಲ್ಲಿ ಜಗನ್ಮಾಯೆಯನ್ನು ಹೊಂದಿದ ಪರಮಾತ್ಮನಿಗೆ ಪರಿದೃಶ್ಯಮಾನವಾದ ಜಗತ್ತಿನ ಭ್ರಾಂತಿಯು ಕೂಡುವುದಿಲ್ಲ. ಅದರಂತೆ, ಜೀವರ ಮಾಯೆಯಿಂದ ಜಗತ್ತಿನ ಸೃಷ್ಟಿಯನ್ನು ಅಂಗೀಕರಿಸಿದರೂ ಜೀವರಿಗೂ ತಮ್ಮ ಮನೆ, ತಮ್ಮ ದೇಹ, ಹೆಂಡತಿ ಮಕ್ಕಳು ಮೊದಲಾದ ವಿಷಯಗಳಲ್ಲಿ ಸುತರಾಂ ಭ್ರಾಂತಿಯು ಕೂಡುವುದಿಲ್ಲ. ಲೋಕಸಿದ್ಧವಾದ ಮಾಯೆಯ ಸ್ವರೂಪವನ್ನು ಬಿಟ್ಟು ಮಾಯೆಯ

ಸ್ವರೂಪವನ್ನು ಉಲ್ಲಂಘಿಸಿದರೆ ಇದು ಮಾಯಾಭ್ರಾಂತಿರೂಪವಾದುದು ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಆ ಪಕ್ಷದಲ್ಲಿ ಲೋಕಸಿದ್ಧವಾದ ಮಾಯೆಯು ದೃಷ್ಟಾಂತವೇ ಆಗುವುದಿಲ್ಲ. ಅದರಂತೆ, ಅಜ್ಞಾನದ ನಾಶಾನಂತರದಲ್ಲಿ ಉಂಟಾಗುವ ಜಗದ್ಭ್ರಾಂತಿಯು ಕೂಡುವುದಿಲ್ಲ. ಈ ಅರ್ಥದಲ್ಲಿ 'ಮಾಯೆ' ಎಂದರೆ ಜ್ಞಾನ, 'ವಿ' ಎಂದರೆ ವಿರುದ್ಧವಾದುದು ಎಂದು ಅರ್ಥ. ಭ್ರಾಂತಿ ಅಜ್ಞಾನಕ್ಕೆ ವಿರುದ್ಧವಾದುದು. ಏಕೆಂದರೆ, ಅಜ್ಞಾನನಾಶಾನಂತರದಲ್ಲಿ ಭ್ರಾಂತಿಯು ಉಂಟಾಗುತ್ತದೆ ಎಂದು ಪರರ ಮತ. ಹಿಂದಿನ ಶ್ಲೋಕಗಳಲ್ಲಿ ಹೇಳಿದ ರೀತಿಯಲ್ಲಿ ಅಜ್ಞಾನಕಾರ್ಯವಾದ ಭ್ರಾಂತಿಯು ಅಜ್ಞಾನದ ನಾಶಾನಂತರದಲ್ಲಿ ಉತ್ಪತ್ತಿಯಾಗುವುದು ಸಾಧ್ಯವಾಗುವುದಿಲ್ಲವಾದ್ದರಿಂದ ಭಗವತ್ಜ್ಞಾನವು ಜಗದಾರೋಪರೂಪವಾಗುವುದಿಲ್ಲ. ಆದ್ದರಿಂದ ಮಾಯಾವಿಭ್ರಾಂತಿಯೋಗ ಎನ್ನುವುದು ಐದನೆಯ ಬಾಧಕವಾಗುತ್ತದೆ.

ಇನ್ನು ಆರನೆಯ ಬಾಧವನ್ನು ಹೇಳುತ್ತಾರೆ. 'ಅಪರಸ್ಯ' ಎಂದರೆ ಭಗವನ್ಮಾಯಿಕವಾದ ಘಟಾದಿ ಪದಾರ್ಥವನ್ನು ನೋಡುವ ಜೀವಸಮುದಾಯ ಎಂದು ಅರ್ಥ. ಅದಕ್ಕೆ 'ಯೋಗಾಯೋಗ' ಎಂದರೆ ಇಂದ್ರಿಯಸನ್ನಿಕರ್ಷಾನುಪಪತ್ತಿ ಎಂದು ಅರ್ಥ. ಮಾಯಾಸೃಷ್ಟಿಪಕ್ಷದಲ್ಲಿ ಜೀವರಿಗೆ ಅಪರೋಕ್ಷಜ್ಞಾನವೂ ಆಗುವುದಿಲ್ಲ ಎಂದು ಅಭಿಪ್ರಾಯ. ಏಕೆಂದರೆ, ಮಾಯಾವಿಯು ತನ್ನ ವಿದ್ಯೆಯನ್ನು ನೋಡುವವರ ಎದುರಿನಲ್ಲಿ ಕಲ್ಲು ಮಣ್ಣು ಮುಂತಾದ ಪದಾರ್ಥಗಳನ್ನು ಇಟ್ಟು ಪ್ರೇಕ್ಷಕರು ಅದನ್ನು ನೋಡಿದಾಗ ಮಾಯಾವಿಯ ಮಂತ್ರೌಷಧಿ ಸಾಮರ್ಥ್ಯದಿಂದ ಅಲ್ಲಿ ಸರ್ವಥಾ ಅವಿದ್ಯಮಾನವಾದ ಆದ್ದರಿಂದಲೇ ಇಂದ್ರಿಯಸನ್ನಿಕರ್ಷಾಜನ್ಯವಾದ ಗಜ-ತುರಗಾದಿಗಳ ಭ್ರಾಂತಿಯು ಶುಕ್ತಿರಜತಸ್ಥಳದಲ್ಲಿ ರಜತಭ್ರಾಂತಿಯು ಉಂಟಾಗುವಂತೆಯೇ ಉಂಟಾಗುತ್ತದೆ. ಇದು ಐಂದ್ರಜಾಲಿಕನ ಮಾಯಾಸೃಷ್ಟಿಯ ವಾಸ್ತವ ಸ್ಥಿತಿ. ಜಗತ್ತಿನಲ್ಲಾದರೋ ಘಟಪಟಾದಿ ತತ್ತದರ್ಥ ಮತ್ತು ಇಂದ್ರಿಯಗಳ ಸನ್ನಿಕರ್ಷವು ಉಂಟಾದರೆ ಮಾತ್ರ ತತ್ತದರ್ಥಗಳ ಅಪರೋಕ್ಷಜ್ಞಾನವು ಉಂಟಾಗುತ್ತದೆ ಎಂದು ಪರನಿಗೂ ಸಮ್ಮತವಾದುದು. ಆದ್ದರಿಂದ ಮಾಯಾಸೃಷ್ಟಿಪಕ್ಷದಲ್ಲಿ ಜಗತ್ಜ್ಞಾನದಲ್ಲಿ ನಿಯಮೇನ ಅಪೇಕ್ಷಿತವಾದ ಇಂದ್ರಿಯಾರ್ಥಸನ್ನಿಕರ್ಷವು ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ ಮತ್ತು ಐಂದ್ರಜಾಲಿಕನ ಮಾಯಾಸೃಷ್ಟಿಯಲ್ಲಿ ಪ್ರೇಕ್ಷಕರ ಎದುರಿಗೆ ಇರಿಸಿದ ಯಾವ ಕಲ್ಲು ಒಮ್ಮೆ ಗಜವಾಗಿ ತೋರುತ್ತದೆಯೋ ಅದೇ ಶಿಲೆಯೇ ಇನ್ನೊಮ್ಮೆ ತುರಗವಾಗಿ ತೋರುತ್ತದೆ. ಜಗದ್ಭ್ರಾಂತಿಯು ಹಾಗಲ್ಲ, ತಂತುವಿನಲ್ಲೇ ಪಟದ ಜ್ಞಾನವುಂಟಾಗುತ್ತದೆ. ಕಪಾಲದಲ್ಲಿಯೇ ಘಟದ ಜ್ಞಾನವುಂಟಾಗುತ್ತದೆ. ಆದ್ದರಿಂದ ಮಾಯಾಸೃಷ್ಟಿಪಕ್ಷದಲ್ಲಿ ಇಂತಹ ಆಕಾರ ನಿಯಮವು ಕೂಡುವುದಿಲ್ಲ ಎಂದು ಇನ್ನೊಂದು ಅರ್ಥ. ಅದರಂತೆ, ಐಂದ್ರಜಾಲಿಕ ಸೃಷ್ಟಿಯಲ್ಲಿ ಅರ್ಥಕ್ರಿಯೆಯು ಇಲ್ಲ, ಆದರೆ ಜಗತ್ತಿನಲ್ಲಿರುವ ಪದಾರ್ಥಗಳಲ್ಲಿ ಅರ್ಥಕ್ರಿಯೆಯು ಇದೆ. ಆದ್ದರಿಂದ ಮಾಯಾಸೃಷ್ಟಿಪಕ್ಷದಲ್ಲಿ

ಜಗತ್ತಿನಲ್ಲಿ ಅರ್ಥಕ್ರಿಯಾಕಾರಿತ್ವಸಂಬಂಧದ ಅಯೋಗ, ಅನುಪಪತ್ತಿ ಎನ್ನುವುದು ದೋಷವಾಗುತ್ತದೆ ಎಂದು ಅರ್ಥ. ಇದು ಆರನೆಯ ಬಾಧಕ.

ರುದ್ರದೇವರ ವಾಕ್ಯವೆಂದರೆ 'ನಯಸ್ಯ ಮಾಯಾಗುಣಚಿತ್ತವೃತ್ತಿಭಿಃ ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತೇ' ಎಂಬ ಪಂಚಮಸ್ಕಂಧದ ರುದ್ರದೇವರ ವಾಕ್ಯ.ಅದರ ಅರ್ಥ ನಿರೀಕ್ಷತಃ = ಜಗತ್ತನ್ನು ಪ್ರತ್ಯಕ್ಷವಾಗಿ ನೋಡುವ, ಯಸ್ಯ = ಯಾವ ಪರಮಾತ್ಮನ ದೃಷ್ಟಿಃ = ಜ್ಞಾನವು, ಮಾಯಯಾ = ಅವಿದ್ಯೆಯಿಂದಲಾಗಲೀ , ಗುಣೈಃ = ಸತ್ವರಜಸ್ತಮೋಗುಣಗಳಿಂದಾಗಲೀ, ಚಿತ್ತವೃತ್ತಿಭಿಃ = ಅಹಂಕಾರ ರಾಗದ್ವೇಷಗಳಿಂದಾಗಲೀ, ಅಣ್ವಪಿ = ಸ್ವಲ್ಪವೂ, ನಾಜ್ಯತೇ = ಸಂಬಂಧವನ್ನು ಹೊಂದುವುದಿಲ್ಲವೋ ಎಂದು. ಹೀಗೆ ಸರ್ವಜ್ಞನಾದ ಭಗವಂತನ ವಿಶ್ವವಿಷಯಕಜ್ಞಾನದಲ್ಲಿ ಮಾಯಾಲೇಶವೂ ಇಲ್ಲ ಎಂದು ಹೇಳಿರುವುದರಿಂದ ಭಗವತ್‌ಜ್ಞಾನವು ಪ್ರಮೆಯೆಂದು ನಿಶ್ಚಿತವಾಗುತ್ತದೆ. ಪ್ರಮಾವಿಷಯವಾದ ಘಟಾದಿ ಪ್ರಪಂಚವು ಭಗವತ್‌ಜ್ಞಾನದಿಂದಾಗಲೀ, ಅನ್ಯಜ್ಞಾನದಿಂದಾಗಲೀ ಆರೋಪಿತವಾಗುತ್ತದೆ ಎಂದು ಅಂಗೀಕರಿಸಿದರೆ ಇದು ವಿರುದ್ಧವಾದುದರಿಂದ ಮಾಯಾಸೃಷ್ಟಿಪಕ್ಷದಲ್ಲಿ ಇದು ಏಳನೆಯ ಬಾಧಕ.

'ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ । ನಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನಾ' ಎಂದು ಕೃಷ್ಣನನ್ನು ಕುರಿತು ವರುಣನು ಹೇಳಿದ ವಾಕ್ಯ. ಇದು ದಶಮಸ್ಕಂಧದಲ್ಲಿದೆ. ಸರ್ವಜ್ಞನಾದ ಭಗವಂತನು ಮಾಯಾಶೂನ್ಯನಾದವನೆಂದು ಇಲ್ಲಿ ಹೇಳಿರುವುದರಿಂದ ಆ ಪರಮಾತ್ಮನಿಂದ ದೃಷ್ಟವಾದ ಜಗತ್ತು ಪ್ರಮಾವಿಷಯವೆಂದೇ ಸಿದ್ಧವಾಗುತ್ತದೆ. ಅಂತಹ ಜಗತ್ತಿನ ಜ್ಞಾನವನ್ನು ಭಗವಂತನ ಭ್ರಾಂತಿರೂಪವೆಂದಾಗಲೀ, ಇನ್ನೊಬ್ಬರ ಭ್ರಾಂತಿರೂಪವೆಂದಾಗಲೀ ಅಂಗೀಕರಿಸಿದರೆ ಪ್ರಮಾತ್ವವಿರೋಧ ಉಂಟಾಗುವುದರಿಂದ ಇದು ಮಾಯಾಸೃಷ್ಟಿಪಕ್ಷದಲ್ಲಿ ಎಂಟನೆಯ ಬಾಧಕ.

'ಮಾಯಾಂವ್ಯುದಸ್ಯ ಚಿಚ್ಛಕ್ತ್ಯಾ ಕೇವಲ್ಯೇಸ್ಥಿತ ಆತ್ಮನಿ' ಎಂಬುದು ವಿಷ್ಣುವನ್ನು ಕುರಿತು ಅರ್ಜುನನು ಹೇಳಿದ ಪ್ರಥಮಸ್ಕಂದದ ವಾಕ್ಯ. ಈ ವಾಕ್ಯದಲ್ಲಿ ಭಗವಂತನ ಸ್ವರೂಪಚೈತನ್ಯಕ್ಕೆ ಮಾಯಾನಿರಸನ ಸಾಮರ್ಥ್ಯವನ್ನು ಹೇಳಿರುವುದರಿಂದ ಭಗವಂತನು ಸ್ವಾಶ್ರಿತ ಮಾಯೆಯಿಂದ ಈ ಜಗತ್ತನ್ನು ಸೃಷ್ಟಿಸುತ್ತಾನೆಂದು ಅಂಗೀಕರಿಸಿದರೆ ಈ ವಾಕ್ಯದ ವಿರೋಧವು ಬರುತ್ತದೆ. ಆದ್ದರಿಂದ ಅರ್ಜುನನ ವಾಕ್ಯದ ವಿರೋಧವು ಜಗತ್ತಿನ ಆರೋಪಕ್ಕೆ ಒಂಭತ್ತನೆಯ ಬಾಧಕ.

ಶ್ರುತಿ ಎಂದರೆ ವಿಶ್ವಸತ್ಯತ್ವವನ್ನು ಹೇಳುವ ಶ್ರುತಿಗಳು. ಅವಾದರೋ 'ವಿಶ್ವಂ ಸತ್ಯಂ ಮಘವಾನಾ', 'ಪ್ರಮಿನಂತಿ ವ್ರತಮ್', 'ಯಾಥಾತಥ್ಯತೋ ಅರ್ಥಾನ್ ವ್ಯದಧಾತ್' ಮೊದಲಾದವುಗಳು. ಈ ಶ್ರುತಿಗಳು ಜಗತ್ತಿನ ಸತ್ಯತ್ವವನ್ನು, ಪ್ರಮಾವಿಷಯತ್ವವನ್ನು, ಯಥಾರ್ಥತ್ವವನ್ನು ಪ್ರತಿಪಾದಿಸುವುದರಿಂದ ಜಗದಾರೋಪಕ್ಕೆ ನೇರವಾಗಿ ಬಾಧಕಗಳಾಗಿವೆ.

ಹೀಗೆ ಜಗದಾರೋಪವನ್ನು ಅಂಗೀಕರಿಸಿದರೆ ಅದಕ್ಕೆ ಬಾಧಕವಾದ ಒಂಭತ್ತು ಯುಕ್ತಿಗಳು ಮತ್ತು ಹತ್ತನೇ ಶ್ರುತಿಯೂ ಸೇರಿ ಒಟ್ಟು ಹತ್ತು ಬಾಧಕಗಳಿವೆ ಎಂದು ಅಭಿಪ್ರಾಯ.

**ಸತ್ತ್ವಸ್ಯಾಪ್ರತಿಷೇಧೇನ ತ್ರಿಕಾಲೇಷ್ವನಿಷೇಧನಾತ್ ।**
**ಅಖಂಡಾರ್ಥತ್ವತೋ ವಾಚಾಂ ನಿರ್ವಿಕಲ್ಪತ್ವತೋ ಧಿಯಾಮ್ ॥ ೧೨೦೯॥**

**ಅರ್ಥ-** ಸತ್ತ್ವಸ್ಯಾಪ್ರತಿಷೇಧೇನ = ಜಗತ್ತು ಸತ್ಯವಲ್ಲ ಎಂದು ಹೇಳುವ ಶ್ರುತಿಯು ಇಲ್ಲದಿರುವುದರಿಂದ, ತ್ರಿಕಾಲೇಷು ಅನಿಷೇಧನಾತ್ = ಕಾಲತ್ರಯದಲ್ಲಿಯೂ ನಾಸ್ತಿತ್ವವನ್ನು ಹೇಳುವ ನಿಷೇಧವಾಕ್ಯವು ಇಲ್ಲದಿರುವುದರಿಂದ, ಅಖಂಡಾರ್ಥತ್ವತೋ ವಾಚಾಂ = ವೇದವಾಕ್ಯಗಳು ಬ್ರಹ್ಮಚೈತನ್ಯಮಾತ್ರ ಪ್ರತಿಪಾದಕವಾದ್ದರಿಂದ, ಧಿಯಾಮ್= ಚರಮಸಾಕ್ಷಾತ್ಕಾರವು, ನಿರ್ವಿಕಲ್ಪಕತ್ವತಃ = ನಿರ್ವಿಕಲ್ಪಕವಾದ್ದರಿಂದ, (ಜಗತ್ತಿಗೆ ಬಾಧವು ಕೂಡುವುದಿಲ್ಲ.)

**ಅನುವಾದ-** ಜಗತ್ತು ಸತ್ಯವಲ್ಲ ಎಂದು ಪ್ರತಿಷೇಧ ಮಾಡುವ ಯಾವ ಶ್ರುತಿಯೂ ಇಲ್ಲದಿರುವುದರಿಂದ, ತ್ರಿಕಾಲದಲ್ಲಿ ಜಗತ್ತನ್ನು ನಿಷೇಧಮಾಡುವ ವಾಕ್ಯವೂ ಇಲ್ಲದಿರುವುದರಿಂದ ವೇದವಾಕ್ಯಗಳು ಅಖಂಡಬ್ರಹ್ಮನಿಷ್ಠವಾದುದರಿಂದ ಮತ್ತು ಚರಮಸಾಕ್ಷಾತ್ಕಾರವು ನಿರ್ವಿಕಲ್ಪಕವಾದುದರಿಂದ ಜಗತ್ತಿಗೆ ಬಾಧವು ಕೂಡುವುದಿಲ್ಲ.

**ಭಾವವಿಲಾಸಿನೀ–** ಸತ್ತ್ವಸ್ಯ ಜಗತ್ಸತ್ತ್ವಸ್ಯ ತ್ರೈಕಾಲಿಕನಿಷೇಧೋ ಹಿ ಪರಸ್ಯ ಬಾಧಃ । ಪ್ರಾಗ-ಭಾವೋತ್ತರಾಭಾವಸದೃಶಜಗನ್ನಿಷೇಧಮಾತ್ರಸ್ಯ ಶ್ರುತಾವಾಪಾತತಃ ಪ್ರತೀತಾವಪಿ ಜಗತ್ಸತ್ಯಂ ನೇತಿ ತತ್ಸತ್ಯತ್ವಸ್ಯ ಕ್ವಾಪಿ ನಿಷೇಧಾಭಾವೇನೇತ್ಯರ್ಥಃ । **ಇದಮಾದ್ಯಂ ಬಾಧಸ್ಯ ಬಾಧಕಮ್।** ತ್ರಿಕಾಲೇಷ್ವನಿಷೇಧನಾತ್ ಕಾಲತ್ರಯೇಽಪಿ ಜಗನ್ನಾಸ್ತೀತಿ ನಿಷೇಧಾಭಾವಾತ್ । **ಇದಂ ದ್ವಿತೀಯಮ್ ।** ವಾಚಾಂ ಮಿಥ್ಯಾತ್ವಶ್ರುತೀನಾಮ್ । ಅಖಂಡಾರ್ಥತ್ವತಃ ಬ್ರಹ್ಮಸ್ವರೂಪಮಾತ್ರ ಪರತ್ವತಃ । ಮಿಥ್ಯಾತ್ವಪ್ರತಿಪಾದಕಶ್ರುತಿರ್ಹಿ ಪರಮತೇ ಬಾಧಿಕಾ । ಅಖಂಡಾರ್ಥ-ವಾದಪರ್ಯಾಲೋಚನಾಯಾಂ ಪರರೀತ್ಯೈವ ತದಭಾವಾದಿತಿ ಭಾವಃ । **ಇದಂ ತೃತೀಯಮ್ ।** ಧಿಯಾಂ ಸಾಕ್ಷಾದ್ಬಾಧಕತ್ವೇನಾಭಿಮತಚರಮಾಪರೋಕ್ಷಧಿಯಾಮ್ । ನಿರ್ವಿಕಲ್ಪಕತ್ವತಃ ನಿಷ್ಪ್ರಕಾರಕತ್ವತಃ । ಜಗನ್ನಾಸ್ತಿತ್ವಸ್ಯ ಪ್ರಕಾರೀಭೂಯ ತತ್ರಾಭಾವಾನ್ನಿರ್ವಿಕಲ್ಪಕಸ್ಯ ಸಾಧನಾಬಾಧನಾಕ್ಷಮತ್ವಾಚ್ಚೇತ್ಯರ್ಥಃ । **ಚತುರ್ಥಮ್** ॥ ೧೨೦೯ ॥

**ವಿವರಣೆ-** ಹಿಂದಿನ ಎರಡು ಶ್ಲೋಕಗಳಲ್ಲಿ ಜಗದಾರೋಪಕ್ಕೆ ಹತ್ತು ಬಾಧಕಗಳನ್ನು ಹೇಳಿ ಈ ಶ್ಲೋಕ ಮತ್ತು ಮುಂದಿನ ಎರಡು ಶ್ಲೋಕಗಳಲ್ಲಿ ಜಗದ್ಬಾಧಕ್ಕೆ ಹತ್ತು ಬಾಧಕಗಳನ್ನು ಹೇಳುತ್ತಾರೆ.

ಜಗತ್ತಿಗೆ ಬಾಧವೆಂದರೆ ಜಗತ್ತಿನ ತ್ರೈಕಾಲಿತ ಸತ್ವನಿಷೇಧ. ಶ್ರುತಿಗಳಲ್ಲಿ ಆಪಾತತಃ ಆದರೂ ಜಗತ್ತಿನ ಪ್ರಾಗಭಾವ ಮತ್ತು ಪ್ರಧ್ವಂಸಗಳೇ ಹೇಳಲ್ಪಡುತ್ತವೇ ಹೊರತಾಗಿ ಜಗತ್ತು ಸತ್ಯವಲ್ಲ ಎಂದು ಸತ್ಯತ್ವವನ್ನು ನಿಷೇಧಿಸುವ ಯಾವುದೇ ವಾಕ್ಯವಿಲ್ಲ. ಇದು ಜಗದ್ಬಾಧಕ್ಕೆ ಮೊದಲನೆಯ ಬಾಧಕ. ಇನ್ನು ಕಾಲತ್ರಯದಲ್ಲಿಯೂ ಜಗತ್ತು ಇಲ್ಲ ಎಂದು ಹೇಳುವ ಯಾವ ನಿಷೇಧವಾಕ್ಯವೂ ಇಲ್ಲ. ಇದು ಬಾಧಪಕ್ಷದಲ್ಲಿ ಎರಡನೆಯ ಬಾಧಕ. ಇನ್ನು ಮಿಥ್ಯಾತ್ವಪ್ರತಿಪಾದಕ ಶ್ರುತಿಗಳು ಎಲ್ಲವೂ ಅಖಂಡಾರ್ಥನಿಷ್ಠವಾದವುಗಳು. ಮಿಥ್ಯಾತ್ವಪ್ರತಿಪಾದಕ ಶ್ರುತಿಗಳನ್ನೇ ಪರರು ಬಾಧಕವೆಂದು ಹೇಳಬೇಕು. ಆದರೆ, ಅಖಂಡಾರ್ಥಪರವಾದ ಶ್ರುತಿಯು ಬ್ರಹ್ಮಸ್ವರೂಪವನ್ನು ಮಾತ್ರ ಹೇಳುತ್ತದೆ. ಜಗನ್ನಾಸ್ತಿತ್ವವನ್ನು ಹೇಳುವುದಿಲ್ಲ. ಆದ್ದರಿಂದ, ಅದೂ ಬಾಧಕವಾಗುವುದಿಲ್ಲ ಎಂದು ಬಾಧಪಕ್ಷದಲ್ಲಿ ಇದು ಮೂರನೆಯ ಬಾಧಕ. ಇನ್ನು ಚರಮಸಾಕ್ಷಾತ್ಕಾರವು ನಿರ್ವಿಕಲ್ಪಕವೆಂದು ಪರರು ಅಂಗೀಕರಿಸುತ್ತಾರೆ. ಅಲ್ಲಿಯೂ ಬ್ರಹ್ಮಸ್ವರೂಪವನ್ನು ಬಿಟ್ಟು ಜಗನ್ನಾಸ್ತಿತ್ವವು ಪ್ರಕಾರವಾಗಿ ತೋರುವುದಿಲ್ಲ. ಆದ್ದರಿಂದ ಅದೂ ಬಾಧಕವಾಗುವುದಿಲ್ಲ. ಇದು ನಾಲ್ಕನೆಯ ಬಾಧಕ.

ಸ್ವಸ್ವಸ್ಥಾನಾನಿಷೇಧಾಚ್ಚ ಶಬ್ದೇಽಕ್ಷಾನುಸೃತೀಕ್ಷಣಾತ್ ।
ಏಕಜ್ಞಾನೇನ ಸರ್ವಸ್ಯ ಜ್ಞಾನಾತ್ ಸತ್ತ್ವಶ್ರುತೇರ್ಬಲಾತ್ ॥ ೧೨೧೦ ॥

**ಅರ್ಥ-** ಚ = ಮತ್ತು, ಸ್ವಸ್ವಸ್ಥಾನಾನಿಷೇಧಾತ್ = ತಮ್ಮ ತಮ್ಮ ಆಶ್ರಯದಲ್ಲಿ ಘಟಾದಿ ಪದಾರ್ಥಗಳನ್ನು ನಿಷೇಧ ಮಾಡದೇ ಇರುವುದರಿಂದ, ಚ = ಮತ್ತು, ಶಬ್ದೇ = ಶಬ್ದದಲ್ಲಿ, ಅಕ್ಷಾನುಸೃತೀಕ್ಷಣಾತ್ = ಪ್ರತ್ಯಕ್ಷದ ಅನುಕೂಲ್ಯವನ್ನು ಅನುಸರಿಸುವುದರಿಂದ, ಮತ್ತು, ಏಕಜ್ಞಾನೇನ ಸರ್ವಸ್ಯ ಜ್ಞಾನಾತ್ = ಏಕವಿಜ್ಞಾನದಿಂದ ಸರ್ವವಿಜ್ಞಾನ ಉಂಟಾಗುವುದರಿಂದ, ಮತ್ತು, ಸತ್ತ್ವಶ್ರುತೇಃ = ಜಗತ್‌ಸತ್ಯತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಯ, ಬಲಾತ್ = ಸಾಮರ್ಥ್ಯದಿಂದ, (ಜಗತ್ತಿನ ಬಾಧವು ಬಾಧಿತವಾಗುತ್ತದೆ.)

**ಅನುವಾದ-** ಘಟಾದಿ ಪದಾರ್ಥಗಳನ್ನು ಪ್ರತಿಪನ್ನೋಪಾದಿಗಳಲ್ಲಿ ನಿಷೇಧ ಮಾಡದೇ ಇರುವುದರಿಂದಲೂ, ಶಬ್ದಕ್ಕೆ ಪ್ರತ್ಯಕ್ಷಾನುಕೂಲ್ಯವನ್ನು ಅನುಸರಿಸುವುದರಿಂದಲೂ ಏಕಜ್ಞಾನೇನ ಸರ್ವಜ್ಞಾನ ಉಂಟಾಗುವುದರಿಂದಲೂ, ಮತ್ತು ಸತ್ವಶ್ರುತಿಯ ಸಾಮರ್ಥ್ಯದಿಂದಲೂ (ವಿಶ್ವಸತ್ಯತ್ವವು ನಿರ್ಬಾಧವಾದುದೆಂದೇ ಸಿದ್ಧವಾಗುತ್ತದೆ)

**ಭಾವವಿಲಾಸಿನೀ–** ಸ್ವಸ್ವಸ್ಥಾನಾನಿಷೇಧಾತ್ ಜಾತೇರ್ವ್ಯಕ್ತ್ಯಾಖ್ಯಸ್ಥಾನೇ ಕಾರ್ಯಸ್ಯೋಪಾದಾನಾಖ್ಯಸ್ಥಾನೇ ನಿಷೇಧಾಭಾವಾದಿತ್ಯರ್ಥಃ । ಅನ್ಯತ್ರ ನಿಷೇಧಸ್ಯ ಚ ಸ್ವಸ್ವಸ್ಥಾನ ಏವ ಸ್ಥಿತಿಸ್ಥಿರೀಕರಣಹೇತುತಯಾ ಸಾರ್ವತ್ರಿಕನಿಷೇಧಾಖ್ಯಬಾಧರೂಪತ್ವಾಭಾವಾದಿತ್ಯರ್ಥಃ । ಇದಂ ಪಂಚಮಮ್ । ಶಬ್ದೇಕ್ಷಾನುಸೃತೀಕ್ಷಣಾತ್ ಶಬ್ದೇ ಗಂಗಾಯಾಂ ಘೋಷಃ ಯಜಮಾನಃ ಪ್ರಸ್ತರ ಇತ್ಯಾದಿಶಬ್ದೇ ಅಕ್ಷಾನುಸೃತೀಕ್ಷಣಾತ್ ಪ್ರತ್ಯಕ್ಷಾನುಸರಣದರ್ಶನಾತ್ । ಪ್ರತ್ಯಕ್ಷಬಾಧಿತಾರ್ಥಂ

ತ್ಯಕ್ತ್ವಾ ತದನುಕೂಲಾರ್ಥಸ್ಯೈವ ಕಥನಾದಿತ್ಯರ್ಥಃ । ಮಿಥ್ಯಾತ್ವಶ್ರುತೇರಪಿ ಘಟಸ್ಸನ್ನಿತ್ಯಾದಿ ಪ್ರತ್ಯಕ್ಷಸಿದ್ಧಜಗತ್ಸತ್ತ್ವನಿಷೇಧನೇ ಸಾಮರ್ಥ್ಯಾಭಾವೇನಾನ್ಯಾರ್ಥ ಏವ ಯೋಜ್ಯತಯಾ ಬಾಧಕತ್ವಾಯೋಗಾದಿತಿ ಭಾವಃ । ಇದಂ ಷಷ್ಠಮ್ । ಏಕಜ್ಞಾನೇನ ಬಾಧಕತ್ವೇನಾಭಿಮತಬ್ರಹ್ಮ-ಪ್ರತ್ಯಕ್ಷೇಣ ಸರ್ವಸ್ಯ ಜ್ಞಾನಾತ್ ಸರ್ವಸ್ಯ ಜಗತಃ ಪರೇಣೈವ ಬ್ರಹ್ಮವಿದ್ವಜ್ಞಾನಾಂಗೀಕಾರಾತ್ । ಏವಂ ಚ ಬ್ರಹ್ಮವತ್ಸರ್ವಸ್ಯ ಜಗತಸ್ಸಾಧಿಕಾ ಧೀಃ ಕಥಂ ಬಾಧಿಕೇತಿ ಭಾವಃ । ಇದಂ ಸಪ್ತಮಮ್। ಸತ್ತ್ವಶ್ರುತೇರ್ಬಲಾತ್ ಶ್ರುತ್ಯೈವ ಸತ್ಯತಯಾ ಪ್ರತಿಪಾದಿತಸ್ಯ ಜಗತಃ ಪುನಶ್ಶ್ರುತ್ಯೈವ ಬಾಧಾ-ಯೋಗಾದಿತಿ ಭಾವಃ । ಬಲಾದಿತಿ ವದತಾ ''ಶಾಶ್ವತೀಭ್ಯಸ್ಸಮಾಭ್ಯ'' ಇತ್ಯಾಗಾಮಿಬಾಧಸ್ಯಾಪಿ ಬಾಧಂ ಸೂಚಯತಿ । ತ್ರೈಕಾಲಿಕನಿಷೇಧಾಪ್ರತಿಯೋಗಿತ್ವರೂಪಸತ್ತ್ವಸ್ಯ ತಾದೃಶನಿಷೇಧಪ್ರತಿ-ಯೋಗಿತ್ವಾಖ್ಯಮಿಥ್ಯಾತ್ವನಿಷೇಧರೂಪತಯಾ ತತ್ಪ್ರತಿಪಾದಕಸತ್ಯತ್ವಶ್ರುತೇರ್ಮಿಥ್ಯಾತ್ವ ಶ್ರುತಿತೋಽಪಿ ಪ್ರಾಬಲ್ಯಂ ಸೂಚಯಿತುಮಪಿ ಬಲಾದಿತ್ಯುಕ್ತಮ್ । ಇದಮಷ್ಟಮಮ್ ॥ ೧೨೧೦ ॥

**ವಿವರಣೆ-** 'ನೇಹ ನಾನಾಸ್ತಿ' ಮುಂತಾದ ವಾಕ್ಯಗಳು ಬ್ರಹ್ಮನಲ್ಲಿ ಘಟಾದಿಗಳನ್ನು ನಿಷೇಧ ಮಾಡುತ್ತವೆ. ಹೊರತು ಸ್ವಸ್ವೋಪಾದಾನವಾದ ಕಪಾಲಾದಿಗಳಲ್ಲಿ ಘಟಾದಿಗಳನ್ನು ನಿಷೇಧ ಮಾಡುವುದಿಲ್ಲ. ಅನ್ಯತ್ರ ನಿಷೇಧವನ್ನು ಮಾಡಿದರೆ ಸ್ವಾಶ್ರಯದಲ್ಲಿ ಅದರ ಸತ್ವವು ಸ್ಥಿರವಾಗುವುದರಿಂದ ಸಾರ್ವತ್ರಿಕ ನಿಷೇಧರೂಪವಾದ ಬಾಧವು ಕೂಡುವುದಿಲ್ಲ. ಇದು ಐದನೆಯ ಬಾಧಕ. ಇನ್ನು 'ಗಂಗಾಯಾಂ ಘೋಷಃ, ಯಜಮಾನಃ ಪ್ರಸ್ತರಃ' ಮುಂತಾದ ವಾಕ್ಯಗಳಲ್ಲಿ ಎಲ್ಲ ವಾದಿಗಳೂ ಪ್ರತ್ಯಕ್ಷವನ್ನು ಅನುಸರಿಸುತ್ತಾರೆ. ಎಂದರೆ, ಪ್ರತ್ಯಕ್ಷಬಾಧಿ ತವಾದ ಅರ್ಥವನ್ನು ಬಿಟ್ಟು ಪ್ರತ್ಯಕ್ಷಕ್ಕೆ ಅನುಕೂಲವಾದ ಅರ್ಥವನ್ನೇ ಹೇಳುತ್ತಾರೆ. ಅದರಂತೆ ಮಿಥ್ಯಾತ್ವಶ್ರುತಿಗೂ ಕೂಡ 'ಘಟಃ ಸನ್' ಇತ್ಯಾದಿ ಪ್ರತ್ಯಕ್ಷಸಿದ್ಧವಾದ ಜಗತ್‌ಸತ್ಯತ್ವವನ್ನು ನಿಷೇಧ ಮಾಡಲು ಸಾಮರ್ಥ್ಯವಿಲ್ಲವಾದ್ದರಿಂದ ಬೇರೆ ಅರ್ಥವನ್ನೇ ಹೇಳಬೇಕು. ಆದ್ದರಿಂದ ಮಿಥ್ಯಾತ್ವಶ್ರುತಿಯು ಸತ್ಯತ್ವಕ್ಕೆ ಬಾಧಕವಾಗುವುದಿಲ್ಲ. ಇದು ಆರನೆಯ ಬಾಧಕ. ಪರರು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಅಂಗೀಕರಿಸುತ್ತಾರೆ ಎಂದರೆ, ಬ್ರಹ್ಮಪ್ರತ್ಯಕ್ಷದಿಂದ ಸರ್ವಜಗತ್ತಿನ ಪ್ರತ್ಯಕ್ಷವು ಉಂಟಾಗುತ್ತದೆ. ಹಾಗಾದರೆ. ಬ್ರಹ್ಮಪ್ರತ್ಯಕ್ಷಕ್ಕೆ ವಿಷಯನಾದ ಬ್ರಹ್ಮನು ಹೇಗೆ ಸತ್ಯನಾಗಿದ್ದಾನೆಯೋ ಬ್ರಹ್ಮಪ್ರತ್ಯಕ್ಷಾಭಿನ್ನವಾದ ಸರ್ವಪ್ರತ್ಯಕ್ಷಕ್ಕೆ ವಿಷಯವಾದ ಘಟಾದಿ ಪ್ರಪಂಚವು ಸತ್ಯವೇ ಆಗಿದೆ. ಇದು ಬಾಧಪಕ್ಷದಲ್ಲಿ ಏಳನೆಯ ಬಾಧಕವಾಗುತ್ತದೆ. 'ಸತ್ತ್ವಶ್ರುತೇರ್ಬಲಾತ್' ಎಂಬುದು ಎಂಟನೆಯ ಬಾಧಕ. ಶ್ರುತಿಯೇ 'ವಿಶ್ವಂ ಸತ್ಯಂ' ಎಂದು ಜಗತ್ತಿನ ಸತ್ಯತ್ವವನ್ನು ಪ್ರತಿಪಾದಿಸಿ ಪುನಃ ಸತ್ಯತ್ವವನ್ನು ನಿಷೇಧ ಮಾಡುವುದಾದರೆ ವ್ಯಾಹತಿ ಬರುವದಾದ್ದರಿಂದ ತಾನು ಪ್ರತಿಪಾದನೆ ಮಾಡಿದ ಸತ್ಯತ್ವವನ್ನು ತಾನು ಎಂದೂ ನಿಷೇಧ ಮಾಡುವುದಿಲ್ಲ. ಅಲ್ಲದೆ, 'ಶಾಶ್ವತೀಭ್ಯಸ್ಸಮಾಭ್ಯಃ' ಎಂದು ಈ ಜಗತ್ತು ಯಾವಾಗಲೂ ಸತ್ಯವೆಂದು ಹೇಳುವ ಶ್ರುತಿಯು ಭಾವಿಬಾಧದ ನಿಷೇಧವನ್ನೂ ಮಾಡುತ್ತದೆ. ಹಾಗೆಯೇ ಸತ್ತ್ವವೆಂದರೆ ತ್ರೈಕಾಲಿಕನಿಷೇಧ ಅಪ್ರತಿಯೋಗಿತ್ವ ಅರ್ಥಾತ್

ತ್ರೈಕಾಲಿಕನಿಷೇಧಪ್ರತಿಯೋಗಿತ್ವಾಭಾವ. ಮಿಥ್ಯಾತ್ವವೆಂದರೆ ತ್ರೈಕಾಲಿಕನಿಷೇಧಾಪ್ರತಿಯೋಗಿತ್ವ ಆದ್ದರಿಂದ ಸತ್ಯತ್ವವು ಮಿಥ್ಯಾತ್ವಪ್ರತಿಷೇಧರೂಪವಾಗಿದೆ. ನಿಷೇಧವಾಕ್ಯಕ್ಕೆ ವಿಧಿವಾಕ್ಯಕ್ಕಿಂತ ಪ್ರಾಬಲ್ಯವನ್ನು ಪರನು ಅಂಗೀಕರಿಸುತ್ತಾನೆ. ಆದ್ದರಿಂದ ಸತ್ಯತ್ವಶ್ರುತಿಯೇ ಪ್ರಬಲವಾಗುತ್ತದೆ. ಆದ್ದರಿಂದ ಮಿಥ್ಯಾತ್ವಶ್ರುತಿಯು ಜಗತ್ತಿಗೆ ಬಾಧವನ್ನು ಹೇಳುವುದಿಲ್ಲ. ಇದು ಎಂಟನೆಯ ಬಾಧಕ.

ಆರೋಪಾಸಂಭವಾದ್ ಬ್ರಹ್ಮಸತ್ತ್ವಾಕ್ ಸಾಮ್ಯತೋಽಪಿ ಚ ।
ಬಾಧಾಯೋಗೇನ ಸಕಲಂ ವಿಶ್ವಮಾಸೀದನಾಕುಲಮ್ ॥ ೧೨೧೧ ॥

**ಅರ್ಥ-** ಆರೋಪಾಸಂಭವಾತ್ = ಆರೋಪವು ಕೂಡದಿರುವುದರಿಂದ, ಅಪಿಚ = ಮತ್ತು, ಬ್ರಹ್ಮಾಸತ್ತ್ವಾಕ್ ಸಾಮ್ಯತಃ = ಬ್ರಹ್ಮಸತ್ತ್ವವನ್ನು ಪ್ರತಿಪಾದಿಸುವ ವಾಕ್ಯದ ಸಾಮ್ಯವಿರುವುದರಿಂದಲೂ, ಬಾಧಾಯೋಗೇನ = ಬಾಧವು ಕೂಡುವುದಿಲ್ಲವಾದ್ದರಿಂದ, ಸಕಲಂ ವಿಶ್ವಂ = ಸಮಸ್ತವಾದ ಜಗತ್ತು, ಅನಾಕುಲಮ್ = ಅಭಾದಿತವೆಂದೇ, (ಸತ್ಯವೆಂದೇ), ಆಸೀತ್ = ಸಿದ್ಧವಾಯಿತು.

**ಅನುವಾದ-** ಆರೋಪವು ಕೂಡದಿರುವುದರಿಂದ ಮತ್ತು ಬ್ರಹ್ಮಸತ್ತ್ವಾಕ್ಯದ ಸಾಮ್ಯವಿರುವುದರಿಂದ ಬಾಧವು ಕೂಡುವುದಿಲ್ಲವಾದ್ದರಿಂದ ಸಮಸ್ತವಾದ ಜಗತ್ತು ಸತ್ಯವೆಂದೇ ಸಿದ್ಧವಾಯಿತು.

**ಭಾವವಿಲಾಸಿನೀ–** ಆರೋಪಾಸಂಭವಾತ್ ಅನಾರೋಪಿತಸ್ಯ ಬ್ರಹ್ಮಣೋ ಬಾಧಾದರ್ಶನೇ ನಾರೋಪಾಭಾವೇ ಬಾಧಸ್ಯಾಪ್ಯಸಂಭವಾತ್ । ಸೋಽಪಿ ನವಮೋ ಬಾಧಕಃ । ನನು ಮಿಥ್ಯಾತ್ವ-ಶ್ರುತ್ಯಾಮಿಥ್ಯಾತ್ವಪ್ರತಿಪಾದನಾನ್ಮಿಥ್ಯಾತ್ವಮೇವ ಭಾವಿಬಾಧಸಾಧಕಂ ಭವಿಷ್ಯತೀತ್ಯತಸ್ತಾಮಪಿ ಪ್ರತಿಬಂದ್ಯಾ ನಿರಾಕೃತ್ಯ ಸಾಧಕಾಭಾವಾಖ್ಯಬಾಧಕಮೇವ ಸ್ಥಿರೀಕರ್ತುಂ ಬ್ರಹ್ಮಾಸತ್ತ್ವಾಕ್ಸಾಮ್ಯತ ಇತ್ಯುಕ್ತಮ್ । ಮಿಥ್ಯಾಶ್ರುತ್ಯಾ ಜಗತೋ ಮಿಥ್ಯಾತ್ವಸಾಧನೇ ''ಅಸದೇವೇದಮಗ್ರ ಆಸೀದ್'' ಇತಿ ಶ್ರುತ್ಯಾ ಬ್ರಹ್ಮಣೋ ಮಿಥ್ಯಾತ್ವಂ ಸ್ಯಾತ್ ।

ನನು ಬ್ರಹ್ಮಣೋ ಮಿಥ್ಯಾತ್ವೇ ತಸ್ಯಾಪ್ಯಧಿಷ್ಠಾನಾಂತರಂ ವಾಚ್ಯಮ್ । ನ ಚ ತದಸ್ತಿ । ಅತಃ ಸಾ ಶ್ರುತಿರನ್ಯಥಾ ಯೋಜ್ಯೇತಿ ಶಂಕಾಯಾ ಗರ್ಭಸ್ರಾವಮೇವ ಕರ್ತುಮಸತ್ತ್ವೇತ್ಯುಕ್ತಮ್ । ಶ್ರುತ್ಯಾ ಬ್ರಹ್ಮಣೋ ಮಿಥ್ಯಾತ್ವಪ್ರತಿಪಾದನೇಽಹ್ಯಧಿಷ್ಠಾನಾಪೇಕ್ಷಾ । ''ಅಸದೇವೇದಮಗ್ರ ಆಸೀದ್'' ಇತಿ ಶ್ರುತ್ಯಾ ಶಶವಿಷಾಣವದ್ಬ್ರಹ್ಮಣೋ ಸತ್ತ್ವಸ್ಯ ಪ್ರತಿಪಾದನಾತ್ ನಾಧಿಷ್ಠಾನಾಪೇಕ್ಷೇತಿ ಭಾವಃ । ಅಥವಾ ಅಸದೇವೇತಿ ಸಾವಧಾರಣಶ್ರುತ್ಯಾಽಽರೋಪ್ಯಮಾಣಾದಸತೋಽನ್ಯದಧಿಷ್ಠಾನಾದಿಕಂ ವ್ಯವಚ್ಛಿದ್ಯಾಸತ್ತ್ವಸ್ಯೈವ ನಿರೂಪಣಾತ್ ಅನವಸ್ಥಾಪರಿಹಾರಾಯ ಕಿಂ ಸ್ವಿದಾಸೀದಧಿಷ್ಠಾನಮಿತಿ ಶ್ರುತಿಸಮಾಖ್ಯಯಾ ಚ ನಿರಧಿಷ್ಠಾನಕೋ ವಾಯಂ ಭ್ರಮೋಽಸ್ತ್ವಿತಿ ಸೂಚನಾಯ ಬ್ರಹ್ಮಾಸತ್ತ್ವೇತ್ಯುಕ್ತಮ್ । ಅಸತ್ತ್ವಸ್ಯ ತ್ರಿಕಾಲಾಭಾವತ್ವೇನ ಸಾವಧಾರಣಶ್ರುತೇರಪಿ ಸೂಚನಾತ್ । ತ್ವನ್ಮತೇ ಜಗದಾರೋಪೇ ಬ್ರಹ್ಮಾಧಿಷ್ಠಾನಂ

ತಸ್ಯಾಪಿ ಶ್ರುತಿಬಲಾದಾರೋಪ ವಕ್ತವ್ಯ ಪುನರಧಿಷ್ಠಾನಾಂತ- ರಾಪೇಕ್ಷಾಯಾಮನವಸ್ಥಾ ಅತೋ ಬ್ರಹ್ಮಾರೋಪೋ ನಿರಧಿಷ್ಠಾನ ಏವ ವಾಚ್ಯಮ್ । ಕಿಂಸ್ವಿದಿತಿ ಶ್ರುತ್ಯಾ ಬ್ರಹ್ಮಣ್ಯಧಿಷ್ಠಾನಾಕ್ಷೇಪೇ ತು ಕಿಂ ವಕ್ತವ್ಯಮಿತಿ ಭಾವಃ ।

ಕಿಂ ಚ ನಿರಧಿಷ್ಠಾನಕತ್ವಾದ್ಬ್ರಹ್ಮಭ್ರಮೋ ನ ಚೇತ್ ತತ ಏವ ಜಗದ್ಭ್ರಮೋಽಪಿ ನ ಸ್ಯಾತ್ । ಯದಿ ಚ ಜಗದ್ಭ್ರಮೇ ಬ್ರಹ್ಮೈವಾಧಿಷ್ಠಾನಮಿತಿ ವದಸಿ । ತದಾ ಬ್ರಹ್ಮಭ್ರಮೇ ಜಗದೇವಾಧಿಷ್ಠಾನಮಿತಿ ಬ್ರೂಮಃ । ಯದಿ ಚ ಪ್ರಲಯಕಾಲೀನಬ್ರಹ್ಮಭ್ರಮದಶಾಯಾಂ ಜಗತೋ ಭಾವಾತ್ ನಾಧಿ- ಷ್ಠಾನತ್ವಮ್ । ತರ್ಹ್ಯಸತ್ಪದೋಕ್ತಬ್ರಹ್ಮಣಸ್ಸರ್ವದಾಽಭಾವಾನ್ನಾಧಿಷ್ಠಾನತ್ವಮಿತಿ ಸಮಮ್ ।

ಅಥವಾ ಅಸದೇವೇತಿ ಸಾವಧಾರಣಪ್ರಯೋಗೇಣ ಬ್ರಹ್ಮಣಸ್ಸರ್ವಥಾಽಭಾವವತ್ ಇದಮಗ್ರ ಇತ್ಯತ್ರ ಅಸ್ಯಾಗ್ರ ಏವೇತ್ಯವಧಾರಣಾಭಾವೇನ ಸೂಕ್ಷ್ಮಕಾಲವಿಧಾನಾಚ್ಚ ಪರಿದೃಶ್ಯಮಾನ- ಸ್ಥೂಲಾಕಾರಮಾತ್ರನಿಷೇಧೋ ನ ಸರ್ವಥೇತಿ ಗಮ್ಯತೇ । ತತಶ್ಚ ತದಾನೀಮಪಿ ಸೂಕ್ಷ್ಮ- ರೂಪೇಣಾವಸಿತಜಗತೋಧಿಷ್ಠಾನತ್ವಸಂಭವಾತ್ ನಾಸ್ಮಾಕಮನುಪಪತ್ತಿಃ । ಕಿಂತು ತವೈವ । ಅಥವಾ ಅಗ್ರ ಇತ್ಯುಕ್ತಕಾಲಸ್ಯ ತದಾನೀಮಪಿ ಶ್ರವಣಾತ್ ತದೇವಾಧಿಷ್ಠಾನಂ ಸ್ಯಾತ್ । ನ ಚ ವಾಚ್ಯಂ ಸಪ್ತಮ್ಯಂತಪದೇನೋದಿತಸ್ಯ ತಸ್ಯ ಕಥಮಧಿಷ್ಠಾನತ್ವಮಿತಿ । ಇಹೇತಿ ಸಪ್ತಮ್ಯಂತ- ಪದೇನೋದಿತಬ್ರಹ್ಮವದೇವ ಸಂಭವಾತ್ । ನನ್ವೇವಂ ಬ್ರಹ್ಮಣ ಏವಾಭಾವೇ ಬ್ರಹ್ಮಪ್ರಾಪ್ತಿರೂಪ- ಮೋಕ್ಷಸ್ಯಾಪ್ಯಭಾವ ಇತಿ ಚೇತ್ ನ । ಪ್ರಾಪ್ಯಚೇತನಾತ್ಮಕಜಗದಭಾವೇಽಪಿ ತದಭಾವಸ್ಯ ಸಾಮ್ಯಾತ್ । ಜಡಾತ್ಮಕಜಗನ್ಮಾತ್ರಾಭಾವೇಽಪಿ ಕಾಮಾನ್ನೀತ್ಯಾದಿಪದೋಕ್ತಪ್ರಾಪ್ಯಜೀವೋದ್ದೇಶ್ಯ ಫಲಾಭಾವೇನ ಪ್ರಾಪ್ತಭಾವಾಪತ್ತ್ಯಾಪುನಸ್ತದಭಾವತಾದವಸ್ಥ್ಯಾತ್ ।

ಯದಿ ಚ ಸದೇವೇತಿ ಶ್ರುತಿಸಮಾಖ್ಯಯಾಽಸತ್ತ್ವಶ್ರುತಿಮನ್ಯಥೀಚಿಕೀರ್ಷಸಿ । ತದಾ ನಿಷೇಧ- ರೂಪತಯಾ ಪ್ರಬಲಯಾಽನಯೈವ ತಾಮನ್ಯಥೀಕುರು । ಯದಿ ಚ ಬ್ರಹ್ಮಕ್ಷಯಾದ್ಭೀತೋ ವಿಧಿಮೇವ ಮಾನಯಸಿ । ತರ್ಹಿ ಬ್ರಹ್ಮಭವನಕ್ಷಯಾದ್ಬ್ರಹ್ಮಮಹಿಮಪ್ರತಿಪಾದಕಶ್ರುತ್ಯಾದಿಕ್ಷಯಾತ್ ಬ್ರಹ್ಮಪೂಜಾಸಾಧನಫಲಪುಷ್ಪಾದಿಕ್ಷಯಾತ್ ಗೋಬ್ರಾಹ್ಮಣಕ್ಷಯಾಚ್ಚ ಭೀತೋ ವಿಶ್ವಂ ಸತ್ಯಮಿತ್ಯಾದಿ ವಿಧಿಮೇವ ಮಾನಯ । ನಾನಾಸ್ತೀತಿ ವಾಕ್ಯಸ್ಯ ಚ ನಚ ಆವೃತ್ತ್ಯಾ ನಾಸ್ತೀತಿ ನೇತ್ಯರ್ಥಂ ಪರಿಕಲ್ಪಯ । ಅಧಿಷ್ಠಾನಾನುಪಪತ್ತಿವದಾರೋಪಾನುಪಪತ್ತೇರಪಿ ಮಿಥ್ಯಾತ್ವಬಾಧಕತ್ವೇನ ಜಗನ್ಮಿಥ್ಯಾತ್ವ- ಶ್ರುತೇರಪ್ಯರ್ಥಾಂತರಂ ಪರಿಕಲ್ಪಯ । ಏತತ್ಸರ್ವಂ ಸೂಚಯಿತುಂ ಸಾಮ್ಯತೋಽಪಿ ಚೇತ್ಯುಕ್ತಮ್ ॥ ೧೨೧೧ ॥

**ವಿವರಣೆ-** ಆರೋಪಾಸಂಭವ ಎನ್ನುವುದು ಒಂಬತ್ತನೆಯ ಬಾಧಕ. ಆರೋಪವಿದ್ದರೆ ಅನಂತರ ಬಾಧವು ಇರುತ್ತದೆ. ಆರೋಪವೇ ಇಲ್ಲದಿದ್ದರೆ ಬಾಧವೂ ಇರುವುದಿಲ್ಲ. ಹೇಗೆ ಬ್ರಹ್ಮನಿಗೆ ಆರೋಪವೂ ಇಲ್ಲ ಮತ್ತು ಬಾಧವೂ ಇಲ್ಲವೋ ಅದರಂತೆ ಜಗತ್ತಿಗೂ ಆರೋಪವು ಕೂಡದಿರುವುದರಿಂದ ಬಾಧವೂ ಕೂಡುವುದಿಲ್ಲ.

ಮಿಥ್ಯಾತ್ವ ಶ್ರುತಿಯು ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವುದರಿಂದ ಮಿಥ್ಯಾತ್ವವೇ ಭಾವಿಬಾಧಕಕ್ಕೆ ಸಾಧಕವಾದುದು ಎಂಬ ಶಂಕೆಯನ್ನು ಹಿಂದೆ ಪ್ರತಿಬಂದಿಯಿಂದ ನಿರಾಕರಿಸಿ ಮಿಥ್ಯಾತ್ವಕ್ಕೆ ಸಾಧಕವಾದ ಪ್ರಮಾಣವೇ ಇಲ್ಲ ಎಂಬ ಬಾಧಕವನ್ನು ಸ್ಥಿರೀಕರಿಸಲು ಬ್ರಹ್ಮಸತ್ತ್ವಾಕ್ಯಸಾಮ್ಯವನ್ನು ಹೇಳಿದ್ದಾರೆ. ಮಿಥ್ಯಾತ್ವ ಶ್ರುತಿಯಿಂದ ಜಗತ್ತಿಗೆ ಮಿಥ್ಯಾತ್ವವನ್ನು ಸಾಧನೆ ಮಾಡುವುದಾದರೆ 'ಅಸದೇವೇದಮಗ್ರ ಆಸೀದ್' ಎಂಬ ಶ್ರುತಿಯಿಂದ ಬ್ರಹ್ಮನಿಗೂ ಮಿಥ್ಯಾತ್ವ ಸಿದ್ಧವಾಗಲಿ ಎಂದು ನಮ್ಮ ಆಪಾದನೆ. ಬ್ರಹ್ಮನು ಮಿಥ್ಯೆಯಾದರೆ ಅವನಿಗೂ ಒಂದು ಅಧಿಷ್ಠಾನವನ್ನು ಅಂಗೀಕರಿಸಬೇಕು, ಆದರೆ ಅಂತಹ ಅಧಿಷ್ಠಾನವಿಲ್ಲ. ಆದ್ದರಿಂದ ಆ ಶ್ರುತಿಗೆ ಬೇರೆ ಅರ್ಥವನ್ನು ಮಾಡಬೇಕು ಎಂಬ ಶಂಕೆಯನ್ನು ಗರ್ಭಸ್ರಾವದಂತೆ ಪರಿಹಾರ ಮಾಡಲು 'ಮಿಥ್ಯಾತ್ವಶ್ರುತಿಸಾಮ್ಯತಃ' ಎಂದು ಹೇಳದೆ 'ಅಸತ್ತ್ವಾಕ್‌ಸಾಮ್ಯತಃ' ಎಂದು ಹೇಳಿದ್ದಾರೆ. ಬ್ರಹ್ಮನಿಗೆ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡಬೇಕಾದರೆ ಅಧಿಷ್ಠಾನದ ಅಪೇಕ್ಷೆಯಿದೆ. ಆದರೆ ಶಶವಿಷಾಣದಂತೆ ಅಸತ್ತ್ವವನ್ನೇ ಪ್ರತಿಪಾದನೆ ಮಾಡುವುದಾದರೆ ಅಧೀಷ್ಠಾನದ ಅಪೇಕ್ಷೆಯಿಲ್ಲಎಂದು ಅಭಿಪ್ರಾಯ. ಅಥವಾ 'ಅಸದೇವ' ಎಂಬಲ್ಲಿ ಇರುವ ಅವಧಾರಣವು ಆರೋಪ್ಯಮಾನವಾದ ವಸ್ತುವನ್ನು ಬಿಟ್ಟು ಯಾವ ಅಧಿಷ್ಠಾನಾದಿಗಳೂ ಇರಲಿಲ್ಲ ಎಂದೇ ಪ್ರತಿಪಾದಿಸುವುದರಿಂದಲೂ ಮತ್ತು ಅನವಸ್ಥಾದೋಷವನ್ನು ಪರಿಹಾರ ಮಾಡುವ ಸಲುವಾಗಿಯೂ ಮತ್ತು 'ಕಿಂ ಸ್ವಿದಾಸೀದಧಿಷ್ಠಾನಂ' ಎಂದು ಶ್ರುತಿಯು ಅಧಿಷ್ಠಾನವನ್ನು ಆಕ್ಷೇಪ ಮಾಡಿ ನಿರಾಕರಿಸುವುದರಿಂದಲೂ ಈ ಭ್ರಮವು ನಿರಧಿಷ್ಠಾನಕ ಭ್ರಮವೇ ಆಗಲಿ ಎಂದು ಸೂಚಿಸುವುದಕ್ಕಾಗಿಯೂ 'ಬ್ರಹ್ಮಾಸತ್ತ್ವಾಕ್' ಎಂದು ಹೇಳಿದ್ದಾರೆ. ನಿನ್ನ ಮತದಲ್ಲಿ ಜಗದಾರೋಪಕ್ಕೆ ಬ್ರಹ್ಮನು ಅಧಿಷ್ಠಾನ. ಶ್ರುತಿಬಲದಿಂದ ಆ ಬ್ರಹ್ಮನಿಗೂ ಆರೋಪವನ್ನು ಅಂಗೀಕಾರ ಮಾಡಿದರೆ ಬ್ರಹ್ಮಾರೋಪಕ್ಕೆ ಇನ್ನೊಂದು ಅಧಿಷ್ಠಾನಾಪೇಕ್ಷೆ ಎಂದು ಹೀಗೆ ಅನವಸ್ಥೆಯು ಬರುತ್ತದೆ. ಆದ್ದರಿಂದ ಬ್ರಹ್ಮಾರೋಪವನ್ನು ನಿರಧಿಷ್ಠಾನವೆಂದು ಒಪ್ಪು ಎಂದು 'ಅಸದೇವ' ಎಂಬ ಶ್ರುತಿಯಿಂದಲೇ ನಿರಧಿಷ್ಠಾನಭ್ರಮವು ಸಿದ್ಧವಾಗುವಾಗ 'ಕಿಂ ಸ್ವಿದಾಸೀದ್' ಎಂಬ ಶ್ರುತಿಯು ಅಧಿಷ್ಠಾನವನ್ನು ಆಕ್ಷೇಪಿಸಿದ ಮೇಲೆ ಬ್ರಹ್ಮಾರೋಪವನ್ನು ನಿರಧಿಷ್ಠಾನಕಭ್ರಮವೆಂದು ಅಂಗೀಕರಿಸು ಎಂದು ಅಭಿಪ್ರಾಯ.

ಮತ್ತು, ನಿರಧಿಷ್ಠಾನಕವಾದ ಕಾರಣದಿಂದ ಬ್ರಹ್ಮಭ್ರಮವು ಇಲ್ಲಎಂದು ಹೇಳುವುದಾದರೆ ಅದೇ ಕಾರಣದಿಂದ ಜಗತ್‌ಭ್ರಮವು ಇಲ್ಲದೇ ಹೋಗಲಿ. ಜಗತ್‌ಭ್ರಮದಲ್ಲಿ ಬ್ರಹ್ಮನು ಅಧಿಷ್ಠಾನನಾಗಿದ್ದಾನೆ ಎಂದು ಹೇಳುವುದಾದರೆ ಬ್ರಹ್ಮಭ್ರಮದಲ್ಲಿ ಜಗತ್ತನ್ನೇ ಅಧಿಷ್ಠಾನವೆಂದು ಅಂಗೀಕರಿಸು. ಪ್ರಲಯಕಾಲದಲ್ಲಿ ಬ್ರಹ್ಮಭ್ರಮವು ಇರುವಾಗ ಜಗತ್ತು ಇಲ್ಲದಿರುವುದರಿಂದ ಜಗತ್ತಿಗೆ ಅಧೀಷ್ಠಾನತ್ವವು ಕೂಡುವುದಿಲ್ಲ ಎಂದು ಹೇಳುವುದಾದರೆ 'ಅಸದೇವ' ಎಂಬ ಶ್ರುತಿಯು ಬ್ರಹ್ಮನಿಗೂ ಸರ್ವದಾ ಅಸತ್ತ್ವವನ್ನು ಹೇಳುವುದರಿಂದ ಬ್ರಹ್ಮನಿಗೂ ಅಧಿಷ್ಠಾನತ್ವವು ಕೂಡುವುದಿಲ್ಲ ಎಂದು ನಮ್ಮ ಉತ್ತರ.

ಅಥವಾ, 'ಅಸದೇವ' ಎಂಬ ಸಾವಧಾರಣ ಶ್ರುತಿಯು ಬ್ರಹ್ಮನಿಗೆ ಸರ್ವಥಾ ಅಭಾವವನ್ನು ಹೇಳಿದಂತೆ 'ಇದಮಗ್ರೇ' ಎಂಬಲ್ಲಿ ಅವಧಾರಣವು ಇಲ್ಲದಿರುವುದರಿಂದ ಜಗತ್ತಿಗೆ ಪ್ರಲಯಕಾಲದಲ್ಲಿ ಸೂಕ್ಷ್ಮಾಕಾರದಿಂದ ಅವಸ್ಥಿತಿಯನ್ನು ಅಂಗೀಕರಿಸಿ ಸ್ಥೂಲಾಕಾರದಿಂದ ಮಾತ್ರ ನಿಷೇಧ ಮಾಡುತ್ತದೆ ಎಂದು ತಿಳಿಯುತ್ತದೆ ಆದ್ದರಿಂದ ಪ್ರಲಯಕಾಲದಲ್ಲಿಯೂ ಸೂಕ್ಷ್ಮರೂಪದಲ್ಲಿರುವ ಜಗತ್ತು ಬ್ರಹ್ಮನಿಗೆ ಅಧಿಷ್ಠಾನವಾಗುತ್ತದೆ, ಆ ಕಾರಣದಿಂದ ನಮಗೆ ಯಾವ ಅನುಪಪತ್ತಿಯೂ ಇಲ್ಲ, ನಿನಗೆ ಅನುಪಪತ್ತಿ ಇದೆ.

ಅಥವಾ, 'ಇದಮಗ್ರೇ' ಎಂಬಲ್ಲಿ ಅಗ್ರಪದದಿಂದ ಹೇಳಲ್ಪಟ್ಟ ಕಾಲವು ಪ್ರಲಯಕಾಲದಲ್ಲಿಯೂ ಇರುವುದರಿಂದ ಕಾಲವೇ ಬ್ರಹ್ಮಭ್ರಮವನ್ನು ಕುರಿತು ಅಧಿಷ್ಠಾನವಾಗಲಿ. 'ಅಗ್ರೇ' ಎಂಬ ಸಪ್ತಮ್ಯಂತ ಪದದಿಂದ ಉಪಸ್ಥಾಪಿತವಾದುದು ಹೇಗೆ ಅಧಿಷ್ಠಾನವಾಗುತ್ತದೆ ಎಂದು ನೀನು ಪ್ರಶ್ನೆಯನ್ನು ಮಾಡಿದರೆ 'ನೇಹನಾನಾಸ್ತಿ ಕಿಂಚನ' ಎಂಬಲ್ಲಿ 'ಇಹ' ಎಂಬ ಸಪ್ತಮ್ಯಂತ ಪದದಿಂದ ಉಪಸ್ಥಾಪಿತನಾದ ಬ್ರಹ್ಮನು ಹೇಗೆ ಅಧಿಷ್ಠಾನನಾಗುತ್ತಾನೆಯೋ ಅದರಂತೆ ಎಂದು ನಮ್ಮ ಉತ್ತರ. ಹಾಗಾದರೆ ಬ್ರಹ್ಮನೇ ಇಲ್ಲದಿದ್ದರೆ ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷವೇ ಉಂಟಾಗುವುದಿಲ್ಲ ಎಂದು ನಮ್ಮ ಮೇಲೆ ದೋಷವನ್ನು ಹೇಳುವುದಾದರೆ ಮೋಕ್ಷವನ್ನು ಪಡೆಯುವ ಚಿದಚಿದಾತ್ಮಕವಾದ ಜಗತ್ತೇ ಇಲ್ಲದಿರುವಾಗ ಮೋಕ್ಷವು ಉಂಟಾಗುವುದಿಲ್ಲ ಎನ್ನುವ ದೋಷವು ನಿನಗೂ ಸಮಾನವಾಗುತ್ತದೆ. ಕೇವಲ ಜಡಾತ್ಮಕ ಜಗತ್ತನ್ನು ನಿಷೇಧ ಮಾಡಿದರೂ ಸಹ 'ಕಾಮಾನ್ನೀಕಾಮರೂಪೀ' ಇತ್ಯಾದಿ ವಾಕ್ಯಗಳು ಹೇಳಿದ ಮೋಕ್ಷವನ್ನು ಹೊಂದುವ ಜೀವನಿಗೆ ಉದ್ದಿಷ್ಟವಾದ ಫಲವು ಇಲ್ಲದಿರುವುದರಿಂದ, ಪ್ರಾಪ್ತಿಯೇ ಉಂಟಾಗದಿರುವುದರಿಂದ ಪುನಃ ಮೋಕ್ಷಾಭಾವ ಪ್ರಸಂಗವು ಬಂದೇ ಬರುತ್ತದೆ.

ನೀನು 'ಸದೇವಸೌಮ್ಯ' ಎಂಬ ಶ್ರುತಿಯ ಬಲದಿಂದ 'ಅಸದೇವ' ಎಂಬ ಶ್ರುತಿಗೆ ಅನ್ಯಾರ್ಥವನ್ನು ಹೇಳುವುದಾದರೆ 'ಅಸದೇವ' ಎಂಬ ಶ್ರುತಿಯು ನಿಷೇಧ ರೂಪವಾಗಿರುವುದರಿಂದ ಅದಕ್ಕೇ ಪ್ರಾಬಲ್ಯವನ್ನು ಹೇಳಿ 'ಸದೇವ' ಎಂಬ ಶ್ರುತಿಗೆ ಅನ್ಯಾರ್ಥವನ್ನು ಹೇಳು. ಒಂದು ಪಕ್ಷ 'ಅಸದೇವ' ಎಂಬ ಶ್ರುತಿಗೆ ಪ್ರಾಬಲ್ಯವನ್ನು ಹೇಳಿದರೆ ಬ್ರಹ್ಮಸ್ವರೂಪಕ್ಕೇ ನಾಶವುಂಟಾಗುತ್ತದೆ ಎಂಬ ಭಯದಿಂದ 'ಸದೇವ' ಎಂಬ ವಿಧಿವಾಕ್ಯವನ್ನೇ ಪ್ರಬಲವೆಂದು ಅಂಗೀಕರಿಸುವುದಾದರೆ ಬ್ರಹ್ಮನ ಮನೆಯ ಕ್ಷಯವಾಗುವುದರಿಂದ ಬ್ರಹ್ಮನ ಮಹಿಮೆಯನ್ನು ಪ್ರತಿಪಾದಿಸುವ ಶ್ರುತಿಯು ಕ್ಷಯವಾಗುವುದರಿಂದ, ಬ್ರಹ್ಮಪೂಜಾಸಾಧನವಾದ ಫಲಪುಷ್ಪಗಳು ಕ್ಷಯವಾಗುವುದರಿಂದ ಮತ್ತು ಗೋಬ್ರಾಹ್ಮಣರ ಕ್ಷಯವಾಗುವುದರಿಂದಲೂ ಅದಕ್ಕೆ ಹೆದರಿ 'ವಿಶ್ವಂ ಸತ್ಯಂ' ಎಂಬ ಶ್ರುತಿಯನ್ನೇ ಗೌರವಿಸಿ ಅದಕ್ಕೇ ಪ್ರಾಬಲ್ಯವನ್ನು ಹೇಳು. 'ನೇಹನಾನಾಸ್ತಿ' ಎಂಬ ವಾಕ್ಯದಲ್ಲಿ 'ನಞ್' ಪದವನ್ನು ಆವೃತ್ತಿ ಮಾಡಿ 'ನಾಸ್ತೀತಿ ನ' ಜಗತ್ತು ಇಲ್ಲ ಎಂಬುವುದು ಇಲ್ಲ ಎಂದು ಅರ್ಥವನ್ನು ಹೇಳು. ಅಧಿಷ್ಠಾನ ಅನುಪಪತ್ತಿಯು ಹೇಗೆ ಮಿಥ್ಯಾರ್ಥಕ್ಕೆ ಬಾಧಕವಾಗುತ್ತದೆಯೋ ಅದರಂತೆ ಆರೋಪ ಅನುಪಪತ್ತಿಯು

ಮಿಥ್ಯಾರ್ಥಕ್ಕೆ ಬಾಧಕವಾಗುವುದರಿಂದ ಜಗನ್ಮಿಥ್ಯಾತ್ವಶ್ರುತಿಗೆ ಅರ್ಥಾಂತರವನ್ನಾದರೂ ಪರಿಕಲ್ಪನೆ ಮಾಡು. ಈ ಎಲ್ಲಾ ಆಕ್ಷೇಪಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಗ್ರಂಥಕಾರರು 'ಬ್ರಹ್ಮಾಸತ್ತ್ವಾಕ್‌ಸಾಮ್ಯತೋಽಪಿ' ಎಂದು ಹೇಳಿದ್ದಾರೆ ಎಂದು ಸುರೋತ್ತಮತೀರ್ಥರು ರಾಜರ ಅಭಿಪ್ರಾಯವನ್ನು ಲೇಶತಃ ಸ್ಪಷ್ಟಪಡಿಸುತ್ತಾರೆ.

**ದಶಧಾ ಬಾಧಬಾಧಾನಾಂ ಪ್ರಮಿತಿರ್ಯಸ್ಯ ಚೇತಸಿ ।**
**ದಶಪ್ರಮತಿನಾಮಾಸೌ ಗುರುರ್ವಿಜಯತೇತರಾಮ್ ॥ ೧೨೧೨ ॥**

**ಅರ್ಥ-** ಯಸ್ಯ = ಯಾವ ಮಧ್ವಾಚಾರ್ಯರ, ಚೇತಸಿ = ಮನಸ್ಸಿನಲ್ಲಿ, ಬಾಧಬಾಧಾನಾಂ = ಜಗದಭಾವಸಂಪಾದಕವಾದ ಬಾಧಕ್ಕೆ ಬಾಧಗಳು, ದಶಧಾ = ಹತ್ತುರೀತಿಯಲ್ಲಿ, ಪ್ರಮಿತಿಃ = ತೋರುತ್ತವೋ, ಅಸೌ = ಅಂತಹ ಈ, ದಶಪ್ರಮತಿನಾಮಾ= ದಶಪ್ರಮತಿನಾಮಕರಾದ, ಗುರುಃ = ನಮ್ಮ ಗುರುಗಳಾದ ಮಧ್ವಾಚಾರ್ಯರು, ವಿಜಯತೇತರಾಮ್ = ಉತ್ಕೃಷ್ಟರಾಗಿದ್ದಾರೆ (ಕಲ್ಯಾದಿ ದೈತ್ಯರನ್ನು ಪರಾಭವಗೊಳಿಸುತ್ತಾರೆ)

**ಅನುವಾದ-** ಯಾವ ಆಚಾರ್ಯರ ಮನಸ್ಸಿನಲ್ಲಿ ಜಗದಭಾವಸಂಪಾದಕ ಬಾಧಕ್ಕೆ ಆರೋಪ್ಯವೇ ಕೂಡದಿರುವುದರಿಂದ ಎಂದು ಮೊದಲಾದ ಹತ್ತುವಿಧವಾದ ಬಾಧಗಳು ಪ್ರಕಾಶಿಸುತ್ತವೆಯೋ, ಅಂತಹ ದಶಪ್ರಮತಿನಾಮಕರಾದ ಈ ನಮ್ಮ ಗುರುಗಳಾದ ಮಧ್ವಾಚಾರ್ಯರು ಉಳಿದ ಎಲ್ಲ ಜೀವರಿಗಿಂತ ಉತ್ಕೃಷ್ಟರಾಗಿದ್ದಾರೆ. (ಕಲ್ಯಾದಿ ದೈತ್ಯರನ್ನು ಪರಾಭವಗೊಳಿಸುತ್ತಾರೆ)

**ಭಾವವಿಲಾಸಿನೀ–** ಇದಾನೀಂ ಸ್ವರಚಿತಮಾಲಾಂ ಶ್ರೀಮದಾಚಾರ್ಯಚರಣೇ ಸಮರ್ಪಯತಿ ॥ **ದಶಧೇತಿ** ॥ ಬಾಧಬಾಧಾನಾಂ ಬಾಧಯೋಃ ಮೂಲತೋಽಗ್ರತಶ್ಚ ಜಗದಭಾವಸಂಪಾದಕಯೋರಾರೋಪನಿಷೇಧಯೋಃ ಬಾಧಾನಾಂ ಬಾಧಕಯುಕ್ತೀನಾಂ ಪ್ರಮಿತಿರ್ದಶಧಾ ಚ ಯಸ್ಯ ಚೇತಸಿ ಚಕಾಸ್ತಿ । ಬಾಧಕಯುಕ್ತೀನಾಂ ದಶವಿಧತ್ವಾತ್ ತದ್ವಿಷಯಕಪ್ರಮಿತೇರಪಿ ದಶವಿಧತ್ವಮ್ । ಶತಸಹಸ್ರಾದಿಷ್ವಪ್ಯವಾಂತರವಿಭಾಗವಿವಕ್ಷಯಾ ದಶತ್ವೇನಾಪಿ ಗಣಯಿತುಂ ಶಕ್ಯತ್ವಾತ್ ದಶಧೇತ್ಯನೇನೈವ ಶತಧಾ ಸಹಸ್ರಧೇತ್ಯಾದಿಕಮಪಿ ದಶಪ್ರಮತಿಪೂರ್ಣಪ್ರಜ್ಞನಾಮಾರ್ಥಪರ್ಯಾಲೋಚನಯಾ ಗ್ರಾಹ್ಯಮ್ । ಗ್ರಂಥಕಾರಸ್ತು ಸಮುದ್ರಜಲಾತ್ಪೂರಿತಘಟಜಲವತ್ ಆಚಾರ್ಯಕೃಪಯಾ ಸ್ವಮನಸಿ ಪ್ರತಿಭಾತದಶ-ಸಂಖ್ಯಾಕಯುಕ್ತಿಸಂಗ್ರಹಾಯ ಶ್ರೌತದಶಪ್ರಮತಿನಾಮ್ನೈವ ತಚ್ಚಿತ್ತಪ್ರತಿಭಾತಾನಂತಾರ್ಥಾಂಶ್ಚ ಸಂಗೃಹ್ಯ ಸ್ತೋತುಂ ದಶಧೇತ್ಯೇವೋಕ್ತವಾನ್ । ಅತ ಏವ ದಶಪ್ರಮತಿನಾಮಾಸೌ ಗುರುಃ । ದೂರಸ್ಥಬದರಿಕಾಶ್ರಮಸ್ಥಿತತ್ವಾದ್ವಾ ಸ್ವಸ್ಯ ಅಸೌ ಶ್ವಾಸ ಏವ ಸ್ಥಿತತ್ವಾದ್ವಾಽಸೌ ಗುರುರಿತ್ಯುಕ್ತಮ್ । ವಿಜಯತೇತರಾಂ ಸಕಲಜಗಜ್ಜೀವನಹೇತುತ್ವೇನ ಸಮಸ್ತಾಧಿಕಾರಿಸಮುದಾಯಾದಪ್ಯತಿ-ಶಯೇನ ವಿಜಯತೇ । ಉತ್ಕೃಷ್ಟೋ ವರ್ತತೇ । ಸ್ವಭಕ್ತಶ್ರೇಯಃ ಪ್ರತಿಬಂಧಕಕಲ್ಯಾದೀಂಶ್ಚಾತಿ-ಶಯೇನಾಭಿಭಾವಯತಿ ಚೇತ್ಯರ್ಥಃ ॥ ೧೨೧೨ ॥

**ವಿವರಣೆ-** ಈಗ ಹಿಂದಿನ ಐದು ಶ್ಲೋಕಗಳಿಂದ ತಾವು ರಚಿಸಿದ ಮಾಲೆಯನ್ನು ಶ್ರೀಮಧ್ವಾಚಾರ್ಯರ ಪಾದಗಳಿಗೆ ಸಮರ್ಪಿಸುತ್ತಾರೆ. ಜಗದ್‌ಬಾಧಕ್ಕೆ ಮೂಲವಾದ ಆರೋಪವು ಹತ್ತುವಿಧದಲ್ಲಿ ಕೂಡುವುದಿಲ್ಲ. ಅದರಂತೆಯೇ ಬಾಧವೂ ಸಹ ಹತ್ತುವಿಧದಲ್ಲಿ ಕೂಡುವುದಿಲ್ಲ ಎಂದು ಹೇಳಿ ಪರಾಭಿಮತವಾದ ಜಗದಭಾವಸಂಪಾದಕ ಬಾಧಕ್ಕೆ ಹತ್ತು ಹತ್ತು ರೀತಿಯಲ್ಲಿ ಬಾಧವನ್ನು ಹೇಳಿದ್ದಾರೆ. ಆದ್ದರಿಂದ ದಶಪ್ರಮತಿ ಎಂಬ ನಾಮವು ಸಾರ್ಥಕವಾಗುತ್ತದೆ. ದಶ ಶಬ್ದಕ್ಕೆ ಹತ್ತು ಎಂದು ಮಾತ್ರ ಅರ್ಥವಲ್ಲ, ಶತ, ಸಹಸ್ರ, ಅಮಿತ ಮೊದಲಾದ ಅನೇಕ ಅರ್ಥಗಳೂ ಇವೆ. ಜಗತ್ತಿನ ಬಾಧಕ್ಕೆ ಆಚಾರ್ಯರ ಮನಸ್ಸಿನಲ್ಲಿ ಇನ್ನೂ ಅನೇಕಾನೇಕ ಬಾಧಗಳು ತೋರುತ್ತವೆ ಎಂಬುದನ್ನು ದಶಧಾ ಎಂಬ ಶಬ್ದದಿಂದ ಸೂಚಿಸುತ್ತಾರೆ. ಆಚಾರ್ಯರ ಮನಸ್ಸಿನಲ್ಲಿ ಇನ್ನೂ ಅನೇಕ ದೋಷಗಳು ಪ್ರಕಾಶಿಸಿದರೂ ತಮಗೆ ಆಚಾರ್ಯರ ಕೃಪೆಯಿಂದ ತಮ್ಮ ಮನಸ್ಸಿನಲ್ಲಿ ತೋರಿದ ದೋಷಗಳು ಹತ್ತು ಎಂಬುದಾಗಿ ತಿಳಿಸಿ ಸಮುದ್ರಜಲದಿಂದ ಅಲ್ಪಜಲವನ್ನು ಎತ್ತಿದಂತೆ ಗ್ರಂಥದಲ್ಲಿ ನಿವೇಶನ ಮಾಡಿ ದಶಶಬ್ದಸೂಚಿತವಾದ ಆಚಾರ್ಯಮನಸ್ಸಿನಲ್ಲಿ ಹೊಳೆಯುವ ಅನಂತ ದೋಷಗಳನ್ನು ಸಂಗ್ರಹಿಸಿ, ದಶಧಾ ಎಂಬ ಶಬ್ದದಿಂದಲೇ ಅವರನ್ನು ಸ್ತೋತ್ರ ಮಾಡುತ್ತಾರೆ. ದೂರದಲ್ಲಿ ಬದರಿಕಾಶ್ರಮದಲ್ಲಿ ಆಚಾರ್ಯರು ಇನ್ನೂ ಇರುವುದರಿಂದ, ಅಥವಾ ಶ್ವಾಸಮಂತ್ರಜಪವನ್ನು ಮಾಡುತ್ತಾ ತಮ್ಮ ಹೃದಯದಲ್ಲೇ ಇರುವುದರಿಂದ ಆಚಾರ್ಯರನ್ನು ಗುರುಗಳೆಂದು ಹೇಳಿದ್ದಾರೆ. 'ವಿಜಯತೇತರಾಂ' ಎಂದರೆ ಸಕಲ ಜಗತ್ತನ್ನು ಉಜ್ಜೀವನಗೊಳಿಸುವುದರಿಂದ ಸಮಸ್ತ ಅಧಿಕಾರಿವರ್ಗದಲ್ಲಿ ಉತ್ತಮರಾಗಿ ಇದ್ದಾರೆ ಎಂದೂ, ಕಲ್ಯಾದಿದೈತ್ಯರನ್ನು ಪರಾಭವಗೊಳಿಸುತ್ತಾರೆ ಎಂದೂ ಅರ್ಥ.

ಸ್ವಪೃಷ್ಠಚಾಲನೇ ಪಕ್ಷೀ ತ್ರಿಲೋಕೀಂ ಮನುತೇ ಚಲಾಮ್ ।
ಕಿಂಚಿತ್ ಮಿಥ್ಯೇತ್ಯರ್ಥವಚ್ಚ ಸರ್ವಂ ಮಿಥ್ಯಾ ಜಗತ್ ಕಿಲ ॥ ೧೨೧೩ ॥

**ಅರ್ಥ-** ಪಕ್ಷೀ = ಒಂದು ಸಣ್ಣ ಪಕ್ಷಿಯು, ಸ್ವಪೃಷ್ಠಚಾಲನೇ = ತನ್ನ ಪುಕ್ಕವು ಅಲುಗಾಡಿದರೆ, ತ್ರಿಲೋಕೀಂ = ಮೂರುಲೋಕವೇ, ಚಲಾಮ್ ಮನುತೇ = ಅಲುಗಾಡುತ್ತಿದೆ ಎಂದು ತಿಳಿಯುತ್ತದೆ. ಕಿಂಚಿತ್ = ಅರ್ಥಕ್ರಿಯಾಕಾರಿಯಲ್ಲದ ಯಾವುದೋ ಒಂದು ಶುಕ್ತಿರಜತವು, ಮಿಥ್ಯೇತಿ = ಮಿಥ್ಯ ಎಂಬ ಕಾರಣದಿಂದ, ಅರ್ಥವತ್ = ಅರ್ಥಕ್ರಿಯಕಾರಿಯಾದ, ಸರ್ವಂ ಜಗತ್ ಚ = ಎಲ್ಲಾ ಜಗತ್ತೂ ಕೂಡ, ಮಿಥ್ಯಾತ್ ಕಿಲ = ಮಿಥ್ಯಯಾಗುವುದಷ್ಟೇ!

**ಅನುವಾದ-** ಒಂದು ಸಣ್ಣ ಪಕ್ಷಿಯು ತನ್ನ ಪುಕ್ಕವು ಅಲುಗಾಡಿದರೆ ಮೂರು ಲೋಕಗಳೂ ಅಲುಗಾಡುತ್ತಿವೆ ಎಂದು ತಿಳಿಯುತ್ತದೆ. ಅರ್ಥಕ್ರಿಯಾಕಾರಿಯಲ್ಲದ ಶುಕ್ತಿರಜತರೂಪವಾದ ಯಾವುದೋ ಒಂದು ವಸ್ತುವು ಮಿಥ್ಯೆಯಾದರೆ ಅರ್ಥಕ್ರಿಯಾಕಾರಿಯಾದ ಸರ್ವಜಗತ್ತೂ ಮಿಥ್ಯಯಾಗುವುದಷ್ಟೇ!

**ಭಾವವಿಲಾಸಿನೀ**–ಇದಾನೀಂ ದುರ್ನೀತಿವಿಷಯತಯಾ ಚ ಮಿಥ್ಯಾಮತಮುಪಹಸತಿ ॥ **ಸ್ವಪೃಷ್ಠೇತಿ** ॥ ಪಕ್ಷೀ ಕ್ಷಣೇ ಕ್ಷಣೇ ಪೃಷ್ಠಚಾಲನಸ್ವಭಾವಃ ಸೂಕ್ಷ್ಮಪಕ್ಷಿವಿಶೇಷಃ । ಕಿಂಚಿತ್ ಶುಕ್ತಿರಜತಾದಿಕಮ್ । ಕಿಂಚಿದಿತ್ಯನೇನಾರ್ಥಕ್ರಿಯಾನರ್ಹತ್ವಂ ಚ ಸೂಚಯತಿ ॥ ೧೨೧೩ ॥

**ವಿವರಣೆ**- ಈಗ ಮಿಥ್ಯಾತ್ವಮತವು ದುರ್ನೀತಿಯ ವಿಷಯವಾದದ್ದು ಎಂದು ಅಪಹಾಸವನ್ನು ಮಾಡುತ್ತಾರೆ. ಯಾವುದೋ ಒಂದು ಕಡೆಯಲ್ಲಿ ಪ್ರತ್ಯಕ್ಷಗೋಚರವಾದ ಒಂದು ಅರ್ಥಮಿಥ್ಯೆಯಾದರೆ, ಸಮಸ್ತ ಜಗತ್ತನ್ನು ಮಿಥ್ಯೆ ಎಂದು ಹೇಳುವುದು ದುರ್ನೀತಿ ಎಂದು ಅಭಿಪ್ರಾಯ.

ಏಕಯೋಗೇ ಪರತ್ಯಾಗಸ್ತುಂದಿಲಾಧರಚುಂಬನೇ ।
ಮಿಥ್ಯೇತ್ಯಸತ್ತ್ವಂ ನ ಸ್ವಸ್ಯಾನಿರ್ವಾಚ್ಯತ್ವಂ ನ ಕಸ್ಯಚಿತ್ ॥ ೧೨೧೪ ॥

**ಅರ್ಥ**- ತುಂದಿಲಾಧರ ಚುಂಬನೇ = ತುಂದಿಲನು (ದೊಡ್ಡಹೊಟ್ಟೆಯ ವ್ಯಕ್ತಿಯು) ಅಧರ ಚುಂಬನೇ = ಅಧರ ಚುಂಬನವನ್ನು ಮಾಡಲು ಪ್ರಯತ್ನಿಸಿದಾಗ, ಏಕಯೋಗೇ = ಒಂದರ ಸಂಬಂಧವುಂಟಾದರೆ, ಅಪರತ್ಯಾಗಃ = ಇನ್ನೊಂದು ಸಂಬಂಧವು ತಪ್ಪಿಹೋಗುತ್ತದೆ, ಮಿಥ್ಯೇತಿ = ಮಿಥ್ಯಾ ಎಂಬ ಪದಕ್ಕೆ, ಅಸತ್ತ್ವಂ = ಅಸತ್ತ್ವ ಎನ್ನುವ ಅರ್ಥವು, ನ ಸ್ವಸ್ಯ= ತನಗೆ ಸಮ್ಮತವಲ್ಲ, ಅನಿರ್ವಾಚ್ಯತ್ವಂ = ಅನಿರ್ವಾಚ್ಯತ್ವ ಎಂಬ ಅರ್ಥವು, ಕಸ್ಯಚಿತ್ ನ = ಯಾರಿಗೂ ಸಮ್ಮತವಲ್ಲ.

ಅನುವಾದ- **ತುಂದಿಲನಾದ ವ್ಯಕ್ತಿಯು ಸುರತವನ್ನು ಮಾಡುತ್ತಾ, ಅಧರಚುಂಬನದಲ್ಲಿ ಪ್ರಯತ್ನಿಸಿದರೆ ಒಂದರ ಸಂಬಂಧವುಂಟಾದರೆ ಇನ್ನೊಂದರ ಸಂಬಂಧವು ತಪ್ಪಿಹೋಗುತ್ತದೆ. ಮಿಥ್ಯಾ ಎಂಬ ಪದಕ್ಕೆ ಅಸತ್ ಎನ್ನುವ ಅರ್ಥವು ತನಗೆ ಸಮ್ಮತವಲ್ಲ ಅನಿರ್ವಾಚ್ಯ ಎಂಬ ಅರ್ಥವು ಯಾರಿಗೂ ಸಮ್ಮತವಲ್ಲ.**

**ಭಾವವಿಲಾಸಿನೀ**– ತುಂದಿಲಸ್ಯ ಬೃಹತ್ಕುಕ್ಷೇಃ ಪುರುಷಸ್ಯ ॥ ೧೨೧೪ ॥

**ವಿವರಣೆ**- ಮಿಥ್ಯಾ ಎಂಬ ಶಬ್ದಕ್ಕೆ ಅಸತ್ ಎಂದು ಅರ್ಥವನ್ನು ಮಾಡಿದರೆ, ಮಿಥ್ಯಾತ್ವವನ್ನು ತನ್ನನ್ನು ಬಿಟ್ಟು ಹೋಗುತ್ತದೆ. ಏಕೆಂದರೆ ತನ್ನ ರೀತಿಯಲ್ಲಿ ಮಿಥ್ಯಾತ್ವ ಎಂದರೆ ಅಸತ್ವವಲ್ಲ. ಮಿಥ್ಯಾ ಶಬ್ದಕ್ಕೆ ಅನಿರ್ವಾಚ್ಯ ಎಂದು ಅರ್ಥವನ್ನು ಹೇಳಿದರೆ ಆ ಶಬ್ದವು ಎಲ್ಲ ವಾದಿಗಳನ್ನೂ ಬಿಡುತ್ತದೆ. ಏಕೆಂದರೆ ಅನಿರ್ವಾಚ್ಯ ಎಂಬ ವಸ್ತುವನ್ನೇ ಯಾವ ವಾದಿಗಳೂ ಅಂಗೀಕರಿಸಿಲ್ಲ. ಹೀಗೆ ಒಂದು ಅರ್ಥವನ್ನು ಹಿಡಿದುಕೊಳ್ಳಲು ಹೋದರೆ, ಇನ್ನು ವಾದ್ಯದಂತರ ಸಮ್ಮತಿರೂಪವಾದ ಇನ್ನೊಂದು ಅರ್ಥವು ಅಳಿಸಿಹೋಗುವುದರಿಂದ ಇಲ್ಲಿ ತುಂದಿಲಸುರತನ್ಯಾಯವು ಅನ್ವಯಿಸುತ್ತದೆ ಎಂದು ಅಭಿಪ್ರಾಯ.

ನೀಚೋ ವಾಚಾ ಬಹು ವದೇದ್ ದದಾತ್ಯತ್ಯಲ್ಪಮೇವ ಹಿ ।
ಘುಷ್ಟೋಽನಿರ್ವಾಚ್ಯಶಬ್ದಾರ್ಥೋ ದ್ವಿಧರ್ಮಾವಾಚ್ಯತಾ ಕಿಲ ॥ ೧೨೧೫ ॥

**ಅರ್ಥ-** ನೀಚೋ = ನೀಚನಾದವನು, ವಾಚಾ = ತನ್ನ ಮಾತಿನಿಂದ, ಬಹು ವದೇತ್ = ಬಹಳವಾಗಿ ಮಾತನಾಡುತ್ತಾನೆ. (ಬಹಳವನ್ನು ಕೊಡುವುದಾಗಿ ಮಾತನಾಡುತ್ತಾನೆ) ಅತ್ಯಲ್ಪಮೇವ = ಆದರೆ ಅತ್ಯಲ್ಪವಾದ ವಸ್ತುವನ್ನೇ, ದದಾತಿ ಹಿ = ಕೊಡುತ್ತಾನಷ್ಟೇ. ಘುಷ್ಟ = ಘುಷ್ಟಃ ಪರವಾದಿಗಳಿಂದ ಘೋಷಿಸಲ್ಪಟ್ಟ, ಅನಿರ್ವಾಚ್ಯಶಬ್ದಾರ್ಥಃ= ಅನಿರ್ವಾಚ್ಯಶಬ್ದದ ಅರ್ಥವು, ದ್ವಿಧರ್ಮಾವಾಚ್ಯತಾ ಕಿಲ= ಎರಡು ಧರ್ಮಗಳಿಂದ ವಾಚ್ಯನಲ್ಲ ಎಂದೇ ಆಗುವುದಷ್ಟೇ!

**ಅನುವಾದ-** ನೀಚನು ತನ್ನ ಮಾತಿನಲ್ಲಿ ಬಹಳವಾಗಿ ಕೊಡುವುದಾಗಿ ಹೇಳುತ್ತಾನೆ. ಆದರೆ ಅಲ್ಪವನ್ನು ಮಾತ್ರ ಕೊಡುತ್ತಾನೆ ಎಂಬುದು ಪ್ರಸಿದ್ಧವಾದುದು. ಪರವಾದಿಗಳು ತಮ್ಮ ಶಾಸ್ತ್ರದಲ್ಲಿಯೂ ಮತ್ತು ಲೋಕದಲ್ಲಿಯೂ ಘೋಷಣೆ ಮಾಡಿದ ಅನಿರ್ವಾಚ್ಯ ಶಬ್ದವು ಸತ್ತ್ವಾಸತ್ತ್ವರೂಪವಾದ ಎರಡು ಧರ್ಮಗಳು ಇವೆಯೆಂದು ವಾಚ್ಯವಾಗುವುದಿಲ್ಲ ಎಂದಿಷ್ಟೇ ಅರ್ಥವನ್ನು ಕೊಡುವುದಷ್ಟೇ !

**ಭಾವವಿಲಾಸಿನೀ–** ಘುಷ್ಟಃ ಸ್ವಶಾಸ್ತ್ರೇ ಲೋಕೇ ಚಾಘೋಷಿತಃ ದ್ವಿಧರ್ಮಾಭ್ಯಾಂ ಸತ್ತ್ವಾಸತ್ತ್ವಾಖ್ಯಧರ್ಮಾಭ್ಯಾಮ್ । ಅನಿರ್ವಾಚ್ಯಶಬ್ದಾರ್ಥಪರ್ಯಾಲೋಚನಾಯಾಂ ಬಹುಪ್ರಕಾರೇಣಾಪಿ ನಿರ್ವಚನಾನರ್ಹತ್ವಂ ಪ್ರತೀಯತೇ । ಅತ ಏವ ವಾಚಾ ಬಹುವದೇದಿತ್ಯುಕ್ತಮ್। ನಹಿ ಬಹುಜನಾಕೀರ್ಣಗ್ರಾಮಸ್ಯ ಜನದ್ವಯರಾಹಿತ್ಯೇನ ನಿರ್ಜನತ್ವಂ ಕೋಽಪಿ ವಕ್ತೀತಿ ಭಾವಃ ॥ ೧೨೧೫ ॥

**ವಿವರಣೆ-** ಅನಿರ್ವಾಚ್ಯ ಎಂಬ ಶಬ್ದಕ್ಕೆ ಸರ್ವಥಾ ನಿರ್ವಚನಕ್ಕೆ ಅಯೋಗ್ಯವಾದದ್ದು ಎಂದೇ ಶಬ್ದದಿಂದ ತೋರುವ ಅರ್ಥ. ಆದರೆ ಅದ್ವೈತಿಗಳು ಹೇಳುವ ಅರ್ಥ ಹಾಗಲ್ಲ. ಸತ್ತ್ವೇನ ಅಸತ್ತ್ವೇನ ಚ ಅನಿರ್ವಾಚ್ಯತ್ವ, ಸತ್ ಎಂದಾಗಲೀ, ಅಥವಾ ಅಸತ್ ಎಂದಾಗಲೀ ಹೇಳಲು ಬರದಿರುವುದು ಎಂದು ಹೇಳುತ್ತಾರೆ. ಇದೂ ಒಂದು ದುರ್ನೀತಿ, ಬಹುಜನರಿಂದ ತುಂಬಿರುವ ಒಂದು ಗ್ರಾಮದಲ್ಲಿ ಇಬ್ಬರು ವ್ಯಕ್ತಿಗಳು ಇಲ್ಲದ ಮಾತ್ರಕ್ಕೇ ಆ ಗ್ರಾಮವನ್ನು ನಿರ್ಜನವೆಂದು ಹೇಳುವುದಿಲ್ಲ. ಅದರಂತೆ ಇನ್ನೂ ಅನೇಕ ಧರ್ಮಗಳಿಂದ ವಾಚ್ಯವಾದ ಜಗತ್ತು ಸತ್ತ್ವ ಮತ್ತು ಅಸತ್ತ್ವರೂಪವಾದ ಎರಡು ಧರ್ಮಗಳು ಇಲ್ಲವೆಂಬ ಕಾರಣದಿಂದ ಅನಿರ್ವಾಚ್ಯ ಎಂದು ಕರೆಸಿಕೊಳ್ಳಲ್ಪಡುವುದಿಲ್ಲ.

ಸ್ವಾಂಗಂ ಸ್ವಯಂ ಹಿ ಚ್ಛಿಂದಂತಿ ಪಿಶಾಚಗ್ರಸ್ತಚೇತನಾಃ ।
ಸತ್ತ್ವಾಭಾವೇ ಹ್ಯಸತ್ತ್ವಂ ಸ್ಯಾತ್ತಚ್ಚ ಪ್ರಚ್ಯವತೇ ಕಿಲ ॥ ೧೨೧೬ ॥

**ಅರ್ಥ-** ಪಿಶಾಚಗ್ರಸ್ತಚೇತನಾಃ = ಪಿಶಾಚಿಯು ಹಿಡಿದ ಪುರುಷರು, ಸ್ವಾಂಗಂ = ತಮ್ಮ ದೇಹವನ್ನೇ, ಸ್ವಯಂ = ತಾವೇ, ಚ್ಛಿಂದಂತಿ ಹಿ = ಕತ್ತರಿಸಿಕೊಳ್ಳುತ್ತಾರಷ್ಟೇ, ಸತ್ತ್ವಾಭಾವೇ = ಸತ್ತ್ವವಿಲ್ಲವೆಂದರೆ, ಅಸತ್ತ್ವಂ ಸ್ಯಾತ್ ಹಿ = ಅಸತ್ತ್ವವೇ ಉಂಟಾಗುವುದಷ್ಟೇ, ತಚ್ಚ = ಆ ಅಸತ್ತ್ವವೂ ಕೂಡ, ಪ್ರಚ್ಯವತೇ ಕಿಲ = ಇಲ್ಲವಾಗುವುದಷ್ಟೇ.

**ಅನುವಾದ-** ಪಿಶಾಚಗ್ರಸ್ತರಾದ ಜೀವರು ತಮ್ಮ ಅವಯವಗಳನ್ನು ತಾವೇ ಕತ್ತರಿಸಿಕೊಳ್ಳುತ್ತಾರೆ. ಸತ್ತ್ವಾಭಾವವನ್ನು ಹೇಳಿದರೆ ಅಸತ್ತ್ವವೇ ಪ್ರಾಪ್ತವಾಗುತ್ತದೆ. ಆ ಅಸತ್ತ್ವವೂ ಕೂಡ ಪ್ರಚ್ಯುತವಾಗುವುದಷ್ಟೆ?

**ಭಾವವಿಲಾಸಿನೀ–** ತತ್ ಸತ್ತ್ವಾಭಾವರೂಪಮಸತ್ತ್ವಮ್ । ಸದ್ವಿಲಕ್ಷಣತ್ವೇನ ಕಥಿತಸ್ಯ ಜಗತಃ ಪುನರಸದ್ವಿಲಕ್ಷಣತ್ವೇನ ಸ್ವೋಕ್ತಾರ್ಥಸ್ಯ ಸ್ವೇನೈವ ಛೇದಾತ್ ಉಕ್ತಪಿಶಾಚ ಏವ ತಸ್ಯ ನಿದರ್ಶನಮಿತಿ ಭಾವಃ ॥ ೧೨೧೬ ॥

**ವಿವರಣೆ-** ಸತ್ತ್ವಾಭಾವವನ್ನು ಹೇಳಿದರೆ ಅಸತ್ತ್ವವು ಉಂಟಾಗುತ್ತದೆ. ಅದು ತಮ್ಮ ಕರ್ಮದಿಂದ ಸಂಪಾದಿಸಿದ, ತಮ್ಮ ಶರೀರವಿದ್ದಂತೆ, ಅಸದ್ವಿಲಕ್ಷಣಾ ಎಂದು ಹೇಳಿ, ಪುನಃ ಅಸತ್ತ್ವವನ್ನು ನಿಷೇಧ ಮಾಡಿದರೆ ತಮ್ಮ ಶರೀರವನ್ನು ತಾವೇ ಕತ್ತರಿಸಿಕೊಂಡಂತಾಗುತ್ತದೆ. ಇದೂ ಒಂದು ದುರ್ನೀತಿ ಎಂದು ಅಭಿಪ್ರಾಯ.

**ದೋಷಃ ಕಿಂ ಕಿಂ ನ ಕುರುತೇ ಯೋ ಜಾತಿಂ ಹರತಿ ಕ್ಷಣಾತ್ ।**
**ಅವಿದ್ಯಮಾನಮೇವಾಕ್ಷ್ಣಾ ಕಾಚೇ ಸತಿ ಯದೀಕ್ಷ್ಯತೇ ॥ ೧೨೧೭ ॥**

**ಅರ್ಥ-** ಯತ್= ಯಾವ ಕಾರಣದಿಂದ, ಕಾಚೇ ಸತಿ= ಕಾಚರೂಪದೋಷವಿರುವಾಗ, ಅಕ್ಷ್ಣಾ= ಚಕ್ಷುಸ್ಸಿನಿಂದ, ಅವಿದ್ಯಮಾನಮೇವ= ಅವಿದ್ಯಮಾನವಾದುದೇ, ಈಕ್ಷ್ಯತೇ= ನೋಡಲ್ಪಡುತ್ತದೆಯೋ, ಯಃ= ಯಾವ ದೋಷವು, ಜಾತಿಂ= ಬ್ರಾಹ್ಮಣತ್ವಾದಿ ಜಾತಿಯನ್ನು, ಕ್ಷಣಾತ್= ಒಂದು ಕ್ಷಣದಲ್ಲಿ, ಹರತಿ= ನಾಶಮಾಡುತ್ತದೆಯೋ, ದೋಷಃ= ಅಂತಹ ದೋಷವು, ಕಿಂ ಕಿಂ ನ ಕುರುತೇ= ಏನೇನು ಮಾಡುವುದಿಲ್ಲ?

**ಅನುವಾದ-** ಯಾವ ಕಾರಣದಿಂದ ಕಾಚರೂಪದೋಷವು ಇದ್ದರೆ ಕಣ್ಣು ಅವಿದ್ಯಮಾನವಾದುದನ್ನೇ ನೋಡುತ್ತದೆಯೋ ಮತ್ತು ಯಾವ ದೋಷವು ಬ್ರಾಹ್ಮಣತ್ವಾದಿ ಜಾತಿಯನ್ನು ತಕ್ಷಣದಲ್ಲಿಯೇ ನಾಶಮಾಡುತ್ತದೆಯೋ, ಅಂತಹ ದೋಷವು ಯಾವ ಕಾರ್ಯವನ್ನು ಮಾಡುವುದಿಲ್ಲ?

**ಭಾವವಿಲಾಸಿನೀ–** ಅಸದಪರೋಕ್ಷತೋ ನ ಪ್ರತೀಯತ ಇತಿ ಪರಸ್ಯ ಮತಮ್ । ತದಪಿ ದೋಷಶಕ್ತ್ಯಾ ಘಟತ ಇತಿ ಲೋಕನೀತ್ಯೈವ ಪ್ರದರ್ಶಯತಿ ॥ **ದೋಷ ಇತಿ** ॥ ಯಃ ಪಂಚ- ಮಹಾಪಾತಕಾಖ್ಯೋ ದೋಷಃ । ಜಾತಿಂ ನಿತ್ಯತ್ವೇನಾಭಿಮತಾಂ ಬ್ರಾಹ್ಮಣತ್ವಾದಿಜಾತಿಮ್ । ಬ್ರಹ್ಮಘ್ನಸ್ಯ ಪತಿತತ್ವೇನೈವ ಲೋಕೇ ವ್ಯವಹಾರಾತ್ । ತಾದೃಶದೋಷಸ್ಯಾವಿದ್ಯ- ಮಾನಾರ್ಥಪ್ರತ್ಯಾಯಕತ್ವಂ ಕಿಮು ವಕ್ತವ್ಯಮಿತಿ ಭಾವಃ । ಯತ್ ಯಸ್ಮಾತ್ ॥ ೧೨೧೭ ॥

**ವಿವರಣೆ-** ಅಸತ್ತಾದ ಪದಾರ್ಥವು ಅಪರೋಕ್ಷಜ್ಞಾನಕ್ಕೆ ವಿಷಯವಾಗುವುದಿಲ್ಲ ಎಂದು ಪರರ ಮತ. ಆದರೆ ದೋಷದ ಸಾಮರ್ಥ್ಯದಿಂದ ವಿಷಯವಾಗುತ್ತದೆ ಎಂಬುದನ್ನು

ಲೋಕನೀತಿಯಿಂದಲೇ ಇಲ್ಲಿ ನಿರೂಪಿಸುತ್ತಾರೆ. ಪಂಚಮಹಾಪಾತಕಾದಿ ದೋಷಗಳು ನಿತ್ಯವೆಂದು ಪರಿಗಣಿಸಲ್ಪಡುವ ಬ್ರಾಹ್ಮಣತ್ವಾದಿ ಜಾತಿಯನ್ನೇ ನಾಶಮಾಡುತ್ತದೆ. ಏಕೆಂದರೆ ಬ್ರಹ್ಮಹತ್ಯೆಯನ್ನು ಮಾಡಿದ ಬ್ರಾಹ್ಮಣನು ಪತಿತನೆಂದೇ ಲೋಕವ್ಯವಹರಿಸುತ್ತದೆ. ಅಂತಹ ದೋಷವು ಅವಿದ್ಯಮಾನವಾದ ಅರ್ಥವನ್ನು ತೋರಿಸಿಕೊಡುವುದರಲ್ಲಿ ಏನು ಆಶ್ಚರ್ಯ ಎಂದು ಅಭಿಪ್ರಾಯ.

**ಅದೃಷ್ಟಃ ಶ್ವೈವ ಕಿಂ ದೃಷ್ಟೌ ಶ್ವಾಶ್ವಯೋಃ ಸ್ಯಾದ್ವಿಲಕ್ಷಣಃ ।**
**ಅಸನ್ನೃಶೃಂಗಂ ದೃಷ್ಟಂ ಚೇದ್ ಭಿನ್ನಂ ಸದಸತೋಃ ಕಿಲ ॥ ೧೨೧೮ ॥**

**ಅರ್ಥ-** ಅದೃಷ್ಟಃ= ಮೊದಲು ದೃಷ್ಟವಾಗದಿದ್ದ, ಶ್ವಾ ಏವ= ನಾಯಿಯೇ, ದೃಷ್ಟೌ= ದೃಷ್ಟವಾದರೆ, ಶ್ವಾಶ್ವಯೋಃ= ನಾಯಿ ಮತ್ತು ಕುದುರೆಗಳಿಗಿಂತ, ವಿಲಕ್ಷಣಃ= ವಿಲಕ್ಷಣವಾಗಿ, ಸ್ಯಾತ್ ಕಿಂ= ಆಗುತ್ತದೆಯೇ? ಅಸತ್= ಅಸತ್ತಾದ, ನೃಶೃಂಗಂ= ನರವಿಷಾಣವು, ದೃಷ್ಟಂ ಚೇದ್= ದೃಷ್ಟವಾದರೆ ಅದು, ಸದಸತೋಃ= ಸತ್ ಮತ್ತು ಅಸತ್ತುಗಳಿಗಿಂತ, ಭಿನ್ನಂ ಕಿಲ= ಭಿನ್ನವಷ್ಟೆ!

**ಅನುವಾದ-** ಮೊದಲು ನೋಡದಿದ್ದ ನಾಯಿಯು ನೋಡಲ್ಪಟ್ಟರೆ ಅದು ನಾಯಿ ಮತ್ತು ಕುದುರೆಗಳಿಗಿಂತ ವಿಲಕ್ಷಣವಾಗುತ್ತದೆಯೇ? ಅಸತ್ತಾದ ನರವಿಷಾಣವು ದೃಷ್ಟವಾದರೆ ಸದಸತ್ತುಗಳಿಗಿಂತ ಭಿನ್ನವಾಗುವುದಷ್ಟೆ!

**ಭಾವವಿಲಾಸಿನೀ–** ಪ್ರಾಗಸದೇವ ಶಶಶೃಂಗಂ ದರ್ಶನೇ ಸತಿ ಸದಸದ್ವಿಲಕ್ಷಣಂ ಜಾಯತ ಇತಿ ಪರಪ್ರಕ್ರಿಯಾ । ತತ್ರಾಪಿ ನೀತಿವಿರೋಧಪ್ರದರ್ಶನಾಯೋಕ್ತಮದೃಷ್ಟ ಇತಿ ॥ ದೃಷ್ಟೌ ಸತ್ಯಾಂಶ್ವಾಶ್ವಯೋರ್ವಿಲಕ್ಷಣಃ ಸ್ಯಾತ್ಕಿಮಿತಿ ಸಂಬಂಧಃ । ಇದಂ ಯಥಾ ಅಬದ್ಧಂ ತಥಾ ತದಪ್ಯಬದ್ಧಮಿತಿ ಭಾವಃ ॥ ೧೨೧೮ ॥

**ವಿವರಣೆ-** ಮೊದಲು ಅಸತ್ತಾದ ನರವಿಷಾಣವೇ ದರ್ಶನವುಂಟಾದರೆ ಸದಸದ್ವಿಲಕ್ಷಣವಾಗುತ್ತದೆ ಎಂದು ಪರರ ಪ್ರಕ್ರಿಯ. ಇದೂ ಸಹ ಲೋಕನೀತಿವಿರುದ್ಧವೆಂದು ತೋರಿಸಲು ಇಲ್ಲಿ ನಾಯಿಯ ದೃಷ್ಟಾಂತವನ್ನು ಕೊಟ್ಟಿದ್ದಾರೆ. ದೃಷ್ಟವಾದ ನಾಯಿಯು ನಾಯಿ ಮತ್ತು ಕುದುರೆಗಳಿಗಿಂತ ವಿಲಕ್ಷಣವಾಗುವುದು ಹೇಗೆ ಅಸಂಬದ್ಧವೋ, ಹಾಗೆ ದೃಷ್ಟವಾದ ನರವಿಷಾಣ ಅಥವಾ ಶಶವಿಷಾಣವು ಸದಸದ್ವಿಲಕ್ಷಣವಾಗುವುದು ಅಷ್ಟೇ ಅಬದ್ಧ ಎಂದು ಅಭಿಪ್ರಾಯ.

**ಕಿಂ ಸ್ಪೃಷ್ಟೋಚ್ಛಿಷ್ಟಯೋರೇಕಃ ಶುದ್ಧೋಽಶುದ್ಧೋಽಪರೋ ಭವೇತ್ ।**
**ಸದನ್ಯಾಭಾವಕಾಲೀನಂ ಸಚ್ಚೇದ್ಬ್ರಹ್ಮ ತಮೋಽಪಿ ಸತ್ ॥ ೧೨೧೯ ॥**

**ಅರ್ಥ-** ಸ್ಪೃಷ್ಟೋಚ್ಛಿಷ್ಟಯೋಃ = ಇಬ್ಬರು ಪುರುಷರು ಉಚ್ಛಿಷ್ಟಸ್ಪರ್ಶವನ್ನು ಮಾಡಿದಾಗ ಅವರಲ್ಲಿ, ಏಕಃ = ಒಬ್ಬನು, ಶುದ್ಧಃ = ಶುದ್ಧನು, ಅಪರಃ = ಇನ್ನೊಬ್ಬನು, ಅಶುದ್ಧಃ =

ಅಶುದ್ಧನು, ಭವೇತ್ ಕಿಂ = ಆಗುತ್ತಾರೆಯೆ? ಸದನ್ಯಾಭಾವಕಾಲೀನಂ = ಸದ್‌ವ್ಯತಿರಿಕ್ತವಾದ ಯಾವುದೂ ಇಲ್ಲದಿರುವ ಕಾಲದಲ್ಲಿ, ಬ್ರಹ್ಮ = ಬ್ರಹ್ಮನು, ಸಚ್ಚೇದ್ = ಸತ್ಯನಾಗುವುದಾದರೆ, ತಮೋಽಪಿ = ಆಗ ಉಳಿದಿರುವ ತಮಸ್ಸೂ ಕೂಡ, ಸತ್ = ಸತ್ತ್ವವೇ ಆಗುತ್ತದೆ.

**ಅನುವಾದ-** ಇಬ್ಬರು ಉಚ್ಚಿಷ್ಟ ಸ್ಪರ್ಶವನ್ನು ಮಾಡಿದಾಗ ಅವರಲ್ಲಿ ಒಬ್ಬನು ಶುದ್ಧ ಇನ್ನೊಬ್ಬನು ಅಶುದ್ಧನು ಎಂದು ಆಗುತ್ತದೆಯೇನು? ಸದಸತ್‌ಗಳು ಎರಡೂ ಇಲ್ಲದಿರುವ ಕಾಲದಲ್ಲಿಇರುವ ಬ್ರಹ್ಮನು ಸತ್ಯನಾಗುವುದಾದರೆ ಅದೇ ಕಾಲದಲ್ಲಿರುವ ತಮಸ್ಸೂ ಕೂಡ ಸತ್ಯವಾಗಬೇಕಾದೀತು. ಪ್ರಳಯದಲ್ಲಿ ಸದಸದಭಾವವಿರುತ್ತದೆ. ಆ ಕಾಲದಲ್ಲಿ ಉಳಿದಿರುವ ಬ್ರಹ್ಮನು ಸತ್ಯನಾಗುವುದಾದರೆ, ಅದೇ ಕಾಲದಲ್ಲಿರುವ ತಮಸ್ಸು ಏಕೆ ಸತ್ಯನಾಗುವುದಿಲ್ಲ.

**ಭಾವವಿಲಾಸಿನೀ–** ಸದಸದಭಾವಕಾಲೀನಂ ತಮ ಏವ ಸದಸದ್ವಿಲಕ್ಷಣಂ ನ ತು ಬ್ರಹ್ಮೇತಿ ಪರಸ್ಯ ಪ್ರಕ್ರಿಯಾ । ತದಪಿ ದುರ್ನೀತಿಗ್ರಸ್ತಮಿತ್ಯಾಶಯೇನೋಕ್ತಮ್ ॥ **ಕಿಮಿತಿ** ॥ ಸ್ಪೃಷ್ಟಮುಚ್ಛಿಷ್ಟಂ ಯಾಭ್ಯಾಂತೌ ತಥೋಕ್ತೌ । ತಯೋರ್ಮಧ್ಯೇ । ಸದನ್ಯಾಭಾವಕಾಲೀನಂ ಸತ್ ತತೋಽನ್ಯದಸಚ್ಚ ತಯೋರುಭಯೋರಭಾವಕಾಲೀನಮ್ ॥ ೧೨೧೯ ॥

**ವಿವರಣೆ-** ಸದಸದಭಾವಕಾಲದಲ್ಲಿಇರುವ ತಮಸ್ಸೇ ಸದಸದ್ವಿಲಕ್ಷಣವಾದುದು, ಬ್ರಹ್ಮನು ಅಲ್ಲ ಎಂಬ ನೀತಿಯು ದುರ್ನೀತಿಯೆಂದು ಇಲ್ಲಿ ಹೇಳುತ್ತಾರೆ. ಸದಸದಭಾವಕಾಲೀನವಾದ ಬ್ರಹ್ಮನು ಸತ್ಯವಾಗುವುದಾದರೆ ಅದೇ ನ್ಯಾಯದಿಂದ ತಮಸ್ಸು ಸತ್ಯವಾಗಬೇಕು. ಒಂದು ವಸ್ತುವಿಗೆ ಸತ್ಯತ್ವವನ್ನು ಒಪ್ಪಿ, ಆಗ ಇರುವ ಇನ್ನೊಂದು ವಸ್ತುವಿಗೆ ಸತ್ಯತ್ವವನ್ನು ನಿರಾಕರಿಸಲು ಬರುವುದಿಲ್ಲ ಎಂದು ಅಭಿಪ್ರಾಯ.

ಸದನ್ನೇಽನದನೇ ಪ್ರಾಪ್ತೇ ಕದನ್ನೇಽಪಿ ರುಚಿರ್ಭವೇತ್ ।
ಜ್ಞಾನಾತ್ಮಕೇನ ಭೋಗೇನೈವಾರಬ್ಧಸ್ಯ ಕ್ಷಯೋಽಂತತಃ ॥ ೧೨೨೦ ॥

**ಅರ್ಥ-** ಸದನ್ನೇಽನದನೇ ಪ್ರಾಪ್ತೇ = ಸದನ್ನದಲ್ಲಿ ಅನಶನವು ಉಂಟಾದರೆ ಎಂದರೆ ಸದನ್ನವು ದೊರೆಯದಿದ್ದರೆ, ಕದನ್ನೇಽಪಿ = ಕದನ್ನದಲ್ಲಿಯೂ, ರುಚಿರ್ಭವೇತ್ = ರುಚಿಯು ಕಾಣುತ್ತದೆ, ಜ್ಞಾನಾತ್ಮಕೇನ = ಜ್ಞಾನರೂಪನಾದ, ಭೋಗೇನೈವ= ಭೋಗದಿಂದಲೇ, ಅಂತತಃ = ಕೊನೆಯಲ್ಲಿ, ಆರಬ್ಧಸ್ಯ ಕ್ಷಯಃ= ಪ್ರಾರಬ್ಧಕರ್ಮದ ಕ್ಷಯವು ಉಂಟಾಗುತ್ತದಷ್ಟೇ.

**ಅನುವಾದ-** ಭೋಜನಕ್ಕೆ ಸದನ್ನವು ದೊರೆಯದಿದ್ದಾಗ, ಕದನ್ನವೂ ರುಚಿಯಾಗಿ ಕಾಣುತ್ತದೆ ಪ್ರಾರಬ್ಧಕರ್ಮವಾದರೂ, ಜ್ಞಾನರೂಪವಲ್ಲದ ಭೋಗದಿಂದಲೇ ಕ್ಷಯವನ್ನು ಹೊಂದುವುದಷ್ಟೇ !

**ಭಾವವಿಲಾಸಿನೀ–** ಜ್ಞಾನೇನಾಜ್ಞಾನಸ್ಯೈವ ನಾಶಂ ವದನ್ ಅಗತ್ಯಾ ಪ್ರಾರಬ್ಧಕರ್ಮಣಾಂ ಭೋಗಾಖ್ಯಸುಖನುಭವೇನೈವ ನಾಶಂ ವಕ್ತಿ । ತದಪಿ ದುರ್ನೀತಿಗ್ರಸ್ತಮಿತಿ ಭಾವೇನೋಕ್ತಮ್ ॥

**ಸದನ ಇತಿ** ॥ ಸದನೇಗೃಹೇ ಅನದನೇ ದಾರಿದ್ರ್ಯನಿಮಿತ್ತಾನ್ನಾಭಾವೇನಾದನಾಭಾವೇ । ಕದನ್ನೇ ಕುತ್ಸಿತಾನ್ನೇ । ಸದನ್ನಮೇವ ಭುಜ್ಯತ ಇತಿ ಪ್ರತಿಜ್ಞಾವಾನಪಿ ದಾರಿದ್ರ್ಯೇ ಪ್ರಾಪ್ತೇ ಕದನ್ನಮೇವ ಭುಂಕ್ತೇ । ತಥೇದಮಪೀತಿ ಭಾವಃ ॥ ೧೨೨೦ ॥

**ವಿವರಣೆ-** ಜ್ಞಾನದಿಂದ ಅಜ್ಞಾನದ್ದೇ ನಾಶವನ್ನು ಹೇಳುವ ಪರವಾದಿಯು, ಗತ್ಯಂತರವಿಲ್ಲದಿರುವುದರಿಂದ, ಪ್ರಾರಬ್ಧಕರ್ಮಗಳು ಸುಖಾನುಭವರೂಪವಾದ ಜ್ಞಾನದಿಂದಲೇ ನಾಶವನ್ನು ಹೊಂದುತ್ತವೆ ಎಂದು ಹೇಳುತ್ತಾನೆ. ಇದೂ ದುರ್ನೀತಿ ಎಂದು ಇಲ್ಲಿ ಹೇಳುತ್ತಾರೆ. ಸದನ್ನವನ್ನೇ ಭುಂಜಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದರೂ ದಾರಿದ್ರ್ಯವು ಬಂದವನಿಗೆ ಕದನ್ನವೇ ರುಚಿಯಾಗಿ ತೋರುತ್ತದೆ. ಜ್ಞಾನದಿಂದ ಎಲ್ಲದರ ಕ್ಷಯವನ್ನು ಹೇಳುವ ಪರವಾದಿಯು, ಕೊನೆಯಲ್ಲಿ ಸುಖಾನುಭವರೂಪವಾದ ಭೋಗದಿಂದ ಎಂದರೆ ಜ್ಞಾನದಿಂದಲೇ ಪ್ರಾರಬ್ಧಕರ್ಮದ ಕ್ಷಯವನ್ನು ಹೇಳುತ್ತಾನೆ.

ಜ್ಞಾನದಿಂದ ಅಜ್ಞಾನದ ಮತ್ತು ಅಜ್ಞಾನದಕಾರ್ಯದನಾಶವನ್ನು ಒಪ್ಪುವ ಪರವಾದಿಯು, ಪ್ರಾರಬ್ಧಕರ್ಮಗಳಿಗೆ ಮಾತ್ರ ಭೋಗರೂಪವಾದ ಸುಖಾನುಭವರೂಪವಾದ ಜ್ಞಾನದಿಂದಲೇ ಕ್ಷಯವನ್ನು ಅಂಗೀಕರಿಸುವುದು ಒಂದು ದುರ್ನೀತಿ ಎಂದು ಇಲ್ಲಿ ಹೇಳುತ್ತಾರೆ.

**ವಿಪ್ರೋಽಹಂ ನೈವ ವಿಪ್ರೋಽಹಮಿತ್ಯುಕ್ತಿಂ ಕೋಽಪಿ ಲಾಲಯೇತ್ ।**
**ಸ್ವಸ್ವಾಭಾವೌ ಸದೈಕತ್ರ ಸ್ವಸ್ಥೌ ಸ್ತಃ ಕಿಲ ಮಾಯಿನಾಮ್ ॥ ೧೨೨೧ ॥**

**ಅರ್ಥ-** ವಿಪ್ರೋಽಹಂ = ನಾನು ವಿಪ್ರನು, ಅಹಂ ವಿಪ್ರೋನ್ನೈವ = ನಾನು ವಿಪ್ರನಲ್ಲ, ಇತ್ಯುಕ್ತಿಂ = ಎಂಬ ವಚನವನ್ನು, ಕೋಽಪಿ = ಯಾವನೋ ಉನ್ಮತ್ತನು, ಲಾಲಯೇತ್ = ಲಾಲಿಸಬಹುದು, ಮಾಯಿನಾಮ್ = ಅದ್ವೈತಿಗಳಿಗೆ ತ ಸ್ವಸ್ವಾಭಾವೌ = ತಾನು ಮತ್ತು ತನ್ನ ಅಭಾವಗಳು, ಸದೈವ= ಯಾವಾಗಲೂ, ಸ್ವಸ್ಥೌ = ವಿರೋಧವನ್ನು ಪರಿತ್ಯಜಿಸಿ, ಸ್ತಃ ಕಿಲ = ಇರುತ್ತವೆಯಷ್ಟೇ.

**ಅನುವಾದ-** ನಾನು ಬ್ರಾಹ್ಮಣ ಮತ್ತು ನಾನು ಬ್ರಾಹ್ಮಣನಲ್ಲ ಎಂಬ ವಾಕ್ಯವನ್ನು ಯಾವನಾದರೂ ಉನ್ಮತ್ತನು ಆದರಿಸಬೇಕು. ಮಾಯಾವಾದಿಗಳಿಗೆ, ತಾನು ಮತ್ತು ತನ್ನ ಅತ್ಯಂತಾಭಾವವು ಸರ್ವದಾ ಒಂದೇ ಕಡೆಯಲ್ಲಿ ವಿರೋಧವನ್ನು ಪರಿತ್ಯಜಿಸಿ ಇರುತ್ತವೆಯಷ್ಟೇ?

**ಭಾವವಿಲಾಸಿನೀ–** ಸ್ವಾತ್ಯಂತಾಭಾವಸಮಾನಾಧಿಕರಣತ್ವಂ ತಸ್ಯ ತಸ್ಯ ಪದಾರ್ಥಸ್ಯೇತಿ ಮಾಯಿನೋ ವದಂತಿ । ತದಪಿ ದುರ್ನೀತಿಗ್ರಸ್ತಮಿತಿ ಭಾವೇನೋಕ್ತಮ್ ॥ **ವಿಪ್ರ ಇತಿ** ॥ ಇತ್ಯುಕ್ತಿಂ ಸ್ವವ್ಯಾಹತವಚನಂ ಕೋಽಪ್ಯುನ್ಮತ್ತಃ । ಅಹಂ ಬ್ರಾಹ್ಮಣೋ ನಾಹಂ ಬ್ರಾಹ್ಮಣ ಇತಿವತ್ ಇದಮಪ್ಯುನ್ಮತ್ತವಚನಮಿತಿ ಭಾವಃ ॥ ೧೨೨೧ ॥

**ವಿವರಣೆ-** 'ಮಿಥ್ಯಾತ್ವಂ' ಎಂದರೆ ಸ್ವಾತ್ಯಂತಾಭಾವಸಾಮಾನಾಧಿಕರಣ್ಯವೆಂದು ಅದ್ವೈತಿಗಳು ಹೇಳುತ್ತಾರೆ. ಎಂದರೆ ಮಿಥ್ಯಾತ್ವವೆಂದರೆ ತಾನು ಇರುವಲ್ಲಿಯೇ ತನ್ನ ಅತ್ಯಂತಾಭಾವವು ಇರುವುದು ಎಂದರ್ಥ. ಎಲ್ಲಾ ವಾದಿಗಳೂ ಇದು ಪರಸ್ಪರ ವಿರುದ್ಧವಾದದ್ದೂ ಎಂದು ಅಂಗೀಕರಿಸುತ್ತಾರೆ. ಮಾಯಿಗಳು ಮಾತ್ರ ಅವುಗಳಿಗೆ ವಿರೋಧವನ್ನು ಅಂಗೀಕರಿಸದೇ ಸಾಮಾನಾಧಿಕರಣ್ಯವನ್ನು ಒಪ್ಪುತ್ತಾರೆ. ಭಾವಾಭಾವಗಳಿಗೆ ವಿರೋಧವನ್ನು ಒಪ್ಪದಿರುವುದೂ ಸಹ ಮಾಯಾವಾದಿಗಳ ದುರ್ನೀತಿಯೆಂದು ಇಲ್ಲಿ ಹೇಳಿದ್ದಾರೆ.

**ಸರ್ವಸಂಪ್ರತಿಪನ್ನಸ್ಯ ಕೋಽಭಾವಂ ಭಾವಯೇದ್ ಬಲಾತ್ ।**
**ಶುಕ್ತಿರೂಪ್ಯಸ್ಯ ಮಿಥ್ಯಾತ್ವೇಽಪ್ಯಾಪಣಸ್ಥಸ್ಯ ತನ್ನ ಹಿ ॥ ೧೨೨೨ ॥**

**ಅರ್ಥ-** ಸರ್ವಸಂಪ್ರತಿಪನ್ನಸ್ಯ = ಎಲ್ಲರಿಗೂ ಸಂಪ್ರತಿಪನ್ನವಾದ ಅರ್ಥಕ್ಕೆ, ಕಃ = ಯಾರು ತಾನೇ, ಬಲಾತ್ = ಬಲಾತ್ಕಾರದಿಂದ, ಅಭಾವಂ = ಅಭಾವವನ್ನು, ಭಾವಯೇತ್ = ಚಿಂತಿಸುತ್ತಾನೆ, ಶುಕ್ತಿರೂಪ್ಯಸ್ಯ = ಶುಕ್ತಿರೂಪ್ಯವು, ಮಿಥ್ಯಾತ್ವೇಽಪಿ = ಮಿಥ್ಯಾಭೂತವಾದರೂ, ಆಪಣಸ್ಥಸ್ಯ = ಆಪಣಸ್ಥವಾದ ರಜತಕ್ಕೆ, ತತ್ = ಮಿಥ್ಯಾತ್ವವು, ನಹಿ = ಇಲ್ಲವಷ್ಟೇ ?

**ಅನುವಾದ-** ಸರ್ವಸಂಪ್ರತಿಪನ್ನವಾದ ವಸ್ತುವಿಗೆ ಯಾವನು ಬಲಾತ್ಕಾರದಿಂದ ಅಭಾವವನ್ನು ಚಿಂತಿಸುತ್ತಾನೆ? ಶುಕ್ತಿರೂಪ್ಯವು ಮಿಥ್ಯಾಭೂತವಾದರೂ ಆಪಣಸ್ಥ-ರಜತವು ಮಿಥ್ಯಾಭೂತವಲ್ಲವಷ್ಟೇ ?

**ಭಾವವಿಲಾಸಿನೀ–** ಶುಕ್ತಿರೂಪ್ಯಸ್ಯ ಮಿಥ್ಯಾತ್ವೇಽಪಿ ಸಕಲಜನಮನಶ್ಶ್ಲಾಘ್ಯಸ್ಯ ಜಗತೋ ನ ಮಿಥ್ಯಾತ್ವಮಿತ್ಯತ್ರನೀತಿಪ್ರದರ್ಶನಾಯೋಕ್ತಮ್ ॥ **ಸರ್ವೇತಿ** ॥ ತನ್ಮಿಥ್ಯಾತ್ವಮ್ ॥ ೧೨೨೨॥

**ವಿವರಣೆ-** ಶುಕ್ತಿರೂಪ್ಯವು ಮಿಥ್ಯಾಭೂತವಾದರೂ ಸಕಲಜನಮನೋಹರವಾದ ಜಗತ್ತಿಗೆ ಮಿಥ್ಯಾತ್ವವನ್ನು ಒಪ್ಪುವುದು ನೀತಿವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ.

**ಪ್ರಾಣತ್ಯಾಗೇ ಮೃತಿರ್ಯುಕ್ತಾ ತದತ್ಯಾಗೇ ಕಥಂ ಮೃತಿಃ ।**
**ಬಾಧ್ಯರೂಪ್ಯಸ್ಯ ಮಿಥ್ಯಾತ್ವೇಽಪ್ಯಬಾಧ್ಯಸ್ಯ ಕುತೋ ಹಿ ತತ್ ॥ ೧೨೨೩ ॥**

**ಅರ್ಥ-** ಪ್ರಾಣತ್ಯಾಗೇ = ಪ್ರಾಣವು ಹೋದರೆ, ಮೃತಿಃ= ಮರಣವು, ಯುಕ್ತಾ = ಯುಕ್ತವಾಗುತ್ತದೆ, ತದತ್ಯಾಗೇ = ಪ್ರಾಣವುಹೋಗದಿದ್ದರೆ, ಮೃತಿಃ = ಮರಣವು ಕಥಂ = ಹೇಗೆ ಉಂಟಾಗುತ್ತದೆ. ಬಾಧ್ಯರೂಪ್ಯಸ್ಯ = ಬಾಧ್ಯವಾದ ಶುಕ್ತಿರೂಪ್ಯಕ್ಕೆ, ಮಿಥ್ಯಾತ್ವೇಽಪಿ = ಮಿಥ್ಯಾತ್ವವು ಇದ್ದರೂ, ಅಬಾಧ್ಯಸ್ಯ = ಅಬಾಧ್ಯವಾದ ಜಗತ್ತಿಗೆ, ತತ್ = ಮಿಥ್ಯಾತ್ವವು, ಕುತೋ ಹಿ = ಹೇಗೆ ಉಂಟಾಗುತ್ತದೆ?

**ಅನುವಾದ-** ಪ್ರಾಣಪರಿತ್ಯಾಗವನ್ನು ಮಾಡಿದರೆ ಮರಣವು ಯುಕ್ತವಾಗುತ್ತದೆ. ಪ್ರಾಣಪರಿತ್ಯಾಗವಿಲ್ಲದಿದ್ದರೆ, ಮರಣವು ಹೇಗೆ ಉಂಟಾಗುತ್ತದೆ? ಬಾಧ್ಯವಾದ

ರೂಪ್ಯಕ್ಕೆ ಮಿಥ್ಯಾತ್ವವಿದ್ದರೂ, ಅಬಾಧ್ಯವಾದ ಜಗತ್ತಿಗೆ ಮಿಥ್ಯಾತ್ವವು ಹೇಗೆ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ತತ್ರೈವ ನೀತ್ಯಂತರಪ್ರದರ್ಶನಾಯೋಕ್ತಮ್ ॥ ಪ್ರಾಣೇತಿ ॥ ತದತ್ಯಾಗೇ ಪ್ರಾಣಾತ್ಯಾಗೇ । ತನ್ಮಿಥ್ಯಾತ್ವಮ್ ॥ ೧೨೨೩ ॥

**ವಿವರಣೆ-** ಬಾಧವು ಪ್ರಾಣತ್ಯಾಗರೂಪವಾದದ್ದು. ಬಾಧವಿರುವ ಕಡೆಯಲ್ಲಿ ಮಿಥ್ಯಾತ್ವವನ್ನು ಹೇಳಬೇಕು. ಆದ್ದರಿಂದ ಶುಕ್ತಿರೂಪ್ಯಕ್ಕೆ ಮಿಥ್ಯಾತ್ವವು ಯುಕ್ತವಾಗುತ್ತದೆ. ಜಗತ್ತಿಗೆ ಬಾಧವಿಲ್ಲ. ಬಾಧವಿಲ್ಲದಿದ್ದರೂ ಮಿಥ್ಯಾತ್ವವನ್ನು ಹೇಳುವುದು ಪ್ರಾಣತ್ಯಾಗ ಇಲ್ಲದಿದ್ದರೂ ಮರಣವನ್ನು ಅಂಗೀಕರಿಸಿದಂತೆ ನೀತಿವಿರುದ್ಧವಾದುದು ಎಂದು ಅಭಿಪ್ರಾಯ.

**ಶಂಕಾಪಿಶಾಚೀ ರಮ್ಯೇಽರ್ಥೇ ಪಿಶಾಚಸ್ಯೈವ ಕೇವಲಮ್ ।**
**ಬಾಧಶಂಕಾ ಜಗತಿ ಚೇದ್ ಬ್ರಹ್ಮಣ್ಯಪಿ ಕುತೋ ನ ಸಾ ॥ ೧೨೨೪ ॥**

**ಅರ್ಥ-** ರಮ್ಯೇಽರ್ಥೇ = ಸುಂದರವಾದ ಅರ್ಥದಲ್ಲಿ, ಶಂಕಾಪಿಶಾಚೀ = ನಿರ್ನಿಮಿತ್ತವಾದ ಶಂಕೆಯು, ಕೇವಲಮ್ = ಕೇವಲ, ಪಿಶಾಚಸ್ಯೈವ = ಪಿಶಾಚಿಗೆ ಮಾತ್ರ ಉಂಟಾಗುತ್ತದೆ, ಜಗತಿ = ಜಗತ್ತಿನಲ್ಲಿ, ಬಾಧಶಂಕಾ = ಬಾಧಶಂಕೆಯು ಇರುವುದಾದರೆ, ಬ್ರಹ್ಮಣ್ಯಪಿ = ಬ್ರಹ್ಮನಲ್ಲಿಯೂ ಕೂಡ, ಸಾ = ಬಾಧಶಂಕೆಯು, ಕುತೋ ನ = ಏಕೆ ಇಲ್ಲ?

**ಅನುವಾದ-** ಸುಂದರವಾದ ಪದಾರ್ಥದಲ್ಲಿಯೂ ನಿರ್ದಲವಾದ ಶಂಕೆಯು ಪಿಶಾಚಿಗೆ ಮಾತ್ರ ಉಂಟಾಗುತ್ತದೆ. ಜಗತ್ತಿನಲ್ಲಿ ಬಾಧಶಂಕೆಯು ಇರುವುದಾದರೆ ಬ್ರಹ್ಮನಲ್ಲಿಯೂ ಕೂಡ ಏಕೆ ಬಾಧಶಂಕೆ ಇಲ್ಲ?

**ಭಾವವಿಲಾಸಿನೀ–** ಸ್ವಸ್ಯಾಪೇಕ್ಷಿತಬ್ರಹ್ಮಣಿ ನ ಬಾಧಶಂಕಾ ॥ ಸ್ವಾನಪೇಕ್ಷಿತೇ ಜಗತಿ ಬ್ರಹ್ಮವದೇವ ಶ್ರುತಿಸ್ಮೃತಿಪ್ರತಿಪಾದಿತೇಽಪಿ ಬಾಧಶಂಕೇತ್ಯತ್ರಾಪಿ ದುರ್ನೀತಿಂ ದರ್ಶಯಿತುಮುಕ್ತಮ್ - **ಶಂಕೇತಿ** ॥ ೧೨೨೪ ॥

**ವಿವರಣೆ-** ತನಗೆ ಬೇಕಾದುದರಿಂದ ಬ್ರಹ್ಮನಲ್ಲಿ ಬಾಧಶಂಕೆಯಿಲ್ಲ. ಜಗತ್ತು ತನಗೆ ಅನಪೇಕ್ಷಿತವಾದ್ದರಿಂದ ಸ್ಮೃತಿಶ್ರುತಿಗಳು ಬ್ರಹ್ಮನಿಗೆ ಸಮಾನವಾಗಿ ಜಗತ್ತಿನಲ್ಲಿ ಸತ್ಯತ್ವವನ್ನು ಹೇಳುತ್ತಿದ್ದರೂ, ಜಗತ್ತಿನಲ್ಲಿ ಮಾತ್ರ ಬಾಧಶಂಕೆಯನ್ನು ಅಂಗೀಕರಿಸುವುದು ದುರ್ನೀತಿ ಎಂದು ಅಭಿಪ್ರಾಯ.

**ಅರ್ಥಜ್ಞಾನೇ ಹ್ಯಕುಶಲಃ ಕಿಂ ವಾಕ್ಯೇನ ಕರಿಷ್ಯತಿ ।**
**ಅಕಸ್ಮಾದಿತಿ ವಾಕ್ಯೇನ ಕಸ್ಮಾದ್ ಬ್ರಹ್ಮ ನ ಬಾಧ್ಯತೇ ॥ ೧೨೨೫ ॥**

**ಅರ್ಥ-** ಅರ್ಥಜ್ಞಾನೇ= ವಾಕ್ಯಾರ್ಥವನ್ನು ತಿಳಿಯುವುದರಲ್ಲಿ, ಅಕುಶಲಃ = ನಿಪುಣನಲ್ಲದವನು, ವಾಕ್ಯೇನ = ಆ ವಾಕ್ಯದಿಂದ, ಕಿಂ ಕರಿಷ್ಯತಿ = ಏನು ಮಾಡುತ್ತಾನೆ?

ಅಕಸ್ಮಾತ್ ಇತಿ ವಾಕ್ಯೇನ = 'ಅಕಸ್ಮಾದ್ಧಿ ಇದಮಾವಿರಾಸೀತ್' ಎಂಬ ಶ್ರುತಿಯಿಂದ, ಬ್ರಹ್ಮ= ಬ್ರಹ್ಮನು, ಕಸ್ಮಾತ್ = ಏಕೆ, ನ ಬಾಧ್ಯತೇ = ಬಾಧಿಸಲ್ಪಡುವುದಿಲ್ಲ?

**ಅನುವಾದ-** ವಾಕ್ಯಾರ್ಥಜ್ಞಾನದಲ್ಲಿ ಅಕುಶಲನಾದವನು ವಾಕ್ಯದಿಂದ ಏನು ಮಾಡುತ್ತಾನೆ? 'ಅಕಸ್ಮಾದ್ಧಿ ಇದಮಾವಿರಾಸೀತ್' ಎಂಬ ವಾಕ್ಯದಿಂದ ಬ್ರಹ್ಮನಿಗೇ ಬಾಧವನ್ನು ಏಕೆ ಹೇಳುವುದಿಲ್ಲ?

**ಭಾವವಿಲಾಸಿನೀ-** ಅರ್ಥಮಜ್ಞಾತ್ವಾ ನೇಹನಾನೇತ್ಯಾದಿಕೇವಲವಾಕ್ಯಂ ಪಠನ್ನಪ್ಯಕುಶಲ ಇತ್ಯಪಿ ನೀತ್ಯಾ ದರ್ಶಯಿತುಮುಕ್ತಮ್ ॥ **ಅರ್ಥೇತಿ** ॥ ಪ್ರತಿವಾದಿನಾಪಿ ವಾಕ್ಯೇ ಪಠಿತೇ ನಿರುತ್ತರಸ್ಸ್ಯಾದಿತಿ ಭಾವಃ ॥ ೧೨೨೫ ॥

**ವಿವರಣೆ-** ಅರ್ಥವನ್ನು ತಿಳಿಯದೆ ತನಗೆ ಸಾಧಕವೆಂದು 'ನೇಹನಾನಾಸ್ತಿ' ಎಂಬ ವಾಕ್ಯವನ್ನು ಉದಾಹರಿಸುವ ಪರವಾದಿಯು ಅಕುಶಲನೆಂದು ಇಲ್ಲಿ ಸಮರ್ಥಿಸುತ್ತಾರೆ. ವಾಕ್ಯಾರ್ಥವನ್ನು ತಿಳಿಯದೆ, ಕೇವಲ 'ನೇಹನಾನಾಸ್ತಿ' ಎಂಬ ವಾಕ್ಯವನ್ನು ಉದಾಹರಣೆಮಾಡುವುದರಿಂದ ಮಿಥ್ಯಾತ್ವವು ಸಿದ್ಧವಾಗುವುದಾದರೆ, ಪ್ರತಿವಾದಿಯೂ ಸಹ ಸರಿಯಾದ ವಾಕ್ಯಾರ್ಥವನ್ನು ತಿಳಿಯದೆ, 'ಅಕಸ್ಮಾದ್ಧಿ ಇದಮಾವಿರಾಸೀತ್' ಎಂಬ ಶ್ರುತಿಯಿಂದ ಬ್ರಹ್ಮಾಭಾವವನ್ನು ಹೇಳುವುದಾದರೆ, ಬ್ರಹ್ಮನಿಗೆ ಏಕೆ ಬಾಧವು ಬರುವುದಿಲ್ಲ ಎಂದು ಅಭಿಪ್ರಾಯ.

> ಅಬದ್ಧಂ ವದತೋಽಜ್ಞಸ್ಯ ಕಿಮವಾಚ್ಯಮಿಹೋಚ್ಯತಾಮ್ ।
> ಕಿಂ ನಾವಾದೀತ್ ಕೋಽಪಿ ವಾದೀ ನಿರಧಿಷ್ಠಾನಕಭ್ರಮಮ್ ॥ ೧೨೨೬ ॥

**ಅರ್ಥ-** ಅಬದ್ಧಂ = ಅಸಂಗತವಾದುದನ್ನು, ವದತಃ = ಮಾತನಾಡುವ, ಅಜ್ಞಸ್ಯ = ಅಜ್ಞನಿಗೆ, ಇಹ = ಇಲ್ಲಿ, ಕಿಂ = ಯಾವುದು, ಅವಾಚ್ಯಮ್ = ಅವಾಚ್ಯವಾದುದು ಎಂದು, ಉಚ್ಯತಾಮ್ = ಹೇಳಲ್ಪಡಲಿ, ಕೋಪಿವಾದೀ= ಯಾವನೋ ಒಬ್ಬ ವಾದಿಯು (ಬೌದ್ಧನು), ನಿರಧಿಷ್ಠಾನಕಭ್ರಮಮ್ = ನಿರಧಿಷ್ಠಾನಕಭ್ರಮವನ್ನು, ಕಿಂ ನಾವಾದೀತ್ = ಹೇಳಲಿಲ್ಲವೇ?

**ಅನುವಾದ-** ಅಸಂಗತವಾದುದನ್ನೇ ಮಾತನಾಡುವ ಅಜ್ಞಾನಿಗೆ ಅಥವಾ ಮೂರ್ಖನಿಗೆ ಯಾವುದು ಅವಾಚ್ಯವಾಗುತ್ತದೆ ಎಂದು ಹೇಳು. ಯಾವನೋ ಒಬ್ಬ ವಾದಿಯು (ಬೌದ್ಧವಾದಿಯು) ನಿರಧಿಷ್ಠಾನಕಭ್ರಮವನ್ನು ಹೇಳಲಿಲ್ಲವೇ?

**ಭಾವವಿಲಾಸಿನೀ-** ಆರೋಪ್ಯಮಾಣಾದಧಿಕಸತ್ತಾಕಪ್ರಧಾನದೋಷೇಂದ್ರಿಯಾದ್ಯಭಾವೇಽಪಿ ಜಗದ್ಭ್ರಮಂ ವದತೋ ಬ್ರಹ್ಮಭ್ರಮೇ ಕಿಮಧಿಷ್ಠಾನಮಿತಿ ಶಂಕಾಪಿ ದುರ್ನೀತ್ಯಾ ಹತೇತ್ಯಾಶಯೇನೋಕ್ತಮಬದ್ಧಮಿತಿ ॥ ಕೋಽಪಿ ವಾದೀ ಶೂನ್ಯವಾದೀ । ಶೂನ್ಯವಾದಿವತ್ ಸರ್ವಮಬದ್ಧಂ ವದನ್ ಅಬದ್ಧಾನಾಮಂತೋ ನಾಸ್ತೀತ್ಯಾಶಯೇನೇದಮೇಕಮಬದ್ಧಂ ತನ್ನ್ಯಾಯೇನ್ನೈವ ಕುತೋ ನಾಂಗೀಕುರುತ ಇತಿ ಭಾವಃ ॥ ೧೨೨೬ ॥

**ವಿವರಣೆ-** ಆರೋಪ್ಯಮಾಣವಾದ ವಸ್ತುವಿಗಿಂತ ಅಧಿಕಸತ್ತಾಕವಾದ ಪ್ರಧಾನ, ದೋಷ ಮತ್ತು ಇಂದ್ರಿಯಗಳಿಲ್ಲದಿದ್ದರೂ ಜಗದ್ಭ್ರಮವನ್ನು ಅಂಗೀಕರಿಸುವ ಪರವಾದಿಯು ಬ್ರಹ್ಮಭ್ರಮವನ್ನು ಅಂಗೀಕರಿಸಿದರೆ, ಅಲ್ಲಿ ಯಾವುದು ಅಧಿಷ್ಠಾನ ಎಂಬ ಶಂಕೆಯನ್ನು ಮಾಡಲಿಲ್ಲವೆ? ಈ ಶಂಕೆಯು ದುರ್ನೀತಿಹತವಾದುದು. ಅಧಿಕಸತ್ತಾಕವಾದ ದೋಷಾದಿಗಳು ಇಲ್ಲದಿದ್ದರೂ ಭ್ರಮೆಯನ್ನು ಒಪ್ಪುವ ವಾದಿಯು ಅನುಭವವಿರೋಧವು ಸಮಾನವಾಗಿರುವುದರಿಂದ ಅಧಿಷ್ಠಾನರಹಿತವಾದ ಭ್ರಮೆಯನ್ನು ಒಪ್ಪಲು ಏಕೆ ಹಿಂಜರಿಯಬೇಕು ಎಂದು ಅಭಿಪ್ರಾಯ.

ದುರಾಗ್ರಹಗೃಹೀತಸ್ಯ ಬುದ್ಧಿಃ ಸದ್ಯೋ ವಿಭಿದ್ಯತೇ ।
ನ ಚೇದ್ಬ್ರೂತೇ ಕಥಂ ಹೇತುಮಭಾವೇ ಭಾವದರ್ಶನಮ್ ॥ ೧೨೨೭ ॥

**ಅರ್ಥ-** ದುರಾಗ್ರಹಗೃಹೀತಸ್ಯ = ದುರಾಗ್ರಹದಿಂದ ಪೀಡಿತನಾದವನ, ಬುದ್ಧಿಃ = ಬುದ್ಧಿಯು, ಸದ್ಯಃ = ತಕ್ಷಣದಲ್ಲಿಯೇ, ವಿಭಿದ್ಯತೇ = ನಾಶವನ್ನು ಹೊಂದುತ್ತದೆ, ನಚೇತ್ = ಹಾಗಿಲ್ಲದಿದ್ದರೆ, ಭಾವದರ್ಶನಮ್ = ಭಾವರೂಪವಾದ ಪದಾರ್ಥದ ದರ್ಶನವು, ಅಭಾವೇ ಹೇತುಂ = ಅವುಗಳ ಅಭಾವವನ್ನು ಸಾಧನೆಮಾಡುವುದರಲ್ಲಿ ಹೇತು ಎಂದು, ಕಥಂ ಬ್ರೂತೇ = ಹೇಗೆ ಹೇಳುತ್ತಾನೆ?

**ಅನುವಾದ-** ದುರಾಗ್ರಹಪೀಡಿತನಾದವನ ಬುದ್ಧಿಯು ತಕ್ಷಣದಲ್ಲಿಯೇ ಕೆಟ್ಟು ಹೋಗುತ್ತದೆ. ಇಲ್ಲದಿದ್ದರೆ, ಭಾವ ಪದಾರ್ಥಗಳ ದರ್ಶನವಿರುವಾಗ ದೃಶ್ಯತ್ವ-ರೂಪವಾದ ಹೇತುವನ್ನು ಘಟಾದಿಗಳ ಅಭಾವವನ್ನು ಸಾಧನೆಮಾಡುವು ದಕ್ಕೋಸ್ಕರ ಹೇಗೆ ಪ್ರಯೋಗಿಸುತ್ತಾನೆ?

**ಭಾವವಿಲಾಸಿನೀ–** ಅರ್ಥದರ್ಶನೇ ಸತ್ಯೇವ ಮಿಥ್ಯಾತ್ವಂ ವದನ್ನಪಿ ದುರ್ನೀತಿವಿಷಯ ಇತ್ಯಾಹ – **ದುರಾಗ್ರಹೇತಿ** ॥ ನ ಚೇತ್ ದುರಾಗ್ರಹೀ ನ ಚೇತ್ । ಭಾವದರ್ಶನಂ ಹೇತುಂ ದೃಶ್ಯತ್ವಾದಿತಿ ಹೇತುಮಿತ್ಯರ್ಥಃ ॥ ಅಭಾವೇ ಘಟಪಟಾದಿಪದಾರ್ಥಾನಾಮಭಾವೇ ॥ ೧೨೨೭ ॥

**ವಿವರಣೆ-** ಅರ್ಥದರ್ಶನವು ಇದ್ದರೂ ಅರ್ಥಗಳಿಗೆ ಮಿಥ್ಯಾತ್ವವನ್ನು ಹೇಳುವುದು ಪರನ ಇನ್ನೊಂದು ದುರ್ನೀತಿ ಎಂದು ಇಲ್ಲಿ ಹೇಳುತ್ತಾರೆ.

ಉಕ್ತಂ ತು ನಿರ್ವಹೇದೇವೇತ್ಯಾಗ್ರಹೋಽಗ್ರ್ಯಗ್ರಹೋ ನೃಣಾಮ್ ।
ಕಿಂ ನ ಸ್ವೋಕ್ತಾನೃತತ್ವಾರ್ಥಂ ವೇದಮಪ್ಯನೃತಂ ಜಗುಃ ॥ ೧೨೨೮ ॥

**ಅರ್ಥ-** ಉಕ್ತಂ ತು= ಹೇಳಿದುದನ್ನು, ನಿರ್ವಹೇದೇವ= ನಿರ್ವಾಹವನ್ನು ಮಾಡಲೇಬೇಕು ಇತಿ = ಎಂಬ, ಆಗ್ರಹಃ = ಹಠವು, ನೃಣಾಮ್ = ಮನುಷ್ಯರಿಗೆ, ಅಗ್ರ್ಯಗ್ರಹಃ = ದೊಡ್ಡಪಿಶಾಚಿರೂಪವುಳ್ಳದ್ದು, ಸ್ವೋಕ್ತಾನೃತತ್ವಾರ್ಥಂ= ತಾವು ಹೇಳಿದ ಜಗತ್ತಿನ

ಮಿಥ್ಯಾತ್ವಕ್ಕೋಸ್ಕರವಾಗಿ, ವೇದಮಪಿ = ವೇದವನ್ನೂ ಕೂಡ, ಕಿಂ ಅನೃತಂ ನ ಜಗುಃ = ಮಿಥ್ಯಾಭೂತವಾದದ್ದೆಂದು ಹೇಳಲಿಲ್ಲವೆ?

**ಅನುವಾದ-** ಹೇಳಿದುದನ್ನು ನಿರ್ವಾಹವನ್ನು ಮಾಡಲೇಬೇಕು ಎಂಬ ಹಠವು ಮನುಷ್ಯರಿಗೆ ದೊಡ್ಡ ಪಿಶಾಚಿರೂಪವುಳ್ಳದ್ದು. ತಾವು ಹೇಳಿದ ಜಗತ್ತಿನ ಮಿಥ್ಯಾತ್ವಕ್ಕೋಸ್ಕರವಾಗಿ ವೇದವನ್ನೂ ಕೂಡ ಮಿಥ್ಯಾಭೂತವಾದದ್ದೆಂದು ಹೇಳಲಿಲ್ಲವೆ?

**ಭಾವವಿಲಾಸಿನೀ–** ಸ್ವೋಕ್ತಮಿಥ್ಯಾತ್ವ ಏವ ಪ್ರಮಾಣೀಕೃತಶ್ರುತೇರಪ್ಯಂತತೋ ಮಿಥ್ಯಾತ್ವ-ಮಂಗೀಕುರುತೇ । ತದಪಿ ದುರ್ನೀತಿಗ್ರಸ್ತಮಿತಿ ಭಾವೇನೋಕ್ತಮ್ ॥ **ಉಕ್ತಂ ತ್ವಿತಿ॥** ಅಗ್ರ್ಯಗ್ರಹಃ ಸ್ಥೂಲಪಿಶಾಚಃ । ಸ್ವೋಕ್ತಾನೃತತ್ವಾರ್ಥಂ ಸ್ವೋಕ್ತಜಗನ್ಮಿಥ್ಯಾತ್ವಾಯ । ಉಕ್ತಂ ನಿರ್ವಹೇದಿತಿ ದುರಾಗ್ರಹೀ ಸ್ವೋಕ್ತನಿರ್ವಾಹಾಯ ಸ್ವಶಿರೋಽಪಿ ಛಿಂದ್ಯಾದಿತಿ ಭಾವಃ ॥ ೧೨೨೮ ॥

**ವಿವರಣೆ-** ತಾವೇ ಹೇಳಿದ ಮಿಥ್ಯಾತ್ವದಲ್ಲಿ ಪ್ರಮಾಣತಯಾ ಉದಾಹರಿಸಿದ ಶ್ರುತಿಯನ್ನೂ ಸಹ ಕೊನೆಯಲ್ಲಿ ಮಿಥ್ಯಾಭೂತವಾದುದೆಂದು ಅಂಗೀಕರಿಸುವುದು ಒಂದು ದುರ್ನೀತಿ ಎಂದು ಇಲ್ಲಿ ಹೇಳುತ್ತಾರೆ.

ಕಪರ್ದಿಕಾಮಾತ್ರಲಬ್ಧ್ಯೈ ಲಕ್ಷಂ ತ್ಯಜತಿ ರೂಕ್ಷಧೀಃ ।
ನ ಚೇನ್ನೈಕ್ಯಲಾಭಾಯ ಜಗತ್ಸರ್ವಂ ಕಥಂ ಜಹೌ ॥ ೧೨೨೯ ॥

**ಅರ್ಥ-** ರೂಕ್ಷಧೀಃ = ಕ್ರೂರವಾದ ಬುದ್ಧಿಯುಳ್ಳವನು, ಕಪರ್ದಿಕಾಮಾತ್ರಲಬ್ಧ್ಯೈ = ಒಂದು ಕಾಸಿನ ಲಾಭಕ್ಕೋಸ್ಕರವಾಗಿ, ಲಕ್ಷಂ ತ್ಯಜತಿ = ಲಕ್ಷಧನವನ್ನು ತ್ಯಜಿಸುತ್ತಾನೆ, ನಚೇತ್ = ಹಾಗಲ್ಲದಿದ್ದರೆ, ಐಕ್ಯಲಾಭಾಯ = ಐಕ್ಯಲಾಭಕ್ಕೋಸ್ಕರ, ಸರ್ವಂ ಜಗತ್ = ಎಲ್ಲ ಜಗತ್ತನ್ನೂ, ಕಥಂ ಜಹೌ = ಹೇಗೆ ಪರಿತ್ಯಾಗಮಾಡಿದನು?

**ಅನುವಾದ-** ಒಂದು ಕಾಸಿನ ಲಾಭಕ್ಕೋಸ್ಕರ ಯಾರು ಒಂದು ಲಕ್ಷವನ್ನು ಪರಿತ್ಯಾಗ ಮಾಡುತ್ತಾನೆಯೋ ಅವನು ಕ್ರೂರಬುದ್ಧಿಯುಳ್ಳವನು.ಹಾಗಿಲ್ಲದಿದ್ದರೆ, ಐಕ್ಯದ ಸಿದ್ಧಿಗೋಸ್ಕರವಾಗಿ ಸಮಸ್ತ ಜಗತ್ತನ್ನು ಅವನು ಏಕೆ ಪರಿತ್ಯಾಗ ಮಾಡುತ್ತಾನೆ?

**ಭಾವವಿಲಾಸಿನೀ–** ಸ್ವೋಕ್ತೈಕ್ಯನಿರ್ವಾಹಾಯ ಜಗದಭಾವಂ ವದನ್ನಪಿ ದುರ್ನೀತಿವಿಷಯ ಇತಿ ಭಾವೇನೋಕ್ತಮ್ ॥ **ಕಪರ್ದಿಕೇತಿ** ॥ ೧೨೨೯ ॥

**ವಿವರಣೆ-** ತಾನು ಹೇಳಿದ ಐಕ್ಯವನ್ನು ನಿರ್ವಹಿಸುವುದಕ್ಕಾಗಿ ಸಮಸ್ತ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದೂ ಸಹ ನೀತಿವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ. ಐಕ್ಯವು ಒಂದು ಕಾಸಿದ್ದಂತೆ. ಜಗತ್ತು ಒಂದು ಲಕ್ಷಧನವಿದ್ದಂತೆ. ಆದ್ದರಿಂದ ಐಕ್ಯಕ್ಕೋಸ್ಕರವಾಗಿ ಜಗತ್ತನ್ನು ಬಲಿಕೊಡುವುದು ಬೇಡ ಎಂದು ಅಭಿಪ್ರಾಯ.

**ಯಃ ಸರ್ವಸ್ಮೈ ಸದಾ ದ್ರುಹ್ಯೇನ್ನಹ್ಯೇತಸ್ಯ ಸುಖಂ ಭವೇತ್ ।**
**ಕಿಂ ಮಿಥ್ಯಾಶ್ರುತಿರೇವಾಂತೇ ಸ್ವಯಂ ಮಿಥ್ಯೇತಿ ನಾಪತತ್ ॥ ೧೨೩೦ ॥**

**ಅರ್ಥ-** ಯಃ = ಯಾವನು, ಸದಾ = ಯಾವಾಗಲೂ, ಸರ್ವಸ್ಮೈ = ಎಲ್ಲರಿಗೂ, ದ್ರುಹ್ಯೇತ್ = ದ್ರೋಹವನ್ನು ಮಾಡುತ್ತಾನೆಯೋ, ಏತಸ್ಯ = ಅಂತಹ ಇವನಿಗೆ, ಸುಖಂ = ಸುಖವು, ನಹಿ ಭವೇತ್ = ಉಂಟಾಗುವುದಿಲ್ಲ.ಮಿಥ್ಯಾಶ್ರುತಿಃ = ಮಿಥ್ಯಾತ್ವಪ್ರತಿಪಾದಕಶ್ರುತಿಯೇ, ಅಂತೇ = ಕೊನೆಯಲ್ಲಿ, ಸ್ವಯಂ = ತಾನು, ಮಿಥ್ಯೇತಿ= ಮಿಥ್ಯಾ ಎಂಬ ಕಾರಣದಿಂದ, ನಾಪತತ್ ಕಿಂ = ಬಿದ್ದುಹೋಗಲಿಲ್ಲವೆ?

**ಅನುವಾದ-** ಯಾವನು ಯಾವಾಗಲೂ ಎಲ್ಲರಿಗೂ ದ್ರೋಹವನ್ನು ಮಾಡುತ್ತಾನೆಯೋ ಅವನಿಗೆ ಎಂದೂ ಸುಖವಾಗುವುದಿಲ್ಲ. ಮಿಥ್ಯಾತ್ವಶ್ರುತಿಯು ತಾನೂ ಮಿಥ್ಯೆ ಎಂಬ ಕಾರಣದಿಂದ ಕೊನೆಯಲ್ಲಿ ಬಿದ್ದುಹೋಗಲಿಲ್ಲವೆ?

**ಭಾವವಿಲಾಸಿನೀ–** ಯದಿ ಶ್ರುತಿಸ್ಸರ್ವಮಿಥ್ಯಾತ್ವಂ ವದೇತ್ ತದಾಸರ್ವದ್ರೋಹದೋಷೇಣ ಸ್ವಯಮಪಿ ಸರ್ವಮಧ್ಯಪತಿತಾ ಮಿಥ್ಯಾ ಸ್ಯಾತ್ । ಅತೋ ದ್ರೋಗ್ಧುರ್ನ್ಯೈ ಪರತೋ ಭಯಮಿತ್ಯನ್ಯಾನ್ ಶಿಕ್ಷಯಂತೀ ನ ಸ್ವಯಂ ತಮನ್ಯಾಯಮನುಮನ್ಯತ ಇತಿ ಭಾವೇನೋಕ್ತಮ್ ॥ ಯ ಇತಿ ॥ ಅತಸ್ತನ್ನವದೇದಿತಿ ಭಾವಃ ॥ ೧೨೩೦ ॥

**ವಿವರಣೆ-** ಮಿಥ್ಯಾತ್ವಶ್ರುತಿಯು ಸರ್ವಜಗತ್ತಿಗೆ ದ್ರೋಹವನ್ನು ಮಾಡುವ ದೋಷದಿಂದ ತಾನೂ ಕೂಡ ಸರ್ವಮಧ್ಯಪತಿತವಾಗಿ ನಾಶವನ್ನು ಹೊಂದುತ್ತದೆ. ಆದ್ದರಿಂದ 'ದ್ರೋಗ್ಧುರ್ನ್ಯೈಪರತೋ ಭಯಂ' - ದ್ರೋಹವನ್ನು ಮಾಡುವುವವನಿಗೆ ಇನ್ನೊಬ್ಬನಿಂದ ಭಯವುಂಟಾಗುತ್ತದೆ ಎಂದು ಇನ್ನೊಬ್ಬರಿಗೆ ಉಪದೇಶವನ್ನು ಕೊಡುವ ಶ್ರುತಿಯು ತಾನೇ ದ್ರೋಹವನ್ನು ಮಾಡಿದರೆ ಅದು ನೀತಿವಿರುದ್ಧವಾಗುತ್ತದೆ. ಆದ್ದರಿಂದ ಶ್ರುತಿಯು ಮಿಥ್ಯಾತ್ವವನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಮಿಥ್ಯಾಭಿಜಲ್ಪೈರಲ್ಪಾನಾಂ ಶುದ್ಧಸ್ಯಾಶುದ್ಧತಾ ನಹಿ ।**
**ಸಾಧಿಕಾ ಬಾಧಿಕಾ ಕಿಂ ಸ್ಯಾನ್ಮಿಥ್ಯಾ ಮಿಥ್ಯಾತ್ವವಾಗ್ಯದಿ ॥ ೧೨೩೧ ॥**

**ಅರ್ಥ-** ಅಲ್ಪಾನಾಂ = ಅಲ್ಪ ಮನುಷ್ಯರ, ಮಿಥ್ಯಾಭಿಜಲ್ಪೈಃ = ಮಿಥ್ಯಾವಾದಗಳಿಂದ, ಶುದ್ಧಸ್ಯ = ಶುದ್ಧವಾದ ಪುರುಷನಿಗೆ, ಅಶುದ್ಧತಾ ನಹಿ = ಅಶುದ್ಧಿಯು ಉಂಟಾಗುವುದಿಲ್ಲವಷ್ಟೆ? ಮಿಥ್ಯಾತ್ವವಾಕ್ = ಮಿಥ್ಯಾತ್ವಪ್ರತಿಪಾದಕ ವಾಕ್ಯವು, ಯದಿ = ಒಂದುಪಕ್ಷ, ಮಿಥ್ಯಾಸ್ಯಾತ್ = ತಾನೂ ಮಿಥ್ಯೆ ಎಂದಾದರೆ, ಸಾಧಿಕಾ ಬಾಧಿಕಾ ಕಿಂ ಸ್ಯಾತ್ = ಅದು ಸಾಧಕವಾಗುತ್ತದೆಯೇ ಅಥವಾ ಬಾಧಕವಾಗುತ್ತದೆಯೇ?

**ಅನುವಾದ-** ಅಲ್ಪರ ಮಿಥ್ಯಾರೋಪವಚನಗಳಿಂದ ಶುದ್ಧನಾದವನು ಅಶುದ್ಧಿಯನ್ನು ಹೊಂದುವುದಿಲ್ಲವಷ್ಟೇ? ತಾನೇ ಇಲ್ಲದಿರುವ ಮಿಥ್ಯಾತ್ವಶ್ರುತಿಯಾದರೋ ತನ್ನ ಅರ್ಥಕ್ಕೆ ಸಾಧಕವಾಗುತ್ತದೆಯೇ? ಅಥವಾ ತನ್ನ ಅರ್ಥದ ವಿರುದ್ಧವಾದ ಅರ್ಥಕ್ಕೆ ಬಾಧಕವಾಗುತ್ತದೆಯೇ?

**ಭಾವವಿಲಾಸಿನೀ–** ಸರ್ವಂ ಮಿಥ್ಯೇತಿ ವದತಃ ಸ್ವವಾಗಪಿ ಮಿಥ್ಯೇತಿ ಸ್ವಸ್ಯೈವ ಸಂಮತಮ್ । ಅತೋ ನ ತಯಾಸ್ಮಾಕಮುಪಕಾರ ಇತ್ಯತ್ರ ನೀತಿಮಾಹ – **ಮಿಥ್ಯೇತಿ** ॥ ಮಿಥ್ಯಾಭಿಜಲ್ಪೈಃ ಅನೃತರೂಪೈರ್ಬಹುತರದೋಷವಾದ್ಯೈಃ । ಅಲ್ಪಾನಾಂ ಮಿಥ್ಯಾಭಿಜಲ್ಪೈರಿತಿ ಸಂಬಂಧಃ । ಅರ್ಥಾನೃತತಾಯಾಮಪಿ ವಾಕ್ಯಮಪ್ರಯೋಜಕಂ ಕಿಲ । ಕಿಂ ವಾಚ್ಯಂ ಸ್ವಸ್ಯೈವಾನೃತತ್ವೇ ಸತೀತಿ ಭಾವಃ ॥ ೧೨೩೧ ॥

**ವಿವರಣೆ-** ಎಲ್ಲವೂ ಮಿಥ್ಯ ಎಂದು ಹೇಳುವ ಶ್ರುತಿವಾಕ್ಯವು ತನಗೂ ಮಿಥ್ಯಾತ್ವವನ್ನು ಹೇಳುತ್ತದೆ. ಮಿಥ್ಯಾಭೂತವಾದ ಶ್ರುತಿಯು ನಮಗೆ ಯಾವ ಅಪಕಾರವನ್ನೂ ಮಾಡುವುದಿಲ್ಲ ಎಂಬ ವಿಷಯದಲ್ಲಿ ಇಲ್ಲಿ ಒಂದು ಲೋಕನೀತಿಯನ್ನು ಹೇಳುತ್ತಾರೆ. ಅಲ್ಪರು ಮಹಾತ್ಮರನ್ನು ನಿಂದಿಸಿದರೆ, ಅವು ಮಿಥ್ಯಾವಚನಗಳಾಗುವುದರಿಂದ ಆದರಿಂದ ಶುದ್ಧರಾದ ಮಹಾತ್ಮರಿಗೆ ಅಶುದ್ಧಿಯು ಉಂಟಾಗುವುದಿಲ್ಲ. ಅದರಂತೆ ಮಿಥ್ಯಾತ್ವಪ್ರತಿಪಾದಕವಾಕ್ಯವು ಸ್ವಯಂ ಮಿಥ್ಯೆಯಾದರೆ, ಯಾವ ಅರ್ಥಕ್ಕೂ ಸಾಧಕವಾಗುವುದಿಲ್ಲ ಮತ್ತು ಯಾವ ಅರ್ಥಕ್ಕೂ ಬಾಧಕವಾಗುವುದಿಲ್ಲ.

ವಾಕ್ಯವು ಸತ್ಯವಾದರೂ ಅನೃತತ್ವರೂಪದೋಷವಿದ್ದರೆ ಅದು ಸ್ವಾರ್ಥ-ಸಾಧಕವಾಗುವುದಿಲ್ಲ. ಇನ್ನು, ಸ್ವಾರ್ಥಸ್ವರೂಪವೇ ಇಲ್ಲದಿದ್ದರೆ ಅದು ಸ್ವಾರ್ಥ-ಸಾಧಕವಾಗುವುದಿಲ್ಲವೆಂದು ಅಥವಾ ಇನ್ನೊಂದು ಅರ್ಥಕ್ಕೆ ಬಾಧಕವಾಗುವುದಿಲ್ಲವೆಂದು ಹೇಳಬೇಕಾದ ಅಗತ್ಯವಿಲ್ಲ ಎಂದು ಅಭಿಪ್ರಾಯ.

ಮನೋರಥರಥಾರೂಢಃ ಕೋಽರ್ಥೋ ವ್ಯರ್ಥಂ ಭವೇತ್ ತವ ।
ಕಃ ಕುರ್ಯಾಚ್ಛುಕ್ತಿರೂಪ್ಯೇಣ ವಲಯಂ ಕಟಕಾನಿ ವಾ ॥ ೧೨೩೨ ॥

**ಅರ್ಥ-** ಮನೋರಥರಥಾರೂಢಃ = ಮನೋರಥ ರಥವನ್ನು ಏರಿದ, ಕೋ ಅರ್ಥಃ = ಯಾವ ಅರ್ಥವು, ತವ = ನಿನಗೆ, ವ್ಯರ್ಥಂ ಭವೇತ್ = ವ್ಯರ್ಥವಾಗುತ್ತದೆ, ಶುಕ್ತಿರೂಪ್ಯೇಣ = ಶುಕ್ತಿರೂಪ್ಯದಿಂದ, ಕಃ = ಯಾವನು, ವಲಯಂ = ಬಳೆಗಳನ್ನು, ಕಟಕಾನಿ ವಾ = ಅಥವಾ ಕಡಗಗಳನ್ನು, ಕುರ್ಯಾತ್ = ಮಾಡುತ್ತಾನೆ?

**ಅನುವಾದ-** ಮನೋರಥದ ರಥವನ್ನು ಏರಿದ ಯಾವ ಅರ್ಥವು ನಿನಗೆ ವ್ಯರ್ಥವಾಗುತ್ತದೆ? ಯಾವನು ಶುಕ್ತಿರೂಪ್ಯದಿಂದ ಬಳೆಯನ್ನಾಗಲೀ, ಕಡಗಗಳನ್ನಾಗಲೀ ಮಾಡುತ್ತಾನೆ?

**ಭಾವವಿಲಾಸಿನೀ–** ಮಿಥ್ಯಾಭೂತಸ್ಯಾರ್ಥಕ್ರಿಯಾಕಾರಿತ್ವಂ ನ ಘಟತ ಇತ್ಯತ್ರ ನೀತಿಮಾಹ – **ಮನೋರಥೇತಿ** ॥ ೧೨೩೨॥

**ವಿವರಣೆ-** ಮಿಥ್ಯಾಭೂತವಾದ ಅರ್ಥಗಳು ಅರ್ಥಕ್ರಿಯಾಕಾರಿಗಳೆಂಬುದು ನಿನ್ನ ಮನೋರಥ ಮಾತ್ರ. ಅದು ಲೋಕಾನುಭವಕ್ಕೆ ವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ.

ಪುತ್ರೀಜನನಶಕ್ತಶ್ಚೇನ್ನ ಪುತ್ರಂ ಜನಯೇತ್ ಕುತಃ ।
ರಾಗಂ ಚೇಜ್ಜನಯೇಚ್ಛುಕ್ತಿರೂಪ್ಯಂ ನ ಕಟಕಂ ಕುತಃ ॥ ೧೨೩೩ ॥

**ಅರ್ಥ-** ಪುತ್ರೀಜನನಶಕ್ತಶ್ಚೇತ್ = ಮಗಳನ್ನು ಪಡೆಯುವ ಶಕ್ತಿಯುಳ್ಳವನಾದರೆ, ಪುತ್ರಂ = ಮಗನನ್ನು, ಕುತಃ = ಏಕೆ, ನ ಜನಯೇತ್ = ಪಡೆಯುವುದಿಲ್ಲ? ಶುಕ್ತಿರೂಪ್ಯಂ = ಶುಕ್ತಿರೂಪ್ಯವು, ರಾಗಂ = ರಾಗವನ್ನು, ಜನಯೇಚ್ಚೇತ್= ಹುಟ್ಟಿಸುವುದಾದರೆ, ಕುತಃ = ಏಕೆ, ಕಟಕಂ = ಕಡಗವನ್ನು, ನಜನಯೇತ್ = ಉಂಟುಮಾಡುವುದಿಲ್ಲ?

**ಅನುವಾದ-** ಪುತ್ರೀಜನನಶಕ್ತಿಯುಳ್ಳವನು ಪುತ್ರನನ್ನು ಏಕೆ ಪಡೆಯುವುದಿಲ್ಲ? ಶುಕ್ತಿರೂಪ್ಯಕ್ಕೆ ರಾಗಜನನ ಶಕ್ತಿಯಿದ್ದರೆ, ಕಟಕನಿರ್ಮಾಣ ಶಕ್ತಿಯು ಏಕೆ ಇಲ್ಲ?

**ಭಾವವಿಲಾಸಿನೀ–** ಶುಕ್ತಿರೂಪ್ಯಮಪಿ ರಾಗಾದ್ಯರ್ಥಕ್ರಿಯಾಜನಕಮಿತ್ಯೇತದಪಿ ದುರ್ನೀತ್ಯಾ ದೂರೀಕೃತಮಿತಿ ಭಾವೇನೋಕ್ತಮ್ ॥ **ಪುತ್ರೀತಿ** ॥ ೧೨೩೩ ॥

**ವಿವರಣೆ-** ಮಿಥ್ಯಾಭೂತವಾದುದು ಅರ್ಥಕ್ರಿಯಾಕಾರಿ ಎಂಬುದು ಕೇವಲ ನನ್ನ ಮನೋರಥವಲ್ಲ. ಮಿಥ್ಯಾಭೂತವಾದ ಶುಕ್ತಿರೂಪ್ಯಕ್ಕೂ ರಾಗಾದ್ಯರ್ಥಕ್ರಿಯಾಕಾರಿತ್ವವು ದೃಷ್ಟವಾಗಿದೆ ಎಂದು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ರಾಗ ಎಂದರೆ ಇಚ್ಛೆ. ಅದು ಇಲ್ಲಿ ಶುಕ್ತಿರೂಪ್ಯಜ್ಞಾನಜನ್ಯ. ಆ ಜ್ಞಾನವು ಸತ್ಯವೇ ಆಗಿದೆ. ಆದ್ದರಿಂದ ಮಿಥ್ಯಾಭೂತವಾದ ಶುಕ್ತಿರೂಪ್ಯವು ರಾಗವನ್ನೂ ಉಂಟುಮಾಡುವುದಿಲ್ಲ, ಕಟಕವನ್ನೂ ಉಂಟುಮಾಡುವುದಿಲ್ಲ. ಯಾವ ವಿಧವಾದ ಅರ್ಥಕ್ರಿಯಾಜನಕತ್ವವೂ ಇಲ್ಲ ಎಂದು ಅಭಿಪ್ರಾಯ.

ರಾಜ್ಞಾ ಪ್ರತ್ಯಕ್ಷತೋ ದೃಷ್ಟಸ್ಯಾಕ್ಷೇಪೀ ಶಿಕ್ಷ್ಯತೇ ನರೈಃ ।
ಯಥೇಶದೃಷ್ಟಮಿಥ್ಯಾತ್ವವಾದೋ ವೇದೋಽಪ್ಯಪೋದ್ಯದೇ ॥ ೧೨೩೪ ॥

**ಅರ್ಥ-** ರಾಜ್ಞಾ = ರಾಜನಿಂದ, ಪ್ರತ್ಯಕ್ಷತೋ ದೃಷ್ಟಸ್ಯ = ಪ್ರತ್ಯಕ್ಷವಾಗಿ ನೋಡಲ್ಪಟ್ಟ ಅರ್ಥವನ್ನು, ಆಕ್ಷೇಪೀ = ಅಲ್ಲಗಳೆಯುವವನು, ನರೈಃ = ರಾಜಭಟರಿಂದ, ಶಿಕ್ಷ್ಯತೇ = ಶಿಕ್ಷೆಗೆ ಒಳಗಾಗುತ್ತಾನೆ. ಯಥಾ= ಹೇಗೆ, ಈಶದೃಷ್ಟಮಿಥ್ಯಾತ್ವವಾದಃ = ಈಶ್ವರದೃಷ್ಟವಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವ ವಾಕ್ಯವನ್ನುಳ್ಳ, ವೇದೋಽಪಿ = ವೇದವೂ ಕೂಡ, ಅಪೋದ್ಯದೇ = ಪ್ರತೀತಾರ್ಥದಲ್ಲಿ ನಿರಾಕರಿಸಲ್ಪಡುತ್ತದೆಯೋ ಅದರಂತೆ.

**ಅನುವಾದ-** ರಾಜನು ಪ್ರತ್ಯಕ್ಷವಾಗಿ ನೋಡಿದ ವಿಷಯವನ್ನು ಯಾವನು ಅಲ್ಲಗಳೆಯುತ್ತಾನೆಯೋ ಅವನು ರಾಜಭಟರಿಂದ ಶಿಕ್ಷಿಸಲ್ಪಡುತ್ತಾನೆ. ಹೇಗೆ ಈಶ್ವರನು ನೋಡಿದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವ ವಾಕ್ಯವನ್ನು ಹೊಂದಿದ ವೇದವೂ ಕೂಡ ಶಿಕ್ಷಿಸಲ್ಪಡುತ್ತದೆಯೋ ಅದರಂತೆ.

**ಭಾವವಿಲಾಸಿನೀ–** ಸರ್ವಜ್ಞಭಗವದ್ದೃಷ್ಟಜಗತೋ ಮಿಥ್ಯಾತ್ವಂ ವದಂತೀವ ಯಾ ಶ್ರುತಿರ್ಭಾತಿ ಸಾಪ್ಯನ್ಯಥೈವ ಯೋಜ್ಯೇತ್ಯತ್ರ ನೀತಿಮಾಹ–**ರಾಜ್ಞೇತಿ** ॥ ದೃಷ್ಟಸ್ಯ ಅರ್ಥಸ್ಯ ಆಕ್ಷೇಪೀನಾಸ್ತಿತ್ವ-ಕಥನೇನಾಕ್ಷೇಪಂ ಕುರ್ವನ್ ನರೈಃ ರಾಜಭಟೈಃ ಯಥಾ ಶಿಕ್ಷ್ಯತೇ ತಥಾ ಈಶದೃಷ್ಟಮಿಥ್ಯಾತ್ವವಾದಃ ಈಶದೃಷ್ಟಸ್ಯ ಘಟಪಟಾದ್ಯರ್ಥಸ್ಯ ಮಿಥ್ಯಾತ್ವವಾದೋ ಯಸ್ಮಿನ್ಸತಥೋಕ್ತಃ । ವೇದಃ ಏಕಮೇವಾದ್ವಿತೀಯಮಿತ್ಯಾದಿವೇದಃ ಅಪೋದ್ಯತೇ ಅರ್ಥಾಂತರೇ ನೀಯತೇ ॥ ೧೨೩೪ ॥

**ವಿವರಣೆ-** ಸರ್ವಜ್ಞನಾದ ಈಶ್ವರನಿಂದ ದೃಷ್ಟವಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವಂತೆ ಕಾಣುವ ವೇದವಾಕ್ಯಗಳಿಗೂ ಅರ್ಥಾಂತರವನ್ನು ಮಾಡಬೇಕು ಎಂಬ ನೀತಿಯನ್ನು ಇಲ್ಲಿ ಹೇಳುತ್ತಾರೆ. ವೇದಗಳಿಗೆ ಅಪವಾದ ಎಂದರೆ ಅಪ್ರಾಮಾಣ್ಯ ಎಂದು ಅರ್ಥವಲ್ಲ, ಅರ್ಥಾಂತರದಲ್ಲಿ ನಯನ ಎಂದು ಇಷ್ಟೇ ಅರ್ಥ.

ಗುರೋರಗುರುತಾಂ ಬ್ರೂತೇ ಲಘೋರಲಘುತಾಂ ಖಲಃ ।
ಭ್ರಾಂತಿಸ್ತಾತ್ಕಾಲಿಕೀ ಭ್ರಾಂತಿದೀರ್ಘಭ್ರಾಂತಿಃ ಕಿಲ ಪ್ರಮಾ ॥ ೧೨೩೫ ॥

**ಅರ್ಥ-** ಖಲಃ = ಖಳನಾದವನು, ಗುರೋಃ = ಗುರುವಾದ ಪದಾರ್ಥಕ್ಕೆ ಅಗುರುತಾಂ= ಲಘುತ್ವವನ್ನು, ಬ್ರೂತೇ= ಹೇಳುತ್ತಾನೆ, ಲಘೋಃ = ಲಘುವಾದ ಪದಾರ್ಥಕ್ಕೆ, ಅಲಘುತಾಂ= ಗುರುತ್ವವನ್ನು, ಬ್ರೂತೇ = ಹೇಳುತ್ತಾನೆ. ತಾತ್ಕಾಲಿಕೀ ಭ್ರಾಂತಿಃ = ಅಲ್ಪಸಮಯದವರೆಗೆ ಮಾತ್ರ ಇರುವ ಭ್ರಾಂತಿಯು, ಭ್ರಾಂತಿಃ = ಭ್ರಾಂತಿ. ದೀರ್ಘಭ್ರಾಂತಿಃ = ಬ್ರಹ್ಮಜ್ಞಾನಬರುವವರೆಗೆ ಇರುವ ಭ್ರಾಂತಿಯು, ಪ್ರಮಾ ಕಿಲ = ಪ್ರಮೆಯಷ್ಟೇ ?

**ಅನುವಾದ-** ಖಳನಾದವನು ಹಗುರವಾದ ಪದಾರ್ಥವನ್ನು ಭಾರವಾಗಿದೆ ಎಂತಲೂ ಭಾರವಾದ ಪದಾರ್ಥವನ್ನು ಹಗುರವಾಗಿದೆ ಎಂತಲೂ ಹೇಳುತ್ತಾನೆ. ಅಲ್ಪಸಮಯದವರೆಗೆ ಇರುವ ಭ್ರಾಂತಿಯು ಮಾತ್ರ ಭ್ರಾಂತಿ. ದೀರ್ಘ ಸಮಯದವರೆಗೆ ಇರುವ ಭ್ರಾಂತಿಯು ಪ್ರಮೆಯಷ್ಟೇ ?

**ಭಾವವಿಲಾಸಿನೀ–** ಪರಸ್ಯ ಪ್ರಮೇಯಾಂತರಮಪಿ ದುರ್ನೀತಿಪರಾಹತಮಿತ್ಯಾಹ – **ಗುರೋರಿತಿ** ॥ ಅಗುರುತಾಂ ಲಘುತಾವ್ । ಅಲಘುತಾವ್ ಗುರುತಾವ್ । ತಾತ್ಕಾಲಿಕೀ ತತ್ಕ್ಷಣೇ ವಿದ್ಯಮಾನಾ ಉತ್ತರಕ್ಷಣೇ ಪರಿಹ್ರಿಯಮಾಣಾ ಭ್ರಾಂತಿಃ ಪ್ರಾತಿಭಾಸಿಕಭ್ರಾಂತಿಃ । ಭ್ರಾಂತಿಃಕಿಲ ಭ್ರಾಂತಿಶಬ್ದವಾಚ್ಯಾ ಕಿಲ । ದೀರ್ಘಭ್ರಾಂತಿಃ ಬ್ರಹ್ಮಜ್ಞಾನನಾಪರ್ಯಂತಮನುವರ್ತಮಾನಾ

ವ್ಯಾವಹಾರಿಕಭ್ರಾಂತಿಃ ಪ್ರಮಾ ಕಿಲ ಪ್ರಮಾಶಬ್ದವಾಚ್ಯಾ ಕಿಲ । ಮಹಾಭ್ರಾಂತಿಂ ಪ್ರಮಾತ್ವೇನ ಪರಿಗಣಯನ್ ಅಲ್ಪಭ್ರಾಂತಿಂ ಚ ಭ್ರಮಪಕ್ಷೇ ನಿಕ್ಷಿಪನ್ ಪೂರ್ವಾರ್ಧೋಕ್ತದುರ್ನೀತೇರ್ವಿಷಯ ಇತಿ ಭಾವಃ ॥ ೧೨೩೫ ॥

**ವಿವರಣೆ-** ಪರರು ಮಾಡುವ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ವ್ಯವಸ್ಥೆಯು ಒಂದು ದುರ್ನೀತಿ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಶುಕ್ತಿರಜತಾದಿ ಭ್ರಾಂತಿಗಳು ಈಗಲೇ ಬಾಧಕ್ಕೆ ಒಳಗಾಗುವುದರಿಂದ ಅಲ್ಪಕಾಲಸ್ಥಿತಿಯುಳ್ಳವು. ಜಗದ್ಭ್ರಾಂತಿಯು ಬ್ರಹ್ಮಜ್ಞಾನಬರುವವರೆಗೆ ಇರುವುದರಿಂದ ಅದು ದೀರ್ಘಭ್ರಾಂತಿ. ಆದರೆ ಪರವಾದಿಗಳು ದೀರ್ಘಭ್ರಾಂತಿಯನ್ನು ಪ್ರಮಾ ಎಂದು ಹೇಳುತ್ತಾರೆ. ವಸ್ತುತಃ ಅದು ಪ್ರಾತಿಭಾಸಿಕಭ್ರಾಂತಿಗಿಂತಲೂ ದೊಡ್ಡಭ್ರಾಂತಿ ಎಂದು ಹೇಳಬೇಕಾಗಿದ್ದಿತು. ಅದನ್ನು ಪ್ರಮಾ ಎಂದು ಹೇಳುವುದು ಲಘುವಾದ ವಸ್ತುವನ್ನು ಗುರು ಎಂದು ಹೇಳುವ ಖಳರ ಸ್ವಭಾವವನ್ನು ಅನುಸರಿಸುತ್ತದೆ ಎಂದು ಅಭಿಪ್ರಾಯ.

ಉಷ್ಟ್ರಃ ಕಂಟಕಮೇವಾತ್ತಿ ಪಕ್ವಂ ನ ಕ್ವಾಪಿ ಭಕ್ಷಯೇತ್ ।
ಶ್ರುತಿ ಶ್ರೌತಾರ್ಥಸತ್ಯತ್ವತ್ಯಾಗಿ ಮಿಥ್ಯಾತ್ವರಾಗಿ ತತ್ ॥ ೧೨೩೬ ॥

**ಅರ್ಥ-** ಉಷ್ಟ್ರಃ= ಒಂಟೆಯು, ಕಂಟಕಮೇವ= ಮುಳ್ಳನ್ನೇ, ಅತ್ತಿ= ತಿನ್ನುತ್ತದೆ, ಕ್ವಾಪಿ= ಎಂದೂ, ಪಕ್ವಂ= ಹಣ್ಣನ್ನು, ನ ಭಕ್ಷಯೇತ್= ತಿನ್ನುವುದಿಲ್ಲ, ತತ್= ಅದರಂತೆ, ಶ್ರುತಿ ಶ್ರೌತಾರ್ಥಸತ್ಯತ್ವತ್ಯಾಗಿ= ಅದ್ವೈತಿಯು ಶ್ರುತಿಯು ಸಾಕ್ಷಾತ್ತಾಗಿ ಹೇಳಿದ ಸತ್ಯತ್ವವನ್ನು ಬಿಟ್ಟು, ಮಿಥ್ಯಾತ್ವರಾಗಿ= ಮಿಥ್ಯಾತ್ವದಲ್ಲಿ ಆಸಕ್ತಿವುಳ್ಳವನಾಗಿದ್ದಾನೆ.

**ಅನುವಾದ-** ಒಂಟೆಯು ಮುಳ್ಳನ್ನೇ ತಿನ್ನುತ್ತದೆ, ಪಕ್ವವಾದ ಹಣ್ಣನ್ನು ಎಂದೂ ತಿನ್ನುವುದಿಲ್ಲ. ಅದರಂತೆ ಅದ್ವೈತಿಯು ಶ್ರುತಿಯು ಸಾಕ್ಷಾತ್ತಾಗಿ ಹೇಳಿದ ಜಗತ್ಸತ್ಯತ್ವವನ್ನು ಪರಿತ್ಯಾಗ ಮಾಡಿ ಮಿಥ್ಯಾತ್ವದಲ್ಲಿ ಆಸಕ್ತಿವುಳ್ಳವನಾಗಿದ್ದಾನೆ.

**ಭಾವವಿಲಾಸಿನೀ–** ಪ್ರಮೇಯಾಂತರೇಪಿ ಪರಸ್ಯ ದುರ್ನೀತಿಂ ದರ್ಶಯತಿ ॥ **ಉಷ್ಟ್ರ ಇತಿ** ॥ ಶ್ರುತೌ ಸಾಕ್ಷಾಚ್ಛ್ರುತಸತ್ಯತ್ವಂ ತ್ಯಜನ್ ಆರ್ಥಿಕಮಿಥ್ಯಾತ್ವೇ ರಾಗಂಕುರ್ವನ್ನುಷ್ಟ್ರಸ್ವಭಾವ ಇತಿ ಭಾವಃ ॥ ೧೨೩೬ ॥

**ವಿವರಣೆ-** ಈ ಉಷ್ಟ್ರಸ್ವಭಾವವೂ ಸಹ ಒಂದು ದುರ್ನೀತಿ ಎಂದು ಇಲ್ಲಿತೋರಿಸುತ್ತಾರೆ.

ರಸಾರ್ಥಿ ಶ್ವಾ ಗೃಹೀತ್ವಾಽಸ್ಥಿ ದಂತೈರಂತರ್ನಿಕೃಂತತಿ।
ಯಥಾರ್ಥಿಕಾರ್ಥ ಮಿಥ್ಯಾತ್ವವ್ಯರ್ಥಾರ್ಥೋಽರ್ಥಂ ಕುಯುಕ್ತಿದೃಕ್ ॥
॥ ೧೨೩೭॥

**ಅರ್ಥ-** ರಸಾರ್ಥಿ= ರಸವನ್ನು ಬಯಸುವ, ಶ್ವಾ= ನಾಯಿಯು, ಅಸ್ಥಿ= ಮೂಳೆಯನ್ನು, ಗೃಹೀತ್ವಾ= ತೆಗೆದುಕೊಂಡು, ದಂತ್ಯೈಃ= ತನ್ನ ಹಲ್ಲುಗಳಿಂದ, ಅಂತಃ= ಒಳಗೆ, ನಿಕೃಂತತಿ= ಕಡಿಯುತ್ತದೆ, ಯಥಾ= ಹೇಗೆ, ಕುಯುಕ್ತಿದೃಕ್= ಮಿಥ್ಯಾತ್ವವನ್ನು ಸಾಧಿಸುವುದಕ್ಕೆ ದೃಶ್ಯತ್ವವೆಂಬ ಕುಯುಕ್ತಿಯನ್ನೇ ಹುಡುಕುವ ಮಾಯಾವಾದಿಯು, ಆರ್ಥಿಕಾರ್ಥ-ಮಿಥ್ಯಾತ್ವವ್ಯರ್ಥಾರ್ಥಃ= ಆರ್ಥಿಕಾರ್ಥವಾದ ಮಿಥ್ಯಾತ್ವವನ್ನು ಸಂಪಾದನೆ ಮಾಡುವ ವ್ಯರ್ಥಪ್ರಯತ್ನವುಳ್ಳವನಾಗಿ, ಅರ್ಥಂ= ಜಗದ್ರೂಪವಾದ ಅರ್ಥವನ್ನು, ನಿಕೃಂತತಿ= ನಾಶಮಾಡುತ್ತಾನೆಯೋ ಹಾಗೆ.

**ಅನುವಾದ-** ರಸವನ್ನು ಬಯಸುವ ನಾಯಿಯು ಎರಡು ಕಾಲುಗಳಿಂದ ಅಸ್ಥಿಯನ್ನು ಹಿಡಿದು ತನ್ನ ದಂತಗಳಿಂದ ಅದರ ಒಳಗೆ ಕಡಿಯುತ್ತದೆ. ಹೇಗೆ ಮಿಥ್ಯಾತ್ವವನ್ನು ಸಾಧಿಸಲು ಕುಯುಕ್ತಿಯನ್ನು ಹುಡುಕುವ ಮಾಯಿಯು ಆರ್ಥಿಕಾರ್ಥವಾದ ಮಿಥ್ಯಾತ್ವರೂಪವಾದ ವ್ಯರ್ಥವಾದ ಅರ್ಥವನ್ನು ಸಂಪಾದಿಸಲು ಪ್ರಯತ್ನಪಟ್ಟು ವಿಶ್ವಸತ್ಯತ್ವರೂಪವಾದ ಅರ್ಥವನ್ನು ಕಡಿದುಹಾಕುತ್ತಾನೆಯೋ ಅದರಂತೆ.

**ಭಾವವಿಲಾಸಿನೀ–** ಸಾಕ್ಷಾಚ್ಛ್ರುತಸತ್ಯತ್ವೇ ಸ್ವತ ಏವ ಪ್ರವದ್ಯುಕ್ತಿರಸಂವಿಹಾಯಾಽರ್ಥಿಕಮಿಥ್ಯಾ-ತ್ವಾರ್ಥೇಽನುಪಪದ್ಯಮಾನದೃಶ್ಯತ್ವಾದಿ ಯುಕ್ತಿಘಟನಾಯ ಪ್ರಯಾಸಂ ಕುರ್ವನ್ ಶುನಸ್ಸಮಾನ ಇತ್ಯಾಹ –**ರಸೇತಿ** ॥ ಗೃಹೀತ್ವಾ ಚರಣದ್ವಯೇನ ಗೃಹೀತ್ವಾ ॥ ೧೨೩೭ ॥

ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।
ವಿಶ್ವಸೌರಭಸರ್ವಸ್ವಮಥ ವಿಷ್ಣೌ ನ್ಯವೇದಯತ್ ॥ ೧೨೩೮ ॥

**ಅರ್ಥ-** ವಾದಿರಾಜಾಖ್ಯಯತಿನಾ= ವಾದಿರಾಜ ಎಂಬ ಯತಿಗಳಿಂದ, ಯುಕ್ತಿಮಲ್ಲಿಕಾ= ಯುಕ್ತಿಮಲ್ಲಿಕೆಯು, ಸಾಧಿತಾ= ಸಂಪಾದಿಸಲ್ಪಟ್ಟಿತು, ಅಥ= ಅನಂತರ, ವಿಶ್ವಸೌರಭಸರ್ವಸ್ವಂ= ವಿಶ್ವಸೌರಭದ ಸರ್ವಸಾರವನ್ನು, ವಿಷ್ಣೌ= ವಿಷ್ಣುವಿನಲ್ಲಿ, ನ್ಯವೇದಯತ್= ನಿವೇದಿಸಿದರು.

**ಅನುವಾದ-** ವಾದಿರಾಜರೆಂಬ ಯತಿಗಳು ಯುಕ್ತಿಮಲ್ಲಿಕೆಯನ್ನು ಸಂಪಾದಿಸಿ ಭೇದಸೌರಭವನ್ನು ಸಮರ್ಪಣೆ ಮಾಡಿದ ನಂತರ ವಿಶ್ವಸೌರಭಸರ್ವಸ್ವವನ್ನು ವಿಷ್ಣುವಿಗೆ ಸಮರ್ಥನೆ ಮಾಡಿದರು.

**ಭಾವವಿಲಾಸಿನೀ–** ಸೌರಭಂ ಸಮೂಪಯಂಸ್ತತ್ರ ನಿರೂಪಿತಮರ್ಥಂ ಹರಾವರ್ಪಯತಿ ॥ **ವಾದಿರಾಜೇತಿ** ॥ ಅಥ ಭೇದಸೌರಭನಿವೇದನಾಂತರಮ್ ॥ ೧೨೩೭ ॥

**ಇತಿ ಶ್ರೀಮತ್ಕವಿಕುಲತಿಲಕಶ್ರೀಮದ್ವಾದಿರಾಜತೀರ್ಥಚರಣಾರವಿಂದ ಚಂಚರೀಕಸುರೋತ್ತಮಭಿಕ್ಷುವಿರಚಿತಾಯಾಂ ಯುಕ್ತಿಮಲ್ಲಿಕಾಟೀಕಾಯಾಂ ಭಾವವಿಲಾಸಿನ್ಯಾಂ ಚತುರ್ಥಂ ವಿಶ್ವಸೌರಭಸರ್ವಸ್ವಂ ಸಂಪೂರ್ಣಮ್ ॥ ೪ ॥**

**ವ್ಯಾವಹಾರಿಕಭ್ರಾಂತಿಃ ಪ್ರಮಾ ಕಿಲ ಪ್ರಮಾಶಬ್ದವಾಚ್ಯಾ ಕಿಲ । ಮಹಾಭ್ರಾಂತಿಂ ಪ್ರಮಾತ್ವೇನ ಪರಿಗಣಯನ್ ಅಲ್ಪಭ್ರಾಂತಿಂ ಚ ಭ್ರಮಪಕ್ಷೇ ನಿಕ್ಷಿಪನ್ ಪೂರ್ವಾರ್ಧೋಕ್ತದುರ್ನೀತೇರ್ವಿಷಯ ಇತಿ ಭಾವಃ ॥ ೧೨೩೫ ॥**

**ವಿವರಣೆ-** ಪರರು ಮಾಡುವ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ವ್ಯವಸ್ಥೆಯು ಒಂದು ದುರ್ನೀತಿ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಶುಕ್ತಿರಜತಾದಿ ಭ್ರಾಂತಿಗಳು ಈಗಲೇ ಬಾಧಕ್ಕೆ ಒಳಗಾಗುವುದರಿಂದ ಅಲ್ಪಕಾಲಸ್ಥಿತಿಯುಳ್ಳವು. ಜಗದ್ಭ್ರಾಂತಿಯು ಬ್ರಹ್ಮಜ್ಞಾನಬರುವವರೆಗೆ ಇರುವುದರಿಂದ ಅದು ದೀರ್ಘಭ್ರಾಂತಿ. ಆದರೆ ಪರವಾದಿಗಳು ದೀರ್ಘಭ್ರಾಂತಿಯನ್ನು ಪ್ರಮಾ ಎಂದು ಹೇಳುತ್ತಾರೆ. ವಸ್ತುತಃ ಅದು ಪ್ರಾತಿಭಾಸಿಕಭ್ರಾಂತಿಗಿಂತಲೂ ದೊಡ್ಡಭ್ರಾಂತಿ ಎಂದು ಹೇಳಬೇಕಾಗಿದ್ದಿತು. ಅದನ್ನು ಪ್ರಮಾ ಎಂದು ಹೇಳುವುದು ಲಘುವಾದ ವಸ್ತುವನ್ನು ಗುರು ಎಂದು ಹೇಳುವ ಖಳರ ಸ್ವಭಾವವನ್ನು ಅನುಸರಿಸುತ್ತದೆ ಎಂದು ಅಭಿಪ್ರಾಯ.

**ಉಷ್ಟ್ರಃ ಕಂಟಕಮೇವಾತ್ತಿ ಪಕ್ವಂ ನ ಕ್ವಾಪಿ ಭಕ್ಷಯೇತ್ ।**
**ಶ್ರುತಿ ಶ್ರೌತಾರ್ಥಸತ್ಯತ್ವತ್ಯಾಗಿ ಮಿಥ್ಯಾತ್ವರಾಗಿ ತತ್ ॥ ೧೨೩೬ ॥**

**ಅರ್ಥ-** ಉಷ್ಟ್ರಃ= ಒಂಟೆಯು, ಕಂಟಕಮೇವ= ಮುಳ್ಳನ್ನೇ, ಅತ್ತಿ= ತಿನ್ನುತ್ತದೆ, ಕ್ವಾಪಿ= ಎಂದೂ, ಪಕ್ವಂ= ಹಣ್ಣನ್ನು, ನ ಭಕ್ಷಯೇತ್= ತಿನ್ನುವುದಿಲ್ಲ, ತತ್= ಅದರಂತೆ, ಶ್ರುತಿ ಶ್ರೌತಾರ್ಥಸತ್ಯತ್ವತ್ಯಾಗಿ= ಅದ್ವೈತಿಯು ಶ್ರುತಿಯು ಸಾಕ್ಷಾತ್ತಾಗಿ ಹೇಳಿದ ಸತ್ಯತ್ವವನ್ನು ಬಿಟ್ಟು, ಮಿಥ್ಯಾತ್ವರಾಗಿ= ಮಿಥ್ಯಾತ್ವದಲ್ಲಿ ಆಸಕ್ತಿವುಳ್ಳವನಾಗಿದ್ದಾನೆ.

**ಅನುವಾದ-** ಒಂಟೆಯು ಮುಳ್ಳನ್ನೇ ತಿನ್ನುತ್ತದೆ, ಪಕ್ವವಾದ ಹಣ್ಣನ್ನು ಎಂದೂ ತಿನ್ನುವುದಿಲ್ಲ. ಅದರಂತೆ ಅದ್ವೈತಿಯು ಶ್ರುತಿಯು ಸಾಕ್ಷಾತ್ತಾಗಿ ಹೇಳಿದ ಜಗತ್ಸತ್ಯತ್ವವನ್ನು ಪರಿತ್ಯಾಗ ಮಾಡಿ ಮಿಥ್ಯಾತ್ವದಲ್ಲಿ ಆಸಕ್ತಿವುಳ್ಳವನಾಗಿದ್ದಾನೆ.

**ಭಾವವಿಲಾಸಿನೀ–** ಪ್ರಮೇಯಾಂತರೇಪಿ ಪರಸ್ಯ ದುರ್ನೀತಿಂ ದರ್ಶಯತಿ **॥ ಉಷ್ಟ್ರ ಇತಿ ॥** ಶ್ರುತೌ ಸಾಕ್ಷಾಚ್ಛ್ರುತಸತ್ಯತ್ವಂ ತ್ಯಜನ್ ಆರ್ಥಿಕಮಿಥ್ಯಾತ್ವೇ ರಾಗಂಕುರ್ವನ್ನುಷ್ಟ್ರಸ್ವಭಾವ ಇತಿ ಭಾವಃ ॥ ೧೨೩೫ ॥

**ವಿವರಣೆ-** ಈ ಉಷ್ಟ್ರಸ್ವಭಾವವೂ ಸಹ ಒಂದು ದುರ್ನೀತಿ ಎಂದು ಇಲ್ಲಿ ತೋರಿಸುತ್ತಾರೆ.

**ರಸಾರ್ಥಿ ಶ್ವಾ ಗೃಹೀತ್ವಾಽಸ್ಥಿ ದಂತೈರಂತರ್ನಿಕೃಂತತಿ।**
**ಯಥಾರ್ಥಿಕಾರ್ಥ ಮಿಥ್ಯಾತ್ವವ್ಯರ್ಥಾರ್ಥೋಽರ್ಥಂ ಕುಯುಕ್ತಿದೃಕ್ ॥**
**॥ ೧೨೩೭॥**

**ಅರ್ಥ-** ರಸಾರ್ಥಿ= ರಸವನ್ನು ಬಯಸುವ, ಶ್ವಾ= ನಾಯಿಯು, ಅಸ್ತಿ= ಮೂಳೆಯನ್ನು, ಗೃಹೀತ್ವಾ= ತೆಗೆದುಕೊಂಡು, ದಂತೈಃ= ತನ್ನ ಹಲ್ಲುಗಳಿಂದ, ಅಂತಃ= ಒಳಗೆ, ನಿಕೃಂತತಿ= ಕಡಿಯುತ್ತದೆ, ಯಥಾ= ಹೇಗೆ, ಕುಯುಕ್ತಿದೃಕ್= ಮಿಥ್ಯಾತ್ವವನ್ನು ಸಾಧಿಸುವುದಕ್ಕೆ ದೃಶ್ಯತ್ವವೆಂಬ ಕುಯುಕ್ತಿಯನ್ನೇ ಹುಡುಕುವ ಮಾಯಾವಾದಿಯು, ಆರ್ಥಿಕಾರ್ಥ-ಮಿಥ್ಯಾತ್ವವ್ಯರ್ಥಾರ್ಥಃ= ಆರ್ಥಿಕಾರ್ಥವಾದ ಮಿಥ್ಯಾತ್ವವನ್ನು ಸಂಪಾದನೆ ಮಾಡುವ ವ್ಯರ್ಥಪ್ರಯತ್ನವುಳ್ಳವನಾಗಿ, ಅರ್ಥಂ= ಜಗದ್ರೂಪವಾದ ಅರ್ಥವನ್ನು, ನಿಕೃಂತತಿ= ನಾಶಮಾಡುತ್ತಾನೆಯೋ ಹಾಗೆ.

**ಅನುವಾದ-** ರಸವನ್ನು ಬಯಸುವ ನಾಯಿಯು ಎರಡು ಕಾಲುಗಳಿಂದ ಅಸ್ತಿಯನ್ನು ಹಿಡಿದು ತನ್ನ ದಂತಗಳಿಂದ ಅದರ ಒಳಗೆ ಕಡಿಯುತ್ತದೆ. ಹೇಗೆ ಮಿಥ್ಯಾತ್ವವನ್ನು ಸಾಧಿಸಲು ಕುಯುಕ್ತಿಯನ್ನು ಹುಡುಕುವ ಮಾಯಿಯು ಆರ್ಥಿಕಾರ್ಥವಾದ ಮಿಥ್ಯಾತ್ವರೂಪವಾದ ವ್ಯರ್ಥವಾದ ಅರ್ಥವನ್ನು ಸಂಪಾದಿಸಲು ಪ್ರಯತ್ನಪಟ್ಟು ವಿಶ್ವಸತ್ಯತ್ವರೂಪವಾದ ಅರ್ಥವನ್ನು ಕಡಿದುಹಾಕುತ್ತಾನೆಯೋ ಅದರಂತೆ.

**ಭಾವವಿಲಾಸಿನೀ–** ಸಾಕ್ಷಾಚ್ಛ್ರುತಸತ್ಯತ್ವೇ ಸ್ವತ ಏವ ಪ್ರವದ್ಯುಕ್ತಿರಸಂವಿಹಾಯಾಽರ್ಥಿಕಮಿಥ್ಯಾ-ತ್ವಾರ್ಥೇಽನುಪಪದ್ಯಮಾನದೃಶ್ಯತ್ವಾದಿ ಯುಕ್ತಿಘಟನಾಯ ಪ್ರಯಾಸಂ ಕುರ್ವನ್ ಶುನಸ್ಸಮಾನ ಇತ್ಯಾಹ – **ರಸೇತಿ** ॥ ಗೃಹೀತ್ವಾ ಚರಣದ್ವಯೇನ ಗೃಹೀತ್ವಾ ॥ ೧೨೩೭ ॥

ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।
ವಿಶ್ವಸೌರಭಸರ್ವಸ್ವಮಥ ವಿಷ್ಣೌ ನ್ಯವೇದಯತ್ ॥ ೧೨೩೮ ॥

**ಅರ್ಥ-** ವಾದಿರಾಜಾಖ್ಯಯತಿನಾ= ವಾದಿರಾಜ ಎಂಬ ಯತಿಗಳಿಂದ, ಯುಕ್ತಿಮಲ್ಲಿಕಾ= ಯುಕ್ತಿಮಲ್ಲಿಕೆಯು, ಸಾಧಿತಾ= ಸಂಪಾದಿಸಲ್ಪಟ್ಟಿತು, ಅಥ= ಅನಂತರ, ವಿಶ್ವಸೌರಭಸರ್ವಸ್ವಂ= ವಿಶ್ವಸೌರಭದ ಸರ್ವಸಾರವನ್ನು, ವಿಷ್ಣೌ= ವಿಷ್ಣುವಿನಲ್ಲಿ, ನ್ಯವೇದಯತ್= ನಿವೇದಿಸಿದರು.

**ಅನುವಾದ-** ವಾದಿರಾಜರೆಂಬ ಯತಿಗಳು ಯುಕ್ತಿಮಲ್ಲಿಕೆಯನ್ನು ಸಂಪಾದಿಸಿ ಭೇದಸೌರಭವನ್ನು ಸಮರ್ಪಣೆ ಮಾಡಿದ ನಂತರ ವಿಶ್ವಸೌರಭಸರ್ವಸ್ವವನ್ನು ವಿಷ್ಣುವಿಗೆ ಸಮರ್ಥನೆ ಮಾಡಿದರು.

**ಭಾವವಿಲಾಸಿನೀ–** ಸೌರಭಂ ಸಮಾಪಯಂಸ್ತತ್ರ ನಿರೂಪಿತಮರ್ಥಂ ಹರಾವರ್ಪಯತಿ ॥ **ವಾದಿರಾಜೇತಿ** ॥ ಅಥ ಭೇದಸೌರಭನಿವೇದನಾಂತರಮ್ ॥ ೧೨೩೭ ॥

**ಇತಿ ಶ್ರೀಮತ್ಕವಿಕುಲತಿಲಕಶ್ರೀಮದ್ವಾದಿರಾಜತೀರ್ಥಚರಣಾರವಿಂದ ಚಂಚರೀಕಸುರೋತ್ತಮಭಿಕ್ಷುವಿರಚಿತಾಯಾಂ ಯುಕ್ತಿಮಲ್ಲಿಕಾಟೀಕಾಯಾಂ ಭಾವವಿಲಾಸಿನ್ಯಾಂ ಚತುರ್ಥಂ ವಿಶ್ವಸೌರಭಸರ್ವಸ್ವಂ ಸಂಪೂರ್ಣಮ್ ॥ ೪ ॥**

ಹೀಗೆ ಕವಿಕುಲತಿಲಕರಾದ ಶ್ರೀಮದ್ವಾದಿರಾಜತೀರ್ಥರ ಚರಣಾರವಿಂದಗಳಲ್ಲಿ ದುಂಬಿಯಂತಿರುವ ಸುರೋತ್ತಮಭಿಕ್ಷುವಿರಚಿತವಾದ ಭಾವವಿಲಾಸಿನೀ ಎಂಬ 'ಯುಕ್ತಿಮಲ್ಲಿಕಾ' ಟೀಕೆಯಲ್ಲಿ ನಾಲ್ಕನೆಯದಾದ 'ವಿಶ್ವಸೌರಭಸರ್ವಸ್ವ'ವು ಸಂಪೂರ್ಣವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

—o—

# ವಿಶ್ವಸೌರಭೋದಾಹೃತಸ್ವಾರಸಿಕಯುಕ್ತಯಃ

ಶ್ರೀಮಧ್ವಮುನಿಚಂದ್ರಸ್ಯ ಜ್ಯೋತ್ಸ್ನಾ ಕೃತ್ಸ್ನಾ ಜಗತ್ ತ್ರಯೇ ।
ಮದ್‌ಹೃದ್‌ವ್ಯೋಮ್ನ್ಯಸ್ಯ ಸದ್ಧಾಮ್ನಿ ವ್ಯಾಪ್ತೇಯಮಪಿ ಚಂದ್ರಿಕಾ ॥ ೫೧ ॥

**ಅನುವಾದ–** ಶ್ರೀಮಧ್ವಾಚಾರ್ಯರೆಂಬ ಮುನಿಚಂದ್ರರ ಬೆಳದಿಂಗಳು ಮೂರು ಜಗತ್ತಿನಲ್ಲಿಯೂ ಹರಡಿದೆ. ಆ ಚಂದ್ರಿಕೆಯು ನನ್ನ ಹೃದಯಾಕಾಶವೆಂಬ ಅವರ ಶ್ರೇಷ್ಠವಾದ ವಾಸಸ್ಥಾನದಲ್ಲಿಯೂ ವ್ಯಾಪ್ತವಾಗಿದೆ.

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್‌ಕಾಮಹೈತುಕಮ್ ॥ ೫೪ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೫೫ ॥
ಇತಿ ಗೀತಾಸು ಹರಿಣಾ ಜಗನ್ಮಿಥ್ಯಾತ್ವವಾದಿನಾಮ್ ।
ಜಗತಃ ಕ್ಷಯಕೃತ್ತ್ವಾ ಚ ಜಗತೋಽಹಿತತಾ ತಥಾ ॥ ೫೬ ॥

ಉಕ್ತಾ ಸೋಽಪಿ ಜಗತ್ಕರ್ತಾ ಹರ್ತಾ ಚೋತ್ತಥವರ್ತಿನಾಮ್ ।
ಅತೋಽತಿಭೀತೋ ಯಾತೋಽಹಂ ಮತಂ ಸತ್ಯತ್ವವೇದಿನಾಮ್ ।
ವೇದಾನುಮೋದಿನಾಂ ವೈರಿಭೇದಿನಾಂ ತತ್ವವಾದಿನಾಮ್ ॥ ೫೭ ॥

**ಅನುವಾದ–** ಕೃಷ್ಣನು ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೇ ಅಧ್ಯಾಯದಲ್ಲಿ ಆಸುರೀಗುಣಗಳಲ್ಲಿ ಜಗನ್ಮಿಥ್ಯಾತ್ವ ವಾದಿಗಳನ್ನು ಸೇರಿಸಿದ್ದಾನೆ. ಆಸುರೀಗುಣದವರು ಈ ಜಗತ್ತು 'ಮಿಥ್ಯಾ ಬಾಧಜ್ಞಾನದಿಂದ ವಿನಾಶ್ಯ, ನಿಯಮ್ಯವಲ್ಲ, ಕಾರ್ಯಕಾರಣ ಅಸಂಬದ್ಧ ಸದಸದ್ವಿಲಕ್ಷಣ ಎಂದೆಲ್ಲಾ ಹೇಳುತ್ತಾರೆ. ವಿವೇಕಹೀನರಾದ ಇವರು ಅನ್ಯಥಾಜ್ಞಾನವನ್ನು ಆಶ್ರಯಿಸಿದವರಾಗಿ

ಆತ್ಮನಾಶಕ್ಕೀಡಾಗುತ್ತಿದ್ದಾರೆ. ಜಗತ್ತಿನ ನಾಶಕರಾಗಿ ಕ್ರೂರಕರ್ಮಿಗಳಾಗಿ, ಅಹಿತಕಾರಿಗಳಾಗಿ ಪುನಃ ಪುನಃ ಹುಟ್ಟುತ್ತಿದ್ದಾರೆ.

ಹೀಗೆ ಕೃಷ್ಣನು ಜಗನ್ಮಿಥ್ಯಾತ್ವವಾದಿಗಳಿಗೆ 'ಜಗತ್ತಿನ ನಾಶಕರು, 'ಜಗತ್ತಿನ ಕಂಟಕರು' ಎಂಬ ದೋಷಗಳ ಪಟ್ಟಿಯನ್ನು ಸೂಚಿಸಿದ್ದಾನೆ. ಕೃಷ್ಣನ ಮಾತು ಪರಮ ಪ್ರಾಮಾಣಿಕ. ಏಕೆಂದರೆ ಈ ಸತ್ಯಭೂತವಾದ ಜಗತ್ತಿನ ಸೃಷ್ಟಿಕರ್ತನು ಕೃಷ್ಣನೇ ಆಗಿದ್ದಾನೆ. ಆದ್ದರಿಂದಲೇ ತನ್ನ ಸಿದ್ಧಾಂತಕ್ಕೆ ವಿರುದ್ಧವಾಗಿ ಉದ್ಧಟರಾಗಿ ವರ್ತಿಸುವವರನ್ನು ಸಂಹರಿಸುತ್ತಾನೆ. ಇಲ್ಲಿ ಸಂಹಾರವೆಂದರೆ ಸುಖದ ಸಂಹಾರವೇ ಆಗಿದೆ.

'ಜಗನ್ಮಿಥ್ಯಾತ್ವವು ಕೃಷ್ಣನಿಗೆ ಅಸಮ್ಮತವಾದ ಕಾರಣದಿಂದಲೇ ಇಂತಹ ಅತಿನಿಂದಿತವಾದ ಮತವನ್ನು ಸ್ವೀಕರಿಸಿದರೆ ಅವರಂತೆ ನನ್ನನ್ನೂ ಸಂಹರಿಸುತ್ತಾನೆ ಎನ್ನುವ ಭಯವನ್ನು ನಾನು (ವಾದಿರಾಜ ಮುನಿಯು) ಹೊಂದಿ, ತತ್ತ್ವವಾದಿಗಳ ಸಿದ್ಧಾಂತವನ್ನು ಅನುಸರಿಸಿದ್ದೇನೆ'.

ತತ್ತ್ವವಾದಿಗಳಾದರೂ ಕೃಷ್ಣನಿಗೆ ಸಮ್ಮತವಾಗುವಂತೆ ಜಗತ್ಸತ್ಯತ್ವವನ್ನು ಪ್ರತಿಪಾದಿಸುತ್ತಾರೆ. ವೇದಗಳಿಗೆ ಅನುಗುಣವಾಗಿ ಮಾತನಾಡುತ್ತಾರೆ. ಪರವಾದಿ ಭಯಂಕರರಾಗಿದ್ದಾರೆ. ಆದ್ದರಿಂದ ಶ್ರುತಿ ಸ್ಮೃತಿ ಸಮ್ಮತವಾದ ಮತವನ್ನೇ ನಾನು ಆಶ್ರಯಿಸಿದ್ದೇನೆ.

**ಸತ್ಯಪೀತಾಂಬರಾಲಾಭೇ ಮಾಯಾಪೀತಾಂಬರಂ ಸೃಜೇತ್ ।**
**ಲಬ್ಧೇ ತು ಸತ್ಯವಸನೇ ಮಾಯಾಸೃಷ್ಟೌ ಯತೇತ ಕಃ ॥ ೧೧೪ ॥**

**ಅನುವಾದ–** ಸತ್ಯಪೀತಾಂಬರವು ದೊರೆಯದಿದ್ದರೆ ಮಾಯಿಕ ಪೀತಾಂಬರವನ್ನು ಸೃಷ್ಟಿಸಬಹುದು. ಸತ್ಯವಾದ ಪೀತಾಂಬರವು ದೊರೆಯುತ್ತಿರುವಾಗ ಯಾವನು ಮಾಯಾಸೃಷ್ಟಿಯಲ್ಲಿ ಪ್ರಯತ್ನಪಡುತ್ತಾನೆ?

**ಜೇತಾ ದಾತಾ ಚಿಕೇತೇತಿ ಬ್ರಹ್ಮಣೋಽರ್ಥಕ್ರಿಯಾಕೃತಿಃ ।**
**ತ್ರಿಧಾಽಪಿ ಬೋಧಿತಾ ಯಸ್ಮಾತ್ ತಸ್ಮಾತ್ ಬ್ರಹ್ಮೋಪಮಾ ಮಮ ॥೧೭೩॥**

**ಅನುವಾದ–** ಈ ಶ್ರುತಿಯು ಜೇತಾ, ದಾತಾ, ಚಿಕೇತ, ಎಂದು ಮೂರು ಪ್ರಕಾರದಿಂದ ಜಗತ್ತಿಗೆ ಅರ್ಥಕ್ರಿಯಾಕಾರಿ ಎಂಬುದನ್ನು ಸಾಧಿಸಿದೆ; ಸ್ಪೃಹಾ ಯೋಗ್ಯವಾದ ಜಗತ್ತನ್ನು ಗೆದ್ದು ಇಂದ್ರಾದಿಗಳಿಗೆ ದಾನಮಾಡಿ, ಸ್ವಾರ್ಥರಾಹಿತ್ಯವನ್ನು ತೋರಿಸಿರುವನು; ಇಂಥ ಸತ್ಯ ಜಗತ್ತನ್ನೂ ಸೃಷ್ಟಿಸಿದನೆಂದು ಹೇಳಲಾಗುವ ಬ್ರಹ್ಮನು,

ಸತ್ಯತ್ವವನ್ನು ಸಾಧಿಸುವ ತತ್ತ್ವವಾದಿಗೆ ಅತ್ಯಂತ ಯೋಗ್ಯವಾದ ದೃಷ್ಟಾಂತನಾಗುತ್ತಾನೆ.

**ಸುಶೋಭಿಪದವಿನ್ಯಾಸವ್ಯತ್ಯಾಸಂ ಶ್ರುತಿಸುಂದರೀ ।**
**ಕದಧ್ವನಿ ಸಹೇತಾಪಿ ನ ಸಹೇತ ಸದಧ್ವನಿ ॥ ೧೭೫ ॥**

**ಅನುವಾದ–** ಯಥಾಸ್ಥಿತವಾದ ಪದದಿಂದ ಯೋಗ್ಯವಾದ ಅರ್ಥವು ಅಬಾಧಿತವಾಗಿ ಸಿದ್ಧವಾಗುತ್ತಿರುವಾಗ ಅದನ್ನು (ಪದವಿನ್ಯಾಸವನ್ನು) ಬದಲಿಸಿ, ಬೇರೆ ಅನ್ವಯ ಅರ್ಥವನ್ನು ಹೇಳುವುದನ್ನು ಶ್ರುತಿಯು ಸಹಿಸುವುದಿಲ್ಲ; ಕಂಟಕವಿರುವ (ಮುಳ್ಳಿರುವ) ಮಾರ್ಗದಲ್ಲಿ ಅನಿರ್ವಾಹವಾಗಿ ಪಾದವಿನ್ಯಾಸವನ್ನು ಬದಲಿಸಬಹುದಾದರೂ-ಶ್ರುತಿ ಶಬ್ದಗಳನ್ನು (ಪದಗಳ ಅನ್ವಯವನ್ನು) ವ್ಯತ್ಯಾಸ ಮಾಡಿಕೊಳ್ಳಬಹುದಾದರೂ, ಒಳ್ಳೆಯ ಸರಳ ಮಾರ್ಗದಲ್ಲಿ ಪಾದವ್ಯತ್ಯಾಸವನ್ನು ಸಹಿಸದಿರುವಂತೆ (ಹಾರಿ ನಡೆಯುವುದನ್ನು ಎಂಬಂತೆ) ಯೋಗ್ಯಾನ್ವಯವು ದೊರೆಯುತ್ತಿರಲು, ಶ್ರುತಿಯು ವಾಮಮಾರ್ಗವನ್ನು ಸಹಿಸುವುದಿಲ್ಲ.

**ಯುಕ್ತೀಃ ಪಶ್ಯ ಶ್ರುತೀಃ ಪಶ್ಯ ಮಿಥ್ಯಾದೃಷ್ಟಿಂ ಪರಿತ್ಯಜ ।**
**ಸತ್ಯಂ ವದ ಜಗತ್ ಸರ್ವಂ ಭುಕ್ತಿಂ ಮುಕ್ತಿಂ ಯದೀಚ್ಛಸಿ ॥ ೧೮೦ ॥**

**ಅನುವಾದ–** ಶ್ರುತಿಯುಕ್ತಿಗಳ ತಾತ್ಪರ್ಯವನ್ನು ಗ್ರಹಿಸಿ ಜಗನ್ಮಿಥ್ಯಾತ್ವ ಭಾವನೆಯನ್ನು ಪರಿತ್ಯಜಿಸು; ಇಹಪರಗಳ ಸುಖಗಳನ್ನು ಇಚ್ಛಿಸುವೆಯಾದರೆ, ಜಗತ್ಸತ್ಯತ್ವವನ್ನು ಹೇಳು. ಜಗತ್ತು ಸತ್ಯವೆಂಬ ನಿಶ್ಚಯಜ್ಞಾನವನ್ನು ಹೊಂದುವುದೇ ಬುಭುಕ್ಷುವಿಗೂ ಮುಮುಕ್ಷುವಿಗೂ ಅತ್ಯವಶ್ಯಕವು.

**ಸದ್ಯುಕ್ತಿಹಸ್ತಿರಥ್ಯಶ್ವಪತ್ತ್ಯುತ್ಪತ್ತ್ಯೋತ್ತರೋತ್ತರಾ ।**
**ಇಯಂ ವಾಣೀ ಮೃಡಾನೀ ಕ್ವ ಕ್ವಾऽನೀತಾऽನೀಕಿನೀ ತವ ॥ ೧೮೧ ॥**

**ಅನುವಾದ–** ಶ್ರುತಿರೂಪದ ದುರ್ಗಾದೇವಿಯು, ಕ್ಷಣಕ್ಷಣಕ್ಕೆ ಉತ್ಪನ್ನವಾಗುವ ಸದ್ಯುಕ್ತಿಗಳೆಂಬ ಚತುರಂಗವುಳ್ಳದ್ದಾಗಿರುವಾಗ (ಗಜ, ರಥ, ಅಶ್ವ, ಪತ್ತಿಗಳೆಂಬ ಚತುರಂಗದಿಂದ ಪೂರ್ಣವಾಗಿರುವಾಗ), ಉತ್ತರೋತ್ತರಾ= ಅತ್ಯಂತ ಉತ್ಕೃಷ್ಟಳಾಗಿರುವಾಗ ಅದ್ವೈತಿಯು ಬಲಾತ್ಕಾರಿಂದತಂದೊಡ್ಡುವ, ಪ್ರತ್ಯಕ್ಷಾದಿ ಬಾಧಿತ ಯುಕ್ತಿಶ್ರುತಿಗಳೆಂಬ ಸೇನೆಯು (ದುರ್ಗಾಸೇನೆಯನ್ನು ಎದುರಿಸಿ ನಿಲ್ಲಲು), ಸಮರ್ಥವಾಗಬಲ್ಲದೇ? ಶಕ್ಯವಿಲ್ಲ. ಶ್ರುತಿಯು ತಾನೇ ಯುಕ್ತಿಗಳನ್ನು ಕ್ಷಣಕ್ಷಣಕ್ಕೆ ಸಿದ್ಧಮಾಡಿಕೊಡುತ್ತದೆ. ಅದ್ವೈತಿ ಹೊರಗಿಂದ ದುರ್ಬಲ ಯುಕ್ತಿಗಳನ್ನೇ ತರುತ್ತಾನೆ.

ದುರ್ಗೆ ತಾನೇ ಸೈನ್ಯವನ್ನು ಉತ್ಪಾದಿಸುವಾಗ ಅಸುರರು ಹೊರಗಿಂದ ತರುವ ದುರ್ಬಲ ಸೈನ್ಯ ಏನು ಹೋರಾಡೀತು?

ಯತ್ತು ಪರ್ಣತೃಣಾರಣ್ಯಾದ್ಯುತ್ಪಾದ್ಯಾಗ್ನಿಶಿಖಾಂ ಪುರಾ ।
ತಯಾ ತಮೋ ನಾಶಯತಿ ತದ್ ದ್ವಿತೀಯನಿದರ್ಶನಂ ॥ ೨೫೯ ॥

**ಅನುವಾದ–** ಯಾವುದಾದರೂ ಒಂದು ವಸ್ತುವನ್ನು ಉತ್ಪತ್ತಿಮಾಡಿ ತನ್ಮೂಲಕ ವಸ್ತುವನ್ನು ನಾಶಮಾಡುವುದು ಎರಡನೆಯ ರೀತಿ. ಇದಕ್ಕೆ ಕಟ್ಟಿಗೆ ಅಥವಾ ಅರಣಿಯು ಕತ್ತಲನ್ನು ನಾಶಮಾಡುವುದು ದೃಷ್ಟಾಂತ. ಅರಣಿಯು ಮಥನದಿಂದ ಅಗ್ನಿಜ್ವಾಲೆಯನ್ನು ಉಂಟುಮಾಡಿ ತನ್ಮೂಲಕ ಕತ್ತಲನ್ನು ಹೋಗಲಾಡಿಸುವುದು. ತರಗಲೆ ಅಥವಾ ಒಣಹುಲ್ಲು ಸಣ್ಣ ಕಿಡಿಯನ್ನು ಜೋರಾಗಿ ಮಾಡಿ ಅದರಿಂದ ಕತ್ತಲನ್ನು ಹೋಗಲಾಡಿಸುವುದು. ಹೀಗೆ ಅರಣಿಯಾಗಲೀ, ಎಲೆಕಡ್ಡಿಗಳಾಗಲೀ ಕತ್ತಲನ್ನು ನಿವಾರಿಸುವುದು ನಿಜವಾಗಿದ್ದರೂ ಅಗ್ನಿಜ್ವಾಲೆಯನ್ನು ಉಂಟುಮಾಡುವ ಮೂಲಕವೇ ಕತ್ತಲಿನ ನಾಶಕ್ಕೆ ಕಾರಣವಾಗಿದೆ. ಹೀಗೆ ಪರಂಪರಯಾ ಅರಣಿಯು ಕತ್ತಲಿನ ನಾಶಕ್ಕೆ ಕಾರಣವಾಗಿದೆ.

ಏವಂ ಚ ಬ್ರಹ್ಮಣೋ ಜ್ಞಾನಂ ವಿನಾಶ್ಯೈವ ವಿನಾಶಕಂ ।
ಯದಿ ಸ್ಯಾತ್ ತರ್ಹಿ ತೇ ವ್ಯಾಪ್ತಿಃ ಪ್ರತಿರೋಧಂ ಕರೋತು ವಾ ॥೨೬೦॥

**ಅನುವಾದ–** ಜ್ಞಾನವು ಪರಂಪರಯಾ ಬಂಧನಾಶಕವಾಗುವಲ್ಲಿ ಮೊದಲನೆಯ ರೀತಿಯಲ್ಲಿ ನೋಡುವುದಾದರೆ ಜ್ಞಾನವು ಅಜ್ಞಾನವನ್ನೇ ನಾಶಮಾಡುವುದು. ತನ್ಮೂಲಕ ಬಂಧವನ್ನು ನಾಶಮಾಡುತ್ತದೆ ಎಂದು ಹೇಳಬೇಕು. ಈ ಪಕ್ಷವನ್ನು ಆಶ್ರಯಿಸಿದಾಗ ಜಗತ್ತು ಅಜ್ಞಾನದಿಂದ ಉಂಟಾಗಿದೆ ಎಂದು ಹೇಳಬೇಕಾಗುವುದರಿಂದ ಬಂಧವು ಸತ್ಯ ಎಂಬ ಅಂಶಕ್ಕೆ ತಡೆಯನ್ನುಂಟುಮಾಡಬಹುದು. ಆದರೂ ಬಂಧವು ಸತ್ಯ ಎಂದು ಈ ಪಕ್ಷದಲ್ಲಿ ಒಪ್ಪಿಕೊಳ್ಳಲೇಬೇಕಾಗುತ್ತದೆ ಎಂಬುದನ್ನು ವಾ ಎಂಬ ಶಬ್ದದಿಂದ ಸೂಚಿಸಿದ್ದಾರೆ.

ಭಕ್ತಿಶ್ಚ ಭಗವತ್ಸ್ನೇಹಃ ಸಾ ಚ ತದ್ದರ್ಶನಾದ್ ಭವೇತ್ ।
ಯತೋ ರಾಗಸ್ಯ ಜನಕಂ ಪ್ರಾಹುರ್ವಿಷಯದರ್ಶನಂ ॥ ೨೬೧ ॥

**ಅನುವಾದ–** ಭಗವಂತನಲ್ಲಿ ಅತಿಶಯವಾದ ಪ್ರೇಮವೇ ಭಕ್ತಿ. ಅಂತಹ ಭಕ್ತಿಯು ಉಂಟಾಗಬೇಕಾದರೆ ಭಗವಂತನ ಜ್ಞಾನವು ಉಂಟಾಗಲೇಬೇಕು. ಏಕೆಂದರೆ ಲೋಕರೂಢಿಯಲ್ಲಾಗಲೀ, ಶಾಸ್ತ್ರದಲ್ಲಾಗಲೀ ರಾಗ (ವಿಷಯಭೋಗಗಳಲ್ಲಿ ಅತಿಶಯವಾದ ಆಸಕ್ತಿ/ಪ್ರೀತಿ) ಉಂಟಾಗಬೇಕಾದರೆ ವಿಷಯದ ಜ್ಞಾನ

ಉಂಟಾಗಲೇಬೇಕು. 'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪ-ಜಾಯತೇ' ಇತ್ಯಾದಿಯಾಗಿ ಗೀತೆಯಲ್ಲೂ ಇದನ್ನು ತಿಳಿಸಿದ್ದಾರೆ.

ಭಕ್ತ್ಯಾ ಚ ಬಂಧವಿಚ್ಛೇದಃ ಶ್ರೂಯತೇ ಯೌಕ್ತಿಕಶ್ಚ ಸಃ ।
ಯತಃ ಪ್ರಿಯಸ್ಯ ನಿಗಡಬಂಧಂ ಛಿಂದಂತಿ ಮಾನವಾಃ ॥ ೨೬೪ ॥

**ಅನುವಾದ–** ಕರ್ಮಾದಿಬಂಧಗಳ ನಾಶವು ಭಕ್ತಿಯಿಂದಲೇ ಸಾಧ್ಯ ಎಂದು ಶ್ರುತಿಯು ಹೇಳುತ್ತಿದೆ. ಭಾಷ್ಯದಲ್ಲಿ ಉದಾಹೃತವಾದ ಭಕ್ತಿರೇವೈನಂ ನಯತಿ ಎಂಬ ಶ್ರುತಿಯು ಇದನ್ನೇ ಹೇಳುತ್ತದೆ ತಾನೆ? ಅದಲ್ಲದೇ ಲೋಕದಲ್ಲಿ ಬಂಧನಕ್ಕೊಳಗಾದ ವ್ಯಕ್ತಿಯು ರಾಜರ ಬಗ್ಗೆ ವಿಶೇಷ ಆದರವುಳ್ಳವನಾಗಿ ರಾಜರ ಪ್ರೀತಿಗೆ ಪಾತ್ರನಾದರೆ ಆಗ ರಾಜರುಗಳು ಆ ವ್ಯಕ್ತಿಯನ್ನು ಬಂಧನದಿಂದ ಬಿಡುಗಡೆಗೊಳಿಸುವುದೂ ಕಂಡಿದೆ. ಹೀಗೆ ಶ್ರುತಿಯಿಂದಲೂ, ಯುಕ್ತಿಯಿಂದಲೂ ಭಕ್ತಿಯೇ ಬಂಧನಾಶಕ ಎಂದು ಸಿದ್ಧವಾಗುತ್ತದೆ.

ನ ಸಾ ಜ್ಞಾನಂ ಸೈವ ಬಂಧಂ ಛಿಂದ್ಯಾಚ್ಚೇತ್ ಕಿಂ ಗತಂ ತವ ।
ತತ್ಸರ್ವವಿಪ್ಲವಾಯೋಕ್ತಾ ಪ್ರಕ್ರಿಯಾ ವಿಕ್ರಿಯೈವ ತೇ ।
ಅತೋಽಪ್ಯಸಂಗತೈವಾಭೂನ್ಮಿಥ್ಯಾತ್ವಪ್ರಸ್ತುತಿಸ್ತವ ॥ ೨೬೫ ॥

**ಅನುವಾದ–** ಜ್ಞಾನದಿಂದ ಭಕ್ತಿಯುಂಟಾಗಿ ತನ್ಮೂಲಕ ಭಗವತ್ಪ್ರಸಾದದಿಂದ ಬಂಧನಾಶ ಎಂಬ ಅಂಶವನ್ನು ಒಪ್ಪಿಕೊಂಡಾಗ, ಭಕ್ತಿಯು ಬಂಧನಾಶಕವೆಂದು ಒಪ್ಪಿಕೊಂಡಂತಾಯಿತು. ಆ ಭಕ್ತಿಯು ಸ್ನೇಹರೂಪವಾಗಿರುವುದರಿಂದ ಜ್ಞಾನವಲ್ಲ ತಾನೆ? ಜ್ಞಾನವು ಅಜ್ಞಾನಮಾತ್ರನಾಶಕ ಎಂದು ವ್ಯಾಪ್ತಿ ಇದ್ದರೂ ಜ್ಞಾನವಲ್ಲದ ಭಕ್ತಿಯು ಬಂಧನಾಶಮಾಡಿರುವದರಿಂದ ಆ ವ್ಯಾಪ್ತಿಯ ಸಂಬಂಧವೇ ಇಲ್ಲಿ ಬರಲಾರದು. ಅಜ್ಞಾನಮಾತ್ರನಾಶಕವಾದ ಜ್ಞಾನದಿಂದ ಬಂಧವು ನಾಶವಾಗುವುದಿದ್ದರೆ, ಬಂಧವು ಅಜ್ಞಾನಕಲ್ಪಿತ (ಮಿಥ್ಯಾ) ಎಂಬ ನಿನ್ನ ವಾದಕ್ಕೆ ಪುಷ್ಟಿ ಬರುತ್ತಿತ್ತೋ ಏನೋ? ಆದರೆ ಇಲ್ಲಿ ಹಾಗಿಲ್ಲ. ಹಾಗಾಗಿ ನೀನು ಹೇಳುವ ಪ್ರಪಂಚಮಿಥ್ಯಾತ್ವವಾದವು ಸೂತ್ರಕಾರರಿಗೆ ಸಮ್ಮತವಾಗದ ಒಂದು ವಿಚಿತ್ರ ಕಲ್ಪನೆಯೇ ಹೊರತು ಅದೊಂದು ಶಾಸ್ತ್ರಪ್ರಕ್ರಿಯೆಯೇ ಇಲ್ಲ.

ಸುಹೃದ್ದರ್ಶನತಃ ಸದ್ಯಃ ಕ್ಲೇಶನಾಶೋ ಹಿ ಜಾಯತೇ ।
ಸೂರ್ಯಾವಲೋಕನಾತ್ ಪಾಪನಾಶಃ ಸರ್ವಸ್ಯ ಸಮ್ಮತಃ ॥
ದೋಷಸ್ಯ ದರ್ಶನಾದ್ ರಾಗನಾಶೋ ದುರ್ವಿಷಯೇ ಸತಾಮ್ ॥೩೨೮॥

**ಅನುವಾದ–** ವ್ಯಕ್ತಿಯೊಬ್ಬ ವಿವಿಧ ಚಿಂತೆ - ಜವಾಬ್ದಾರಿಗಳಂತಹ ಕ್ಲೇಶಗಳಲ್ಲಿದ್ದಾಗ ತನಗೆ ಹೆಗಲು ಕೊಡುವಂತಹ ಗೆಳೆಯ ಬಂದರೆ, ಅವನನ್ನು ಕಂಡಾಕ್ಷಣ ಕ್ಲೇಶಗಳು ಇಲ್ಲವಾಗುವುದು ಲೋಕದಲ್ಲಿ ಪ್ರಸಿದ್ಧ. ಅನೇಕ ಪಾಪಗಳು ಸೂರ್ಯನ ದರ್ಶನದಿಂದ ನಾಶವಾಗುತ್ತವೆ ಎನ್ನುವುದನ್ನು ಧರ್ಮಶಾಸ್ತ್ರ ಬಲ್ಲ ಎಲ್ಲರೂ ಒಪ್ಪುತ್ತಾರೆ. ಸಜ್ಜನರಿಗೆ ಇದು ಕೆಟ್ಟದು ಎಂದು ಗೊತ್ತಿದ್ದರೂ ಆ ಬಗ್ಗೆ ಆಸೆಯನ್ನು ಬಿಡಲು ಆಗದೆ ಇದ್ದದ್ದು ಆ ಕೆಟ್ಟ ವಿಷಯದ ದೋಷಗಳು ತಿಳಿಯುತ್ತಿದ್ದಂತೆ ಆಸೆ ದೂರವಾಗುತ್ತದೆ.

ಏವಂ ಚಾಜ್ಞಾನತೋಽನ್ಯಸ್ಯ ಜ್ಞಾನಾನ್ನಾಶಃ ಪ್ರದೃಶ್ಯತೇ ।
ಅಜ್ಞಾನಸ್ಯ ತು ನ ಜ್ಞಾನನಾಶ್ಯತಾ ದೃಶ್ಯತೇ ಕ್ವಚಿತ್ ॥ ೩೨೯ ॥

**ಅನುವಾದ–** ಈ ಹಿಂದಿನ ಉದಾಹರಣೆಗಳನ್ನು ಪರಿಶೀಲಿಸಿದರೆ, ಜ್ಞಾನದಿಂದ ಅಜ್ಞಾನದ್ದಲ್ಲ, ಅಜ್ಞಾನಕ್ಕಿಂತ ಬೇರೆಯಾದ ಕ್ಲೇಶ - ಪಾಪ - ರಾಗಗಳ ನಾಶವೇ ಕಂಡಿದೆ. ಇರುವ ವಸ್ತು ಕಾಣದಂತೆ ಮಾಡುವ ಭಾವರೂಪ ಅಜ್ಞಾನವಾಗಲೀ, ಅಭಾವರೂಪ ಅಜ್ಞಾನವಾಗಲೀ ಎಲ್ಲಿಯೂ ಜ್ಞಾನದಿಂದ ನಾಶವಾಗುವುದು ಕಂಡಿಲ್ಲ.

ಜಗಚ್ಚ ಜಗತೀನಾಥೋ ದ್ವಾವೇತೌ ನಿಯತೌ ಸದಾ ।
ಅಭಟೋ ಯನ್ನೃಪೋ ನಷ್ಟೋ ನಷ್ಟಂ ರಾಷ್ಟ್ರಮರಾಜಕಮ್ ॥ ೩೩೮ ॥

**ಅನುವಾದ–** ಭೃತ್ಯರಿಲ್ಲದಿದ್ದರೆ ರಾಜನಿರಲಾರ (ರಾಜನು ರಾಜನೆನಿಸಲಾರ). ರಾಜನಿರದಿದ್ದರೆ ರಾಷ್ಟ್ರ ಎನಿಸದು. ಆದ್ದರಿಂದ, ಜಗತ್ತು ಮತ್ತು ಜಗನ್ನಾಥ ಇಬ್ಬರೂ ಯಾವಾಗಲೂ ಪರಸ್ಪರವಾಗಿ ಬಿಟ್ಟು ಇರುವುದಿಲ್ಲ.

ವೇಣುಂ ದಂದಹತೇ ವಹ್ನಿರ್ನ ಸ್ವಯಂ ತೇನ ದಹ್ಯತೇ ।
ಕಾಷ್ಠಾಭಾವೇನ ನಷ್ಟೋಽಸೌ ಕಾಂ ಕಾಷ್ಠಾಂ ಕಷ್ಟ ತೇ ದಿಶೇತ್ ॥೩೯॥

**ಅನುವಾದ–** ಬಿದಿರು ಬೆಂಕಿ ದೃಷ್ಟಾಂತದಿಂದ ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ ಎಂದು ಅದ್ವೈತವಾದದಲ್ಲಿ ನಿರೂಪಿಸಲಾಗಿದೆ. ಬಿದಿರು ಒಂದಕ್ಕೊಂದು ಘರ್ಷಣೆಯಾದಾಗ ಬೆಂಕಿ ಹುಟ್ಟುತ್ತದೆ. ಆ ಬೆಂಕಿ ಎಲ್ಲ ಕಾಡನ್ನು ನಾಶಮಾಡಿ ಕೊನೆಗೆ ತಾನೂ ನಾಶವಾಗುತ್ತದೆ. ಇಲ್ಲಿ ಬೆಂಕಿ ಎಲ್ಲಕ್ಕೂ ನಾಶಕ. ಹಾಗೇ ತನಗೂ ನಾಶಕ. ಆದರಂತೆ ಕೊನೆಗೆ ಬರುವ ಸಾಕ್ಷಾತ್ಕಾರ (ಚರಮ ಸಾಕ್ಷಾತ್ಕಾರ) ಸಕಲ ಪ್ರಪಂಚವನ್ನೂ ನಾಶಪಡಿಸಿ (ಇಲ್ಲವೆಂಬ ಜ್ಞಾನವನ್ನು ಹುಟ್ಟಿಸಿ) ಕೊನೆಗೆ ತಾನೂ

ನಾಶವಾಗುತ್ತದೆ. ಇಲ್ಲಿಯೂ ಕೂಡ ಸರ್ವನಾಶಕವಾದ ಜ್ಞಾನ ಕೊನೆಗೆ ತನಗೂ ನಾಶಕ. ಆದುದರಿಂದ ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ. ಇದು ಅದ್ವೈತಿಗಳ ನಿರೂಪಣೆ. ಇಲ್ಲಿ ದೃಷ್ಟಾಂತವೇ ಸರಿಯಿಲ್ಲ ಎಂದು ಈ ಶ್ಲೋಕದಲ್ಲಿ ಪ್ರತಿಪಾದಿಸಲಾಗಿದೆ. ಬಿದಿರನ್ನು ಬೆಂಕಿ ನಾಶಪಡಿಸುತ್ತದೆ ಸರಿ. ಆದರೆ, ಬೆಂಕಿಗೆ ಬೆಂಕಿ ನಾಶಕವಲ್ಲ. ಕಟ್ಟಿಗೆ ಇಲ್ಲ ಆದುದರಿಂದ ಬೆಂಕಿ ನಶಿಸಿತೇ ಹೊರತು ಬೆಂಕಿಯನ್ನು ಬೆಂಕಿ ಸುಡಲಿಲ್ಲ. ಆದುದರಿಂದ ಈ ದೃಷ್ಟಾಂತ ಸರಿಯಲ್ಲ. ಆದುದರಿಂದ ಜ್ಞಾನವೇ ಜ್ಞಾನಕ್ಕೆ ನಾಶಕ ಎಂದು ಸಾಧಿಸಲು ಯಾವ ಮಾರ್ಗವನ್ನೂ ಈ ಬೆಂಕಿ ನಿನಗೆ ತೋರಿಸುವುದಿಲ್ಲ.

**ಜ್ಞಾನನಾಶ್ಯೇ ತವಾಜ್ಞಾನೇ ಜ್ಞಾನೋಪಾದಾನತೈವ ನ ।**
**ತಮಸೋ ದೀಪನಾಶ್ಯಸ್ಯ ದೀಪೋಪಾದಾನತಾಽಸ್ತಿ ಕಿಮ್ ॥ ೪೦೩ ॥**

**ಅನುವಾದ–** ಜ್ಞಾನದಿಂದ ನೇರವಾಗಿ ಜ್ಞಾನನಾಶವಾಗುತ್ತದೆ ಎಂದು ಅದ್ವೈತಮತದಲ್ಲಿ ಹೇಳಲು ಬರುವುದಿಲ್ಲ. 'ಜ್ಞಾನಂ ಅಜ್ಞಾನಸ್ಯೈವ ನಾಶಕಂ' ಎಂಬ ನಿಯಮಕ್ಕೆ ವಿರೋಧ ಬರುವ ಪ್ರಯುಕ್ತ. ಹೀಗಾಗಿ ಅಜ್ಞಾನವು ಜ್ಞಾನಕ್ಕೆ ಉಪಾದಾನ ಕಾರಣ. ಜ್ಞಾನದಿಂದ ಅಜ್ಞಾನ ನಾಶವಾದಾಗ ಅಜ್ಞಾನವೇ ಉಪಾದಾನವಾಗಿ ಉಳ್ಳ ಜ್ಞಾನವೂ ನಾಶವಾಗುತ್ತದೆ. ಆದುದರಿಂದ ಜ್ಞಾನವು ಅಜ್ಞಾನದ್ವಾರಾ ಜ್ಞಾನನಾಶಕ ಎಂದೇ ಒಪ್ಪಬೇಕು. ಇದನ್ನೂ ಕೂಡ ಒಪ್ಪಲು ಆಗುವುದಿಲ್ಲ. ಏಕೆಂದರೆ ತ್ರಿಕ್ಷಣ ಮಾತ್ರವಿರುವ ಜ್ಞಾನವು ಸ್ವಸ್ಥಿತಿಕ್ಷಣದಲ್ಲಿ ಅಜ್ಞಾನವನ್ನು ನಾಶಪಡಿಸಿದರೂ ಕೂಡ, ಜ್ಞಾನವನ್ನು ನಾಶಪಡಿಸಲು ಸಾಧ್ಯವಿಲ್ಲ ಎಂದು ಹಿಂದೆ ನಿರೂಪಿಸಲಾಗಿದೆ. ಈಗ ಜ್ಞಾನಕ್ಕೆ ಅಜ್ಞಾನವು ಉಪಾದಾನ ಕಾರಣವಾಗಲು ಸಾಧ್ಯವಿಲ್ಲ ಎಂದು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ದೀಪದಿಂದ ನಾಶವಾಗುವ ಕತ್ತಲೆಯು ದೀಪಕ್ಕೆ ಉಪಾದಾನ ಕಾರಣವಲ್ಲ. ಅದರಂತೆ ಜ್ಞಾನದಿಂದ ನಾಶವಾಗುವ ಅಜ್ಞಾನವು ಜ್ಞಾನಕ್ಕೆ ಉಪಾದಾನವಾಗಲು ಸಾಧ್ಯವಿಲ್ಲ.

**ದಶಾನಿಮಿತ್ತೋ ದೀಪಸ್ತು ತಾಂ ದಶಾಂ ನಾಶಯೇದಪಿ ।**
**ದಶಾಖಂಡಾತ್ಮಿಕಾ ಕಂಥಾ ಕಿಂ ತಾಂ ಹಂತಿ ವಿಚಾರಯ ॥ ೪೦೪ ॥**

**ಅನುವಾದ–** ನಿಮಿತ್ತ ನೈಮಿತ್ತಿಕಗಳು ಪರಸ್ಪರ ಭಿನ್ನ. ಅವುಗಳಲ್ಲಿ ಕೆಲವು ಕಡೆ ನಾಶ್ಯ-ನಾಶಕ ಭಾವವಿರಬಹುದು. ದೀಪಕ್ಕೆ ಬತ್ತಿ ನಿಮಿತ್ತ. ನೈಮಿತ್ತಿಕವಾದ ದೀಪವು ನಿಮಿತ್ತವಾದ ಬತ್ತಿಯನ್ನು ನಾಶಪಡಿಸುತ್ತದೆ (ಸುಡುತ್ತದೆ). ಆದರೆ ಉಪಾದಾನ ಉಪಾದೇಯಗಳು ಪರಸ್ಪರ ಅಭಿನ್ನ. ಆದುದರಿಂದ ಅವುಗಳಿಗೆ ನಾಶ್ಯನಾಶಕಭಾವ ಕೂಡುವುದಿಲ್ಲ. ಖಂಡಪಟವು ಬಟ್ಟೆಗೆ ಉಪಾದಾನ. ಉಪಾದೇಯವಾದ ಬಟ್ಟೆಯು

ಉಪಾದಾನವಾದ ಖಂಡಪಟಕ್ಕೆ ನಾಶಕವಾಗುತ್ತದೆಯೋ ಎಂದು ನೀನೇ ವಿಚಾರ ಮಾಡು.

**ಶುನಾ ಪರಶುನಾ ವನ್ಯಪಶುನಾ ವಾ ತನುಕ್ಷಯಃ ।**
**ಜ್ಞಾನಾವಿನಾಶ್ಯೋ ದೇಹೋಽಯಂ ಕೇನೋಪಾಯೇನ ತೇ ಮೃಷಾ॥೪೧೭॥**

**ಅನುವಾದ–** ದೇಹವು ಜ್ಞಾನದಿಂದ ನಶಿಸುವುದಿಲ್ಲ, ಆದುದರಿಂದ ಅದು ಸುಳ್ಳಲ್ಲ ಎಂದು ಈ ಶ್ಲೋಕದಲ್ಲಿ ಸಮರ್ಥಿಸಲಾಗಿದೆ. ನಮ್ಮನ್ನು ನೋಡಿಕೊಳ್ಳುವ ವಾರಸುದಾರರು ಇದ್ದರೆ, ಅಂತಹವರು ಕಟ್ಟಿಗೆಯಿಂದ ಹಚ್ಚಿದ ಬೆಂಕಿಯಲ್ಲಿ ದೇಹವು ಸುಟ್ಟು ನಾಶವಾಗುತ್ತದೆ. ವಾರಸುದಾರರು ಇಲ್ಲದಿದ್ದರೆ, ನಾಯಿ ತಿಂದು ನಾಶವಾಗುತ್ತದೆ. ಇದು ಊರಿನಲ್ಲಿ ವ್ಯವಸ್ಥೆ. ಜ್ಞಾನಿಯು ವಾನಪ್ರಸ್ಥನಾಗಿದ್ದರೆ, ಸತ್ತನಂತರ ಕಾಡು ಪ್ರಾಣಿಗಳು ತಿಂದು ನಾಶವಾಗುತ್ತದೆ. ಹೊರತು ಜ್ಞಾನದಿಂದಲ್ಲ. ಆದುದರಿಂದ ದೇಹವನ್ನು ಮಿಥ್ಯಾ ಎಂದು ಹೇಗೆ ಸಾಧಿಸುವುದು?

**ಕ್ಷಣೇ ಕ್ಷಣೇ ಭವತ್ಯೇವ ರಂಡಾಗೀತಶ್ರುತಾವಪಿ ।**
**ಅವಿದ್ಯಾವರಣಂ ಚಾಸ್ತಿ ದುರ್ಘಟಂ ಘಟಯಂ ತ್ಯಸೌ ॥ ೪೧೮ ॥**

**ಅನುವಾದ–** ಆತ್ಮಸ್ವರೂಪಜ್ಞಾನ 'ಅಹಂ' ಎಂದು. ಅದು ಆತ್ಮನಿಗೆ ಯಾವಾಗಲೂ ಇರುತ್ತದೆ. ಅಖಂಡ ನಿರ್ವಿಶೇಷ ಬ್ರಹ್ಮನನ್ನು ಪ್ರತಿಪಾದಿಸುವ ಉಪನಿಷದ್ವಾಕ್ಯಗಳನ್ನು ಶ್ರವಣ ಮಾಡಿದಾಗ, ಅಂತಃಕರಣಪರಿಣಾಮರೂಪವಾದ ಬ್ರಹ್ಮಾಪರೋಕ್ಷ ಜ್ಞಾನವೂ ಇರುತ್ತದೆ. ಇದರ ಜೊತೆ ಜೊತೆಯಲ್ಲಿ, ಎಷ್ಟೇ ಐಕ್ಯಗಾನಗಳನ್ನು ಕೇಳಿದರೂ ಕೂಡ, ಆವರಣ ರೂಪವಾದ ಅಜ್ಞಾನವೂ ಇರುತ್ತದೆ. ಇದೆಲ್ಲಾ ಹೇಗೆ ಸಾಧ್ಯ? ಆವರಣವಿದ್ದಾಗ, ಸ್ವರೂಪ ಜ್ಞಾನವಾಗಲೀ, ಬ್ರಹ್ಮಾಪರೋಕ್ಷ ಜ್ಞಾನವಾಗಲೀ ಹೇಗೆ ಹುಟ್ಟುತ್ತದೆ ಎಂಬ ಪ್ರಶ್ನೆಗೆ ಅಜ್ಞಾನವು ಅಘಟಿತಘಟನಾ ಚತುರ ಎಂದರೆ, ಯಾವುದು ಯಾವುದು ಕೂಡಲಾರದು ದುರ್ಘಟ ಎನ್ನಿಸುತ್ತದಯೋ ಆ ಎಲ್ಲವನ್ನೂ ಹೊಂದಿಸುವುದಕ್ಕಾಗಿಯೇ ಅಜ್ಞಾನವಿರುವುದು ಎಂದು ಹಾರಿಕೆಯ ಉತ್ತರವನ್ನು ಕೆಲವರು ಉದ್ಧಟತನದಿಂದ ಕೊಡಬಹುದು. ಹಾಗೆ ಉತ್ತರಿಸಿದರೆ, ಆಗ ಅಜ್ಞಾನವು ಆವರಣ ಎಂಬ ಮಾತು ಕೇವಲ ಮಾತಷ್ಟೇ ಹೊರತು ಆವರಣದ ಯಾವ ಕಾರ್ಯವೂ ಅಜ್ಞಾನದಿಂದ ಇಲ್ಲದಿರುವ ಪ್ರಯುಕ್ತ ಅಜ್ಞಾನವನ್ನು ಆವರಣ ಎಂದು ವಾಸ್ತವಿಕವಾಗಿ ಹೇಳಲು ಬರುವುದಿಲ್ಲ.

ಏವಂ ಚ ಲಿಂಗದೇಹಾಸ್ತೇ ಸಾऽವಿದ್ಯಾ ತನ್ನಿಮಿತ್ತಕಾಃ ।
ಪುತ್ರಮಿತ್ರಕಲತ್ರಾದ್ಯಾ ದೇಹಗೇಹಧನಾದಯಃ ॥ ೪೩೭ ॥

**ಅನುವಾದ–** ಆದ್ದರಿಂದ ಲಿಂಗದೇಹವೇ ದೊಡ್ಡ ಅವಿದ್ಯೆ, ತನ್ನಿಮಿತ್ತವಾಗಿಯೇ ಪುತ್ರ ಮಿತ್ರಕಳತ್ರಾದಿಗಳೂ ದೇಹಗೇಹಧನಾದಿಗಳೂ ಉಂಟಾಗುತ್ತವೆ.

ಅನಂತಾ ಮುಕ್ತಿಪರ್ಯಂತಾ ಹೇತೂಪ್ಪೋದ್ಬಲಿತಾದಪಿ ।
ಪೂರ್ವಜ್ಞಾನಾದಪ್ರನಷ್ಟಾ ನ ಜ್ಞಾನಸ್ಯ ವಿರೋಧಿನಃ ॥ ೪೩೮ ॥

**ಅನುವಾದ–** ಆ ಲಿಂಗದೇಹಗಳು ಒಬ್ಬೊಬ್ಬ ಜೀವನಿಗೆ ಒಂದೊಂದರಂತೆ ಅನಂತವಾಗಿವೆ. ಶ್ರವಣ ಮನನಾದಿಸಹಿತವಾದ ಮೊದಲನೆಯ (ಹಿಂದಿನ) ಅಪರೋಕ್ಷಜ್ಞಾನದಿಂದ ನಿವೃತ್ತವಾಗಿಲ್ಲ. ಆದ್ದರಿಂದ ಅವುಗಳು ಜ್ಞಾನ ವಿರೋಧಿಗಳಲ್ಲ.

ಪುನರ್ಜ್ಞಾನಶತೇನಾಪಿ ನಿವರ್ತ್ಯಾ ನೇತಿ ಮೇ ಮತಿಃ ।
ದಾವಾಗ್ನಿನಾ ಯೋ ನ ದಗ್ಧಃ ಕಿಂ ತದ್ದಾಹೋ ಗೃಹಾಗ್ನಿನಾ ॥ ೪೩೯ ॥

**ಅನುವಾದ–** ಪುನಃ ಉಂಟಾಗುವ ನೂರುಜ್ಞಾನಗಳಿಂದಲೂ ಅವು ನಿವೃತ್ತವಗಾವುದಿಲ್ಲ ಎಂದು ನನ್ನ ಅಭಿಪ್ರಾಯ. ಕಾಳ್ಗಿಚ್ಚಿನಿಂದ ಸುಡದಿದ್ದುದು ಮನೆಯ ಬೆಂಕಿಯಿಂದ ಹೇಗೆ ಸುಡುತ್ತದೆ?

ಮುದ್ಗರಸ್ಯ ಪ್ರಹಾರೇಣ ಭ್ರಮಂ ಮುಂಚತಿ ನಾನ್ಯಥಾ ।
ಅಹೋ ದುರ್ಜನಸಂಗತ್ಯಾ ದೌರ್ಜನ್ಯಂ ಬ್ರಹ್ಮಣೋऽಪ್ಯಭೂತ್ ॥೪೮೦॥

**ಅನುವಾದ–** ಘಟಕ್ಕೆ ಮುದ್ಗರಪ್ರಹಾರವಾದಾಗ ಮಾತ್ರ ಘಟಭ್ರಮವು ನಾಶವಾಗುತ್ತದೆ. ನಿನ್ನ ಬ್ರಹ್ಮನು ಭ್ರಮಮುಕ್ತನಾಗುತ್ತಾನೆ. ಆಶ್ಚರ್ಯ. ದುರ್ಜನರ ಸಹವಾಸದಿಂದ ಬ್ರಹ್ಮನಿಗೂ ದೌರ್ಜನ್ಯವುಂಟಾಯಿತು.

ತತ್ತ್ವಜ್ಞಾನಾಯ ಧರ್ಮೋऽಸ್ತು ಯುಕ್ತಿಃ ಶಕ್ತಿಶ್ಚ ವರ್ತತಾಮ್ ।
ಮಿಥ್ಯಾದೃಷ್ಟಿರ್ನ ತಪಸಾ ಕಿಂ ಕೌರ್ಮೇ ರೋಮ್ಣಿ ದೃಙ್ಮುನೇಃ ॥ ೬೩೯ ॥

**ಅನುವಾದ–** ಧರ್ಮಾಚರಣೆಯೂ ಯುಕ್ತಿಗಳೂ ಮತ್ತು ತಪಃಶಕ್ತಿಯೂ ಸಹ ತತ್ತ್ವಜ್ಞಾನವನ್ನು ಉಂಟುಮಾಡುವುದಕ್ಕಾಗಿಯೇ ಇರಲಿ. ತಪಸ್ಸಿನಿಂದ ಭ್ರಾಂತಿಯು ಉಂಟಾಗುವುದಿಲ್ಲ. ತಪಸ್ವಿಗೆ ಏನಾದರೂ ಕೂರ್ಮರೋಮದ ಜ್ಞಾನವು ಉಂಟಾಗುತ್ತದೆಯೇ?

ನ ಚೇದಧಿಷ್ಠಾನನಿಷ್ಠಾಜ್ಞಾನಹಂತ್ರ್ಯಪಿ ಸಾ ಕಥಂ ।
ಯಾಽವಿದ್ಯಾಸ್ತಮಯೇ ಶಕ್ತಾ ಮುಕ್ತೌ ಶಕ್ತಾ ಕಥಂ ನ ಸಾ ॥ ೬೮೫ ॥

**ಅನುವಾದ–** ಅವಿದ್ಯಾನಾಶರೂಪವಾದ ಮೋಕ್ಷಜನಕವಾಗದಿದ್ದರೆ, ಘಟಾಪರೋಕ್ಷ ವೃತ್ತಿಯು ಅಧಿಷ್ಠಾನಗತವಾದ ಅಜ್ಞಾನವನ್ನಾದರೂ ಹೇಗೆ ನಾಶಮಾಡುತ್ತದೆ? ಅವಿದ್ಯಾವಿನಾಶದಲ್ಲಿ ಸಮರ್ಥವಾದ ವೃತ್ತಿಯು ಮುಕ್ತಿಸಂಪಾದಕತ್ವದಲ್ಲಿ ಏಕೆ ಸಮರ್ಥವಾಗುವುದಿಲ್ಲ?

ಯದಾದಿತ್ಯಗತಂ ತೇಜೋ ಜಗದ್ ಭಾಯಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।
ಇತಿ ಸ್ಮೃತ್ಯಾ ಸೂರ್ಯಭಾಸೋ ಜಗದ್ಭಾಸಕತೋಚಿತಾ ॥ ೬೯೬ ॥

**ಅನುವಾದ–** ಸಕಲ ಜಗತ್ತನ್ನು ಪ್ರಕಾಶಿಸುವ ಸೂರ್ಯನಲ್ಲಿ ಯಾವ ಪ್ರಕಾಶವಿದೆಯೋ, ಯಾವ ತೇಜಸ್ಸಿದೆಯೋ, ಚಂದ್ರನಲ್ಲಿ ಯಾವ ತೇಜಸ್ಸಿದೆಯೋ ಮತ್ತು ಅಗ್ನಿಯಲ್ಲಿ ಯಾವ ತೇಜಸ್ಸಿದೆಯೋ, ಆ ತೇಜಸ್ಸನ್ನು ನನ್ನದೆಂದು ತಿಳಿ ಎಂಬ ಸ್ಮೃತಿಯಿಂದ ಸೂರ್ಯಪ್ರಕಾಶಕ್ಕೆ ಜಗತ್‌ಪ್ರಕಾಶಕತ್ವವೇ ಹೇಳಲ್ಪಟ್ಟಿದೆ.

ವಿಶ್ವಂ ಸತ್ಯಮಿತಿ ಸ್ಪಷ್ಟಂ ಸತ್ಯತ್ವಂ ಗರ್ಜತಿ ಶ್ರುತಿಃ ।
ವಿಶ್ವಂ ಮಿಥ್ಯೇತಿ ವಿಸ್ಪಷ್ಟಂ ಮಿಥ್ಯಾತ್ವಂ ಕುತ್ರ ಕಥ್ಯತೇ ॥ ೭೭೮ ॥

**ಅನುವಾದ–** ವಿಶ್ವವು ಸತ್ಯವೆಂದು ಸ್ಪಷ್ಟವಾಗಿ ಶ್ರುತಿಯು ಸತ್ಯತ್ವವನ್ನು ಗರ್ಜಿಸುತ್ತಿದೆ. ವಿಶ್ವಂ ಮಿಥ್ಯಾ ಎಂದು ಸ್ಪಷ್ಟವಾಗಿ ಮಿಥ್ಯಾತ್ವವನ್ನು ಹೇಳುವ ಶ್ರುತಿಯು ಎಲ್ಲಿದೆ?

ತಿಲಾನುನ್ಮಥ್ಯ ಕಸ್ತೈಲಂ ಘೃತೇ ಸತ್ಯಪಿ ಸಾಧಯೇತ್ ।
ಕಿಂ ಶ್ರೌತಸತ್ಯತಾಂ ತ್ಯಕ್ತ್ವಾ ಮಿಥ್ಯಾತ್ವಾಯೋಕ್ತಿಪೀಡನೈಃ ॥ ೭೭೯ ॥

**ಅನುವಾದ–** ಘೃತವು ಇರುವಾಗ ಯಾವನು ಎಳ್ಳು ಕಾಳುಗಳನ್ನು ಹಿಂಡಿ ತೈಲವನ್ನು ಸಂಪಾದಿಸುತ್ತಾನೆ? ಶ್ರುತಿಯಲ್ಲಿ ಹೇಳಿದ ಸ್ಪಷ್ಟವಾಕ್ಯಗಳನ್ನು ಬಿಟ್ಟು ಮಿಥ್ಯಾತ್ವವನ್ನು ಸಂಪಾದನೆ ಮಾಡಲು ಶ್ರೌತವಾಕ್ಯಗಳನ್ನು ಹಿಂಸಿಸುವುದರಿಂದ ಏನು ಪ್ರಯೋಜನ?

ಶ್ರೌತೋಽರ್ಥೋ ಮೇ ತವಾರ್ಥಾರ್ಥ ಶ್ರುತ್ಯೈವೃತ್ತ್ಯಂತರಂ ದಿಶೇತ್ ।
ಯತ್ ಪೃಥ್ವ್ಯೌರಸಪುತ್ರಸ್ಯ ದತ್ತಪುತ್ರಸ್ತು ದತ್ತಭುಕ್ ॥ ೭೮೦ ॥

**ಅನುವಾದ–** ನನ್ನ ಶ್ರೌತಾರ್ಥವಾದರೂ ಆರ್ಥಿಕವಾಗಿ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ನಿನ್ನ ಶ್ರುತಿಗೆ ವೃತ್ತ್ಯಂತರವನ್ನು (ಅಮುಖ್ಯವೃತ್ತಿಯನ್ನು) ಕೊಡುತ್ತದೆ.

ಏಕೆಂದರೆ, ಔರಸ ಪುತ್ರನಿಗೆ ತಂದೆಯ ಆಸ್ತಿಯ ಬಹುಭಾಗವು ಸಲ್ಲುತ್ತದೆ. ದತ್ತಪುತ್ರನಾದರೂ, ಔರಸಪುತ್ರನು ಕೊಟ್ಟ ಭಾಗವನ್ನು ಮಾತ್ರ ಸ್ವೀಕರಿಸುತ್ತಾನೆ.

**ಅಹೋ ಬತ ಮಹಾನೇಷ ಪ್ರಮಾದೋ ಧೀಮತಾಮಪಿ ।**
**ಯತ್ ಸ್ವೋಕ್ತವಚನಸ್ಯಾರ್ಥಃ ಸ್ವೇಷ್ಟಬ್ರಹ್ಮವಿನಷ್ಟತಾ ।**
**ತಮಸಸ್ತ್ವವಿನಷ್ಟಸ್ಯ ತದಾನೀಮವಶಿಷ್ಟತಾ ॥ ೭೯೩ ॥**

**ಅನುವಾದ–** ಇದು ದೊಡ್ಡ ಆಶ್ಚರ್ಯ! ಮೇಧಾವಿಗಳಿಗೂ ಇದು ದೊಡ್ಡ ಪ್ರಮಾದವಾಯಿತು. ಏಕೆಂದರೆ ತಮ್ಮ ಅಭೀಷ್ಟ ಸಿದ್ಧಿಗಾಗಿ ಉದಾಹರಿಸಿದ ವಾಕ್ಯದಿಂದ ತಮಗೆ ಇಷ್ಟನಾದ ಬ್ರಹ್ಮನ ನಾಶವೂ ಅವಿನಷ್ಟವಾದ ಅಜ್ಞಾನಕ್ಕೆ ಪ್ರಳಯಕಾಲದಲ್ಲಿ ಅವಸ್ಥಾನವೂ ಉಂಟಾಯಿತು.

**ಅತಃ ಶ್ರುತ್ಯರ್ಥಕುಶಲೋ ಭಾರತೀಪತಿರೇವ ನಃ ।**
**ಅನ್ಯಸ್ತದ್ಭೃತ್ಯಭೃತ್ಯಶ್ಚೇನ್ಮಾನ್ಯೋ ಭವತಿ ಕಶ್ಚನ ॥ ೭೯೪ ॥**

**ಅನುವಾದ–** ಆದ್ದರಿಂದ ಭಾರತೀಪತಿಗಳಾದ ನಮ್ಮ ವಾಯುದೇವರೇ ಶ್ರುತ್ಯರ್ಥವನ್ನು ಹೇಳುವುದರಲ್ಲಿ ಕುಶಲರಾದವರು. ಬೇರೆ ಯಾರಾದರೂ ಅವರ ಭೃತ್ಯಭೃತ್ಯನಾದರೆ ಮಾತ್ರ ಮಾನ್ಯರಾಗುತ್ತಾರೆ.

**ದೃಷ್ಟ್ವಾ ದೃಷ್ಟವಿರೋಧೇ ತು ವಾಕ್ಯಸ್ಯಾನ್ಯಾರ್ಥತೈವ ಹಿ ।**
**ಆಗೋಪಾಲಾವಿಪಾಲಂ ಚ ಯದ್ ದೃಷ್ಟಂ ದೃಷ್ಟಮೇವ ತತ್ ॥ ೭೯೬ ॥**

**ಅನುವಾದ–** ಪ್ರತ್ಯಕ್ಷ ವಿರೋಧವು ಬಂದರೆ ವಾಕ್ಯಕ್ಕೆ ಅರ್ಥಾಂತರವನ್ನು ಮಾಡುವುದು ಎಲ್ಲ ಕಡೆಯಲ್ಲೂ ಕಂಡುಬಂದಿದೆ. ದನ ಕಾಯುವವರಿಂದ ಮತ್ತು ಕುರಿಯನ್ನು ಕಾಯುವವರಿಂದ ಹಿಡಿದು ಯಾವುದು ನೋಡಲ್ಪಟ್ಟಿದೆಯೋ, ಅದು ನೋಡಲ್ಪಟ್ಟದ್ದೇ ಆಗಿದೆ (ಅದಕ್ಕೆ ಎಂದೂ ಬಾಧವು ಬರುವುದಿಲ್ಲ).

**"ಯತ್ರ ಮಿಥ್ಯಾ ಪ್ರಪಂಚಸ್ಯ ವಾಕ್ಯೈರ್ವೇದಾಂತಗೋಚರೈಃ ।**
**ದೃಶ್ಯಮಾನಮಿದಂ ಸರ್ವಮನಿತ್ಯಮಿತಿ ಚೋಚ್ಯತೇ ॥ ೭೯೭ ॥"**

**ಅನುವಾದ–** ಎಲ್ಲಿ ವೇದಾಂತವಾಕ್ಯಗಳಲ್ಲಿ ಪ್ರಪಂಚಕ್ಕೆ ಮಿಥ್ಯಾತ್ವವು ಹೇಳಲ್ಪಡುತ್ತದೆಯೋ, ಅಲ್ಲಿ ದೃಶ್ಯಮಾನವಾದ ಈ ವಿಶ್ವವೆಲ್ಲವೂ ಅನಿತ್ಯವೆಂದೇ ಹೇಳಲ್ಪಡುತ್ತದೆ ಎಂದು ಪಾದ್ಮಪುರಾಣದಲ್ಲಿ ಮೂವತ್ತನೆಯ ಅಧ್ಯಾಯದಲ್ಲಿ

ರುದ್ರದೇವರೇ ಹೇಳಿದ್ದಾರೆ. ಆದ್ದರಿಂದ ಮಿಥ್ಯಾ ಎಂಬ ಶಬ್ದವು ಜಗತ್ತಿಗೆ ಕೇವಲ ಅನಿತ್ಯತ್ವವನ್ನೇ ಹೇಳುತ್ತದೆ.

**ಬಾಧಾಬಾಧಾನುಸರಣೇ ಶಿಷ್ಯಸ್ತ್ವಂ ಪ್ರತಿವಾದಿನಃ ।**
**ಬಾಧಶಂಕಾಖ್ಯಪಂಕೇನ ಕಿಂ ಕಿಂ ನ ಸ್ಯಾದ್ಧಿ ಪಂಕಿಲಮ್ ॥ ೮೦೧ ॥**

**ಅನುವಾದ–** ದೃಶ್ಯವಾದ ರೂಪ್ಯವು ಮಿಥ್ಯೆಯಾದ ಕಾರಣದಿಂದ ದೃಶ್ಯವಾದ ಜಗತ್ತೂ ಮಿಥ್ಯೆಯೆಂದಾದರೆ ಘಟವು ಪಟದಂತೆ ಪ್ರಮೇಯತ್ವವನ್ನು ಹೊಂದಿರುವುದರಿಂದ ಘಟವು ಪಟವಾಗಲಿ. ಮೂರ್ಖನೇ! ಅದನ ಕರ್ತೃತ್ವ ಇರುವುದರಿಂದ ಪಶುವಿನಂತೆ ನಿನ್ನ ತಲೆಯಲ್ಲಿ ಶೃಂಗವು ಉಂಟಾಗಲಿ, ಮೂಕನಂತೆ ಪುರುಷತ್ವ ಇರುವುದರಿಂದ ನಿನಗೆ ಮೂಕತ್ವವು ಉಂಟಾಗಲಿ. ಆಗ ಪರರೇ ಜಯಶಾಲಿಗಳಾಗುತ್ತಾರೆ. ಬಾಧ ಮತ್ತು ತದಭಾವಗಳನ್ನು ಅನುಸರಿಸುವುದಾದರೆ ನೀನು ಪ್ರತಿವಾದಿಗಳಿಗೆ ಶಿಷ್ಯನಾಗುತ್ತೀಯೆ. ಬಾಧಶಂಕೆ ಎಂಬ ಕೆಸರು ಎಲ್ಲೆಲ್ಲಿ ಉಂಟಾಗುವುದಿಲ್ಲ?

**ಯದ್ಯಧಿಷ್ಠಾನಗಂ ಸತ್ತ್ವಂ ಭಾಸತೇ ಘಟಗಂ ನ ತತ್ ।**
**ನೀಲೋ ಘಟ ಇತಿ ಜ್ಞಾನೇ ನೈಲ್ಯಂ ಬ್ರಹ್ಮಗತಂ ಭವೇತ್ ।**
**ಅಸದ್ ರಜತಮಿತ್ಯತ್ರಾಸತ್ತ್ವಂ ಬ್ರಹ್ಮಗತಂ ಭವೇತ್ ॥ ೮೬೮ ॥**

**ಅನುವಾದ–** ಅಧಿಷ್ಠಾನಗತವಾದ ಸತ್ತ್ವವೇ ಘಟದಲ್ಲಿ ತೋರುತ್ತದೆ. ಘಟದಲ್ಲಿ ಬೇರೆ ಸತ್ತ್ವವಿಲ್ಲ ಎಂದು ಅಂಗೀಕರಿಸಿದರೆ, ನೀಲೋ ಘಟಃ ಎಂಬ ಜ್ಞಾನದಲ್ಲಿ ತೋರುವ ನೈಲ್ಯವು ಬ್ರಹ್ಮಗತವಾಗಬೇಕಾದೀತು. ಅಸದ್ ರಜತಂ ಎಂಬಲ್ಲಿ ತೋರುವ ಅಸತ್ತ್ವವು ಬ್ರಹ್ಮಗತವಾಗಬೇಕಾದೀತು.

**ಅಚಾಕ್ಷುಷಬ್ರಹ್ಮಸತ್ತಾ ಚಕ್ಷುಷಾ ಕಥಮೀಕ್ಷ್ಯತೇ ।**
**ಬ್ರಹ್ಮಣೋಽಚಾಕ್ಷುಷತ್ವಂ ಚ ಸಿದ್ಧಮುಕ್ತಪ್ರಕಾರತಃ ॥ ೮೭೧ ॥**

**ಅನುವಾದ–** ನಿನ್ನ ಪ್ರಕ್ರಿಯೆಯೆಂಬ ಮಿಂಚು ಲೋಕಾನುಭವವನ್ನು ಬಾಧಿಸಲು ಸಮರ್ಥವಾಗುವುದಿಲ್ಲ. ಚಕ್ಷುಸ್ಸಿಗೆ ಯೋಗ್ಯನಲ್ಲದ ಬ್ರಹ್ಮನ ಸತ್ತ್ವವು ಚಕ್ಷುಸ್ಸಿನಿಂದ ಹೇಗೆ ಗೃಹೀತವಾಗುತ್ತದೆ? ಬ್ರಹ್ಮನ ಅಚಾಕ್ಷುಷತ್ವವೂ ಸಹ ಹಿಂದೆ ಹೇಳಿದ ರೀತಿಯಿಂದ ಸಿದ್ಧವಾಗಿದೆ.

**ಅತೋಽಧ್ಯಕ್ಷಭಯಾನ್ಮುಖ್ಯಮೈಕ್ಯಂ ವಾಕ್ಯಾರ್ಥಮುತ್ಸೃಜನ್ ।**
**ಸತ್ತ್ವಾಧ್ಯಕ್ಷಭಯಾನ್ಮಿಥ್ಯಾತ್ವಾರ್ಥತ್ವಂ ಚ ತ್ಯಜೋದಿತಮ್ ॥ ೯೫೮ ॥**

**ಅನುವಾದ–** ಆದ್ದರಿಂದ ಪ್ರತ್ಯಕ್ಷವಿರೋಧಭಯದಿಂದ ಮುಖ್ಯವಾದ ಐಕ್ಯವು ವಾಕ್ಯಾರ್ಥ ಎಂಬುದನ್ನು ಪರಿತ್ಯಾಗಮಾಡುವ ನೀನು ಸತ್ತ್ವಪ್ರತ್ಯಕ್ಷಭಯದಿಂದ ಶ್ರುತಿಯು ಆಪಾತತಃ ಹೇಳುವ ಮಿಥ್ಯಾತ್ವರೂಪವಾದ ಅರ್ಥವನ್ನು ಪರಿತ್ಯಾಗಮಾಡು.

**ಉಕ್ತಂ ತು ನಿರ್ವಹೇದೇವೇತ್ಯಾಗ್ರಹೋಽಗ್ರ್ಯಗ್ರಹೋ ನೃಣಾಮ್ ।**
**ಕಿಂ ನ ಸ್ವೋಕ್ತಾನೃತತ್ವಾರ್ಥಂ ವೇದಮಪ್ಯನೃತಂ ಜಗುಃ ॥ ೧೨೨೮ ॥**

**ಅನುವಾದ–** ಹೇಳಿದುದನ್ನು ನಿರ್ವಾಹವನ್ನು ಮಾಡಲೇಬೇಕು ಎಂಬ ಹಠವು ಮನುಷ್ಯರಿಗೆ ದೊಡ್ಡ ಪಿಶಾಚಿರೂಪವುಳ್ಳದ್ದು. ತಾವು ಹೇಳಿದ ಜಗತ್ತಿನ ಮಿಥ್ಯಾತ್ವಕ್ಕೋಸ್ಕರವಾಗಿ ವೇದವನ್ನೂ ಕೂಡ ಮಿಥ್ಯಾಭೂತವಾದದ್ದೆಂದು ಹೇಳಲಿಲ್ಲವೆ?

**ಮನೋರಥರಥಾರೂಢಃ ಕೋಽರ್ಥೋ ವ್ಯರ್ಥಂ ಭವೇತ್ ತವ ।**
**ಕಃ ಕುರ್ಯಾಚ್ಛುಕ್ತಿರೂಪ್ಯೇಣ ವಲಯಂ ಕಟಕಾನಿ ವಾ ॥ ೧೨೩೨ ॥**

**ಅನುವಾದ–** ಮನೋರಥದ ರಥವನ್ನು ಏರಿದ ಯಾವ ಅರ್ಥವು ನಿನಗೆ ವ್ಯರ್ಥವಾಗುತ್ತದೆ? ಯಾವನು ಶುಕ್ತಿರೂಪ್ಯದಿಂದ ಬಳೆಯನ್ನಾಗಲೀ, ಕಡಗಗಳನ್ನಾಗಲೀ ಮಾಡುತ್ತಾನೆ?

॥ ಶ್ರೀಕೃಷ್ಣಾರ್ಪಣಮಸ್ತು ॥

—o—



# ರಾಜಸುಭಾಷಿತ

ಯದ್ವಾಙ್ಮೂಲಾನಿ ಮಧ್ವೋಽಸೌ ವಿಸ್ತಾರಯತು ತೇ ಗುಣಾನ್ ।
ದಶಪ್ರಮತಯೋ ಯಸ್ಯ ದಶ ಚಾಕೃತಯಃ ಪ್ರಭೋಃ ।
ವಲ್ಲೀಧುರಂಧರೋ ಯೋಽಸೌ ಪುಷ್ಪವಾಟೀಧುರಂಧರಃ ॥

ಎಲ್ಲೈ ಯುಕ್ತಿಮಲ್ಲಿಕೆಯೇ, ಯಾವ ಮಧ್ವರು ಪೂರ್ಣಪ್ರಮತಿಯನ್ನು ಹೊಂದಿದ್ದಾರೆಯೋ ನಾಗಾದಿ ಮತ್ತು ಪ್ರಾಣಾದಿ ದಶರೂಪಗಳನ್ನು ಹೊಂದಿದ್ದಾರೆಯೋ, ಯಾವ ಮಧ್ವರು ಪುಷ್ಪವನಧುರಂಧರರು ಮತ್ತು ವಲ್ಲೀಧುರಂಧರರು ಆಗಿದ್ದಾರೆಯೋ ಅಂತಹ ಮಧ್ವರು ನಿನ್ನ ಗುಣಗಳನ್ನು ಎಲ್ಲೆಡೆಯಲ್ಲಿ ಹರಡಲಿ.

